Joh. Heinr. Kurtz.

# SACRED HISTORY

# ಪರಿಶುದ್ಧ



ಶಾಲೆಗಳಿಗೋಸ್ಕರವೂ ಮನೆತನಗಳಿಗೋಸ್ಕರವೂ

ಯಾ. ಹೈ. ಕುರ್ಚನು ರಚಿಸಿದ್ದು





MANGALORE

PRINTED BY J. HUNZIKER, BASEL MISSION PRESS

1863 

# ಅನುಕ್ರಮಣಿಕೆ

## I ಭಾಗ

### ನಿರ್ಮಾಣವೂ ಪಾಪಪತನವೂ



## II ಭಾಗ

### ವಿಮೋಚನೆಯೂ ರಕ್ಷಣೆಯೂ

ಮೊದಲನೇ ಪರ್ವವು

ರಕ್ಷಣೆಯ ಮಾರ್ಗವು ಸಿದ್ಧವಾದದ್ದು



ರಕ್ಷಣೆಯು ಸಿದ್ಧವಾಗೋಣದರ

೧ನೇ ಅಧ್ಯಾಯವು

ಜಲಪ್ರಳಯದ ವರೆಗೆ



೨ನೇ ಅಧ್ಯಾಯವು

ಅಬ್ರಹಾಮನ ಕರೆಯುವಿಕೆಯ ಪರ್ಯಂತರ

## ಮೂರನೇ ಕಾಲವು

ಯೋಷುವ, ವಾಗ್ದತ್ತದೇಶವನ್ನು ಸ್ವತಂತ್ರಿಸಿ ಕೊಂಡದ್ದು

## ನಾಲ್ಕನೇ ಕಾಲವು

### ನ್ಯಾಯಾಧಿಪತಿಗಳು



## ಐದನೇ ಕಾಲವು

### ಸಮುವೇಲನಿಂದ ರಾಜ್ಯ ಭೇದವಾಗುವ ವರೆಗೆ

ಪುಟ

## ಆರನೇ ಕಾಲವು

### ಪ್ರವಾದನೆಯು ನಿಂತು ಹೋಗುವ ಮಟ್ಟಿಗೆ

## ಎರಡನೇ ಒಳಭಾಗ

### ಅಪೊಸ್ತಲರ ಪರಿಮುಖವಾಗಿ ರಕ್ಷಣ್ಯವು ಸಾರಲ್ಪಡುತ್ತದೆ

## ಮೂರನೇ ಒಳಭಾಗ

### ಸಭೆಯಲ್ಲಿ ರಕ್ಷಣ್ಯದ ಸ್ವೀಕಾರವು

## ನಾಲ್ಕನೇ ಒಳಭಾಗ

### ರಕ್ಷಣ್ಯದ ಕಡೇ ಸಂಪೂರ್ಣತೆಯು





# Sacred History

# ಪರಿಶುದ್ಧ ಚರಿತ್ರವು

ಯೊ. ಹೈ. ಕುರ್ಚನು ಮಾಡಿದ್ದು

## 1 ಭಾಗ

## ನಿರ್ಮಾಣವೂ ಪಾಪಪತನವೂ

### § 1. ನಿರ್ಮಾಣವು

ನಿರ್ಮಾಣದ ಆದಿಯಲ್ಲಿ ದೇವರು ಪರಲೋಕಗಳನ್ನೂ ಭೂಲೋಕವನ್ನೂ ತನ್ನ ವಾಕ್ಯದ ಮೂಲವಾಗಿ ಉಂಟು ಮಾಡಿದನು. ಮೋಶೆಯು ವಿವರಿಸುವ ಭೂನಿರ್ಮಾಣದ ಆರಂಭದಲ್ಲಿ ಪೃಥ್ವಿಯು ಹಾಳಾಗಿಯೂ ಬರೆದಾಗಿಯೂ ಇರುವ ಕತ್ತಲಾದ ಜಲಮಯವಾದ ಮಂಡಲವಾಗಿತ್ತು. ದೇವರ ಆತ್ಮವು ನೀರಿನ ಮೇಲೆ ಚಲಿಸುತ್ತಾ ಇತ್ತು.

ತರುವಾಯ ದೇವರ ವಾಕ್ಯದ ಚೈತನ್ಯದಿಂದ ಪ್ರಥಮ ದಿವಸದಲ್ಲಿ ಎಲ್ಲಾ ಜೀವಕ್ಕೆ ಮೂಲಾಧಾರವಾಗಿರುವ ಬೆಳಕು ಉಂಟಾಗಿ ಕತ್ತಲೆಯಿಂದ ಬೇರೆಯಾಯಿತು.

ದ್ವಿತೀಯದಲ್ಲಿ ಮೇಲಿನ ಜಲಕ್ಕೂ ಕೆಳಗಿನ ಜಲಕ್ಕೂ ಮಧ್ಯದಲ್ಲಿ ಅಂಬರವು (ಆಕಾಶ) ಉಂಟಾಯಿತು. ಈ ದಿವಸದಲ್ಲಿ ಖಮಂಡಲದ ನಿರ್ಮಾಣವೂ ಅದಕ್ಕೂ ಭೂಮಿಗೂ ಇರುವ ಸಂಬಂಧದ ಸ್ಥಾಪನೆಯೂ ಉಂಟಾದವು.

ತ್ರಿತೀಯಲ್ಲಿ ಸಮುದ್ರವು ಭೂಮಿಗೆ ವಿಂಗಡವಾಯಿತು. ಮತ್ತು ಭೂಮಿಯಲ್ಲಿ ಸಸಿ ಗಿಡ ಮರ ಮೊದಲಾದವು ಉಂಟಾದವು.

ಚತುರ್ಥಿಯಲ್ಲಿ ಸೂರ್ಯ ಚಂದ್ರ ನಕ್ಷತ್ರಾದಿಗಳು ಕಾಲ ದಿವಸ ವರ್ಷ ಮೊದಲಾದವುಗಳಿಗೆ ಗುರ್ತುಗಳಾಗಿ ಸ್ಥಾಪಿಸಲ್ಪಟ್ಟವು.

ಪಂಚಮಿಯಲ್ಲಿ ಜಲಜಂತುಗಳೂ ಖಗಗಳೂ ನಿರ್ಮಿಸಲ್ಪಟ್ಟವು.

ಷಷ್ಠಿಯಲ್ಲಿ ಮೃಗಾದಿಗಳೂ ಮನುಷ್ಯರ ಮೂಲತಂದೆತಾಯಿಗಳೂ ನಿರ್ಮಾಣವಾದರು. ಆಗ್ಯೆ ದೇವರು ತಾನು ಮಾಡಿದ್ದನ್ನೆಲ್ಲಾ ದೃಷ್ಟಿಸಲೂ ಇಗೋ ಅದು ಅತ್ಯುತ್ತಮವಾಗಿತ್ತು.

ಅನಂತರ ಸಪ್ತಮಿಯಲ್ಲಿ ದೇವರು ತನ್ನ ಕೃತ್ಯಗಳನ್ನೆಲ್ಲಾ ತೀರಿಸಿ ವಿಶ್ರಮಿಸಿಕೊಂಡು ಆ ದಿವಸವನ್ನು ಮನುಷ್ಯನಿಗೆ ತೀರ್ವಿಕೆಯ ದಿವಸವಾಗಿ ನೇಮಿಸಿದನು.

ಪರಿಶಿಷ್ಟ. ೧. ಅನ್ಯ ಜನರಾದ ಜ್ಞಾನಿಗಳು ಪೂರ್ವ ಕಾಲದಾರಭ್ಯದಿಂದ ಲೋಕನಿರ್ಮಾಣವನ್ನು ಕುರಿತು ಬಹಳವಾಗಿ ವಿಚಾರ ಮಾಡಿದರು. ಆದರೆ ಅವರೆಲ್ಲರು ಸತ್ಯವನ್ನು ಕಾಣದೆ ಹೋದರು. ಯಾಕಂದರೆ ಅವರು ದೇವರೂ ಲೋಕವೂ ಒಂದೇ ಎಂಬ ಮೂಲ ಆಲೋಚನೆಯನ್ನು ಹಿಡಿದು ಕೊಂಡದರಿಂದ ದೇವರು ಲೋಕವನ್ನು ತನ್ನ ಇಷ್ಟೆಯ ಶಕ್ತಿಯಿಂದ ವಾಕ್ಯದ ಮೂಲವಾಗಿ ನಿರ್ಮಿಸಿದ್ದನ್ನು ತಿಳಿಯದೆ ಲೋಕವು ದೇವರ ಭಾವದಿಂದ ಸೃಷ್ಟಿಯ ರೀತಿಯಾಗಿ ಹುಟ್ಟಿತ್ತೆಂದು ಬೋಧಿಸುತ್ತಾ ಬಂದರು.

ಪೂರ್ವ ಕಾಲದ ಜನಾಂಗಗಳಲ್ಲಿ ಯೆಹೂದಿಯರು ಮಾತ್ರ ಸತ್ಯವನ್ನು ದೇವರ ವಾಕ್ಯದಿಂದ ಕಲಿತು ಕೊಂಡು ಲೋಕವು ಅನಾದಿಯಾದದ್ದಲ್ಲವೆಂದೂ ಅದು ಕಾಲದ ಆರಂಭದಲ್ಲಿಯೂ ಕಾಲದ ಸಂಗಡಲೂ ನಿರ್ಮಾಣವಾಯಿತೆಂದೂ ದೇವರು ಅನಾದಿಯಾಗಿದ್ದು ತಾನು ಇಷ್ಟೈಸಿದ ವೇಳೆಯಲ್ಲಿ ಲೋಕವನ್ನು ವಾಕ್ಯದ ಶಕ್ತಿಯಿಂದಲೇ ನಿರ್ಮಿಸಿದನೆಂದೂ ಗ್ರಹಿಸಿ ಕೊಂಡರು.

ಆದರೆ ಹೊಸ ಒಡಂಬಡಿಕೆಯಲ್ಲಿ ಮಾತ್ರ ತ್ರಿಯೇಕವಾದ ದೇವಭಾವವೂ, ನಿರ್ಮಾಣಿಕನಿಗೂ ನಿರ್ಮಾಣಕ್ಕೂ ಇರುವ ಸಂಬಂಧವೂ ದೇವರ ಮಗನು ಮನುಷ್ಯನಾದದರಿಂದಲೂ ಪರಿಶುದ್ಧಾತ್ಮವು ಮನುಷ್ಯರ ಮೇಲೆ ಇಳಿದು ಬಂದದರಿಂದಲೂ ಬೈಲಾಗಿ ಪ್ರಕಟವಾದವು. ಏನಂದರೆ ಲೋಕವು ತಂದೆಯಾದ ದೇವರಿಂದ ಮಗನ ಮುಖಾಂತರ ಉಂಟಾಯಿತು.

೧ ಕೊರಿಂಥ. ೮,೬. ಆದರೆ ನಮಗೆ ತಂದೆಯಾದ ಒಬ್ಬನೇ ದೇವರು ಅವನಿಂದ ಸಮಸ್ತವು. ಮತ್ತು ನಾವು ಅವನಿಗೋಸ್ಕರವು; ಇದಲ್ಲದೆ ಯೇಸು ಕ್ರಿಸ್ತ

ನಾದ ಒಬ್ಬನೇ ಕರ್ತನು ಅವನ ಮುಖಾಂತರ ಸಮಸ್ತವು ಮತ್ತು ನಾವು ಅವನ ಮುಖಾಂತರವು.

ರೋಮಾ. ೧೧, ೩೬. ಅವನ ದೆಸೆಯಿಂದಲೂ ಅವನ ಮೂಲವಾಗಿಯೂ ಅವನಿಗಾಗಿಯೂ ಸಮಸ್ತವೂ ಅದೆ.

ಯೋಹಾ. ೧, ೧—೩. ಆದಿಯಲ್ಲಿ ವಾಕ್ಯವು ಇತ್ತು. ವಾಕ್ಯವು ದೇವರ ಬಳಿಯಲ್ಲಿತ್ತು. ಅದು ಆದಿಯಲ್ಲಿ ದೇವರ ಬಳಿಯಲ್ಲಿ ಇತ್ತು. ಅದರಿಂದ ಎಲ್ಲಾ ಉಂಟಾಯಿತು. ಅದು ಇಲ್ಲದೆ ಉಂಟಾದವುಗಳಲ್ಲಿ ಒಂದಾದರೂ ಉಂಟಾಗಲಿಲ್ಲ. ಇಬ್ರಿ. ೧, ೨. ೩. ಇವನನ್ನು ಸರ್ವಕ್ಕೆ ಬಾಧ್ಯನಾಗಿ ನೇಮಿಸಿದನು. ಇವನಿಂದ ಯುಗಗಳನ್ನು ಉಂಟು ಮಾಡಿದನು. ಇವನು ಅವನ ಮಹಿಮೆಯ ಪ್ರತಿಕಾಂತಿಯಾಗಿಯೂ ಅವನ ಸ್ವಭಾವದ ಪ್ರತಿರೂಪವಾಗಿಯೂ, ತನ್ನ ಬಲದ ವಾಕ್ಯದಿಂದ ಸರ್ವಕ್ಕೆ ಆಧಾರಕನಾಗಿಯೂ ಇದ್ದಾನೆ.

ಹಳೇ ಒಡಂಬಡಿಕೆಯ ವಾಕ್ಯದಲ್ಲಿ ದೇವರ ವಾಕ್ಯದಿಂದ ಬೆಳಕು ಉಂಟಾಯಿತೆಂಬದು ಮೊದಲಾದವುಗಳು ಬರೆದವೆ. ದೇವರು ಪಿತೃಗಳಿಗೆ ಪ್ರತ್ಯಕ್ಷವಾದ ಚರಿತ್ರಗಳು ಅದರಲ್ಲಿ ಉಂಟು. ದೇವರ ಆತ್ಮವು ನಿರ್ಮಾಣದ ಶಕ್ತಿಯೂ ದಿವ್ಯ ಜ್ಞಾನವನ್ನು ಮನುಷ್ಯರಿಗೆ ಪ್ರೇರಿಸುವ ಪ್ರಾಣವೂ ಆಗಿದೆಂದು ಅದರಲ್ಲಿ ತೋರುತ್ತದೆ. ಆದರೂ ತ್ರಿಯೇಕತ್ವದ ಸ್ಪಷ್ಟವಾದ ಪ್ರಕಟಣೆಯು ಹಳೇ ಒಡಂಬಡಿಕೆಯ ಗ್ರಂಥಗಳಲ್ಲಿ ಕಾಣುವದಿಲ್ಲ.

## ದೂತರ ಸಂಗತಿಯು

ಪರಿಶಿಷ್ಟ. ೨. ಪರಿಶುದ್ಧ ಚರಿತ್ರದಲ್ಲಿ ದೂತರ ಸಂಗತಿಯು ಸಹಾ ಸೇರುತ್ತದೆ. ಇವರು ಸ್ಥೂಲ ಶರೀರವಿಲ್ಲದವರಾಗಿಯೂ ಸ್ವತಂತ್ರವುಳ್ಳವರಾಗಿಯೂ ಪ್ರಕಾಶಮಯವಾದ ಅಂಬರಭಾವವಾದ ಶರೀರಿಗಳಾಗಿ ದೇವರಿಗೆ ಸೇವೆ ಮಾಡುವವರಾಗಿ ಕಾಣುತ್ತಾರೆ. ಮತ್ತಾಯ. ೨೮, ೩. ಕೀರ್ತನೆ. ೧೦೪, ೪. ೧೦೩, ೨೦. ಗಂಡು ಹೆಂಣು ಎಂಬ ಭೇದ ಅವರಲ್ಲಿ ಇಲ್ಲ.

ಮತ್ತಾಯ. ೨೨, ೩೦. ಅವರ ನಿರ್ಮಾಣದ ಕಾಲವೂ ರೀತಿಯೂ ಬರೆದಿರುವದಿಲ್ಲ.

ಆದರೆ ಇಯೋಬ. ೩೮, ೪—೭. ಅವರು ಲೋಕದ ನಿರ್ಮಾಣವನ್ನು ದೃಷ್ಟಿಸಿ ದೇವರನ್ನು ಸ್ತುತಿಸಿದರೆಂದು ಬರದದೆ.



## § 2. ಮನುಷ್ಯನ ಭಾವವೂ ಉದ್ಯೋಗವೂ

೧) ೧ ಮೋಶೆ ೨ನೇ ಸಂಧಿ ೪ನೇಯಿಂದ ೭ನೇ ವರೆಗೆ ಬರೆದದ್ದೇನಂದರೆ —

ಕರ್ತನಾದ ದೇವರು ಭೂಲೋಕವನ್ನೂ ಪರಲೋಕವನ್ನೂ ಮಾಡಿದ ದಿವಸದಲ್ಲಿ ಹೊಲದ ಯಾವ ಗಿಡವಾದರೂ ಇನ್ನೂ ಭೂಮಿಯಲ್ಲಿ ಇದ್ದಿಲ್ಲ. ಹೊಲದ ಯಾವ ಪಲ್ಯವಾದರೂ ಇನ್ನೂ ಮೊಳಿತಿರಲಿಲ್ಲ. ಯಾಕಂದರೆ ಕರ್ತನಾದ ದೇವರು ಭೂಮಿಯ ಮೇಲೆ ಮಳೆಗರಿಸಲಿಲ್ಲ. ಮತ್ತು ಭೂಮಿಯನ್ನು ಹಸನು ಮಾಡುವದಕ್ಕೆ ಮನುಷ್ಯನು ಇದ್ದಿಲ್ಲ. ಆದರೆ ಭೂಮಿಯೊಳಗಿಂದ ಮಂಜು ಏರಿ ಬಂದು ಭೂಮುಖವನ್ನೆಲ್ಲಾ ತೋಯಿಸುತ್ತಿತ್ತು, ಮತ್ತು ಕರ್ತನಾದ ದೇವರು ಭೂಮಿಯ ಮಣ್ಣಿನಿಂದ ಮನುಷ್ಯನನ್ನು ರೂಪಿಸಿ, ಅವನ ಮೂಗಿನಲ್ಲಿ ಜೀವದ ಉಸುರನ್ನು ಊದಿದನು. ಇದಲ್ಲದೆ ೧ ಮೋಶೆ. ೧ ಸಂಧಿ ೨೬ನೇ ೨೭ನೇಯಲ್ಲಿ ಬರೆದದ್ದೇನಂದರೆ —

ಮತ್ತು ದೇವರು ಹೇಳಿದ್ದೇನಂದರೆ ನಮ್ಮ ರೂಪವಾಗಿ ನಮ್ಮ ಹೋಲಿಕೆಯ ಹಾಗೆ ಮನುಷ್ಯರನ್ನು ಮಾಡುವಾ, ಅವರು ಸಮುದ್ರದ ಮೀನುಗಳನ್ನು ಆಕಾಶದ ಪಕ್ಷಿಗಳನ್ನೂ ಪಶುಗಳನ್ನೂ ಎಲ್ಲಾ ಭೂಮಿಯನ್ನೂ ಭೂಮಿಯ ಮೇಲೆ ಹರಿದಾಡುವ ಎಲ್ಲಾ ಕ್ರಿಮಿಗಳನ್ನೂ ಆಳಲಿ. ಮತ್ತು ದೇವರು ಮನುಷ್ಯನನ್ನು ತನ್ನ ರೂಪವಾಗಿ ನಿರ್ಮಿಸಿದನು. ದೇವರ ರೂಪವಾಗಿ ಅವನನ್ನು ನಿರ್ಮಿಸಿದನು. ಗಂಡು ಹೆಣ್ಣಾಗಿ ಅವರನ್ನು ನಿರ್ಮಿಸಿದನು. ಮತ್ತು ದೇವರು ಅವರನ್ನು ಆಶೀರ್ವದಿಸಿದನು.

ಈ ಸ್ಥಳಗಳಲ್ಲಿ ಬರೆದ ಅಭಿಪ್ರಾಯವೇನಂದರೆ ದೇವರು ಭೂಲೋಕನಿರ್ಮಾಣದ ಅಂತ್ಯದಲ್ಲಿ ಮನುಷ್ಯನನ್ನು ಭೂಮಿಯ ಮಣ್ಣಿನಿಂದ ರೂಪಿಸಿ ದಿವ್ಯ ಜೀವದ ಉಸುರು ಅವನ ಮೂಗಿನಲ್ಲಿ ಊದಿದರಿಂದ ಮನುಷ್ಯನು (ದೇವರ ಆತ್ಮವು ಪ್ರೇರಿಸಿ ಬದುಕಿಸುವಂಥ) ಜೀವಾತ್ಮ ಉಳ್ಳ ಭಾವವನ್ನು ಹೊಂದಿದನು.

ಹೀಗಿರುವದರಿಂದ ಮನುಷ್ಯನು ದ್ವಿಭಾವಿಯಾಗಿದ್ದಾನೆ. ಹ್ಯಾಗಂದರೆ: ಮನುಷ್ಯನ ಶರೀರವನ್ನೂ ಪ್ರಾಣವನ್ನೂ ನೋಡಿದರೆ ಅವನು ಜೀವರಾಶಿಯ ರಾಜನಾಗಿ ನಿರ್ಮಾಣಕ್ಕೆ ಸಂಬಂಧನಾಗಿದ್ದಾನೆ.

ದೇವರು ಅವನಲ್ಲಿ ಊದಿದ ದಿವ್ಯಭಾವದ ಆತ್ಮವನ್ನು ನೋಡಿದರೆ ಮನುಷ್ಯನು ನಿರ್ಮಾಣಕ್ಕಿಂತ ಶ್ರೇಷ್ಠನಾಗಿದ್ದು ದಿವ್ಯ ವಂಶದವನಾಗಿದ್ದಾನೆ. ಅಪ್. ಕ್ರಿ. ೧೭, ೨೮. ೨೯. ಈ ಪ್ರಕಾರ ದ್ವಿಭಾವಿಯಾದ ಮನುಷ್ಯನು ನಿರ್ಮಾಣಿಕನಾದ ದೇವರಿಗೂ ನಿರ್ಮಾಣಕ್ಕೂ ಮಧ್ಯಸ್ಥನಾಗಿದ್ದಾನೆ. ಮನುಷ್ಯನು ದೇವರಿಗೆ ಸಾರೂಪ್ಯನಾಗಿದ್ದು

ಪ್ರತಿದೇವನಾಗಿ ನಿರ್ಮಾಣವನ್ನು ಆಳಿ ಕೊಳ್ಳುವದಕ್ಕೂ ಅದನ್ನು ಮಹಿಮೆಯಲ್ಲಿ ಶೇರಿಸುವದಕ್ಕೂ ನೇಮಿಸಲ್ಪಟ್ಟಿದ್ದಾನೆ.

ಪರಿಶಿಷ್ಟ. ಭೂಮಿಯ ಮಣ್ಣಿನಿಂದ ರೂಪಿಸಲ್ಪಟ್ಟ ಮನುಷ್ಯನ ಭಾವವು ದೇವರು ಅವನಲ್ಲಿ ಊದಿದ ಜೀವದ ಉಸುರಿನಿಂದ ದಿವ್ಯ ಮಹಿಮೆಯನ್ನೂ ದಿವ್ಯ ಸಾರೂಪ್ಯದ ಮುದ್ರೆಯನ್ನೂ ಹೊಂದಿತು. ಆದದರಿಂದ ಮನುಷ್ಯನು ನಿರ್ಮಿತವಾದ ಪ್ರಾಣಿಯ ಮಟ್ಟಿನ ಪ್ರಕಾರವಾಗಿಯೂ ದೇವರಿಗೆ ಪ್ರತಿಯಾಗಿ ಭೂಲೋಕವನ್ನು ಆಳುವ ಅಧಿಕಾರದ ಪ್ರಕಾರವಾಗಿಯೂ ದೇವರ ಪರಿಶುದ್ಧತ್ವ ಭಾಗ್ಯ ಬುದ್ಧಿ ತ್ರಾಣ ಮಹಿಮೆಗಳುಳ್ಳವನಾಗಿ ದೇವರ ಹಾಗೆ ಆಗ ಶಕ್ಯವನಾಗಿದ್ದಾನೆ.

೨) ೧ ಮೋಶೆ. ೨, ೮ — ೧೪ ಬರೆದದ್ದೇನಂದರೆ — ದೇವರು ಮನುಷ್ಯನನ್ನು ರೂಪಿಸಿದ ಮೇಲೆ ಅವನ ವಾಸಸ್ಥಳಕ್ಕಾಗಿ ಏದೆನ್ ದೇಶದಲ್ಲಿ ಒಂದು ತೋಟವನ್ನು ಸಿದ್ಧ ಮಾಡಿದನು. ಆ ಸೀಮೆಯಿಂದ ನಾಲ್ಕು ನದಿಗಳು ಹರಿದವು. ಅವುಗಳ ಹೆಸರು ಯಾವವೆಂದರೆ — ಒಂದು ಪ್ರಾತ್ (ಐಫ್ರತ್) ಎರಡನೇ ಹಿದೆಕೆಲ್ (ತಿಗ್ರಿಸ್) ಮೂರನೇ ಗೀಹೋನ್ ೪ನೇ ಪೀಸೋನ್. ಈ ನದಿಗಳ ಸ್ಥಳವನ್ನು ಈಗ ಹುಡುಕಿದರೆ ಅರ್ಮೆನಿಯ ದೇಶದ ಬೆಟ್ಟಗಳಲ್ಲಿ ಹುಟ್ಟುವ ಐಫ್ರತ್ ಮತ್ತು ತಿಗ್ರಿಸ್ ಎಂಬ ನದಿಗಳು ದೊರಕುತ್ತವೆ. ಕೆಲವರು ಫಾಸಿಸ್ ಅರಕ್ಸೆಸ್ ಎಂಬ ನದಿಗಳು ಆದಿಕಾಲದಲ್ಲಿ ಗೀಹೋನ್ ಪೀಸೋನ್ ಎಂಬ ಹೆಸರುಗಳನ್ನು ಹೊಂದಿದ್ದವೆಂದು ನೆನಸುತ್ತಾರೆ. ಆದರೆ ಈ ಮಾತು ನಿಶ್ಚಯವಾದದ್ದಲ್ಲ.

ಸಮಸ್ತ ಭೂಮಿಯನ್ನು ಆಳಿ ಕೊಳ್ಳುವ ಉದ್ಯೋಗವು ಮನುಷ್ಯರಿಗೆ ನೇಮಕವಾಗಿತ್ತು. ಅವರು ಹುಟ್ಟಿದ ಸ್ಥಳದಲ್ಲಿಯೇ ತಮ್ಮ ಉದ್ಯೋಗವನ್ನು ನಡಿಸಲಾರಂಭಿಸುವದಕ್ಕಾಗಿ ದೇವರು ಮೊದಲು ಏದೆನ್ ಸೀಮೆಯಲ್ಲಿರುವ ತೋಟವನ್ನು ನೆಟ್ಟನು. ಆತನು ಆರಂಭಿಸಿದ ಕಾರ್ಯವನ್ನು ಮನುಷ್ಯನು ಪೂರೈಸ ತಕ್ಕವನಾಗಿದ್ದನು.

೧ನೇ ಸಂಧಿಯ ೨೮ನೇ ವಚನದ ಪ್ರಕಾರ ಭೂಮಿಯನ್ನು ತುಂಬ ಬೇಕೆಂದು ಅಪ್ಪಣೆ ಹೊಂದಿದವರಿಂದ ಅವರು ಸದಾಕಾಲ ಪರದೈಸ್ (ಪರ್ದೇಸ್) ತೋಟದಲ್ಲಿ ಮಾತ್ರ ವಾಸ ಮಾಡದೆ ಕ್ರಮದಿಂದ ಭೂಮಿಯನ್ನೆಲ್ಲಾ ಪರ್ದೇಸಕ್ಕೆ ಶೇರಿಸುವದಕ್ಕೆ ನೇಮಿಸಲ್ಪಟ್ಟರೆಂದು ನೆನಸ ತಕ್ಕದ್ದು.

೩) ಮನುಷ್ಯನು ದೇವರಿಂದ ಸರ್ವಗುಣ ತ್ರಾಣ ಪೂರ್ಣತೆಯುಳ್ಳವನಾಗಿ ನಿರ್ಮಿಸಲ್ಪಡಲಿಲ್ಲ. ಆದರೆ ಎಲ್ಲಾ ಪೂರ್ಣತೆಯನ್ನು ಜನ್ಮ ಗುಣ ತ್ರಾಣಗಳ ಸಾಧನೆಯಿಂದ ಸಂಪಾದಿಸ ಸಮರ್ಥನಾಗಿ ನಿರ್ಮಿಸಲ್ಪಟ್ಟನು. ಮನುಷ್ಯನು ನಿರ್ಮಿಸಲ್ಪ

ಟ್ಟಾಗ ತನ್ನ ಜೀವದ ಸರ್ವಗುಣ ಪೂರ್ಣತೆಯ ಬೀಜವು ಅವನಲ್ಲಿ ಇದ್ದು, ಸ್ವಯಿಚ್ಛೆಯ ಪ್ರಯೋಗದಿಂದ ಮೊಳೆತು, ಬೆಳೆದು, ಫಲ ಕೊಡ ಬೇಕಾಗಿತ್ತು. ಸ್ವಯಿಚ್ಛೆ ಇಲ್ಲದ ನಿರ್ಮಾಣದ ನೇಮದ ಪ್ರಕಾರ ಸ್ವಯಿಚ್ಛೆಯುಳ್ಳ ಮನುಷ್ಯನು ಪೂರ್ಣನಾಗ ಕೂಡದೆ ಇದ್ದನು. ದೇವರು ಅವನಿಗೆ ನೇಮಕ ಮಾಡಿದ ಜೀವ ಪೂರ್ಣತೆಯನ್ನು ಅವನು ಸ್ವಯಿಚ್ಛೆಯ ನಿರ್ಣಯದಿಂದಲೂ ಪ್ರವೃತ್ತಿಯಿಂದಲೂ ಹೊಂದ ತಕ್ಕವನಾಗಿದ್ದನು. ಹೀಗಿರಲಾಗಿ ದೇವರ ಸ್ವರೂಪದಲ್ಲಿಯೂ ಹೋಲ್ವಿಕೆಯಲ್ಲಿಯೂ ನಿರ್ಮಾಣವಾದ ಸ್ವಯಿಚ್ಛೆಯುಳ್ಳ ಮನುಷ್ಯನಿಗೆ ದೇವರು ತನಗೆ ನೇಮಿಸಿದ ಮಾರ್ಗವನ್ನು ಬಿಟ್ಟು, ದೇವರ ಚಿತ್ತವನ್ನು ನಿರಾಕರಿಸಲಿಕ್ಕೆ ಸಾಧ್ಯವಾಗಿತ್ತು. ಇದಕ್ಕೆ ಮೇಲು ಕೇಡುಗಳ ತಿಳುವಿಕೆಯ ಮರವೂ ತಿನ್ನ ಬಾರದು ತಿಂದರೆ ಸಾಯುವಿ ಎಂಬ ದೇವರ ಆಜ್ಞೆಯೂ ಮೊದಲು ಹೇತುವೆಯಾದವು.

ಪರಿಶಿಷ್ಟ. ಮನುಷ್ಯನು ಪಾಪವಿಲ್ಲದವನಾಗಿ ನಿರ್ಮಿಸಲ್ಪಟ್ಟದ್ದು ಸರಿ, ಆದರೆ ಅವನು ಪಾಪ ಮಾಡ ಸಮರ್ಥನಲ್ಲದವನಾಗಿ ನಿರ್ಮಿಸಲ್ಪಟ್ಟನೆಂದು ಹೇಳ ಕೂಡದು. ಈ ಸ್ಥಿತಿಯು ಆದಿಸ್ಥಿತಿಯಾಗಿ ಅಲ್ಲ ಅಂತ್ಯಸ್ಥಿತಿಯಾಗಿ ಮನುಷ್ಯನಿಗೆ ದೇವರಿಂದ ನೇಮಿಸಲ್ಪಟ್ಟಿತ್ತು. ಆದಾಗ್ಯು ಮನುಷ್ಯನು ಪಾಪ ಮಾಡದೆ ಇರ ಸಮರ್ಥನಾಗಿ ಮಾತ್ರ ನಿರ್ಮಿಸಲ್ಪಟ್ಟನೆಂದು ಹೇಳಿದರೆ ಸಾಲದು, ಯಾಕಂದರೆ ಹೀಗಾಗಿದ್ದರೆ ಮನುಷ್ಯನ ಮೂಲಸ್ಥಿತಿಯು ಒಳ್ಳೇದಲ್ಲವೆಂದೂ ಕೆಟ್ಟದ್ದಲ್ಲವೆಂದೂ ನೆನಸ ಬೇಕಾಗುವದು. ಮತ್ತು ಹೀಗಾಗಿದ್ದರೆ ಮನುಷ್ಯನು ಪಾಪಪತನದಿಂದ ತನಗಿದ್ದ ಶ್ರೇಷ್ಟತೆಯನ್ನು ಕಳಕೊಳ್ಳದೆ ಹೊಂದ ಬೇಕಾದದ್ದನ್ನು ಹೊಂದುವ ಮಾರ್ಗಕ್ಕೆ ಮಾತ್ರ ತಪ್ಪಿದನೆಂದು ತೋರುವದು. ಈ ಮಾತು ದೇವರ ವಾಕ್ಯಕ್ಕೆ ಅನುಸರಣೆಯಾದದ್ದಲ್ಲ. ಮನುಷ್ಯನು ನೀತಿಯ ಗುಣವುಳ್ಳವನಾಗಿ ನಿರ್ಮಿಸಲ್ಪಟ್ಟನು; ಈ ಗುಣವು ಮನುಷ್ಯನ ಸ್ವಯಿಚ್ಛೆಯ ನಿರ್ಣಯದಿಂದಲೂ ಪ್ರಯೋಗದಿಂದಲೂ ಅವನಲ್ಲಿ ದೃಢವಾಗ ಬೇಕಾಗಿತ್ತು. ದೇವರು ಅವನಿಗೆ ಕೊಟ್ಟ ನೀತಿಯ ಗುಣವು ಸ್ವಯಿಚ್ಛೆಯಿಂದಾಗುವ ನೀತಿಯ ಸಾಧನೆಯಿಂದ ನೀತಿಯ ಸ್ವಭಾವವಾಗ ಬೇಕಾಗಿತ್ತು. ಮನುಷ್ಯನು ತಿಳುವಿಕೆಯ ಮರದ ಫಲವನ್ನು ತಿನ್ನದೆ ಮೊದಲನೇ ಪರೀಕ್ಷೆಯಲ್ಲಿ ತನ್ನ ಇಚ್ಛೆಯನ್ನು ದೇವರ ಇಚ್ಛೆಗೆ ಅಧೀನ ಮಾಡಿ ಪರೀಕ್ಷಿತನಾದದ್ದಾದರೆ ಅವನ ಪರಿಶುದ್ಧತ್ವವು ಪೂರ್ಣ ಪರಿಶುದ್ಧತ್ವವಾಗುತಿತ್ತು. ಆಗ ಮನುಷ್ಯನು ಪರಿಶುದ್ಧತ್ವದ ಸಾಧನೆಯಿಂದ ಕಡೆಯಲ್ಲಿ ಪಾಪ ಮಾಡಲಾರದವನಾಗುತ್ತಿದ್ದನು. ಹೀಗಾಗಿದ್ದರೆ ತೋಟದ ಮಧ್ಯದಲ್ಲಿದ್ದ ಜೀವವೃಕ್ಷದ ಫಲದಿಂದ ದೇವರು ಆರಂಭದಲ್ಲಿ ನೇಮಕ ಮಾಡಿದ ಉಪಯೋಗವು ಮನುಷ್ಯನಿಗೆ ಬರುತಿತ್ತು.

೪) ೧ಮೋಶೆ. ೨, ೧೮ನೆ ಮೊದಲಾದ ವಚನಗಳು. ಆದಾಮನ ಪರಿಶುದ್ಧತ್ವವು ಮಾತ್ರವಲ್ಲ ಅವನ ಸಹಜವಾದ ಬುದ್ಧಿಯೂ ತಿಳುವಿಕೆಯೂ ಸಹ ವೃದ್ಧಿಯನ್ನು ಹೊಂದ ಬೇಕಾಗಿದ್ದವು. ಕರ್ತನು ಅವನಿಗೆ ಮೃಗಗಳನ್ನೂ ಪಕ್ಷಿಗಳನ್ನೂ ತೋರಿಸಿ ಅವುಗಳಿಗೆ ಹೆಸರಿಡ ಬೇಕೆಂದು ಅಪ್ಪಣೆ ಕೊಟ್ಟದರಿಂದ ಆದಾಮನಲ್ಲಿದ್ದ ಸಹಜವಾದ ಬುದ್ಧಿಯು ಸಾಧನೆಯಿಂದ ಪ್ರಕಟವಾಗಿ ಅರಳಿತು. ಮತ್ತು ಆದಾಮನಲ್ಲಿದ್ದ ಸಹಜವಾದ ವಾಕ್ಪ್ರಾಣವು ಸಾಧನೆಯಿಂದ ವಾಕ್ಚಾತುರ್ಯವಾಯಿತು. ಇದಲ್ಲದೆ ಆದಾಮನು ತನಗೆ ವಶವಾದ ಪ್ರಾಣಿಗಳಿಗೆಲ್ಲಾ ಹೆಸರು ಕೊಟ್ಟು ಸರ್ವ ಜೀವರಾಶಿಗಳ ಮೇಲೆ ಅಧಿಕಾರವನ್ನು ಸ್ವತಂತ್ರಿಸಿ ಕೊಂಡದರಿಂದ ದೇವರ ಸ್ವರೂಪನಾಗಿ ಹೊಂದಿದ ರಾಜ್ಯಾಧಿಕಾರವನ್ನು ನಡಿಸಲಾರಂಭಿಸಿದನು.

ಜೋಡಾಗಿ ನಿರ್ಮಿಸಲ್ಪಟ್ಟ ಪ್ರಾಣಿಗಳನ್ನೆಲ್ಲಾ ಕಂಡದರಿಂದ ತನಗೂ ಸ್ವಜಾತಿಯಾದ ಜೊತೆಗಾರ್ತಿ ಬೇಕೆಂಬ ಆಲೋಚನೆ ಆದಾಮನಲ್ಲಿ ಹುಟ್ಟಲು ದೇವರು ಅವನ ಮೇಲೆ ಗಾಢ ನಿದ್ರೆ ಬೀಳ ಮಾಡಿ, ಅವನ ಪಕ್ಕೇ ಎಲುವುಗಳಲ್ಲಿ ಒಂದು ತಕ್ಕೊಂಡು ಅದರಿಂದ ಸ್ತ್ರೀಯನ್ನು ಉಂಟು ಮಾಡಿದನು. ಆದಾಮನು ನಿದ್ದೆ ತಿಳಿದಾಗ ಇವಳೀಗ ನನ್ನ ಎಲುವುಗಳಿಂದ ತಕ್ಕೊಂಡ ನನ್ನ ಎಲುವೂ ನನ್ನ ಮಾಂಸದಿಂದ ತಕ್ಕೊಂಡ ಮಾಂಸವೂ ಆಗಿದ್ದಾಳೆ ಅಂದನು. ತರುವಾಯ ದೇವರು ಅಭಿವೃದ್ಧಿಯಾಗಿ ಹೆಚ್ಚಿರಿ ಭೂಮಿಯನ್ನು ತುಂಬಿಸಿ ವಶ ಮಾಡಿ ಕೊಳ್ಳಿರಿ ಎಂದು ಅವರಿಗೆ ಆಶೀರ್ವಾದ ಕೊಟ್ಟನು. ದೇವರು ಸರ್ವವ್ಯಾಪಿಯಾಗಿದ್ದು ಎಲ್ಲೆಲ್ಲಿಯೂ ಇರುವ ಪ್ರಕಾರ ದೇವರ ಸ್ವರೂಪರಾದ ಮನುಷ್ಯರು ತಮ್ಮ ರಾಜ್ಯವಾದ ಭೂಲೋಕದ ಸರ್ವ ಸ್ಥಳಗಳಲ್ಲಿ ಇದ್ದು, ಅದನ್ನೆಲ್ಲಾ ತಮಗೆ ಪೂರ್ಣವಾಗಿ ವಶ ಮಾಡುವದಕ್ಕೆ ನೇಮಿಸಲ್ಪಟ್ಟರು.

ಪರಿಶಿಷ್ಟ. ಸ್ತ್ರೀಯ ನಿರ್ಮಾಣವು ನರಜಾತಿಯ ಕಾರಣವೂ ಆರಂಭವೂ ಆಗಿತ್ತು. ಸ್ತ್ರೀಯು ಪುರುಷನಿಂದ ಉಂಟಾದದರಿಂದ ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು (ಅಪ್.ಕ್ರಿ. ೧೭, ೨೬.) ಉಂಟು ಮಾಡ ಬೇಕೆಂಬ ದೇವರ ಆಲೋಚನೆಯು ಪೂರ್ತಿಯಾಯಿತು. ಪುರುಷನಿಗೂ ಸ್ತ್ರೀಗೂ ಆದ ವಿವಾಹದಿಂದ ಮನುಷ್ಯರು ಭೂಲೋಕವನ್ನೆಲ್ಲಾ ತುಂಬಿಸಿ ಆಳಿಕೊಳ್ಳ ಬೇಕೆಂಬ ದೇವರ ನೇಮಕವು ಪೂರ್ತಿಯಾಯಿತು. ಈ ಪ್ರಕಾರ ಪ್ರಥಮ ಮನುಷ್ಯರ ವಿವಾಹವು ನರಜಾತಿ ಚರಿತ್ರಕ್ಕೆ ಮೂಲವಾಯಿತು. ಅದು ಮನುಷ್ಯನ ಸ್ವಯಿಚ್ಛೆಯ ಪರೀಕ್ಷೆಗಿಂತ ಮುಂಚೆಯೂ ಮನುಷ್ಯನ ಅಪೇಕ್ಷೆಯಿಲ್ಲದೆಯೂ ಆಗಲಿಲ್ಲ. ದೇವರ ಆಲೋಚನೆಯ ಪ್ರಕಾರ ವಿವಾಹದಿಂದ ಮನುಷ್ಯನ ಸುಖ ನೀತಿ ಭಕ್ತಿಗಳಿಗೆ ಉಪಯೋಗ ಬರ ಬೇಕಾ

ಗಿತ್ತು. ಆದರೆ ಮನುಷ್ಯನ ಅವಿಧೇಯತ್ವದಿಂದ ಅದು ಪಾಪಪತನಕ್ಕೆ ಸಹ ಹೇತು ವೆಯಾಯಿತು. ನರಜಾತಿಯು ಆರಂಭದಲ್ಲಿ ಲಿಂಗಭೇದವಿಲ್ಲದ ದೂತಜಾತಿಗಳಗಳ ಪ್ರಕಾರ ಹೇರಳ ಸಮೂಹವಾಗಿ ನಿರ್ಮಿಸಲ್ಪಡಲಿಲ್ಲ. ಯಾಕಂದರೆ ಮನುಷ್ಯರೆಲ್ಲರೂ ಒಂದೇ ರಕ್ತದಿಂದ ಉಂಟಾಗಿ ಒಂದೇ ಮನೆತನವಾಗಿರ ಬೇಕೆಂದು ದೇವರು ನಿರ್ಣ ಯಿಸಿ ಕೊಂಡನು. ಹೀಗಿರಲಾಗಿ ಪ್ರಥಮ ಮನುಷ್ಯನು ಪಾಪದಲ್ಲಿ ಬಿದ್ದರೆ ಸರ್ವನರ ಜಾತಿಯು ಅಪರಾಧಕ್ಕೂ ಶಾಪಕ್ಕೂ ಒಳಗಾಗುವ ಗಂಡಾಂತರದಲ್ಲಿತ್ತು. ಆದರೆ ನರ ರಕ್ತ ಅನ್ಯೋನ್ಯದಲ್ಲಿ ಶೇರುವ ರಕ್ಷಕನ ಮುಖಾಂತರ ಸರ್ವರಿಗೂ ರಕ್ಷಣೆಯು ದೊರಕುವ ಮಾರ್ಗವು ಸ್ಥಾಪಿಸಲ್ಪಟ್ಟಿತು.

## § 3. ಪಾಪಪತನವು

೧) ೧ ಮೋಶೆ. ೩, ೧. ಈ ವೇಳೆಯಲ್ಲಿಯೂ ಕೇಡು ಲೋಕದಲ್ಲಿ ಇತ್ತು. ಒಂದು ನಿರ್ಮಾಣವು ನಿರ್ಮಾಣಿಕನಿಗೆ ತಿರುಗಿ ಬಿದ್ದು ವಿರೋಧಿಯಾಗಿದ್ದು ದೇವರ ಕೃತ್ಯವನ್ನು ಕೆಡಿಸಲೂ ನರಜಾತಿಯ ಮೇಲೆ ಆತನು ಇಟ್ಟ ಪ್ರೀತಿಯ ಆಲೋಚನೆಯ ನ್ನು ನಿರರ್ಥಕ ಮಾಡಲೂ ಎತ್ನೈಸುತ್ತಾ ಇತ್ತು. ಅದು ಅಡವಿಯ ಎಲ್ಲಾ ಮೃಗ ಗಳಿಗಿಂತ ಯುಕ್ತಿಯುಳ್ಳ ಸರ್ಪನ ಮುಖಾಂತ್ರ ಮನುಷ್ಯರ ಬಳಿಗೆ ಬಂದು ದೇವರಾ ದ ನಿರ್ಮಾಣಿಕನಿಗೆ ತಾನು ಮಾಡಿದ ದ್ರೋಹದಲ್ಲಿಯೂ ತನಗೆ ಬಂದ ನಷ್ಟದ ಉ ರ್ಲಿನಲ್ಲಿಯೂ ಸಿಕ್ಕಿಸ ಬೇಕೆಂದು ಮೋಸವನ್ನು ಪ್ರಯೋಗಿಸುತ್ತದೆ.

ಪರಿಶಿಷ್ಟ. ೧. ಇಲ್ಲಿ ಸ್ವಲ್ಪ ಪ್ರಕಟವಾಗುವ ವೈರಿಯಾದ ಅಂಧಕಾರದ ಪ್ರಾ ಣವು ಮರ್ಮವಾಗಿ ತೋರುತ್ತದೆ. ಇದು ಮತ್ತೆ ಸ್ವಲ್ಪ ಹೆಚ್ಚಾಗಿ ಪ್ರಕಟವಾಯಿತು. ಆದರೆ ಅದರ ಪೂರ್ಣ ಪ್ರಕಟನೆಯು ಲೋಕಚರಿತ್ರದ ಅಂತ್ಯದಲ್ಲಿ ಮಾತ್ರ ಆಗುವಂ ಥಾದ್ದಾಗಿದೆ. ಈ ಪ್ರಾಣವು ನಿರ್ಮಾಣವಾದ ಸ್ವಯಿಚ್ಛೆಯುಳ್ಳ ಆತ್ಮವಾಗಿದೆ. ನಿರ್ಮಾ ಣಿಕನು ಭೂಮಿಯ ಅಸ್ತಿವಾರ ಹಾಕಲು ಉಲ್ಲಾಸಿಸಿ ಸ್ತೋತ್ರ ಮಾಡಿದ ದೇವರ ಮ ಕ್ಕಳ ಪ್ರಕಾರ, ಅದನ್ನು ಒಳ್ಳೆದಾಗಿಯೂ ಪರಿಶುದ್ಧವಾಗಿಯೂ ನಿರ್ಮಿಸಿ ಇದ್ದನು. (ಯೋಬ್. ೩೮, ೭.) ಮನುಷ್ಯರಿಗಿಂತ ಮುಂಚೆ ನಿರ್ಮಾಣವಾದ ದೂತರಲ್ಲಿ ಒಬ್ಬನು ತ ನಗಿದ್ದ ಸ್ವಯಿಚ್ಛೆಯಿಂದ ಕೆಟ್ಟು ಹೋಗಿ ಸತ್ಯದಲ್ಲಿ ನಿಲ್ಲಲಿಲ್ಲ (ಯೋಹಾನ. ೮, ೪೪.) ಅದರಿಂದ ತನ್ನ ರಾಜ್ಯಾಧಿಕಾರವನ್ನು ಕಳಕೊಂಡು (ಯೂದ. ೬.) ತನ್ನ ಜೊ ತೆಗಾರರ ಗಣಗಳನ್ನು ತನ್ನ ನಾಶನದಲ್ಲಿ ಶೇರಿಸಿ ಬೆಳಕಿಗೆ ವಿರೋಧವಾದ ಅಂಧ ಕಾರರಾಜ್ಯವನ್ನು ಸ್ಥಾಪಿಸಿದ್ದಾನೆ. ಇವನಿಗೆ ದೇವರ ವಾಕ್ಯದಲ್ಲಿ ವೈರಿ ಎಂಬ ಅರ್ಥ

ವುಳ್ಳ ಸೈತಾನನು (ಶಟಾನ) ಮನುಷ್ಯರ ಚಾಡಿಗಾರನು ಎಂಬ ಅರ್ಥವುಳ್ಳ ದ್ಯಾಬೊಲೊಸ್ (ಯೋಬ್. ೧, ೯. ೨, ೪. ಪ್ರಕ. ೧೨, ೧೦.) ಯೋಹಾನ. ೮, ೪೪.

ಆದಿಕೊಲೆಗಾರನು ಸುಳ್ಳಿನ ತಂದೆಯು ಪ್ರಕ್. ೧೨, ೯. ಸರ್ವ ಲೋಕವನ್ನು ಕೆಡಿಸಿದ ಹಳೇ ಹಾವು ಇತ್ಯಾದಿ ಹೆಸರುಗಳು ಇಟ್ಟವೆ. ಒಂದು ವೇಳೆ ದೂತರ ಪಾಪಪತನದಿಂದ ಪೂರ್ವ ಭೂಲೋಕವು ನಾಶವಾಯಿತು. ೧ ಮೋಶೆ. ೧, ೨.

ಪ ರಿ ಶಿ ಷ್ಟ. ೨. ಜಯಕ್ಕೆ ಬೇಕಾದ ಉಪಾಯಗಳೂ ಶಕ್ತಿಗಳೂ ಮನುಷ್ಯರಿಗೆ ಇದ್ದವು. ದೇವರು ಅವರನ್ನು ಎಚ್ಚರಿಸಿ ೨, ೧೫ನೇಯಲ್ಲಿ ಹೆದರಿಸಿ ೨, ೧೭. ಇದ್ದದರಿಂದ ಅವರು ಜಯವನ್ನು ಹೊಂದ ತಕ್ಕವರಾಗಿದ್ದರು. ಆದರೆ ಮನುಷ್ಯರು ತಂದೆಯಾದ ದೇವರ ಶಬ್ದಕ್ಕೆ ಕಿವಿ ಕೊಡದೆ ಶೋಧಕನ ಕುಯುಕ್ತಿಯ ಮಾತಿಗೆ ಒಪ್ಪಿಕೊಂಡು, ದೇವರ ಚಿತ್ತಕ್ಕೆ ವಿರೋಧವಾದದ್ದನ್ನು ಆದು ಕೊಳ್ಳಲಿಕ್ಕೆ ಶಕ್ತರಾಗಿದ್ದರು. ಸರ್ವಜ್ಞನಾದ ದೇವರು ಆಗ ಹೋಗುವದನ್ನೂ ಮುನ್ನೋಡಿ ಮನುಷ್ಯರು ಶೋಧನೆಯಲ್ಲಿ ಬೀಳುವದನ್ನೂ ಮುಂತಿಳು ಕೊಂಡರೂ ಶೋಧನೆಯನ್ನು ಆಗಮೀಸಿದನು. ಯಾಕಂದರೆ ಮನುಷ್ಯನ ಪರಿಶುದ್ಧತ್ವದ ಪೂರ್ಣತೆಗಾಗಿ ಪರೀಕ್ಷೆಯು ಅವಶ್ಯವಾಗಿದ್ದದರಿಂದ ದೇವರು ಪರೀಕ್ಷೆಯನ್ನು ಬೇಕೆಂದು ಆಗಗೊಡಿಸಿದನು. ದೇವರು ಪಾಪದಲ್ಲಿ ಬಿದ್ದ ಮನುಷ್ಯನನ್ನು ಪುನಃಸ್ಥಾಪಿಸಿ ಆದಿಯಲ್ಲಿ ನೇಮಕ ಮಾಡಿದ ಮಹಿಮೆಯಲ್ಲಿ ಶೇರಿಸುವದಕ್ಕೆ ತಕ್ಕ ಮಾರ್ಗವನ್ನೂ ಉಪಾಯವನ್ನೂ ದಿವ್ಯ ಬುದ್ಧಿಯಿಂದಲೂ ಅಮಿತ ಕೃಪೆಯಿಂದಲೂ ನಿರ್ಣಯಿಸಿದದರಿಂದ ಗಂಡಾಂತರವುಳ್ಳ ಶೋಧನೆಗೆ ಇಂಬು ಕೊಡ ಬಹುದಿತ್ತು.

೨) ೧ ಮೋಶೆ. ೩, ೨—೬ನೇ ವರಿಗೂ. ಶೋಧಕನು ಮನುಷ್ಯರ ಮುಂದೆ ಬಂದು ಮೊದಲು ದೇವರು ಹೇಳಿದ ವಾಕ್ಯದ ವಿಷಯವಾಗಿ ಅವರ ಮನಸ್ಸಿನಲ್ಲಿ ಸಂಶಯ ಹುಟ್ಟಿಸಿ, ತರುವಾಯ ದೇವರು ಮತ್ಸರದಿಂದ ಸುಳ್ಳು ಹೇಳಿದನೆಂದು ದೂರು ಹೇಳಿ, ಕಡೆಯಲ್ಲಿ ನರಕದ ಚಾವವಾದ ಕುಯುಕ್ತಿಯ ಪೂರ್ಣತೆಯಿಂದ ಸತ್ಯಕ್ಕೆ ಸರಿಯಾದ ಅಸತ್ಯವನ್ನು ಕಲ್ಪಿಸಿ, ನೀವು ತಿಂದ ದಿವಸದಲ್ಲಿ ನಿಮ್ಮ ಕಣ್ಣುಗಳು ತೆರೆದು ನೀವು ಮೇಲು ಕೇಡು ಅರಿತವರಾಗಿ ದೇವರ ಹಾಗೆ ಇರುವಿರೆಂಬ ಸಾಟಾನಿಕ ವಾಗ್ದತ್ತ ಕೊಟ್ಟನು. ಮನುಷ್ಯರು ಕಿವಿ ಕೊಟ್ಟು ಮೋಸ ಹೋದರು. ಹ್ಯಾಗಂದರೆ: ಶೋಧಕನು ಅವರ ಹೃದಯದಲ್ಲಿ ದೇವರಿಗೆ ವಿರೋಧವಾದ ಅಪೇಕ್ಷೆಯನ್ನು ಶೇರಿಸಿದ ಮೇಲೆ ಅವರು ಪಾಪ ನೇಮದ ಪ್ರಕಾರ ಅಕ್ರಮಕ್ಕೂ ಮರಣಕ್ಕೂ ಒಳಗಾದರು.

ಇಚ್ಛೆಯು ಗರ್ಭವನ್ನು ಧರಿಸಿ ಪಾಪವನ್ನು ಹೆರುತ್ತದೆ. ಪಾಪವು ಸಂಪೂರ್ಣವಾದ ಮೇಲೆ ಮರಣವನ್ನು ಹಡಿಯುತ್ತದೆ. ಯಾಕೋಬ್ ೧, ೧೫.

ಸ್ತ್ರೀಯು (೧—ಆ ಮರವು ತಿನ್ನುವದಕ್ಕೆ ಒಳ್ಳೇದು, ೨—ಕಣ್ಣುಗಳಿಗೆ ಇಷ್ಟವು, ೩—ಬುದ್ಧಿ ಹೊಂದುವದಕ್ಕೆ ರಮ್ಯವು ಆಗಿದೆಂದು ನೋಡಿ ಮಾಂಸದ ಆಶೆಯೂ ಕಣ್ಣುಗಳ ಆಶೆಯೂ ಬದುಕಿನ ಹಮ್ಮೂ ತಂದೆಯಿಂದಲ್ಲ ಲೋಕದಿಂದ ಹುಟ್ಟುವದು ಎಂದು ೧ ಯೋಹಾನ ೨, ೧೬ನೇಯಲ್ಲಿ ಬರೆದ ಪ್ರಕಾರ ದೇವರಿಗೆ ವಿರೋಧವಾದ ಆಶೆಯ ನರಕಾಗ್ನಿಯು ಈ ಮೂರು ಕಿರಣಗಳಿಂದ ವಿಭಾಗವಾಗುತ್ತದೆ.) ಮರದ ಫಲವನ್ನು ತಕ್ಕೊಂಡು ತಿಂದು ಗಂಡನಿಗೂ ಕೊಟ್ಟಳು, ಗಂಡನೂ ತಿಂದನು.

ಪರಿಶಿಷ್ಟ. ಶೋಧಕನು ಸ್ತ್ರೀಯ ಬಲಹೀನತ್ವವನ್ನು ತಿಳಿದು, ಅವಳನ್ನು ಮೋಸಗೊಳಿಸುವ ಪ್ರಯತ್ನ ಮಾಡಿದನು. ಸ್ತ್ರೀಯು ಪಾಪದಲ್ಲಿ ಬಿದ್ದ ಮೇಲೆ ಪುರುಷನು, ಮನುಷ್ಯನು ತಂದೆ ತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯ ಸಂಗಡ ಕೂಡಿ ಕೊಳ್ಳುವನು. ಎಂಬ ವಾಕ್ಯದ ಮಿತಿಯನ್ನು ಮೀರಿ ಮನುಷ್ಯನು ತನ್ನ ಕರ್ತನಾದ ದೇವರನ್ನು ಬಿಟ್ಟು ತನ್ನ ಹೆಂಡತಿಗೆ ಕೂಡಿ ಕೊಳ್ಳುವನೆಂಬ ದ್ರೋಹಬುದ್ಧಿಯಿಂದ ಮರುಳಾಗಿ ಪಾಪದಲ್ಲಿ ಬಿದ್ದನು. ಮಣ್ಣಿನಿಂದ ಉಂಟಾದ ಮನುಷ್ಯನು ದೇವರಿಲ್ಲದವನಾಗಿ ದೇವರ ಹಾಗೆ ಇರ ಬೇಕೆಂದು ಅಪೇಕ್ಷಿಸಿದ್ದು ಆಶ್ಚರ್ಯವಾದ ಹುಚ್ಚತನವೂ ಶಾಪಕ್ಕೆ ತಕ್ಕ ಗರ್ವವೂ ಆಗಿತ್ತೆಂದು ಪ್ರತ್ಯಕ್ಷವಾಗಿದೆ.

---

## § 4. ಪಾಪಪತನದ ಫಲವು

೧) ೧ಮೋಶೆ. ೩, ೭. ಶೋಧಕನು ಹೇಳಿದ ಮಾತು ಈಡೇರಿತು. ಆದರೆ ಮನುಷ್ಯನು ಆಲೋಚಿಸಿದ ಅರ್ಥದ ಪ್ರಕಾರವಲ್ಲ, ಶೋಧಕನು ಕುಯುಕ್ತಿಯಿಂದ ಮಾಡಿದ ಅಭಿಪ್ರಾಯದ ಪ್ರಕಾರ ಅದು ಪೂರ್ತಿ ಆಯಿತು. ಮನುಷ್ಯರ ಕಣ್ಣುಗಳು ತೆರದು ಹೋದಾಗ ತಮ್ಮ ನಗ್ನತೆಯನ್ನೂ ಹೀನತೆಯನ್ನೂ ನೋಡಿದರು. ಅವರು ದೇವರ ಹಾಗೆ ಆದರು, ಅಂದರೆ ಆದಾಮನು ದೇವರ ರೂಪವನ್ನೂ ದೇವರ ಸ್ಥಳದಲ್ಲಿರುವ ಅಧಿಕಾರವನ್ನೂ ಬಿಟ್ಟು ಸ್ವಾಧೀನವಾಗಿ ತಾನು ದೇವರೆಂದನ್ನಿಸಿ ಕೊಂಡು ಸ್ವತಂತ್ರಿಕನಾದನು.

ಆದರೆ ದೇವರ ಹಾಗಿರುವ ಈ ಸ್ಥಿತಿಯಲ್ಲಿ ಶೇರಿ ದೇವರ ಹಾಗೆ ಭಾಗ್ಯವಂತನಾಗದೆ ನಿರ್ಭಾಗ್ಯನಾಗಿಯೂ ಅರಿಷ್ಟನಾಗಿಯೂ ಇರಲಾರಂಭಿಸಿದನು. ಅವನು ಮೇಲನ್ನೂ ಕೇಡನ್ನೂ ತಿಳುಕೊಂಡದ್ದು ಸರಿ. ಆದರೆ ಮೇಲನ್ನು ಕಳಕೊಂಡ ಅವಸ್ಥೆಯಲ್ಲಿಯೂ ಕೇಡನ್ನೂ ಕೇಡಿನ ಫಲಗಳನ್ನೂ ಅನುಭವಿಸುವ ಸಂಕಟದಲ್ಲಿಯೂ ಶೇರಿದವನಾಗಿ ಆ ತಿಳುವಿಕೆಯನ್ನು ಹೊಂದಿದನು.

ಆದಾಗ್ಯೂ ಕುಯುಕ್ತಿಯು ಸಹಾ ತಾನು ಅಡಗಿದ ಕುಣಿಯಲ್ಲಿ ಬಿತ್ತು. ಹ್ಯಾಗಂದರೆ ಶೋಧಕನು ದೇವರ ಸ್ವರೂಪವಾದ ಮನುಷ್ಯನಿಗೆ ಸಾತಾನಿಕ ಚೇಷ್ಟೆಯಿಂದ ಹಾಸ್ಯ ಮಾಡಿದ ಪ್ರಕಾರ ದೇವರು ಶೋಧಕನಿಗೆ ಪರಿಶುದ್ಧಾತ್ಮದ ಮುಖಾಂತರ ನ್ಯಾಯ ತೀರಿಸಿ ಗೇಲಿಮಾಡುತ್ತಾನೆ.

ಸತಾನನು ಮನುಷ್ಯರಿಗೆ ಮೋಸದಿಂದ ಹೇಳಿದ ದ್ವಿಯರ್ಥವಾದ ಮಾತುಗಳಿಂದ ತನಗೂ ಬರುವ ತೀರ್ಪು ನಾಶನಗಳನ್ನು ಪ್ರವಾದಿಸಿದನು. ಹ್ಯಾಗಂದರೆ ಲೋಕದ ರಕ್ಷಣೆಯ ದಿವ್ಯ ನಿರ್ಣಯದಿಂದ ಆ ಮಾತುಗಳಿಗೆ ಸಾತಾನನು ನೆನಸದ ಮೂರನೇ ಅಭಿಪ್ರಾಯವು ಹುಟ್ಟಿತು. ಏನಂದರೆ ಪಾಪಪತನವು ರಕ್ಷಣೆಗೆ ಕಾರಣವಾಯಿತು. ಲೋಕವನ್ನು ರಕ್ಷಿಸುವದಕ್ಕಾಗಿ ಮನುಷ್ಯನು ನಿಜವಾಗಿಯೂ ಪೂರ್ಣವಾಗಿಯೂ ದೇವರಿಗೆ ಸಮಾನನಾಗುವ ಹಾಗೆ ದೇವರು ಮನುಷ್ಯನಾದನು. ಯೋಹಾನ್ ೧೭ನೇ ಸಂಧಿಯ ೧೧ನೇಯಲ್ಲಿಯೂ ೨೧, ೨೩ನೇಯಲ್ಲಿಯೂ ದೇವರಿಗೆ ನಮ್ಮ ಸಂಗಡ ಅನ್ಯೋನ್ಯವುಂಟೆಂದೂ ನಮ್ಮನ್ನು ಪ್ರೀತಿ ಮಾಡುತ್ತಾನೆಂದೂ ಬರೆದದೆ. ೨ ಪೇತ್ರ. ೧, ೪ನೇಯಲ್ಲಿ ಅವನ ದಿವ್ಯ ಸ್ವಭಾವದಲ್ಲಿ ಪಾಲುಗಾರರಾಗಿದ್ದೇವೆ. ೧ ಯೋಹಾ. ೩, ೨. ಅವನು ಪ್ರತ್ಯಕ್ಷವಾಗುವಾಗ ಅವನ ಹಾಗೆ ಇರುವೆವೆಂದು ಬಲ್ಲೆವು. ಯಾಕಂದರೆ ಅವನನ್ನು ಇರುವ ಪ್ರಕಾರವೇ ನೋಡುವೆವು. ೧ ಕೊರಿಂಥ. ೧೫, ೪೯. ಮತ್ತು ಮಣ್ಣಿನವನ ಹೋಲಿಕೆಯನ್ನು ಧರಿಸಿದ ಹಾಗೆ ಪರಲೋಕದವನ ಹೋಲಿಕೆಯನ್ನು ಸಹಾ ಧರಿಸುವೆವು.

೨) ೧ನೇ ಮೋಶೆ. ೩ನೇ ಸಂಧಿ ೮ನೇ ಮೊದಲಾದವುಗಳು ದೇವರು ಪಾಪಪತನದ ವಿಷಯವಾಗಿ ಮಾಡಿದ ವಿಚಾರದಲ್ಲಿ ಕರ್ತನ ತಾಳ್ಮೆಯೂ ಮನುಷ್ಯನ ದುರ್ಮನೋಭಾವನೆಯೂ ಪ್ರಕಟವಾಗುತ್ತದೆ. ಆದಾಮನು ತನಗೆ ಕೊಟ್ಟ ಹೆಂಡತಿಯ ಮೇಲೆ ಅಪರಾಧವನ್ನೆಲ್ಲಾ ಹೊರಿಸುತ್ತಾನೆ. ಹೆಂಡತಿಯು ಸರ್ಪನ ಮೇಲೆ ತಪ್ಪು ಹೊರಿಸುತ್ತಾಳೆ. ಅನಂತರ ಶೋಧನೆಯ ಕಾರಣವಾದ ವ. ೧೫. ೧೬. ಸರ್ಪನ ಮೇಲೆಯೂ ಶೋಧಕನ ಮೇಲೆಯೂ ಶಾಪವು ಬೀಳುತ್ತದೆ. ಏನಂದರೆ ಎಲ್ಲಾ ಪ್ರಾಣಿಗಳಲ್ಲಿ ನೀನು

೨*

ಜೀವದಿಂದಿರುವ ದಿನಗಳೆಲ್ಲಾ ಉದರದಿಂದ ನಡೆದು ಮಣ್ಣೇ ತಿನ್ನುವಿ. ಎಶಾ. ೬೫, ೨೫.

ಮತ್ತು ನಿನಗೂ ಸ್ತ್ರೀಗೂ ನಿನ್ನ ಬೀಜಕ್ಕೂ ಸ್ತ್ರೀಯ ಬೀಜಕ್ಕೂ ಹಗೆ ಇಡುವೆನು. ಅವನು ನಿನ್ನ ತಲೆಯನ್ನು ಅಮುಕುವನು ಆದರೆ ನೀನು ಅವನ ಹಿಮ್ಮಡಿಯನ್ನು ಅಮುಕುವಿ.

೩) ಸ್ತ್ರೀಯು ಕಷ್ಟದಿಂದ ಮಕ್ಕಳನ್ನು ಹೆರುವಳೆಂದೂ ಪುರುಷನು ತನ್ನ ಮುಖದ ಬೆವರಿನಿಂದ ರೊಟ್ಟಿ ತಿನ್ನುವನೆಂದೂ ತೀರ್ಪು ಆಯಿತು. ಎಲ್ಲಾ ಕಡೆಯಿಂದ ಮನುಷ್ಯನ ಮೇಲೆ ಸಂಕಟವೂ ದುಃಖವೂ ಉಪದ್ರವೂ ಅಂತ್ಯದಲ್ಲಿ ಕಷ್ಟವೂ ಉಪದ್ರವೂ ಎಲ್ಲಾ ತೀರಿದ ಮೇಲೆ ಮರಣವು ಬರ ಬೇಕು. ಮರಣದಿಂದ ತಾನು ದೇವರಾಗಲಿಕ್ಕೆ ಇಚ್ಛೈಸಿ ಮುಂಕೊಂಡ ಆದಾಮನು ತಾನು ಉಂಟಾದ ಮಣ್ಣಿಗೆ ತಿರುಗುವನು.

ಮನುಷ್ಯನ ನಿಮಿತ್ತ ನರಪಾಪದ ಶಾಪವು ಭೂಮಿಯಲ್ಲಿಯೂ ಸೇರಿತು. ಯಾಕಂದರೆ ನಿನಗೋಸ್ಕರ ಮಣ್ಣು ಶಪಿತವಾಗಲಿ ಎಂದು ಹೇಳಿದನು. ಮನುಷ್ಯನಿಗೆ ಮುಂಚೆ ಉತ್ಪತ್ತಿಯಾದ ಪ್ರಾಣಿಗಳು ಸಹ ತಮ್ಮ ಯಜಮಾನನೂ ಅರಸನೂ ಆಗಿರುವ ಮನುಷ್ಯನಿಗೆ ಬರುವ ಶಾಪದಲ್ಲಿ ಪಾಲು ಹೊಂದಿ ಕೆಟ್ಟು ಹೋದವೆಂದು ನೆನಸ ತಕ್ಕದ್ದು.

ಇದಲ್ಲದೆ ದೇವರು ಮನುಷ್ಯನನ್ನು ಏದೆನ್ ತೋಟದಿಂದ ಹೊರಡಿಸಿ ಮನುಷ್ಯನು ಜೀವವೃಕ್ಷಕ್ಕೆ ಬಂದು ಅದರ ಫಲ ತಿಂದು ಎಂದಿಗೂ ಬದುಕದ ಹಾಗೆ ಪ್ರಜ್ವಲಿಸುವ ಕತ್ತಿ ಹಿಡಿಯುವ ಖೆರೂಬರನ್ನು ತೋಟದ ಪಾಲಕರಾಗಿ ಇಟ್ಟನು.

ಪರಿಶಿಷ್ಟ. ೧. ನೀನು ತಿನ್ನುವಂದು ಸತ್ತೇ ಸಾಯುವಿ ಎಂದು ದೇವರು ಹೇಳಿದ ಪ್ರಕಾರ ಮನುಷ್ಯನು ತಿಂದದರಿಂದ ಪಾಪದ ಸಂಬಳವಾದ ಮರಣಕ್ಕೆ ಒಳಗಾದನು. ಮರಣವು ಅಂದರೆ ಸಮ್ಯುಕ್ತವಾದದರ ವಿಭೇದವು ಪಾಪಪತನದಿಂದ ಮುಂಚೆ ದೇವರ ಐಕ್ಯದಲ್ಲಿದ್ದ ಮನುಷ್ಯನು ದೇವರಿಗೆ ವಿಭೇದವಾದನು. ಇದು ಆತ್ಮಿಕವಾದ ಮರಣವು ಆದರೆ ಪಾಪದಿಂದ ದೇವರ ಐಕ್ಯದಲ್ಲಿ ನಿರ್ಮಿತವಾದ ನರಭಾವವು ಕೆಟ್ಟು ಹೋದ ಕಾರಣ ಪಾಪದಿಂದ ಉಂಟಾದ ನಷ್ಟವು ನರಭಾವದಲ್ಲೆಲ್ಲಾ ಪ್ರಕಟವಾಗ ಬೇಕಾಗಿತ್ತು.

ದೇಹಕ್ಕೆ ನಿತ್ಯ ಆಧಾರವನ್ನು ಕೊಡುವ ಶಕ್ತಿಯನ್ನು ಕಳಕೊಂಡ ಮೇಲೆ ಆತ್ಮಿಕವಾದ ಮರಣದಿಂದ ದೇಹಿಕವಾದ ಮರಣವು ಅದಕ್ಕೆ ಸಂಬಂಧವಾದ ರೋಗಗಳ ಸಮೂಹದ ಸಂಗಡ ಹುಟ್ಟಿತು.

ಪರಿಶಿಷ್ಟ. ೨. ಪಾಪವು ನರಭಾವದಲ್ಲಿ ಶೇರಿ ಮನುಷ್ಯನ ಪ್ರಕೃತಿಯನ್ನೆಲ್ಲಾ ಕೆಡಿಸಿತು. ಮನುಷ್ಯನು ದೇವರ ಮಹಿಮೆಯನ್ನು ಕಳಕೊಂಡ ಮೇಲೆ ಮಾಂಸವಾದನು. ಮಾಂಸದಿಂದ ಹುಟ್ಟುವಂಥಾದ್ದೆಲ್ಲಾ ಮಾಂಸವಾಗಿರುವದರಿಂದ ಯೋಹಾನ. ೩, ೬. ಆದಾಮನ ಪಾಪಭಾವವೂ ಪಾಪದ ಶಾಪವೂ ಅವನ ಮಕ್ಕಳೆಲ್ಲರಿಗೆ ಹತ್ತುತ್ತದೆ. ಆದಾಮನು ಆತ್ಮಿಕಮೃತಿಗೂ ದೇಹಿಕಮೃತಿಗೂ ಒಳಗಾದ ಪ್ರಕಾರ ಅವನ ಮಕ್ಕಳೆಲ್ಲಾ ಎರಡು ವಿಧವಾದ ಮರಣಕ್ಕೆ ವಶವಾಗಿದ್ಧಾರೆ. ಸಮ ನೋಡು. ೧ ಮೋಶೆ. ೮, ೨೧. ಕೀರ್ತನೆ. ೫೧, ೫. ಎಫೆಸ್ಯ. ೨, ೩. ರೋಮಾ. ೫, ೧೨. ೧೮.



# II ಭಾಗ

# ವಿಮೋಚನೆಯೂ ರಕ್ಷಣೆಯೂ

## ಮೊದಲನೇ ಪರ್ವವು

## ರಕ್ಷಣೆಯ ಮಾರ್ಗವು ಸಿದ್ಧವಾದದ್ದು

### § 5. ಮನುಷ್ಯನು ರಕ್ಷಣ್ಯಕ್ಕೆ ಯೋಗ್ಯನಾಗಿದ್ದಾನೆ

ಮನುಷ್ಯನು ಪಾಪವನ್ನು (ಸೈತಾನನ ಪ್ರಕಾರ) ಸ್ವಯಿಚ್ಛೆಯಿಂದ ತನ್ನಲ್ಲಿ ಹುಟ್ಟಿಸಲಿಲ್ಲ. ಹೊರಗಿನಿಂದ ಬಂದ (ಹಿಮ್ಮೆಟ್ಟಿಸ ತಕ್ಕ) ಶೋಧನೆಯಿಂದ ಪಾಪವು ಅವನಿಗೆ ಹತ್ತಿತು. ಆದದರಿಂದ ಅವನ ಭಾವವು ಪಾಪವೆಂಬ ವಿಷದಿಂದ ಪೂರ್ಣವಾಗಿ ಕೆಟ್ಟು ಹೋದರೂ ಪಾಪವಾಗಲಿಲ್ಲ. ಆದಮನಲ್ಲಿಯೂ ಅವನ ಸಂತಾನದಲ್ಲಿಯೂ ಪಾಪಕ್ಕೆ ಮೆಚ್ಚದೆ ವಿರೋಧವಾಗಿದ್ದು ಶಾಪದ ನಿಮಿತ್ತ ತಪ್ಪು ಹೊರಿಸಿ ಶಿಕ್ಷಿಸುವಂಥ ಮನಸ್ಸಾಕ್ಷಿ ಉಳಿಯಿತು. ರೋಮಾ. ೭, ೧೫. ೧೬. ೨, ೧೪. ೧೫.

ಪಾಪದಲ್ಲಿ ಬಿದ್ದ ಮನುಷ್ಯನ ಪ್ರಾಣದಲ್ಲಿಯೂ ಆಳವಾಗಿ ಬೇರೂರಿದಂಥ ಬುದ್ಧಿಗೆ ಚನ್ನಾಗಿ ಗೋಚರವಾಗದಂಥ ದೇವರ ಬಯಕೆ ಇರುವದರಿಂದ ಅವನ ಹೃದಯವು ದೇವರಲ್ಲಿ ನೆಲೆಯಾಗುವ ಪರ್ಯಂತರ ಸಮಾಧಾನವನ್ನು ಕಂಡು ಕೊಳ್ಳುವದಿಲ್ಲ. ಪಾಪವನ್ನು ಶಿಕ್ಷಿಸುವ ಮನಸ್ಸಾಕ್ಷಿಗೂ ದೇವರ ಐಕ್ಯದ ಬಯಕೆಗೂ ಮನುಷ್ಯನಲ್ಲಿರುವ ದಿವ್ಯ ಸ್ವರೂಪವು ಮೂಲವಾಗಿದೆ. ಅದರ ಬಲವೂ ಕಾಂತಿಯೂ ಪಾಪದಿಂದ ಕೆಟ್ಟು ಹೋದರೂ ಅದು ಪೂರ್ಣವಾಗಿ ನಾಶವಾದದ್ದಲ್ಲ. ೧ ಮೋಶೆ ೯, ೬. ಯಾಕೋಬ್. ೩, ೯.

ಯಾಕಂದರೆ ಪಾಪಪತನವು ಆದ ಮೇಲೆಯೂ ಮನುಷ್ಯನು ದೇವರ ವಂಶದವನಾಗಿದ್ದಾನೆಂದು ಅಪ್. ಕ್ರಿ. ೧೭, ೨೮ಯಲ್ಲಿ ಬರದದೆ. ಆದದರಿಂದ ಮನುಷ್ಯನು ಬಹಳ ನೀಚ ಸ್ಥಿತಿಯಲ್ಲಿ ಬಿದ್ದವನಾಗಿದ್ದರೂ ರಕ್ಷಣೆಯನ್ನು ಹೊಂದುವ ಯೋಗ್ಯತೆಯನ್ನು ಕಳಕೊಳ್ಳಲಿಲ್ಲ.

ಪರಿಶಿಷ್ಟ. ಮನುಷ್ಯನಲ್ಲಿ ಉಳಿದ ರಕ್ಷಣೆಯ ಬಯಕೆಯು ಒಂದು ವಿಧದ ರಕ್ಷಣೆಯ ಪ್ರವಾದನೆಯಾಗಿದೆ. ಅದು ಮನುಷ್ಯನಲ್ಲಿ ಮಾತ್ರವಲ್ಲ ಅವನ ಸಂಗಡಲೂ ಅವನ ಮೂಲವಾಗಿಯೂ ವ್ಯರ್ಥತ್ವದಲ್ಲಿ ಬಿದ್ದ ನಿರ್ಮಾಣದಲ್ಲಿ ಸಹಾ ಇರುತ್ತದೆ. ರೋಮಾ. ೮,೧೮—೨೨.



## § 6. ದೇವರು ಮಾಡಿದ ರಕ್ಷಣೆಯ ಆಲೋಚನೆಯು

ಪಾಪಪತನವು ಆದ ಮೇಲೆ ದೇವರು ರಕ್ಷಣೆಯ ಆಲೋಚನೆಯನ್ನು ಮಾಡಿದನೆಂದು ನೆನಸ ತಕ್ಕದ್ದಲ್ಲ. ಜಗದುತ್ಪತ್ತೀ ಮುಂಚೆ ಕ್ರಿಸ್ತನಲ್ಲಿ ನಮ್ಮನ್ನು ಆದು ಕೊಂಡಿದ್ದಾನೆ. ಎಫೆಸ್ಯ. ೧,೪. ಸರ್ವಜ್ಞನಾಗಿರುವ ದೇವರು ಮನುಷ್ಯನು ಪಾಪದಲ್ಲಿ ಬೀಳುವನೆಂದು ಅನಾದಿಯಿಂದ ಮುಂತಿಳುಕೊಂಡನು. ಆದರೆ ಪಾಪದಲ್ಲಿ ಬಿದ್ದ ಮನುಷ್ಯನನ್ನು ರಕ್ಷಿಸ ಬೇಕೆಂದು ನಿರ್ಣಯಿಸಿ ಕೊಂಡು ನೇಮಕ ಮಾಡಿದ ಕಾಲದಲ್ಲಿ ಮನುಷ್ಯನನ್ನು ನಿರ್ಮಿಸಿದನು. ಈ ದಿವ್ಯ ರಕ್ಷಣೆಯ ಆಲೋಚನೆ ಪಾಪಪತನವು ಆದಾಗಲೇ ಲೋಕದಲ್ಲಿ ಪ್ರಕಟವಾಗಲಾರಂಭಿಸಿತು. ಸ್ತ್ರೀಯ ಬೀಜವು ಸರ್ಪದ ತಲೆಯನ್ನು ಅವುಕುವನೆಂಬ ವಾಗ್ದತ್ತವು (ಆದಿಸುವಾರ್ತೆಯು) ಅದರ ಮೊದಲನೇ ಪ್ರಕಟಣೆಯಾಗಿದೆ. ೧ ಮೋಶೆ. ೩,೧೫. ಇಗೋ ದೇವರು ಮುಯ್ಯಿಗೆ ಮುಯ್ಯಿ ಕೊಡುವ ಮಾರ್ಗವು. ಕೆಡಿಸಲ್ಪಟ್ಟವನು ಕೆಡಿಸಿದವನಿಗೆ ನ್ಯಾಯ ತೀರಿಸುವನು. ೧ ಕೊರಿಂಥ. ೬, ೩. ಅಪಜಯವಾದವನು ಜಯಪ್ರದನನ್ನು ಜೈಸುವನು. ಮನುಷ್ಯನು ಪಾಪವನ್ನು ಮಾಡಿ ದೇವರ ಇಚ್ಛೆಗೆ ವಿರೋಧವಾಗಿ ಸತಾನನ ಇಚ್ಛೆಗೆ ಒಪ್ಪಿ ಕೊಂಡನು. ಆದರೆ ರಕ್ಷಣೆಗೆ ಯೋಗ್ಯನಾದ ಮನುಷ್ಯನು ಈ ಸ್ಥಿತಿಯಲ್ಲಿ ಯಾವಾಗಲೂ ಇರುವದಕ್ಕೆ ದೇವರ ರಕ್ಷಣೆಯ ಆಲೋಚನೆಯು ಅಡ್ಡಿ ಮಾಡುತ್ತದೆ. ಮನುಷ್ಯನು ಪಾಪಪತನದಿಂದ ಸೈತಾನನ ಇಚ್ಛೆಗೆ ಪೂರ್ಣವಾಗಿ ವಶವಾಗಲಿಲ್ಲ. ಪಾಪದಿಂದ ದೇವರಿಗೆ ವಿರೋಧವಾದ ಒಂದು ಗುಣ ಅವನ ಭಾವದಲ್ಲಿ ಶೇರಿದರೂ ನಿರ್ಮಾಣದಿಂದ ಶೋಧಕನಿಗೆ ವಿರೋಧವಾದ ಒಂದು ಗುಣ ಅದರಲ್ಲಿ ಉಳಿದದೆ. ಇದಕ್ಕೆ ಜಯವನ್ನು ಕೊಡುವದಕ್ಕೆ ದೇವರಿಗೆ ಮನಸ್ಸು ಅದೆ. ಮನುಷ್ಯನು ಸೈತಾನನ ಐಕ್ಯದಲ್ಲಿ ಎಳೆಯಲ್ಪಟ್ಟು ಶೇರಿದರೂ ಈ ಐಕ್ಯವು ನೆಲೆಯಾಗಿರಬಾರದೆಂದು ದೇವರು ನಿರ್ಣಯಿಸಿದ್ದಾನೆ. ಉಭಯತರಿಗೆ ನಿತ್ಯ ಸ್ನೇಹದ ಐಕ್ಯವು ಅಲ್ಲ, ಶೋಧಕನು ಪೂರ್ಣ ಅಪಜಯವಾಗುವ ಪರ್ಯಂತರ ನಿತ್ಯ ದ್ವೇಷದ ವಿರು

ದ್ಧವು ಇರ ಬೇಕೆಂದು ನೇಮಕವಾಗೆದೆ. ನರವಂಶವೆಲ್ಲಾ (ಸ್ತ್ರೀ ಬೀಜವು) ಪಾಪವನ್ನು
ಹುಟ್ಟಿಸಿದವನ ಸಂಗಡ ಯುದ್ಧ ಮಾಡಿ ಅವನು ಸ್ಥಾಪಿಸಿದ ರಾಜ್ಯವನ್ನು ನಾಶ
ಮಾಡುವದು ಎಂಬದು ದಿವ್ಯ ವಾಗ್ದತ್ತದ ಮೂಲ ಅಭಿಪ್ರಾಯವಾಗೆದೆ. ಆದರೆ
ವಿಶೇಷವಾಗಿ ಸ್ತ್ರೀಯ ಬೀಜವೂ ಮನುಷ್ಯನ ಮಗನೂ ಎಂದು ಹೆಸರ್ಗೊಂಡ ಒ
ಬ್ಬ ಮನುಷ್ಯನು ಈ ಯುದ್ಧದಲ್ಲಿ ಜಯಶಾಲಿಯಾದ ನಾಯಕನಾಗಿ ನೇಮಿಸಲ್ಪ
ಟ್ಟದ್ದು ಈ ಎರಡನೇ ಆದಾಮನು ದೈವತ್ವದ ಸಮಸ್ತ ಪೂರ್ಣತೆಯು ಶರೀರಿಯಾಗಿ
ಅವನಲ್ಲಿ ವಾಸಿಸುವದರಿಂದ (ಕೊಲೊಸ್ಸ. ೨, ೯.) ಅಗತ್ಯವಾಗಿ ಜಯವನ್ನು ಹೊಂ
ದುವಂಥಾದ್ದು ಮೊದಲನೇ ವಾಗ್ದತ್ತದಲ್ಲಿ ಸ್ಪಷ್ಟವಾಗಿ ತೋರದೆ ತದನಂತರ ಹೆಚ್ಚು
ಹೆಚ್ಚಾಗಿ ಪ್ರಕಟವಾಗುತ್ತಿತ್ತು.

ಪರಿಶಿಷ್ಟ. ೧. ಈ ವಾಗ್ದತ್ತದ ಪೂರೈಸುವಿಕೆಯನ್ನು ಸಮಸ್ತ ಪರಿಶುದ್ಧ ಚರಿ
ತ್ರದ ವೃದ್ಧಿಯು ಹೆಚ್ಚು ಹೆಚ್ಚಾಗಿ ತೋರುತ್ತದೆ. ಮನುಷ್ಯನ ಮಗನ ಮುಖಾಂತ್ರ
ದೇವರ ಕೃಪೆಯ ನಿರ್ಣಯವು ಸಂಪೂರ್ಣವಾದ ಪೂರ್ಣತೆಯನ್ನು ಹೊಂದ ಬೇಕಾ
ಗಿತ್ತು. ಆದದರಿಂದ ಪರಿಶುದ್ಧ ಚರಿತ್ರವು ಪ್ರಥಮ ವಾಗ್ದತ್ತದ ಕಾಲದಿಂದ ಎರಡನೇ
ಆದಾಮನ ವರೆಗೂ ಸ್ತ್ರೀ ಬೀಜದ ಉತ್ಪತ್ತಿಗಳ ಪೂರ್ಣ ಸಾಲು ತೋರಿಸುತ್ತದೆ.
ಎರಡನೇ ಆದಾಮನು ಹೊಸ ನರಜಾತಿಯ ಮೂಲತಂದೆಯಾಗಿ ಪಾಪಪತನದಿಂದ ಆ
ದ ನಷ್ಟವನ್ನು ಪರಿಹರಿಸಿ ನರಭಾವವನ್ನು ಪ್ರಥಮ ಸ್ಥಿತಿಗಿಂತ ಅಧಿಕವಾದ ಮಹಿಮೆ
ಯಲ್ಲಿ ಶೇರಿಸುವದಕ್ಕೆ ನೇಮಿಸಲ್ಪಟ್ಟನು. ಹಳೇ ಒಡಂಬಡಿಕೆಯ ಚರಿತ್ರವೆಲ್ಲವು ದೇವರ
ಮಗನು ಮನುಷ್ಯನಾಗೋಣದರ ಮುಂದಿನ ಚರಿತ್ರವಾಗೆದೆ. ವಾಗ್ದತ್ತದ ಸಾಲಿನಲ್ಲಿ
ಒಂದೊಂದು ಹೊಸ ಉತ್ಪತ್ತಿಯಿಂದ ವಾಗ್ದತ್ತದ ಪೂರ್ಣತೆಯು ಹೆಚ್ಚು ಹೆಚ್ಚಾಗಿ
ಸಮೀಪವಾಗುವದು. ವಾಗ್ದತ್ತದ ವಂಶಾವಳಿಯ ಒಂದೊಂದು ತಲೆಯು ಹಳೇ ಒ
ಡಂಬಡಿಕೆಯ ಚರಿತ್ರದ ಅಂತ್ಯಕ್ಕೆ ಹೆಚ್ಚು ಹತ್ರವಾಗಿದೆ. ಆದದರಿಂದ ಹಳೇ ಒಡಂ
ಬಡಿಕೆಯ ಗ್ರಂಥದಲ್ಲಿ ಬರೆದ ವಂಶಾವಳಿಗಳೂ ವಿಶೇಷವಾಗಿ ಆದಾಮನಿಂದ ಕ್ರಿಸ್ತನ
ಪರ್ಯಂತರ ಹೋಗುವಂಥ ಹಳೇ ಒಡಂಬಡಿಕೆಯೆಂಬ ಹಚ್ಚಡದಲ್ಲಿ ಕೆಂಪು ನೂಲಿನ
ಪ್ರಕಾರ ಕಾಣುವಂಥ ವಂಶಾವಳಿಯೂ ಬಹು ಪ್ರಯೋಜನವಾಗಿವೆ.

ಪರಿಶಿಷ್ಟ. ೨. ದೇವರು ಸರ್ಪನಿಗೆ ಕೊಟ್ಟ ಶಾಪದಲ್ಲಿ ಮಾತ್ರವಲ್ಲ ಗಂಭೀರ
ನಾದ ನ್ಯಾಯಾಧಿಪತಿಯು ಮನುಷ್ಯನಿಗೆ ಮಾಡಿದ ಶಿಕ್ಷೆಯ ನಿರ್ಣಯದಲ್ಲಿಯೂ
ಮನುಷ್ಯನನ್ನು ರಕ್ಷಣೆಗಾಗಿ ಸಾಧಿಸ ಬೇಕೆಂದಿರುವ ದೇವರ ಕರುಣವು ತೋರುತ್ತದೆ.
ಹ್ಯಾಗಂದರೆ ಮನುಷ್ಯನಿಗೆ ಇಹದಲ್ಲಿ ನೇಮಕವಾದ ಶಾಪಶಿಕ್ಷೆಗಳೆಲ್ಲಾ ಉಪಕಾರ

ಆಶೀರ್ವಾದಗಳು ಸಹ ಸೇರಿರುತ್ತವೆ. ಸ್ತ್ರೀಯು ಬಹಳ ನೋವಿನಿಂದ ಮಕ್ಕಳನ್ನು ಹೆರ ಬೇಕಾದರೂ ಮಕ್ಕಳನ್ನು ಹೆರಲಿಕ್ಕಿದ್ದಾರೆ. ಮತ್ತು ಸ್ತ್ರೀ ಬೀಜವು ಸರ್ಪನ ತಲೆಯನ್ನು ಅವುಕುವನೆಂಬ ವಾಗ್ದತ್ತವು ಕೊಟ್ಟದೆ. ಆದಾಮನು ತನ್ನ ಹೆಂಡತಿಗೆ ಹವ್ವಳು ಅಂದರೆ ಎಲ್ಲಾ ಜೀವಿಗಳ ತಾಯಿಯೆಂದು ಹೆಸರು ಇಟ್ಟದರಿಂದ ಅವನು ದೇವರು ಕೊಟ್ಟ ಶಾಪದ ಒಳ್ಳ ಅರ್ಥವಾದ ಆಶೀರ್ವಾದವನ್ನು ಸ್ವಲ್ಪವಾದರೂ ಗ್ರಹಿಸಿ ಕೊಂಡನೆಂದು ತೋಚುತ್ತದೆ.

ಹಣೆಯ ಬೆವರಿನಿಂದ ಕಷ್ಟ ಮಾಡ ಬೇಕೆಂಬ ನೇಮಕವು ವಿಶೇಷವಾಗಿ ಪುರುಷನಿಗೆ ಕೊಡಲ್ಪಟ್ಟಿತು. ಇದು ಪಾಪದ ಬಲವನ್ನು ತಳ್ಳುವಂಥಾ ಪರಿಹರಿಸುವಂಥಾ ಔಷಧವಾಗಿದ್ದು ಮನುಷ್ಯನನ್ನು ಅನೇಕ ಪಾಪಗಳಿಗೆ ತಪ್ಪಿಸ ತಕ್ಕದ್ದಾಗಿದೆ. ಇದಲ್ಲದೆ ಪಾಪಪತನದ ಮೇಲೆ ಮನುಷ್ಯರು ಮರಣಕ್ಕೆ ಒಳಗಾದದ್ದೂ ಜೀವವೃಕ್ಷದ ಫಲವನ್ನು ತಿಂದು ನಿತ್ಯವಾಗಿ ಬದುಕದ ಹಾಗೆ ಪರದೈಸದಿಂದ ಹೊರಡಿಸಲ್ಪಟ್ಟದ್ದೂ ಕೃಪೆಯುಳ್ಳ ಶಿಕ್ಷೆಯಾಗಿದೆ. ಹ್ಯಾಗಂದರೆ ಮನುಷ್ಯನು ಜೀವವೃಕ್ಷದ ಫಲವನ್ನು ತಿಂದಿದ್ದರೆ ಶಾಪಕ್ಕೂ ಸಂಕಟಕ್ಕೂ ನಾಶನಕ್ಕೂ ವಶವಾದ ಭೂಸಂಬಂಧವಾದ ದೇಹಿಕ ಜೀವವನ್ನು ಎಂದೆಂದಿಗೂ ಉಳಿಸಿ ಪಾಪದ ಫಲವಾದ ನಷ್ಟದಿಂದ ತನಗೆ ಆಗ ತಕ್ಕ ವಿಮೋಚನೆಯನ್ನು ಅಸಾಧ್ಯವಾಗ ಮಾಡುತ್ತಿದ್ದನು. ದೇಹಿಕಮರಣವು ರಕ್ಷಣೆ ಇಲ್ಲದಿದ್ದರೆ ಶಾಪಮಯುವಾದದ್ದು ನಿತ್ಯ ನಾಶಮಯುವಾದದ್ದು ಇರುತಿತ್ತು. ಆದರೆ ರಕ್ಷಣೆಯ ಮುಖಾಂತರ ರಕ್ಷಿಸಲ್ಪಡುವವರಿಗೆ ಅದು ಮಿತಿ ಇಲ್ಲದ ಉಪಕಾರವಾಯಿತು. ಏನಂದರೆ ಪಾಪಿಯಾದ ಮನುಷ್ಯನು ಮರಣದಿಂದಲೇ ಪುನರುತ್ಥಾನದಲ್ಲಿ ಸೇರ ಬಹುದು.



## § 7. ರಕ್ಷಣೆಯ ಕ್ರಮವಾದ ವೃದ್ಧಿಯು

೧) ಆದರೆ ರಕ್ಷಣೆಯು ಮನುಷ್ಯರು ಪಾಪದಲ್ಲಿ ಬಿದ್ದ ಸಂಗಡಲೇ ಅಲ್ಲ. ನಾಲ್ಕು ಸಾವಿರ ವರುಷ ಕಳದ ಮೇಲೆ ಬಂದದ್ದು ಯಾಕೆ?

ಮನುಷ್ಯನು ರಕ್ಷಣೆಗಾಗಿ ರಕ್ಷಣೆಯು ಮನುಷ್ಯನಿಗಾಗಿ ಸಿದ್ಧವಾಗ ಬೇಕಾಗಿತ್ತು. ಸ್ವಯಿಚ್ಛೆಯಿಲ್ಲದ ನಿರ್ಮಾಣದಲ್ಲಿ ಅಲ್ಲ ಸ್ವಯಿಚ್ಛೆಯುಳ್ಳ ನರಜಾವದಲ್ಲಿ ಪಾಪದ ಮೂಲವು ಇರುವದರಿಂದ ಪಾಪವು ಬಲಾತ್ಕಾರದಿಂದ ಪರಿಹಾರವಾಗುವದೂ ರಕ್ಷಣೆಯು ಆಯತ್ತ ಮಾಡದೆ ತಕ್ಷಣದಲ್ಲಿ ಬರುವದೂ ಅಸಾಧ್ಯವಾಗಿತ್ತು. ಮನು

ಷ್ಯನು ಸ್ವಯಿಚ್ಛೆಯ ನಿರ್ಣಯದಿಂದ ಪಾಪಕ್ಕೆ ವಶವಾದ ಮೇಲೆ ಬಲದಿಂದ ರಕ್ಷಿಸಲ್ಪ
ಡ ಕೂಡದಿದ್ದನು. ದೇವರು ಸಿದ್ಧ ಮಾಡಿದ ರಕ್ಷಣೆಯನ್ನು ಪಾಪಿಯಾದ ಮನುಷ್ಯ
ನು ಸ್ವಯಿಚ್ಛೆಯಿಂದ ಅಂಗೀಕರಿಸುವ ಹಾಗೆ ನಾನಾವಿಧವಾದ ಸಾಧನೆಯು ಅವಶ್ಯ
ವಾಗಿತ್ತು. ವಿಶೇಷವಾಗಿ ಮನುಷ್ಯನು ತಾನು ಪಾಪದಿಂದ ಕೆಟ್ಟು ಹೋಗಿ, ಪಾಪದ
ಮೂಲವಾಗಿ ಶಾಪದ ಸ್ಥಿತಿಯಲ್ಲಿ ಶೇರಿದನೆಂಬದನ್ನು ಸ್ವಂತ ಬುದ್ಧಿಯಿಂದಲೂ ಬಲ
ದಿಂದಲೂ ತನಗೆ ತಾನು ವಿಮೋಚನೆ ಮಾಡಿ ಕೊಳ್ಳ ಕೂಡದೆಂಬದನ್ನು ತಿಳುಕೊಳ್ಳುವ
ದರಿಂದ ಮೇಲಿನಿಂದ ಬರುವ ರಕ್ಷಣೆಯ ಅಪೇಕ್ಷೆಯನ್ನು ಹೃದಯದಲ್ಲಿ ಅನುಭವಿಸ ಬೇ
ಕಾಗಿತ್ತು. ಈ ರಕ್ಷಣೆಯ ಅಪೇಕ್ಷೆಯು ಮನುಷ್ಯರಲ್ಲಿ ಬೇಗ ಹುಟ್ಟಲಿಲ್ಲ. ಮನುಷ್ಯರು
ಕೆಲವು ಸಾವಿರ ವರುಷ ಪರ್ಯಂತರ ಸತ್ಯಜ್ಞಾನವನ್ನೂ ರಕ್ಷಣೆಯ ಮಾರ್ಗವನ್ನೂ
ಹುಡುಕುತ್ತಾ ನಾನಾವಿಧವಾದ ಅಜ್ಞಾನಗಳಲ್ಲಿಯೂ ದುರ್ನಡೆಗಳಲ್ಲಿಯೂ ಸಿಕ್ಕಿ
ಬಿದ್ದು ನಾನಾತರದ ಶಿಕ್ಷೆಯನ್ನೂ ಪರೀಕ್ಷೆಯನ್ನೂ ದಂಡನೆಯನ್ನೂ ಅನುಭವಿಸಿದ
ಮೇಲೆಯೇ ಆ ಅಪೇಕ್ಷೆಯು ಅವರಲ್ಲಿ ಹುಟ್ಟಿತು.

ಇದಲ್ಲದೆ ರಕ್ಷಣೆಯ ಪೂರ್ಣತೆಯು ಸಹಾ ಒಮ್ಮಿಂದೊಮ್ಮೆ ಬರ ಕೂಡದಿತ್ತು.
ಯಾಕಂದರೆ ದೇವರು ಸ್ಥಾಪಿಸಿದ ನಿರ್ಮಾಣನೇಮದ ಪ್ರಕಾರ ನಿರ್ಮಿತ ವಸ್ತುಗಳೆ
ಲ್ಲಾ ಕ್ರಮದಿಂದ ಹುಟ್ಟಿ ವೃದ್ಧಿಯಾಗಿ ಪೂರ್ಣತೆಯನ್ನು ಹೊಂದುತ್ತವೆ. ಸಸಿ ಗಿಡ
ಮರ ಇತ್ಯಾದಿಗಳು ಕ್ರಮವಾಗಿ ಬೀಜದಿಂದ ಹುಟ್ಟಿ ಬೆಳೆದು ಅರಳಿ ಫಲಫಲಿಸುವ
ಪ್ರಕಾರ ಮನುಷ್ಯರಲ್ಲಿಯೂ ಆಗುವ ಕಾರ್ಯಗಳು ನೇಮಕವಾದ ಕ್ರಮದಿಂದ ಪೂ
ರ್ತಿಯಾಗುತ್ತವೆ. ಇದೇ ರೀತಿಯಿಂದ ದೇವರ ರಕ್ಷಣೆಯು ಪ್ರಾಚೀನ ಕಾಲದಲ್ಲಿ
ಆದಿಸುವಾರ್ತೆ ಎಂಬ ಬೀಜದಿಂದ ಹುಟ್ಟಿ ಬೇರೂರಿ ಬೆಳೆದು ಇಸ್ರಾಯೇಲನವರಲ್ಲಿದ್ದ
ದೇವರ ರಾಜ್ಯದಲ್ಲಿ ಮರವಾಗಿ ಯೇಸು ಕ್ರಿಸ್ತನ ನರಜನ್ಮದಲ್ಲಿ ಹೂವಾಗಿ ಕ್ರೈಸ್ತ
ಸಭೆಯಲ್ಲಿ ಫಲಫಲಿಸಿ ಆ ಮೂಲನೇಮವನ್ನು ಅನುಸರಿಸ ಬೇಕಾಗಿತ್ತು.

೨) ಲೋಕವೆಂಬ ಹೊಲದಲ್ಲಿ ರಕ್ಷಣೆಯ ಬೀಜವು ಹೆಚ್ಚುವ ಕಾಲದಲ್ಲಿ ಶ
ತ್ರುವು ಬಿತ್ತಿದ ಹೂದರೆಯ ಬೀಜವು ಸಹಾ ವೃದ್ಧಿಯಾಗಿ ನರಕಭಾವದ ಹೂವುಗ
ಳನ್ನೂ ಫಲಗಳನ್ನೂ ಅಂತ್ಯನ್ಯಾಯತೀರ್ವಿಕೆಯಿಂದ ಆಗುವ ಅಂತ್ಯಛೇದದ ದಿವ
ಸದ ವರೆಗೂ ಕೊಡುತ್ತದೆ. ಮತ್ತಾ. ೧೩, ೨೪—೩೦. ಪಾಪವು ಸಹಾ ಉತ್ಪತ್ತಿ
ಯಾದ ಮೇಲೆ ಅದರ ಪ್ರಕೃತಿಯು ಪ್ರಕಟವಾಗುವ ಹಾಗೆ ಪೂರ್ಣ ವೃದ್ಧಿಯನ್ನು
ಹೊಂದ ಬೇಕಾಗುತ್ತದೆ. ಈ ಪ್ರಕಾರ ಪಾಪದ ಭಾವವಾಗಿರುವ ಭಯಂಕರವಾದ
ಸ್ವವಂಚನೆಯು ಮರೆ ಇಲ್ಲದೆ ಬೈಲಾಗಿ ನಾಶನಕ್ಕಾಗಿಯೂ ನ್ಯಾಯತೀರ್ವಿಕೆಗಾಗಿ
ಯೂ ಸಿದ್ಧವಾಗುತ್ತದೆ. ಪಾಪದ ಪ್ರಕಟಣೆಯು ಅದರ ಅಪಜಯವಾಗಿದೆ. ಆದದ

ರಿಂದ ದೇವರು ರಕ್ಷಣೆಯನ್ನು ದೃಢದಿಂದ ತಿರಸ್ಕರಿಸುವ ಪಾಪವನ್ನು ವೃದ್ಧಿಯನ್ನು ಹೊಂದಲೀಸುವದನ್ನಲ್ಲದೆ ಅದು ಸಂಪೂರ್ಣವಾಗುವ ಹಾಗೆ ಇಂಬು ಕೊಟ್ಟು ಸಹಾಯ ಮಾಡುತ್ತಾನೆ. ೨ ಮೋಶೆ. ೯, ೧೨. ಮತ್ತಾ. ೧೩, ೧೨. ೨ ಥೆಸ್ಸ. ೨, ೧೧.

ಪರಿಶಿಷ್ಟ. ರಕ್ಷಣೆಯ ವೃದ್ಧಿಯ ಚರಿತ್ರದಲ್ಲಿ ರಕ್ಷಣೆಯ ಪೂರ್ಣತೆಯ ಮುಂಗುರ್ತುಗಳೂ ನಾಶನದ ವೃದ್ಧಿಯ ಚರಿತ್ರದಲ್ಲಿಯೂ ಅದರ ಪೂರ್ಣತೆಯ ಮುಂಗುರ್ತುಗಳೂ ಕಾಣುತ್ತವೆ.



# ರಕ್ಷಣೆಯು ಸಿದ್ಧವಾಗೋಣದರ

## ೧ನೆ ಅಧ್ಯಾಯವು

## ಪಾಪಪತನದಿಂದ ಜಲಪ್ರಳಯದ ವರೆಗೆ
(ಮನುಷ್ಯನ ನಿರ್ಮಾಣದ ಮೇಲೆ ೧೬೫೬ ವರ್ಷ)

### § ೪. ಕಾಯಿನ್ ಆಬೇಲರು. ಮತ್ತು ಕಾಯಿನ್ ಸೇತರ ಮಕ್ಕಳು

೧) ೧ ಮೋಶೆ. ೪, ೧—೧೫. ಲೋಕದಲ್ಲಿರುವ ಮನುಷ್ಯರಲ್ಲಿ ಆರಂಭದಿಂದ ಅಂತ್ಯದ ವರೆಗೂ ಎರಡು ಜಾತಿಯವರಿದ್ದಾರೆ. ಒಂದೊಂದು ಜಾತಿ ಅಂತ್ಯದ ಪರ್ಯಂತರ ಹೆಚ್ಚು ಹೆಚ್ಚಾಗಿ ವೃದ್ಧಿಯಾಗುವದು. ಒಬ್ಬರು ವಿಶ್ವಾಸದಿಂದ ದೇವರಿಗೆ ತಮ್ಮನ್ನು ಒಪ್ಪಿಸುತ್ತಾರೆ. ಒಬ್ಬರು ಹಟದಿಂದ ದೇವರಿಗೆ ದೂರವಾಗುತ್ತಾರೆ. ಪ್ರಥಮ ಮನುಷ್ಯರಿಗೆ ಮೊದಲು ಹುಟ್ಟಿದ ಮಕ್ಕಳ ಜೋಡಿನಲ್ಲಿ ಮೇಲೆ ಬರೆದ ಜಾತೀ ಭೇದದ ಆರಂಭವೂ ಮಾದ್ರಿಯೂ ಕಾಣುತ್ತದೆ.

ಚೊಚ್ಚಲ ಮಗನು ಹುಟ್ಟುತ್ತಲೇ ಹವ್ವಳು ಉಲ್ಲಾಸಿಸಿ, ನಾನು ಕರ್ತನಿಂದ ಗಂಡನ್ನು ಪಡಕೊಂಡೆನೆಂದು ಹೇಳಿ, ಅವನಿಗೆ ಕಾಯಿನ್ (ಆಯುಧ) ಎಂದು ಹೆಸರಿಟ್ಟಳು. ಯಾಕಂದರೆ ಇವನು ಸರ್ಪದ ಬೀಜದ ಸಂಗಡ ಯುದ್ಧ ಮಾಡಿ ಜೈಸ ತಕ್ಕವನು ಎಂದೂ, ತನಗೆ ಬಲವಾದ ಆಯುಧವಾಗಿರುವನೆಂದೂ ನೆನಸಿದಳು. ಆದರೆ ಸ್ವಲ್ಪ ಕಾಲದ ಮೇಲೆ ಈ ಆಲೋಚನೆಯು ವ್ಯರ್ಥವೆಂದು ತಿಳಿದು ಎರಡನೇ ಮಗನಿಗೆ ಹೇಬೆಲ್ (ಉಸುರು, ವ್ಯರ್ಥತ್ವವು) ಎಂದು ಹೆಸರಿಟ್ಟಳು. ಇಬ್ಬರು ದೇವರಿಗೆ ಬಲಿ

ಯನ್ನರ್ಪಿಸುವ ವೇಳೆಯಲ್ಲಿ ಹೇಬೆಲನು ಮಂದೆಯ ಚೊಚ್ಚಲವಾದವುಗಳಿಂದ ಹೋಮವನ್ನು ಅರ್ಪಿಸಿದನು. ಕಾಯಿನನು ಭೂಮಿಯ ಫಲಗಳನ್ನು ಕಾಣಿಕೆಯಾಗಿ ತಂದನು. ಆಬೆಲನು ಬಲಿಯನ್ನು ವಿಶ್ವಾಸದಿಂದ ಅರ್ಪಿಸಿದ ಕಾರಣ ದೇವರು ಅದನ್ನು ಅಂಗೀಕರಿಸಿದನು. ಇಬ್ರಿ. ೧೧, ೪. ಆದರೆ ಕಾಯಿನನೂ ಅವನು ತಂದ ಕಾಣಿಕೆಯೂ ದೇವರಿಗೆ ಹಿತವಾಗಿರಲಿಲ್ಲ. ಆದದರಿಂದ ಕಾಯಿನನು ಹೊಟ್ಟೆಕಿಚ್ಚು ತುಂಬಿದವನಾಗಿ ದೇವರು ಹೆದರಿಸಿ ಹೇಳಿದ ಮಾತು ಅಸಡ್ಡೆ ಮಾಡಿ, ತಮ್ಮನನ್ನು-ಕೊಂದು ಹಾಕಿದನು; ೧ ಯೋಹಾನ್ ೩, ೧೨. ಹೇಬೆಲನ ರಕ್ತದ ಶಬ್ದವು ದೇವರ ಕಡೆಗೆ ಕೂಗಲು (ಇಬ್ರಿ. ೧೨, ೨೪.) ದೇವರು ಕಾಯಿನನಿಗೆ ಶಾಪ ಕೊಟ್ಟು, ನೀನು ಭೂಮಿಯಲ್ಲಿ ಅಲೆಯುವವನಾಗಿಯೂ ಓಡುವವನಾಗಿಯೂ ಇರುವಿ ಎಂದು ಹೇಳಿದನು.

ಪರಿಶಿಷ್ಟ. ಈ ಬಲಿಯ ಅರ್ಪಣೆಯು ಮನುಷ್ಯರ ಚರಿತ್ರೆಯ ಆರಂಭದಲ್ಲಿ ಮೊದಲಾಗಿ ಬರೆದ ವಿಶೇಷ ಕಾರ್ಯವಾಗಿದೆ. ೪ ಸಾವಿರ ವರುಷ ಪರ್ಯಂತರ ಎಲ್ಲಾ ಜನಾಂಗಗಳಲ್ಲಿ ನಡೆದ ಎಲ್ಲಾ ದೇವಾರಾಧನೆಗಳಲ್ಲಿ ಬಲಿಅರ್ಪಣೆಯು ಮುಖ್ಯ ಆಚರಣೆಯಾಗಿತ್ತು. ಕಡೆಯಲ್ಲಿ ಕಾಲದ ಪೂರ್ಣತೆಯಲ್ಲಿ ಗೊಲ್ಗೊಥದಲ್ಲಿ ಲೋಕದ ರಕ್ಷಣೆಗಾಗಿ ಅರ್ಪಿಸಲ್ಪಟ್ಟ ಸಂಪೂರ್ಣವಾದ ನಿತ್ಯ ಬಲಿಯಿಂದ ಅದರ ಮುಂಗುರ್ತುಗಳಾದ ಎಲ್ಲಾ ಬಲಿಗಳ ಅಭಿಪ್ರಾಯವು ಪ್ರಕಟವಾಯಿತು. ಮನುಷ್ಯನ ಪಾಪಕ್ಕೂ ದೇವರ ಪರಿಶುದ್ಧತ್ವಕ್ಕೂ ಇರುವ ಮಹಾ ವಿರುದ್ಧವನ್ನು ತೆಗದು ಹಾಕುವದಕ್ಕೂ ಪರಿಹರಿಸುವದಕ್ಕೂ ಮನುಷ್ಯರು ಲೋಕದ ಆರಂಭದಿಂದ ಪ್ರಯತ್ನ ಮಾಡುತ್ತಾ ಬಲಿಗಳನ್ನರ್ಪಿಸುತ್ತಿದ್ದರು.

ಈ ವಿಪರೀತವಾದ ನೇಮವು ಹ್ಯಾಗೆ ಉಂಟಾಯಿತು? ಪೂರ್ವಕಾಲದ ಎಲ್ಲಾ ಜನಾಂಗಗಳಲ್ಲಿ ನಡೆದ ದೇವಾರಾಧನೆಗಳಲ್ಲೆಲ್ಲಾ ಒಪ್ಪಿತವಾಗಿ ಶೇರಿದ ಈ ಆಚರಣೆಯು ಎಲ್ಲಿಂದ ಬಂತು? ಪ್ರಥಮ ಮನುಷ್ಯರಿಗೆ ಆದಿಕಾಲದಲ್ಲಿ ದೇವರು ತಾನು ಬೋಧನೆ ಕೊಟ್ಟು ಪಾಪಪರಿಹಾರಕ್ಕಾಗಿ ಪ್ರಾಣಿಗಳನ್ನು ಬಲಿಯಾಗಿ ಅರ್ಪಿಸುವ ನೇಮಕವನ್ನು ಸ್ಥಾಪಿಸಿದ್ಧಾನೆಂದು ನೆನಸ ತಕ್ಕದ್ದು. ಒಂದು ವೇಳೆ ಕರ್ತನು ೩. ೨೧ನೇ ವಚನದಲ್ಲಿ ಬರೆದಿರುವ ಪ್ರಕಾರ ಮನುಷ್ಯರಿಗೆ ತೊಡಿಸಿದ ತೊಗಲುಗಳು ಬಲಿಯಾಗಿ ಅರ್ಪಿಸಲ್ಪಟ್ಟ ಪ್ರಾಣಿಗಳ ಚರ್ಮಗಳಾಗಿದ್ದವು.

೨) ೪ ಸಂಧಿ ೧೬—೨೪ ವರೆಗೆ. ಕಾಯಿನನು ನೋದೆಂಬ ದೇಶದಲ್ಲಿ ವಾಸ ಮಾಡಿದನು. ಅವನ ಸಂತಾನದವರು ದೇವರ ರಾಜ್ಯಕ್ಕೆ ವಿರೋಧವಾದ ಲೋಕದ ರಾ

ಜ್ಯವನ್ನು ಸ್ಥಾಪಿಸಿ, ಹಸ್ತಕೌಶಲ ವಿದ್ಯೆಗಳನ್ನೂ ಬದುಕಿನ ಆನಂದಭೋಗಗಳನ್ನೂ ಕಲಿತವರಾಗಿ ತಮ್ಮನ್ನೂ ತಮ್ಮ ಹಿರಿಯರನ್ನೂ ದೈವೀಕರಿಸುತ್ತಿದ್ದರು. ಕಾಯಿನನ ಮಗನಾದ ಹನೋಕನ ಹೆಸರಿನಲ್ಲಿ ಮೊದಲನೇ ಪಟ್ಟಣವನ್ನು ಕಟ್ಟಿಸಿದನು. ಕಾಯಿನನ ಸಂತಾನದವನಾದ ಲಾಮೇಕನು ಬಹುಪತ್ನಿತ್ವವನ್ನು ತಾಡಗಿಸಿ, ಸ್ವಮುಷ್ಟಿ ಎಂಬ ದೇವರನ್ನು ನಂಬಿ ಹಿಗ್ಗಿಕೊಂಡು, ಯುದ್ಧಸ್ಥನಿಗೆ ತಕ್ಕ ಜಯಗಾಯನವನ್ನು ಹಾಡಿ, ಪ್ರಥಮ ಕವಿಯಾದನು. ಅವನ ಮಗನಾದ ಯಾಬಲನು ಗುಡಾರಗಳಲ್ಲಿ ವಾಸಿಸುವ ಗೊಲ್ಲರಿಗೆ ಪೂರ್ವಜನಾದನು.

ಯೂಬಲನು ಮುಖವಾದ್ಯಗಳನ್ನೂ ತಂತಿವಾದ್ಯಗಳನ್ನೂ ನಿರ್ಮಿಸಿದನು.

ತುಬಾಲ್ ಕಾಯಿನನು ಪಂಚಲೋಹಗಳಿಂದ ಕೆಲಸ ಮಾಡುವ ಪಂಚಾಲರಿಗೆ ಪ್ರವೀಣನಾದ ಬೋಧಕನಾದನು.

ಅವನ ತಂಗಿಯಾದ ನಾಯೆಮಳು ಸ್ತ್ರೀ ಶೃಂಗಾರದ ಚಮತ್ಕಾರಗಳನ್ನು ಕಲಿತವಳಾದಳೆಂದು ಪುರಾತನದ ಕಥೆಯುಂಟು.

೩) ೧ ಮೋಶೆ ೪, ೨೫—೫ ಸ. ಆದಾಮನು ೧೩೦ ವರುಷದವನಾಗಿ ಕಾಯಿನನು ಆಬೆಲನನ್ನು ಕೊಂದು ಹಾಕಿದ ಸ್ವಲ್ಪ ಕಾಲದ ಮೇಲೆ (೪ನೇ ಸಂಧಿ ೨೫ ವಚನ) ತನ್ನ ಸ್ವರೂಪವಾಗಿರುವ ಸೇತನನ್ನು (ಬದಲಿನವನು) ಪಡೆದನು. ಇವನು ಆಬೆಲನ ಸ್ಥಳದಲ್ಲಿ ಸೇರಿ ವಿಶ್ವಾಸವನ್ನು ಕೈಕೊಳ್ಳುವ ದೇವರ ಮಕ್ಕಳ ಸಂತತಿಗೆ ಪೂರ್ವಜನಾದನು. ಈ ಸಂತತಿಗೆ ಜಲಪ್ರಳಯದ ವರೆಗೂ ಹತ್ತು ತಲಾಂತರವಿತ್ತು.

ಯಾವವೆಂದರೆ:

| | |
|---|---|
| ಆದಾಮ್ | ಏರೆದ್ |
| ಸೇತ್ | ಹೇನೋಕ್ |
| ಯೆನೋಷ್ | ಮೆಥೂಸಲಾ |
| ಕೇನಾನನು | ಲಾಮೇಕ್ |
| ಮಹಾಲಾಲೇಲ್ | ನೋಹನು |

ಯೆನೋಷನ ಕಾಲದಲ್ಲಿ ಯೆಹೋವನ ನಾಮವನ್ನು ಪ್ರಸಂಗಿಸಲಾರಂಭಿಸಿದರು. (ಕರೆಯಲಾರಂಭಿಸಿದರು.)

ಆದಾಮನು ೯೩೦ ವರುಷದವನಾಗಿ, ಎಲ್ಲಾ ಮನುಷ್ಯರಲ್ಲಿ ಹೆಚ್ಚು ವೃದ್ಧನಾದ ಮೆಥೂಸಲಾ—೯೬೯ ವರುಷದವನಾಗಿ ಸೀರಿ ಹೋದನು. ಆದಾಮನು ಮೊದಲುಗೊಂಡು ೭ನೇಯವನಾದ ಹೆನೋಕನು ದೇವರ ಐಕ್ಯದಲ್ಲಿ ನೆಲೆಯಾಗಿದ್ದ

ದರಿಂದ ವಿಶ್ವಾಸದಿಂದ ಮರಣವನ್ನು ನೋಡದ ಹಾಗೆ ಎತ್ತಲ್ಪಟ್ಟನು. ಇಬ್ರಿ. ೧೧, ೫. ಅವನು ನ್ಯಾಯತೀರ್ವಿಕೆಗೆ ಬರುವ ಕರ್ತನ ಪ್ರತ್ಯಕ್ಷತೆಯನ್ನು ಪ್ರವಾದಿಸಿದನು. ಯೂದ. ೧೪. ೧೫ ವಚನಗಳು.

ಲಾಮೇಕನಿಗೆ ಮಗನು ಹುಟ್ಟಿದಾಗ, ಹವ್ವಳು ಮುಂಚೆ ಮಾಡಿದ ಪ್ರಕಾರ ತನ್ನ ಮಗನು ದೇವರು ಶಪಿಸಿದ ಭೂಮಿಯಲ್ಲಿ ಆಗುವ ಉಪದ್ರ ಕಷ್ಟಗಳಲ್ಲೆಲ್ಲಾ ತನಗೆ ಆದರಿಕನಾಗುವನೆಂದು ನಂಬಿ ಅವನಿಗೆ ಶಾಂತಿ ಆದರಣೆ ಎಂಬ ಅರ್ಥವುಳ್ಳ ನೋಹನು ಎಂದು ಹೆಸರಿಟ್ಟನು. ಆದಾಮನು ಲಾಮೇಕನ ೫೬ನೇ ವರುಷದ ವರೆಗೂ ಬದುಕಿದನು.

ಪರಿಶಿಷ್ಟ. ಜಲಪ್ರಳಯಕ್ಕಿಂತ ಮುಂಚೆ ಲೋಕದಲ್ಲಿದ್ದ ಮನುಷ್ಯರ ಆಯುಷ್ಯವು ಬಹಳವಾಗಿ ಹೆಚ್ಚಿದ್ದಕ್ಕೆ ೩ ಕಾರಣಗಳು ಇದ್ದವು.

I ಪ್ರಥಮ ಕಾಲದ ಮನುಷ್ಯರಲ್ಲಿ ನಿರ್ಮಾಣದ ತ್ರಾಣವು ಬೇಗ ಕುಂದಲಿಲ್ಲ.

II ಜಲಪ್ರಳಯಕ್ಕಿಂತ ಮುಂಚೆ ಉಳಿದ ನಿರ್ಮಾಣದಲ್ಲಿಯೂ ಆದಿಯಲ್ಲಿ ಇದ್ದ ಬಲವು ಪೂರ್ಣವಾಗಿ ಅಣಗಿ ಹೋಗಲಿಲ್ಲ.

III ಭೂಲೋಕವೆಲ್ಲಾ ಬೇಗ ಮನುಷ್ಯರಿಂದ ತುಂಬ ಬೇಕೆಂದು ದೇವರು ಅಪೇಕ್ಷಿಸಿದದರಿಂದ ನರಜಾತಿಯ ಪೂರ್ವಜರು ಈಗಿನವರಿಗಿಂತ ಹತ್ತು ಪಾಲಷ್ಟು ವೃದ್ಧರಾದರು.

## § 9. ಜಲಪ್ರಳಯವು

೧) ೧ ಮೋಶೆ. ೬. ಮನುಷ್ಯರ ಆಯುಷ್ಯವು ಬಹಳ ದೀರ್ಘವಾಗಿರುವದರಿಂದ ಅವರ ಸಂತಾನವು ಬಹಳ ಬೇಗ ಅಧಿಕಾಧಿಕವಾಗಿ ಪ್ರವರ್ಧಮಾನವಾಯಿತು. ಆದರೆ ಭಕ್ತಿ ಇಲ್ಲದವರ ದುಷ್ಟತ್ವವು ಅದೇ ಕಾರಣದಿಂದ ಬಹಳವಾಗಿ ಹೆಚ್ಚಿತು. ವಿಶ್ವಾಸದಿಂದ ನಡಿದು ಕೊಳ್ಳುವ ಸೇತನ ವಂಶದವರು ಭೂಲೋಕಕ್ಕೆ ಉಪ್ಪಾಗಿದ್ದರು. ಆದರೆ ದೇವರ ಮಕ್ಕಳು (ಅಂದರೆ ಸೇತನ ವಂಶದವರು ಅಥವಾ ಬೇರೆ ವ್ಯಾಖಾನದ ಪ್ರಕಾರ ದೂತರಲ್ಲಿ ಕೆಲವರು) ಮನುಷ್ಯರ ಕುಮಾರ್ತೆಯರನ್ನು ನೋಡಿ, ಅವರ ಸೌಂದರ್ಯಕ್ಕೆ ಮೆಚ್ಚಿ, ಕಂಡವರನ್ನು ಮದಿವೆ ಮಾಡಿ ಕೊಂಡ ಮೇಲೆ ದೇವರ ಚಿತ್ತಕ್ಕೆ ವಿರೋಧವಾದ ಈ ವಿವಾಹಗಳಿಂದ ಗರ್ವಿಷ್ಟರಾದ ಬಲಾತ್ಕಾರಿಗಳು ಹುಟ್ಟಿದರು. ಅಂದಿನಿಂದ ದುಷ್ಟತ್ವವೂ ಅನ್ಯಾಯವೂ ಬಲಾತ್ಕಾರವೂ ಸಮಸ್ತ ಲೋಕದಲ್ಲಿ

ಹೆಚ್ಚು ಹೆಚ್ಚಾಗಿ ಪ್ರಬಲವಾದವು. ಕಡೆಯಲ್ಲಿ ವಿಶ್ವಾಸವನ್ನು ಕೈಕೊಳ್ಳುವ ಒಬ್ಬ ಮನುಷ್ಯನು ಮಾತ್ರ ಲೋಕದಲ್ಲಿ ಉಳಿದನು. ಅವನ್ಯಾರೆಂದರೆ — ನೀತಿಯ ಪ್ರಸಂಗಿಯಾದ ನೋವಾಹನು ೨ ಪೇತ್ರ. ೨, ೫.

ದೇವರ ತಾಳ್ಮೆಯು ಮಾನಸಾಂತರಕ್ಕೆ ಸಮಯ ಆಗುವ ಹಾಗೆ ಇನ್ನು ೧೨೦ ವರುಷ ತಡೆಯಿತು. ಅಷ್ಟರೊಳಗೆ ನೋವಾಹನು ದೇವರ ಅಪ್ಪಣೆಯ ಪ್ರಕಾರ ೬೦೦ ಅಡಿ ಉದ್ದವಾಗಿಯೂ ೧೦೦ ಅಡಿ ಅಗಲವಾಗಿಯೂ ೬೦ ಅಡಿ ಎತ್ತರವಾಗಿಯೂ ೩ ಅಂತಸ್ತುಗಳುಳ್ಳ ನಾವೆಯನ್ನು ಕಟ್ಟಿಸಿದನು. ಆದರೂ ಮನುಷ್ಯರು ಮಾನಸಾಂತರ ಪಡಲಿಕ್ಕೆ ಮನಸ್ಸಿಲ್ಲದವರಾಗಿದ್ದು ಉಣ್ಣುತ್ತಾ ಕುಡಿಯುತ್ತಾ ಮದಿವೆ ಮಾಡಿ ಕೊಳ್ಳುತ್ತಾ ಮಾಡಿ ಕೊಡುತ್ತಾ ಪ್ರಳಯವು ಬಂದು ಎಲ್ಲರನ್ನು ವೈಯ್ಯುವ ಪರ್ಯಂತರ ಅರಿಯದೆ ಇದ್ದರು. ಮತ್ತಾ. ೨೪, ೩೭—೩೯. (ಇವರ ಕಥೆ ಅಂತ್ಯವಾದ ನ್ಯಾಯತೀರ್ವಿಕೆಯ ಮುಂಚೆ ಇರುವ ಲೋಕದವರ ನಡತೆಯ ಮುಂಗುರ್ತಾಗಿ ಮನುಷ್ಯರನ್ನು ಎಚ್ಚರಿಸುವದಕ್ಕಾಗಿ ಬರೆದದೆ.)

ಪರಿಶಿಷ್ಟ. ದೇವರು ಮನುಷ್ಯನನ್ನು ಉಂಟು ಮಾಡಿದ್ದಕ್ಕೆ ಚಿಂತೆ ಪಟ್ಟು, ಮನಸ್ಸಿನಲ್ಲಿ ನೊಂದು ಕೊಂಡನು ಎಂದು ಬರೆದದೆ. ಮಾನಸಾಂತರದಲ್ಲಿ ೨ ಉಂಟು, ಏನಂದರೆ:

I ಏನಾದರು ಮಾಡ ಬೇಕೆಂಬ ಆಲೋಚನೆಯು ವ್ಯರ್ಥವಾದದ್ದಕ್ಕೆ ಒಂದು ಕಾರ್ಯವನ್ನು ತೊಡಗಿಸಿದವನು ನೊಂದು ಕೊಳ್ಳುವನು.

II ಕೆಟ್ಟು ಹೋದದ್ದನ್ನು ತೆಗದು ಹಾಕಿ ಕಾರ್ಯವನ್ನು ಹೊಸತಾಗಿ ಆರಂಭಿಸಿ ಮೂಲ ಆಲೋಚನೆಯನ್ನು ಯೋಗ್ಯವಾಗಿ ಪೂರೈಸ ಬೇಕೆಂದು ಮನಃಪೂರ್ವಕದಿಂದ ಅಪೇಕ್ಷಿಸುವದು. ಈ ವಿಷಯದಲ್ಲಿ ದೇವರ ಮಾನಸಾಂತರವೂ ಮನುಷ್ಯನ ಮಾನಸಾಂತರವೂ ಒಂದಕ್ಕೊಂದು ಒಪ್ಪುತ್ತದೆ. ಆದರೆ ಭೇದ ಸಹಾ ತೋರುತ್ತದೆ. ಏನಂದರೆ ಆಗ ಬೇಕಾದದ್ದು ಆಗದೆ ಹೋದರೆ ಇಲ್ಲವೆ ತೊಡಗಿದ್ದು ಕೆಟ್ಟರೆ ದೇವರಲ್ಲಿ ತಪ್ಪು ಇಲ್ಲ. ಮತ್ತು ಆದದ್ದನ್ನು ತೆಗದು ಹಾಕುವದಕ್ಕೂ ಕಾರ್ಯವನ್ನು ಹೊಸತಾಗಿ ತೊಡಗಿಸಿ ತನ್ನ ಚಿತ್ತಕ್ಕೆ ಅನುಸರಣೆಯಾಗಿ ತೀರಿಸುವದಕ್ಕೂ ದೇವರು ಯಾವಾಗಲೂ ಶಕ್ತನಾಗಿದ್ದಾನೆ. ಈ ರೀತಿಯಿಂದ ದೇವರು ಮನುಷ್ಯರೆಲ್ಲರೂ ತಮ್ಮ ಮಾರ್ಗವನ್ನು ಕೆಡಿಸಿ ಕೊಂಡ ಮೇಲೆ ಜಲಪ್ರಳಯದಿಂದ ಪೂರ್ವ ನಿರ್ಮಾಣವನ್ನು ತೆಗದು ಹಾಕಿ ನೋವಾಹನನ್ನು ಹೊಸ ನರವಂಶಕ್ಕೆ ಪೂರ್ವಜನಾಗಿ ನೇಮಿಸಿದನು.

೨) ೧ಮೋಶೆ. ೭, ೮. ೩. ದೇವರ ಅಪ್ಪಣೆಯ ಪ್ರಕಾರ ನೋವಹನು ತನ್ನ ಹೆಂಡತಿಯ ಸಂಗಡಲೂ ಮೂರು ಮಂದಿ ಮಕ್ಕಳಾದ ಷೇಮು, ಹಾಮು, ಯಾಫೇತರ ಸಂಗಡಲೂ ಅವರ ಹೆಂಡರ ಸಂಗಡಲೂ ನಾವೆಯಲ್ಲಿ ಎಲ್ಲಾ ಪ್ರಾಣಿಗಳಲ್ಲಿ ಒಂದೊಂದು ಜೋಡನ್ನೂ ಅವುಗಳಿಗೆ ಬೇಕಾದ ಆಹಾರವನ್ನೂ ನಾವೆಯಲ್ಲಿ ಇಟ್ಟು ಕೊಂಡನು. ಎಲ್ಲರೂ ಶೇರಿದ ಮೇಲೆ ದೇವರು ನಾವೆಯನ್ನು ಮುಚ್ಚಿದನು.

ಹೀಗಾದ ಮೇಲೆ ನೋಹನ ೬೦೦ನೇ ವರುಷದ ಎರಡನೇ ತಿಂಗಳಿನ ೧೭ನೇ ದಿವಸದಲ್ಲಿ ಲೋಕದ ನಿರ್ಮಾಣದ ಮೇಲಿನ ೧೬೫೬ನೇ ವರುಷದಲ್ಲಿ ಜಲಪ್ರಳಯದ ಆರಂಭವಾಯಿತು. ಹ್ಯಾಗಂದರೆ ಮಹಾ ಅಗಾಧದ ಜಲಧಿಗಳು ಒಡೆದು ಆಕಾಶದ ಕಿಟಕಿಗಳು ತೆರೆದು ಹೋಗಿ ೪೦ ದಿವಸ ೪೦ ರಾತ್ರಿ ಮಳೆಯು ಬಿಡದೆ ಸುರಿಸುತ್ತಾ ಇತ್ತು. ಉನ್ನತವಾದ ಪರ್ವತಗಳಿಗೆ ೧೫ ಮೊಳ ಎತ್ತರವಾಗಿ ನೀರು ಏರಿ ಭೂಮಿಯನ್ನೆಲ್ಲಾ ತುಂಬಿದದರಿಂದ ಭೂಮಿಯಲ್ಲಿದ್ದ ಪ್ರಾಣಿಗಳೆಲ್ಲಾ ಸತ್ತು ಹೋದವು. ಜಲಪ್ರಳಯವು ಒಂದು ವರುಷ ತೀರುವ ಪರ್ಯಂತರ ಇತ್ತು.

ಅನಂತರ ನಾವೆಯು ಅರ್ಮೇನಿಯ ದೇಶದ ಘಟ್ಟಗಳಲ್ಲಿ ಇರುವ ಅರರಾತ್ ಗಿರಿಯಲ್ಲಿ ಇಳಿದು ಸ್ಥಿರವಾಯಿತು.

ಪರಿಶಿಷ್ಟ. ೧. ನಾವೆಗೆ ೩೬ ಲಕ್ಷ ಘನ ಅಡಿ (ಕ್ಯೂಬಿಕ್ ಫೂಟ್) ಇತ್ತು. ಈ ಸ್ಥಳದ ಹತ್ತರಲ್ಲಿ ೯ ಭಾಗ ಪ್ರಾಣಿಗಳಿಗೆ ಬೇಕಾದ ಆಹಾರದಿಂದ ತುಂಬಿದರು. ಒಂದೊಂದು ಪ್ರಾಣಿಗೆ ೨೭ ಕ್ಯೂಬಿಕ್ ಫೂಟ್ ಉಳಿಯಿತು. ಹೀಗಾಗಿದ್ದರೆ ೭ ಸಾವಿರ ಜಾತಿಯ ಪ್ರಾಣಿಗಳು ನಾವೆಯಲ್ಲಿ ಶೇರ ಬಹುದಿದ್ದವು. ಮೀನು, ಕ್ರಿಮಿ, ಹುಳ, ನಾವೆಯಲ್ಲಿ ಶೇರುವದು ಅವಶ್ಯವಾಗಿರಲಿಲ್ಲ. ಮತ್ತು ಈಗ ಭೂಮಿಯಲ್ಲಿ ಬದುಕುವ ಮೃಗಜಾತಿಗಳಲ್ಲಿ ಅನೇಕವು ಜಲಪ್ರಳಯದ ಮೇಲೆ ಉಂಟಾದವೆಂದು ನೆನಸತಕ್ಕದ್ದು. ಬಿರುಘಾಳಿ ಭೂಕಂಪ ಇತ್ಯಾದಿ ಸಂಭವಿಸುವದಕ್ಕಿಂತ ಮುಂಚೆ ಮೃಗಗಳು ಆಗುವದನ್ನು ಮುಂತಿಳಿದು ಹೆದರಿಕೊಂಡು ಎಲ್ಲ್ಯಾದರು ಆಶ್ರಯವನ್ನು ಹೊಂದಬೇಕೆಂದು ಪ್ರಯತ್ನ ಮಾಡುವವು. ಜಲಪ್ರಳಯ ಬರುವದಕ್ಕಿಂತ ಮುಂಚೆ ಮೃಗಗಳೆಲ್ಲಾ ಜೀವವನ್ನು ಉಳಿಸಬೇಕೆಂದು ತನ್ನಷ್ಟಕ್ಕೆ ನಾವೆಗೆ ಬಂದವೆಂದು ತೋರುತ್ತದೆ. ಭೂಮಿಯ ಅಳತೆಯ ೨೭೨ನೇ ಭಾಗಕ್ಕೆ ಸರಿಯಾದ ನೀರಿನ ಭಾಗವು ಭೂಮಿಯ ಮೇಲೆ ಬಿದ್ದರೆ ಸಮುದ್ರಕ್ಕಿಂತ ೨ಹರದಾರಿ ಎತ್ತರವಾದ ಪರ್ವತಗಳೆಲ್ಲಾ ಅದರಿಂದ ಮುಚ್ಚಿ ಹೋಗುವವು.

ಪರಿಶಿಷ್ಟ. ೨. ಭೂಮಿಯನ್ನೆಲ್ಲಾ ಮುಣುಗಿಸಿದ ಜಲಪ್ರಳಯದ ಕಥೆಯು ಎಲ್ಲಾ ಜನಾಂಗಗಳ ಪುರಾಣ ಕಥೆಗಳಲ್ಲಿ ಶೇರಿಯದೆ. ಬೇರೆ ಬೇರೆ ಜನಾಂಗಗಳಲ್ಲಿ ಉಳಿದ ಜಲಪ್ರಳಯದ ಕಥೆಗಳಿಗೆ ವ್ಯತ್ಯಾಸ ಇದ್ದರೂ ಅವುಗಳೆಲ್ಲಾ ದೇವರ ವಾಕ್ಯದಲ್ಲಿ ಬರೆದ ಕಥೆಗೆ ಮುಖ್ಯ ವಿಷಯಗಳಲ್ಲಿ ಸರಿ ಬೀಳುತ್ತವೆ. ಹಿಂದು ಜನರು ಸತ್ಯವ್ರತನು ತನ್ನ ಹೆಂಡತಿ ಮೂರು ಮಂದಿ ಮಕ್ಕಳು ಅವರ ಹೆಂಡರು ಈ ಏಳು ಜನರ ಸಂಗಡ ಹಡಗದಲ್ಲಿ ಶೇರಿ, ಜಲಪ್ರಳಯದಿಂದ ರಕ್ಷಿಸಲ್ಪಟ್ಟನೆಂದು ಹೇಳುತ್ತಾರೆ.

ಕಲ್ದೆಯರು ಆಲ್ಲೋರನು ಮೊದಲುಗೊಂಡು ೧೦ನೇ ಅರಸನಾದ ಕ್ಷಿಸುತ್ರನು ಜಲಪ್ರಳಯದಲ್ಲಿ ಉಳಿದನೆಂದು ಹೇಳುತ್ತಾರೆ.

ಜಲಪ್ರಳಯಕ್ಕೆ ತಪ್ಪಿಸಿ ಕೊಂಡವನನ್ನು ಐಗುಪ್ತ್ಯರು ಒಸೀರಿಸ್—ಚೀನಾದೇಶಸ್ಥರು ಫೋಹಿ (ಬುಧ). ಗ್ರೇಕರು ದ್ಯೆಕಾಲಿಯೊನ್ ಎಂದು ಕರೆದರು. ಇವರ ಕಥೆಗಳು ದೇವರ ವಾಕ್ಯದಲ್ಲಿ ಬರೆದ ನೋಹನ ಕಥೆಗೆ ಅನುಕೂಲವಾಗಿವೆ. ಬೇರೆ ಅನ್ಯ ಜನಾಂಗಗಳಲ್ಲಿಯೂ ದೇವರ ವಾಕ್ಯದಲ್ಲಿ ಬರೆದ ಜಲಪ್ರಳಯದ ಕಥೆಗೆ ಸರಿ ಬೀಳುವ ಕಟ್ಟುಕಥೆಗಳು ಉಂಟು.

ಪರಿಶಿಷ್ಟ. ೩. ಭೂಮಿಯ ಈಗಿನ ಸ್ಥಿತಿಯನ್ನು ವಿಚಾರಿಸುವದರಿಂದಲೂ ಸಮಸ್ತ ಭೂಮಿಯು ಪೂರ್ವಕಾಲದಲ್ಲಿ ಜಲಪ್ರಳಯದ ನೀರಿನಿಂದ ಮುಚ್ಚಲ್ಪಟ್ಟಿತ್ತೆಂದು ತಿಳುಕೊಳ್ಳ ಬಹುದು. ಏನಂದರೆ:

೧ ಸಮಸ್ತ ಭೂಮಿಯನ್ನು ಈಗ ಮುಚ್ಚುವ ಮಣ್ಣಿನಲ್ಲಿ ಅನೇಕ ಸ್ಥಳಗಳಲ್ಲಿ ಈಗ ಭೂಮಿಯಲ್ಲಿ ಇರದೆ ಇರುವ ಮೃಗಗಳ ಎಲುವುಗಳೂ ಹಲ್ಲುಗಳೂ ಒಂದೊಂದು ವೇಳೆ ದೊರಕುತ್ತವೆ.

೨ ದ್ರೈಚ್ ದೇಶದ ಉತ್ತರ ದಿಕ್ಕಿನಲ್ಲಿಯೂ ಮೂಡಣ ಸಮುದ್ರದ ತೀರದ ಸೀಮೆಗಳಲ್ಲಿಯೂ ಸ್ಕಂದಿನಾವಿಕ ಪರ್ವತಗಳಿಂದ ಬಂದ ವಿಪರೀತ ಭಾರದ ಬಂಡೆಗಳು ಬಿದ್ದಿರುತ್ತವೆ. ಅವು ಜಲಪ್ರಳಯದಲ್ಲಿ ಅಷ್ಟು ದೂರಕ್ಕೆ ವೈಯಲ್ಪಟ್ಟವೆಂದು ನೆನಸ ಬೇಕು. ಅದೇ ಪ್ರಕಾರ ಸ್ವೈತ್ಸ್ ದೇಶದ ಧೌಳಗಿರಿಯಿಂದ (ಮೊಬ್ಲಾ) ಬಂದ ಅಪಾರವಾದ ಬಂಡೆಗಳು ಯೂರಾ ಘಟ್ಟಗಳಲ್ಲಿ ಕಾಣುತ್ತವೆ.

೩ ಎಂಟು ಸಾವಿರ ಅಡಿ ಎತ್ತರವಾದ ಕೊರ್ದಿಲೆರಾ ಪರ್ವತಗಳ ಸ್ಥಳಗಳಲ್ಲಿ ಮಸ್ತಿದೊನ್ ಮೃಗಗಳ ಎಲುವುಗಳು ಆಗಾಗ್ಯೆ ಕಾಣುತ್ತವೆ.

ಹಿಮಾಲಯದ ೧೬ಸಾವಿರ ಫೂಟ್ ಎತ್ತರವಾದ ಸ್ಥಳಗಳಿಂದ ಜಾರಿ ಬಿದ್ದ ಹಿಮಾಂಡಗಳಲ್ಲಿ ಚಿತ್ತಿಗಳ ಕುದುರೆಗಳ ಎಲುವುಗಳು ಕಾಣಿಸಿದವು.

೪ ಅನೇಕ ದೊಡ್ಡ ಗವಿಗಳಲ್ಲಿ ಉಳಿದ ಎಲುವುಗಳಲ್ಲಿ ಒಂದು ಭಾಗ ಜಲಪ್ರಳಯಕ್ಕೆ ಮುಂಚಿನ ಮೃಗಗಳ ಎಲುವುಗಳೆಂದೂ ಒಂದು ಭಾಗ ಈಗಿನ ಮೃಗಗಳ ಎಲುಬುಗಳೆಂದೂ ಚನ್ನಾಗಿ ತೋರುತ್ತದೆ.

೫ ಉತ್ತರಹಿಮಸಾಗರದಿಂದ ದಕ್ಷಿಣದಿಕ್ಕಿನ ದೇಶಗಳ ಮಟ್ಟಿಗೂ ಸಿಬೀರ್ಯದಲ್ಲಿಯೂ ಉತ್ತರ ಅಮೆರಿಕದಲ್ಲಿಯೂ ದೈಚ್‍ದೇಶದಲ್ಲಿಯೂ ಪೇರು ಮೆಕ್ಷಿಕೋ ನವಹೊಲಾಂದ್ ದೇಶಗಳಲ್ಲಿಯೂ ಭೂಮಿಯ ನೆಲವನ್ನು ಅಗಿದವರು ಉತ್ತರಾಯಣಕ್ಕೂ ದಕ್ಷಿಣಾಯಣಕ್ಕೂ ಮಧ್ಯದಲ್ಲಿರುವ ದೇಶಗಳ ಸಸಿ, ಗಿಡ, ಮರಗಳ ಉಳುಹುಗಳೂ ಕೆಲವು ಸ್ಥಳಗಳಲ್ಲಿ ತೆಂಗಿನ ಮರಗಳ ತೋಪುಗಳೂ ಸಿಬೀರ್ಯದಲ್ಲಿ ಆನೆ ಮಂದೆಗಳೂ ದೊರಕಿದವು. ತುಂಗುಸ್ಯ ದೇಶದಲ್ಲಿ ಹಿಮಗಡ್ಡೆಗಳಿಂದ ಮುಚ್ಚಿದ ಕೆಲವು ಮಮೂತ್ ಮೃಗಗಳು ಶಿಕ್ಕಿದವು. ಅವುಗಳ ಶವಗಳು ಎಷ್ಟು ಮಾತ್ರವು ಕೊಳತು ಹೋಗಲಿಲ್ಲ. ಮಾಂಸ, ಚರ್ಮ, ಕೂದಲುಗಳೆಲ್ಲಾ ಅವುಗಳಲ್ಲಿ ಸ್ವಸ್ಥ ಸ್ಥಿತಿಯಲ್ಲಿ ಕಾಣಿಸಿದವು. ಇದರಿಂದ ತೋರುವದೇನಂದರೆ— ಜಲಪ್ರಳಯದ ನೀರು ಒಮ್ಮಿಂದೊಮ್ಮೆ ಆ ಮೃಗಗಳು ಇದ್ದ ಸ್ಥಳಕ್ಕೆ ಬಂದು ಅವುಗಳನ್ನು ಮುಚ್ಚುತ್ತಲೇ ಘಟ್ಟಿಯಾಗಿ ಹೋಯಿತು. ಇಲ್ಲದಿದ್ದರೆ ಆ ಶವಗಳು ನೀರಿನಲ್ಲಿ ಕೊಳತು ಹೋಗುತ್ತಿದ್ದವು. ಮತ್ತು ಉತ್ತರ ದಿಕ್ಕಿನ ದೇಶಗಳು ಜಲಪ್ರಳಯಕ್ಕೆ ಮುಂಚೆ ಥಳಿಘಾಳಿಯ ದೇಶಗಳಾಗಿರಲಿಲ್ಲ; ಯಾಕಂದರೆ ಆ ಜಾತಿಯ ಮೃಗಗಳು ಥಳಿದೇಶಗಳಲ್ಲಿ ಬದುಕುವದಿಲ್ಲ. ಉತ್ತರಾಗ್ರಕ್ಕೆ ಸಮೀಪವಾದ ಸೀಮೆಗಳು ಇಷ್ಟು ಥಳಿಯಾದ ಕಾರಣವು ವಿದ್ವಾಂಸರಿಗೆ ಇಂದಿನ ವರೆಗೂ ತಿಳಿಯುವದಿಲ್ಲ.

ಪರಿಶಿಷ್ಟ ೪. ಜಲಪ್ರಳಯದಲ್ಲಿ ಸತ್ತವರಿಗೆ ಕ್ರಿಸ್ತನು ಪುನರುತ್ಥಾನಕ್ಕೆ ಮುಂಚೆ ಸುವಾರ್ತೆಯನ್ನು ಸಾರಿದನೆಂದು ೧ನೇ ಪೇತ್ರ. ೩ನೇ ಸಂಧಿ ೧೯—೨೦. ವಚನಗಳಲ್ಲಿ ಬರೆದದೆ. ಜಲಪ್ರಳಯವು ನೋಹನಿಗೆ ರಕ್ಷಣೆಯ ಪ್ರಳಯವಾಗಿತ್ತು. ಆದದರಿಂದ ಅದು ಸ್ನಾನಕ್ಕೆ ಮುಂಗುರ್ತು ಎಂದು ೧ ಪೇತ್ರ. ೩, ೨೧ನೆಯಲ್ಲಿ ಬರೆದದೆ.



# ರಕ್ಷಣೆಯು ಸಿದ್ಧವಾಗೋಣದರ

೨ನೆ ಅಧ್ಯಾಯವು

## ಜಲಪ್ರಳಯದಿಂದ ಅಬ್ರಹಾಮನ ಕರಿಯುವಿಕೆಯ ಪರ್ಯಂತರ
(೧೬೫೬ — ೨೦೮೩ನೇ ಪರ್ಯಂತರ)

### § 10. ನೋಹನ ಸಂಗಡ ಆದ ಒಡಂಬಡಿಕೆ

೧ಮೋಶೆ. ೮, ೧೫. — ೯, ೧೭ನೇ ವರೆಗೂ ಇಪ್ಪೆಯೆಲೆ ತಂದ ಪಾರಿವಾಳವು ಸಮಾಧಾನದೂತನಾಗಿ ಪ್ರಳಯದ ಅಂತ್ಯವನ್ನು ತಿಳಿಸಿದ ಮೇಲೆ ನೋಹನು ದೇವರು ಕೊಟ್ಟ ಅಪ್ಪಣೆಯ ಪ್ರಕಾರ ನಾವೆಯಿಂದ ಹೊರಟು ಪೀಠವನ್ನು ಕಟ್ಟಿ ಬಲಿಗಳನ್ನು ಅರ್ಪಿಸಿದನು. ಕರ್ತನು ಸುವಾಸನೆಯನ್ನು ಮೂಸಿ ನೋಡಿ ಹೇಳಿದ್ದೇನಂದರೆ — ಇನ್ನು ಮೇಲೆ ನಾನು ಮನುಷ್ಯನಿಗಾಗಿ ಭೂಮಿಯನ್ನು ಶಪಿಸುವದಿಲ್ಲ. ಯಾಕಂದರೆ ಮನುಷ್ಯನ ಹೃದಯದ ಕಲ್ಪನೆ ಅವನ ಚಿಕ್ಕತನದಿಂದ ಕೆಟ್ಟದ್ದು. ನಾನು ಮಾಡಿದ ಪ್ರಕಾರ ಇನ್ನು ಮುಂದೆ ಜೀವಿಗಳನ್ನೆಲ್ಲಾ ಹೊಡೆಯುವದಿಲ್ಲ. ಇನ್ನು ಭೂಮಿಯು ಇರುವನಕ ಕೊಯ್ಯುವ ಕಾಲವೂ ಬಿತ್ತುವ ಕಾಲವೂ ತಂಪೂ ಶೆಕೆಯೂ ಬೇಸಿಗೆಗಾಲವೂ ಹಿಮಗಾಲವೂ ಹಗಲೂ ರಾತ್ರಿಯೂ ನಿಂತು ಹೋಗವು.

ದೇವರು ನೋಹನನ್ನೂ ಅವನ ಮಕ್ಕಳನ್ನೂ ಆಶೀರ್ವದಿಸಿ, ಆದಾಮನಿಗೂ ಹವ್ವಳಿಗೂ ಹೇಳಿದ ಪ್ರಕಾರ ಅಭಿವೃದ್ಧಿಯಾಗಿ ಹೆಚ್ಚಿ ಭೂಮಿಯನ್ನು ತುಂಬಿಸಿರಿ ಅಂದನು. ಮತ್ತು ಎಲ್ಲಾ ಜೀವಿಗಳ ಮೇಲೆ ಅವರಿಗೆ ಅಧಿಕಾರವನ್ನು ಹೊಸತಾಗಿ ಕೊಟ್ಟನು. ಆದರೆ ಈ ಕಾಲದಿಂದ ಮನುಷ್ಯರು ಸಹಜವಾದ ರಾಜ್ಯಾಧಿಕಾರದಿಂದ ಅಲ್ಲ, ಯುಕ್ತಿಯ ಉಪಾಯಗಳಿಂದಲೂ ಭಯದ ಬಲದಿಂದಲೂ ಜೀವಿಗಳನ್ನು ಆಳಿಕೊಳ್ಳಲಾರಂಭಿಸಿದರು. ಮತ್ತು ದೇವರು ಮಾಂಸವನ್ನು ತಿನ್ನುವದಕ್ಕೆ ವಿಶೇಷವಾದ ಅಪ್ಪಣೆ ಕೊಟ್ಟನು. ರಕ್ತ ಕೂಡಿದ ಮಾಂಸವನ್ನು ಮಾತ್ರ ತಿನ್ನ ಕೂಡದೆಂದು ಹೇಳಿದನು. (ಸಮ ನೋಡು. ೩ಮೋಶೆ. ೧೭, ೧೦. ೧೧.) ಮತ್ತು ಮನುಷ್ಯನ ರಕ್ತವನ್ನು ಚೆಲ್ಲಿದವನ ರಕ್ತವು ಚೆಲ್ಲಲ್ಪಡ ಬೇಕೆಂಬ ಆಜ್ಞೆಯುಂಟಾಯಿತು. ಯಾಕಂದರೆ ಮನುಷ್ಯನು ದೇವರ ಹೋಲಿಕೆಯಲ್ಲಿ ನಿರ್ಮಿಸಲ್ಪಟ್ಟಿದ್ದಾನೆ, ಈ ಹೊಸ ಒಡಂಬಡಿಕೆಯ ಗುರ್ತಾಗಿ ದೇವರು ಮಳೆಬಿಲ್ಲನ್ನು ಮೇಘಗಳಲ್ಲಿ ಇಟ್ಟನು.

ಪರಿಶಿಷ್ಟ. ಈಗ ದೇವರ ರಾಜ್ಯದಲ್ಲಿ ಹೊಸ ಕಾಲ ತೊಡಗುತ್ತದೆ. ಅದೇನಂದರೆ ತಾಳ್ಮೆಯ ಕಾಲವು ರೋಮ. ೩, ೨೫. ಪಾಪವಿಮೋಚನೆ ಮಾಡ ಶಕ್ತನಾಗಿರುವವನು ಬರುವ ಪರ್ಯಂತರ ದೇವರು ಪಾಪಿಗಳಿಗೆ ತಾಳ್ಮೆಯುಳ್ಳವನಾಗಿರ ಮನಸ್ಸಾಗಿದ್ದನು. ಜಲಪ್ರಳಯವೆಂಬ ಸ್ನಾನಜಲದಲ್ಲಿ (೧ ಪೇತ್ರ. ೩, ೨೧.) ಮುಣುಗಿದ ಮೇಲೆ ಹೊಸತಾಗಿ ಎದ್ದ ಭೂಮಿಯಲ್ಲಿ ಹಿಂದಿನ ಕಾಲದ ಲೆಖ್ಖವಿಲ್ಲದ ನರವಂಶಗಳಲ್ಲಿ ಒಂದು ಮನೆ ನಾಶನದಿಂದ ಉಳಿದು ಭೂಮಿಯನ್ನು ಹೊಸತಾಗಿ ತುಂಬುವದಕ್ಕೆ ನೇಮಕವಾಯಿತು.

ದೇವರು ಉಳಿಸಿದ ನೋಹನ ಮನೆಯವರಲ್ಲಿಯೂ ಆದಾಮನ ಪಾಪವು ಇತ್ತು. ಆದರೆ ರಕ್ಷಣೆಯ ನಿರ್ಣಯವು ಸಹ ಅವರಲ್ಲಿ ಹೆಚ್ಚಾಗಿ ಪ್ರಕಟವಾಗಿ ಬಲಗೊಂಡಿತು. ನೋಹನ ಬಲಿಯು ಹೊಸ ನರಚರಿತ್ರಕ್ಕೆ ಆರಂಭವಾದ ಅಭಿಪ್ರಾಯವೇನಂದರೆ — ಹೊಸ ನರವಂಶದ ಪೂರ್ವಜನು ಸಾವೆಯ ಮೂಲವಾಗಿ ಮರಣಕ್ಕೆ ತಪ್ಪಿಸಿಕೊಂಡ ಮನಷ್ಯರಲ್ಲಿ ಇರುವ ಪಾಪವನ್ನೂ ರಕ್ಷಣೆಯ ಆಶೆಯನ್ನೂ ಅದರಿಂದ ಸೂಚಿಸಿದನು.

ನೋಹನು ಅರಿಕೆ ಮಾಡಿದ್ದಕ್ಕೆ ಪ್ರತ್ಯುತ್ತರವಾಗಿ ದೇವರು ಪೂರ್ವ ತೀರ್ಪುಗಳಿಗೆ ಗುರ್ತಾದ ಕಾರ್ಗತ್ತಲೆಯಾದ ಮೋಡಗಳು ಹರಿದ ಮೇಲೆ ಅಂದಿನಿಂದ ಈ ವರೆಗೂ ಆಳುವ ಪ್ರಜೆಗೆ ಗುರ್ತಾದ ರಮ್ಯವಾದ ಸೂರ್ಯನ ಪ್ರಕಾಶವು ತಿರಿಗಿ ಕಾಣುವ ವೇಳೆಯಲ್ಲಿ ಆಕಾಶದಲ್ಲಿ ಥಳಥಳಿಸುವ ಮಳೆಬಿಲ್ಲನ್ನು ಬಾಣದಲ್ಲಿ ಇಟ್ಟನು.

ಮನುಷ್ಯರೆಲ್ಲರೂ ಪಾಪಿಗಳಾಗಿ ಹುಟ್ಟುತ್ತಾರೆಂಬದನ್ನು ದೇವರು ನೆನಸಿ ಕೊಂಡು ಇಂಥವರಿಗೆ ತಕ್ಕ ಪ್ರಮಾಣದಿಂದ ಲೋಕವೆಂಬ ಗೃಹಕೃತ್ಯವನ್ನು ನಡಿಸುತ್ತಾನೆ. ದಿವ್ಯ ಕೃಪೆಯು ಪಾಪಿಗಳಾದ ಮನುಷ್ಯರ ವಂಶದ ರಕ್ಷಣೆಗೆ ಅವಶ್ಯವಾದದನ್ನೆಲ್ಲಾ ಮಾಡಿ ತೀರಿಸುವ ಪರ್ಯಂತರಕ್ಕೂ ರಕ್ಷಣೆಯ ಉಪಾಯವು ಉಳಿಯದ ಮಟ್ಟಿಗೂ ಪಾಪಿಯು ಗತಿಯಿಲ್ಲದ ಸ್ಥಿತಿಯನ್ನು ನೋಡಿ ಕನಿಕರಿಸುವ ದೇವರ ಕರುಣೆಯೂ ಮಾನಸಾಂತರ ಅಸಾಧ್ಯವಾಗುವ ಮಟ್ಟಿಗೂ ಪಾಪಿಯನ್ನು ನಾಶನ ಮಾಡದೆ ಸೈರಿಸುವ ದೇವರ ತಾಳ್ಮೆಯೂ ಪಾಪವನ್ನು ಅಪರಾಧವೆಂದೆಣಿಸಿ ದಂಡಿಸುವದಕ್ಕೆ ಸಿದ್ಧವಾದ ದೇವರ ಪರಿಶುದ್ಧತ್ವವೂ ಸರ್ವಲೋಕಕ್ಕೆ ಆಗ ಬೇಕೆಂದು ನಿರ್ಣಯಿಸಿದ ೨ನೇ ನ್ಯಾಯತೀರ್ವಿಕೆಯನ್ನು ತಡೆಯುತ್ತಾ ಇರುತ್ತವೆ.

ಆದರೂ ದಿವ್ಯ ಕೃಪೆಯ ಈ ಹೊಸ ಆಲೋಚನೆಯು ಮನುಷ್ಯರಲ್ಲಿ ಬೆಳದ ಹೊಸ ದುಷ್ಟತ್ವವು ನಿರರ್ಥಕ ಮಾಡದ ಹಾಗೆ ದೇವರು ಹೊಸ ನರವಂಶಕ್ಕೆ ಜಲಪ್ರಳಯದ ಮೇಲೆ ನೇಮಿಸಿದ ರಕ್ಷಣೆಯ ಮಾರ್ಗವನ್ನು ಬದಲು ಮಾಡ ಬೇಕಾಗಿತ್ತು.

ಯಾಕಂದರೆ ಮನುಷ್ಯರು ರಕ್ಷಣ್ಯಕರವಾದ ದೇವರ ಚಿತ್ತಕ್ಕೆ ಒಪ್ಪಿ ಕೊಳ್ಳದೆ ಹೊಸ ವಿರುದ್ಧವನ್ನು ತಮ್ಮಲ್ಲಿ ಬೆಳಸಿದದರಿಂದ ಮ್ಲೇಂಛತ್ವವು ಹುಟ್ಟಿತು. ಆದದರಿಂದ ಜಲಪ್ರಳಯದ ಮೇಲೆ ಒಬ್ಬನೇ ಪೂರ್ವಜನಿಂದ ಹುಟ್ಟಿದ ನರವಂಶದ ಐಕ್ಯವು ತೆಗದು ಹಾಕಲ್ಪಡಬೇಕಾಗಿತ್ತು. ನೋಹನ ಮಕ್ಕಳೆಲ್ಲರೂ ದೇವರು ನೇಮಕ ಮಾಡಿದ ರಕ್ಷಣೆಯ ಮಾರ್ಗದಲ್ಲಿ ನಡಿಯಲಿಕ್ಕೆ ಮನಸ್ಸುಳ್ಳವರಾಗಿದ್ದರೆ ಒಂದೇ ಸ್ಥಳದಲ್ಲಿ ವಾಸ ಮಾಡಿ ಕ್ರಮದಿಂದ ನಾಲ್ಕು ದಿಕ್ಕಿಗೆ ವಿಸ್ತರಿಸಿ ಕೊಂಡು ಒಂದೇ ರಾಜ್ಯದಲ್ಲಿ ಕೂಡಿ ಇರುವದು ಭಕ್ತಿ ನೀತಿ ಜ್ಞಾನಗಳ ಅಭಿವೃದ್ಧಿಗೆ ಅತಿ ಪ್ರಯೋಜನವಾಗಿರುತಿತ್ತು. ಆದರೆ ಮನುಷ್ಯರು ದೇವರಿಗೆ ತಿರಿಗಿ ವಿರೋಧಿಗಳಾದದರಿಂದ ದೇವರು ಸ್ವಂತ ರಾಜ್ಯದ ಆಲೋಚನೆಯನ್ನು ಪೂರೈಸುವದಕ್ಕಾಗಿ ಅವರನ್ನು ವಿಭಾಗಿಸಿ ಭೂಮಿಯ ದೇಶಗಳಲ್ಲೆಲ್ಲಾ ಚದರಿಸ ಬೇಕಾಗಿತ್ತು.



## § 11. ನೋಹನ ಮಕ್ಕಳು

೧ ಮೋಶೆ. ೯, ೧೮—೨೯. ನೋಹನು ಕೃಷಿಗೆಲಸದವನಾಗಿದ್ದು ದ್ರಾಕ್ಷೆತೋಟಗಳನ್ನು ನೆಟ್ಟನು. ಮತ್ತು ಅವನು ದ್ರಾಕ್ಷೆರಸ ಕುಡಿದಾಗ ಮತ್ತನಾದದರಿಂದ ಬೆತ್ತಲೆಯಾಗಿ ಗುಡಾರದಲ್ಲಿ ಮಲಗಿದನು. ಚಿಕ್ಕ ಮಗನಾದ ಹಾಮನು ತಂದೆಗೆ ಚೇಷ್ಟೆ ಮಾಡಿದನು. ಆದರೆ ಷೇಮನೂ ಯಾಫೇತನೂ ವಿಮುಖರಾಗಿ ಬಂದು ಬೆತ್ತಲೆಯಾದ ತಂದೆಯನ್ನು ಮುಚ್ಚಿದರು. ಅಲ್ಪವೆಂದು ತೋರುವ ಈ ಕ್ರಿಯೆಯಿಂದ ನೋಹನ ಮಕ್ಕಳ ಅಂತರಂಗವಾದ ಭಾವವೂ ಸಹಜವಾದ ಗುಣಗಳೂ ಪ್ರಕಟವಾದವು. ಅವರಿಗೆ ಹುಟ್ಟಿದ ಮಕ್ಕಳಲ್ಲಿ ಪೂರ್ವಜರ ಸ್ವಭಾವದ ಗುಣಗಳು ಹೆಚ್ಚು ಹೆಚ್ಚಾಗಿ ವೃದ್ಧಿಯಾದವು. ನೋಹನು ನಿದ್ದೆ ತಿಳಿದು ಆದದ್ದನ್ನು ಕೇಳಿದಾಗ ಮೂರು ಮಕ್ಕಳ ಸಂತಾನದ ಚರಿತ್ರೆಯನ್ನು ಸಂಕ್ಷೇಪವಾಗಿ ಮುಂತಿಳಿಸುವ ಆಶೀರ್ವಾದ ಶಾಪಗಳ ಪ್ರವಾದನೆಯನ್ನು ಉಚ್ಚರಿಸಿದನು. ಏನಂದರೆ:

ಕಾನಾನನು ಶಾಪಗ್ರಸ್ಥನು! ಅವನು ತನ್ನ ಸಹೋದರರಿಗೆ ದಾಸರ ದಾಸನಾಗಿರುವನು! ಷೇಮನ ದೇವರಾದ ಯೆಹೋವನು ಸ್ತುತಿಸಲ್ಪಡಲಿ! ಕಾನಾನನು ಅವನಿಗೆ ದಾಸನಾಗಿರಲಿ! ಯಾಫೇತನನ್ನು ದೇವರು ವಿಸ್ತರಿಸಲಿ! ಅವನು ಷೇಮನ ಗುಡಾರಗಳಲ್ಲಿ ವಾಸವಾಗಿರಲಿ! ಕಾನಾನನು ಅವನಿಗೆ ದಾಸನಾಗಿರಲಿ!

ಪರಿಶಿಷ್ಟ. ನೋಹನು ಮಕ್ಕಳಿಗೆ ಪ್ರವಾದನೆಯನ್ನು ಹೇಳಿದಾಗ ಹಾಮನ ಕರ್ಮಕ್ಕೆ ಚಿಂತೆ ಪಡುತ್ತಾ ಷೇಮ್ ಯಾಫೇತರ ಭಕ್ತಿಗೆ ಮೆಚ್ಚುತ್ತಾ ಇದ್ದನು. ಆದದರಿಂದ ಇಬ್ಬರ ಗತಿಯಲ್ಲಿ ಹಿತವಾದದ್ದನ್ನು ಮಾತ್ರ ಅವನ ಗತಿಯಲ್ಲಿ ಅಹಿತವಾದದ್ದನ್ನು ಕಂಡು ಪ್ರವಾದಿಸಿದನು. ರಕ್ಷಣೆಯ ದೇವರೂ ರಕ್ಷಣೆಯ ಆಲೋಚನೆಯನ್ನು ನಿರ್ಣಯಿಸಿ ನಡಿಸುವ ಕರ್ತನೂ ಆಗಿರುವ ಯೆಹೋವನು ಷೇಮನ ದೇವರಾಗಿದ್ದಾನೆ. ಷೇಮನನ್ನು ಯೆಹೋವನು ಆದು ಕೊಂಡಿದ್ದಾನೆ. ಆದದರಿಂದ ಮುಂದೆ ಬರತಕ್ಕ ಲೋಕದ ರಕ್ಷಣೆಯು ಯಾಫೇತನ ವಂಶದಲ್ಲಿ ಅಲ್ಲ, ಹಾಮನ ವಂಶದಲ್ಲಿ ಅಲ್ಲ ಷೇಮನ ವಂಶದಲ್ಲಿಯೇ ಹುಟ್ಟುವದೆಂದು ಹೇಳಿದನು. ಯಾಫೇತನು ವಿಸ್ತರಿಸಿ ಕೊಂಡು ಷೇಮನ ಗುಡಾರಗಳಲ್ಲಿ ವಾಸಿಸುವನು. ಎಂಬುವದೇನಂದರೆ — ಷೇಮನವರ ಮಧ್ಯದಲ್ಲಿ ಹುಟ್ಟಿರುವ ರಕ್ಷಣೆಯ ಐಕ್ಯದಲ್ಲಿ ಯಾಫೇತನ ಮಕ್ಕಳು ಸಹ ಶೇರಿಸಿ ಕೊಳ್ಳಲ್ಪಡುವರು.

ಕಾನಾನನು ಹಾಮನ ಚಿಕ್ಕ ಮಗನಾಗಿದ್ದನು. ನೋಹನ ಮಕ್ಕಳಲ್ಲಿ ಚಿಕ್ಕವನಾದ ಹಾಮನು ತಂದೆಗೆ ಮಾಡಿದ ಕರ್ಮದ ಶಾಪವು ಮಕ್ಕಳಲ್ಲಿ ಚಿಕ್ಕವನಾದ ಕಾನಾನನ ಮುಖಾಂತರವಾಗಿ ಹಾಮನ ಮೇಲೆ ಬರುವದು. ಹ್ಯಾಗಂದರೆ: ಇವನ ಮನೆಗೆ ದೇಹಿಕ, ಆತ್ಮಿಕ ದಾಸತ್ವದ ಶಾಪವು ಹತ್ತುತ್ತದೆ. ಕಾನಾನನಿಗೆ ಆಶೀರ್ವಾದ ರಕ್ಷಣೆಗಳ ಮಾತು ಅಲ್ಲ, ಶಾಪನಾಶನಗಳ ಮಾತು ಈಗ ಪ್ರಸಂಗಿಸಲ್ಪಡುವದರಿಂದ ಇವನ ಮಕ್ಕಳು ಸಹ ಯೇಸು ಕ್ರಿಸ್ತನಲ್ಲಿ, ಬಿಡುಗಡೆಯಾಗಿ ಎಲ್ಲಾ ದಾಸತ್ವಕ್ಕೆ ತಪ್ಪಿಸಿ ಕೊಳ್ಳುವಂಥ ಪೂರ್ವಜನು ಮೊದಲುಗೊಂಡು ಅವರ ಮೇಲೆ ಬಹು ಕಾಲವೂ ಭಾರವಾಗಿಯೂ ಇದ್ದ ಶಾಪವು ಕ್ರಿಸನಲ್ಲಿ ಮುಗಿದು ಹೋಗುವಂಥಾ ದಿವಸವು ಬರುತ್ತದೆಂಬದು ಇನ್ನು ಮರೆಯಾಗಿರ ಬೇಕಾಯಿತು. ನೋಹನ ಕಾಲದಲ್ಲಿ ಮರೆಯಾಗಿದ್ದ ಮಾತು ೬೮ ಕೀರ್ತನೆಯ ೩೧ನೇ ವಚನದಲ್ಲಿ ಮೊದಲು ಪ್ರಕಟವಾಯಿತು. ಶ್ರೇಷ್ಟರು ಮಿಚ್ರದಿಂದ ಬರುವರು; ಕೂಷ್ ತನ್ನ ಕೈಗಳನ್ನು ದೇವರ ಕಡೆಗೆ ತ್ವರೆಯಾಗಿ ಚಾಚುವನು.



## § 12. ಭಾಷಾಭೇದವೂ, ಜನಾಂಗಗಳು ಚದರವಾದದ್ದೂ

೧.) ೧ ಮೋಶೆ. ೧೧. ನೋಹನ ಸಂತಾನದವರು ಅರ್ಮೇನ್ಯದಿಂದ ಮೊದಲು ಮೂಡಣ ಕಡೆಗೆ ಹೋಗಿ ಐಫ್ರತ್ ತಿಗ್ರಿಸ್ ನದಿಗಳ ನಡುವೆಯಲ್ಲಿರುವ ಶಿನೆಯಾರ್ ಎಂಬ ಬೈಲುಸೀಮೆಯಲ್ಲಿ ವಾಸವಾದರು. ಜನರ ಲೆಖ್ಖವು ಬಹಳ ಬೇಗ ಹೆ

ಚ್ಚಿದದರಿಂದ ಬೇರೆ ಬೇರೆ ಕುಲಗಳು ಮೂಲಸ್ಥಳಗಳನ್ನು ಬಿಟ್ಟು, ಬೇರೆ ಬೇರೆ ಸೀ
ಮೆಗಳಿಗೆ ಹೋಗ ಬೇಕಾದ ಕಾರಣ ಮನುಷ್ಯರು ತಮಗೆ ಐಕ್ಯದ ಸ್ಥಳವು ಇರ ಬೇ
ಕೆಂದು ಆಕಾಶಕ್ಕೆ ಮುಟ್ಟುವ ದೊಡ್ಡ ಗೋಪುರವನ್ನು ಕಟ್ಟುವ ಆಲೋಚನೆ ಮಾಡಿ
ದರು. ಮನುಷ್ಯರೆಲ್ಲರೂ ಯೇಕಮನಸ್ಸಾಗಿ ಕೂಡಿ ಕೊಂಡರೆ ದೇವರಿಗಾದರೂ ಎದು
ರು ನಿಲ್ಲ ಬಹುದು ಎಂಬ ಗರ್ವದ ಬಗೆಯನ್ನು ತಮ್ಮಲ್ಲಿ ಬೆಳಸಿ ಕೊಂಡು, ಎಲಾ
ಒಂದು ಪಟ್ಟಣವನ್ನು ತುದಿಯಿಂದ ಆಕಾಶಕ್ಕೆ ಮುಟ್ಟುವ ಗೋಪುರವನ್ನು ಕಟ್ಟಿ, ಹೆಸ
ರು ಪಡೆದು ಕೊಳ್ಳುವಾ, ಎಂದು ಹೇಳಿ ಕೊಂಡರು. ಈ ವರೆಗೆ ಎಲ್ಲಾ ಜನರಿಗೆ
ಒಂದೇ ಭಾಷೆ ಇತ್ತು. ಆದದರಿಂದ ಅವರೆಲ್ಲರೂ ಐಕ್ಯವಾಗಿದ್ದು ಒಂದೇ ಪ್ರಕಾರ
ವಾಗಿ ನಡದು ಕೊಂಡು ಭೇದವಿಲ್ಲದೆ ತಮ್ಮ ಆಲೋಚನೆಗಳನ್ನು ಪೂರೈಸುವದಕ್ಕೆ
ಹೆಚ್ಚು ಶಕ್ತಿಯುಳ್ಳವರಾಗಿದ್ದರು. ಯೇಕಭಾಷೆ ಎಂಬ ಐಕ್ಯದ ಬಂಧವನ್ನು ಹರಿಯು
ವದಕ್ಕೆ ಕರ್ತನು ಇಳಿದು ನರಭಾಷೆಯನ್ನು ಗಲಿಬಿಲಿ ಮಾಡಿದನು. ಅದು ಕಾರಣ
ಮನುಷ್ಯರು ಬಾಬೆಲ್ (ಗಲಿಬಿಲಿ) ಎಂಬ ಪಟ್ಟಣ ಕಟ್ಟುವದನ್ನು ಬಿಡ ಬೇಕಾಯಿತು.
ಅವರು ಕೆಟ್ಟ ಮನಸ್ಸಿನಿಂದ ತಮ್ಮಲ್ಲಿ ಸ್ಥಾಪಿಸಿ ಕೊಂಡ ಐಕ್ಯವನ್ನು ಸಂಹರಿಸುವದಕ್ಕೆ
ದೇವರು ಅವರನ್ನು ಈ ಪ್ರಕಾರ ಚದರಿಸಿದನು. ಅಂದಿನಿಂದ ಜನಾಂಗಗಳು ಭೇದ
ವಾಗಿ ತಮ್ಮ ತಮ್ಮ ಮಾರ್ಗಗಳಲ್ಲಿ ಶೇರಿ ಸಮಸ್ತ ಲೋಕದಲ್ಲಿ ಚದರಿ ಹೋದರು.
(ಬಾಬೆಲ್‌ಗೋಪುರಕ್ಕೆ ಪ್ರತಿ ಗುರ್ತಾಗಿರುವ ಗೊಲ್ಗೊಥದ ಕ್ರೂಜೆಯ ಬಳಿಯಲ್ಲಿ
ಮಾತ್ರ ಜನಾಂಗಗಳೆಲ್ಲಾ ಕೂಡಿ ಕೊಂಡು ಐಕ್ಯವಾಗುವರು.)

ಪಂಚಾಶತ ದಿವಸದಲ್ಲಿ ದೇವರು ಆತ್ಮದ ಮುಖಾಂತರ ತಿರಿಗಿ ಇಳಿದು ಬಂದು,
ವಿಭೇದವಾದ ಭಾಷೆಗಳ ಐಕ್ಯವನ್ನು ಪುನಃಸ್ಥಾಪಿಸಲಾರಂಭಿಸಿದನು. ಬಾಬೇಲು
ದೇವರಿಗೆ ವಿರೋಧವಾದ ಪ್ರತಿ ಕ್ರೈಸ್ತತ್ವದ ಮುಂಗುರ್ತಾಗಿಯೂ ಅಂತ್ಯ ಕಾಲದಲ್ಲಿ
ಆಗುವ ದುಷ್ಟತ್ವ ಪೂರ್ಣತೆಯ ಆರಂಭವಾಗಿಯೂ ಅದೆ.

ಪರಿಶಿಷ್ಟ. ೧ ಎಲೋ ಪಟ್ಟಣವನ್ನೂ ಗೋಪುರವನ್ನೂ ಕಟ್ಟುವಾ ಎಂದು ಸೀನ್ಯಾರಿ
ನ ನಿವಾಸಿಗಳು ಹೇಳಿದಾಗ ಮ್ಲೇಂಛತ್ವವು ಉತ್ಪತ್ತಿಯಾಯಿತು. ಜೀವವುಳ್ಳ ಕರ್ತ
ನಾದ ದೇವರನ್ನು ಅಲ್ಲಗಳೆದು ಆತನು ನಿಶ್ಚಯಿಸಿದ ರಕ್ಷಣೆಯನ್ನು ಉದಾಸೀನ ಮಾ
ಡುವದೂ ಸ್ವಂತ ಬಲದಿಂದಲೂ ಬುದ್ಧಿಯಿಂದಲೂ ಗತಿ ಹೊಂದ ಬಹುದೆಂದು ನೆನಸಿ
ರಕ್ಷಣೆಯ ಉಪಾಯಗಳನ್ನು ತಾನೇ ಹುಡುಕುವದೂ ಮ್ಲೇಂಛಗುಣವಾಗಿದೆ. ಗೋ
ಪುರವನ್ನು ಕಟ್ಟುವದರಲ್ಲಿ ಈ ಭಾವನೆಯು ಪ್ರಕಟವಾಗಿ ದೃಢವಾಯಿತು. ಮನುಷ್ಯ
ರು ಆಗ ಶೇರಿದ ಮಾರ್ಗದ ಆರಂಭವು ಏನಂದರೆ: ತಮ್ಮನ್ನು ತಾವೇ ರಕ್ಷಿಸಿ ಕೊಳ್ಳ

ವ ಪ್ರಯತ್ನವು. ಅದರ ಅಂತ್ಯವೇನಂದರೆ ರಕ್ಷಣೆಯನ್ನು ಸಂಪಾದಿಸಿ ಕೊಳ್ಳಲಿಕ್ಕೆ ಅಸಾಧ್ಯವೆಂಬ ನಿರಾಶೆಯು.

ಪರಿಶಿಷ್ಟ. ೨ ಗ್ರೀಕ ಗ್ರಂಥಕರ್ತರಾದ ಹೆರೋದೋತನೂ ಸ್ತ್ರಾಬೋನನೂ ಗ್ರಂಥಗಳಲ್ಲಿ ವಿವರಿಸಿದ ಬಾಬೇಲಿನ ಬೇಲಿನ ಆಲಯವು ಬಾಬೇಲಿನ ಗೋಪುರದ ಸ್ಥಳದಲ್ಲಿ ಕಟ್ಟಲ್ಪಟ್ಟ ಕಟ್ಟುವಿಕೆ ಎಂದು ಅನೇಕರು ನೆನಸುತ್ತಾರೆ. ಫ್ರತ್ ನದಿಯ ಪಶ್ಚಿಮ ಕಡೆಯಲ್ಲಿರುವಂಥ ೨ಸಾವಿರ ಅಡಿ ಸುತ್ತಳತೆಯಾದಂಥ ಹಾಳಾದ ಕಟ್ಟುವಿಕೆ ಬಾಬೆಲ್‌ಗೋಪುರದ ಉಳುಹು ಎಂದು ಹೇಳುತ್ತಾರೆ. ಅರಾಬ್ಯರು ಅದಕ್ಕೆ ಬಿರ್ಸ್ ನಿಮ್ರೂದ್ (ನಿಮ್ರೋದನ ಬುರುಜು) ಎಂದು ಹೆಸರಿಟ್ಟರು.

೨) ೧ ಮೋಶೆ. ೧೦. ಯಾಫೆತನ ವಂಶದವರು ಉತ್ತರ ದಿಕ್ಕಿಗೆ ಹೋಗಿ ಆ ಪಕ್ಷದ ದೇಶಗಳಲ್ಲಿ ವಿಶೇಷವಾಗಿ ವಸತಿಯಾದರು. ಯಾಫೆತನನ್ನು ವಿಸ್ತರಿಸಲಿ ಎಂದು ಹೇಳಿದ ಪ್ರಕಾರವೇ ಯಾಫೆತನ ವಂಶದವರು ಆ ಕಾಲದಿಂದ ಈ ವರೆಗೂ ಬೆಳದು ಬಲಗೊಂಡು ಉತ್ತರ ಆಸ್ಯವನ್ನೂ ಪೂರ್ಣ ವಿಲಾಯಿತಿಯನ್ನೂ ಉತ್ತರ ಅಮೇರಿಕವನ್ನೂ ಸ್ವತಂತ್ರಿಸಿ ಕೊಂಡು ಇವುಗಳ ಹೊರ್ತು ಭೂಮಿಯ ಅನೇಕ ದೇಶಗಳನ್ನು ತಮ್ಮ ವಶ ಮಾಡಿ ಕೊಂಡಿದ್ದಾರೆ.

ಹಾಮನ ವಂಶದವರು ದಕ್ಷಿಣ ದಿಕ್ಕಿಗೆ ಹೋದರು. ದಕ್ಷಿಣ ದಿಕ್ಕಿನ ಕಾವು ಹಾಮನ ವರ ಹೆಸರಿಗೂ ಭಾವಕ್ಕೂ ಸರಿಯಾಗಿದೆ. ಈ ವಂಶದವರು ಅರಾಬ್ಯದಲ್ಲಿಯೂ ಹಿಂದು ದೇಶದಲ್ಲಿಯೂ ಸೇರಿದರು. ಮತ್ತು ಆಫ್ರಿಕ ಖಂಡವನ್ನೆಲ್ಲಾ ಸ್ವತಂತ್ರಿಸಿ ಕೊಂಡರು.

ಷೇಮನ ವಂಶದವರು ಮೂಲಸ್ಥಳವನ್ನು ಬಿಡದೆ ಮಧ್ಯ ಆಸ್ಯದಲ್ಲಿ ಬೇರೂರಿ ಪೂರ್ವಪಶ್ಚಿಮ ದಿಕ್ಕುಗಳಿಗೆ ಹಬ್ಬಿದರು. ಈ ವಂಶದಲ್ಲಿ ವಾಗ್ದತ್ತಸಂತಾನವು ಉಳಿಯಿತು. ಅದರಲ್ಲಿ ಈ ಚರಿತ್ರ ಭಾಗದ ಅಂತ್ಯದ ವರೆಗೆ ಹತ್ತು ತಲಾಂತರವಿತ್ತು. ಅದರ ಪಟ್ಟಿ ಯಾವದಂದರೆ.

| | |
|---|---|
| ಷೇಮ್ | ರೇಗು |
| ಅರ್ಪಕ್ಷಾದ್ | ಸೇರುಗ್ |
| ಸಾಲಾ | ನಾಹೋರ್ |
| ಯೇಬೆರ್ | ತೇರಾ |
| ಪೇಲೆಗ್ | ಅಬ್ರಾಮ್ |

ಆದರೆ ವಾಗ್ದತ್ತದ ಬಾಧ್ಯರಾದ ಇವರ ಸಂತಾನದಲ್ಲಿಯೂ ಈ ಕಾಲದ ಅಂತ್ಯದಲ್ಲಿ ನಷ್ಟವು ಸೇರಿತು. ಹ್ಯಾಗಂದರೆ—ಅಬ್ರಾಮನ ತಂದೆಯಾದ ತೇರಹನು

ವಿಗ್ರಹಾರಾಧಕನಾಗಿದ್ದನೆಂದು ಯೋಷುವಾ ೨೪ನೇ ಸಂಧಿಯ ೨ನೇ ಮತ್ತು ೧೪ನೇ ವಚನಗಳಲ್ಲಿ ಬರೆದದೆ.

ಪರಿಶಿಷ್ಟ. ೧. ಜನಾಂಗಗಳು ಭೇದವಾದ ಕಾಲವು ೧ ಮೋಶೆ. ೧೦ನೇ ಸಂಧಿ ೨೫ನೇಯಲ್ಲಿ ಬರದದೆ.

ಷೇಮನ ಮರಿಮಗನಾದ ಪೇಲೆಗನ ಕಾಲದಲ್ಲಿ ಲೋಕವು ಭೇದವಾದದರಿಂದ ಅವನಿಗೆ ಪೇಲೆಗ್ (ಭೇದ) ಎಂದು ಹೆಸರಾಯಿತು. ೧೦ನೇ ಸಂಧಿಯಲ್ಲಿ ಬರೆದ ಜನಾಂಗಗಳ ಪಟ್ಟಿಯಲ್ಲಿ ನೋಹನ ಸಂತಾನದವರು ಪಶ್ಚಿಮ ಅಸ್ಯದಲ್ಲಿ ಪ್ರಬಲವಾಗಿ ವಿಸ್ತರಿಸಿ ಕೊಂಡ ವಿವರಣೆಯನ್ನು ತೋರಿಸುವ ಸರ್ವಲೋಕ ವಂಶಾವಳಿಯಾಗಿದೆ. ಹಾಮನ ವಂಶದವನಾದ ನಿಮ್ರೋದನು ಶೀನ್ಯಾರಿನಲ್ಲಿ ಮೊದಲನೇ ರಾಜ್ಯವನ್ನು ಕಟ್ಟಿದನು.

ಪರಿಶಿಷ್ಟ. ೨. ಜಲಪ್ರಳಯಕ್ಕೆ ಮುಂಚೆ ಇದ್ದ ಮನುಷ್ಯರ ಚರಿತ್ರದಲ್ಲಿ ದೇವರ ಮಕ್ಕಳಿಗೂ ಮನುಷ್ಯರ ಹೆಣ್ಣು ಮಕ್ಕಳಿಗೂ ವಿವಾಹಗಳು ಉಂಟಾದದ್ದು ಕೇಡಿನ ಆರಂಭವಾದ ಪ್ರಕಾರ ಜಲಪ್ರಳಯವಾದ ಮೇಲೆ ಮನುಷ್ಯರೆಲ್ಲರೂ ಕೂಡಿ ಕೊಂಡು ಬಾಬೆಲ್‌ಗೋಪುರವನ್ನು ಕಟ್ಟಿಸುವ ಆಲೋಚನೆ ಮಾಡಿದ್ದು ಮ್ಲೇಂಛತ್ವದ ಆರಂಭವಾಯಿತು. ಜನಾಂಗಗಳು ಭೇದವಾದ ಮೇಲೆ ಬೇರೆ ವಂಶದವರು ಹೆಚ್ಚು ಛಳಿಯಾದ ಉತ್ತರ ಪ್ರದೇಶಗಳಿಗೂ ಬೇರೆ ವಂಶದವರು ಹೆಚ್ಚು ಉಷ್ಣವಾದ ದಕ್ಷಿಣ ಪ್ರದೇಶಗಳಿಗೂ ಹೋದದರಿಂದ ಭಾಷೆಭೇದವಲ್ಲದೆ ದೇವಾರಾಧನೆಯಲ್ಲಿಯೂ ರಾಜ್ಯಕ್ರೌತ್ಯದಲ್ಲಿಯೂ ಮರ್ಯಾದೆಗಳಲ್ಲಿಯೂ ಗುಣಗಳಲ್ಲಿಯೂ ನಾನಾವಿಧವಾದ ವ್ಯತ್ಯಾಸವು ಬೆಳಿಯಿತು.

ಪರಿಶಿಷ್ಟ. ೩. ಹತ್ತನೇ ಸಂಧಿಯಲ್ಲಿ ಬರೆದ ಜನಾಂಗಗಳ ಪಟ್ಟಿಯನ್ನು ಯಾರಾದರೂ ಚನ್ನಾಗಿ ಆಲೋಚನೆ ಮಾಡದೆ ಓದಿದರೆ ಅವನು ಈ ನಾಮಾವಳಿಯಲ್ಲಿ ಪ್ರಯೋಜನವಿಲ್ಲವೆಂದೂ ಅದಕ್ಕೆ ಅಭಿಪ್ರಾಯವಿಲ್ಲವೆಂದೂ ನೆನಸುವನು. ಆದರೆ ಹೀಗಿರುವದಿಲ್ಲ. ಮೋಶೆಯು ಜನಾಂಗಭೇದ ಉಂಟಾಗುವದಕ್ಕಿಂತ ಮುಂಚೆ ಈ ಸರ್ವಲೋಕ ವಂಶಾವಳಿಯನ್ನು ಬರೆದು ಲೋಕದಲ್ಲಿರುವ ಎಲ್ಲಾ ಜನಾಂಗಗಳು ನೋಹನ ಮೂರು ಮಂದಿ ಮಕ್ಕಳಿಂದ ಹುಟ್ಟಿಯವೆ ಎಂದು ತೋರಿಸಿ, ದೇವರು ನರವಂಶಗಳಲ್ಲಿ ಒಂದನ್ನಾದರೂ ಮರತು ಬಿಡದೆ ಎಲ್ಲಾದಕ್ಕೂ ರಕ್ಷಣೆಯ ಮಾರ್ಗವನ್ನು ಸಿದ್ಧ ಮಾಡಲಿಕ್ಕೆ ಮನಸ್ಸಾಗಿದ್ದಾನೆಂದು ಸೂಚಿಸುತ್ತಾನೆ. — ಇದಲ್ಲದೆ ಅನ್ಯಜನರು ಅಜ್ಞಾನದಿಂದ ಕಲ್ಪಿಸಿದ ಅನಂತ ವಂಶಾವಳಿಗಳು ಕೋಟ್ಯಾನುಕೋಟಿ ವರುಷದಾರಂಭದಿಂದ ಲೋಕದಲ್ಲಿ ನಡೆದವೆಂದು ಅವರು ಹೇಳುವ ಪುರಾಣಕಥೆಗಳು ಸುಳ್ಳು

ಎಂದು ಈ ವಂಶಾವಳಿಯಿಂದ ತೋರುತ್ತದೆ. ಮತ್ತು ಜನಾಂಗಗಳ ಪೂರ್ವಚರಿತ್ರವನ್ನು ವಿಚಾರಿಸುವ ನಿಜ ವಿದ್ವಾಂಸರಿಗೆ ಹತ್ತನೇಯಲ್ಲಿ ಬರೆದ ಹೆಸರುಗಳ ಪಟ್ಟಿಯಿಂದ ಸಹಾಯ ಬರುತ್ತದೆ.



# ರಕ್ಷಣೆಯು ಸಿದ್ಧವಾಗೋಣದರ

## ಮೂರನೇ ಅಧ್ಯಾಯವು

### ಅಬ್ರಾಮನ ಕರೆಯುವಿಕೆಯಿಂದ ಯೇಸು ಕ್ರಿಸ್ತನ ಜನನದ ವರೆಗೂ

(೨೦೮೩—೪೨೨೫)

### § 13. ಈ ಅಧ್ಯಾಯದಲ್ಲಿ ಶೇರುವ ಚರಿತ್ರದ ಸಾರಾಂಶವು

೧) ಹಿಂದಿನ ಎರಡು ಅಧ್ಯಾಯಗಳಲ್ಲಿ ವಿವರಿಸಲ್ಪಟ್ಟ ಪ್ರಕಾರ ದೇವರು ಮನುಷ್ಯರಿಗೆ ರಕ್ಷಣೆಯ ಮಾರ್ಗವನ್ನು ಸಿದ್ಧ ಮಾಡಿದ್ದರೂ ಮನುಷ್ಯರು ದೇವರ ಮಾರ್ಗದಲ್ಲಿ ಶೇರಲಾಲ್ಲದೆ ಇದ್ದದರಿಂದ ದೇವರು ಎರಡು ಕಾಲಗಳಲ್ಲಿ ರಕ್ಷಣೆಯ ಕಾರ್ಯವನ್ನು ಪೂರೈಸ ಕೂಡದಿದ್ದನು. ಆದರೂ ಮನುಷ್ಯರ ಅವಿಧೇಯತ್ವದಿಂದ ಲೋಕವನ್ನು ರಕ್ಷಿಸ ಬೇಕೆಂಬ ದೇವರ ಮನಸ್ಸು ಚಂಚಲವಾಗಲಿಲ್ಲ. ಮನುಷ್ಯರು ದಿವ್ಯ ಕೃಪೆಯ ಆಲೋಚನೆಗೆ ಒಪ್ಪಿಕೊಳ್ಳದೆ ಇದ್ದರೆ ದೇವರು ರಕ್ಷಣೆಯ ಕಾರ್ಯವನ್ನು ಹಾಸತಾಗಿ ತಾಡಗಿಸುವನು. ಮೊದಲನೇ ಎರಡನೇ ಅಧ್ಯಾಯಗಳ ಕಾಲದಲ್ಲಿ ದೇವರು ಸಮಸ್ತ ನರಜಾತಿಗೆ ರಕ್ಷಣೆಯ ಮಾರ್ಗವನ್ನು ಸಿದ್ಧ ಮಾಡಿದನು. ಯಾಕಂದರೆ ಆ ಕಾಲದ ಮನುಷ್ಯರೆಲ್ಲರೂ ಒಂದೇ ಪೂರ್ವಜನಿಂದ ಹುಟ್ಟಿದರು. ಈ ಅಧ್ಯಾಯದ ಕಾಲದಲ್ಲಿ (೩ನೇ) ನರಜಾತಿಯು ಶಿರಿಗಿ ನಾನಾಜನಾಂಗಗಳಾಗಿ ಛೇದವಾದ ಮೇಲೆ ದೇವರ ಆರಾಧನೆಯನ್ನು ಬಿಟ್ಟು, ಮ್ಲೇಂಛತ್ವದ ನಾನಾ ಮಾರ್ಗಗಳಲ್ಲಿ ಶೇರಿದ ಮನುಷ್ಯರನ್ನು ಕರ್ತನು ಜಲಪ್ರಳಯಕ್ಕೆ ಸಮಾನವಾದ ನ್ಯಾಯಶೀರ್ವಿಕೆಯ ಶಿಕ್ಷೆಯಿಂದ ನಿರ್ಮೂಲ ಮಾಡದೆ ಬಹು ತಾಳ್ಮೆಯಿಂದ ಕಾಲದ ಪೂರ್ಣತೆಯಲ್ಲಿ ಪ್ರಕಟವಾಗಲಿರುವ ರಕ್ಷಣೆಯನ್ನು ಲೋಕದಲ್ಲಿ ಸ್ಥಾಪಿಸುವದಕ್ಕೆ ಆಲೋಚನೆ ಮಾಡಿದನು. ವಿಗ್ರಹಾರಾಧನೆಯಲ್ಲಿ ಬಿದ್ದ ಮನುಷ್ಯರು ರಕ್ಷಣೆಯು ಸಿದ್ಧವಾಗೋಣಕ್ಕೆ ನಿಷ್ಪ್ರಯೋಜಕರಾ

ಗಿದ್ದರೂ ರಕ್ಷಣೆಯ ಸಿದ್ಧಿಯು ಪ್ರಕಟವಾಗುವ ಕಾಲದಲ್ಲಿ ಅದನ್ನು ಅಂಗೀಕರಿಸುವದಕ್ಕೆ ಅವರನ್ನು ಸಿದ್ಧ ಮಾಡ ಬೇಕೆಂಬದು ಕೃಪೆಯ ಆಲೋಚನೆಯಾಗಿತ್ತು. ಆದದರಿಂದ ರಕ್ಷಣೆಯು ಸಿದ್ಧವಾಗೋಣದರ ಈ ಹೊಸ ಕಾಲದಲ್ಲಿ ದೇವರು ಯೆಹೂದತ್ವದಲ್ಲಿ ಬರುವ ರಕ್ಷಣೆಗೆ ಮುಂಗುರ್ತಾದ ಆರಾಧನೆಯ ಮಾರ್ಗವನ್ನು ಸ್ಥಾಪಿಸಿ ತನ್ನ ವಾಕ್ಯವನ್ನು ಪ್ರಕಟ ಮಾಡಿ ತಾನು ಪ್ರತ್ಯಕ್ಷವಾಗುತ್ತ ಇರ ಬೇಕೆಂದು ಒಂದು ವಂಶವನ್ನು ತನ್ನ ಸ್ವಾಸ್ಥ್ಯವಾಗಿ ಆದು ಕೊಂಡು ಮ್ಲೇಂಛತ್ವದಲ್ಲಿ ಬಿದ್ದ ಉಳಿದ ಜನಾಂಗಗಳಲ್ಲಿ ರಕ್ಷಣೆಯ ಅಪೇಕ್ಷೆಯನ್ನೂ ಅದನ್ನು ಅಂಗೀಕರಿಸುವದಕ್ಕೆ ಸಿದ್ಧ ಮನಸ್ಸನ್ನೂ ಹುಟ್ಟಿಸ ಬೇಕೆಂದು ನಿರ್ಣಯಿಸಿ ಕೊಂಡನು. ಆದದರಿಂದ ದೇವರು ಒಬ್ಬ ಮನುಷ್ಯನನ್ನು ಆರಿಸಿ ತೆಗದು ಕೊಂಡು ಅವನ ಕೈಗೂ ಅವನ ಸಂತಾನದವರ ಕೈಗೂ ಪರಿಶುದ್ಧವಾದದರ ಕಾವಲನ್ನೂ ಸೇವೆಯನ್ನೂ ಒಪ್ಪಿಸಿ ಕೊಟ್ಟನು. ಈ ವಂಶದಲ್ಲಿಯೇ ದೇವರು ಪ್ರತ್ಯಕ್ಷವಾಗಿ ಕಾಣಿಸಿ ಕೊಂಡು ರಕ್ಷಣೆಯು ಸಿದ್ಧವಾಗೋಣಕ್ಕೆ ಬೇಕಾದ ನೇಮ ಆಚರಣೆಗಳನ್ನು ಸ್ಥಾಪಿಸಿ ತನ್ನ ರಾಜ್ಯವನ್ನು ಮೊಳಿಸಿ ಬೆಳಿಸಿ ಭೂಲೋಕದ ಎಲ್ಲಾ ಜನಾಂಗಗಳನ್ನು ಸೇರಿಸಿ ಕೊಳ್ಳುವದಕ್ಕೆ ಬಲಗೊಳ್ಳಿಸಿ ಪೂರ್ತಿ ಮಾಡಿದನು. ಅಷ್ಟರೊಳಗೆ ದೇವರು ಸ್ವಂತ ಬಲದಿಂದಲೂ ಬುದ್ಧಿಯಿಂದಲೂ ಮನುಷ್ಯನು ಮುಕ್ತಿಯನ್ನು ಪಡೆದು ಕೊಳ್ಳಲಿಕ್ಕೆ ಶಕ್ತನಲ್ಲವೆಂದು ಅನ್ಯ ಜನರು ತಿಳುಕೊಳ್ಳುವ ಹಾಗೆ ಅವರನ್ನು ತಮ್ಮ ತಮ್ಮ ಮಾರ್ಗಗಳಲ್ಲಿ ನಡಿಯಲೀಸಿದನು. ಅಪ್. ಕ್ರಿ. ೧೪, ೧೬.

ತಂದೆ ಕೊಟ್ಟ ಆಸ್ತಿ ತಕ್ಕೊಂಡು ತಂದೆಯ ಮನೆಯನ್ನು ಬಿಟ್ಟು ತಂದೆಯ ಹೃದಯಕ್ಕೆ ದೂರವಾದ ಚಿಕ್ಕ ಮಗನು ದೇಶಾಂತರಕ್ಕೆ ಹೋಗಿ ತನ್ನ ಮನಸ್ಸಿಗೆ ಬಂದದನ್ನೆಲ್ಲಾ ಮಾಡಿದ ಪ್ರಕಾರ ಮ್ಲೇಂಛರು ದೇವರ ಐಕ್ಯವನ್ನು ಬಿಟ್ಟು ಪೂರ್ವಿಕರಿಗೆ ಪ್ರತ್ಯಕ್ಷವಾಗಿ ರಕ್ಷಣೆಯ ವಾಗ್ದತ್ತವನ್ನು ಕೊಟ್ಟು ತಮ್ಮ ಹೃದಯಗಳಲ್ಲಿ ಸತ್ಯದ ನೇಮವನ್ನು ಬರೆದ ತಂದೆಗೆ ಪರರಾದರು. ಆದರೆ ಕಳದು ಹೋದ ಮಗನು ಆಸ್ತಿಯನ್ನೆಲ್ಲಾ ವ್ರಯ ಮಾಡಿ ಹಂದಿಗಳಿಗೆ ಶಿಕ್ಕುವ ಹಿಂಡಿಯಿಂದ ಹೊಟ್ಟೆ ತುಂಬ ಬೇಕೆಂಬ ಅಪೇಕ್ಷೆ ವ್ಯರ್ಥವೆಂದು ತಿಳಿದು ಕ್ಷೀಣನಾಗಿಯೂ ಜೀವದ ರೊಟ್ಟಿಯ ಮೇಲೆ ಹಸಿವೆಯುಳ್ಳವನಾಗಿಯೂ ತಂದೆಯ ಮನೆಗೆ ತಿರಿಗಿ ಬರಲು ಸಂತೋಷದಿಂದ ಅಂಗೀಕರಿಸಲ್ಪಟ್ಟನು. ಈ ಪ್ರಕಾರವಾಗಿ ಮ್ಲೇಂಛತ್ವದ ಮಾರ್ಗದಲ್ಲಿ ನರಜಾತೀ ರಕ್ಷಣೆಗಾಗಿಯೂ ಯೆಹೂದತ್ವದ ಮಾರ್ಗದಲ್ಲಿ ರಕ್ಷಣೆ ನರಜಾತಿಗಾಗಿಯೂ ಸಿದ್ಧವಾಯಿತು.

೨) ದೇವರ ಪ್ರಜೆಯು ಆಶಾ ಪ್ರಜೆಯಾಗಿದ್ದು ರಕ್ಷಣೆಯು ಪ್ರತ್ಯಕ್ಷವಾಗಲಿರುವ ಮುಂದಣ ಕಾಲದ ಕಾರ್ಯವನ್ನು ನಿರೀಕ್ಷಿಸುತ್ತಾ ಇತ್ತು. ಅನ್ಯ ಜನರೆಲ್ಲರೂ

ದೇವರನ್ನು ಬಿಟ್ಟು ಲೋಕದ ಅರಸನಿಗೆ ವಶವಾದದ್ದನ್ನು ವಿವರಿಸುವ ನರಜಾತೀ ಚರಿತ್ರದಲ್ಲಿ ಇಸ್ರಯೇಲನವರು ದೇವರ ಪಕ್ಷದವರಾಗಿ ಮ್ಲೇಂಛತ್ವಕ್ಕೆ ಎದುರು ನಿಲ್ಲುವವರಾಗಿ ಕಾಣಿಸುತ್ತಾರೆ. ಅವರು ದೇವರಿಗೆ ಮಾರ್ಗವನ್ನು ಸರಾಳ ಮಾಡಿರಿ ಎಂದು ಅರಣ್ಯದಲ್ಲಿ ಕೂಗುವ ಪ್ರಸಂಗಿಯ ಹಾಗಿದ್ದಾರೆ. ಹಸ್ತಕುಶಲತ್ವದಲ್ಲಿಯೂ ವಿದ್ಯಾಭ್ಯಾಸದಲ್ಲಿ ರಾಜ್ಯಕೃತ್ಯ ವ್ಯಾಪಾರ ಮೊದಲಾದ ಲೌಕಿಕ ಚಮತ್ಕೃತಿಗಳಲ್ಲಿ ಅವರು ಅಗ್ರಗಣ್ಯರಲ್ಲ. ಆದರೆ ಅವರಲ್ಲಿಯೂ ನರಹೃದಯದ ದುಷ್ಟತ್ವವು ಪ್ರಕಟವಾದರೂ ಬೇರೆ ಬೇರೆ ಕಾಲದಲ್ಲಿ ಜನಾಂಗದ ಹೆಚ್ಚಾದ ಭಾಗವು ಯೆಹೋವನನ್ನು ಬಿಟ್ಟುಬಿಟ್ಟರೂ ದಿವ್ಯ ಬೋಧನೆಯಿಂದ ಶಿಕ್ಷಿತರಾಗಿಯೂ ದಿವ್ಯ ಜ್ಞಾನದಲ್ಲಿ ಐಶ್ವರ್ಯವಂತರಾಗಿಯೂ ಆಶೆಯಲ್ಲಿ ಶಕ್ತರಾಗಿಯೂ ಲೋಕವನ್ನು ಜೈಸುವ ವಿಶ್ವಾಸದಲ್ಲಿ ಸಮರ್ಥರಾಗಿಯೂ ಇದ್ದರು. ಈ ಜನಾಂಗದಲ್ಲಿಯೇ ರಕ್ಷಣೆಯ ಮಾರ್ಗವೂ ರಕ್ಷಣೆಯ ಕಾರ್ಯವೂ ಸಿದ್ಧವಾದವು. ಇದರಲ್ಲಿಯೇ ಲೋಕದ ರಕ್ಷಕನು ಹುಟ್ಟಬೇಕಾಗಿತ್ತು. ಅಬ್ರಹಾಮನ ಬೀಜದಿಂದಲೇ ಭೂಲೋಕದ ಎಲ್ಲಾ ಜನಾಂಗಗಳ ಮೇಲೆ ಆಶೀರ್ವಾದವು ಬರಬೇಕೆಂದು ನೇಮಕವಾಯಿತು. — ಸ್ವಂತ ಮಾರ್ಗಗಳಲ್ಲಿ ನಡಿಯುವ ಮ್ಲೇಂಛತ್ವಕ್ಕೂ ದೇವರು ಒಂದು ಸಾಧನೆಯನ್ನು ನೇಮಿಸಿದನು.

ಅನ್ಯ ಜನರ ಅಪೊಸ್ತಲನಾದ ಪೌಲನು ಅಪ್. ಕ್ರಿ. ೧೭, ೨೭ನೇ ವಚನದಲ್ಲಿ ಬರೆದ ಪ್ರಕಾರ ಮ್ಲೇಂಛರ ವಿಷಯವಾಗಿ ಪ್ರಸಂಗಿಸಿದ್ದೇನಂದರೆ — ದೇವರು ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು ಉಂಟು ಮಾಡಿ ಮುಂನೇಮಿಸಿದ ಕಾಲಗಳನ್ನೂ ಅವರ ನಿವಾಸದ ಮೇರೆಗಳನ್ನೂ ಗೊತ್ತು ಮಾಡಿ ಅವರು ಕರ್ತನಂನು ತಡವಿ ಕಂಡು ಕೊಂಡಾರೇನೋ ಎಂದು ಅವನನ್ನು ಹುಡುಕುವ ಹಾಗೆ ಭೂಮಿಯ ಮೇಲ್ಭಾಗದಲ್ಲೆಲ್ಲಾ ನಿವಾಸವಾಗಿರ ಮಾಡಿದ್ದಾನೆ. ಯಾಕಂದರೆ ಅವನು ನಮ್ಮಲ್ಲಿ ಯಾವನೊಬ್ಬನಿಗಾದರೂ ದೂರವಾದವನಲ್ಲ. ಅನ್ಯ ಜನರು ಲೋಕವೆಂಬ ಅರಣ್ಯದಲ್ಲಿ ಬಹು ಕಾಲ ಅಲೆಯುತ್ತಾ ತಿರುಗಾಡಿ ತಮ್ಮ ಆತ್ಮಿಕವಾದ ಬಡತನ ನಿರ್ಬಲಗಳನ್ನು ತಿಳುಕೊಂಡ ಮೇಲೆ ಕ್ರಿಸ್ತನಲ್ಲಿರುವ ರಕ್ಷಣೆಯನ್ನು ಕಂಡು ಕೊಂಡರು. ಮ್ಲೇಂಛರು ಸಹ ದೇವರ ರಾಜ್ಯವೆಂಬ ಮಹಾ ಸರ್ವಾಲಯಕ್ಕೆ ಬೇಕಾದ ಕಲ್ಲುಗಳಂನು ಆಯತ್ತ ಮಾಡಲಿಕ್ಕಿದ್ದರು. ಬೇರೆ ಬೇರೆ ಜನಾಂಗಗಳಲ್ಲಿ ವೃದ್ಧಿಯಾದ ಜ್ಞಾನ ಹಸ್ತಕುಶಲತ್ವ ವಿದ್ಯೆಗಳು ಮೊದಲಾದ ಲೌಕಿಕ ಚಮತ್ಕೃತಿಗಳು ಕ್ರೈಸ್ತಸಭೆಯಲ್ಲಿ ಜ್ಞಾನಿಗಳಿಗೂ ವಿದ್ವಾಂಸರಿಗೂ ಬಹಳ ಉಪಯೋಗವಾದದ್ದು. ಆದರೆ ರಕ್ಷಣ್ಯವು ಯೆಹೂದ್ಯರಿಂದ ಬಂತು. ಯೋಹಾನ. ೪, ೨೨.



## § 14. ಪರಿಶುದ್ಧ ದೇಶ

೧) ಆ ಕಾಲದಲ್ಲಿ ಕಾನಾನನ ಸಂತಾನದವರ ವಾಸಸ್ಥಳವಾಗಿದ್ದ ಪಲೆಸ್ತೀನ ದೇಶವನ್ನು ಕರ್ತನು ತನ್ನ ಪ್ರಜೆಗೆ ನಿವಾಸವಾಗಿಯೂ ತನ್ನ ರಾಜ್ಯಕ್ಕೆ ಅಗೆ ಭೂಮಿಯಾಗಿಯೂ ಆದು ಕೊಂಡನು. ಈ ದೇಶಕ್ಕೆ ಮಧ್ಯ ಸಮುದ್ರ ಪಶ್ಚಿಮ ಪ್ರಾಂತ್ಯವಾಗಿದೆ.

ಉತ್ತರ ದಿಕ್ಕಿನಲ್ಲಿ ಲೆಬನೋನ್ ಪರ್ವತಗಳು, ಮೂಡಣದಲ್ಲಿ ಸುರ್ಯ ದೇಶದ ಅರಣ್ಯವು, ದಕ್ಷಿಣದಲ್ಲಿ ಕಲ್ಲಿನ ಅರಾಬ್ಯದ ಅರಣ್ಯವು, ಈ ಪ್ರಕಾರ ಪಲೆಸ್ತೀನವು ಆಗ ಗೊತ್ತಾದ ಭೂಲೋಕದ ಮೂರು ಖಂಡಗಳ ಮಧ್ಯದಲ್ಲಿದ್ದು ದ್ವೀಪದಂತೆ ಪ್ರತ್ಯೇಕ ದೇಶವಾಗಿತ್ತು. ಈ ದೇಶದ ಭಾವವು ದೇವರು ಎಲ್ಲಾ ಜನಾಂಗಗಳೊಳಗಿಂದ ತನಗಾಗಿ ಆದು ಕೊಂಡ ಪ್ರಜೆಯ ಭಾವಕ್ಕೆ ಅನುಕೂಲವಾಗಿತ್ತು. ಪರ ದೇಶಸ್ಥರು ಪಲೆಸ್ತೀನದಲ್ಲಿ ಸೇರಿ ಅದನ್ನು ತಮ್ಮ ವಶ ಮಾಡಿ ಕೊಳ್ಳುವದು ದುರ್ಲಭವಾಗಿತ್ತು. ಆದರೂ ಅದು ಮಿಚ್ರಕ್ಕೂ ಆಸ್ಸೃದ ದೊಡ್ಡ ಸಾಮ್ರಾಜ್ಯಗಳಿಗೂ ನಡುವೆಯಲ್ಲಿಯೂ ಲೋಕವರ್ತಕರಾದ ಫೊನಿಕ್ಯರ ಪಟ್ಣಗಳಿಗೆ ಸಮೀಪದಲ್ಲಿಯೂ ಪೂರ್ವ ಲೋಕದ ವ್ಯಾಪಾರದ ಶ್ರೇಷ್ಠ ಮಾರ್ಗಗಳ ಬಳಿಯಲ್ಲಿಯೂ ಇದ್ದದರಿಂದ ಲೋಕ ವಾರ್ತೆಯ ಮಧ್ಯದಲ್ಲಿ ಇತ್ತು. ಹೀಗಿರುವದರಿಂದ ಮೊದಲು ಏಕಾಂತವಾಗಿ ಬೆಳದು ತರುವಾಯ ಪೂರ್ಣ ವೃದ್ಧಿ ಹೊಂದಿ ಎಲ್ಲಾ ಜನಾಂಗಗಳಲ್ಲಿ ವಿಸ್ತರಿಸಲ್ಪಡಬೇಕಾದ ದೇವರ ರಾಜ್ಯಕ್ಕೆ ಬಹಳ ಉಪಯೋಗವಾದ ಮೂಲಸ್ಥಳವಾಗಿತ್ತು.

೨) ಪಲೆಸ್ತೀನವೆಲ್ಲಾ ಘಟ್ಟದ ಸೀಮೆಯಾಗಿದೆ. ಲಿಬನೋನಿನ ಕಡೆಯಿಂದ ಕಲ್ಲಿನ ಅರಾಬ್ಯದ ವರೆಗೂ ಘಟ್ಟದ ಬೈಲುಸೀಮೆಗಳು ಎರಡು, ಯೊರ್ದಾನಿನ ಈಚೆಯಲ್ಲಿ ಒಂದು —ಯೊರ್ದಾನಿನ ಆಚೆಯಲ್ಲಿ ಒಂದು ದೇಶವನ್ನು ಹಾದು ಹೋಗುತ್ತವೆ. ಅದರಿಂದ ಪಲೆಸ್ತೀನವು ಸಮಪಂಕ್ತಿಯಾದ ೪ ಉದ್ದವಾದ ಭಾಗಗಳಾಗಿ ವಿಭಾಗಿಸಲ್ಪಟ್ಟದೆ; ಅವು ಯಾವವಂದರೆ—

I ಮಧ್ಯಸಮುದ್ರದ ಕರೆಯ ಬೈಲುಸೀಮೆಯು.

II ಯೊರ್ದಾನಿನ ಪಶ್ಚಿಮದ ಘಟ್ಟದ ಸೀಮೆಯು.

III ಯೊರ್ದಾನಿನ ತಗ್ಗು.

IV ಯೊರ್ದಾನಿನ ಪೂರ್ವದ ಘಟ್ಟದ ಸೀಮೆಯು.

ಯೊರ್ದಾನ್ ನದಿ ಲಿಬನೋನಿನ ಬುಡದಲ್ಲಿ ಜಲ ಏರಿ ಮೇರೊಮ್ ಕೆರೆಯನ್ನೂ ೫, ೬ ಹರದಾರಿ ದೂರಕ್ಕೆ ಹೋದ ಮೇಲೆ ಗೆನೇಜರೇತ್ ಸರೋವರವನ್ನೂ

(ಗಲಿಲಾಯದ ಸಮುದ್ರ, ತಿಬೇರ್ಯದ ಸರೋವರ) ಹಾದು ದಕ್ಷಿಣದಲ್ಲಿರುವ ಸತ್ತ ಸಮುದ್ರದಲ್ಲಿ (ಉಪ್ಪಿನ ಸಮುದ್ರ) ಬಿದ್ದು ಮುಗಿಯುತ್ತದೆ.

ಉಪ್ಪಿನ ಸಮುದ್ರದ ಉಭಯ ಪಾರ್ಶ್ವದಲ್ಲಿ ೨೫೦೦ ಅಡಿ ಎತ್ತರವಾಗಿರುವ ಪ್ರಪಾತವಾದ ಬಂಡೆ ಗುಡ್ಡಗಳು ಇರುತ್ತವೆ. ಮತ್ತು ಸತ್ತಸಮುದ್ರವು ಮಧ್ಯ ಸಮುದ್ರಕ್ಕಿಂತ ಬಹಳ ತಗ್ಗಾಗಿದೆ. ಆದದರಿಂದ ಅಲ್ಲಿರುವ ಘಾಳಿಯು ಬಹಳ ಬಿಸಿಯಾಗಿರುವ ಕಾರಣ ಯಾರ್ದಾನ್ ನದಿಯಿಂದ ದಿನಾಲು ಎಷ್ಟು ನೀರು ಸಮುದ್ರದಲ್ಲಿ ಬೀಳುವದೋ ಅಷ್ಟು ಶೆಕೆಯಾಗಿ ಎದ್ದು ಹೋಗುವದು. ಇದರ ನಿಮಿತ್ತ ಸಮುದ್ರದ ನೀರು ಹೆಚ್ಚಾಗುವದಿಲ್ಲ. ಯಾರ್ದಾನಿನ ಸಮಸ್ತ ತಗ್ಗು ಮಧ್ಯ ಸಮುದ್ರಕ್ಕಿಂತ ಆಳವಾಗಿದೆ. ಗೆನೇಜರೇತ್ ಸಮುದ್ರವು ಮಧ್ಯಸಮುದ್ರದ ತೀರಕ್ಕಿಂತ ೮೪ ಅಡಿ, ಸತ್ತಸಮುದ್ರವು ೧೩೩೭ ಅಡಿ ಆಳವಾಗಿದೆ.

ಗೆನೇಜರೇತ್ ಸರೋವರವೂ ಸತ್ತಸಮುದ್ರವೂ; ಆ ಸರೋವರದ ಪ್ರದೇಶವೂ ಈ ಸಮುದ್ರದ ಪ್ರದೇಶವೂ ಒಂದಕ್ಕೊಂದು ಎಷ್ಟು ಮಾತ್ರ ಸಮವಾದದ್ದಲ್ಲ. ಗೆನೇಜರೇತ್ ಸರೋವರದ ಪ್ರದೇಶವು ಬಹಳ ಸುಂದರವಾಗಿಯೂ ಫಲಭರಿತವಾಗಿಯೂ ಅದೆ. ಅದರ ತೀರದಲ್ಲಿ ಅನೇಕ ಊರುಗಳು ಅವೆ. ಸುತ್ತಲೂ ವಾಸಿಸುವವರ ಜೀವನಕ್ಕೆ ಆಧಾರವಾದ ಮೀನುಗಳ ಬಾಹುಳ್ಯದಿಂದ ಅದು ತುಂಬಿಯದೆ. ಹೀಗಿರುವದರಿಂದ ಗೆನೇಜರೇತ್ ಸರೋವರವೂ ಅದರ ಪ್ರದೇಶವೂ ಆಶೀರ್ವಾದ ರಕ್ಷಣೆಗಳ ಸ್ಥಾನವಾಗಿದೆ.

ಸತ್ತಸಮುದ್ರವು ಶಾಪ ಮರಣಗಳಿಗೆ ಸಾರೂಪ್ಯವಾದ ಸ್ಥಳವಾಗಿದೆ. ಹ್ಯಾಗಂದರೆ ಅದರ ನೀರುಜೀವವನ್ನೆಲ್ಲಾ ನಾಶ ಮಾಡುವ ಕ್ಷಾರ ಜಲವಾಗಿದೆ. ಅದರ ತೀರವನ್ನು ಎತ್ತರವಾದ ಸಶಿ ಗಿಡ ಮರವಿಲ್ಲದ ಬಸ್ಸಾಲ್ ಬಂಡೆಗಳು ಸುತ್ತುತ್ತವೆ. ಅದರ ಘಾಳಿಯು ಬಹಳ ಬಿಸಿಯೂ ವಿಷವಾದ ಆವೆಯಿಂದ ಮಂಬಾಗಿಯೂ ಇರುವದರಿಂದ ಅತಿ ನಷ್ಟಕರವಾಗಿದೆ.

ಯಾರ್ದಾನಿನ ಮೂಡಣ ಕಡೆಯಲ್ಲಿ ನಾಲ್ಕು ಹೊಳೆಗಳು. ಅವು ಯಾವವಂದರೆ—೧ ಯರ್ಮುಕ್ (ಹಿಯೆರೊಮಕ್ಸ್—ಈಗಿನ ಷೆರೆಯಾತ್. ಎಲ್‌ಮಂದ್ಹೂರ್.) ಯಾಬೋಕ್. ಇವೆರಡು ಯಾರ್ದಾನ್ ನದಿಯಲ್ಲಿ ಬೀಳುತ್ತವೆ.

ಅರ್ನೋನ್, ಸಾರೆತ್ (ಇವು ಸತ್ತಸಮುದ್ರದಲ್ಲಿ ಬೀಳುತ್ತವೆ. ಈ ೪ ನದಿಗಳ ಪ್ರವಾಹಸ್ಥಳಗಳು ಬಹು ಪ್ರಪಾತವಾದ ಗುಡ್ಡಗಳ ನಡುವೆಯಲ್ಲಿರುವ ಆಳವಾದ ತಗ್ಗುಗಳಾಗಿವೆ.

ಪಶ್ಚಿಮ ಕಡೆಯಲ್ಲಿ ಹೆಸರು ಇಲ್ಲದ ಹಳ್ಳಗಳೂ ತೊರೆಗಳೂ ಅವೆ.

ಸಮುದ್ರದ ಕಡೆಯ ಬೈಲುಸೀಮೆಯು ಕರ್ಮೆಲ್ ಎಂಬ ಬೆಟ್ಟದಿಂದ ವಿಭಾಗಿಸಲ್ಪಡುತ್ತದೆ. ಕರ್ಮೆಲಿನ ಬುಡದಲ್ಲಿ ಕೀಷೋನ್ ನದಿ ಮಧ್ಯಸಮುದ್ರದಲ್ಲಿ ಬೀಳುತ್ತದೆ. ಕರ್ಮೆಲಿಗೆ ಉತ್ತರದಲ್ಲಿರುವ ಸೀಮೆಗೆ ಅಕ್ಕೋಬೈಲುಸೀಮೆ ಎಂಬ ಹೆಸರು ಅದೆ.

ದಕ್ಷಿಣ ಕಡೆಯ ಸೀಮೆಯು ಯಾಪ್ಪಿಯ ಹತ್ತರ ಇರುವ ಗುಡ್ಡಗಳಿಂದ ಎರಡು ಭಾಗವಾಗಿ ವಿಭಾಗಿಸಲ್ಪಡುತ್ತದೆ.

ಉತ್ತರ ಭಾಗಕ್ಕೆ ಸಾರೋನ್ ಬೈಲುಸೀಮೆ, ದಕ್ಷಿಣ ಭಾಗಕ್ಕೆ ಷೇಪೆಲ ಬೈಲುಸೀಮೆ ಎಂಬ ಹೆಸರು.

೩) ಯೊರ್ದಾನಿನ ಪಶ್ಚಿಮದಲ್ಲಿರುವ ಘಟ್ಟಗಳು ಲಿಬನೋನ್ ಪರ್ವತದಿಂದ ಅರಾಬ್ಯದ ಅರಣ್ಯದ ಮಟ್ಟಿಗೂ ವಿಸ್ತಾರವಾಗಿವೆ. ಮಧ್ಯಸಮುದ್ರದ ತೀರಕ್ಕೆ ಸಮೀಪವಾದ ಘಟ್ಟಗಳು ಎರಡು ಮೂರು ಸಾವಿರ ಅಡಿ ಪರ್ಯಂತರ ಏರುತ್ತದೆ. ಯೊರ್ದಾನಿನ ಕಡೆಗೆ ಅವು ಬಹಳ ಉನ್ನತವಾಗಿವೆ.

ಅನೇಕ ಹಳ್ಳಗಳು ಪೂರ್ವ ಪಶ್ಚಿಮ ಕಡೆಗೆ ಹರಿದು ಆಳವಾದ ತಗ್ಗುಗಳಿಂದ ಪರ್ವತಗಳನ್ನು ವಿಭಾಗಿಸುತ್ತವೆ. ಒಂದು ಬೈಲುಸೀಮೆ ಮಾತ್ರ ಈ ಘಟ್ಟದ ದೇಶದಲ್ಲಿ ಅದೆ. ಅದೇನಂದರೆ — ಯೆಸ್ರಯೇಲ್ ಬೈಲು (ಎಸ್ರೆಲೋನ್). ಮಧ್ಯಸಮುದ್ರದಲ್ಲಿ ಬೀಳುವ ಕೀಷೋನ್ ನದಿ ಅದರ ಮಧ್ಯದಲ್ಲಿ ಹರಿಯುತ್ತದೆ. ಉತ್ತರ ದಿಕ್ಕಿನ ಪರ್ವತಗಳಿಗೆ ಗಲಿಲಾಯದ ಘಟ್ಟದ ಸೀಮೆ ಎಂಬ ಹೆಸರು ಅದೆ. ದಕ್ಷಿಣದಲ್ಲಿ ಎಫ್ರಾಯಿಮ್ ಘಟ್ಟವು (ಸಮಾರ್ಯ), ಯೂದದ ಘಟ್ಟವು (ಯೆಹೂದರ ದೇಶ) ಅರಾಬ್ಯದ ಅರಣ್ಯದ ಕಡೆಯಲ್ಲಿ ಬಹಳ ಪ್ರಪಾತವಾದ ಅಮೋರ್ಯರ ಘಟ್ಟವು ಅದೆ.

ಮೂಡಣ ದಿಕ್ಕಿನ ಘಟ್ಟದ ಸೀಮೆಯು (ಪೆರೆಯಾ) ಪಶ್ಚಿಮ ದಿಕ್ಕಿನ ಘಟ್ಟದ ಸೀಮೆಗಿಂತ ಹೆಚ್ಚಾಗಿ ಸರಾಳವಾಗಿದೆ. ವೃಕ್ಷರಾಜದ ಮರಗಳ ಅಡವಿಗಳೂ ಮೇವಿಗೆ ಉತ್ತಮವಾದ ಕಾಡುಗಳೂ ಅದರಲ್ಲಿ ಪ್ರಬಲವಾಗಿವೆ. ಗಲಿಲಾಯ ಸಮುದ್ರದ ದಕ್ಷಿಣ ತುದಿಗೆ ಕೆಲವು ಹರದಾರಿ ದೂರದಲ್ಲಿ ಯಾರ್ಮುಕ್ ನದಿ ಯೊರ್ದಾನಿನಲ್ಲಿ ಬೀಳುತ್ತದೆ.

ಉತ್ತರ ದಿಕ್ಕಿನ ಬೈಲುಸೀಮೆಗೆ ಬಾಷಾನ್ ಎಂಬ ಹೆಸರದೆ. ಯಾರ್ಮುಕ್ ನದಿಗೆ ದಕ್ಷಿಣದಲ್ಲಿ ಗಿಲ್ಯಾದ ಘಟ್ಟಗಳು ಏರುತ್ತವೆ. ಅವು ಯಾಬೋಕ್ ನದಿಯಿಂದ ವಿಭಾಗಿಸಲ್ಪಡುತ್ತವೆ.

ದಕ್ಷಿಣ ಕಡೆಯಲ್ಲಿ ಗಿಲ್ಯಾದ್ ಘಟ್ಟದ ಸೀಮೆಯು ತಗ್ಗಾಗುತ್ತಾ ಯೆರಿಕೋವಿನ ಎದುರಿನಲ್ಲಿ ಮೋವಾಬ್ ಬೈಲು ಯೆಂಬ ವಿಸ್ತಾರವಾದ ಬೈಲುಸೀಮೆಗೆ ಕೂಡುತ್ತದೆ. ಇದಕ್ಕೆ ದಕ್ಷಿಣದಲ್ಲಿ ಅಬರಿಮ್ ಘಟ್ಟಗಳು ಅವೆ. ಇವುಗಳಲ್ಲಿ ಹುಟ್ಟುವ ಅರ್ನೋನ್ ನದಿಯು ವಾಗ್ದತ್ತದ ದೇಶಕ್ಕೆ ಈ ಕಡೆಯಲ್ಲಿ ಪ್ರಾಂತ್ಯವಾಗಿದೆ. ಇದಕ್ಕೆ ದಕ್ಷಿಣದಲ್ಲಿ ಏಲಾನಿಕ್ ಸಮುದ್ರಕ್ಕೆ ತಗಲುವ ಎದೋಮ್ಯದ ಘಟ್ಟಗಳು ಇರುತ್ತವೆ.

ಪರಿಶಿಷ್ಟ. ದೇವರ ವಾಕ್ಯದಲ್ಲಿಯೂ ಅನ್ಯ ಗ್ರಂಥಕರ್ತರ ಪುಸ್ತಕಗಳಲ್ಲಿಯೂ ಕಾನಾನ್ ಫಲಭರಿತವಾದ ಅಪಾರ ಐಶ್ವರ್ಯವುಳ್ಳ ದೇಶವಾಗಿತ್ತೆಂದು ತೋರುತ್ತದೆ.

ದೇವರ ವಾಕ್ಯದಲ್ಲಿ ಹಾಲೂ ಜೇನೂ ಹರಿಯುವ ದೇಶವೆಂಬ ಹೆಸರು ಅದಕ್ಕೆ ಕೊಟ್ಟಿರುತ್ತದೆ. ದೇಶವು ಬಹಳ ಸಾರವುಳ್ಳದ್ದಾಗಿದ್ದದರಿಂದ ಅದು ಪೂರ್ವಕಾಲದಿಂದ ಜನಭರಿತವಾಗಿಯೂ ಇತ್ತು. ಅಬ್ರಹಾಮನ ಕಾಲದಲ್ಲಿ ಅನೇಕ ಜನಾಂಗಗಳು ಅದರಲ್ಲಿ ವಾಸಿಸುತ್ತಾ ಇದ್ದರೂ ಅವನ ದೊಡ್ಡ ಮಂದೆಗಳಿಗೂ ಅದರಲ್ಲಿ ಸಾಕಾದ ಮೇವು ಸಿಕ್ಕುತ್ತಿತ್ತು. ದಾವೀದನು ದೇಶದ ನಿವಾಸಿಗಳನ್ನು ಲೆಖ್ಖಿಸಿದಾಗ ಅವರ ಲೆಖ್ಖವು ೫೦ ಲಕ್ಷವಾಗಿತ್ತು. (ಹೀಗಾದರೆ ಹರದಾರಿ ಚಚ್ಚೌಕದಲ್ಲಿ ಸುಮಾರು ೨೫೦೦ ಜನರು ಇದ್ದರು.) ಯೇಸು ಕ್ರಿಸ್ತನ ಕಾಲದಲ್ಲಿ ನಿವಾಸಿಗಳ ಲೆಖ್ಖವು ಇದಕ್ಕೆ ಹೆಚ್ಚಾಗಿತ್ತೆಂದು ತೋರುತ್ತದೆ. ಈಗಿನ ಪಲೆಸ್ತೀನವು ಹಾಗಲ್ಲ; ದೇಶದ ಹೆಚ್ಚಾದ ಭಾಗವು ನೀರೂ ಸಾರವೂ ವ್ಯವಸಾಯವೂ ಇಲ್ಲದ ಊರುಗಳಿಲ್ಲದ ಅರಣ್ಯವಾಗಿದೆ. ಪಲೆಸ್ತೀನವು ಭೂಮಿಯ ಎಲ್ಲಾ ದೇಶಗಳಿಗಿಂತ ಆಶೀರ್ವಾದವನ್ನಾಗಲಿ ಶಾಪವನ್ನಾಗಲಿ ಹೊಂದಲಿಕ್ಕೆ ಅತಿ ಯುಕ್ತವಾಗಿದೆ. ಯಾಕಂದರೆ ನಿವಾಸಿಗಳ ಸ್ಥಿತಿಗೂ ದೇಶದ ಸ್ಥಿತಿಗೂ ವಿಶೇಷವಾದ ಸರಿಸಮಾನತ್ವವು ಅದೆ. ಅದರಲ್ಲಿ ನಿವಾಸಿಸುವ ಜನರ ಮೇಲೆ ದೇವರ ಆಶೀರ್ವಾದವು ಇದ್ದರೆ ದೇಶವು ಉತ್ತಮ ಸಾರವುಳ್ಳದ್ದಾಗಿರುತ್ತದೆ. ಜನರ ಮೇಲೆ ಶಾಪವು ಇದ್ದರೆ ದೇಶವು ಸಹ ಕೆಟ್ಟು ಹೋಗಿ ಅರಣ್ಯದ ಹಾಗೆ ಆಗುತ್ತದೆ.



# ಮೂರನೇ ಅಧ್ಯಾಯದ

## ಮೊದಲನೇ ಕಾಲ

### ಪಿತೃಗಳ ಕಾಲ

### § 15. ಈ ಕಾಲದ ಚರಿತ್ರದ ಸಾರಾಂಶವು

೧) ದೇವರು ಈ ಕಾಲದಲ್ಲಿ ಹೊಸದಾಗಿ ಸ್ಥಾಪಿಸುವ ದೇವರ ರಾಜ್ಯವು ಒಂದು ಮನೆತನದಲ್ಲಿ ತೋರುತ್ತದೆ. ವಿವಾಹದಿಂದ ಉಂಟಾಗುವ ಮನೆತನದಲ್ಲಿ ಚರಿತ್ರದ ಆರಂಭವು ಎಂಬದು ಸರ್ವ ನೇಮವಾಗಿದೆ. ಆದದರಿಂದ ಪರಿಶುದ್ಧ ಚರಿತ್ರವು ಸಹಾ ಆರಂಭದಲ್ಲಿ ಒಂದು ಮನೆತನದ ಚರಿತ್ರವಾಗಿರುವದು. ಈ ಕಾಲದ ಚರಿತ್ರದಲ್ಲಿ

ದೇವರು ರಕ್ಷಣೆಯ ಸ್ಥಾಪನೆಗಾಗಿ ಆರಿಸಿ ತೆಗದು ಕೊಂಡ ಜನಾಂಗವು ಯಾವ ಪೂರ್ವ ಜರಿಂದಲೂ ಯಾವ ಕುಲಗಳಾಗಿಯೂ ಹುಟ್ಟಿತೋ ಮತ್ತು ಮೋವಾಬ್ಯರ ಅಮೋನ್ಯರ ಇಷ್ಮಯೇಲ್ಯರ ಯೆದೋಮ್ಯರ ಮೊದಲಾದ ಸಂಬಂಧ ಕುಲಗಳಿಗೆ ಅದು ಹ್ಯಾಗೆ ಪ್ರತ್ಯೇಕವಾಯಿತೋ ಅದನ್ನು ವಿವರಿಸುವದು.

ವಾಗ್ದತ್ತವನ್ನು ಹೊಂದಿದ ಶೇಮನ ವಂಶವೆಂಬ ಬಳ್ಳಿಯ ಒಂದು ಕುಡಿಯನ್ನು ದೇವರು ಕತ್ತರಿಸಿ ಬೇರೆ ಭೂಮಿಯಲ್ಲಿ ನೆಟ್ಟು ಬಹು ಜಾಗ್ರತೆಯಾಗಿ ಸಾಕಿ ಅದರಲ್ಲಿ ಹುಟ್ಟಿದ ಕಾಡ ಕುಡಿಗಳನ್ನು ತೆಗದು ಹಾಕಿ ಅದನ್ನು ಶುದ್ಧ ಮಾಡಿ ಹನ್ನೆರಡು ಬಲವಾದ ಕುಡಿಗಳುಳ್ಳ ದೊಡ್ಡ ಬಳ್ಳಿಯಾಗಿ ಬೆಳಿಯಲೀಸಿದನು.

೨) ವಾಗ್ದತ್ತಬೀಜವೂ ವಾಗ್ದತ್ತದೇಶವೂ ಈ ಎರಡು ಆದು ಕೊಂಡ ಮನೆತನದಲ್ಲಿ ದೇವರು ಮಾಡಿದ ಎಲ್ಲಾ ಪ್ರಕಟಣೆಗಳಿಗೂ ಕೃತ್ಯಗಳಿಗೂ ಅವರಲ್ಲಿ ಹುಟ್ಟಿದ ಎಲ್ಲಾ ಆಶೆಗಳಿಗೂ ಮನೋನೇಮಕಗಳಿಗೂ ಗುರಿಯಾಗಿದ್ದವು. ವಾಗ್ದತ್ತದೇಶದಲ್ಲಿಯೇ ಹೊಸ ಕಾರ್ಯದ ಅಸ್ತಿವಾರವು ಹಾಕಲ್ಪಡ ಬೇಕಾಗಿತ್ತು. ಅದರಲ್ಲಿಯೇ ವಾಗ್ದತ್ತದ ಬೀಜವು ಹುಟ್ಟ ಬೇಕಾಗಿತ್ತು. ಅದರಲ್ಲಿಯೇ ಇಸ್ರಯೇಲನ ಜನಾಂಗವು ಬಾಲ್ಯದ ಕಾಲ ಕಳಿಯ ಬೇಕಾಗಿತ್ತು. ಈ ಪ್ರಕಾರವಾಗಿಯೇ ಕಾನಾನ್ ದೇಶವು ಇಸ್ರಯೇಲನವರಿಗೆ ಹೃದಯವನ್ನು ಬಲವಾದ ಆಕರ್ಷಣೆಯಿಂದ ಎಳೆದು ಕೊಳ್ಳುವ ಎಂದಿಗೂ ಮನೋಹರವಾದ ಸ್ಥಳವಾಯಿತು. (ಮನುಷ್ಯನು ಹುಟ್ಟಿ ಬಾಲ್ಯವನ್ನು ಕಳದ ಊರು ಅವನಿಗೆ ಸ್ವಸ್ಥಳವೆಂದು ತೋರುತ್ತದೆ. ಅಲ್ಲಿಯೇ ಇರ ಬೇಕೆಂಬ ಅಪೇಕ್ಷೆಯು ಅವನು ಸಾಯುವ ಪರ್ಯಂತರ ಉಳಿಯುವದು.)

ಆದರೆ ಇಸ್ರಯೇಲನವರ ವಿಶ್ವಾಸವು ಬೆಳದು ಬಲಗೊಳ್ಳುವ ಹಾಗೆ ಅವರು ಮೊದಲು ವಾಗ್ದತ್ತದೇಶದಲ್ಲಿ ಪರರಾದ ಪ್ರಯಾಣಿಕರಾಗಿ ಶೇರಿ ಅದನ್ನು ಸ್ವಾಸ್ಥ್ಯವಾಗಿ ಹೊಂದದೆ ಇದ್ದರು. ಮತ್ತು ಅವರು ೩ನೇ ತಲಾಂತರದಲ್ಲಿ ದೇಶವನ್ನು ಬಿಟ್ಟು ೪೦೦ವರುಷ ಪರದೇಶದಲ್ಲಿ ವಾಸ ಮಾಡಿದ್ದು ಅವರ ಪರೀಕ್ಷೆಗಾಗಿಯೂ ಸಾಧನೆಗಾಗಿಯೂ ಉಪಯೋಗವಾಗಿತ್ತು. ಇಸ್ರಯೇಲನವರ ಬಾಲ್ಯವೆಂಬ ಈ ಕಾಲದ ಭಾವಕ್ಕೆ ಅನುಕೂಲವಾಗಿ ದೇವರು ತನ್ನ ಜನರ ಭೋಳೆತನಕ್ಕೆ ತಕ್ಕ ರೀತಿಯಿಂದ ತನ್ನ ವಾಕ್ಯವನ್ನು ಅವರಿಗೆ ತಿಳಿಸಿ, ತನ್ನನ್ನು ತಾನು ಅವರಿಗೆ ಪ್ರಕಟ ಮಾಡಿದನು. ದೇವರು ತಾನು ಆದು ಕೊಂಡ ಇಸ್ರಯೇಲನನ್ನು ಬೋಧಿಸಿ, ಸಾಧಿಸ ಬೇಕೆಂದು ಪರಮ ಬುದ್ಧಿಯುಳ್ಳ ಬೋಧಕನಾಗಿ ಬಾಲಕನಿಗೆ ತಕ್ಕ ಹಾಗೆ ಅವನಿಗೆ ಉಪದೇಶವನ್ನು ಕೊಡುತ್ತಾ ಇರುವನು. ಆದದರಿಂದ ದೇವರು ಈ ಕಾಲದಲ್ಲಿ ಬೇರೆ ಕಾಲಗಳಿಗಿಂತ ಹೆಚ್ಚು ಸರ್ತಿ ತನ್ನ ಜನರಿಗೆ ಪ್ರತ್ಯಕ್ಷವಾದನು.

೩) ಮನೆತನದ ಚರಿತ್ರವು ಜನಾಂಗದ ಚರಿತ್ರಕ್ಕೆ ಆರಂಭವಾಗಿರುವದಲ್ಲದೆ ಅದಕ್ಕೆ ಮುಂಗುರ್ತಾಗಿಯೂ ಪ್ರವಾದನೆಯಾಗಿಯೂ ಅದೆ. ಹ್ಯಾಗಂದರೆ: ಮನೆತನವೆಂಬ ಬೀಜದಲ್ಲಿ ಜನಾಂಗವೆಂಬ ವೃಕ್ಷದ ಭಾವವು ಅದರ ಗುಣಲಕ್ಷಣಾದಿಗಳು ಸಂಕ್ಷೇಪವಾಗಿರುವದರಿಂದ ಮೂಲವಾದ ಮನೆತನದ ವೃತ್ತಾಂತವನ್ನು ವಿಚಾರಿಸುವವನು ಮುಂದಿನ ಕಾಲದಲ್ಲಿ ಹೆಚ್ಚೆಚ್ಚಾಗಿ ವೃದ್ಧಿಯಾಗುವ ಜನಾಂಗದ ಸ್ವಭಾವ ವೃತ್ತಿ ಶೀಲ ಪಾಪಾದಿಗಳನ್ನು ಮುಂತಿಳುಕೊಳ್ಳ ಬಹುದು. ಆದದರಿಂದ ಪಿತೃಕಾಲದ ಚರಿತ್ರವು ಇಸ್ರಯೇಲನವರ ಜನಾಂಗದ ಸರ್ವ ಚರಿತ್ರಕ್ಕೆ ಮುಂಗುರ್ತಾಗಿಯೂ ಮಾದರಿಯಾಗಿಯೂ ಇರುತ್ತದೆ. ಇಸ್ರಯೇಲನವರ ಪೂರ್ವಜರಲ್ಲಿ ಕಾಣುವ ವಿಶೇಷವಾದ ಭಾವಗುಣವು ಅವರಿಂದ ಹುಟ್ಟಿದ ಜನಾಂಗದಲ್ಲಿಯೂ ಅದು ಸಹಜವಾದ ಶೀಲವನ್ನೂ ಮಾರ್ಗವನ್ನೂ ಬಿಟ್ಟು ಬಿಟ್ಟು ತನ್ನನ್ನು ತಾನು ನಾಶ ಮಾಡುವ ಪರ್ಯಂತರವು ಕಾಣಿಸುತ್ತಾ ಇತ್ತು.

ಪಿತೃ ಕಾಲದಲ್ಲಿದ್ದ ಶ್ರೇಷ್ಠರಾದ ಅಬ್ರಹಾಮನೂ ಇಸಾಕನೂ ಯಾಕೋಬನೂ ಯೋಸೇಫನೂ ಇವರ ಚರಿತ್ರಗಳು ಇತ್ತಲಾಗಿನ ಕಾಲದ ಇಸ್ರಯೇಲನ ವಂಶದವರಿಗೂ ದೇಹಿಕ ಇಸ್ರಯೇಲಿನ ಸ್ಥಳದಲ್ಲಿ ಶೇರಿದ ಆತ್ಮಿಕ ಇಸ್ರಯೇಲನವರಿಗೂ ಸ್ವಶೋಧನೆಗಾಗಿ ಉಪಯೋಗವಾದ ಕನ್ನಡಿಯಾಗಿದೆ.

ಪರಿಶಿಷ್ಟ. ಅಬ್ರಹಾಮನ ವಂಶಾವಳಿ ಯಾವದಂದರೆ:






## § 16. ಅಬ್ರಹಾಮನ ಕರೆಯುವಿಕೆಯೂ ವಾಸಾಂತರವೂ

೧) ೧ ಮೋಶೆ. ೧೨, ೧—೯. ಅಬ್ರಹಾಮನು ಕಲ್ದೆಯ ದೇಶದ ಊರ್ ಎಂಬ ಸ್ಥಳದಲ್ಲಿ ಹುಟ್ಟಿದನು. ಅವನ ತಂದೆಯಾದ ತೇರಾ ಕುರುಬನಾಗಿದ್ದು ತನ್ನ ಮಂದೆಗಳ ಸಂಗಡ ಕಲ್ದೆಯ ದೇಶವನ್ನು ಬಿಟ್ಟು ಮೆಸೊಪತಾಮ್ಯಕ್ಕೆ ಹೋಗಿ ಹಾರಾನಿನಲ್ಲಿ (ಕರ್ರೆ) ಸತ್ತನು. ಆ ಸ್ಥಳದಲ್ಲಿ ನಾಹೋರನು ವಸತಿಯಾದನು. ಆದರೆ ಅಬ್ರಹಾಮನು ೭೫ ವರ್ಷದವನಾಗಿ ನಿನ್ನ ದೇಶದೊಳಗಿಂದಲೂ ನೀನು ಹುಟ್ಟಿದ ಸ್ಥಳದಿಂದಲೂ ನಿನ್ನ ತಂದೆಯ ಮನೆಯೊಳಗಿಂದಲೂ ನಾನು ನಿನಗೆ ತೋರಿಸುವ ದೇಶಕ್ಕೆ ಹೋಗು ನಾನು ನಿನ್ನನ್ನು ದೊಡ್ಡ ಜನಾಂಗವಾಗ ಮಾಡಿ ನಿನ್ನನ್ನಾಶೀರ್ವದಿಸಿ ನಿನ್ನ ಹೆಸರು ದೊಡ್ಡದಾಗ ಮಾಡುವೆನು; ನೀನು ಆಶೀರ್ವಾದವಾಗಿರುವಿ. ನಿನ್ನನು ಆಶೀರ್ವದಿಸುವವರನ್ನು ಆಶೀರ್ವದಿಸುವೆನು. ನಿನ್ನನ್ನು ಶಪಿಸುವವರನ್ನು ಶಪಿಸುವೆನು. ಭೂಮಿಯ ಕುಲಗಳೆಲ್ಲಾ ನಿನ್ನಲ್ಲಿ ಆಶೀರ್ವದಿಸಲ್ಪಡುವವು, ಎಂದು ದೈವೋತ್ತರವನ್ನು ಹೊಂದಿದನು. ಕರ್ತನು ಹೇಳಿದ ಪ್ರಕಾರ ಅಬ್ರಹಾಮನು ಕಲ್ದೆಯದಲ್ಲಿ ಸತ್ತ, ಹಾರಾನನ ಮಗನಾದ ಲೋಟನ ಸಂಗಡ ದೇಶಾಂತರಕ್ಕೆ ಹೋದನು.

ಎಫ್ರಯಿಮ್ ಘಟ್ಟಗಳಲ್ಲಿರುವ ಶಿಖೇಮಿಗೆ ಸಮೀಪವಾದ ಮೋರೆ ಎಂಬ ತೋಪಿನಲ್ಲಿ ಉಳುಕೊಂಡಾಗ ಅಬ್ರಹಾಮನು, ಈ ದೇಶವನ್ನು ನಿನ್ನ ಬೀಜಕ್ಕೆ ಕೊಡುವೆನೆಂಬ ದೈವೋತ್ತರವನ್ನು ಹೊಂದಿ, ದೇವರು ತನಗೆ ತೋರಿಸಲಿಕ್ಕಿದ್ದ ದೇಶವು ಇದೇ ಎಂದು ತಿಳುಕೊಂಡು ಬೇಥೆಲಿಗೂ ಆಯಿಗೂ ಮಧ್ಯದಲ್ಲಿ ಒಂದು ಪೀಠವನ್ನು ಕಟ್ಟಿ ಕರ್ತನ ಹೆಸರನ್ನು ಪ್ರಸಂಗಿಸಿದನು.

ಪರಿಶಿಷ್ಟ. ೧. ಅಬ್ರಹಾಮನು ವಾಗ್ದತ್ತದೇಶದಲ್ಲಿ ಶೇರಿದಾಗ ಮಕ್ಕಳಿಲ್ಲದವನಾಗಿದ್ದನು. ಆದರೆ ಯೆಹೋವನು ಸರ್ವತ್ರಾಣದ ಚೈತನ್ಯದಿಂದ ತಾನು ಉಂಟು ಮಾಡುವ ಜನಾಂಗವನ್ನು ಅಬ್ರಹಾಮನಲ್ಲಿ ಆದು ಕೊಂಡು ಅವನಿಗೆ ಸ್ವಭಾವದ ರೀತಿಯನ್ನು ಬಿಟ್ಟು ಮಕ್ಕಳನ್ನು ಎಬ್ಬಿಸುವ ವಾಗ್ದತ್ತವನ್ನು ಕೊಟ್ಟನು. ಅಬ್ರಹಾಮನು ಹೊಸ ಸಂತಾನಕ್ಕೆ ಪೂರ್ವಜನಾಗಿ ಹೊಸ ಮಾರ್ಗದಲ್ಲಿ ಶೇರ ಬೇಕಾದದರಿಂದ ವಿಗ್ರಹಾರಾಧಿಕರಾದ ನೆಂಟರಿಷ್ಟರ ದೇಶವನ್ನೂ ಯೋಷುವ. ೨೪, ೨. ೧೪. ಹೊಕ್ಕಬಳಿಕೆಯನ್ನೂ ಬಿಟ್ಟು ಬಿಡ ಬೇಕಾಗಿತ್ತು. ಇಲ್ಲದಿದ್ದರೆ ಅವನು ಪ್ರತ್ಯೇಕವಾದ ಜನಾಂಗವನ್ನೂ ಭಕ್ತಿಯ ಮಾರ್ಗವನ್ನೂ ಲೋಕದಲ್ಲಿ ಸ್ಥಾಪಿಸುವದಕ್ಕೆ ಅವನು ಯೋಗ್ಯವಾಗುತ್ತಿದ್ದಿಲ್ಲ. ದೇವರು ಸರ್ವ ಲೋಕದ ಎಲ್ಲಾ ಜನಾಂಗಗಳಿಗೆ ರಕ್ಷಣೆಯನ್ನೂ

ಉಂಟು ಮಾಡ ಬೇಕೆಂದು ಒಂದು ವಂಶವನ್ನೂ ಆ ವಂಶದಲ್ಲಿ ಒಬ್ಬ ಮನುಷ್ಯನನ್ನೂ ಅವನ ಬೀಜವನ್ನೂ ಆರಿಸಿ ತೆಗದು ಕೊಂಡದ್ದನ್ನೂ ಪರಿಶುದ್ಧ ಚರಿತ್ರವು ತೋರಿಸುತ್ತದೆ.

ಸರ್ವಲೋಕದ ರಕ್ಷಣ್ಯವು ಅಬ್ರಹಾಮನ ಕರೆಯುವಿಕೆಯ ಗುರಿಯಾಗಿತ್ತು.

ಪರಿಶಿಷ್ಟ. ೨. ಇಲ್ಲಿ ಅಬ್ರಹಾಮನಿಗೆ ಸಿಕ್ಕುವ ವಾಗ್ದತ್ತವು ಅಬ್ರಹಾಮನ ಪೂರ್ವಜನಾದ ಷೇಮನಿಗೆ ಪ್ರಾಪ್ತಿಯಾದ ಆಶೀರ್ವಾದದ ಪುನಃಸ್ಥಾಪನೆಯೂ ವೃದ್ಧಿಯೂ ಆಗಿದೆ. ದೇವರು ಪೂರ್ವದಲ್ಲಿ ಕಾನಾನ್ ದಾಸನಾಗಿರ ಬೇಕೆಂದು ಹೇಳಿದ ಶಾಪದ ಅಭಿಪ್ರಾಯವು ಈ ದೇಶವನ್ನು ನಿನ್ನ ಬೀಜಕ್ಕೆ ಕೊಡುತ್ತೇನೆಂಬ ಅಬ್ರಹಾಮನ ಆಶೀರ್ವಾದದಲ್ಲಿಯೂ ಜಾಡೆಯಾಗಿ ಕಾಣುತ್ತದೆ.

ಇದಲ್ಲದೆ ಯಾಫೇತನು ಷೇಮನ ಗುಡಾರಗಳಲ್ಲಿ ವಾಸಿಸಿ ಯೆಹೋವನನ್ನೂ ಅವನ ರಕ್ಷಣೆಯನ್ನೂ ಹೊಂದುವನೆಂಬ ವಾಗ್ದತ್ತವು ಭೂಮಿಯ ಕುಲಗಳೆಲ್ಲಾ ನಿನ್ನಲ್ಲಿ ಆಶೀರ್ವದಿಸಲ್ಪಡುವವು ಎಂಬ ಅಬ್ರಹಾಮನ ಆಶೀರ್ವಾದದಲ್ಲಿ ವೃದ್ಧಿಯಾಗೆದೆ. ಹ್ಯಾಗಂದರೆ ಅಬ್ರಹಾಮನ ಆಶೀರ್ವಾದದಲ್ಲಿ ಯಾಫೇತನ ಎಲ್ಲಾ ಮಕ್ಕಳಿಗೂ ಅಬ್ರಹಾಮನ ಆಶೀರ್ವಾದದಿಂದ ಬರುವ ಆಶೀರ್ವಾದವನ್ನು ತಿರಸ್ಕರಿಸದೆ ಇರುವ ಎಲ್ಲಾ ಜನಾಂಗಗಳಿಗೂ ರಕ್ಷಣೆಯ ಪ್ರವಾದನೆಯು ಕೊಟ್ಟದೆ.— ಮನುಷ್ಯರಲ್ಲಿ ಹುಟ್ಟುವ ಒಬ್ಬನು ಲೋಕಕ್ಕೆ ರಕ್ಷಕನಾಗಿರುವನೆಂಬದು ಆ ಪೂರ್ವಕಾಲದ ಭಕ್ತರು ಇನ್ನೂ ಪೂರ್ಣವಾಗಿ ತಿಳಿಯದೆ ಇದ್ದರು. ಇಸ್ರಾಯೇಲನವರನ್ನು ಯೆಹೋವನ ಆಜ್ಞೆಯ ಪ್ರಕಾರವಾಗಿಯೂ ಆತನ ತ್ರಾಣದಿಂದಲೂ ಮಿಜ್ರದವರ ಕೈಗೆ ತಪ್ಪಿಸಿ ಅರಣ್ಯದಲ್ಲಿ ಆಳಿ ಕೊಂಡು ನನ್ನ ಮೇಲೆ ಒಬ್ಬನು ಬರುತ್ತಾನೆ, ಅವನನ್ನು ಕೇಳಿರಿ ಎಂದು ಪ್ರಜೆಗೆ ಹೇಳಿದಂದಿನಿಂದ ಮತ್ತು ಹೆಚ್ಚಾಗಿ ಯೆಹೋವನಿಂದ ಆಯಲ್ಪಟ್ಟು ಯೆಹೋವನ ಹೆಸರಿನಲ್ಲಿ ಯೆಹೋವನ ಪ್ರಜೆಯನ್ನು ಆಳಿ ಕೊಳ್ಳುವ ಮಹಿಮೆಯನ್ನು ಪಡೆದು, ನಿನ್ನ ಮಗನು ಯುಗಯುಗಕ್ಕೂ ನಿನ್ನ ಸಿಂಹಾಸನದಲ್ಲಿ ಕೂತು ಕೊಳ್ಳುವನೆಂಬ ವಾಗ್ದತ್ತವನ್ನು ಹೊಂದಿದಂದಿನಿಂದ ಇಸ್ರಾಯೇಲನವರಾದ ಭಕ್ತರು ಮೋಶೆಯು ಓಪಾದಿಯಾಗಿರುವಂಥ ದಾವೀದನ ವಂಶದವನಾಗಿ ಹುಟ್ಟುವಂಥ ಮೆಶ್ಶೀಯನಾದ ಒಬ್ಬನಿಂದ ದೇವರ ಪ್ರಜೆಗೂ ಸರ್ವ ಜನಾಂಗಗಳಿಗೂ ರಕ್ಷಣೆಯಾಗುವದೆಂಬುವದನ್ನು ವಿಶ್ವಾಸದಿಂದ ತಿಳುಕೊಳ್ಳಲಾರಂಭಿಸಿದರು.

ಹವ್ವಳಿಗೆ ದೇವರು ಕೊಟ್ಟ ವಾಕ್ಯದಲ್ಲಿ ಸ್ತ್ರೀಯು ಬೀಜದಿಂದ (ನರವಂಶವೋ ನರವಂಶದವನಾದ ಒಬ್ಬನೋ ಏನೋ ಈ ಮಾತಿನಲ್ಲಿ ಸ್ಪಷ್ಟವಾಗಿ ತೋರುವದಿಲ್ಲ) ಶೋಧಕನ ಮೇಲೆ ಜಯವಾಗುವ ಕಾಲವು ಬರುವದೆಂಬದೇ ಪ್ರಕಟವಾಯಿತು. ಅಬ್ರ

ಹಾಮನಿಗೆ ಆದ ವಾಗ್ದತ್ತದಲ್ಲಿ ಅಬ್ರಹಾಮನ ವಂಶದಿಂದ ಸರ್ವ ಲೋಕಕ್ಕೆ ರಕ್ಷಣ್ಯವು ಬರುವದೆಂಬದು ಕಾಣಿಸಿತು. ಆದರೆ ಅಬ್ರಹಾಮನ ವಂಶದಿಂದಲೋ? ಅಬ್ರಹಾಮನ ವಂಶದವನಾದ ಒಬ್ಬನಿಂದಲೋ ಏನೋ ವಾಗ್ದತ್ತದ ಮಾತಿನಿಂದ ಸ್ಪಷ್ಟವಾಗಿ ತೋರಲಿಲ್ಲ. ಆದರೂ ಹವ್ವಳಿಗೆ ಆದ ವಾಗ್ದತ್ತಕ್ಕೂ ಅಬ್ರಹಾಮನಿಗೆ ಆದ ವಾಗ್ದತ್ತಕ್ಕೂ ಹೆಚ್ಚು ಕಡಿಮೆಯುಂಟು. ಅದರಲ್ಲಿ ಕೇಡಿನ ಪರಿಹಾರ ಮಾತ್ರ ಇದರಲ್ಲಿ ಆಶೀರ್ವಾದ ಪ್ರಕಟವಾಗಿದೆ.

ಪರಿಶಿಷ್ಟ. ೩. ನಿನ್ನನ್ನು ಶಪಿಸುವವರನ್ನು ನಾನು ಶಪಿಸುವೆನೆಂದು ಯೆಹೋವನು ಹೇಳಿದನು. ಅಬ್ರಹಾಮನು ಯಾರಿಗೂ ಶಾಪವನ್ನು ಕೊಡುವದಕ್ಕೆ ನೇಮಿಸಲ್ಪಡಲಿಲ್ಲ. ದೇವರು ಅವನನ್ನು ಆಶೀರ್ವಾದವಾಗಿ ಇಟ್ಟನು. ಆದರೆ ಅಬ್ರಹಾಮನ ವಿರೋಧಿಗಳಾಗಿರುವವರಿಗೆ ತಾನು ಶಿಕ್ಷೆ ಕೊಡುವನೆಂದು ದೇವರು ನಿರ್ಣಯ ಮಾಡಿದನು. ಅಬ್ರಹಾಮನ ವಿರೋಧಿಗಳು ಯಾರಂದರೆ—ಅಬ್ರಹಾಮನ ಕಾಲದಲ್ಲಿ ಇದ್ದು ಅವನನ್ನು ನೋಡಿ ಅವನಿಗೆ ಕೋಪವನ್ನೂ ಹಗೆಯನ್ನೂ ಮಾಡಿ ಎದುರಾಳಿಗಳಾದವರಲ್ಲ. ದೇವರು ಅಬ್ರಹಾಮನಿಗೆ ಕೊಟ್ಟ ವಾಗ್ದತ್ತದ ಪ್ರಕಾರ ಅವನ ವಂಶದಲ್ಲಿ ಸ್ಥಾಪಿಸುವ ರಾಜ್ಯಕ್ಕೂ ರಕ್ಷಣೆಯ ಮನೋವಾರ್ತೆಗೂ ವಿರೋಧಿಗಳಾಗಿದ್ದು ಇಸ್ರಯೇಲನವರಿಗೆ ಶತ್ರುಗಳಾಗಿದ್ದು, ದೇವರು ನೇಮಕ ಮಾಡಿದ ಕಾಲಗಳಲ್ಲಿ ಅವರನ್ನು ತಮ್ಮ ವಶ ಮಾಡಿ ಕೊಂಡು ಬಾಧೆ ಪಡಿಸಿದ ಮಿಚ್ರದವರೂ ಅಸೂರ್ಯರೂ ಬಬಿಲೋನ್ಯರೂ ಮೊದಲಾದವರ ರಾಜ್ಯಗಳೂ ಜನಾಂಗಗಳೂ ನೇಮಕವಾದ ಕಾಲದಲ್ಲಿ ನಾಶವಾಗಿ ಹೋದವು.

೨) ೧ ಮೋಶೆ. ೧೨, ೧೦—೨೦. ಆದರೆ ಸ್ವಲ್ಪ ಕಾಲವಾದ ಮೇಲೆ ಬರವು ಹುಟ್ಟಿದರಿಂದ ಮಿಚ್ರ ದೇಶಕ್ಕೆ ಹೋದನು. ದೇವರ ಅಪ್ಪಣೆ ಇಲ್ಲದೆ ವಾಸಾಂತರ ಮಾಡಿದ ಕಾಲದಲ್ಲಿ ಅಬ್ರಹಾಮನಿಗೆ ಹೆಂಡತಿಯನ್ನು ಕಳಕೊಳ್ಳುವ ಗಂಡಾಂತರವು ಬಂತು. ಹ್ಯಾಗಂದರೆ ಅವನು ಭಯದಿಂದ ಸಾರಾ ತನ್ನ ತಂಗಿ ಎಂದು ಹೇಳಿದದರಿಂದ (೧ ಮೋಶೆ. ೨೦, ೧೨.) ವಚನದ ಪ್ರಕಾರ ಸಾರಾ ಅಬ್ರಹಾಮನ ತಂಗಿ ಅಂದರೆ ಅಣ್ಣನ ಮಗಳಾಗಿದ್ದಳು. ಯೆಹೂದ್ಯರು ಅವಳು ಹಾರಾನನ ಮಗಳಾದ ಇಸ್ಕಾ ಎಂಬವಳಾಗಿದ್ದಳೆಂದು ಹೇಳುತ್ತಾರೆ. ಫರೋ ಅವಳ ಸೌಂದರ್ಯದ ಸುದ್ದಿ ಕೇಳಿ ಅವಳನ್ನು ಅರಮನೆಗೆ ಕರೆಯ ಕಳುಹಿಸಿದನು. ಆದರೆ ಫರೋನನು, ದೊಡ್ಡ ಉಪದ್ರಗಳು ಸಾರಾ ಅರಮನೆಯಲ್ಲಿ ಶೇರಿದಂದಿನಿಂದ ಬಂದ ಕಾರಣ ಭಯ ಪಟ್ಟು ಅವಳನ್ನು ಅಬ್ರಹಾಮನಿಗೆ ತಿರಿಗಿ ಒಪ್ಪಿಸಿದನು. ತರುವಾಯ ಅಬ್ರಹಾಮನು ಘನವಾದ ಉಡಿಗೆರೆಗಳನ್ನು ಅರಸನಿಂದ ಹೊಂದಿ ತನ್ನ ದೇಶಕ್ಕೆ ತಿರಿಗಿ ಹೋದನು.

ಪರಿಶಿಷ್ಟ. ಮಿಚ್ರ ದೇಶದ ಸಂಗತಿ ದೇವರ ವಾಕ್ಯದ ಚರಿತ್ರದಲ್ಲಿ ಇಲ್ಲಿ ಮೊದಲು ಕಾಣುತ್ತದೆ; ಅದು ವಾಗ್ದತ್ತದೇಶಕ್ಕೆ ಸಮೀಪವಾದ ದೇಶ, ಅದರ ಐಶ್ವರ್ಯ ವಿದ್ಯ ಜ್ಞಾನಾದಿಗಳು ಆ ಕಾಲದಲ್ಲಿಯೇ ಕೀರ್ತಿ ಪಡ ಕೊಂಡವು. ಮಿಚ್ರರಾಜ್ಯದಲ್ಲಿ ಲೋಕರಾಜ್ಯಗಳ ತ್ರಾಣವೂ ಮಹಿಮೆಯೂ ಮೊದಲು ಪ್ರತ್ಯಕ್ಷವಾದವು. ಅದರ ಸ್ನೇಹವೂ ದ್ವೇಷವೂ ದೇವರು ಆದು ಕೊಂಡ ಜನಾಂಗಕ್ಕೆ ಕಾಲ ಕಾಲಕ್ಕೂ ಮೇಲು ಕೇಡುಗಳ ತಿಳುವಿಕೆಯ ಮರವಾಗಿದೆ. ಇಸ್ರಯೇಲನವರ ಪೂರ್ವಜನಾದ ಅಬ್ರಹಾಮನಿಗೆ ಸಂಭವಿಸಿದ್ದು ಇಸ್ರಯೇಲನವರಿಗೆ ಮತ್ತೆ ಆದ ಕಾರ್ಯಕ್ಕೆ ಮುಂಗುರ್ತಾಗಿತ್ತು. ಏನಂದರೆ ಅಬ್ರಹಾಮನು ಬರದ ನಿಮಿತ್ತ ಮಿಚ್ರದೇಶಕ್ಕೆ ಹೋಗಿ ಅಲ್ಲಿ ಸಂತಾನವಿಲ್ಲದವನಾಗುವ ಗಂಡಾಂತರದಲ್ಲಿ ಬಿದ್ದು ದೇವರ ಬಲವಾದ ಕೈಯಿಂದ ಸಹಾಯವನ್ನು ಹೊಂದಿ ಐಶ್ವರ್ಯವಾದ ದೇಶದವರು ಕೊಟ್ಟ ದಾನಗಳನ್ನು ತೆಗದು ಕೊಂಡು ಐಶ್ವರ್ಯವಂತನಾಗಿ ಕಾನಾನ್ ದೇಶಕ್ಕೆ ತಿರಿಗಿ ಹೋದನು.

೩) ೧ ಮೋಶೆ. ೧೩. ಅಬ್ರಹಾಮನು ತಿರಿಗಿ ಕಾನಾನ್ ದೇಶಕ್ಕೆ ಬಂದ ಮೇಲೆ ಕರ್ತನ ನಾಮವನ್ನು ತಿರಿಗಿ ಸಾರುತ್ತಾ ಇದ್ದನು. ಲೋಟನು ಈ ವರೆಗೆ ಅಬ್ರಹಾಮನಿಗೆ ಸಹವಾಸಿಯಾಗಿದ್ದನು. ಆದರೆ ಇಬ್ಬರ ಮಂದೆಗಳು ಬಹಳವಾಗಿ ಹೆಚ್ಚಿದರಿಂದಲೂ ಇಬ್ಬರ ಚಾಕರಿಯವರಲ್ಲಿ ಝಗಳವು ಹುಟ್ಟಿದದರಿಂದಲೂ ಲೋಟನೂ ಅಬ್ರಹಾಮನೂ ಬೇರೆ ಬೇರೆಯಾಗಿ ವಾಸ ಮಾಡಲಿಕ್ಕೆ ಅವಶ್ಯವಾಗಿತ್ತು. ಅಬ್ರಹಾಮನು ಸ್ವೇಚ್ಛೆಯನ್ನು ಅಲ್ಲಗಳಿಯಲಿಕ್ಕೆ ಅಭ್ಯಾಸ ಮಾಡಿದವನಾಗಿ ಲೋಟನಿಗೆ ತನಗೆ ಹಿತವಾದ ದೇಶದ ಭಾಗವನ್ನು ಆದು ಕೊಳ್ಳ ಬೇಕೆಂದು ಹೇಳಿದನು.

ಇವನು ಸ್ವಂತ ಪ್ರಯೋಜನವನು ಮಾತ್ರ ನೋಡಿ ಯೊರ್ದಾನ್ ನದಿಯ ಪ್ರದೇಶವಾದ ಸಿದ್ದಿಮ್ ತಗ್ಗನ್ನು ಆರಿಸಿ ತೆಗದು ಕೊಂಡನು. ಯಾಕಂದರೆ ನೀರು ಅಲ್ಲಿ ಅಲ್ಲಿ ಬಹಳ ಇದ್ದದರಿಂದ ಅದು ದೇವರ ತೋಟದ ಹಾಗೆ ಕಾಣಿಸಿತು. ಆ ಸೀಮೆಯಲ್ಲಿರುವ ಸೋದೋಮ್ ಪಟ್ಣದಲ್ಲಿ ಲೋಟನು ವಸತಿಯಾದನು. ಈ ಪಟ್ಣದವರು ಬಹಳ ಅಸಹ್ಯವಾದ ಪಾಪದೊಳಗೆ ಬಿದ್ದು ನಾಶನದ ನ್ಯಾಯತೀರ್ವಿಕೆಗಾಗಿ ಸಿದ್ಧರಾಗಿದ್ದರೂ ಲೋಟನು ಅವರ ಅಕ್ರಮಗಳಿಗೆ ಭಯ ಪಡದೆ ಅವರಲ್ಲಿ ಶೇರಿದನು.

ಅಬ್ರಹಾಮನು ದೇಶವನ್ನು ನಾಲ್ಕು ದಿಕ್ಕಿಗೆ ಸಂಚರಿಸಿ ಯೂದಾ ಘಟ್ಟಗಳ ಹೇಬ್ರೋನಿನ ಬಳಿಯಲ್ಲಿರುವ ಮಮ್ರೆತೋಪಿನಲ್ಲಿ ವಾಸ ಮಾಡಿದನು.



## § 17. ಕೆದೊರ್ಲಾವೋಮೆರ್ ಮತ್ತು ಮೆಲ್ಕೀಚೆದೇಕ್

೧) ೧ ಮೋಶೆ. ೧೪, ೧—೧೬. ಲೋಟನು ದೇಶದ ಉತ್ತಮ ಭಾಗವನ್ನು ತಾನು ಹೆಕ್ಕಿದೆನೆಂದು ನೆನಸಿ ಕೊಂಡನು. ಆದರೆ ಸ್ವಲ್ಪ ಕಾಲದ ಮೇಲೆ ಸ್ವಾರ್ಥದಿಂದ ಮಾಡಿದ ಕಾರ್ಯದ ನಿಮಿತ್ತ ಶಿಕ್ಷೆ ಹೊಂದಿದನು. ಹ್ಯಾಗಂದರೆ ಸೊದೋಮ್ ಗೊಮೊರಾ ಅದಮಾ ಸೆಬೋಯಿಮ್ ಬೇಲಾ ಎಂಬ ಐದು ಸಿದ್ದಿಮ್ ತಗ್ಗಿನ ಪಟ್ಣಗಳ ಅರಸುಗಳು ಯೆಲಾಮಿನ (ಪರ್ಶಿಸಮುದ್ರದ ತೀರದಲ್ಲಿ ಎಲಿಮಾಯಿಸ್) ಅರಸನಾದ ಕೆದೊರ್ಲಾವೋಮೆರನಿಗೆ ೧೨ ವರ್ಷ ಕಪ್ಪ ಕೊಟ್ಟ ಮೇಲೆ ಅವನಿಗೆ ತಿರುಗಬಿದ್ದರು. ಆದದರಿಂದ ಕೆದೊರ್ಲಾವೋಮೆರ್ ಬೇರೆ ೪ ಅರಸುಗಳ ಸಂಗಡ ಒಡಂಬಡಿಕೆ ಮಾಡಿ ಕೊಂಡು ಸೈನ್ಯದಿಂದ ಯೊರ್ದಾನ್ ತಗ್ಗಿಗೆ ಬಂದು ಕೊಟಕಾಯಿ ಎಬ್ಬಿಸಿದವರನ್ನು ಜೈಸಿ ಬಹಳ ಆಸ್ತಿಯನ್ನು ಕೊಳ್ಳೆ ಇಟ್ಟು ಅನೇಕ ಜನರನ್ನು ಸೆರೆಯಾಗಿ ವೈದನು. ಇವರಲ್ಲಿ ಲೋಟನು ಸಹಾ ಇದ್ದನು. ಶತ್ರುಗಳ ಕೈಗೆ ತಪ್ಪಿಸಿ ಕೊಂಡ ಒಬ್ಬ ಆಳು ಅಬ್ರಹಾಮನಿಗೆ ಈ ವರ್ತಮಾನವನ್ನು ತಿಳಿಸಲು, ಅವನು ತನಗಿದ್ದ ಮುನ್ನೂರ ಹದಿನೆಂಟು ಮಂದಿ ಚಾಕರರಿಗೆ ಯುದ್ಧಸನ್ನಾಹ ಮಾಡಿಸಿ ನೆರೆಯವರಾದ ಅಮೋರ್ಯರ ಅರಸುಗಳಾದ ಮಮ್ರೆ, ಆನೆರ, ಯೆಷ್ಕೋಲರನ್ನು ಸಹಾಯಕ್ಕೆ ಕರೆದು ಜಯಶಾಲಿಯಾದ ಅರಸುಗಳನ್ನು ಹಿಂದಟ್ಟಿ ರಾತ್ರಿಕಾಲದಲ್ಲಿ ಅಕಸ್ಮಾತ್ತಾಗಿ ಅವರ ಮೇಲೆ ಬಿದ್ದು ಅವರನ್ನು ಹೊಡದು ಎಲ್ಲಾ ಕೈಸೆರೆಯವರನ್ನೂ ಹೇರಳವಾದ ಕೊಳ್ಳೆಯನ್ನೂ ಹಿಡಿದು ಕೊಂಡು ಸ್ವದೇಶಕ್ಕೆ ತಿರಿಗಿ ತಂದನು.

ಪರಿಶಿಷ್ಟ. ನೆಂಟನಾದ ಲೋಟನನ್ನು ಶತ್ರುಗಳ ಕೈಗೆ ತಪ್ಪಿಸುವದಕ್ಕಾಗಿ ಅಬ್ರಹಾಮನು ಯುದ್ಧಕ್ಕೆ ಹೋದದ್ದು ಸರಿ. ಆದರೆ ಈ ಕಾರ್ಯದಲ್ಲಿ ವಿಶೇಷವಾದ ಒಂದು ಅಭಿಪ್ರಾಯ ತೋರುತ್ತದೆ. ಏನಂದರೆ—ಅಬ್ರಹಾಮನು ಕಾನಾನ್ ದೇಶದ ಬಾಧ್ಯಸ್ಥನಾಗಿದ್ದದರಿಂದ ತನ್ನ ದೇಶದಲ್ಲಿ ನಡಿಯುವ ಅನ್ಯಾಯವನ್ನು ನಿಲ್ಲಿಸುವದೂ ಅದರಲ್ಲಿ ಬಲಾತ್ಕಾರ ನಡಿಸುವ ಶತ್ರುಗಳನ್ನು ಎದುರಿಸುವದೂ ಅವನಿಗೆ ಯೋಗ್ಯವಾಗಿತ್ತು. ಕೆದೊರ್ಲಾವೋಮೆರನ ಮೇಲೆ ಅಬ್ರಹಾಮನಿಗೆ ಸಿಕ್ಕಿದ ಜಯವು ಎಲ್ಲಾ ಜನರಿಗೆ ಅಬ್ರಹಾಮನೇ ದೇಶಕ್ಕೆ ಆಶ್ರಯವನ್ನೂ ಆಶೀರ್ವಾದವನ್ನೂ ಕೊಡುವವನಾಗಿದ್ದಾನೆಂಬದಕ್ಕೆ ದೃಷ್ಟಾಂತವಾಗಿತ್ತು. ಮತ್ತು ಅಬ್ರಹಾಮನು ತಾನೇ ದೇವರು ಈ ಪ್ರಕಾರ ತನಗೆ ಮಾಡಿದ ಸಹಾಯವು ಮುಂದಿನ ಕಾಲದಲ್ಲಿ ದೇಶವು ತನಗೆ ಸ್ವಾಸ್ಥ್ಯವಾಗುವದಕ್ಕೆ ಸಂಚಕಾರವೆಂದು ತಿಳುಕೊಂಡನು.

೨) ೧ ಮೋಶೆ. ೧೪, ೧೭. ಮೊದಲಾದ ಶ್ಲೋಕಗಳು. ಅಬ್ರಹಾಮನು ತಿರುಗಿ ಕೊಂಡು ಬರುವಾಗ ಸೊದೋಮದ ಅರಸನು ಅವನನ್ನು ಎದುರ್ಗೊಂಡನು. ಇದಲ್ಲದೆ ಮೆಲ್ಕೀಚೆದೇಕನು (ನೀತಿಯ ಅರಸನು) ಸಾಲೇಮದ ಅರಸನೂ (ಸಮಾಧಾನದ ಅರಸನು, ಎರೂಸಲೇಮ್ ಸಾಲೇಮ್ ಒಂದೇ ಎಂದು ಕೀರ್ತನೆ. ೭೬, ೨. ವಚನದಲ್ಲಿ ಜಾಡೆಯಾಗಿ ತೋರುತ್ತದೆ.) ಮಹೋನ್ನತನಾದ ದೇವರ ಯಾಜಕನೂ ಆಗಿದ್ದು ಅಬ್ರಹಾಮನಿಗೆ ಎದುರು ಬಂದು ವಂದನೆ ಮಾಡಿ ರೊಟ್ಟಿಯನ್ನೂ ದ್ರಾಕ್ಷೆರಸವನ್ನೂ ಕೊಟ್ಟು ಅವನನ್ನು ಆಶೀರ್ವದಿಸಿದನು.

ಲೇವ್ಯರಾದ ಯಾಜಕರಿಗೆ ಪೂರ್ವಜನೂ ವಿಶ್ವಾಸಿಗಳಿಗೆ ತಂದೆಯೂ ಮಹಾ ವಾಗ್ದತ್ತಗಳ ಬಾಧ್ಯಸ್ತನೂ ಆದ ಅಬ್ರಹಾಮನು ತೆಗದು ಕೊಂಡು ಬಂದ ಕೊಳ್ಳೆಯ ಹತ್ತನೆ ಪಾಲು ಮೆಲ್ಕೀಚೆದೇಕನಿಗೆ ಅರ್ಪಿಸಿದನು.

ಸೋದೋಮದ ಅರಸನು ತನಗೆ ಇಷ್ಟು ಸಹಾಯ ಮಾಡಿದ ಅಬ್ರಹಾಮನಿಗೆ ತಿರುಗಿ ಕೈ ಹಿಡಿದ ಕೊಳ್ಳೆಯನ್ನು ಕಷ್ಟಾರ್ಜಿತವಾಗಿ ಕೊಡಲಿಕ್ಕಿದ್ದನು. ಆದರೆ ಅಬ್ರಹಾಮನು ಒಂದು ನೂಲಾದರೂ ತೆಗದು ಕೊಳ್ಳಲಿಲ್ಲ. ಯಾಕಂದರೆ ಸೋದೋಮದ ಅರಸನಿಂದಲ್ಲ, ತನ್ನನ್ನು ಕರೆದು ಆಶೀರ್ವದಿಸಿದ ಯೆಹೋವನಿಂದಲೇ ಐಶ್ವರ್ಯವನ್ನು ಹೊಂದ ಬೇಕೆಂದು ಅಪೇಕ್ಷಿಸಿದನು.

ಪರಿಶಿಷ್ಟ. ೧೧೦ನೇ ಕೀರ್ತನೇ ೪ನೇ ವಚನದಲ್ಲಿ ಮೆಸ್ಸೀಯನಿಗೆ ನೀನು ಸದಾಕಾಲ ಮೆಲ್ಕೀಚೆದೇಕನ ತರದ ಪ್ರಕಾರ ಯಾಜಕನಾಗಿದ್ದಿ ಎಂದು ಹೇಳುತ್ತಾನೆ. ಇದರಿಂದ ಮೆಲ್ಕೀಚೆದೇಕನು ಕ್ರಿಸ್ತನಿಗೆ ಮುಂಗುರ್ತಾಗಿದ್ದನೆಂದು ತೋರುತ್ತದೆ. ಈ ಸಂಗತಿಯ ವಿವರವು ಇಬ್ರಿ. ೭. ಸಂಧಿಯಲ್ಲಿ ಬರೆದದೆ.

ಮೆಲ್ಕೀಚೆದೇಕನ ಹೆಸರು ಉದ್ಯೋಗ ರಾಜಪಟ್ಟಗಳು ಮರ್ಮದ ರೀತಿಯಿಂದ ದೊಡ್ಡ ಅರಸನ ಪಟ್ಟದಲ್ಲಿ ಮತ್ತಾಯ. ೫. ೪೫. ವಚನ ವಾಸಿಸುವ ನಿತ್ಯ ಯಾಜಕರಾಜನನ್ನು ಮುಂದೋರಿಸುತ್ತವೆ. ಒಂದು ಪರಿಯಾಗಿ ಮೆಲ್ಕೀಚೆದೇಕನು ಅಬ್ರಹಾಮನಿಗಿಂತ ಶ್ರೇಷ್ಟನಾಗಿದ್ದಾನೆ.

ಅಬ್ರಹಾಮನು ದೇಶ ಬೀಜ ರಾಜ್ಯ ಯಾಜಕತ್ವಗಳ ವಾಗ್ದತ್ತವನ್ನೇ ಹೊಂದಿದ್ದನು. ಮೆಲ್ಕೀಚೆದೇಕನಿಗೆ ಅದೆಲ್ಲಾ ಆಗಲೇ ಇತ್ತು. ಮೆಲ್ಕೀಚೆದೇಕನು ಆ ಕಾಲದಲ್ಲಿ ಪಡೆದು ಕೊಂಡ ಮಹಿಮೆಯು ದೊಡ್ಡದಾಗಿತ್ತು. ಆದರೆ ಅಬ್ರಹಾಮನು ಮುಂದಿನ ಕಾಲದಲ್ಲಿ ಅದಕ್ಕಿಂತ ಹೆಚ್ಚಾದ ಮಹಿಮೆಯನ್ನು ಪಡಕೊಳ್ಳಲಿಕ್ಕಿದ್ದನು. ಮೆಲ್ಕೀಚೆದೇಕನು ಹಿಂದಿನ ಕಾಲದಲ್ಲಿದ್ದ ಎಲ್ಲರಿಗಿಂತ ಶ್ರೇಷ್ಟನಾಗಿದ್ದನು. ಅಬ್ರಹಾ

ಮನಲ್ಲಿದ್ದ ವಾಗ್ದತ್ತದ ಒಡಂಬಡಿಕೆ ಎಂಬ ಹೊಸಕಾಲದ ಆರಂಭವು ಉಂಟಾಯಿತು. ಅಬ್ರಹಾಮನ ಯಾಜಕತ್ವವು ಆರೋನನಲ್ಲಿ; ಅಬ್ರಹಾಮನ ರಾಜತ್ವವು ದಾವೀದನಲ್ಲಿ ಎರಡು ಕೂಡಿ ಯೇಸು ಕ್ರಿಸ್ತನಲ್ಲಿ ಪರಿಪೂರ್ಣವಾಗಿ ಪ್ರಕಟವಾಗಲಿಕ್ಕಿದ್ದ ಮುಂದಿನ ಕಾಲವು ಹಿಂದಿನ ಕಾಲಕ್ಕಿಂತ ಬಹು ಹೆಚ್ಚಾದ ಘನವೂ ಮಹಿಮೆಯೂ ಉಳ್ಳದ್ದು. ಮೆಲ್ಕೀಜೆದೇಕನು ಮುಂದಿನ ಕಾಲದ ಮಹಿಮೆಯನ್ನು ತಿಳುಕೊಂಡು ಅಬ್ರಹಾಮನನ್ನು ಆಶೀರ್ವದಿಸುತ್ತಾನೆ. ಅಬ್ರಹಾಮನು ಹಿಂದಿನ ಕಾಲದ ಮಹಿಮೆಯನ್ನು ತಿಳುಕೊಂಡು ಮೆಲ್ಕೀಜೆದೇಕನಿಗೆ ಹತ್ತರಲ್ಲಿ ಒಂದು ಪಾಲು ಕೊಡುತ್ತಾನೆ. ಮೆಲ್ಕೀಜೆದೇಕನು ನೋವಾಹಿಕ ಒಡಂಬಡಿಕೆಯ ಅಂತ್ಯವೂ ಪೂರ್ಣತೆಯೂ ಆಗಿದ್ದು ಅಬ್ರಹಾಮಿಕ ಒಡಂಬಡಿಕೆಯ ಅಂತ್ಯವೂ ಪೂರ್ಣತೆಯೂ ಆದ ಯೇಸು ಕ್ರಿಸ್ತನ ಮುಂಗುರ್ತಾಗಿದ್ದಾನೆ. ಮೆಲ್ಕೀಜೆದೇಕನಲ್ಲಿ ಗತಿಸಿ ಹೋದ ಪೂರ್ವಕಾಲದ ಅಪೂರ್ಣವಾದ ಮನೆವಾರ್ತೆಯಲ್ಲಿ ಕ್ರಿಸ್ತನು ಹೊಸ್ತಾದ ಸದಾಕಾಲ ಇರುವ ಪೂರ್ಣ ಮಹಿಮೆಯುಳ್ಳ ಮನೆವಾರ್ತೆಯಲ್ಲಿ ಯಜಮಾನರು ಆಗಿದ್ದಾರೆ. ಆದದರಿಂದ ಮೆಲ್ಕೀಜೆದೇಕನು ನೆರಳಾದ ಮುಂಗುರ್ತು. ಕ್ರಿಸ್ತನು ಸತ್ಯವಾದ ಮೂಲಮೂರ್ತಿಯು ಆಗಿದ್ದಾನೆ.



## § 18. ಮೊದಲನೇ ಒಡಂಬಡಿಕೆಯ ನಿರ್ಣಯವು ಹಾಗರಳೂ ಇಷ್ಮಯೇಲನೂ

೧) ೧ ಮೋಶೆ. ೧೫. ಯೆಲಾಮಿನ ಬಲವಾದ ಅರಸನ ದ್ವೇಷಕ್ಕೆ ಜಯ ಪಡುವ ಅಬ್ರಹಾಮನಿಗೆ ದರ್ಶನದಲ್ಲಿ ದೇವರ ವಾಕ್ಯವು ಬಂತು. ಏನಂದರೆ — ಅಬ್ರಹಾಮನೇ ಅಂಜ ಬೇಡ! ನಾನು ನಿನ್ನ ಗುರಾಣಿಯೂ ನಿನ್ನ ಮಹಾ ದಾಡ್ಡ ಸಂಬಳವೂ ಆಗಿದ್ದೇನೆ. ಅಬ್ರಹಾಮನು ತನಗೆ ಮಕ್ಕಳಿಲ್ಲದ ಚಿಂತೆಯಿಂದ ಮಾತಾಡಿದಾಗ ಕರ್ತನು ಅವನನ್ನು ಹೊರ ಬರ ಮಾಡಿ ಆಕಾಶವನ್ನು ನೋಡಿ, ನಕ್ಷತ್ರಗಳನ್ನು ಎಣಿಸು, ಅವುಗಳನ್ನು ಎಣಿಕೆ ಮಾಡಲಾಪೆಯೋ ಹೀಗೆಯೇ ನಿನ್ನ ಬೀಜವು ಆಗುವದು ಎಂದು ಹೇಳಲು ಅಬ್ರಹಾಮನು ಕರ್ತನನ್ನು ನಂಬಿದನು. ಅದು ಅವನಿಗೆ ನೀತಿ ಎಂದು ಎಣಿಸಲ್ಪಟ್ಟಿತು. (ಸಮ ನೋಡು. ರೋಮಾ. ೪.)

ಅಬ್ರಹಾಮನು ಈ ಪ್ರಕಾರ ವಾಕ್ಯವನ್ನು ನಂಬಿದ ಮೇಲೆ ಯೆಹೋವನು ಅವನ ವಿಶ್ವಾಸವನ್ನು ದೃಢ ಪಡಿಸ ತಕ್ಕ ಗುರ್ತಾಗಿ ಒಂದು ಒಡಂಬಡಿಕೆಯ ಬಲಿಯನ್ನು

ಅರ್ಪಿಸ ಬೇಕೆಂದು ಅಬ್ರಹಾಮನಿಗೆ ಆಜ್ಞಾಪಿಸಿದನು. ಇದರಿಂದ ದೇವರ ವಾಕ್ಯದಿಂದ ಉಂಟಾದ ವಾಗ್ದತ್ತದ ಒಡಂಬಡಿಕೆಯು ಸ್ಥಿರವಾಯಿತು. ಅಬ್ರಹಾಮನು ಬಲಿಗೆ ನೇಮಕವಾದ ಮೃಗಗಳನ್ನು ಹತ ಮಾಡಿ ಪೀಠದ ಮೇಲೆ ಇಟ್ಟಾಗ ಪಕ್ಷಿಗಳು ಅವುಗಳ ಮೇಲೆ ಇಳಿದವು. (ಇದು ಗಂಡಾಂತರವನ್ನು ಸೂಚಿಸುವ ಶಕುನವಾಗಿತ್ತು.) ಅಬ್ರಹಾಮನು ಅವುಗಳನ್ನು ಹೆದರಿಸಿ ಹೋಗಲಾಡಿಸಿದನು. ಸೂರ್ಯ ಅಸ್ತಮಾನವಾದ ಮೇಲೆ ಅಬ್ರಹಾಮನು ಅಗಾಧ ನಿದ್ರೆಯಲ್ಲಿ ಬಿದ್ದನು. ಅದರಲ್ಲಿ ಭಯದಿಂದಲೂ ಮಹಾ ಅಂಧಕಾರದಿಂದಲೂ ಕಳವಳಗೊಂಡು ಆ ಶಕುನದ ಅಭಿಪ್ರಾಯವೇನೆಂದು ತಿಳುಕೊಂಡನು. ಅದೇನಂದರೆ ಅಬ್ರಹಾಮನ ಪ್ರಕಾರ ಅವನ ಬೀಜವು ಸಹ ಶೋಧನೆಗಳನ್ನೂ ಉಪದ್ರಗಳನ್ನೂ ಸಹಿಸ ಬೇಕು.

ಅಮೋರ್ಯರೂ ಮೊದಲಾದ ಕಾನಾನ್ಯರ ಪಾಪವು ಇನ್ನೂ ಪೂರ್ಣವಾಗದೆ ಇರುವದರಿಂದ ಕಾನಾನ್ ದೇಶವು ಈಗ ಅಬ್ರಹಾಮನಿಗೆ ಸ್ವಾಸ್ಥ್ಯವಾಗಿ ಶಿಕ್ಕದೆ ಅವನ ಬೀಜಕ್ಕೆ ಅವರು ನಾನೂರು ವರ್ಷ ಪರ್ಯಂತರ ಪರದೇಶದಲ್ಲಿ ಅನ್ಯಾಯವನ್ನೂ ಕಷ್ಟವನ್ನೂ ತಾಳಿದ ಮೇಲೆ ಪ್ರಾಪ್ತಿಯಾಗ ಬೇಕು. ಆದರೆ ಯೆಹೋವನು ಅಬ್ರಹಾಮನ ವಂಶದವರನ್ನು ಬಾಧೆ ಪಡಿಸಿದ ಜನಾಂಗಕ್ಕೆ ನ್ಯಾಯತೀರಿಸುವಾಗ ಅವರು ಮಹಾ ಐಶ್ವರ್ಯವನ್ನು ಪಡೆದು ಪರದೇಶದಿಂದ ಹೊರಟು ಬರುವರು. ರಾತ್ರಿ ಬಿದ್ದ ಮೇಲೆ ದೇವರ ಮಹಿಮೆಯು ಪೀಠದಲ್ಲಿ ಇಟ್ಟಿರುವ ಬಲಿಯ ತುಂಡುಗಳ ಮಧ್ಯದಲ್ಲಿ ಹಾದು ಹೋಗುವ ಧೂಮಾಗ್ನಿಸ್ತಂಭವಾಗಿ ಪ್ರತ್ಯಕ್ಷವಾಗುತ್ತದೆ. (ಅದೇ ಪ್ರಕಾರ ಯೆಹೋವನ ಮಹಿಮೆಯು ಮೊದಲು ಮೋಶೆಗೂ ತದನಂತರ ಇಸ್ರಯೇಲನವರ ಪ್ರಜೆಗೂ ಅರಣ್ಯದಲ್ಲಿ ಪ್ರತ್ಯಕ್ಷವಾಯಿತು.)

ಈ ರೀತಿಯಿಂದ ಯೆಹೋವನು ಅಬ್ರಹಾಮನ ಬಲಿಯನ್ನು ಅಂಗೀಕರಿಸಿ ಶಾಶ್ವತ ಮಾಡಿದನು. ಮತ್ತು ಯೆಹೋವನು ಫ್ರಾತ್ ನೀಲ್ ನದಿಗಳಿಗೆ ಮಧ್ಯದಲ್ಲಿರುವ ದೇಶವನ್ನು ಅಬ್ರಹಾಮನಿಗೆ ಪ್ರವಾದನೆಯಿಂದ ಸೂಚಿಸಿ ಈ ದೇಶವನ್ನು ನಿನ್ನ ಬೀಜಕ್ಕೆ ಕಾಡುವೆನೆಂದು ಹೇಳಿದನು.

ಪರಿಶಿಷ್ಟ. ಪಾಪಪತನದ ನಿಮಿತ್ತವಾಗಿ ದೇವರು ನಿರ್ಣೈಸಿ ಪ್ರಕಟ ಮಾಡಿದ ರಕ್ಷಣೆಯ ಆಲೋಚನೆಯಿಂದ ನಿರ್ಮಾಣನೇಮಕ್ಕೆ ಬದಲಾಗಿ ರಕ್ಷಣ್ಯನೇಮವು ಸ್ಥಾಪಿಸಲ್ಪಟ್ಟಿತು. ನಿರ್ಮಾಣನೇಮದ ಪ್ರಕಾರ ಮನುಷ್ಯರು ಅದನ್ನು ಪೂರೈಸುವದರಿಂದಲೇ ನೀತಿವಂತರಾಗುತ್ತಿದ್ದರು. ಆದರೆ ಮನುಷ್ಯರು ಪಾಪಿಗಳಾದ ಮೇಲೆಯೂ ಆದಿಯಲ್ಲಿದ್ದ ಅಪೂರ್ಣ ಪರಿಶುದ್ಧತ್ವವನ್ನು ಕಳಕೊಂಡ ಮೇಲೆಯೂ ಪೂರ್ಣ

ಪರಿಶುದ್ಧತ್ವವನ್ನು ಸಂಪಾದಿಸುವದಕ್ಕೆ ಸಾಮರ್ಥ್ಯವಿಲ್ಲದವರಾದರು. ದೇವರು ಸೈತಾನನ ಮೋಸದಿಂದುಂಟಾದ ಪಾಪಪತನವು ಲೋಕನಿರ್ಮಾಣದ ಆಲೋಚನೆಯನ್ನು ನಿರರ್ಥಕ ಮಾಡದ ಹಾಗೆ ದೇವರು ನಡುವೆ ಬಂದು ರಕ್ಷಣ್ಯನೇಮವನ್ನು ಸ್ಥಾಪಿಸಿದನು. ಹೀಗಿರಲಾಗಿ ಪಾಪಿಯಾದ ಮನುಷ್ಯನು ರಕ್ಷಣ್ಯನೇಮಕ್ಕೆ ವಿಧೇಯನಾಗುವದರಿಂದ ನೀತಿವಂತನಾಗುತ್ತಾನೆ. ಈ ನೇಮದ ಪ್ರಕಾರ ಮನುಷ್ಯನು ಸ್ವಯಿಚ್ಛೆಯ ಸಾಧನೆಯಿಂದ ನೀತಿಯನ್ನು ಪಡದು ಕೊಳ್ಳುವದು ಅವಶ್ಯವಾಗಿರುವದಿಲ್ಲ. ಮನುಷ್ಯನು ರಕ್ಷಣ್ಯಕರವಾದ ದೇವರ ಕೃಪೆಯ ಕೆಲಸಕ್ಕೆ ಅಡ್ಡಿ ಮಾಡದೆ ದೇವರು ತನಗೆ ಪ್ರಕಟ ಮಾಡುವ ರಕ್ಷಣೆಯನ್ನು ವಿಶ್ವಾಸದಿಂದ ಅಂಗೀಕರಿಸಿದರೆ ಸಾಕಾಗಿರುವದು. ಹೀಗೆ ನೀತಿಯನ್ನು ಹೊಂದುವ ಹೊಸ ಮಾರ್ಗವು ಮನುಷ್ಯನಿಗೆ ಸಿದ್ಧವಾಯಿತು. ಅದೇನಂದರೆ—ದೇವರು ಉಂಟು ಮಾಡಿದ ರಕ್ಷಣೆಯನ್ನು ಸ್ವಯಿಚ್ಛೆಯುಳ್ಳ ಮನುಷ್ಯನು ಪೂರ್ಣ ಹೃದಯದಿಂದ ಅಂಗೀಕರಿಸುವ ವಿಶ್ವಾಸದ ಮಾರ್ಗವು ಹ್ಯಾಗಂದರೆ—ವಿಶ್ವಾಸಿಸುವವನು ದೇವರು ಕೊಡುವ ರಕ್ಷಣೆಯನ್ನು ಅಂಗೀಕರಿಸಿದ ರಕ್ಷಣೆಯ ಮೂಲವಾಗಿ ನೀತಿವಂತನೂ ಪರಿಶುದ್ಧನೂ ಆಗುತ್ತಾನೆ. ಅವನ ವಿಶ್ವಾಸವು ಅವನಿಗೆ ನೀತಿ ಎಂದು ಎಣಿಸಲ್ಪಡುವದು. ಅಬ್ರಹಾಮನು ಈ ರಕ್ಷಣ್ಯನೇಮವನ್ನು ತಿಳುಕೊಂಡು ಅನುಸರಿಸಿ ಅದರ ಮುಖಾಂತರ ರಕ್ಷಣೆಯ ಫಲವನ್ನು ಹೊಂದಿದವರಲ್ಲಿ ಪ್ರಥಮನೂ ಶ್ರೇಷ್ಠನೂ ಆಗಿರುವದರಿಂದ ವಿಶ್ವಾಸಿಗಳ ತಂದೆ ಎಂದು ಹೆಸರ್ಗೊಂಡನು.

೨) ೧ಮೋಶೆ. ೧೬ ಸಂಧಿ. ಸಾರೈ ತಾನು ವಾಗ್ದತ್ತಬೀಜದ ತಾಯಿಯಾಗುವದಿಲ್ಲವೆಂದು ನಿರಾಶೆಯಾಗಿ ಗಂಡನಾದ ಅಬ್ರಹಾಮನಿಗೆ ಮಿಸ್ರ ದೇಶಸ್ಥಳಾದ ಹಾಗರಳನ್ನು ಉಪಪತ್ನಿಯಾಗಿ ತೆಗದು ಕೊಳ್ಳಬೇಕೆಂದು ಆಲೋಚನೆ ಹೇಳಿದಳು. ಇವಳು ಗರ್ವ ತೋರಿಸಿದಾಗ ಸಾರೈ ಅವಳನ್ನು ತಗ್ಗಿಸಿದದರಿಂದ ಓಡಿ ಹೋದಳು. ಆದರೆ ಕರ್ತನ ದೂತನು ಅವಳನ್ನು ತಿರಿಗಿ ಕರೆದು ಕೊಂಡು ಬಂದನು. ತರುವಾಯ ಇಷ್ಮಯೇಲನನ್ನು ಹೆತ್ತಳು.

ಪರಿಶಿಷ್ಟ. ಕರ್ತನ ದೂತನು ಎಂಬದು ಬೇರೆ ಬೇರೆ ಕಾಲದಲ್ಲಿ ಅಬ್ರಹಾಮನು ಮೊದಲಾದ ಹಳೇ ಒಡಂಬಡಿಕೆಯ ಭಕ್ತರಿಗೆ ಪ್ರತ್ಯಕ್ಷವಾದ ದೇವರ ಹೆಸರು ಇದಕ್ಕೆ ದೃಷ್ಟಾಂತವೇನಂದರೆ—ಅವನು ತಾನು ಕರ್ತನನ್ನಿಸಿ ಕೊಂಡು ತನಗೆ ದಿವ್ಯ ತ್ರಾಣ ಮಾನ ನಾಮಗಳುಳ್ಳವನಾಗಿ ಭಕ್ತರ ಪ್ರಾರ್ಥನೆಗಳನ್ನೂ ಬಲಿಗಳನ್ನೂ ಅಂಗೀಕರಿಸುತ್ತಾನೆ. ಅವನನ್ನು ಕಂಡವರು ಅವನಿಗೆ ದೇವರೆಂದು ಹೆಸರಿಡುತ್ತಾರೆ. ಬರು

೭*

ವ ಕಾಲದಲ್ಲಿ ಮನುಷ್ಯಭಾವವಾಗಿ ಹುಟ್ಟಿ ಮನುಷ್ಯರಲ್ಲಿ ತನ್ನನ್ನು ಪ್ರಕಟಿಸ ಬೇಕೆಂದು ನಿರ್ಣಯ ಮಾಡಿ ಕೊಂಡ ಯೆಹೋವಾ ಮುಂದಿನ ಕಾರ್ಯಕ್ಕೆ ಮುಂಗುರ್ತಾಗಿ ಆಯಾ ವೇಳೆಯಲ್ಲಿ ಮನುಷ್ಯರೂಪವಾಗಿ ಹಳೇ ಒಡಂಬಡಿಕೆಯ ಶ್ರೇಷ್ಠರಿಗೆ ಪ್ರತ್ಯಕ್ಷವಾಗುತ್ತಾ ಇದ್ದನು.

## § 19. ಒಡಂಬಡಿಕೆಯ ೨ನೇ ನಿರ್ಣಯವು

೧ ಮೋಶೆ. ೧೭ ಸಂಧಿ. ಅಬ್ರಹಾಮನು ತೊಂಬತ್ತೊಂಬತ್ತು ವರುಷದವನಾಗಿದ್ದಾಗ ಕರ್ತನು ಅವನಿಗೆ ಪ್ರತ್ಯಕ್ಷವಾಗಿ ಹೇಳಿದ್ದೇನಂದರೆ: ನನ್ನ ಮುಂದೆ ನಡೆದು ಚಿತ್ತನಾಗಿರು, ನಿನ್ನ ಸಂಗಡಲೂ ನಿನ್ನ ಬಳಿಕ ಬರುವ ನಿನ್ನ ಬೀಜದ ಸಂಗಡಲೂ ನನ್ನ ಒಡಂಬಡಿಕೆಯನ್ನು ನಿತ್ಯ ಒಡಂಬಡಿಕೆಯಾಗಿ ಸ್ಥಾಪಿಸುತ್ತೇನೆ. ಆದದರಿಂದ ನೀನೂ ನಿನ್ನ ಬಳಿಕ ಬರುವ ನಿನ್ನ ಬೀಜವೂ ನನ್ನ ಒಡಂಬಡಿಕೆಯನ್ನು ಕೈಕೊಳ್ಳ ಬೇಕು. ಮತ್ತು ಈ ಹೊಸ ಪ್ರವಾದನೆಯಲ್ಲಿ ತೋರುವದೇನಂದರೆ — ಅಬ್ರಾಮನು ಅನೇಕ ಜನಾಂಗಗಳಿಗೆ ತಂದೆಯಾಗುವನು; ಅರಸುಗಳು ಅವನಿಂದ ಹುಟ್ಟುವರು ಆದದರಿಂದ ಅವನ ಹೆಸರು ಇನ್ನು ಮುಂದೆ ಉನ್ನತನಾದ ತಂದೆ ಎಂಬ ಅಭಿಪ್ರಾಯವುಳ್ಳ ಅಬ್ರಾಮ್ ಎಂಬದಲ್ಲ, ಸಮೂಹದ ತಂದೆ ಎಂದು ಅಭಿಪ್ರಾಯವುಳ್ಳ ಅಬ್ರಹಾಮ್ ಎಂಬದಾಗ ಬೇಕು. ಇದಲ್ಲದೆ ರಾಣಿ ಎಂಬ ಅಭಿಪ್ರಾಯವುಳ್ಳ ಸಾರೈ ಎಂಬ ಹೆಸರು ಫಲಭರಿತಳು ಎಂಬ ಅರ್ಥವುಳ್ಳ ಸಾರಾ ಎಂಬದಾಯಿತು. — ಒಡಂಬಡಿಕೆಯ ಬಲಿಯಿಂದ ಉಂಟಾದ ಒಡಂಬಡಿಕೆಯ ನಿರ್ಣಯವು ದೇವರಿಂದಲೇ ಆಯಿತು. ಅಬ್ರಹಾಮನು ಅಲ್ಲ; ದೇವರು ಮಾತ್ರ ಅದರಲ್ಲಿ ವಾಕ್ಯವನ್ನು ಕಾಟ್ಟನು. ಆದರೆ ಈಗ ಒಡಂಬಡಿಕೆಯ ಸ್ಥಾಪನೆಯು ಪೂರ್ತಿಯಾಗುವ ಹಾಗೆ ಅಬ್ರಹಾಮನು ದೇವರಿಗೆ ಮಾತು ಕೊಡ ಬೇಕಾಗಿತ್ತು. ಅಬ್ರಹಾಮನೂ ಅವನ ವಂಶದವರೂ ಒಡಂಬಡಿಕೆಯ ನ್ಯಾಯವನ್ನು ಮರಿಯದ ಹಾಗೆ ದೇವರು ಶಿಶುಗಳಲ್ಲಿ ೮ನೇ ದಿವಸದಲ್ಲಿ ಆಗ ಬೇಕಾದ ಪರಿಚ್ಛೇದನೆಯನ್ನು ಒಡಂಬಡಿಕೆಯ ಗುರ್ತಾಗಿ ನೇಮಿಸಿದನು. ಅಬ್ರಹಾಮನು ವೃದ್ಧಳಾದ ಸಾರಳಿಂದ ತನಗೆ ಮಕ್ಕಳು ಹುಟ್ಟುವವೆಂದು ಇನ್ನು ಚನ್ನಾಗಿ ಗ್ರಹಿಸದೆ ಇದ್ದದರಿಂದ ಇಷ್ಮಯೇಲನು ನಿನ್ನ ಮುಂದೆ ಬದುಕಲಿ ಎಂದು ಹೇಳಲು, ಕರ್ತನು ಸ್ಪಷ್ಟವಾದ ಮಾತುಗಳಿಂದ ಹೌದು ನಿನ್ನ ಹೆಂಡತಿಯಾದ ಸಾರಳು ನಿನಗೆ ಮಗನನ್ನು ಹೆರುವಳು; ನೀನು ಅವನಿಗೆ ಇಸಾಕನೆಂದು ಹೆಸರಿಡ ಬೇಕು. ಅವನ ಸಂ

ಗಡಲೂ, ಅವನ ಬಳಿಕ ಬರುವ ಅವನ ಬೀಜದ ಸಂಗಡಲೂ, ನನ್ನ ಒಡಂಬಡಿಕೆಯನ್ನು ಕಟ್ಟಿ ಕೊಳ್ಳುವೆನು. ಇಷ್ಮಯೇಲನ ವಿಷಯದಲ್ಲಿಯೂ ನಿನ್ನನ್ನು ಕೇಳಿದ್ದೇನೆ. ಇಗೋ ನಾನು ಅವನನ್ನು ಆಶೀರ್ವದಿಸಿ ಬಹಳವಾಗಿ ಹೆಚ್ಚಿಸುವೆನು. ಆದರೆ ಬರುವ ವರ್ಷದಲ್ಲಿ ಸಾರಳು ಹೆರಲಿಕ್ಕಿರುವ ಇಸಾಕನ ಸಂಗಡಲೇ ನನ್ನ ಒಡಂಬಡಿಕೆಯನ್ನು ಸ್ಥಾಪಿಸುವೆನು.

ಪರಿಶಿಷ್ಟ: ಪರಿಚ್ಛೇದನೆಯು ವಾಗ್ದತ್ತದ ಒಡಂಬಡಿಕೆಯಲ್ಲಿ ಶೇರೋಣಕ್ಕೆ ಕರಣವೂ ಈಡೂ ಆಗಿತ್ತು. ಪರಿಚ್ಛೇದನೆಯು ವಾಗ್ದತ್ತ ಬೀಜದಲ್ಲಿ (ಒಡಂಬಡಿಕೆಯ ಜನಾಂಗವಾದ ಇಸ್ರಯೇಲನವರಲ್ಲಿಯೂ ಒಡಂಬಡಿಕೆಯ ಜನಾಂಗದ ಅರಸನಾದ ಯೇಸು ಕ್ರಿಸ್ತನಲ್ಲಿಯೂ) ಆಗ ಬೇಕಾಗಿತ್ತು. ಅದು ಆತ್ಮಿಕವಾದ ಕಾರ್ಯವಲ್ಲ, ಆತ್ಮಿಕವಾದ ಕಾರ್ಯದ ಸಾಕ್ಷಿಯೂ ಮುಂಗುರ್ತೂ ಆಗಿತ್ತು. ಅದರ ಅಭಿಪ್ರಾಯ ಎರಡು ವಿಧವಾದದ್ದು.

I ತಂದೆತಾಯಿಗಳಿಂದ ಹುಟ್ಟುವದರಿಂದಲೇ ವಾಗ್ದತ್ತದ ಬೀಜದವರಾದರೂ, ದೇವರ ಒಡಂಬಡಿಕೆಯಲ್ಲಿ ಶೇರುವದಕ್ಕೆ ಯೋಗ್ಯರಾಗಿರುವದಿಲ್ಲವೆಂಬ ಸೂಚನೆ.

II ಬರುವ ಕಾಲದಲ್ಲಿ ಜನ್ಮಪಾಪದ ದೋಷವಿಲ್ಲದವನೊಬ್ಬನು ಹುಟ್ಟ ಬೇಕೆಂಬ ಸೂಚನೆಯು ಪರಿಚ್ಛೇದನೆಯ ತಾತ್ಪರ್ಯವು ನಿರ್ಮಾಣಿಕನಾದ ದೇವರ ಸರ್ವತ್ರಾಣದಿಂದ ಹುಟ್ಟಿದ ಮನುಷ್ಯನಾದ ಯೇಸು ಕ್ರಿಸ್ತನ ಜನ್ಮದಲ್ಲಿ ಪೂರ್ತಿಯಾಯಿತು. (ಲೂಕ. ೧, ೩೫. ಯೋಹಾನ. ೧, ೧೩.)—ಗಂಡುಶಿಶುಗಳೆಲ್ಲಾ ಹುಟ್ಟಿದ ೮ನೇ ದಿವಸದಲ್ಲಿ ಪರಿಚ್ಛೇದನೆಯ ಮುಖಾಂತ್ರ ದೇವರ ಒಡಂಬಡಿಕೆಯಲ್ಲಿ ಶೇರ ಬೇಕಾಗಿತ್ತು. ಇದರ ಅರ್ಥವೇನಂದರೆ—೮ನೇ ದಿವಸವು ಹೊಸ ಸಪ್ತಕದ ಆರಂಭವು. ಶಿಶುವು ಹುಟ್ಟಿದ ಸಪ್ತಕವು ತೀರಿದ ಮೇಲೆ ಅದು ಹೊಸ ಸಪ್ತಕದ ಆದಿಯಲ್ಲಿ ದೇವರ ರಾಜ್ಯದಲ್ಲಿ ಪ್ರವೇಶಿಸಿ ಹೊಸ ಸ್ಥಿತಿಯಲ್ಲಿ ಶೇರ ಬೇಕಾಗಿತ್ತು.



## § 20. ಕರ್ತನು ಮಮ್ರೆಯಲ್ಲಿ ಅಬ್ರಹಾಮನಿಗೆ ಪ್ರತ್ಯಕ್ಷವಾದದ್ದು. ಸೊದೊಮ್ ಗೊಮೊರ ಎಂಬ ಪಟ್ಣಗಳು ಹಾಳಾದದ್ದು

೧) ೧ ಮೋಶೆ. ೧೮. ಸಂಧಿ ಅಬ್ರಹಾಮನು ಮೂರು ಮಂದಿ ಆತಿಥಿಯರನ್ನು ಕಂಡು ಮರ್ಯಾದೆಯಿಂದ ಸತ್ಕರಿಸಿ ತನ್ನ ಗುಡಾರದಲ್ಲಿ ಶೇರಿಸಿ ಕೊಂಡನು. ಆ ಮೂವರಲ್ಲಿ ಒಬ್ಬನು ಕರ್ತನ ದೂತನಾಗಿದ್ದನು. ಅವರು ಅಬ್ರಹಾಮನನ್ನು ಅಲ್ಲ; ಅ

ವನ ಹೆಂಡತಿಯಾದ ಸಾರಳನ್ನು ನೋಡಲಿಕ್ಕೆ ಬಂದದರಿಂದ ಅವರು ಬಂದಾಗಲೇ ಅಬ್ರಹಾಮನಿಗೆ ನಿನ್ನ ಹೆಂಡತಿಯಾದ ಸಾರಳು ಎಲ್ಲಿ ಎಂದು ಕೇಳಿದರು. ಯಾಕಂದರೆ ಸಾರಳು ಸಹ ವಾಗ್ದತ್ತಬೀಜದ ತಾಯಿಯಾಗುವ ಮೊದಲು ವಿಶ್ವಾಸವನ್ನು ಹೊಂದಬೇಕಾಗಿತ್ತು. (ಇಬ್ರಿಯರ ೧೧. ಸಂಧಿ. ೧೧ನೆ ಶ್ಲೋಕ) ಸಾರಳು ಗುಡಾರದ ಅಂತರ್ಗೃದಲ್ಲಿ ನಿಂತು ಹೊಂಚು ಕೇಳುವಾಗ ಯೆಹೋವನು ಅವಳು ಒಂದು ವರ್ಷದ ಒಳಗೆ ಮಗನನ್ನು ಹೆರುವಳೆಂಬ ವಾಗ್ದತ್ತವನ್ನು ತಿರಿಗಿ ಹೇಳಿದನು. ಸಾರಳು ಅದನ್ನು ಕೇಳಿದಳು; ಕೇಳುವಾಗ ಅವಳು ಈ ಮಾತು ಹೇಳುವವನ ತ್ರಾಣವನ್ನು ನೆನಸದೆ ತನ್ನ ಸತ್ತ ಶರೀರವನ್ನು ಆಲೋಚಿಸಿ ಈಗಿನ ಸ್ಥಿತಿಗೂ ವಾಗ್ದತ್ತದ ಮಾತಿಗೂ ಇರುವ ವ್ಯತ್ಯಾಸವನ್ನು ನೋಡಿದದರಿಂದ ಅವಳಿಗೆ ನಗೆ ಬಂತು; ಆಗ ಕರ್ತನು ಅವಳ ಸಂಗಡ ಸಂಭಾಷಣೆ ಮಾಡಿ, ನಗಾಡಿದ್ದು ತಪ್ಪು ಎಂದು ತೋರಿಸಿ ಮುಂಚೆ ಕೊಟ್ಟ ವಾಗ್ದತ್ತವನ್ನು ತಿರಿಗಿ ಪೂರ್ಣ ನಿಶ್ಚಯದಿಂದ ಹೇಳಿ, ತಾನು ಸರ್ವತ್ರಾಣಿಯಾಗಿರುವದನ್ನು ಸೂಚಿಸುತ್ತಾನೆ. ಆ ಮೇಲೆ ಸಾರಳು ಅವಿಶ್ವಾಸದ ನಗೆಗೆ ನಾಚಿಕೆ ಪಟ್ಟು ವಿಶ್ವಾಸಿಸಲಾರಂಭಿಸಿದಳೆಂದು ನೆನಸ ತಕ್ಕದ್ದು.

ಅಬ್ರಹಾಮನು ಅತಿಥಿಗಳನ್ನು ಸಾಗ ಕಳುಹಿಸಿದನು. (ಅಬ್ರಹಾಮನು ತನಗೆ ಉಂಟಾದ ಒಡಂಬಡಿಕೆಯಿಂದ ದೇವರ ಸ್ನೇಹಿತನಾದನು. ಯಾಕೋಬ. ೨, ೨೩.) ಮಾರ್ಗದಲ್ಲಿ ಕರ್ತನು, ಸ್ನೇಹಿತನು ಸ್ನೇಹಿತನ ಸಂಗಡ ಮಾತಾಡುವ ಪ್ರಕಾರ ಅಬ್ರಹಾಮನಿಗೆ, ತಮ್ಮ ಪಾಪದ ಅಳತೆಯನ್ನು ತುಂಬಿಸಿದ ಸಿದ್ದಿಮ್ ತಗ್ಗಿನ ಪಟ್ಣಗಳಿಗೆ ನ್ಯಾಯತೀರಿಸುವದಕ್ಕಾಗಿ ತಾನು ಬಂದೆನೆಂದು ತಿಳಿಸಿದನು. ಆಗ ಅಬ್ರಹಾಮನು ಎಲ್ಲಾ ಜನಾಂಗಗಳಿಗೆ ಬರುವ ಆಶೀರ್ವಾದ ರಕ್ಷಣೆಗಳ ಬಾಧ್ಯಸ್ಥನೂ ಮಧ್ಯಸ್ಥಗಾರನೂ ಆಗಿರುವ ಉದ್ಯೋಗಕ್ಕೆ ಅನುಕೂಲವಾಗಿ ಧೈರ್ಯಗೊಂಡು ನಾಶನ ಹೋಗಬೇಕಾದ ಪಟ್ಣಗಳಿಗಾಗಿ ವಿಜ್ಞಾಪನೆ ಮಾಡಿ ದೇವರ ಕೋಪದ ನ್ಯಾಯಸ್ಥಾನದಿಂದ ದೇವರ ಕೃಪೆಯ ನ್ಯಾಯಸ್ಥಾನಕ್ಕೆ ನ್ಯಾಯವನ್ನೇರ ಮಾಡಿದನು.

ತನ್ನನ್ನು ಬಹಳವಾಗಿ ತಗ್ಗಿಸಿ ಕೊಳ್ಳುತ್ತಾ (ನಾನು ಮಣ್ಣೂ ಬೂದಿಯೂ ಆಗಿದ್ದರೂ ಕರ್ತನ ಸಂಗಡ ಮಾತಾಡುವದಕ್ಕೆ ಧೈರ್ಯಗೊಂಡೆನು ಎಂದು ಅವನು ತಿರಿಗಿ ತಿರಿಗಿ ಹೇಳಿದನು.) ಹೆಚ್ಚೆಚ್ಚಾದ ಆಸಕ್ತಿಯಿಂದಲೂ ಧೈರ್ಯದಿಂದಲೂ ಬೇಡಿಕೊಂಡದರಿಂದ ಯೆಹೋವನು ಅವನಿಗೆ ಸಮ್ಮತಿಸಿ ಈ ಪಟ್ಣಗಳಲ್ಲಿ ಹತ್ತು ಮಂದಿ ನೀತಿವಂತರಾದರೂ ಇದ್ದರೆ ಆ ಹತ್ತು ಮಂದಿಯ ನಿಮಿತ್ತ ಅವುಗಳನ್ನು ಹಾಳು ಮಾಡೆನು ಎಂದು ಮಾತು ಕೊಟ್ಟನು.

೨) ೧ ಮೋಶೆ. ೧೯ ಸಂಧಿ. ಯೆಹೋವನ ಇಬ್ಬರು ಸಂಗಡಿಗರು ಅಸ್ತುರೊಳಗೆ ಸೊದೋಮಿಗೆ ಹೋಗಿ ಆತಿಥಿಪ್ರಿಯನಾದ ಲೋಟನಿಂದ ಮನೆಯಲ್ಲಿ ಸೇರಿಸಿ ಕೊಳ್ಳಲ್ಪಟ್ಟರು. ಸೊದೋಮ್ಯರು ಪರಜನರು ಬಂದರೆಂದು ತಿಳುಕೊಂಡ ಮೇಲೆ ಲೋಟನ ಮನೆಗೆ ಬಂದು ಅವರಿಗೆ ಬಲಾತ್ಕಾರ ಮಾಡ ಮನಸ್ಸಾಗಿದ್ದರು. ಲೋಟನು ಆತಿಥಿಗಳನ್ನು ರಕ್ಷಿಸುವದಕ್ಕೆ ತನ್ನ ಪ್ರಾಣವನ್ನು ಪ್ರಿಯವೆಂದೆಣಿಸದೆ ಪ್ರಯತ್ನ ಮಾಡಿದನು. ಆ ದೂತರು ಅವನನ್ನು ತಪ್ಪಿಸಿ ದುಷ್ಟ ಸೊದೋಮ್ಯರಿಗೆ ಕಣ್ಣು ಕಟ್ಟಿದರು. ಮಾರಣೆ ದಿವಸ ಲೋಟನು ತನ್ನ ಮನೆಯವರ ಸಂಗಡ ಬಹಳ ಬೆಳಿಗ್ಗೆ ಎದ್ದು ದೂತರಿಬ್ಬರು ತೋರಿಸುವ ಮಾರ್ಗದಲ್ಲಿ ಸೊದೋಮ್ ಪಟ್ಟಣವನ್ನು ಬಿಟ್ಟು ಹೋದನು. ಅವನ ಅಳಿಯಂದ್ಯರಾಗ ಬೇಕಾದ ಇಬ್ಬರು ಸೊದೋಮಿನವರಿಗೆ ತನ್ನ ಕೂಡಾ ಓಡಿ ಹೋಗ ಬೇಕೆಂದು ಹೇಳಲು, ಅವರು ಅವನಿಗೆ ಹಾಸ್ಯ ಮಾಡಿದರು. ಅವರು ಪಟ್ಟಣದಿಂದ ಹೊರಟ ಮೇಲೆ ಕರ್ತನು ಗಂಧಕವನ್ನೂ ಬೆಂಕಿಯನ್ನೂ ಆಕಾಶದಿಂದ ಸುರಿಯ ಮಾಡಿದನು. ಸೊದೋಮ್, ಗೊಮೊರಾ, ಅದಮಾ, ಚೆಬೊಯಿಮ್ ಎಂಬ ಪಟ್ಟಣಗಳು ಹಾಳಾದವು. ಅವುಗಳ ಸ್ಥಳದಲ್ಲಿ ದೇವರು ಪಾಪಕ್ಕೆ ಶಿಕ್ಷೆ ಕೊಡುವ ನ್ಯಾಯಾಧಿಪತಿಯಾಗಿದ್ದಾನೆಂಬುವದನ್ನು ಆ ದೇಶಸ್ಥರ ನೆನಪಿಗೆ ನಿತ್ಯವಾಗಿ ತರುವ ಸತ್ತಸಮುದ್ರವು ಉಂಟಾಯಿತು. ಲೋಟನ ಹೆಂಡತಿ, ದೂತರು ವಿಶೇಷವಾಗಿ ಕೊಟ್ಟ ಅಪ್ಪಣೆಗೆ ವಿರೋಧವಾಗಿ ಹಿಂದಕ್ಕೆ ನೋಡಿದದರಿಂದ ಉಪ್ಪಿನ ಸ್ಥಂಭವಾದಳು. ಲೋಟನು ಬೇಲಾ ಎಂಬ ಚೋವರಿಗೆ ಓಡಿ ಹೋದನು. (ಅದು ಸತ್ತಸಮುದ್ರದ ದಕ್ಷಿಣತುದಿಯ ಹತ್ತರ ಇರುತ್ತದೆ.) ಲೋಟನು ಬೇಡಿ ಕೊಂಡದರಿಂದ ಕರ್ತನು ಅದನ್ನು ಆಶ್ರಯ ಸ್ಥಳವಾಗಿ ಕೊಟ್ಟನು. ಅಲ್ಲಿ ಲೋಟನ ಕುಮಾರ್ತೆಯರು ಅಸಹ್ಯವಾದ ಪಾಪವನ್ನು ಮಾಡಿ ಅಮೋನ್ಯರಿಗೂ ಮೊವಾಬ್ಯರಿಗೂ ಪೂರ್ವಜರಾದ ಅಮ್ಮೋನ್ ಮೊವಾಬರನ್ನು ಹೆತ್ತರು.

ಪರಿಶಿಷ್ಟ. ದೂತರು ಲೋಟನಿಗೂ ಅವನ ಜನರಿಗೂ ಮಾರ್ಗದಲ್ಲಿ ಮುಖ ತಿರುಗಿಸಿ ನಿಲ್ಲ ಬಾರದೆಂದು ಕೊಟ್ಟ ಆಜ್ಞೆಗೂ ಅದರ ಮೀರುವಿಕೆಯಿಂದ ಬಂದ ಶಿಕ್ಷೆಗೂ ಎರಡು ವಿಧವಾದ ಕಾರಣ.

I ಆ ಪಟ್ಟಣಗಳೂ ಅವುಗಳ ಪ್ರದೇಶವೂ ಬೆಂಕಿಯ ಮಳೆಯಿಂದ ನಾಶವಾಗುವ ವೇಳೆಯಲ್ಲಿ ಆ ಸ್ಥಳದಿಂದ ಓಡಿ ಹೋಗುವವನು ನಿಂತು ಮುಖ ತಿರುಗಿಸುವದರಲ್ಲಿ ವಿಷವಾದ ಶೆಕೆಯಿಂದ ಹಿಡಿಯಲ್ಪಡುವ ಗಂಡಾಂತರದಲ್ಲಿ ಬಿದ್ದನು.

II ದೂತರ ಮಾತು ಮೀರಿ ಮುಖ ತಿರುಗಿಸುವವನು ಅವಿಶ್ವಾಸಿಯೂ ಭಯಂಕರವಾದ ರೀತಿಯಿಂದ ನಾಶವಾಗುವ ಪಟ್ಟಣಗಳನ್ನೂ ಅವುಗಳಲ್ಲಿ ನಡದ ಪಾಪಗಳನ್ನೂ

ಪ್ರೀತಿ ಮಾಡುವವನಾಗಿ ಕಾಣಿಸಿದನು. ಆದದರಿಂದ ಲೋಟನ ಹೆಂಡತಿಗೆ ಬಂದ ಶಿಕ್ಷೆಯು ಹೆಚ್ಚು ಕಠಿಣವಾದದ್ದೆಂದು ತೋರುವದಿಲ್ಲ. ಯೇಸು ಕ್ರಿಸ್ತನು ಅಂತ್ಯಕಾಲದವರನ್ನು ಎಚ್ಚರಿಸುವದಕ್ಕೆ ಲೋಟನ ಹೆಂಡತಿಯ ನೆನಪು ಮಾಡಿ ಕೊಳ್ಳಿರಿ ಎಂದು ಹೇಳಿದನು. (ಲೂಕ. ೧೭, ೩೨.)



## § 21. ಇಸಾಕನ ಜನನವೂ ಬಲಿಯರ್ಪಣೆಯೂ

೧) ೧ಮೋಶೆ. ೨೧ಸಂಧಿ. ಕಡೆಯಲ್ಲಿ ಅಬ್ರಹಾಮನು ನೂರು ವರ್ಷದವನಾಗಿಯೂ ಸಾರಳು (೯೦) ವರ್ಷದವಳಾಗಿಯೂ ಇರುವಾಗ ವಾಗ್ದತ್ತದ ಮಗನು ಹುಟ್ಟಿ ಇಸಾಕನೆಂದು ಕರಿಯಲ್ಪಟ್ಟನು. ಹಾಗರಳ ಮಗನಾದ ಕಾಡ ಮನಸ್ಸುಳ್ಳ ಇಷ್ಮಯೇಲನು ಶಿಶುವಿಗೆ ಹಾಸ್ಯ ಮಾಡಿದದರಿಂದ ಸಾರಳು ದಾಸಿಯನ್ನು ಹೊರಗೆ ಹಾಕ ಬೇಕೆಂದು ಅಬ್ರಹಾಮನಿಗೆ ಹೇಳಿದಳು. ಕರ್ತನು ಸಹಾ ಹೀಗೆ ಮಾಡ ಬೇಕೆಂದು ಅಬ್ರಹಾಮನಿಗೆ ಆಜ್ಞಾಪಿಸಿದನು. ಆದರೆ ಇಷ್ಮಯೇಲನ ವಿಷಯವಾಗಿ ವಿಶೇಷವಾದ ವಾಗ್ದತ್ತವನ್ನು ಸಹ ಕೊಟ್ಟನು. ಅಬ್ರಹಾಮನು ಕರ್ತನಿಗೆ ಕಿವಿ ಕೊಟ್ಟು ಹಾಗರಳನ್ನೂ (೧೫ವರ್ಷಕ್ಕೆ ಕಡಿಮೆ ಪ್ರಾಯದವನಲ್ಲದ) ಮಗನಾದ ಇಷ್ಮಯೇಲನನ್ನೂ ಕಳುಹಿಸಿ ಬಿಟ್ಟನು. ಅವರಿಬ್ಬರು ಅರಣ್ಯವನ್ನು ದಾಟುವಾಗ (ಬೇರ್ಷೆಬ ಅರಣ್ಯ) ದಾಹದಿಂದ ಸಾಯುವ ಗಂಡಾಂತರದಲ್ಲಿರುತ್ತಿರಲಾಗಿ ಕರ್ತನ ದೂತನು ಅವರನ್ನು ಸಂರಕ್ಷಿಸಿದನು.

ಇಷ್ಮಯೇಲನು ಅರಣ್ಯದಲ್ಲಿ ಬೆಳದು ಶೂರನಾಗಿ ಹೆಸಗಾರ್ರಿಂಡನು. ಅವನ ಕೈ ಎಲ್ಲರಿಗೆ ವಿರೋಧವಾಗಿಯೂ ಎಲ್ಲರ ಕೈ ಅವನಿಗೆ ವಿರೋಧವಾಗಿಯೂ ಇತ್ತು. (೧ಮೋಶೆ ೧೬, ೧೨.) ಅವನು ಹನ್ನೆರಡು ಅರಾಬರ ಕುಲಗಳ ಅರಸುಗಳಿಗೆ ಪೂರ್ವಜನಾದನು. (೨೫. ಸಂ ೧೨ ಇತ್ಯಾದಿ)

ಪ ರಿ ಶಿ ಷ್ಟ. ಇಸಾಕನ ಜನನದಿಂದ ವಾಗ್ದತ್ತಬೀಜದ ವಂಶಾವಳಿಯಲ್ಲಿ ಹೊಸ ಕಾರ್ಯವು ಕಾಣ ಬರುತ್ತದೆ. ಏನಂದರೆ ಇಸಾಕನು ಬಂಜೆಯಾಗಿದ್ದ ತಾಯಿಯಿಂದ ಅವಳು ತೊಂಭತ್ತು ವರ್ಷದವಳಾದ ಮೇಲೆ ಹುಟ್ಟಿದನು. ಈ ಕಾರ್ಯವು ಸಾಧಾರಣವಾದ ಮನುಷ್ಯಭಾವದ ನೇಮಕ್ಕೆ ಪೂರ್ಣ ಅಪವಾದದ್ದು. ವಿಶ್ವಾಸಿಗಳ ತಂದೆಯಾದ ಅಬ್ರಹಾಮನಿಗೆ ಈ ಪ್ರಕಾರ ಸಾರಳಿಂದ ಹುಟ್ಟಿದ ಒಬ್ಬನೇ ಮಗನು

ವಾಗ್ದತ್ತಬೀಜದ ವಂಶಾವಳಿಯಲ್ಲಿ ಕಡೆಯವನಾಗಿಯೂ ಶ್ರೇಷ್ಠನಾಗಿಯೂ ಹುಟ್ಟಲಿಕ್ಕಿರುವಂಥ ದೇವರಿಗೆ ಏಕಜನಾಗಿರುವಂಥ ಯೇಸು ಕ್ರಿಸ್ತನಿಗೆ ಮುಂಗುರ್ತಾದನು. ರೋಮ. ೪,೧೮.

(ಬಲಿಯರ್ಪಣೆಯು)

೨) ೧ ಮೋಶೆ. ೨೨ ಸಂಧಿ. ಆದರೆ ದಾಸಿಯ ಮಗನನ್ನು ಮನೆಯಿಂದ ಹೊರ ಕಳುಹಿಸಿದ ಮೇಲೆ ಅಬ್ರಹಾಮನು ವಾಗ್ದತ್ತಬೀಜವಾದ ಮಗನನ್ನು ಸಹಾ ಕನಿಕರಿಸದೆ ಮರಣಕ್ಕೆ ಒಪ್ಪಿಸ ಬೇಕೆಂದು ದೇವರಿಂದ ಅಪ್ಪಣೆ ಹೊಂದಿದನು. ಹ್ಯಾಗಂದರೆ —

ಇವುಗಳಾದ ಮೇಲೆ ಕರ್ತನು ಅಬ್ರಹಾಮನನ್ನು ಶೋಧಿಸಿ ಅವನಿಗೆ — ನೀನು ಪ್ರೀತಿ ಮಾಡುವ ನಿನ್ನ ಒಬ್ಬನೇ ಮಗನಾಗಿರುವ ಇಸಾಕನನ್ನು ಮೋರೀಯ ದೇಶಕ್ಕೆ ಹೋಗಿ ಅಲ್ಲಿ ಅವನನ್ನು ನಾನು ನಿನಗೆ ಹೇಳುವ ಒಂದು ಬೆಟ್ಟದ ಮೇಲೆ ಬಲಿಯಾಗಿ ಅರ್ಪಿಸು ಎಂದು ಅವನಿಗೆ ಆಜ್ಞಾಪಿಸಿದನು. ಮೂರನೇ ದಿವಸದಲ್ಲಿ ಅಬ್ರಹಾಮನು ದೇವರು ಹೇಳಿದ ಸ್ಥಳಕ್ಕೆ ಬರುತ್ತಾನೆ. ಇಸಾಕನು ತನ್ನ ಮರಣದ ವರಿಗೂ ತನ್ನ ತಂದೆಗೆ ವಿಧೇಯನಾಗಿದ್ದು ಬಲಿಗೆ ಬೇಕಾದ ಕಟ್ಟಿಗೆಯನ್ನು ತಾನು ಗುಡ್ಡಕ್ಕೆ ಹೊತ್ತು ಕೊಂಡು ಹೋದನು. ಅಬ್ರಹಾಮನು ಮಗನನ್ನು ಕಟ್ಟಿಗೆಯ ಮೇಲೆ ಕಟ್ಟಿ ಅವನನ್ನು ಕೊಂದು ಹಾಕುವದಕ್ಕಾಗಿ ಕತ್ತಿ ಎತ್ತಿದಾಗಲೇ ಆಕಾಶದಿಂದ ಬಂದ ದೇವರ ಶಬ್ದವು ಮಗನ ಪ್ರಾಣವನ್ನು ತೆಗಿಯ ಬೇಡವೆಂದು ಆಜ್ಞಾಪಿಸಿತು. ಈ ಪ್ರಕಾರವಾಗಿ ಅಬ್ರಹಾಮನು ಹೃದಯದ ಆಲೋಚನೆಯಲ್ಲಿ ಬಲಿಯಾಗಿ ಅರ್ಪಿಸಿದ ಮಗನನ್ನು ಜೀವಿತನಾಗಿ ತಿರಿಗಿ ಪಡಕೊಂಡನು. ಮತ್ತು ಮಗನ ಸ್ಥಳದಲ್ಲಿ ಬಲಿಯಾಗಿ ಅರ್ಪಿಸಲ್ಪಡ ತಕ್ಕ ಹೋತು ಕಾಣಿಸಿತು. ಬಲಿಯು ಅರ್ಪಿಸಲ್ಪಟ್ಟ ಮೇಲೆ ಕರ್ತನು ಮುಂಚೆ ಕೊಟ್ಟ ವಾಗ್ದತ್ತಗಳನ್ನೆಲ್ಲಾ ಅಬ್ರಹಾಮನಿಗೆ ಹೊಸತಾಗಿ ದೃಢ ಪಡಿಸಿದನು. ತರುವಾಯ ಅಬ್ರಹಾಮನು ಇಸಾಕನ ಸಂಗಡ ತಿರಿಗಿ ಮನೆಗೆ ಹೋದನು.

ಪರಿಶಿಷ್ಟ. ಅಬ್ರಹಾಮನು ಇಸಾಕನನ್ನು ಅವನು ದೇವರ ಸರ್ವತ್ರಾಣದಿಂದಲೂ ಕೃಪೆಯಿಂದಲೂ ತನಗೆ ಸಿಕ್ಕಿದ ವಾಗ್ದತ್ತಬೀಜವಾಗಿದ್ದದರಿಂದ ಮಾತ್ರವಲ್ಲ; ಅವನು ತನ್ನಿಂದ ಹುಟ್ಟಿದ ಸ್ವಭಾವಿಕ ಮಗನಾಗಿದ್ದದರಿಂದಲೂ ಬಹಳವಾಗಿ ಪ್ರೀತಿ ಮಾಡಿದನು. ಆದರೆ ಅಬ್ರಹಾಮನಿಗೆ ನೀತಿಯಾಗಿ ಎಣಿಸಲ್ಪಟ್ಟ ವಿಶ್ವಾಸವು ಪೂರ್ಣವಾಗುವ ಹಾಗೆ ಅವನು ಸ್ವದೇಶವನ್ನೂ ನೆಂಟತನವನ್ನೂ ಬಿಟ್ಟು ಬಿಟ್ಟ ಪ್ರಕಾರ

ಮಗನ ಸ್ವಭಾವಿಕವಾದ ಪ್ರೀತಿಯನ್ನು ಸಹಾ ಅಲ್ಲಗಳಿಯ ಬೇಕಾಗಿತ್ತು. ಇದಕ್ಕಾ
ಗಿ ಅಬ್ರಹಾಮನು ತನ್ನ ಮಗನನ್ನು ಮರಣಕ್ಕೆ ಒಪ್ಪಿಸ ಬೇಕೆಂಬ ಆಜ್ಞೆಯನ್ನು ದೇ
ವರಿಂದ ಹೊಂದಿ ಅದಕ್ಕೆ ವಿಧೇಯವಾದದರಿಂದ ಪರೀಕ್ಷಿತನಾದನು. ಈ ಪ್ರಕಾರವಾಗಿ
ಸ್ವಭಾವಿಕ ಪ್ರೀತಿಯನ್ನು ಜೈಸಿದ ಮೇಲೆ ಅಬ್ರಹಾಮನು ಇಸಾಕನನ್ನು ಕೃಪೆಯ
ದಾನವಾಗಿ ತಿರಿಗಿ ಹೊಂದಿ, ಅವನನ್ನು ವಾಗ್ದತ್ತದ ಮಗನೆಂದು ಪ್ರೀತಿ ಮಾಡಿದನು.

ನರಬಲಿಗಳು (ವಿಶೇಷವಾಗಿ ಚೊಚ್ಚಲಮಕ್ಕಳ ಬಲಿಗಳು) ಅನ್ಯ ಜನಾಂಗಗ
ಳಲ್ಲೆಲ್ಲಾ ಪೂರ್ವಕಾಲದಲ್ಲಿ ವಾಡಿಕೆಯಾಗಿದ್ದವು. ಇನ್ನು ಕೆಲವು ದೇಶಗಳಲ್ಲಿ ವಾಡಿಕೆ
ಯಾಗಿವೆ; ಅನ್ಯ ಜನಾಂಗಗಳವರು ತಮ್ಮ ವ್ಯರ್ಥವಾದ ಸುಳ್ಳುದೇವತೆಗಳಿಗೆ ಮ
ಕ್ಕಳನ್ನು ಬಲಿಯಾಗಿ ಅರ್ಪಿಸುವದಕ್ಕೆ ಮನಸ್ಸುಳ್ಳವರಾಗಿದ್ದರೆ ಅಬ್ರಹಾಮನು ಅದೇ
ತರದ ಬಲಿಯನ್ನು ಸತ್ಯವಾದ ಒಬ್ಬನೇ ದೇವರಿಗೆ ಅರ್ಪಿಸಲಿಕ್ಕೆ ಮನಸ್ಸಾಗಿರುವನೋ
ಏನೋ? ಈ ಪ್ರಕಾರ ಪರೀಕ್ಷೆಯಾಯಿತು. ಯಾಕೆಂದರೆ ವಿಶ್ವಾಸಿಗಳ ತಂದೆಯಾ
ದ ಅಬ್ರಹಾಮನು ಸ್ವಾರ್ಥವನ್ನು ಪೂರ್ಣವಾಗಿ ಅಲ್ಲಗಳಿಯುವ ವಿಶ್ವಾಸದಲ್ಲಿ ಎ
ಲ್ಲರಲ್ಲಿ ಶ್ರೇಷ್ಠನಾಗಿರ ಬೇಕಾಗಿತ್ತು. ಇಪ್ಪತ್ತೈದು ವರ್ಷ ಪರ್ಯಂತರ ವಿಶ್ವಾಸ
ದಿಂದ ಕೋರಿದ ಮೇಲೆ ದೇವರ ವಾಕ್ಯದ ಪ್ರಕಾರ ಹುಟ್ಟಿ ಉತ್ತಮವಾದ ಮಹಿಮೆಯು
ಳ್ಳ ವಾಗ್ದತ್ತಗಳ ಪೂರ್ಣತೆಯೂ ಬಾಧ್ಯಸ್ಥನೂ ಆಗಿರುವ ಮಗನಾದ ಇಸಾಕನ
ನ್ನು ಮರಣಕ್ಕೆ ಒಪ್ಪಿಸಿದರೂ ದಿವ್ಯ ವಾಗ್ದತ್ತದಲ್ಲಿ ಇಟ್ಟ ವಿಶ್ವಾಸವನ್ನು ಅಬ್ರಹಾಮ
ನು ಬಿಡದೆ ಇರ ಬೇಕಾಗಿತ್ತು. ಇದು ಅವನ ಪರೀಕ್ಷೆಯ ತಾತ್ಪರ್ಯವಾಗಿತ್ತು. ಅ
ಬ್ರಹಾಮನು ವಿಶ್ವಾಸದಿಂದ ಅವಿಶ್ವಾಸವನ್ನು ಜೈಸಿ ದೇವರು ಅವನನ್ನು ಸತ್ತವರೊ
ಳಗಿಂದಲೇ ಎಬ್ಬಿಸ ಬಲ್ಲನೆಂದು ಎಣಿಸಿ ಕೊಂಡನು. ಆದದರಿಂದ ಅವನನ್ನು ಉಪ
ಮಾನವಾಗಿ ಸಂಪಾದಿಸಿದನು. ಇಬ್ರಿಯರ ಪತ್ರಿಕೆ ೧೧ ಸಂಧಿ. ೧೭—೧೯ ವಚನಗ
ಳು. ಸಮನೋಡು. ಮತ್ತಾ, ೩, ೯. ಈ ಪ್ರಕಾರ ವಿಶ್ವಾಸದಲ್ಲಿ ದೃಢವಾಗಿದ್ದು ಸಂ
ಗಡ ಬಂದ ಚಾಕರರಿಗೆ ನಾನೂ ಹುಡುಗನೂ ಅಲ್ಲಿಗೆ ಹೋಗಿ ಆರಾಧನೆ ಮಾಡಿದ
ಮೇಲೆ ನಿಮ್ಮ ಬಳಿಗೆ ತಿರಿಗಿ ಬರುವೆವು ಎಂದು ಹೇಳಿದನು. ಆದರೆ ಅಬ್ರಹಾಮನ
ವಿಶ್ವಾಸದ ಪರೀಕ್ಷೆಗಾಗಿ ಮೊರೀಯ ಪರ್ವತದಲ್ಲಿ ಸಂಭವಿಸಿದ ಸಂಗತಿಯಲ್ಲಿ ಅನೇ
ಕ ವಿಧವಾದ ಬೇರೆ ಅಭಿಪ್ರಾಯ ಸಹಾ ತೋರುತ್ತದೆ.

I ಇಸಾಕನನ್ನು ಬಲಿಯಾಗಿ ಅರ್ಪಿಸ ಬೇಕೆಂದು ದೇವರು ಅಜ್ಞಾಪಿಸಿದದ
ರಲ್ಲಿ ಆತ್ಮವೂ ಸ್ವಯಿಚ್ಛೆಯೂ ಇಲ್ಲದ ಮೃಗಗಳ ಬಲಿಯು ಮನುಷ್ಯರ ರಕ್ಷ
ಣೆಗಾಗಿ ಸಾಲದೆಂದು ಪಾಪದಿಂದ ಮರಣಕ್ಕೆ ಒಳಗಾದ ಮನುಷ್ಯರ ರಕ್ಷಣೆಗಾಗಿ
ಅಪರಾಧವಿಲ್ಲದ ಮನುಷ್ಯನೇ ಸಾಯ ಬೇಕೆಂದು ಜಾಡೆಯಾಗಿ ತೋರ ಬಂತು.

(ದೇವರಿಗೂ ಸತ್ಯದ ತಿಳುವಿಕೆಗೂ ದೂರವಾದ ಅನ್ಯ ಜನರು ಸಹಾ ಮೃಗಬಲಿಗಿಂತ ನರಬಲಿ ಉತ್ತಮವೆಂಬದನ್ನು ತಿಳುಕೊಂಡರು). ಆದರೆ ಅವರು ಸಹಜವಾದ ಅಜ್ಞಾನದಿಂದಲೂ ಮೂಲಕೊಲೆಗಾರನಾದ ಸೈತಾನನ ಮೋಸದಿಂದಲೂ ಮರುಳಾಗಿ ತಾವು ಅಲ್ಪವಾಗಿ ಗ್ರಹಿಸಿ ಕೊಂಡ ಸತ್ಯವನ್ನು ಅಸಹ್ಯವಾದ ರೀತಿಯಿಂದ ಕೆಡಿಸಿದರು. ಅನ್ಯ ಜನರು ತಿಳಿಯದೆ ಹೋದದ್ದು ಏನಂದರೆ—

ದೇವರ ನೇಮಕವಿಲ್ಲದ ಹೋಮವು ವ್ಯರ್ಥವಾದದ್ದು.

ಪೂರ್ಣ ಪರಿಶುದ್ಧತ್ವವಿಲ್ಲದ ನರಬಲಿಯು ನರಪಾಪ ಪರಿಹಾರಕ್ಕೆ ಸಾಲದು.

ತಿರಿಗಿ ತಿರಿಗಿ ಆಗ ಬೇಕಾದ ಬಲಿಗಳಲ್ಲಿ ಬಲವಿಲ್ಲ; ಬಲವಾದ ಬಲಿಯು ಒಂದೇ, ಆದದರಿಂದ ಅವರು ಪಾಪಿಗಳಾದ ಮನುಷ್ಯರನ್ನು ದೇವರ ಅಪ್ಪಣೆ ಇಲ್ಲದೆ ಬಹುಶಾ ಬಲಿಯಾಗಿ ಅರ್ಪಿಸುತ್ತಾ ಇದ್ದರು.

II ಇಸಾಕನ ಸ್ಥಳದಲ್ಲಿ ಹೋತುಬಲಿಯಾಗಿ ಅರ್ಪಿಸಲ್ಪಟ್ಟದರಲ್ಲಿ ಎರಡು ವಿಧದ ತಾತ್ಪರ್ಯ ಪ್ರಕಟವಾಯಿತು.

ದೇವರು ಒಂದು ನರಬಲಿಯು ಆಗ ಬೇಕೆಂದು ನಿರ್ಣಯ ಮಾಡಿ ಕೊಂಡಿದ್ದರೂ ಪೂರ್ಣ ಪರಿಶುದ್ಧತ್ವವಿಲ್ಲದ ಇಸಾಕನು ಅಲ್ಲ; ಅಬ್ರಹಾಮನ ಬೀಜವಾದ ಮತ್ತೊಬ್ಬನು ಅದಕ್ಕೆ ನೇಮಕವಾಗಿದ್ಧಾನೆ ಎಂಬದು.

ಬರುವ ಬಲವಾದ ನಿತ್ಯ ನರಬಲಿಗೆ ಮುಂಗುರ್ತಾಗಿಯೂ ಬದಲಾಗಿಯೂ ಮೃಗಬಲಿಯು ದೇವರಿಂದ ನೇಮಿಸಲ್ಪಟ್ಟಿತು ಎಂಬದು.

III ದೇವರು ನೇಮಿಸಿದ ಮೃಗಬಲಿಯಲ್ಲಿ ಸಂಪೂರ್ಣವಾದ ಪಾಪಪರಿಹಾರಾರ್ಥವಾದ ಬಲಿಯು ಅರ್ಪಿಸಲ್ಪಡುವ ಪರ್ಯಂತರ ವಿಶ್ವಾಸದಿಂದ ಅರ್ಪಿಸಲ್ಪಡುವ ಮೃಗಬಲಿಯಲ್ಲಿಯೂ ಪ್ರಯೋಜನ ಉಂಟೆಂಬದು ಪ್ರಕಟವಾಯಿತು.

IV ಅಬ್ರಹಾಮನು ಮೊರೀಯ ಎಂಬ ಸ್ಥಳದಲ್ಲಿ ಈ ಕಾರ್ಯವನ್ನು ಮಾಡ ಬೇಕೆಂದು ಅಪ್ಪಣೆ ಹೊಂದಿದದರಲ್ಲಿ ಮುಂದಿನ ಕಾಲದಲ್ಲಿ ಯೆಹೋವನ ದೇವಾಲಯವೂ ಆರಾಧನೆಯೂ ಲೋಕದ ರಕ್ಷಕನ ಬಲಿಯರ್ಪಣೆಯೂ ಅಲ್ಲೇ ಆಗ ಬೇಕೆಂಬದು ಸೂಚಿಸಲ್ಪಟ್ಟಿತು.

V ಮತ್ತು ಅಬ್ರಹಾಮನಿಗೂ ಸಾರಳಿಗೂ ಒಬ್ಬನಾಗಿ ಹುಟ್ಟಿದ ಇಸಾಕನು ದೇವರ ಏಕಜಮಗನಾಗಿರುವ ಯೇಸು ಕ್ರಿಸ್ತನಿಗೆ ಮುಂಗುರ್ತಾಗಿದ್ದನು.



## § 22. ಸಾರಳ ಮರಣವೂ ಇಸಾಕನ ಮದುವೆಯೂ ಅಬ್ರಹಾಮನ ಮರಣವೂ

೧) ೧ ಮೋಶೆ. ೨೩. ೨೪. ಸಂಧಿಗಳು. ಸಾರಳು ೧೨೭ ವರುಷದವಳಾಗಿ ಹೇಬ್ರೋನಿನಲ್ಲಿ ಶೀರಿ ಹೋದಳು. ಅಬ್ರಹಾಮನು ಮಕ್ಪೇಲ ಎಂಬ ಇಬ್ಬಾಗವಾದ ಗವಿಯನ್ನೂ ಅದಕ್ಕೆ ಕೂಡಿದ ಹೊಲವನ್ನೂ ಹೇತಿಯನಾದ ಎಫ್ರೋನಿನಿಂದ ಕ್ರಯಕ್ಕೆ ತೆಗದು ಕೊಂಡು ಆ ಗವಿಯನ್ನು ಮನೆಯವರನ್ನು ಹೂಳಿಡುವ ಸ್ಥಳವಾಗಿ ನೇಮಿಸಿದನು. ಮೂರು ವರ್ಷ ಶೀರಿದ ಮೇಲೆ ಸೇವಕರಲ್ಲಿ ಮುಖ್ಯಸ್ಥನಾದವನೊಬ್ಬನನ್ನು (ಎಲಿಯೇಸರನನ್ನು) ಮಗನಾದ ಇಸಾಕನಿಗೆ ಅಣ್ಣನಾದ ನಾಹೋರನ ಮನೆಯಿಂದ ಹೆಂಡತಿಯನ್ನು ಕರಕೊಂಡು ಬರುವದಕ್ಕೆ ಹಾರಾನಿಗೆ ಕಳುಹಿಸಿದನು. ಯಾಕಂದರೆ ನಾಹೋರನ ಮನೆಯಲ್ಲಿ ಅನೇಕ ಮಕ್ಕಳು ಹುಟ್ಟಿದರೆಂಬ ವರ್ತಮಾನ ಬಂದಿತ್ತು.

ಎಲಿಯೇಸರನು ಹಾರಾನಿಗೆ ಬಂದು ಬಾವಿಯ ಹತ್ತಿರ ವಿಶ್ವಾಸದಿಂದ ಅರ್ಪಿಸಿದ ಪ್ರಾರ್ಥನೆಯ ಮುಖಾಂತರ ನಾಹೋರನ ಮೊಮ್ಮಗಳಾದಂಥಾ ದೇವರು ಇಸಾಕನಿಗೆ ಹೆಂಡತಿಯಾಗಿ ನೇಮಕ ಮಾಡಿದಂಥಾ ರೆಬೆಕ್ಕಳನ್ನು ಕಂಡು ಕೊಂಡು ಅವಳನ್ನು ಅಬ್ರಹಾಮನು ವಾಸಿಸುವ ಸ್ಥಳಕ್ಕೆ ತಂದನು. ಇಸಾಕನು (೪೦ ವರ್ಷದವನಾಗಿ) ರೆಬೆಕ್ಕಳನ್ನು ಹೆಂಡತಿಯಾಗಿ ಅಂಗೀಕರಿಸಿ ತಾಯಿಯಾದ ಸಾರಾಳ ಗುಡಾರದಲ್ಲಿ ಶೇರಿಸಿ ಅವಳ ಮೇಲೆ ಪ್ರೀತಿ ಇಟ್ಟನು.

ಪರಿಶಿಷ್ಟ. ಅಬ್ರಹಾಮನು ತನ್ನ ವಂಶದವರನ್ನು ಹೂಳಿಸುವದಕ್ಕೆ ಒಂದು ಸ್ಥಳವನ್ನು ಕೊಂಡದ್ದು ಅವನು ತನ್ನ ವಂಶದವರು ಈ ದೇಶದ ಬಾಧ್ಯಸ್ಥರಾಗಿರುವರೆಂಬ ವಾಗ್ದತ್ತವನ್ನು ದೃಢವಾಗಿ ನಂಬಿದಕ್ಕೆ ಸಾಕ್ಷಿಯಾಗಿದೆ. ತನ್ನ ವಂಶದವರು ನಾನೂರು ವರ್ಷದ ಮೇಲೆ ಸ್ವತಂತ್ರಿಸಿ ಕೊಂಡು ವಾಸ ಮಾಡ ಬೇಕಾದ ದೇಶದಲ್ಲಿ ತನ್ನ ಎಲುವುಗಳೂ ತನ್ನ ಹೆಂಡತಿಯ ಎಲುವುಗಳೂ ಹೂಳಿಡಲ್ಪಡ ಬೇಕೆಂದು ಅಬ್ರಹಾಮನು ಅಪೇಕ್ಷಿಸಿದನು. ಇಸ್ರಯೇಲಿನವರು ಸ್ವದೇಶವನ್ನು ಬಿಟ್ಟು ಪರದೇಶವಾದ ಮಿಚ್ರದಲ್ಲಿ ವಾಸ ಮಾಡಿದ ಕಾಲದಲ್ಲಿ ಪೂರ್ವಜನಾದ ಅಬ್ರಹಾಮನ ಸಮಾಧಿಯನ್ನು ನೆನಸುವಷ್ಟು ಸಾರಿ ಆ ದೇಶವು ನಮ್ಮ ಬಾಧ್ಯತೆ ಎಂದೂ ತಮ್ಮ ಮಕ್ಕಳು ಕರ್ತನು ನೇಮಕ ಮಾಡಿದ ಕಾಲದಲ್ಲಿ ಅದನ್ನು ಸ್ವತಂತ್ರಿಸಿ ಕೊಳ್ಳುವರೆಂದೂ ಜ್ಞಾಪಕ ಮಾಡಿ ಕೊಳ್ಳುತ್ತಿದ್ದರು. (ಯಾಕೋಬನು ಅಲ್ಲೇ ಹೂಳಿಡಲ್ಪಟ್ಟನು. ಯೋಸೆಫನು ಸಹ ತನ್ನ ಎಲುವುಗಳನ್ನು ಅಲ್ಲೇ ಇಡ ಬೇಕೆಂದು ತನ್ನ ಜನರಿಗೆ ಅಪ್ಪಣೆ ಕೊಟ್ಟನು.) ಅಬ್ರಹಾಮನು ಆ ವಂಶದ ಸಮಾಧಿಯನ್ನು ಕ್ರಯಕ್ಕೆ ತೆಗದು ಕೊಳ್ಳುವಾಗ ಈ ಕಾರ್ಯವು

ಘನವಾದದ್ದೆಂದು ತಿಳಿದು ಹೇತಿಯರ ಕುಲದ ಸಭೆಯಲ್ಲಿ ಕ್ರಯ ಕೊಟ್ಟು ಎಲ್ಲಾ ನಿಶ್ಚಯ ಮಾಡಿದನು.

೨) ೧ ಮೋಶೆ. ೨೫. ೧—೧೮. ಸಾರಳು ಸತ್ತ ಮೇಲೆ ಕೆಟೂರಾ ಅಬ್ರಹಾಮನಿಗೆ ಅರಬಿ ಮಿದ್ಯಾನಿ ಕುಲಗಳಿಗೆ ಪೂರ್ವಜರಾದ ೬ ಮಂದಿ ಗಂಡುಮಕ್ಕಳನ್ನು ಹೆತ್ತಳು. ಆದರೆ ಇಸಾಕನು ಅಬ್ರಹಾಮನ ಆಸ್ತಿಗೆ ಒಬ್ಬನೇ ಬಾಧ್ಯಸ್ಥನಾದನು. ಬೇರೆ ಮಕ್ಕಳಿಗೆ ತಂದೆಯು ಹಾನ್ನು ಹಣ ಮಂದೆ ಇತ್ಯಾದಿಗಳನ್ನು ದಾನವಾಗಿ ಕಾಟ್ಟನು. ತರುವಾಯ ಅಬ್ರಹಾಮನು ೧೭೫ ವರ್ಷದವನಾಗಿ ತೀರಿ ಹಾದನು. ಇಸಾಕನೂ ಇಷ್ಮಯೇಲನೂ ತಂದೆಯ ಶವವನ್ನು ಮಕ್ಫೆಲಾ ಗವಿಗೆ ತಂದು ಹೆಂಡತಿಯಾದ ಸಾರಳ ಬಳಿಯಲ್ಲಿ ಹೂಳಿಟ್ಟರು.

ಪರಿಶಿಷ್ಟ. ವೃದ್ಧಿಯನ್ನು ಹೊಂದಿ ಹೆಚ್ಚಿರಿ ಎಂಬ ದಿವ್ಯ ಆಶೀರ್ವಾದವನ್ನು ಹೊಂದಿದ ನಾಲ್ಕು ಮಂದಿ ಪೂರ್ವಜರು ನರಜಾತಿಗೆ ಉಂಟು. ಅಬ್ರಹಾಮನು ಮೂರನೆಯವನು ಅವನು ಸಹಾ ಹೊಸ ವಂಶದ ತಲೆಯೂ ಹೊಸ ಮನೇ ವಾರ್ತೆಯ ಆರಂಭವೂ ಆಗಿದ್ಧಾನೆ. ಮೊದಲನೇ ಎರಡನೇ ಪೂರ್ವಜರಾದ ಆದಾಮ ನೋಹರಿಗೆ ದೇಹಿಕ ಆಶೀರ್ವಾದವು. ನಾಲ್ಕನೇ ಪೂರ್ವಜನಾದ ಕ್ರಿಸ್ತನಿಗೆ ಆತ್ಮಿಕವಾದ ವಂಶದ ಆಶೀರ್ವಾದವು. ಅಬ್ರಹಾಮನಿಗೆ ದೇಹಿಕ ಆತ್ಮಿಕ ಆಶೀರ್ವಾದ ಉಂಟು. ಹ್ಯಾಗಂದರೆ ಶರೀರದ ಪ್ರಕಾರ ಅಬ್ರಹಾಮನಿಂದ ಹುಟ್ಟುವ ಜನಾಂಗದ ಮುಖಾಂತ್ರವಾಗಿಯೂ ಭೂಲೋಕದ ಎಲ್ಲಾ ಜನಾಂಗಗಳಿಗೆ ಆಶೀರ್ವಾದ ಬರುವದು ಎಂಬದು ಅವನ ಆಶೀರ್ವಾದದ ಮಾತಾಗಿದೆ. ಅಬ್ರಹಾಮನಿಂದ ಉಂಟಾದ ದೇಹಿಕ ಜಾತಿಯು ಲೆಖ್ಖವಿಲ್ಲದ್ದು. ಬೇರೆ ಜನಾಂಗಗಳು ಹುಟ್ಟಿ ಬೆಳದು ನಾಶವಾಗಿ ಕಾಣದೆ ಹೋಗುವವು. ಆದರೆ ಅಬ್ರಹಾಮನ ವಂಶವು ಸ್ವಲ್ಪ ಕಡಿಮೆ ೪೦೦೦ ವರ್ಷಗಳ ಪರಿಯಂತರ ಲೋಕದಲ್ಲಿದ್ದು ಬೇರೆ ಜನಾಂಗಗಳ ಸಂಗಡ ಮಿಶ್ರವಾಗದೆ ಬದಲಾಗದೆ ಯಥಾ ಪ್ರಕಾರವಾಗಿ ಇರುತ್ತಾ ಬಂದದೆ. ಅದರ ಚರಿತ್ರವು ಇನ್ನು ಮುಗಿಯಲಿಲ್ಲ. ಅಬ್ರಹಾಮನ ಮಕ್ಕಳಾದ ಯೆಹೂದ್ಯರು ಸರ್ವ ಲೋಕದಲ್ಲಿ ಚದರಿ ಹೋಗಿ ಪ್ರಧಾನಯಾಜಕನೂ ಅರಸನೂ ಸ್ವರಾಜ್ಯವೂ ಸ್ವದೇಶವೂ ಇಲ್ಲದವರಾಗಿದ್ದರೂ ಇನ್ನೂ ನಾಶವಾಗಲಿಲ್ಲ. ಆದರೆ ಸ್ವಭಾವಿಕ ಶ್ರೇಷ್ಟತ್ವಕ್ಕಿಂತ ಆತ್ಮಿಕ ಶ್ರೇಷ್ಟತ್ವವು ಅಬ್ರಹಾಮನಲ್ಲಿ ದೊಡ್ಡದು. ಈ ಆತ್ಮಿಕಶೀಲವು ಅಬ್ರಹಾಮನ ವಂಶದವರಲ್ಲಿಯೂ ಅವರ ಮುಖಾಂತ್ರ ಭೂಲೋಕದ ಜನಾಂಗಗಳ ಬೇರೆ ವಂಶದವರಲ್ಲಿಯೂ ಯಾರಲ್ಲಿ ಹುಟ್ಟುವದೋ ಅವರು ಅಬ್ರಹಾಮನ ನಿಜ ಮಕ್ಕಳಾಗಿದ್ಧಾರೆ. ಗಲಾತ್. ೩ ಸ. ೭. ೨೯. ವಚ. ರೋಮ್. ೯ ಸ. ೬—೮

ಪರ್ಯಂತರ. ಈ ಆತ್ಮಿಕವಾದ ಶೀಲವು ಯಾವದಂದರೆ ವಿಶ್ವಾಸವೇ. ಅಬ್ರಹಾಮನು ತನ್ನ ಜೀವಕಾಲದಲ್ಲೆಲ್ಲಾ ವಿಶ್ವಾಸವನ್ನು ಕೈಕೊಳ್ಳುತ್ತಾ ವಿಶ್ವಾಸದಿಂದಲೇ ನಡೆದುಕೊಳ್ಳುತ್ತಾ ಇದ್ದನು. ಅವನು ವಿಶ್ವಾಸದ ಮೂಲಮೂರ್ತಿಯಾಗಿದ್ದನು. ೧ನೇ ಮೋಶೆಯಲ್ಲಿ ಬರೆದಿರುವ ಅಬ್ರಹಾಮನ ಚರಿತ್ರದಲ್ಲಿ ೨ ಸಾವಿರ ವರ್ಷದ ಮೇಲೆ ಪ್ರಕಟವಾಗಲಿಕ್ಕಿರುವ ಮರ್ಮದ ಮಾತು ಕೇರಿಯದೆ. ಹ್ಯಾಗಂದರೆ ಅಬ್ರಹಾಮನು ಕರ್ತನ ಮಾತು ನಂಬಿದನು, ಅದು ಅವನಿಗೆ ನೀತಿಯಾಗಿ ಎಣಿಸಲ್ಪಟ್ಟಿತು. ಮತ್ತು ಎರಡು ಸಾವಿರ ವರ್ಷ ಹೋದ ಮೇಲೆ ಯೇಸು ಕ್ರಿಸ್ತನು ಅವನ ವಿಷಯವಾಗಿ ಅಬ್ರಹಾಮನು ನನ್ನ ದಿವಸವನ್ನು ನೋಡುವದಕ್ಕೆ ಸಂತೋಷ ಪಟ್ಟು ಅದನ್ನು ಕಂಡು ಉಲ್ಲಾಸಿಸಿದನೆಂದು ಹೇಳಿದನು. (ಯೋಹ. ೮, ೫೬. ವಚ) ವಿಶ್ವಾಸಿಗಳ ತಂದೆಯಾಗಿರುವದೇ ಅಬ್ರಹಾಮನ ಘನವಾದ ಶ್ರೇಷ್ಟತೆಯಾಗಿದೆ. ಅವನ ಆತ್ಮಿಕಬೀಜವಾಗಿರುವ ಅವನ ವಿಶ್ವಾಸದ ಮಕ್ಕಳು ಆಕಾಶದ ನಕ್ಷತ್ರಗಳಂತೆ ಲೆಖ್ಖವಿಲ್ಲದವರೂ ಪ್ರಕಾಶವುಳ್ಳವರೂ ಆಗಿದ್ದಾರೆ.



## § 23. ಇಸಾಕನೂ ಅವನ ಮಕ್ಕಳೂ

೧) ೧ಮೋಶೆ. ೨೫. ೧೯—೩೪. ಮದಿವೆಯಾದ ಇಪ್ಪತ್ತನೇ ವರ್ಷದಲ್ಲಿ ರೆಬೆಕ್ಕಳು ಜವಳಿ ಮಕ್ಕಳನ್ನು ಹೆತ್ತಳು. ಅದಕ್ಕೆ ಮುಂಚೆ ಹಿರಿಯನು ಕಿರಿಯನಿಗೆ ಸೇವೆ ಮಾಡುವನೆಂಬ ಪ್ರವಾದನೆಯನ್ನು ದೇವರಿಂದ ಹೊಂದಿ ಇದ್ದರು. ಹಿರೇ ಮಗನಾದ ಏಸಾವನು ಬೇಟೆಗಾರನಾಗಿ ತಂದೆಗೆ ಅತಿ ಪ್ರಿಯನಾಗಿದ್ದನು. ಯಾಕೋಬನು ಹೊರಗೆ ಹೋಗದೆ ತಾಯಿಗೆ ಮುದ್ದುಮಗನಾಗಿದ್ದನು. ಕಠಿಣ ಮನಸ್ಸುಳ್ಳ ಏಸಾವನು ಯುಕ್ತಿ ಚಮತ್ಕಾರಗಳುಳ್ಳ ಯಾಕೋಬನಿಗೆ ತನ್ನ ಚೊಚ್ಚಲತನವನ್ನು ಅಲಸಂದಿ ತೋವೆಗೆ ಮಾರಿ ಬಿಟ್ಟನು. ತರುವಾಯ ತಂದೆ ತಾಯಿಗಳಿಗೆ ಬಹಳ ತೊಂದರೆ ಕಾಡುವ ಇಬ್ಬರು ಹೇತಿನ ಕುಲದವರಾದ ಹೆಂಡರನ್ನು ತೆಗದು ಕೊಂಡನು. ೨೬, ೩೫.

ಪರಿಶಿಷ್ಟ. ಮಲಖಿ. ೧, ೨—೩ನೇ ನಾನು ಯಾಕೋಬನನ್ನು ಪ್ರೀತಿ ಮಾಡಿ ಏಸಾವನನ್ನು ಹಗೆ ಮಾಡಿದ್ದೇನೆ. ಮತ್ತು ಅಪೊಸ್ತಲನಾದ ಪೌಲನು ರೋಮಾಯರ ೯ ಸಂಧಿಯ ೧೦ನೇಯುಲ್ಲಿ ಹೇಳುವದೇನಂದರೆ—ಕ್ರಿಯೆಗಳ ಪುಣ್ಯದಿಂದಲ್ಲ, ದೇವರ ಉಚಿತವಾದ ಕೃಪೆಯಿಂದಲೇ ಯಾಕೋಬನು ಆದು ಕೊಳ್ಳಲ್ಪಟ್ಟನು. ಮತ್ತು ಏ

ಸಾವನು ತಿರಸ್ಕರಿಸಲ್ಪಟ್ಟನು. ಯಾಕಂದರೆ ಮಕ್ಕಳು ಹುಟ್ಟದೆ ಕೇಡಾದರೂ ಮೇಲಾದರೂ ಮಾಡದೆ ಇದ್ದ ಕಾಲದಲ್ಲಿ ಅದು ಆಯಿತು. ಈ ಇಬ್ಬರು ಸಹೋದರರು ತಮ್ಮ ತಮ್ಮ ವಂಶದ ಮುಖ್ಯಸ್ಥರಾಗಿಯೂ ಮುಂಗುರ್ತುಗಳಾಗಿಯೂ ಇದ್ದಾರೆ. ಆದರೆ ಎಸಾವನ ವಂಶದವರು ಎಲ್ಲಾ ಅನ್ಯ ಜನರ ಪ್ರಕಾರ ಯೇಸು ಕ್ರಿಸ್ತನಲ್ಲಿ ರಕ್ಷಣೆಯನ್ನು ಹೊಂದುವದಕ್ಕಾಗಿ ನೇಮಿಸಲ್ಪಟ್ಟದರಿಂದ ಎಸಾವನು ತಿರಸ್ಕಾರವಾಗಿ ನಿತ್ಯನಾಶಕ್ಕೆ ನೇಮಿಸಲ್ಪಟ್ಟನೆಂದು ನೆನಸುವದಕ್ಕೆ ಕಾರಣವಿಲ್ಲ.

೨) ೧ಮೋಶೆ. ೨೬ ಸಂಧಿ. ಮತ್ತು ಬರವು ಉಂಟಾದದರಿಂದ ಇಸಾಕನು ಅಬ್ರಹಾಮನು ಮಾಡಿದ ಪ್ರಕಾರ ಮಿಚ್ರದೇಶಕ್ಕೆ ಹೋಗುವದಕ್ಕೆ ಆಲೋಚನೆ ಮಾಡಿದನು. ಆದರೆ ಕರ್ತನು ವಾಗ್ದತ್ತದೇಶದಲ್ಲಿ ನಿಲ್ಲ ಬೇಕೆಂದು ಅವನಿಗೆ ಆಜ್ಞಾಪಿಸಿ ಅಬ್ರಹಾಮನಿಗೆ ಕೊಟ್ಟ ವಾಗ್ದತ್ತಗಳನ್ನೆಲ್ಲಾ ವಿಶೇಷವಾದ ಒಡಂಬಡಿಕೆಯ ರೀತಿಯಿಂದ ಅವನಿಗೆ ಒಪ್ಪಿಸಿದನು. ಇಸಾಕನು ಗೆರಾರಿನಲ್ಲಿ ವಸ್ತಿಯಾಗಿ ಅಬ್ರಹಾಮನು ಮಾಡಿದ ಪ್ರಕಾರ ತನ್ನ ಹೆಂಡತಿಯು ತನ್ನ ತಂಗಿ ಎಂದು ಹೇಳಿದನು. ಆದರೂ ಕರ್ತನು ಇಸಾಕನು ತಂದೆಗಿಂತ ಮೃದು ಮನಸ್ಸುಳ್ಳವನಾಗಿದ್ದದರಿಂದ ತಂದೆಯ ಮೇಲೆ ಬಂದ ಶಿಕ್ಷೆಯನ್ನು ಮಗನ ಮೇಲೆ ಬರಲೀಸದೆ ಕರುಣೆಯನ್ನು ತೋರಿಸಿದನು. ಹ್ಯಾಗಂದರೆ ಅಬಿಮೆಲೇಕನು ಇಸಾಕನ ಮಾತು ಸುಳ್ಳು ಎಂದು ಬೇಗ ತಿಳಿದು ತನ್ನ ಜನರಿಗೆ ಆಜ್ಞೆ ಕೊಟ್ಟು ಇಸಾಕನಿಗಾಗಲಿ ಅವನ ಹೆಂಡತಿಗಾಗಲಿ ಅನ್ಯಾಯ ಮಾಡುವವನಿಗೆ ಪ್ರಾಣಶಿಕ್ಷೆ ನಿರ್ಣಯಿಸಿದನು. ಆದರೂ ಫಿಲಿಷ್ಟ್ಯರು ದೇವರು ಇಸಾಕನಿಗೆ ಕೊಟ್ಟ ಐಶ್ವರ್ಯವಾದ ಆಶೀರ್ವಾದಕ್ಕೆ ಹೊಟ್ಟೆಕಿಚ್ಚು ಪಟ್ಟು ಅವನು ಅಗಿಸಿದ ಬಾವಿಗಳನ್ನು ಮುಚ್ಚಿ ಮಣ್ಣು ತುಂಬಿಸಿ ಕೆಡಿಸಿದರು. ಇಸಾಕನು ಎಲ್ಲಾ ತಾಳಿ ಕೊಂಡು ಇದ್ದ ಸ್ಥಳದಿಂದ ಹೊರಟು ಬೆರ್ಷೆಬದಲ್ಲಿ ವಸ್ತಿಯಾದನು. ಅಲ್ಲಿ ಕರ್ತನು ಅವನಿಗೆ ಪ್ರತ್ಯಕ್ಷವಾಗಿ ಧೈರ್ಯ ಪಡಿಸಿ ಆಶೀರ್ವದಿಸಿದನು. ಮತ್ತು ಇಸಾಕನು ಅಲ್ಲಿ ಪೀಠವನ್ನು ಕಟ್ಟಿಸಿ ಕರ್ತನ ಹೆಸರನ್ನು ಸಾರಿದನು.

೩) ೧ಮೋಶೆ. ೨೭ ಸಂಧಿ. ಇಸಾಕನು ವೃದ್ಧಾಪ್ಯದಲ್ಲಿ ತನ್ನ ಮಕ್ಕಳ ವಿಷಯವಾಗಿ ಆದ ದೈವೋತ್ತರಕ್ಕೆ ವಿರೋಧವಾಗಿ ಹಿರೇ ಮಗನಿಗೆ ಮೂಲಪಿತೃಗಳ ಆಶೀರ್ವಾದವನ್ನು ಕೊಡುವದಕ್ಕೆ ಆಲೋಚನೆ ಮಾಡಿದನು. ರೆಬೆಕ್ಕಳು ಇದನ್ನು ನಿರರ್ಥಕ ಮಾಡಿದಳು. ಆದರೆ ಅವಳು ದೇವರ ಚಿತ್ತವು ಆಗ ಬೇಕೆಂದು ಇಚ್ಛೈಸಿ ಸ್ವಂತ ಯುಕ್ತಿಯಿಂದ ದೇವರಿಗೆ ಸಹಾಯ ಮಾಡ ಬೇಕಂತೆ ದೇವರಿಗೆ ಅನಾನುಕೂಲವಾದ ಸಾಧನೆ ಮಾಡುವಳು. ಯಾಕೋಬನು ಅವಿಧೇಯನಾಗಿರ ಬೇಕಾದ ಕಾರ್ಯದಲ್ಲಿ

ತಾಯಿಯ ಮಾತು ಕೇಳುವನು. ಏಸಾವನು ದೇವರ ನ್ಯಾಯದ ಪ್ರಕಾರವಾಗಿಯೂ
ಮನುಷ್ಯರ ನ್ಯಾಯದ ಪ್ರಕಾರವಾಗಿಯೂ ತನ್ನದಲ್ಲವಾದದ್ದನ್ನು ಪಡೆದು ಕೊಳ್ಳುವ
ದಕ್ಕೆ ಪ್ರಯತ್ನ ಮಾಡುವನು. ಏಸಾವನು ಮಾಡುವ ಮೋಸಕ್ಕೆ ಪ್ರತಿಯಾಗಿ ಯಾ
ಕೋಬನು ಮೋಸ ಮಾಡುವನು, ಈ ಪ್ರಕಾರ ಎಲ್ಲರೂ ಮಾಂಸದ ಇಚ್ಛೆಯ ಪ್ರಕಾರ
ಪಾಪ ಮಾಡಿ ಸ್ವಂತ ಮಾರ್ಗಗಳಲ್ಲಿ ನಡದರೂ ದೇವರ ಚಿತ್ತವು ಪೂರ್ತಿಯಾಗು
ವದು. ರೆಬೆಕ್ಕಳು ಅಡಿಗೆ ಮಾಡಿದ್ದನ್ನು ಯಾಕೋಬನು ತಂದೆಯ ಮುಂದೆ ಇಡುವ
ನು. ಇಸಾಕನು ಮಾತಾಡುವವನ ಶಬ್ದವು ಯಾಕೋಬನ ಶಬ್ದವೆಂದು ತಿಳಿದು ಕೊಂ
ಡರೂ ಅವನು ಬಹಳ ಧೈರ್ಯದಿಂದ ಸುಳ್ಳು ಹೇಳುವದರಿಂದಲೂ ಏಸಾವನ ವ
ಸ್ತ್ರಗಳಿಂದ ತಂದೆಗೆ ಗೊತ್ತಾದ ವಾಸನೆ ಬರುವದರಿಂದಲೂ ಕೈಗಳಿಗೂ ಕುತ್ತಿಗೆಗೂ
ರೋಮವುಳ್ಳ ಚರ್ಮ ಕಟ್ಟಿರುವದರಿಂದಲೂ ಕುರುಡನಾದ ತಂದೆಯು ಅವಿಧೇಯ
ತ್ವದ ಶಿಕ್ಷೆಯನ್ನು ದೇವರಿಂದ ಹೊಂದಿ ವಂಚಿಸಲ್ಪಟ್ಟು ದೇವರು ಯಾರಿಗೆ ಆಶೀರ್ವಾ
ದವನ್ನು ನೇಮಕ ಮಾಡಿದನೋ ಅವನಿಗೆ ಆಶೀರ್ವಾದವನ್ನು ಕೊಟ್ಟು ಆಕಾಶದ ಮಂ
ಜು ಭೂಮಿಯ ಸಾರ ಧಾನ್ಯ ದ್ರಾಕ್ಷಿರಸಗಳ ಪೂರ್ಣತೆ ನಿನಗಾಗಲಿ ಜನಾಂಗಗಳು
ನಿನ್ನನ್ನು ಸೇವಿಸುವವು. ಜನರು ನಿನ್ನ ಮುಂದೆ ಅಡ್ಡ ಬೀಳುವರು. ನಿನ್ನ ಭ್ರಾತೃಗ
ಳಿಗೆ ಯಜಮಾನನಾಗಿರು. ನಿನ್ನ ತಾಯಿಯ ಮಕ್ಕಳು ನಿನ್ನ ಪಾದಕ್ಕೆ ಬೀಳುವರು. ನಿನ್ನ
ನ್ನು ಶಪಿಸುವವನಿಗೆ ಶಾಪವೂ ನಿನ್ನನ್ನು ಆಶೀರ್ವದಿಸುವವರಿಗೆ ಆಶೀರ್ವಾದವೂ
ಆಗಲಿ ಎಂದು ಯಾಕೋಬನಿಗೆ ಹೇಳಿದನು.

ಏಸಾವನು ಬೇಟೆಯಿಂದ ತಿರಿಗಿ ಬಂದು ಆದದ್ದನ್ನು ತಿಳುಕೊಳ್ಳುತ್ತಲೇ ಕಳವಳಗೊಂ
ಡು ಅಳುತ್ತಾ ಬಹಳ ಕೋಪ ಗೊಳ್ಳುತ್ತಾ ಇರುವನು. ಆದರೆ ಇಸಾಕನು ತನ್ನ ತ
ಪ್ಪು ತಿಳಿದು ಕೊಂಡು ದೇವರ ಚಿತ್ತಕ್ಕೆ ಒಪ್ಪಿ ಕೊಂಡು ನಾನು ಅವನನ್ನು ಆಶೀರ್ವದಿ
ಸಿದ್ಧೇನೆ; ಅವನು ಆಶೀರ್ವದಿಸಲ್ಪಟ್ಟಿರುವನು ಎಂದು ಹೇಳುವನು. ಏಸಾವನಿಗೆ ಬೆ
ದೂಯಿನರ ಕಾಡಸ್ಥಿತಿಗೆ ತಕ್ಕ ಆಶೀರ್ವಾದವೇ ಶಿಕ್ಕುವದು. ಖಡ್ಗದಿಂದಲೇ ಅವನು
ಜೀವನ ಮಾಡಿ ಕೊಳ್ಳ ಬೇಕು. ತಮ್ಮನಿಗೆ ಸೇವೆ ಮಾಡ ಬೇಕು. ಆದರೆ ಅವನ ನೊ
ಗವನ್ನು ಮುರಿದು ಬಿಸಾಡುವ ಕಾಲ ಬರುವದೆಂಬ ಆಶೆಯುಳಿಯುವದು.

ಪರಿಶಿಷ್ಟ. ೧. ಏಸಾವನು ಕಳ್ಳರಾದ ಎದೋಮ್ಯರಿಗೆ ಪೂರ್ವಜನಾದನು.
೧ ಮೋಶೆ. ೩೬ ಸಂಧಿ. ಅವರು ಸೇಯಿರ್ ಘಟ್ಟಗಳಲ್ಲಿ ವಾಸಿಸುತ್ತಾ ಯಾವಾಗಲು
ದೇವರ ಜನಾಂಗಕ್ಕೆ ವಿರೋಧಿಗಳಾಗಿದ್ದರು. ದಾವಿದನು (೨ ಸಾಮುವೇಲ್ ೮—೧೪)
ಅವರನ್ನು ಜೈಸಿ ವಶ ಮಾಡಿ ಕೊಂಡನು. ಆದರೆ ಅವರು ತಿರಿಗಿ ತಿರಿಗಿ ಯೆಹೂದ್ಯ
ರ ಅರಸುಗಳಿಗೆ ಕಾಟಕೊಯಿ ಎಬ್ಬಿಸಿ ಬಿಡುಗಡೆಯಾದರು.

ಪರಿಶಿಷ್ಟ. ೨. ಇಸಾಕನು ಇನ್ನು ನಾಲ್ವತ್ತಮೂರು ವರ್ಷ ಪರ್ಯಂತ್ರ ಬದುಕಿದರೂ ಅವನ ಚರಿತ್ರವು ಇಲ್ಲಿ ಮುಗಿಯುತ್ತದೆ. ಒಂದು ಸ್ಥಳದಲ್ಲಿ ಮಾತ್ರ (೧ಮೋ. ೩೫. ಸಂ ೨೮ನೇಯಲ್ಲಿ) ಅವನು ೧೮೦ ವರ್ಷದವನಾಗಿ ಜೀವತೃಪ್ತನಾಗಿ ಪಿತೃಗಳನ್ನು ಕೂಡಿ ಯಾಕೋಬ್ ಏಸಾವರಿಂದ ಮಕ್ಫೆಲಾ ಗವಿಯಲ್ಲಿ ಹೂಳಿಡಲ್ಪಟ್ಟನೆಂದು ಬರೆದದೆ. ರೆಬೆಕ್ಕಳು ಯಾಕೋಬನು ಮೆಸೊಪತಾಮ್ಯದಿಂದ ತಿರಿಗಿ ಬಂದದಕ್ಕೆ ಮುಂಚೆ ತೀರಿ ಹೋದಳೆಂದು ತೋಚುತ್ತದೆ. — ಇಸಾಕನಲ್ಲಿ ತಂದೆಯಾದ ಅಬ್ರಹಾಮನ ಶೀಲವು ಅಷ್ಟು ಕಾಣುವದಿಲ್ಲ. ಲೋಕವನ್ನು ಜೈಸುವ ವಿಶ್ವಾಸದ ಶೂರತ್ವವು ಅವನಲ್ಲಿ ಕಡಿಮೆಯಾಗಿತ್ತು. ಉಪದ್ರವನ್ನು ತಾಳುವದರಲ್ಲಿಯೂ ಕರ್ತನ ಸಹಾಯವನ್ನು ನಿಧಾನವಾಗಿ ಕಾದು ಕೊಳ್ಳುವದರಲ್ಲಿಯೂ ಅವನ ವಿಶ್ವಾಸದ ಬಲವು ವಿಶೇಷವಾಗಿ ಪ್ರಕಟವಾಯಿತು. ಈ ಶಾಂತಗುಣವು ಹುಟ್ಟಿದಂದಿನಿಂದ ಅವನಲ್ಲಿ ಇತ್ತು. ಮೊರೀಯ ಗುಡ್ಡದಲ್ಲಿ ಆದ ಕಾರ್ಯದಿಂದ ಅದು ಪೂರ್ಣವಾಗಿ ದೃಢವಾಯಿತು. ಅವನಿಗೆ ಸಂಭವಿಸಿದ ಎಲ್ಲಾ ಕಾರ್ಯಗಳಿಂದ ಅದು ಸಾಧಿಸಲ್ಪಟ್ಟು ಪೂರ್ಣತೆಯನ್ನು ಹೊಂದ ಬೇಕೆಂಬದು ಕರ್ತನ ಆಲೋಚನೆಯಾಗಿತ್ತು. ಸ್ವಭಾವದಿಂದಲೂ ಕರ್ತನ ಕೃಪೆಯಿಂದಲೂ ಅವನಲ್ಲಿ ಬೆಳೆದ ಈ ಗುಣದ ಪ್ರಕಾರ ನಡೆದು ಕೊಳ್ಳುತ್ತಾ ಇರುವಾಗ ಅವನು ದೇವರ ಮಾರ್ಗದಲ್ಲಿ ಇದ್ದನು. ಒಂದು ಕಾಲದಲ್ಲಿ ಸ್ವಂತ ಬುದ್ಧಿಯಿಂದಲೂ ಸ್ವೇಚ್ಛೆಯಿಂದಲೂ ಕೆಲಸವನ್ನು ಸಾಗಿಸ ಬೇಕೆಂದು ಪ್ರಯತ್ನ ಮಾಡಿದಾಗ ಅವನು ದೇವರ ಮಾರ್ಗಕ್ಕೆ ತಪ್ಪಿ ತನ್ನ ಆಲೋಚನೆ ನಿರರ್ಥಕವಾಯಿತೆಂದು ನೋಡಿ ತನ್ನನ್ನು ತಗ್ಗಿಸಿ ಕೊಳ್ಳ ಬೇಕಾಗಿತ್ತು.



## § 24. ಯಾಕೋಬನ ಪಯಣಗಳು

೧) ೧ ಮೋಶೆ. ೨೮ ಸ. ಯಾಕೋಬನು ತಂದೆತಾಯಿಗಳ ಅಪ್ಪಣೆಯ ಪ್ರಕಾರ ಅವರ ಆಶೀರ್ವಾದಗಳನ್ನು ಹೊಂದಿದವನಾಗಿ ಏಸಾವನ ದ್ವೇಷದ ರೌದ್ರಕ್ಕೆ ತಪ್ಪಿಸಿ ಕೊಳ್ಳುವದಕ್ಕೆ ಚಿಂತಾಕ್ರಾಂತನಾಗಿಯೂ ಬಡವನಾಗಿಯೂ ಮನುಷ್ಯಸಹಾಯವಿಲ್ಲದವನಾಗಿಯೂ ಮೆಸೊಪತಾಮ್ಯಕ್ಕೆ ಓಡಿ ಹೋದನು. ಆದರೆ ದೇವರು ಅವನ ಸಂಗಡಲಿದ್ದನು. ಸ್ವಪ್ನದಲ್ಲಿ ದೇವದೂತರು ಏರಿ ಇಳಿಯುವಂಥಾ ಪರಲೋಕದ ಏಣಿಯನ್ನು ಕಂಡನು. (ಅದು ಭೂಲೋಕಕ್ಕೂ ಪರಲೋಕಕ್ಕೂ ಇರುವ ಸಂಕದ ಹಾಗೆ ಇದ್ದು ಯಾಕೋಬನ ವಂಶದಲ್ಲಿ ಆಗಲಿಕ್ಕಿರುವ ದೇವರ ಪ್ರಕಟಣೆಗಳಿಗೆ ಸಾಮ್ಯವಾಗಿ

ತ್ತು.) ಏಣಿಯ ತುದಿಯಲ್ಲಿ ಯೆಹೋವನು ನಿಂತು ಯಾಕೋಬನ ಕಡೆಗೆ ತನ್ನ ಮು
ಖವನ್ನು ಬಾಗಿಸಿ ನೀನು ಮಲಗಿರುವ ಈ ದೇಶವನ್ನು ನಿನಗೂ ನಿನ್ನ ಬೀಜಕ್ಕೂ ಕೊಡು
ತ್ತೇನೆ; ನಿನ್ನ ಬೀಜವು ಭೂಮಿಯ ಧೂಳಿನಂತೆ ಆಗುವದು. ನಿನ್ನ ಮುಖಾಂತ್ರವಾಗಿ
ಯೂ ನಿನ್ನ ಬೀಜದ ಮುಖಾಂತ್ರವಾಗಿಯೂ ಭೂಮಿಯ ಎಲ್ಲಾ ಜನಾಂಗಗಳು ಆ
ಶೀರ್ವಾದ ಹೊಂದುವವು; ಇಗೋ ನಾನು ನಿನ್ನ ಸಂಗಡಲಿದ್ದೇನೆ. ನೀನು ಹೋಗು
ವಲ್ಲಿ ನಿನ್ನನ್ನು ಕಾಪಾಡಿ ತಿರಿಗಿ ಈ ದೇಶಕ್ಕೆ ಕರೆಕೊಂಡು ಬರುವೆನು. ನಿನಗೆ ಹೇಳಿದ
ನ್ನೆಲ್ಲಾ ಪೂರೈಸುವ ವರೆಗೂ ನಿನ್ನನ್ನು ಬಿಡೆನು ಅಂದನು. ಯಾಕೋಬನು ಎಚ್ಚತ್ತಾ
ಗ ಇದು ದೇವರ ಮನೆಯೇ ಸರಿ ಇದು ಪರಲೋಕದ್ವಾರವು ಎಂದು ಹೇಳಿ ತನಗೆ ತ
ಲೆಗಿಂಬಾಗಿದ್ದ ಕಲ್ಲಿಗೆ ಎಣ್ಣೆ ಹಚ್ಚಿ ಆ ಸ್ಥಳಕ್ಕೆ ಬೇಥೆಲ್. (ದೇವರ ಮನೆ) ಎಂದು ಹೆ
ಸರಿಟ್ಟು ದೇವರು ನನ್ನನ್ನು ಮಾರ್ಗದಲ್ಲಿ ಕಾಪಾಡಿ ಸಮಾಧಾನದಿಂದ ತಿರಿಗಿ ಕೊಂಡು
ಬಂದರೆ ಕರ್ತನು ನನ್ನ ದೇವರಾಗಿರುವನು. ಮತ್ತು ಈ ಕಲ್ಲು ದೇವರ ಮನೆಯಾಗು
ವದು ಎಂದು ಹರಿಕೆ ಹೇಳಿದನು.

೨) ೧ ಮೋಶೆ. ೨೯. ೩೦. ೩೧. ಸಂಧಿ. ಹಾರಾನಿಗೆ ಬಂದಾಗ ಯಾ
ಕೋಬನು ಲಾಬಾನನ ಮಗಳಾದ ರಾಹೇಲಳನ್ನು ಬಾವಿಯ ಹತ್ರ ಕಂಡು ಅವಳ
ತಂದೆಯ ಮನೆಯಲ್ಲಿ ಶೇರಿ ಅವಳಿಗಾಗಿ ಲೋಭಿಯಾದ ಲಾಬಾನನಿಗೆ ಏಳು ವರ್ಷ
ಸೇವೆ ಮಾಡಿದನು. ಆದರೆ ಲಾಬಾನನು ಅವನಿಗೆ ಮೋಸ ಮಾಡಿದನು. (ಯಾ
ಕೋಬನು ತಂದೆಯಾದ ಇಸಾಕನಿಗೆ ಮೋಸ ಮಾಡಿದ ಪ್ರಕಾರ ಈಗ ಲಾಬಾನನು
ಅವನಿಗೆ ಮೋಸ ಮಾಡುತ್ತಾನೆ.) ಹ್ಯಾಗಂದರೆ ಯಾಕೋಬನಿಗೆ ಪ್ರಿಯಳಾದ
ರಾಹೇಲಳಿಗೆ ಬದಲಾಗಿ ಲಾಬಾನನು ಅವಳ ಅಕ್ಕನಾದ ಲೇಯಳನ್ನು ಯಾಕೋ
ಬನಿಗೆ ಕೊಟ್ಟು ವಂಚನೆ ಮಾಡಿದನು. (ಇದರಲ್ಲಿಯೂ ತಂದೆಗೆ ಸಂಭವಿಸಿದ್ದು ಯಾ
ಕೋಬನಿಗೂ ಸಂಭವಿಸಿತು. ಇಸಾಕನು ಏಸಾವನಿಗೆ ಬದಲಾಗಿ ತಿಳಿಯದೆ ಯಾಕೋ
ಬನಿಗೆ ಆಶೀರ್ವಾದ ಕೊಟ್ಟು ದೇವರ ಚಿತ್ತವನ್ನು ಪೂರೈಸಿದನು. ಅದೇ ಪ್ರಕಾರ ಯಾ
ಕೋಬನು ತಿಳಿಯದೆ ಲೇಯಳನ್ನು ಮದಿವೆ ಮಾಡಿ ಕೊಂಡನು. ಇವಳೇ ವಾಗ್ದತ್ತ
ಬೀಜಕ್ಕೆ ಮೂಲತಾಯಿ ಆದಳು.) ಮತ್ತು ಯಾಕೋಬನು ಬೇರೆ ಏಳು ವರ್ಷ ರಾ
ಹೇಲಳಿಗಾಗಿ ಆರು ವರ್ಷ ಮಂದೆಗಾಗಿ ಸೇವೆ ಮಾಡ ಬೇಕಾಗಿತ್ತು. ಲೇಯಳು ಆ
ರು ಗಂಡು ಮಕ್ಕಳನ್ನೂ ಒಬ್ಬ ಮಗಳನ್ನೂ ಹೆತ್ತಳು. ರಾಹೇಲಳು ಬಹಳ ವರ್ಷ ಬಂಜೆ
ಯಾಗಿದ್ದು ಕಡೆಯಲ್ಲಿ ಯೋಸೇಫನನ್ನು ಹೆತ್ತಳು. ಇಬ್ಬರು ಹೆಂಡರ ದಾಸಿಗಳಾದ ಬಿಲ್ಹ
ಳೂ ಜಿಲ್ಪಳೂ ಸಹಾ ಒಬ್ಬೊಬ್ಬಳು ಇಬ್ಬರಿಬ್ಬರು ಗಂಡು ಮಕ್ಕಳನ್ನು ಹೆತ್ತರು. ಲಾಬಾ
ನನು ಯಾಕೋಬನ ಸಂಗಡ ಮಾಡಿದ ಕರಾರನ್ನು ತಿರಿಗಿ ತಿರಿಗಿ ಬದಲಿಸಿದನು. ಆದರೆ

ದೇವರ ಆಶೀರ್ವಾದದಿಂದ ಯಾಕೋಬನು ಹೆಚ್ಚೆಚ್ಚಾದ ಐಶ್ವರ್ಯವನ್ನು ಪಡೆದು
ಕೊಂಡು ಲಾಬಾನನೂ ಅವನ ಮಕ್ಕಳೂ ಇವರ ಲೋಭ ಮತ್ಸರ ದ್ವೇಷಗಳಿಗೆ ಭಯ
ಪಟ್ಟು ಓಡಿ ಹೋದನು. ಲಾಬಾನನು ಅವನನ್ನು ಹಿಂದಟ್ಟಿದನು. ಆದರೆ ಅವನ
ಬಳಿಗೆ ಬಂದಾಗ ಅವನಿಗೆ ಏನೂ ಕೇಡು ಮಾಡಲಿಲ್ಲ; ಯಾಕಂದರೆ ಕರ್ತನು ಸ್ವಪ್ನ
ದಲ್ಲಿ ಅವನಿಗೆ ಪ್ರತ್ಯಕ್ಷವಾಗಿ ಅವನನ್ನು ಹೆದರಿಸಿದ್ದನು. ಆದದರಿಂದ ಯಾಕೋಬನು
ತಡೆಯಿಲ್ಲದೆ ಮುಂದೆ ಪಯಣ ಮಾಡಿದನು. ಯೊರ್ದಾನ್ ನದಿಯ ಮೂಡಣ
ಪ್ರದೇಶಕ್ಕೆ ಬಂದಾಗ ದೇವದೂತರು ವಾಗ್ದತ್ತದೇಶದಲ್ಲಿ ಶೇರಿದವನನ್ನು ಎದು
ರುಗೊಂಡು ಕರ್ತನು ಆಶ್ರಯವನ್ನು ಕೊಡುವನೆಂದು ಅಭಯ ಕೊಟ್ಟರು. ಯಾಕೋ
ಬನು ಅವರು ದೇವರ ಸೈನ್ಯಗಳೆಂದು ಆ ಸ್ಥಳಕ್ಕೆ ಮಹಾನಾಯಿಮ್ ಎಂದು ಹೆಸರಿಟ್ಟ
ನು. (ಜೋಡುಸೈನ್ಯ)



## § 25. ಯಾಕೋಬನ ಹೋರಾಟವು

೧) ೧ ಮೋಶೆ. ೩೨ ಸಂಧಿ. ಈಗಲಾದರು ಯಾಕೋಬನು ದೇವರಿಗೆ ಮಾನ
ಕೊಟ್ಟು ನನ್ನ ತಂದೆಯಾದ ಅಬ್ರಹಾಮನಿಗೂ ನನ್ನ ತಂದೆಯಾದ ಇಸಾಕನಿಗೂ ದೇ
ವರಾಗಿರುವ ಕರ್ತನೇ ನಿನ್ನ ದೇಶಕ್ಕೂ ನೀನು ಹುಟ್ಟಿದ ಸೀಮೆಗೂ ತಿರಿಗಿ ಹೋಗು ಆಗ
ನಿನಗೆ ಒಳ್ಳೇದನ್ನು ಮಾಡುವೆನೆಂದು ಹೇಳಿದವನೇ ನೀನು ನಿನ್ನ ದಾಸನಿಗೆ ಮಾಡಿದ
ಎಲ್ಲಾ ಕೃಪೆಗಳಿಗೂ ಎಲ್ಲಾ ಸತ್ಯಕ್ಕೂ ಅಪಾತ್ರನಾಗಿದ್ದೇನೆ. ಯಾಕಂದರೆ ನನ್ನ ಕೋ
ಲಿನಿಂದಲೇ ಈ ಯೊರ್ದಾನನ್ನು ದಾಟಿ ಹೋದೆನು ಮತ್ತು ಈಗ ಎರಡು ದಂಡು
ಆದೆನು.

ನನ್ನ ಸಹೋದರನ ಕೈಗೆ ಏಸಾವನ ಕೈಗೆ ನನ್ನನ್ನು ತಪ್ಪಿಸು. ಯಾಕಂದರೆ ಅವ
ನು ಬಂದು ನನ್ನನ್ನೂ ಮಕ್ಕಳ ಸಂಗಡ ತಾಯಿಯನ್ನೂ ಹೊಡಿಯುವನೆಂದೂ ಅವನಿಗೆ
ಭಯ ಪಡುತ್ತೇನೆ. ನಿನಗೆ ಒಳ್ಳೇದನ್ನೇ ಮಾಡುವೆನೆಂದೂ ಬಾಹುಳ್ಯಕ್ಕಾಗಿ ಎಣಿಸ
ಕೂಡದ ಸಮುದ್ರದ ಮರಳಿನ ಹಾಗೆ ನಿನ್ನ ಬೀಜವನ್ನು ಮಾಡುವೆನೆಂದೂ ಹೇಳಿದಿ
ಯಲ್ಲಾ ಎಂದು ಅರಿಕೆ ಮಾಡಿದನು. ಆದಾಗ್ಯೂ ಅಣ್ಣನಾದ ಏಸಾವನ ಭಯವು
ಯಾಕೋಬನ ಮನಸ್ಸಿನಿಂದ ಹೋಗಲಿಲ್ಲ. ಏಸಾವನ ಬಳಿಗೆ ಕಳುಹಿಸಿದ ದೂತರು
ತಿರಿಗಿ ಬರುವದನ್ನು ಬಹು ಚಿಂತೆ ಪಡುತ್ತಾ ಕಾದು ಕೊಳ್ಳುತ್ತಾ ಇದ್ದನು. ಯಾಬೋ
ಕ್ ನದಿ ದಾಟುವ ಸ್ಥಳದಲ್ಲಿ ಏಸಾವನಿಗೆ ಕೊಡ ತಕ್ಕ ಕಾಣಿಕೆಗಳನ್ನು ಪ್ರತ್ಯೇಕಿಸಿ ಹೆಂ

ಡರು ಮಕ್ಕಳನ್ನು ಮುಂದೆ ಕಳುಹಿಸಿ ರಾತ್ರಿಯಲ್ಲಿ ಒಂಟಿಯಾಗಿ ಹಿಂದೆ ಉಳಿದನು. ಆ ರಾತ್ರಿಯಲ್ಲಿ ಒಬ್ಬ ಪುರುಷನು ಉದಯ ಕಾಲದ ವರೆಗೂ ಯಾಕೋಬನ ಸಂಗಡ ಹೋರಾಡಿ ಕಡೆಯಲ್ಲಿ ಗೆಲ ಕೂಡದೆಂದು ನೋಡಿ ಅವನ ಸೊಂಟದ ಎಲುವನ್ನು ಮುಟ್ಟಿದನು. ಆದದರಿಂದ ಹೋರಾಟದಲ್ಲಿ ಉಳುಕಿ ಹೋಯಿತು. ಕರ್ತನು ತಾನು ಯಾಕೋಬನಿಗೆ ಶತ್ರುವಾಗಿ ಎದುರು ಬಂದನು. ಕರ್ತನು ಯಾಕೋಬನಿಗೆ ಏಸಾವನ ಕೋಪವನ್ನು ಜೈಸುವದಕ್ಕೆ ಸಹಾಯ ಮಾಡುವದಕ್ಕಿಂತ ಮುಂಚೆ ಯಾಕೋಬನು ಕರ್ತನ ಕೋಪವನ್ನು ಜೈಸ ಬೇಕಾಗಿತ್ತು. ಯಾಕೋಬನು ಜಯವನ್ನು ಹೊಂದಿದನು. ಹ್ಯಾಗಂದರೆ ಸೊಂಟದ ಎಲುಬು ಕೀಲು ತಪ್ಪಿದ ಮೇಲೆ ಪ್ರಾರ್ಥನೆ ಎಂಬ ಆಯುಧವನ್ನು ಹಿಡಿದು ದೇವರನ್ನು ಜೈಸಿದನು. ಇದರ ವಿಷಯ ಹೋಸಿಯ ೧೨. ೪ನೇಯಲ್ಲಿ ಹೇಳುವದೇನಂದರೆ: ಅವನು ಪೂರ್ಣ ಬಲದಿಂದ ದೇವರ ಸಂಗಡ ಹೋರಾಡಿದನು. ದೂತನ ಸಂಗಡ ಹೋರಾಡಿ ಜೈಸಿದನು. ಯಾಕಂದರೆ ಅತ್ತು ಬೇಡಿದನು. ಯಾಕೋಬನು ಕಡೆಯಲ್ಲಿ ನನ್ನನ್ನು ಆಶೀರ್ವದಿಸುವ ವರೆಗೆ ನಿನ್ನನ್ನು ಬಿಡುವದಿಲ್ಲವೆಂದು ಹೇಳಿ ಕುಂಟನಾಗಿಯೂ ಸಹಜವಾದ ಬಲ ಮುರಿದವನಾಗಿಯೂ ದೇವರ ಕೋಪವನ್ನು ಜೈಸಿದವನಾಗಿಯೂ ಕರ್ತನಿಂದ ಆಶೀರ್ವಾದವನ್ನು ಹೊಂದಿದವನಾಗಿಯೂ ಹೊಸ ಮನುಷ್ಯನಾಗಿ ಕಾಣಿಸುತ್ತಾನೆ. ಹಳೇ ಚಾಪದ ಸಂಗಡ ಅದಕ್ಕೆ ಸರಿ ಬೀಳುವ ಯಾಕೋಬನೆಂಬ ಹೆಸರು ತೆಗದು ಹಾಕಿ ಹೊಸ ಚಾಪಕ್ಕೆ ಸರಿ ಬೀಳುವ ಇಸ್ರಾಯೇಲ್ ಎಂಬ ಹೆಸರನ್ನು ಹೊಂದುತ್ತಾನೆ. ಆ ಸ್ಥಳವನ್ನು ಪ್ನೀಯೆಲ್ (ದೇವರ ಮುಖ) ಎಂದು ಕರೆದು ದೇವರನ್ನು ಮುಖಾಮುಖಿಯಾಗಿ ಕಂಡೆನು. ಮತ್ತು ನನ್ನ ಪ್ರಾಣವು ಕ್ಷೇಮವಾಗಿದೆ ಎಂದು ಹೇಳಿದನು.

ಪರಿಶಿಷ್ಟ. ಯಾಕೋಬನು ಕರ್ತನ ಸಂಗಡ ಹೋರಾಡಿದ್ದು ಸ್ವಪ್ನವೂ ದರ್ಶನವೂ ಅಲ್ಲ. ಸತ್ಯವಾಗಿ ನಡೆದ ಕಾರ್ಯವಾಗಿದೆ. ಕರ್ತನ ದೂತನು ಸತ್ಯವಾಗಿ ಬಂದನು. ಯಾಕೋಬನು ಸತ್ಯವಾಗಿ ಅವನ ಸಂಗಡ ಹೋರಾಡಿದನು. ಕರ್ತನ ದೂತನು ಸ್ನೇಹಿತನಾಗಿ ಅಬ್ರಹಾಮನ ಬಳಿಗೆ ಬಂದು ಅವನ ಸಂಗಡ ಉಂಡು ಕುಡಿದ ಪ್ರಕಾರ ಇಲ್ಲಿ ಶತ್ರುವಾಗಿ ಯಾಕೋಬನ ಬಳಿಗೆ ಬಂದು ಅವನ ಸಂಗಡ ಹೋರಾಡಿದನೆಂಬದು ಸ್ಪಷ್ಟವಾಗಿ ಬರೆದದೆ.—ಯಾಕೋಬನು ಈ ಕಾಲದ ವರೆಗೆ ಮೋಸ ವಂಚನೆ ಕುಯುಕ್ತಿ ತಂತ್ರಗಳನ್ನು ನಡಿಸುತ್ತಾ ಸ್ವಂತ ಇಷ್ಟಗಳನ್ನು ಸ್ವಂತ ಬಲದಿಂದ ನಡಿಸುತ್ತಾ ಬಂದನು. ಮತ್ತು ದೇವರ ಚಿತ್ತವನ್ನು ಸಹ ಸಹಜವಾದ ಬುದ್ಧಿಯ ಯತ್ನದಿಂದ ಪೂರೈಸುತ್ತಾ ಇದ್ದನು. ಈ ಪ್ರಕಾರವಾಗಿ ಅವನು ದೇವರಿಗೂ ದೇವರ

ಮಾರ್ಗಕ್ಕೂ ಅವಮಾನ ಉಂಟು ಮಾಡಿದನು. ಆದದರಿಂದ ಕರ್ತನು ಅವನಿಗೆ ಶತ್ರುವಾಗಿ ಯಾಕೋಬನು ಕೃಪೆಯ ಒಡಂಬಡಿಕೆಗೆ ಅಯೋಗ್ಯನಾದನೆಂದು ಅವನ ಸಂಗಡ ಹೋರಾಡಿದನು. ಈ ಹೋರಾಟದಲ್ಲಿ ಯಾಕೋಬನು ವಿಶ್ವಾಸದಿಂದಲೇ ಜಯವನ್ನು ಹೊಂದುವದಕ್ಕಿಂತ ಮುಂಚೆ ಕರ್ತನು ಅವನಿಗೆ ಸಹಾಯ ಮಾಡಿ ಕೋಪಿಷ್ಟನಾದ ಏಸಾವನ ಕೈಗೆ ತಪ್ಪಿಸಲೊಲ್ಲದಿದ್ದನು.

ಆದರೆ ಯಾಕೋಬನು ಸಹಜವಾದ ಯುಕ್ತಿಯಲ್ಲಿಯೂ ಬಲದಲ್ಲಿಯೂ ನಂಬಿಕೆ ಇಡದೆ ಬಿನ್ನಹದಿಂದಲೂ ಪ್ರಾರ್ಥನೆಯಿಂದಲೂ ಕೃಪೆಯನ್ನು ಹೊಂದುವದಕ್ಕೆ ಪ್ರಯತ್ನ ಮಾಡಿದಾಗ ದೇವರ ಕೋಪವನ್ನು ಜೈಸಿ ಆಶೀರ್ವಾದವನ್ನು ಹೊಂದಿ ನಾಶನದ ಗಂಡಾಂತರಕ್ಕೆ ತಪ್ಪಿಸಿ ಕೊಂಡನು.

೨) ೧ ಮೋಶೆ. ೩೩. ೩೪. ಸಂಧಿಗಳು. ಹೀಗಾದ ಮೇಲೆ ಅಣ್ಣನಾದ ಏಸಾವನು ಯಾಕೋಬನಿಗೆ ಎದುರು ಬಂದು ಕೋಪವನ್ನೂ ಹಗೆಯನ್ನೂ ಅಲ್ಲ, ಪ್ರೀತಿಯನ್ನೂ ಶಾಂತ ಮನಸ್ಸನ್ನೂ ತೋರಿಸುತ್ತಾನೆ. ಯಾಕೋಬನು ಶಿಖೇಮಿನಲ್ಲಿ ವಸ್ತಿಯಾಗಿ ಅಬ್ರಹಾಮನು ಮಮ್ರೆಯಲ್ಲಿ ಮಾಡಿದ ಪ್ರಕಾರ ಒಂದು ಹೊಲವನ್ನು ಕ್ರಯಕ್ಕೆ ತೆಗದು ಕೊಂಡು ತನ್ನ ಜೀವವೆಂಬ ಪಯಣಕ್ಕೆ ಈಗ ಅಂತ್ಯವು ಬಂತೆಂಬ ಗುರ್ತಿಗಾಗಿ ಒಂದು ಪೀಠವನ್ನು ಕಟ್ಟುತ್ತಾನೆ. ಶಿಖೇಮಿನಿಂದ ಯಾಕೋಬನು ತದನಂತರ ದೇವರ ಅಪ್ಪಣೆಯ ಪ್ರಕಾರ ಹೊರಟು ಬೇಥೇಲಿಗೆ ಹೋಗಿ ತನ್ನ ಮನೆಯವರನ್ನು ಲಾಬಾನನ ಮನೆಯಲ್ಲಿ ನಡೆದ ವಿಗ್ರಹಾರಾಧನೆಗೆ ಸಂಬಂಧವಾದ ಎಲ್ಲಾ ವಸ್ತುಗಳಿಂದ ಶುದ್ಧ ಮಾಡಿದ ಮೇಲೆ ಪೀಠವನ್ನು ಕಟ್ಟಿಸಿ ಯೆಹೋವನಿಗೆ ಆರಾಧನೆ ಮಾಡುವದರಿಂದ ಬಹಳ ವರ್ಷಕ್ಕೆ ಮುಂಚೆ ಹೇಳಿದ ಹರಿಕೆಯನ್ನು ಈಡೇರಿಸುತ್ತಾನೆ. ಬೆಥೇಲಿಗೆ ಹೋಗುವ ಮಾರ್ಗದಲ್ಲಿ ರಾಹೇಲಳು ಬೆನ್ಯಮೀನನ್ನು ಹೆತ್ತು ಸಾಯುತ್ತಾಳೆ.



## § 26. ಯೋಸೇಫನ ಚರಿತ್ರವು

೧) ೧ ಮೋಶೆ. ೩೭ ಸಂಧಿ. ಯಾಕೋಬನಿಗೆ ಅತಿ ಪ್ರಿಯಳಾದ ರಾಹೇಲಳಿಂದ ಹುಟ್ಟಿದ ಯೋಸೇಫನು ಕೋಪ ಮೊದಲಾದ ದುರ್ಗುಣವೂ ಕಠಿಣ ಮನಸ್ಸುಳ್ಳವರಾದ ಸಹೋದರರಲ್ಲಿ ಶಾಂತ ಮನಸ್ಸೂ ಸಾಧುಗುಣವೂ ಉಳ್ಳವನಾಗಿದ್ದು ಮುದುಕನಾದ ತಂದೆಗೆ ಮುದ್ದುಮಗನಾಗಿದ್ದನು. ಸಹೋದರರು ಅಪರಾಧ ಮಾಡಿದ ಸು

ದ್ದಿ ಎಲ್ಲಿಯೂ ಹುಟ್ಟಲು ಯೋಸೇಫನು ತಂದೆಗೆ ತಿಳಿಸುವನು. ಯಾಕೋಬನು ಅವನಿಗೆ ಕೊಟ್ಟ ವಿಶೇಷವಾದ ವಸ್ತ್ರವನ್ನು ಕಂಡು ಸಹೋದರರು ಹೊಟ್ಟೆಕಿಚ್ಚು ಪಟ್ಟರು. ಮತ್ತು ಯೋಸೇಫನು ಬರುವ ಮಹಿಮೆಯ ಅಭಿಪ್ರಾಯವನ್ನು ಸ್ಪಷ್ಟವಾಗಿ ತೋರಿಸುವ ಸ್ವಪ್ನಗಳನ್ನು ಕಂಡ ಪ್ರಕಾರ ಹೇಳಿದದರಿಂದ ಅವರ ದ್ವೇಷವು ಹೆಚ್ಚಿತು. ಈ ದ್ವೇಷವು ದೇವರ ಆಲೋಚನೆಯ ಪ್ರಕಾರ ಯೋಸೇಫನು ದಾಸತ್ವ ಶ್ರಮೆಗಳ ಅಭ್ಯಾಸದಿಂದ ತನಗೆ ನೇಮಕವಾದ ಮಹಿಮೆಯುಳ್ಳ ಉದ್ಯೋಗಕ್ಕೆ ಸಾಧನೆ ಹೊಂದಿ ಶೇರುವದಕ್ಕೆ ಕಾರಣವಾಯಿತು. ಯಾಕೋಬನು ಒಂದು ಸಮಯದಲ್ಲಿ ಯೋಸೇಫನನ್ನು ಮಂದೆಗಳನ್ನು ಮೇಯಿಸುವ ಸಹೋದರರ ಬಳಿಗೆ ಕಳುಹಿಸಲು ಅವರು ಅವನನ್ನು ಕೊಂದು ಹಾಕುವದಕ್ಕೆ ಮೊದಲು ಮನಸ್ಸು ಮಾಡಿ ತಗುವಾಯ ರೂಬೆನನ ಮಾತಿಗೆ ಕಿವಿ ಕೊಟ್ಟು ಅವನನ್ನು ಸೀರು ಇಲ್ಲದ ಭಾವಿಯಲ್ಲಿ ಇಳಿಸಿ ಬಿಟ್ಟು ಕಡೆಯಲ್ಲಿ ಯೂದನ ಆಲೋಚನೆಗೆ ಒಪ್ಪಿ ಕೊಂಡು ಅವನನ್ನು ಆ ಸ್ಥಳವನ್ನು ದಾಟಿ ಹೋಗುವ ವರ್ತಕರ ಪರಶೆಗೆ ಮಾರಿ ಬಿಟ್ಟರು. ಇವರು ಯೋಸೇಫನನ್ನು ಮಿಚ್ರ ದೇಶಕ್ಕೆ ತಕ್ಕೊಂಡು ಹೋಗಿ ಫರೋನನ ರಾಣುವೆಯವರ ಅಧಿಪತಿಯಾದ ಪೋಟಿಫರನಿಗೆ ಮಾರಿದರು. ಯೋಸೇಫನನ್ನು ಸಹೋದರರ ದ್ವೇಷದಿಂದ ರಕ್ಷಿಸ ಬೇಕೆಂದು ಆಲೋಚನೆ ಮಾಡಿದ ರೂಬೆನನು ಅವನನ್ನು ಭಾವಿಯಿಂದ ತೆಗದು ಕೊಳ್ಳುವದಕ್ಕೆ ಬಂದಾಗ ಅವನನ್ನು ಕಂಡು ಕೊಳ್ಳದೆ ಚಿಂತಾಕ್ರಾಂತನಾಗಿ ಅತ್ತು ತನ್ನ ವಸ್ತ್ರಗಳನ್ನು ಹರಿದು ಬಿಟ್ಟನು. ಉಳಿದವರು ಯೋಸೇಫನ ಅಂಗಿಯನ್ನು ಆಡಿನ ರಕ್ತದಲ್ಲಿ ಅದ್ದಿ ಅದನ್ನು ತಂದು ತಂದೆಗೆ ತೋರಿಸಿ ತನಗೆ ಅತಿ ಪ್ರಿಯನಾದ ಯೋಸೇಫನನ್ನು ದುಷ್ಟ ಮೃಗವು ಶೀಳಿ ಬಿಟ್ಟಿತೆಂದು ನಂಬುವ ಹಾಗೆ ವಂಚಿಸಿದರು.

೨) ೧ ಮೋಶೆ. ೩೯. ೪೦ ಸಂಧಿಗಳು. ಹದಿನೇಳು ವರ್ಷದವನಾದ ಯೋಸೇಫನು ಸ್ವಲ್ಪ ಕಾಲದಲ್ಲಿ ಹೊಸ ಯಜಮಾನನ ಪೂರ್ಣ ದಯವನ್ನು ಹೊಂದಿದನು. ಆದದರಿಂದ ಅವನು ಯೋಸೇಫನನ್ನು ಎಲ್ಲಾ ಸೇವಕರಿಗೆ ಮುಖ್ಯಸ್ಥನಾಗ ನೇಮಿಸಿ ತನ್ನ ಮನೆವಾರ್ತೆಯ ಕೆಲಸವನ್ನೆಲ್ಲಾ ಅವನ ಕೈಗೆ ಒಪ್ಪಿಸಿ ಬಿಟ್ಟನು. ಇಂಥಾ ಮಹಾ ಪಾತಕವನ್ನು ನಡಿಸಿ ದೇವರಿಗೆ ವಿರೋಧವಾಗಿ ಪಾಪ ಮಾಡುವದು ಹ್ಯಾಗೆ ಎಂದು ಯೋಸೇಫನು ಕರ್ತನಿಗೆ ಪೂರ್ಣ ಹೃದಯದಿಂದ ಭಯ ಪಟ್ಟದರಿಂದ ಪೋಟಿಫರನ ವ್ಯಭಿಚಾರಿಯಾದ ಹೆಂಡತಿಯ ಶೋಧನೆಯನ್ನು ಜೈಸಿದನು. ಅವಳು ಅವನ ವಸ್ತ್ರವನ್ನು ಹಿಡಿದು ಕೊಂಡಾಗ ಅದನ್ನು ಅವಳ ಕೈಯಲ್ಲಿ ಬಿಟ್ಟು ಓಡಿ ಹೋದನು. ಈ ವಸ್ತ್ರವನ್ನು ಆ ದುಷ್ಟ ಸ್ತ್ರೀ ಯೋಸೇಫನ ಮೇಲೆ ಹೊರಿಸಿದ ಸುಳ್ಳು ಅಪರಾಧಕ್ಕೆ ಸಾಕ್ಷಿಯಾಗಿ ತೋರಿಸಿದಳು. ಈ ವಂಚನೆಯಿಂದ ಯೋಸೇಫನು ಶೆರೆಯ

ಲ್ಲಿ ಬಿದ್ದನು. ಆದರೆ ಶೆರೆಯಲ್ಲಿ ಮಾಡಿದ ಸೇವೆ ಅವನಿಗೆ ದೊಡ್ಡಸ್ಥಿಗೆಯನ್ನೂ ಅಧಿಕಾರವನ್ನೂ ಹೊಂದುವ ಮಾರ್ಗವಾಯಿತು. ದೇವರು ಕೊಟ್ಟ ಬುದ್ಧಿಯಿಂದ ಯೋಸೇಫನು ಶೆರೆಯಲ್ಲಿ ಬಿದ್ದ ಫರೋನನ ಪಾನದಾಯಕನಿಗೂ ರೊಟ್ಟಿಗಾರನಿಗೂ ಇಬ್ಬರು ಒಂದೇ ರಾತ್ರಿಯಲ್ಲಿ ಕಂಡ ಕನಸುಗಳ ಅಭಿಪ್ರಾಯವನ್ನು ತಿಳಿಸಿ ಒಬ್ಬನಿಗೆ ಕ್ಷಮೆಯೂ ಒಬ್ಬನಿಗೆ ಪ್ರಾಣಶಿಕ್ಷೆಯೂ ಆಗುವದೆಂದು ಮುಂಪೇಳಿದನು. ಪಾನದಾಯಕನು ಕೃತಜ್ಞನಾಗಿರುವೆನೆಂದು ಮಾತು ಕೊಟ್ಟರೂ ಯೋಸೇಫನನ್ನು ಮರತು ಬಿಟ್ಟದರಿಂದ ಅವನು ಮತ್ತು ಎರಡು ವರ್ಷ ಶೆರೆಯಲ್ಲಿದ್ದನು.

೩) ೧ ಮೋಶೆ. ೪೧ ಸಂಧಿ. ತರುವಾಯ ಫರೋನನು ಯಾರೂ ಅಭಿಪ್ರಾಯ ಹೇಳ ಕೂಡದ ಸ್ವಪ್ನಗಳನ್ನು ಕಂಡದರಿಂದ ಪಾನದಾಯಕನು ಯೋಸೇಫನಿಗೆ ಕೊಟ್ಟ ವಾಕ್ಯವನ್ನು ನೆನಪು ಮಾಡಿ ಕೊಂಡನು. (ಆ ಸ್ವಪ್ನಗಳು ಯಾವವೆಂದರೆ — ನೀಲ್ ನದಿಯಿಂದ ಏರಿ ಬಂದ ಕೊಬ್ಬಿದ ಏಳು ಆಕಳುಗಳನ್ನು ಬಡವಾದ ಏಳು ಆಕಳುಗಳು ನುಂಗಿ ಬಿಟ್ಟದ್ದು. ಮತ್ತು ತುಂಬಿದ ಏಳು ತೆನೆಗಳನ್ನು ಸುಟ್ಟ ಏಳು ತೆನೆಗಳು ನುಂಗಿ ಬಿಟ್ಟದ್ದು.) ಯೋಸೇಫನು ಶೆರೆಯಿಂದ ಬಿಡುಗಡೆಯಾಗಿ ಮಡಿ ವಸ್ತ್ರ ಹಾಕಿ ಕೊಂಡು ದರ್ಬಾರಿಗೆ ಬಂದು ಫರೋನನು ಕಂಡ ಸ್ವಪ್ನಗಳ ಅಭಿಪ್ರಾಯವನ್ನು ಹೇಳಿ ಐಶ್ವರ್ಯವಾದ ಬೆಳೆಯ ಏಳು ವರ್ಷಗಳು ಬರುವವು. ಇವುಗಳ ಮೇಲೆ ಬರದ ಏಳು ವರ್ಷಗಳು ಬರುವವು ಎಂದು ತೋರಿಸಿದನು. ದೇವರ ಆತ್ಮವು ಯೌವನಸ್ಥನಾದ ಯೋಸೇಫನಲ್ಲಿ ಇರುತ್ತದೆಂದು ಫರೋನನು ತಿಳಿದು ಮಿಚ್ರ ದೇಶದ ಅಧಿಪತಿಗಳಿಗೆ ಅವನನ್ನು ಮುಖ್ಯಸ್ಥನಾಗ ನೇಮಿಸಿ ಅರಸನ ವಸ್ತ್ರಗಳನ್ನು ಅವನಿಗೆ ಉಡಿಸಿ ಅರಸನ ರಥದಲ್ಲಿ ಅವನನ್ನು ಕುಂಡ್ರಿಸಿ ಅವನ ಮುಂದೆ ಅಬ್ರೆಕ್ (ಮೊಣಕಾಲೂರಿರಿ) ಎಂದು ಕೂಗಲಾಜ್ಞಾಪಿಸಿ ಅವನಿಗೆ ಪ್ಸೊಮ್‌ತೊಮ್ ಫನೇಹ್ (ಜಗದ್ರಕ್ಷಕ) ಎಂದು ಹೆಸರಿಟ್ಟು ಮುಂದಿನ ಬರದ ಕಾಲದಲ್ಲಿ ಮಿಚ್ರ ದೇಶಸ್ಥರ ಸಂರಕ್ಷಣೆಗೆ ಬೇಕಾದದ್ದನ್ನೆಲ್ಲಾ ಮಾಡ ಬೇಕೆಂದು ಅಪ್ಪಣೆ ಕೊಟ್ಟನು. ಯೋಸೇಫನು ಮೂವತ್ತು ವರ್ಷದವನಾಗಿ ಫರೋನನ ಸೇವೆಯಲ್ಲಿ ಶೇರಿ ಐಶ್ವರ್ಯವಾದ ಬೆಳೆಯ ಏಳನೇ ವರ್ಷದಲ್ಲಿ ಯಥೇಷ್ಟ ಧಾನ್ಯವನ್ನು ಕೂಡಿಸಿ ಇಟ್ಟು ಕೊಂಡನು. ಮತ್ತು ಬರದ ಕಾಲವು ಬಂದಾಗ ಜನರೆಲ್ಲರು ಫರೋನನಿಗೆ ಮೊರೆ ಇಡಲು ಯೋಸೇಫನು ಎಲ್ಲರಿಗೆ ಸಂರಕ್ಷಣೆ ಮಾಡಿದನು.

೪) ೧ ಮೋಶೆ. ೪೨—೪೬ನೇ ವರೆಗೂ ಕಾನಾನ್ ದೇಶದಲ್ಲಿಯೂ ಆ ಬರವು ಚಾರವಾಗಿದ್ದದರಿಂದ ಯೋಸೇಫನ ಸಹೋದರರು ಧಾನ್ಯವನ್ನು ಕೊಂಡು ಕೊಳ್ಳಲಿಕ್ಕೆ ಮಿಚ್ರ ದೇಶಕ್ಕೆ ಹೋದರು. (ಬೆನ್ಯಮೀನನು ಮಾತ್ರವೇ ತಂದೆಯ ಬಳಿಯಲ್ಲಿ

ನಿಂತನು.) ಯೋಸೇಫನು ಅವರನ್ನು ನೋಡುತ್ತಲೆ ಅವರ ಗುರ್ತು ತಿಳುಕೊಂಡನು. ಆದರೆ ಮೊದಲು ಅವರನ್ನು ಪರೀಕ್ಷಿಸಿ ಅವರು ಮಾನಸಾಂತ್ರ ಪಡುವ ಹಾಗೆ ಶಿಕ್ಷಿಸ ಬೇಕೆಂದು ಆಲೋಚನೆ ಮಾಡಿದನು. ಈ ಆಲೋಚನೆಯಿಂದ ಅವರನ್ನು ಹೊಂಚುಗಾರರೆಂದು ಕರೆದು ಅವರು ಮೊದಲು ಹೇಳಿದ ಮಾತು ಸತ್ಯವೆಂಬುವದಕ್ಕೆ ಸಾಕ್ಷಿಯಾಗಿ ಮನೆಯಲ್ಲಿ ನಿಂತ ತಮ್ಮನನ್ನು ಕರೆಕೊಂಡು ಬರ ಬೇಕೆಂದು ಆಜ್ಞಾಪಿಸಿದನು. ಸಿಮೆಯೋನನು ಹೊಣೆಯಾಗಿ ಯೋಸೇಫನ ಬಳಿಯಲ್ಲಿ ಇರ ಬೇಕಾಗಿತ್ತು. ಆಗ ಅವರ ಕಠಿಣವಾದ ಮನಸ್ಸು ಕರಗಲಾರಂಭಿಸಿದದರಿಂದ ನಮ್ಮ ತಮ್ಮನ ಪ್ರಾಣಸಂಕಟವನ್ನು ನೋಡಿ ಅವನನ್ನು ಕರುಣಿಸದೆ ಹೋದ ಅಪರಾಧವು ಈಗ ನಮ್ಮನ್ನು ಹಿಡಿಯುತ್ತದೆಂದು ತಮ್ಮೊಳಗೆ ಹೇಳಿ ಕೊಂಡರು. ಸ್ವದೇಶಕ್ಕೆ ತಿರುಗುವ ಪಯಣದಲ್ಲಿ ಅವರು ಕ್ರಯದ ಹಣವನ್ನು ಜಾಳಿಗೆಗಳಲ್ಲಿ ಕಂಡು ಕೊಂಡು ಬಹಳವಾಗಿ ಭಯ ಪಟ್ಟರು. ಯಾಕಂದರೆ ಒಂದು ವೇಳೆ ಈಗ ಕಳ್ಳತನದ ಅಪರಾಧವನ್ನು ಸಹ ನಮ್ಮ ಮೇಲೆ ಹೊರಿಸುವರೆಂದು ಅಂಜಲಿಕ್ಕೆ ಕಾರಣವಾಯಿತು. ಆದದರಿಂದ ಬೇಗ ಮಿಸ್ರ ದೇಶಕ್ಕೆ ಹೋಗಲಿಕ್ಕೆ ಮನಸ್ಸಿಲ್ಲದವರಾಗಿದ್ದರು. ಆದರೆ ಧಾನ್ಯವಿಲ್ಲದ ಸಂಕಟದಿಂದ ಕಡೆಯಲ್ಲಿ ಮಿಸ್ರ ದೇಶಕ್ಕೆ ಹೋಗ ಬೇಕೆಂಬ ಆಲೋಚನೆ ಮಾಡಿದರು. ತಂದೆಯಾದ ಯಾಕೋಬನು ಬೆನ್ಯಮೀನನನ್ನು ಸಹಾ ಸಹೋದರರ ಸಂಗಡ ಪಯಣ ಮಾಡುವದಕ್ಕೆ ಅಪ್ಪಣೆ ಕೊಡಲಿಕ್ಕೆ ಎಷ್ಟು ದುಃಖ ಪಟ್ಟರೂ ಸಮ್ಮತಿಸ ಬೇಕಾಯಿತು. ಅವರು ಯೋಸೇಫನ ಬಳಿಗೆ ಬಂದಾಗ ಅವರ ಜಾಳಿಗೆಗಳು ತಿರಿಗಿ ಧಾನ್ಯದಿಂದ ತುಂಬಲ್ಪಟ್ಟವು. ಆದರೆ ಅವರು ಅಪ್ಪಣೆ ತೆಗದು ಕೊಂಡು ಹೊರಟ ಮೇಲೆ ಯೋಸೇಫನ ಪಾರುಪತ್ಯಗಾರನು ಅವರನ್ನು ಹಿಂದಟ್ಟಿ ತನ್ನ ಯಜಮಾನನ ಬೆಳ್ಳಿಯ ಪಂಚಪಾತ್ರೆಯನ್ನು ಕದ್ದು ಕೊಂಡ ಅಪರಾಧವನ್ನು ಹೊರಿಸಿ ಜಾಳಿಗೆಗಳನ್ನು ಬಿಚ್ಚಿ ಆ ಪಾತ್ರೆಯನ್ನು ಬೆನ್ಯಮೀನನ ಜಾಳಿಗೆಯಲ್ಲಿ ಕಂಡು ಕೊಂಡನು. ಯೋಸೇಫನು ಕಳ್ಳತನ ಮಾಡಿದ ಬೆನ್ಯಮೀನನನ್ನು ದಾಸನಾಗಿ ಹಿಡಿದು ಕೊಳ್ಳುತ್ತೇನೆಂದು ಹೇಳಲು ಸಹೋದರರ ಪರೀಕ್ಷೆ ಪೂರ್ಣವಾಯಿತು. ಹ್ಯಾಗಂದರೆ ಯೋಸೇಫನ ಹಾಗೆ ತಂದೆಗೆ ಮುದ್ದು ಮಗನಾಗಿರುವ ಬೆನ್ಯಮೀನನನ್ನು ಕರುಣಿಸದೆ ಪರರ ಕೈಯಲ್ಲಿ ಬಿಟ್ಟು ಬಿಡುವರೋ ಏನೋ ಈಗ ಪ್ರಕಟವಾಗ ಬೇಕಾಗಿತ್ತು. ಆದರೆ ಈ ಸಾರಿ ಅವರು ಪರೀಕ್ಷಿತರಾದರು. ಹ್ಯಾಗಂದರೆ — ಅವರು ಈಗ ಯೋಸೇಫನ ಮುಂದೆಯೂ ದೇವರು ತಮ್ಮ ಅಪರಾಧವನ್ನು ಹಿಡಿದು ಕೊಂಡನೆಂದು ಖಂಡಿತವಾಗಿ ಅರಿಕೆ ಮಾಡಿದರು. ವಿಶೇಷವಾಗಿ ಯೂದನು ಉಳಿದವರ ಹೆಸರಿನಲ್ಲಿ ನಿಜ ಮಾನಸಾಂತರದಿಂದ ಚಿಂತಾಕ್ರಾಂತನಾಗಿ ಮಾತಾಡಿ ಮುದುಕನಾದ ತಂದೆಯ ದುಃಖವನ್ನು ನೆನಸಿ ಪೂರ್ಣ ಕರುಣದಿಂದಲೂ

ದಾಸನಾಗುವ ಕಂಟಕದಲ್ಲಿರುವ ಬೆನ್ಯಮೀನನನ್ನೂ ನೆನಸಿ ಪೂರ್ಣ ಪ್ರೀತಿಯಿಂದಲೂ ಯೋಸೇಫನಿಗೆ ಮನಃಪೂರ್ವಕವಾಗಿ ಬಿನ್ನಹ ಮಾಡಿದನು. ಆಗ ಯೋಸೇಫನು ತನ್ನ ಮನಸ್ಸನ್ನು ಇನ್ನು ಬಿಗಿ ಮಾಡಲಾರದೆ ಕಣ್ಣೀರಿಟ್ಟು ಅವರ ಕೊರಳಲ್ಲಿ ಬಿದ್ದು ನಿಮ್ಮ ಸಹೋದರನಾದ ಯೋಸೇಫನು ನಾನೇ ಎಂದು ಹೇಳಿದನು. ಮತ್ತು ಫರೋನನು ಯಾಕೋಬನ ಮನೆಯವರನ್ನೂ ಅವರ ಆಸ್ತಿಯನ್ನೂ ಕೊಂಡು ಬರುವದಕ್ಕೆ ಬಂಡಿಗಳನ್ನೂ ಕತ್ತೆಗಳನ್ನೂ ಕಳುಹಿಸಿದನು. ಯಾಕೋಬನು ಇದನ್ನೆಲ್ಲಾ ನೋಡಿ ಕೇಳಲು ನನ್ನ ಮಗನಾದ ಯೋಸೇಫನು ಬದುಕುವದು ಸಾಕು, ಸಾಯುವ ಮೊದಲು ಅವನನ್ನು ನೋಡುವದಕ್ಕೆ ಹೋಗುತ್ತೇನೆ ಅಂದನು.

ಪರಿಶಿಷ್ಟ. ಯೋಸೇಫನ ಚರಿತ್ರವು ಯೇಸು ಕ್ರಿಸ್ತನ ಚರಿತ್ರಕ್ಕೆ ವಿಚಿತ್ರವಾದ ಮುಂಗುರ್ತಾಗಿದೆ. ಕರ್ತನು ಸ್ವಜಾತಿಯವರಾದ ಯೆಹೂದ್ಯರಿಂದ ಪರರ ಕೈಗೆ ಒಪ್ಪಿಸಲ್ಪಟ್ಟ ಪ್ರಕಾರ ಯೋಸೇಫನು ತನ್ನ ಸಹೋದರರಿಂದ ಮಾರಲ್ಪಟ್ಟ; ಕರ್ತನು ಮರಣದ ವರೆಗೂ ತಗ್ಗಿಸಲ್ಪಟ್ಟ ಮೇಲೆ ಪರಲೋಕಗಳ ಮೇಲೆ ಏರಿ ದೇವರ ಬಲಪಾರ್ಶ್ವದಲ್ಲಿ ಕೂತುಕೊಂಡ ಪ್ರಕಾರ ಯೋಸೇಫನು ಸೆರೆಯಲ್ಲಿ ಬಿದ್ದ ಮೇಲೆ ಫರೋನನ ಮುಖ್ಯ ಪ್ರಧಾನಿಯಾದನು. ಈ ಎರಡು ಚರಿತ್ರಗಳ ಸರಿಸಮಾನತ್ವಕ್ಕೆ ವಿಶೇಷ ಕಾರಣವು ಉಂಟು. ಯಾವದಂದರೆ—ಯೇಸು ಕ್ರಿಸ್ತನು ಹಳೇ ಒಡಂಬಡಿಕೆಯ ಸರ್ವ ಚರಿತ್ರಕ್ಕೆ ತುದಿಕಲ್ಲಾಗಿರುವ ಪ್ರಕಾರ ಯೋಸೇಫನು ಪಿತೃಗಳ ಚರಿತ್ರಕ್ಕೆ ತುದಿಕಲ್ಲಾಗಿದ್ದಾನೆ. ಪಿತೃಗಳ ಚರಿತ್ರವು ಇಸ್ರಯೇಲಿನಲ್ಲಿ ದೇವರು ಸ್ಥಾಪಿಸಿದ ರಾಜ್ಯದ ಆರಂಭವಾಗಿದ್ದು ಹಳೇ ಒಡಂಬಡಿಕೆಯಲ್ಲಿ ಕಾಣುವ ದೇವರ ರಾಜ್ಯದ ಸರ್ವ ಚರಿತ್ರಕ್ಕೆ ಮುಂಗುರ್ತಾಗಿದ್ದವು. ಆದದರಿಂದ ಯೋಸೇಫನಲ್ಲಿ ಪಿತೃಗಳ ಕಾಲದ ಕಾರ್ಯವೂ, ಯೇಸು ಕ್ರಿಸ್ತನಲ್ಲಿ ಹಳೇ ಒಡಂಬಡಿಕೆಯ ಮನೇವಾರ್ತೆಯೂ, ಸಂಪೂರ್ಣವಾಗಿಯೂ ಪ್ರತ್ಯಕ್ಷವಾಯಿತು.



## § 27. ಯಾಕೋಬ್, ಯೋಸೇಫರ ಕಡೇ ದಿವಸಗಳು

೧) ೧ ಮೋಶೆ. ೪೬ — ೪೭ ಸಂಧಿಗಳು. ಯಾಕೋಬನ ಮನೆಯವರು ಮಿಸ್ರ ದೇಶಕ್ಕೆ ಹೋಗುವಾಗ ಮದಿವೆ ಮಾಡಿ ಕೊಂಡ ಪರವಂಶದ ಹೆಂಡರೂ ಚಾಕರರೂ ಇವರ ಹೊರ್ತು ಎಪ್ಪತ್ತು ಮಂದಿಯಾಗಿದ್ದರು. ಕಾನಾನ್ ದೇಶದ ಪ್ರಾಂತ್ಯದಲ್ಲಿದ್ದ ಬೆರ್ಶಬದಲ್ಲಿ ಕರ್ತನು ಯಾಕೋಬನಿಗೆ ಪ್ರತ್ಯಕ್ಷವಾಗಿ ಅವನ ವಾಸಾಂತರಕ್ಕೆ

ಸಮ್ಮತಿಸಿದನು. ಯಾಕೋಬನು ಫರೋನನ ಮುಂದೆ ಬಂದಾಗ ಫರೋನನು ದೇವರು ಆದು ಕೊಂಡ ಜನಾಂಗದ ಪೂರ್ವಜನಾದ ಘನವುಳ್ಳ ವೃದ್ಧಾಪ್ಯದ ಮುಖ್ಯಸ್ಥನ ಕೈಯಿಂದ ಆಶೀರ್ವಾದವನ್ನು ತಕ್ಕೊಂಡನು. ಮತ್ತು ಇಸ್ರಯೇಲನವರಿಗೆ ಮೇವಿಗೆ ಉತ್ತಮವಾದ ಗೋಷೆನ್ ಸೀಮೆಯನ್ನು ವಾಸಸ್ಥಳವಾಗಿ ನೇಮಿಸಿ ತನ್ನ ಮಂದೆಗಳನ್ನು ಅವರಿಗೆ ಕಾಯುವದಕ್ಕೆ ಒಪ್ಪಿಸಿ ಕೊಟ್ಟನು. (ಗೋಷೆನ್ ಸೀಮೆಯು ಪೆಲೂಸಿಕವೆಂಬ ನೀಲ್‌ನದಿಯ ಭಾಗಕ್ಕೂ ಮಿಚ್ರದ ಹಾಳೆ ಎಂಬ ರಿನೋಕೊಲೂರಕ್ಕೂ ಮಧ್ಯದಲ್ಲಿ ಇತ್ತು.) ಇದು ಆದಾಮನು ನಿರ್ಮಿಸಲ್ಪಟ್ಟ ೨೨೯೮ನೇ ವರ್ಷದಲ್ಲಿ ಆಯಿತು.

ಪರಿಶಿಷ್ಟ. ದೇವರು ಯಾಕೋಬನನ್ನೂ ಅವನ ಮನೆಯವರನ್ನೂ ಯಾಕೆ ಮಿಚ್ರ ದೇಶಕ್ಕೆ ಕಳುಹಿಸಿದನೆಂದು ಆಲೋಚನೆ ಮಾಡಿದರೆ ಕೆಲವು ಕಾರಣಗಳು ಕಾಣುತ್ತವೆ.

ಯಾಕೋಬನ ವಂಶವು ಬಹಳವಾಗಿ ಬೆಳೆಯಲಾರಂಭಿಸಿದದರಿಂದ ಅವರು ಕಾನಾನ್ ದೇಶದಲ್ಲಿ ಸ್ಥಿರವಾಗಿ ವಾಸ ಮಾಡಿದರಾದರೆ ಕಾನಾನ್ ದೇಶಸ್ಥರನ್ನು ಕೂಡಿ ಅವರ ದುರ್ಮಾರ್ಗಗಳಲ್ಲಿ ಸೇರುವ ಗಂಡಾಂತರದಲ್ಲಿ ಬೀಳುತ್ತಿದ್ದರು.

ಮಿಚ್ರದಲ್ಲಿ ಅವರಿಗೆ ಇಂಥಾ ಕಂಟಕವು ಆಗ ಕೂಡದಿತ್ತು. ಯಾಕಂದರೆ ಫರೋನನು ಅವರಿಗೆ ಕೊಟ್ಟ ಗೋಷೆನ್ ಸೀಮೆಯು ಅವರು ದೊಡ್ಡ ಜನಾಂಗ ಆಗುವ ಪರ್ಯಂತರ ಸಾಕಷ್ಟು ವಿಸ್ತಾರವಾಗಿತ್ತು. ಮತ್ತು ಮಿಚ್ರದವರು ಕುರುಬರನ್ನು (ಹಿಂದು ಜನರ ಪ್ರಕಾರ) ಬಹಳವಾಗಿ ಅಸಹ್ಯಿಸಿದದರಿಂದ ಎರಡು ಜನಾಂಗಕ್ಕೆ ಅನ್ಯೋನ್ಯವುಂಟಾಗ ಕೂಡದಿತ್ತು. ಇದಲ್ಲದೆ ಇಸ್ರಯೇಲನವರು ನಾನಾ ವಿದ್ಯಗಳಲ್ಲಿ ಪ್ರವೀಣರಾಗಿದ್ದ ಮಿಚ್ರದವರಿಂದ ನಾನಾವಿಧದ ಉಪದೇಶವನ್ನು ಹೊಂದಲಿಕ್ಕಿದ್ದರು. ಮತ್ತು ಮಿಚ್ರದವರು ತದನಂತರ ಇಸ್ರಯೇಲನವರಿಗೆ ಕೊಟ್ಟ ಉಪದ್ರವೂ ಕಡೆಯಲ್ಲಿ ಅವರಿಗೆ ಮಾಡಿದ ಹಿಂಸೆಯೂ ದೇವರು ಆದು ಕೊಂಡ ಜನಾಂಗಕ್ಕೆ ಒಳ್ಳೇ ಸಾಧನೆಯ ಉಪಾಯವಾಯಿತು. ಅಬ್ರಹಾಮನ ವಂಶದವರು ಈ ವರೆಗೆ ಕುರುಬರಾಗಿ ಜೀವನ ಮಾಡುತ್ತಾ ಬಂದರು. ಆದರೆ ವಾಗ್ದತ್ತದೇಶವನ್ನು ಸ್ವತಂತ್ರಿಸಿ ಕೊಂಡ ಕಾಲದಿಂದ ಅವರು ವ್ಯವಸಾಯದಿಂದ ಬದುಕಲಾರಂಭಿಸ ಬೇಕಾಗಿತ್ತು. ಮಿಚ್ರದಲ್ಲಿ ಈ ಹೊಸ ಜೀವನದ ಮಾರ್ಗವನ್ನು ಕಲಿತು ಕೊಳ್ಳುವ ಸಮಯವು ಇತ್ತು.

೨) ೧ ಮೋಶೆ. ೪೮—೪೯ ಸಂಧಿಗಳು. ಯಾಕೋಬನು ಸಾಯುವದಕ್ಕಿಂತ ಮುಂಚೆ ಯೋಸೇಫನ ಇಬ್ಬರು ಗಂಡುಮಕ್ಕಳನ್ನು ಸ್ವೀಕರಿಸಿದನು. ಅವರು ಮಿಚ್ರದಲ್ಲಿ ದೊಡ್ಡ ಅಧಿಕಾರಿಗಳಾಗ ಬಹುದಿತ್ತು. ಆದರೆ ಯೋಸೇಫನು ವಿಶ್ವಾಸ

ದಿಂದ ಆಲೋಚನೆ ಮಾಡಿ ತನ್ನ ಮಕ್ಕಳು ವಾಗ್ದತ್ತದೇಶದಲ್ಲಿ ಪಾಲು ಹೊಂದುವ ಹಾಗೆ ಅವರನ್ನು ಕುರುಬರಾದ ತನ್ನ ಸಹೋದರರ ಮಾರ್ಗದಲ್ಲಿ ಸೇರಿಸಿದನು.

ಸಾಯುವದಕ್ಕಿಂತ ಮುಂಚೆ ಯಾಕೋಬನು ಹನ್ನೆರಡು ಮಂದಿ ಮಕ್ಕಳನ್ನು ಕೂಡಾ ಕರೆದು ವಾಗ್ದತ್ತದೇಶದಲ್ಲಿ ಅವರಿಗೆ ಬರುವ ಮುಂದಿನ ಗತಿಯನ್ನು ಪ್ರವಾದಿಸಿದನು. ರೂಬೆನ್, ಸಿಮಿಯೋನ್, ಲೇವ್ಯರು ಮುಂಚೆ ಮಾಡಿದ ಅಪರಾಧಗಳ ನಿಮಿತ್ತ ಚೊಚ್ಚಲತನವನ್ನು ಕಳಕೊಂಡರು.

ಇಮ್ಮಡಿಯಾದ ಬಾಧ್ಯತೆಯು (೫ ಮೋಶೆ. ೨೧, ೧೭.) ಯೋಸೇಫನಿಗೆ ಮನಸ್ಸೆ ಎಫ್ರಾಯಿಮರಿಬ್ಬರು ಯಾಕೋಬನಿಗೆ ದತ್ತಪುತ್ರರಾದದರಿಂದ ಸಿಕ್ಕಿತು.

ಶ್ರೇಷ್ಠತ್ವವೂ ವಾಗ್ದತ್ತದ ಆಶೀರ್ವಾದವೂ ಯೂದನಿಗೆ ಪ್ರಾಪ್ತಿಯಾದವು. ಸಾಯುವ ತಂದೆಯು ಯೂದನಿಗೆ ಹೇಳಿದ್ದೇನಂದರೆ — ನೀನು ಯೂದಾ (ಹೊಗಳಲ್ಪಡುವವನು) ನಿನ್ನ ಸಹೋದರರು ನಿನ್ನನ್ನು ಹೊಗಳುವರು. ನಿನ್ನ ತಂದೆಯ ಮಕ್ಕಳು ನಿನ್ನ ಮುಂದೆ ಅಡ್ಡ ಬೀಳುವರು. ಯೂದಾ ಎಳೇ ಸಿಂಹನಾಗಿದ್ದಾನೆ. ಸಮಾಧಾನ (ಸಮಾಧಾನಕ್ಕೆ) ಬರುವ ಪರ್ಯಂತರಕ್ಕೂ ಜನಾಂಗಗಳು ಅವನಿಗೆ ವಿಧೇಯವಾಗುವ ಪರ್ಯಂತರಕ್ಕೂ ಪಟ್ಟವು ಯೂದನಿಂದ ತೊಲಗದು ರಾಜ್ಯಕೋಲು ಅವನ ಪಾದಗಳ ಮಧ್ಯದಲ್ಲಿಂದ ಹೋಗದು.

೩) ೧ ಮೋಶೆ. ೫೦ ಸಂಧಿ. ಯಾಕೋಬನು ನೂರ ನಾಲ್ವತ್ತೇಳು ವರ್ಷದವನಾಗಿ ತೀರಿದನು. ಅವನು ವಿಶ್ವಾಸದಿಂದ ಮಾಡಿದ ಅಪೇಕ್ಷೆಯ ಪ್ರಕಾರ ಅವನ ಮಕ್ಕಳು ಅವನ ಶವವನ್ನು ಬಗೆದು ಪರಿಮಳ ತುಂಬಿ ಕಾನಾನ್ ದೇಶಕ್ಕೆ ವೈದು ಅಬ್ರಹಾಮ್ ಇಸಾಕರು ಹೂಳಲ್ಪಟ್ಟಲ್ಲಿ ಹೂಳಿಟ್ಟರು. ಮಿಸ್ರದವರಲ್ಲಿ ಅನೇಕರು ಅವರ ಸಂಗಡ ಹೋದರು. ಯೋಸೇಫನು ತಂದೆಯ ಮರಣದ ಮೇಲೆ ಸಹೋದರರ ಹೃದಯಗಳಲ್ಲಿ ಹುಟ್ಟಿದ ಭಯವನ್ನು ನಿವಾರಿಸುವದಕ್ಕೆ ಪ್ರೀತಿಯಿಂದ ಅವರ ಸಂಗಡ ಮಾತಾಡಿ ನೀವು ನನಗೆ ಕೇಡು ಮಾಡ ಮನಸ್ಸಾಗಿದ್ದಿರಿ. ಆದರೆ ದೇವರು ಮೇಲು ಮಾಡಿದನು. ಈಗ ಪ್ರಕಟವಾಗಿರುವ ಪ್ರಕಾರ ಅನೇಕ ಜನರನ್ನು ಸಂರಕ್ಷಿಸುವದಕ್ಕಾಗಿಯೇ ಎಂದು ಅವರಿಗೆ ಹೇಳಿದನು. ಅವನ ಮರಣವು ಸಮೀಪಿಸುವಾಗ ಅವನು (ವಿಶ್ವಾಸದಿಂದ ಇಬ್ರಿ. ೧೧, ೨೨.) ಇಸ್ರಯೇಲನವರು ಕಾನಾನ್ ದೇಶಕ್ಕೆ ತಿರಿಗಿ ಹೋಗುವಾಗ ತನ್ನ ಎಲುಬುಗಳನ್ನು ತೆಕ್ಕೊಂಡು ಹೋಗ ಬೇಕೆಂದು (ಯೋಶು. ೨೪, ೩೨. )ಆಜ್ಞಾಪಿಸಿ ತನಗೆ ಆಣೆ ಇಡ ಬೇಕೆಂದು ಸಹೋದರರಿಗೆ ಹೇಳಿದನು.

ಪರಿಶಿಷ್ಟ. ಅಬ್ರಹಾಮನಲ್ಲಿ ಚಂಚಲವಿಲ್ಲದ ಪೂರ್ಣ ದೃಢವಾದ ವಿಶ್ವಾಸದ ವಿಧೇಯತ್ವವೂ ಇಸಾಕನಲ್ಲಿ ಸಮಾಧಾನವಾಗಿ ಕಾದು ಕೊಳ್ಳುವ ವಿಶ್ವಾಸದ

ತಾಳ್ಮೆಯೂ ವಿಶೇಷವಾಗಿ ಪ್ರಕಟವಾಗಿವೆ. ಯಾಕೋಬನಲ್ಲಿ ರಕ್ತ ಮಾಂಸಗಳ ಸಂಗಡಲೂ ಲೋಕವಿರುದ್ಧದ ಸಂಗಡಲೂ ನಡಿಯುವ ವಿಶ್ವಾಸದ ಹೋರಾಟವು. ಯೋಸೇಫನಲ್ಲಿ ಶ್ರಮೆ ತಾಳುವದರಲ್ಲಿಯೂ ಕೆಲಸ ಮಾಡುವದರಲ್ಲಿ ಪರೀಕ್ಷಿತವಾಗಿ ಕಡೆಯಲ್ಲಿ ಸೌಖ್ಯ ಜಯುಗಳ ಕಿರೀಟವನ್ನು ಹೊಂದುವ ವಿಶ್ವಾಸದ ಸತ್ಯವು ಪ್ರಸಿದ್ಧಿಯಾಗಿವೆ.



## ಎ ರ ಡ ನೇ ಕಾ ಲ

## ಮೋಶೆಯೂ ನೇಮದಾನವೂ

(೧೨೦ ವರ್ಷದ ಕಾಲ)

### § 28. ಈ ಕಾಲದ ಚರಿತ್ರದ ಸಾರಾಂಶ

ಮಿಸ್ರದಲ್ಲಿ ದೇವರು ಆಯು ಕೊಂಡ ಮನೆತನವು ಬೆಳದು ಒಂದು ಜನಾಂಗವಾಯಿತು. ಇಸ್ರಾಯೇಲನವರು ಮಿಸ್ರದಿಂದ ಹೊರಟ ದಿವಸವು ಹೊಸ ಜನಾಂಗದ ಜನನದಿವಸವಾಯಿತು. ಈ ಲೋಕದಲ್ಲಿ ಸೇರುವ ಮನುಷ್ಯರೆಲ್ಲರು ನೋವು ಇಲ್ಲದೆ ತಾಯಿಯ ಗರ್ಭವನ್ನು ಬಿಡದೆ ಇರುವ ಪ್ರಕಾರ ಇಸ್ರಾಯೇಲನವರು ಮಿಸ್ರದವರ ಕೈಯಿಂದ ಅನುಭವಿಸಿದ ದಾಸತ್ವದ ಶ್ರಮಗಳು ಅವರ ಜನಾಂಗಕ್ಕೆ ಹುಟ್ಟುವ ನೋವು ಆಗಿತ್ತು. ಮಿಸ್ರದಿಂದ ಹೊರಟದರಿಂದಲೇ ಇಸ್ರಾಯೇಲನು ಪ್ರತ್ಯೇಕ ಜನಾಂಗವಾಗಿ ಬೇರೆ ಜನಾಂಗಗಳ ಐಕ್ಯದಲ್ಲಿ ಸೇರಿದನು. ಹೊರಡೋಣವು ಜನ್ಮದ ಹಾಗೆ ಇದ್ದರೆ ನೇಮದಾನವು ಪುನರ್ಜನ್ಮದ ಸ್ನಾನದ ಹಾಗಿದೆ. ಇದರಿಂದ ಇಸ್ರಾಯೇಲನ ಜನಾಂಗವು ದೇವರ ಜನಾಂಗವಾಗಿ ಉಳಿದ ಎಲ್ಲಾ ಜನಾಂಗಗಳಿಗಿಂತ ಘನವುಳ್ಳದ್ದಾಯಿತು. ನೇಮದಾನದ ಮುಖಾಂತರ ಇಸ್ರಾಯೇಲನು ಯೆಹೋವನ ಸ್ವಾಸ್ಥ್ಯವಾಗಿಯೂ ಯೆಹೋವನ ಚೊಚ್ಚಲಮಗನಾಗಿಯೂ ಯಾಜಕರಾಜ್ಯವಾಗಿಯೂ ಪರಿಶುದ್ಧ ಜನಾಂಗವಾಗಿಯೂ ಸ್ಥಾಪಿಸಲ್ಪಟ್ಟನು. ನೇಮವು ಬೇಲಿಯಂತೆ ಇಸ್ರಾಯೇಲನನ್ನು ಬೇರೆ ಜನಾಂಗಗಳಿಂದ ಪ್ರತ್ಯೇಕಿಸಿ ಕ್ರಿಸ್ತನ ಬಳಿಗೆ ಕೊಂಡು ಹೋಗುವ ಉಪಾಧ್ಯನಂತೆಯೂ ಬರುವ ಒಡವೆಗಳ ನೆರಳೂ ಆಗಿದೆ. ಈ ಕಾರ್ಯವನ್ನೆಲ್ಲಾ ದೇವರು ಒಬ್ಬ ಮನುಷ್ಯನಿಂದ ಪೂರೈಸಿದನು. ಅವನ್ಯಾರಂದರೆ ಮೋಶೆ. ಅವನಲ್ಲಿ ಸಹಜವಾದ ಬುದ್ಧಿಯೂ ಬಲವೂ ವಿಶೇಷವಾಗಿದ್ದವು. ಮಿಸ್ರದವರಾದ ಜ್ಞಾನಿಗಳಿಂದ ಜ್ಞಾನೋಪದೇಶವನ್ನು ಹೊಂದಿದನು. ದೇವರು ಅವನಿಗೆ ನೇಮಿಸಿದ ಮಾರ್ಗದ

ಲ್ಲಿ ಆಳುವದನ್ನೂ ಆಳಾಗಿರುವದನ್ನೂ ಕಲಿತು ಕೊಂಡನು. ಇದಲ್ಲದೆ ದೇವರ ಆತ್ಮ ಪ ಮುದ್ರೆಯನ್ನು ಹೊಂದಿ ತನ್ನ ಉದ್ಯೋಗಕ್ಕೆ ಬೇಕಾದ ಸಾಮರ್ಥ್ಯವನ್ನು ಅದೇ ಆ ತ್ಮದಿಂದ ಹೊಂದಿದನು. ಮೋಶೆಯು ತನ್ನ ಮನೆಯಲ್ಲೆಲ್ಲಾ ನಂಬಿಕೆಯುಳ್ಳವನಾಗಿದ್ದ ದೇವರ ಸೇವಕನಾಗಿಯೂ ಹಳೇ ಒಡಂಬಡಿಕೆಯ ಮಧ್ಯಸ್ಥಗಾರನಾಗಿಯೂ ಹೊಸ ಒಡಂಬಡಿಕೆಯ ಮಧ್ಯಸ್ಥಗಾರನಾದ ಕ್ರಿಸ್ತನ ಮುಂಗುರ್ತಾಗಿಯೂ ಯೆಹೋವನ ಸಲಿಗೆಯಲ್ಲಿದ್ದ ನೇಮದಾಯಕನಾಗಿಯೂ ಪ್ರವಾದಿಯಾಗಿಯೂ ಇದ್ದನು. ಈ ಕಾಲದ ಚರಿತ್ರಗಳು ಕಡೇ ನಾಲ್ಕು ಮೋಶೆಯ ಪುಸ್ತಕಗಳಲ್ಲಿ ಬರೆದದೆ.

ಪರಿಶಿಷ್ಟ. ೧. ಯೆಹೋವನು ತನ್ನ ಜನರನ್ನು ಬಲವಾದ ಕೈಯಿಂದ ದಾಸತ್ವದ ಮನೆಗೆ ತಪ್ಪಿಸಿ ವಾಗ್ದತ್ತದೇಶಕ್ಕೆ ಕೊಂಡು ಹೋದದರಲ್ಲಿಯೂ ಅರಣ್ಯದಲ್ಲಿ ಅವರನ್ನು ನಡಿಸಿ ಸಂರಕ್ಷಿಸಿದದರಲ್ಲಿಯೂ ಆತನು ತೋರಿಸಿದ ಅದ್ಭುತಕಾರ್ಯಗಳು ವಾಗ್ದತ್ತವನ್ನು ಕೈಕೊಳ್ಳುವ ಕರ್ತನ ಸತ್ಯಕ್ಕೆ ಸಾಕ್ಷಿಗಳಾಗಿದ್ದು ಮುಂದಿನ ರಕ್ಷಣೆಗೆ ಸಂಚಕಾರವೂ ಮುಂಗುರ್ತೂ ಆಗಿವೆ. ಇಸ್ರಯೇಲನ ಜನಾಂಗವು ತೋರಿಸಿದ ಅವಿಧೇಯತ್ವವೂ ಕಾಠಿಣ್ಯವೂ ಮನುಷ್ಯರು ತಮಗೆ ಪ್ರಕಟವಾಗುವ ಪರಿಶುದ್ಧನಾದ ದೇವರ ಕೃಪೆಗೆ ಅಪಾತ್ರರಾಗಿದ್ದಾರೆಂಬದಕ್ಕೆ ಉದಾಹರಣೆಯಾಗಿವೆ. ಯೆಹೋವನು ಆಗಾಗ್ಯೆ ಅವಿಧೇಯರಿಗೆ ಕೊಟ್ಟ ಶಿಕ್ಷೆಗಳೂ ವಿಶೇಷವಾಗಿ ಕಾದೇಷಿನಲ್ಲಿ ಆದ ತೀರ್ಪೂ ದೇವರ ನ್ಯಾಯತೀರ್ವಿಕೆಗೆ ಯಾರೂ ತಪ್ಪಿಸಿ ಕೊಳ್ಳಕೂಡದೆಂದೂ ಆತನು ಸ್ವಂತ ಜನರನ್ನು ವಿಶೇಷವಾಗಿ ಶಿಕ್ಷಿಸುತ್ತಾನೆಂಗೂ ಈ ಚರಿತ್ರ ಓದುವವರೆಲ್ಲರನ್ನು ಎಚ್ಚರಿಸ ತಕ್ಕ ದೃಷ್ಟಾಂತವಾಗಿವೆ. ಮತ್ತು ಇಸ್ರಯೇಲನವರು ಅರಣ್ಯವನ್ನು ಸಂಚರಿಸಿ ಕಡೆಯಲ್ಲಿ ಹಾಲೂ ಜೇನೂ ಹರಿಯುವ ಶಾಂತಿಯ ದೇಶಕ್ಕೆ ಬಂದ ಕಥೆಯು ಅವರ ಜನಾಂಗದ ಪೂರ್ಣ ಚರಿತ್ರಕ್ಕೂ ಲೋಕದಲ್ಲಿರುವ ಎಲ್ಲಾ ಮನುಷ್ಯರ ಜೀವನಕ್ಕೂ ಮಾದರಿಯಾಗಿದೆ. ಯಾಕಂದರೆ ದೇವರ ಜನಾಂಗಕ್ಕೆ ಇನ್ನೊಂದು ವಿಶ್ರಾಂತಿ ಉಳಿದದೆ. ಇಬ್ರಿಯರ ೪, ೯. ವಚನವು.

ಪರಿಶಿಷ್ಟ. ೨. ಮೋಶೆ ಆರೋನರ ವಂಶಾವಳಿ ಯಾವದಂದರೆ:

ಲೇವಿ

ಕಾಹಾತ್, ಗೆರ್ಷೋನ್, ಮೆರಾರಿ

ಅಮ್ರಾಮ್ (ಯೊಕೆಬೆದಳು)

ಮಿರಿಯಾಮಳು, ಆರೋನ್, ಮೋಶೆ

ನಾದಾಬ್, ಅಬೀಹು, ಎಲಿಯಾಜರ್, ಇಥಮಾರ್

೧೬ ಯಾಜಕರ ತರಗಳು. ೮ ತರಗಳು.

## § 29. ಇಸ್ರಯೇಲನ ದಾಸತ್ವವು

೧) ೨ ಮೋಶೆ. ೧ ಸಂಧಿ. ಇಸ್ರಯೇಲನವರು ನಾನೂರ ಮೂವತ್ತು (೧೨, ४೦.) ವರ್ಷ ಮಿಚ್ರದಲ್ಲಿದ್ದಾಗ ದೊಡ್ಡ ಜನಾಂಗವಾದರು. (ಅವರು ಮಿಚ್ರದಿಂದ ಹೊರ ಟಾಗ ಸುಮಾರು ೨೫ಲಕ್ಷ ಜನರಾಗಿದ್ದರು; ಯಾಕಂದರೆ ಆರು ಲಕ್ಷ ಮಂದಿ ಯುದ್ಧ ಸ್ಥರು ಅವರಲ್ಲಿ ಇದ್ದರು.) ಮಿಚ್ರದವರು ಇಸ್ರಯೇಲನವರ ವೃದ್ಧಿಯನ್ನು ನೋಡಿ ಚಯ ಪಟ್ಟರು. ಯೋಸೇಫನ ಚರಿತ್ರೆಯನ್ನು ತಿಳಿಯದೆ ಇರುವ ಹೊಸ ಅರಸನು ಸಂ ಸ್ಥಾನವನ್ನು ಸ್ಥಾಪಿಸಿದಾಗ ಅವನು ಇಸ್ರಯೇಲನವರನ್ನು ನಾನಾವಿಧದ ಬಿಟ್ಟಿ ಕೆಲ ಸಗಳಿಂದಲೂ ಬೇರೆ ಚಾರಗಳಿಂದಲೂ ಬಹಳವಾಗಿ ಶ್ರಮೆ ಪಡಿಸಿದನು. ಆದರೆ ಮಿ ಚ್ರದವರು ಇಸ್ರಯೇಲನವರಿಗೆ ಎಷ್ಟು ಹೆಚ್ಚಾಗಿ ಉಪದ್ರ ಪಡಿಸಿದರೋ ಅಷ್ಟು ಹೆ ಚ್ಚಾಗಿ ಅವರು ಬೆಳದು ಬಲಗೊಂಡರು. ಗಂಡುಕೂಸುಗಳನ್ನು ಹುಟ್ಟುತ್ತಲೇ ಕೊ ಲ್ಲ ಬೇಕೆಂದು ಸೂಲಗಿತ್ತಿಯರಿಗೆ ಫರೋನನು ಕೊಟ್ಟ ಆಜ್ಞೆಯು ಸಹಾ ನಿರರ್ಥಕವಾ ಯಿತು. ಆದದರಿಂದ ಫರೋನನು ಮಿಚ್ರದವರೆಲ್ಲರಿಗೆ — ಇಸ್ರಯೇಲನವರಲ್ಲಿ ಹು ಟ್ಟುವ ಗಂಡುಕೂಸುಗಳನ್ನೆಲ್ಲಾ ನೀರಿನಲ್ಲಿ ಹಾಕ ಬೇಕೆಂದು ಅಜ್ಞಾಪಿಸಿದನು.

ಪರಿಶಿಷ್ಟ. ೧. ಇಸ್ರಯೇಲನವರು ಅಷ್ಟು ಬೇಗ ಅಪರೂಪವಾದ ರೀತಿಯಿಂದ ವೃದ್ಧಿಯಾದ ಕಾರಣವೇನಂದರೆ: ಯೆಹೋವನು ಅಬ್ರಹಾಮನಿಗೂ ಇಸಾಕನಿಗೂ ಯಾಕೋಬನಿಗೂ ಕೊಟ್ಟ ಆಶೀರ್ವಾದವು. ಆದರೆ ೭೦ಮಂದಿಯಿಂದ ४३೦ವರ್ಷ ಗಳಲ್ಲಿ ೨೫ಲಕ್ಷ ಜನರು ಹುಟ್ಟಿದರೆಂದು ನೆನಸುವದಕ್ಕೆ ಕಾರಣವಿಲ್ಲ. ಯಾಕೋಬನ ಸಂಗಡ ೭೦ಮಂದಿ ಮಿಚ್ರಕ್ಕೆ ಬಂದರೆಂದು ಬರೆದದ್ದು ಸರಿ. ಆದರೆ ಎರಡನೇ ಮೋಶೆ ೧ಸಂಧಿಯ ೫ನೆಯ ಪ್ರಕಾರ ಈ ಎಪ್ಪತ್ತು ಮಂದಿ ಯಾಕೋಬನಿಂದ ಹುಟ್ಟಿದವರೇ. ಈ ಎಪ್ಪತ್ತು ಮಂದಿಯ ಸಂಗಡ ಒಂದು ವೇಳೆ ಸೇವಕರೂ ಸೇವಕಿಯರೂ ಆದ ಕೆ ಲವು ಸಾವಿರ ಜನರು ಬಂದರು. ಇವರಲ್ಲಿ ಪರಿಛೇದನೆಯನ್ನು ಹೊಂದಿದವರೆಲ್ಲರು ಇ ಸ್ರಯೇಲನ ಜನಾಂಗದಲ್ಲಿ ಹುಟ್ಟಿದವರ ಹಾಗೆ ಇದ್ದರು. ಅಬ್ರಹಾಮನ ಮನೆಯಲ್ಲಿ ಹುಟ್ಟಿದಂಥ ಯುದ್ಧಕ್ಕೆ ಹೋಗ ಶಕ್ಯಂಥ ಸೇವಕರ ಲೆಖ್ಖವು ೩೧೮ ಆಗಿತ್ತು. ಏಸಾ ವನು ಯಾಕೋಬನಿಗೆ ಎದುರು ಬಂದಾಗ ನಾನೂರು ಮಂದಿ ಯುದ್ಧಸ್ಥರು ಅವನ ಸಂಗಡವಿದ್ದರು. ಮತ್ತು ಯಾಕೋಬನು ಮೆಸೊಪೊತಾಮ್ಯದಿಂದ ತಿರಿಗಿ ಬರುವಾಗ ನಾನು ಎರಡು ದಂಡು ಆದೆನೆಂದು ಹೇಳುತ್ತಾನೆ.

ಪರಿಶಿಷ್ಟ. ೨. ಮಾನೆಥೊ ಎಂಬ ಮಿಚ್ರ ದೇಶಸ್ಥನಾದ ಚರಿತ್ರಕರ್ತನು ಹಿ ಕ್ಸೊಸ್ ಗೊಲ್ಲರಾದ ಅರಸುಗಳ ವಿಷಯವಾಗಿ ಬರೆದದ್ದೇನಂದರೆ — ಅವರು ಮೂಡ

ಈ ದಿಕ್ಕಿನಿಂದ ಬಂದು ಮಿಚ್ರ ದೇಶದಲ್ಲಿ ಹೊಕ್ಕು ಅದನ್ನು ಯುದ್ಧವಿಲ್ಲದೆ ಸ್ವತಂತ್ರಿಸಿ ಕೊಂಡ ಮೇಲೆ ಅದರ ಪಟ್ಣಗಳನ್ನೂ ದೇವಾಲಯಗಳನ್ನೂ ಸುಟ್ಟು ಬಿಟ್ಟು ತಮ್ಮಲ್ಲಿ ಹುಟ್ಟಿದ ಸಾಲತಿಸ್ ಎಂಬ ಒಬ್ಬನಿಗೆ ಪಟ್ಟ ಕಟ್ಟಿದರು. ಆ ಕಾಲದಿಂದ ಅವರು ಐನೂರ ಹನ್ನೊಂದು ವರ್ಷದ ವರೆಗೂ ಮಿಚ್ರದ ಮೇಲೆ ಧೊರೆತನ ಮಾಡಿ ಕಡೆಯಲ್ಲಿ ಅಪಜಯರಾಗಿ ಅರಣ್ಯಕ್ಕೆ ಓಡಿ ಹೋಗಿ, ಅಲ್ಲಿಂದ ಸೂರ್ಯ ದೇಶದಲ್ಲಿ ಪ್ರವೇಶಿಸಿ ಯೆರೂಸಲೇಮ್ ಪಟ್ಣವನ್ನು ಕಟ್ಟಿದರು. ಮಾನೆಥೊ ಇಸ್ರಯೇಲನವರು ಮಿಚ್ರ ದೇಶದಲ್ಲಿ ಮಾಡಿದ ಪರವಾಸದ ಕಥೆಯನ್ನು ಕೇಳಿ ಇದನ್ನು ಬರೆದನೆಂದು ಅನೇಕರು ನೆನಸುತ್ತಾರೆ. ಕೆಲವರು ನೆನಸುವದೇನಂದರೆ—ಇಸ್ರಯೇಲನವರು ಹಿಕ್ಸೊಸ್ ಎಂಬ ಜನರಾಗಿದ್ದರು. ಯಾಕಂದರೆ ಹಿಕ್ಸೊಸ್ ಜನರು ಗೋಷೆನ್ ಸೀಮೆಯಲ್ಲಿ ವಾಸವಾಬಿದ್ದರೆಂದೂ ಸಾಲತಿಸ್ ಎಂಬವನು ವರ್ಷ ವರ್ಷಕ್ಕೆ ಬೆಳೆದ ಧಾನ್ಯವನ್ನು ಅಳತೆ ಮಾಡಿ ಮಾರಿದನೆಂದೂ ಅವರು ಅರಣ್ಯವನ್ನು ದಾಟಿ ಕಾನಾನ್ ದೇಶದಲ್ಲಿ ವಸ್ತಿಯಾಗಿ ಯೆರೂಸಲೇಮ್ ಪಟ್ಣವನ್ನು ಕಟ್ಟಿಸಿದರೆಂದೂ ಮಾನೆಥೊ ಬರೆದಿದ್ಧಾನೆ. ಅವನು ಹಿಕ್ಸೊಸ್ ಜನರು ಮಿಚ್ರ ದೇಶವನ್ನು ಯುದ್ಧವಿಲ್ಲದೆ ತಮ್ಮ ವಶ ಮಾಡಿಕೊಂಡು ಮಿಚ್ರದವರನ್ನು ಬಹಳವಾಗಿ ಉಪದ್ರ ಪಡಿಸಿ ಅಣಗಿಸಿದರೆಂಬ ಸುದ್ದಿ ಒಂದು ವೇಳೆ ಪೂರ್ವಕಾಲವಲ್ಲಿ ಮಿಚ್ರದವರ ಕಲ್ಪನೆಯಿಂದ ಉಂಟಾಯಿತು. ಮಿಚ್ರದವರಿಗೆ ಇಸ್ರಯೇಲನವರ ಮೇಲೆ ಬಹಳ ಕೋಪವೂ ದ್ವೇಷವೂ ಇದ್ದದ್ದು ಆಶ್ಚರ್ಯವಾದದ್ದಲ್ಲ. ಈ ದ್ವೇಷದಿಂದ ಅವರು ಒಂದು ವೇಳೆ ಯೋಸೇಫನ ಕಾಲದಲ್ಲಿಯೂ ಮೋಶೇ ಕಾಲದಲ್ಲಿಯೂ ಆದ ಸಂಗತಿಗಳನ್ನು ಹಿಂದೆ ಮುಂದೆ ಮಾಡಿದರು. ಅವರು ಮಿಚ್ರ ದೇಶವನ್ನು ಯುದ್ಧವಿಲ್ಲದೆ ಸಂಪಾದಿಸಿದರೆಂದು ಹೇಳಿದ್ದು ಏನಂದರೆ—ಯೋಸೇಫನು ಫರೋನನ ಮುಖ್ಯ ಪ್ರಧಾನಿಯಾಗಿ ಬರದ ಕಾಲದಲ್ಲಿ ಮಿಚ್ರದವರನ್ನು ರಕ್ಷಿಸಿದಾಗ ದೇಶವನ್ನೆಲ್ಲಾ ಫರೋನನಿಗೆ ವಶ ಮಾಡಿದ್ದು. ಹಿಕ್ಸೊಸ್ ಜನರು ಮಿಚ್ರದವರಿಗೆ ಉಂಟು ಮಾಡಿದ ಉಪದ್ರ ಏನಂದರೆ—ಫರೋನನು ಇಸ್ರಯೇಲನವರನ್ನು ಬಹಳವಾಗಿ ಶ್ರಮೆಪಡಿಸಿದ ಮೇಲೆ ಅವರು ಮಿಚ್ರದಿಂದ ಹೊರಟ ಮೇಲೆ ಅವರನ್ನು ಹಿಂದಟ್ಟಿದ ಫರೋನನ ಸೈನ್ಯವು ಕೆಂಪು ಸಮುದ್ರದಲ್ಲಿ ನಾಶವಾದದ್ದು.—ಬೇರೆ ಕೆಲವರು ಹೇಳುವದೇನಂದರೆ—ಹಿಕ್ಸೊಸ್ ಜನರು ಯೋಸೇಫನ ಕಾಲಕ್ಕೆ ಮುಂಚೆ ಮಿಚ್ರ ದೇಶವನ್ನು ಜಯಶಾಲಿಗಳಾಗಿ ಸ್ವತಂತ್ರಿಸಿಕೊಂಡಂಥ ಇಸ್ರಯೇಲನವರಿಗೆ ಸಂಬಂಧವಾದಂಥಾ ಜನಾಂಗವಂತೆ. ಆದದರಿಂದ ಇಸ್ರಯೇಲನವರು ಮೊದಲು ಮಿಚ್ರಕ್ಕೆ ಬಂದಾಗ ಪ್ರೀತಿಯಿಂದ ಅಂಗೀಕರಿಸಲ್ಪಟ್ಟರು. ಮತ್ತು ಹೊಸ ಸಂಸ್ಥಾನವು ಬಿದ್ದ ಮೇಲೆ ಪೂರ್ವಸಂಸ್ಥಾನದ ಅರಸುಗಳು ತಮ್ಮ ಮೇಲೆ ಧೊರೆತನ ನಡಿಸಿದ ಹಿಕ್ಸೊಸ್ ಜನರಿಗೆ ಸ್ನೇ

ಹಿತರಾದ ಇಸ್ರಯೇಲನವರನ್ನು ಪೂರ್ಣವಾಗಿ ಅಣಗಿಸುವದಕ್ಕೆ ಪ್ರಯತ್ನ ಮಾಡಿದರಂತೆ.



## § 30. ಮೋಶೆಯು ಜನನವೂ ಕರಿಯುವಿಕೆಯೂ

೨ ಮೋಶೆ. ೨—೬ ಸಂ—ವರೆಗೂ. ಮೋಶೆ (ನೀರಿನಿಂದ ಎಳೆಯಲ್ಪಟ್ಟವನು) ಹುಟ್ಟಿದ ಮೇಲೆ ಅವನ ತಂದೆತಾಯಿಗಳು ಅವನನ್ನು ಮನೆಯಲ್ಲಿ ಮರೆಯಾಗಿಟ್ಟರು. ಆದರೆ ಮೂರು ತಿಂಗಳು ಆದ ಮೇಲೆ ಕೂಸನ್ನು ಇನ್ನು ಮೇಲೆ ಮರೆ ಮಾಡ ಕೂಡದೆಂದು ಒಂದು ಪುಟ್ಟಿ ಮಾಡಿ ಅದರಲ್ಲಿ ಕೂಸನ್ನು ಇಟ್ಟು ನೀಲ್‌ನದಿಯ ತೀರದಲ್ಲಿ ಬೆಳಿಯುವ ಆವಿನಲ್ಲಿ ಅದನ್ನು ಇಟ್ಟು ಬಿಟ್ಟರು. ಆಗ ಫರೋನನ ಮಗಳು ಕೂಸು ನೋಡಿ ಅದನ್ನು ರಕ್ಷಿಸ ಬೇಕೆಂದು ಆಲೋಚನೆ ಮಾಡಿ ಅದರ ತಾಯಿಗೆ ಸಾಕುವದಕ್ಕೆ ಅದನ್ನು ಒಪ್ಪಿಸಿದಳು. ತರುವಾಯ ಮೋಶೆಯು ಫರೋನನ ಅರಮನೆಗೆ ಬಂದು ಅಲ್ಲಿ ಇದ್ದು ಮಿಚ್ರದವರ ಎಲ್ಲಾ ವಿದ್ಯಗಳನ್ನು ಕಲಿತು ಕೊಂಡನು. ಆದರೆ ವಿಶ್ವಾಸದಿಂದ ಪ್ರಾಯಸ್ಥನಾದಾಗ ಫರೋನನ ಮಗಳ ಮಗನೆಂದು ಹೇಳಲ್ಪಡಲೊಲ್ಲದೆ ಸ್ವಲ್ಪ ಕಾಲಕ್ಕಿರುವ ಪಾಪಭೋಗವನ್ನು ಹೊಂದುವದಕ್ಕಿಂತ ದೇವರ ಪ್ರಜೆಯ ಸಂಗಡ ಕಷ್ಟ ಪಡುವದನ್ನು ಆದು ಕೊಂಡು ಮಿಚ್ರದಲ್ಲಿರುವ ದ್ರವ್ಯಗಳಿಗಿಂತ ಕ್ರಿಸ್ತನ ನಿಂದೆಯು ಅಧಿಕ ಐಶ್ವರ್ಯವೆಂದು ನೆನಸಿದನು. ಯಾಕಂದರೆ ಬರುವ ಪ್ರತಿಫಲವನ್ನು ಎದುರು ನೋಡಿದನು. ಇಬ್ರಿ. ೧೧, ೨೪—೨೬ ವರೆಗೆ. ನಾಲ್ವತ್ತು ವರ್ಷದವನಾದ ಮೇಲೆ ವಿಶೇಷವಾದ ಕರಿಯುವಿಕೆ ಇಲ್ಲದೆ ಸ್ವಂತ ಆಲೋಚನೆಯಿಂದ ಶ್ರಮೆ ಪಡುವ ತನ್ನ ಜನಾಂಗದ ಸಹಾಯಕನಾಗಿ ಎದ್ದನು. ಆದರೆ ಅವನ ಆಲೋಚನೆ ನಿರರ್ಥಕವಾದದರಿಂದ ಓಡಿ ಹೋಗಿ ಅರಣ್ಯದಲ್ಲಿ ೪೦ ವರ್ಷ ಪರ್ಯಂತರ ವಾಸಿಸಿ ತನ್ನ ಕರಿಯುವಿಕೆಗೆ ಬೇಕಾದದ್ದನ್ನು ಕಲಿತು ಕೊಂಡನು. ಮಿದ್ಯಾನಿನ ಯಾಜಕನಾದ ಎತ್ರೊ ಅವನನ್ನು ಸೇರಿಸಿ ಕೊಂಡು ಚಿಪ್ಪೋರಳೆಂಬ ಮಗಳನ್ನು ಅವನಿಗೆ ಮದುವೆ ಮಾಡಿ ಕೊಟ್ಟನು. ಮೋಶೆಯು ಎತ್ರೋನನ ಮಂದೆಗಳನ್ನು ಸೀನಾಯಿ ಪರ್ವತ ಇರುವ ಅರ್ಧದ್ವೀಪದಲ್ಲಿ (ಸಮನೋಡು ೩೨ §) ಹೋರೆಬಿನ ಸಮೀಪದಲ್ಲಿ ಕಾಯುತ್ತಾ ಇರಲಾಗಿ ಕರ್ತನು ಉರಿಯುವ ಪೊದೆಯಲ್ಲಿ ಅವನಿಗೆ ಪ್ರತ್ಯಕ್ಷವಾಗಿ ಹತ್ತರ ಬರ ಬಾರದು, ನಿನ್ನ ಮೆಟ್ಟುಗಳನ್ನು ತೆಗದಿಡು. ಯಾಕಂದರೆ ನೀನು ನಿಲ್ಲುವ ಸ್ಥಳವು ಪರಿಶುದ್ಧ ಭೂಮಿಯಾಗಿದೆ ಎಂದು ಅವನಿಗೆ ಕೂಗಿ ಹೇಳಿದನು. ಮೋಶೆ ಮುಂಚೆ ಸ್ವಂತ ಮನಸ್ಸಿನಿಂದ ತನ್ನ ಜನರಿಗೆ ರಕ್ಷಕನಾಗ ಬೇಕೆಂದು

ಪ್ರಯತ್ನ ಮಾಡಿದ ಪ್ರಕಾರ ಈಗ ಸ್ವಂತ ಮನಸ್ಸಿನ ಇಚ್ಛೆಯಿಂದ ದೇವರು ನೇಮಕ ಮಾಡಿದ ಉದ್ಯೋಗದಲ್ಲಿ ಸೇರಲೊಲ್ಲದೆ ಇದ್ದನು. ಆದರೆ ಕರ್ತನು ಅವನನ್ನು ಬಿಡದೆ ಯೆಹೋವ ಎಂಬ ತನ್ನ ಹೆಸರನ್ನು ಅವನಿಗೆ ಪ್ರಕಟ ಮಾಡಿ ಅದ್ಭುತ ಕ್ರಿಯೆಗಳನ್ನು ಜನರ ಮುಂದೆಯೂ ಫರೋನನ ಮುಂದೆಯೂ ನಡಿಸಿ ತಾನು ದೇವರಿಂದ ಕಳುಹಿಸಲ್ಪಟ್ಟೆನೆಂಬದಕ್ಕೆ ಸಾಕ್ಷಿ ಕೊಡುವದಕ್ಕೆ ಮೂರು ವಿಧದ ಶಕ್ತಿಯನ್ನು ಅವನಿಗೆ ಕೊಟ್ಟನು. ಅದಾಗ್ಯೂ ಮೋಶೆ ತನ್ನ ನಾಲಿಗೆ ಜಡವಾಗಿದೆ ಎಂದೂ ತಾನು ಈ ಕಾರ್ಯಕ್ಕೆ ಯೋಗ್ಯನಲ್ಲವೆಂದೂ ನೆವನ ಹೇಳಿದದರಿಂದ ದೇವರು ಅಣ್ಣನಾದ ಆರೋನನನ್ನು ಸಹಾಯಕನಾಗಿ ನೇಮಿಸಿ ಅವನು ನಿನಗೆ ಬಾಯಾಗಿರುವನು. ನೀನು ಅವನಿಗೆ ದೇವರಾಗಿರುವಿ ಎಂದು ಹೇಳಿದನು.

ಪರಿಶಿಷ್ಟ. ೧. ಪೊದೆಯು ದಾಸತ್ವದಲ್ಲಿದ್ದು ಶ್ರಮೆ ಪಡುವ ಇಸ್ರಾಯೇಲಿನ ಜನಾಂಗಕ್ಕೂ, ಅಗ್ನಿಯು ಎಲ್ಲವನ್ನು ಶೋಧಿಸಿ ಶುದ್ಧ ಮಾಡುವ ಯೆಹೋವನ ಪರಿಶುದ್ಧತ್ವಕ್ಕೂ ಗುರ್ತಾಗಿದೆ. ಇಸ್ರಾಯೇಲನವರು ಮಿಚ್ರದವರ ಕೈಯಿಂದ ಶ್ರಮೆ ಪಡುತ್ತಾ ಇದ್ದರು; ಆದರೆ ಯೆಹೋವನು ತನ್ನ ಸಭೆಯನ್ನು ಶುದ್ಧ ಮಾಡ ಬೇಕೆಂದು ಮಿಚ್ರದವರಿಗೆ ಅವರನ್ನು ಪೀಡಿಸುವದಕ್ಕೆ ಅಪ್ಪಣೆ ಕೊಟ್ಟನು. ಫರೋನನ ದ್ವೇಷವೂ ಅನ್ಯಾಯವೂ ಇಸ್ರಾಯೇಲನವರನ್ನು ರಕ್ಷಿಸುವ ದೇವರ ಕೈಯಲ್ಲಿ ಇರುವ ಕರಣವಾಗಿತ್ತು. ಶ್ರಮೆ ಎಂಬ ಅಗ್ನಿಯಿಂದ ಇಸ್ರಾಯೇಲನು ಅಲ್ಲ; ಇಸ್ರಾಯೇಲಿನಲ್ಲಿದ್ದ ಅಶುದ್ಧತ್ವವು ಮಾತ್ರ ದಹಿಸಲ್ಪಡ ಬೇಕಾಗಿತ್ತು. ಆದದರಿಂದ ಪೊದೆಯು ಉರಿಯುತ್ತಾ ಇದ್ದರೂ ಸುಟ್ಟು ಹೋಗಲಿಲ್ಲ.

ಪರಿಶಿಷ್ಟ. ೨. ಯೆಹೋವನು ಮೋಶೆಗೆ ಕೊಟ್ಟ ಮೂರು ವಿಧದ ಅದ್ಭುತ ಕ್ರಿಯೆಯ ಶಕ್ತಿಗೂ ಗೂಢಾರ್ಥವು ಅದೆ.

I ಮೋಶೆ ಕೋಲನ್ನು ಬಿಸಾಡುತ್ತಲೇ ಅದು ಹಾವಾಗುವದು. ತಿರಿಗಿ ಹಿಡಿಯುತ್ತಲೇ ಅದು ತಿರಿಗಿ ಕೋಲಾಗುವದು. ಅದೇನಂದರೆ: ಕೋಲು ಮನುಷ್ಯನ ಕೈಯಲ್ಲಿರುವ ಬಲವನ್ನು ಹೆಚ್ಚಿಸುವ ಕರಣವಾಗಿದೆ. ದೇವರ ಸಹಾಯದಿಂದ ಮೋಶೆಯ ಕೈ ಮಿಚ್ರದವರಿಗೆ ಮರಣವನ್ನೂ ನಾಶನವನ್ನೂ ಬರ ಮಾಡುವ ಭಯಂಕರವಾದ ಬಲವನ್ನು ಹೊಂದಿತು. ಅದನ್ನು ಮೋಶೆ ಎಬ್ಬಿಸಲೂ ನಿಲ್ಲಿಸಲೂ ಶಕ್ತನಾಗಿ ಇದ್ದನು.

II ಮೋಶೆ ಕೈಯನ್ನು ಉಡಿಲಲ್ಲಿ ಮೊದಲು ಸೇರಿಸಲು ಅದಕ್ಕೆ ಕುಷ್ಠರೋಗ ಹಿಡಿಯಿತು. ಅದನ್ನು ಎರಡನೇ ಸಾರಿ ಉಡಿಲಲ್ಲಿ ಸೇರಿಸಲು ಅದು ಸ್ವಸ್ಥವಾಯಿತು.

ಇದರ ಅರ್ಥವೇನಂದರೆ: ತನ್ನ ಜನಾಂಗದ ರಕ್ಷಕನಾಗ ಬೇಕೆಂಬ ಅಪೇಕ್ಷೆಯನ್ನು ಹೃದಯದಲ್ಲಿ ಇಟ್ಟು ಕೊಂಡ ಮೋಶೆ ಈ ಆಲೋಚನೆಯನ್ನು ಮೊದಲು ಪೂರೈಸುವದಕ್ಕೆ ಪ್ರಯತ್ನ ಮಾಡಿದಾಗ ಕುಷ್ಟರೋಗಿಯಂತೆ ಸ್ವಜನರ ಸಹವಾಸವನ್ನು ಬಿಡ ಬೇಕಾಗಿತ್ತು. ಎರಡನೇ ಸಾರಿ ಕರೆಯುವವನ ತ್ರಾಣದಿಂದ ತಿರಿಗಿ ತನ್ನ ಜನರ ಐಕ್ಯದಲ್ಲಿ ಸೇರಿ ದೇವರು ನೇಮಕ ಮಾಡಿದ ಕಾರ್ಯವನ್ನು ಪೂರೈಸುತ್ತಾನೆ.

III ಮೋಶೆ ಕೈಯಿಂದ ನೀಲ್‌ನದಿಯ ನೀರು ತೆಗದು ಚೆಲ್ಲುವಾಗ ಅದು ರಕ್ತವಾಯಿತು. ನೀಲ್‌ನದಿಯ ನೀರು ಮಿಸ್ರದ ಭೂಮಿಗೆ ಬರುವ ಎಲ್ಲಾ ಆಶೀರ್ವಾದದ ಕರಣವಾಗಿದೆ. ಆದರೆ ಯೆಹೋವನ ತ್ರಾಣವು ಮೋಶೆಯ ಕೈಯಿಂದ ಆಶೀರ್ವಾದವನ್ನು ಬದಲಿಸಿ ಶಾಪವಾಗ ಮಾಡುತ್ತದೆ. ಈ ೩ ಅದ್ಭುತಗಳು ಮೋಶೆಯ ಕೈಯಿಂದಲೇ ದೇವರು ನಿರ್ಣಯಿಸಿದ ಮಹಾ ಕಾರ್ಯವು ಪೂರ್ತಿಯಾಗ ಬೇಕು.



## § 31. ಮಿಸ್ರದ ಕಾಟಗಳೂ ಇಸ್ರಯೇಲನ ಹೊರಡೋಣವೂ

೧) ೨ ಮೋಶೆ. ೭ — ೧೧ನೇ ಸಂಧಿಯ ವರೆಗೆ. ಯೆಹೋವನ ಹೆಸರಿನಲ್ಲಿ ಮೋಶೆ ಅಣ್ಣನಾದ ಆರೋನನ ಸಂಗಡ ಫರೋನನ ಮುಂದೆ ಬಂದು ಇಸ್ರಯೇಲನವರಿಗೆ ತಮ್ಮ ದೇವರಿಗೆ ಬಲಿಯನ್ನರ್ಪಿಸುವದಕ್ಕಾಗಿ ಮೂರು ದಿವಸದ ಪಯಣದ ದೂರವಾಗಿರುವ ಅರಣ್ಯಕ್ಕೆ ಹೋಗಲಿಕ್ಕೆ ಅಪ್ಪಣೆ ಕೊಡ ಬೇಕೆಂದು ಹೇಳಿದರು. ಫರೋನನು ತನ್ನ ಹೃದಯವನ್ನು ಕಠಿಣ ಪಡಿಸಿ ತನ್ನ ಚಿತ್ತವನ್ನು ಎದುರಿಸುವೆನೆಂದು ದೇವರು ತಿಳುಕೊಂಡರೂ ಮೊದಲು ಸುಲಭವಾದ ಕಾರ್ಯವನ್ನು ಮಾಡಲಿಕ್ಕೆ ಆಜ್ಞಾಪಿಸಿ, ತರುವಾಯ ದುರ್ಲಭವಾದದ್ದನ್ನು ಸಹ (ಇಸ್ರಯೇಲನವರನ್ನು ಪೂರ್ಣವಾಗಿ ಬಿಟ್ಟು ಕಳುಹಿಸುವದನ್ನು) ಅವನಿಂದ ಕೇಳಲಿಕ್ಕೆ ಮನಸ್ಸಾಗಿದ್ದನು. ಆದರೆ ಫರೋನನು ಅವನನ್ನು ದೇವರ ರಾಯಭಾರಿಗಳು ಮೊದಲು ಬಂದು ಹೇಳಿದ ಮಾತನ್ನು ಧಿಕ್ಕರಿಸಿ ಇಸ್ರಯೇಲನವರನ್ನು ಇನ್ನು ಹೆಚ್ಚು ಬಿಟ್ಟಿ ಮಾಡಿಸಿದನು. ದೇವರು ಮೋಶೆಗೆ ಮುಂಪೇಳಿದ ಪ್ರಕಾರ ಫರೋನನಿಗೆ ಚಾಚಿದ ಕೈಯಿಂದಲೂ ಘೋರವಾದ ಶಿಕ್ಷೆಗಳಿಂದಲೂ ಬಲವಂತ ಮಾಡ ಬೇಕಾಯಿತು. ಅವನ ಮಂತ್ರಗಾರರಾದ ಯನ್ನೆಸ್ ಮತ್ತು ಯಂಬ್ರೆಸ್ (೨ತಿಮೊಥಿ. ೩, ೮.) ಬಾಧೆಯನ್ನು ಹೆಚ್ಚಿಸುವದಕ್ಕೆ ಶಕ್ತರಾಗಿದ್ದರು. ಆದರೆ ಅದನ್ನು ನಿವಾರಿಸ ಕೂಡದಿದ್ದದರಿಂದ ಮೂರನೇ ಕಾಟದಲ್ಲಿ ಇದು ದೇವರ ಬೆರಳೆಂದು ಅರಿಕೆ

ಮಾಡಿದರು. ಫರೋನನು ತನ್ನ ಹೃದಯವನ್ನು ಕಠಿಣ ಪಡಿಸಿದದರಿಂದ ದೇವರು ಸಹಾ ಅದನ್ನು ಕಠಿಣ ಪಡಿಸಿದನು. ಫರೋನನು ದೇವರಿಗೆ ವಿಧೇಯನಾಗಿರಲಿಕ್ಕೆ ಮನಸ್ಸಿಲ್ಲದವನಾಗಿದ್ದದರಿಂದ ದೇವರು ಸಹಾ ಅವನು ವಿಧೇಯನಾಗ ಬಾರದೆಂದು ನೇಮಕ ಮಾಡಿದನು. ದೇವರ ಕೃಪೆಯು ಫರೋನನಲ್ಲಿ ಮಹಿಮೆ ಪಡ ಕೂಡದೆ ಇದ್ದದರಿಂದ ಆತನ ಕೋಪವು ಅವನಲ್ಲಿ ಮಹಿಮೆ ಪಟ್ಟಿತು. (೧೦೯ ಕೀರ್ತ. ೧೭. ೨ನೇ ಥೆಸ್. ೨. ೧೧.) ಆದದರಿಂದ ಒಂಬತ್ತು ಕಾಟಗಳು ವ್ಯರ್ಥವಾಗಿದ್ದವು. ಅವು ಯಾವವಂದರೆ:

೧ ನೀಲ್‌ನದಿಯ ನೀರು ರಕ್ತಮಯವಾದದ್ದು.
೨ ಕಪ್ಪೆಗಳ ಕಾಟ.
೩ ನುಸಿಗಳ (ಹೇನುಗಳ) ಕಾಟ.
೪ ನೊಣಗಳ ಕಾಟ.
೫ ವ್ಯಾಧಿಯ ಕಾಟ.
೬ ಹುಣ್ಣುಗಳ (ಕಪ್ಪು, ಬೊಕ್ಕೆಗಳ) ಕಾಟ.
೭ ಕಲ್ಲುಮಳೆಯ ಕಾಟ.
೮ ಮಿಡಿತೆಗಳ ಕಾಟ.
೯ ಮೂರು ದಿನದ ಕತ್ತಲೆಯ ಕಾಟ.

೧೦ ನೇ ಕಾಟದಲ್ಲಿ ಮನುಷ್ಯರ ಮತ್ತು ದನಗಳ ಚೊಚ್ಚಲವಾದವುಗಳೆಲ್ಲಾ ಸತ್ತು ಹೋದಾಗಲೇ ಫರೋನನೂ ಅವನ ಜನಾಂಗವೂ ಮಾನಸಾಂತರ ಪಟ್ಟು ಇಸ್ರಾಯೇಲನವರನ್ನು ಹೋಗಲೀಸುವದನ್ನಲ್ಲದೆ ಬೇಗ ಹೊರಟು ಹೋಗುವದಕ್ಕೆ ಬಲವಂತ ಮಾಡಿದರು. ಆಗ ಇಸ್ರಾಯೇಲನವರು ಮಿಸ್ರದವರಿಂದ ಬೆಳ್ಳಿ ಬಂಗಾರದ ಪಾತ್ರೆಗಳನ್ನು ಬೇಡಿ ಕೊಳ್ಳಲು ಅವರು ಸಂತೋಷದಿಂದ ಕೊಟ್ಟರು (೧ ಮೋಶೆ ೧೫. ೧೩, ೧೪). ಈ ಪ್ರಕಾರವಾಗಿ ಇಸ್ರಾಯೇಲನವರು ಮಾಡಿದ ಬಿಟ್ಟೀ ಕೆಲಸದ ಕೂಲಿ ಅವರಿಗೆ ಸಿಕ್ಕಿತು.

೨) ೨ಮೋಶೆ. ೧೨ ಸಂಧಿ. ಮಿಸ್ರದವರ ಮೇಲೆ ಬಂದ ಕಾಟಗಳು ಇಸ್ರಾಯೇಲಿನವರ ಮೇಲೆ ಬರಲಿಲ್ಲ. ಹತ್ತನೇ ಕಾಟಕ್ಕೂ ಇವರು ತಪ್ಪಿಸಿ ಕೊಂಡರು. ಅವರು ಮಿಸ್ರದಿಂದ ಹೊರಟು ಹೋಗುವದಕ್ಕಿಂತ ಮುಂಚೆ ಪಶಾಹಬ್ಬವು ಸ್ಥಾಪಿಸಿ ಆಚರಿಸಲ್ಪಟ್ಟಿತು. (ಪಶಾ ಅಂದರೆ ತಪ್ಪಿಸಿ ದಾಟುವದು.) ೧೪ನೇ ನಿಸ್ಸಾನ್ (ಆಬೀಬ್) ದಿವಸದ ಸಾಯಂಕಾಲದಲ್ಲಿ ಒಬ್ಬೊಬ್ಬ ಮನೇ ಯಜಮಾನನು ಮರಣದೂತನು

ದಾಟಿ ಹೋಗುವ ಹಾಗೆ ದೋಷವಿಲ್ಲದ ಕುರಿಮರಿಯನ್ನು ಕಡಿದು ಅದರ ರಕ್ತವನ್ನು ಕದದ ನಿಲುವಿಗೆ ಹಚ್ಚ ಬೇಕಾಗಿತ್ತು. ಹುಳಿಹಿಂಟ್ಟು ಎಲ್ಲಿಯೂ ಇರ ಬಾರದಿತ್ತು. ಕುಟುಂಬದವರೆಲ್ಲಾ ಪಯಣಕ್ಕೆ ವಸ್ತ್ರ ಹಾಕಿ ಕೊಂಡವರಾಗಿ ನಡುಕಟ್ಟಿ ಕೆರ ಮೆಟ್ಟು, ಕೈಯಲ್ಲಿ ಕೋಲು ಹಿಡಿದು ಪಶಾಯೆಂಬ ಕುರಿಮರಿಯ ಮಾಂಸವನ್ನು ತಿಂದು ಕೂಡಲೇ ಮನೆಗಳನ್ನು ಬಿಟ್ಟು ಹೋದರು. (ಆದಾಮನು ನಿರ್ಮಾಣವಾದ ೨೫೨೮ನೇ ವರ್ಷ) ಹೊರಡುವಾಗ ಯೋಸೇಫನ ಎಲುಬುಗಳನ್ನು ಕೊಂಡು ಹೋದರು. ಅವರ ಪಯಣವು ಅರಬಿಸ್ಥಾನದ ಅರಣ್ಯದ ಕಡೆಗೆ ಹೋಯಿತು.

ಪ ರಿ ಶಿ ಷ್ಟ. ಪಶಾಯೆಂಬ ಕುರಿಮರಿಯ ಅರ್ಪಣೆಯು ಉಳಿದ ಎಲ್ಲಾ ಬಲಿಗಳ ಪ್ರಕಾರ ಪಾಪಪರಿಹಾರಕ್ಕಾಗಿ ಇತ್ತು. ನಿಲುವುಗಳಿಗೆ ಬಲಿಯ ರಕ್ತವು ಚಿಮಿಕಿಸಲ್ಪಟ್ಟದರಿಂದ ಇಸ್ರಯೇಲನವರ ಒಂದೊಂದು ಮನೆಯು ಬಲಿಪೀಠದ ಭಾವವನ್ನು ಹೊಂದಿತು. ಮತ್ತು ಅದರ ನಿವಾಸಿಗಳು ಬಲಿಯ ಮುಖಾಂತ್ರವಾದ ವಿಮೋಚನೆಯ ಪಾಲುಗಾರರಾದರು. ಪಶಾಕುರಿಮರಿಯ ರಕ್ತವು ಮರಣದೂತನಿಗೆ ಇಸ್ರಯೇಲರ ಮನೆಗಳನ್ನು ತೋರಿಸುವ ಗುರ್ತೇ ಆಗಿತ್ತೆಂದು ನೆನಸ ಬಾರದು. ಮರಣದೂತನು ಇಸ್ರಯೇಲನವರ ಮನೆಗಳನ್ನು ಮುಟ್ಟದೆ ದಾಟುವ ಹಾಗೆ ಅವಶ್ಯವಾದ ಪಾಪವಿಮೋಚನೆ ಅದರಿಂದುಂಟಾಯಿತು. ಹೀಗಿರುವದರಿಂದ ಪಶಾಭೋಜನವು ಬಲಿಭೋಜನವಾಗಿದ್ದು ಬಲಿಯಿಂದುಂಟಾದ ಪಾಪವಿಮೋಚನೆಯ ಮುಖಾಂತ್ರ ದೇವರ ಅನ್ಯೋನ್ಯಕ್ಕೆ ಸಾಕ್ಷ್ಣಿಯಾಗಿತ್ತು. ಪಶವನ್ನು ಆಚರಿಸಿದ ಇಸ್ರಯೇಲನವರು ಯೆಹೋವನ ಮನೆಯಲ್ಲಿಯೂ ಮೇಜಿನಲ್ಲಿಯೂ ಊಟ ಮಾಡಿದ ಮೇಲೆ ದೇವರ ಕುಟುಂಬವಾಗಿದ್ದರು. ಪಶಾಭೋಜನದಲ್ಲಿ ಹುಳಿಯಿಲ್ಲದ ರೊಟ್ಟಿಯನ್ನೇ ತಿಂದರು. ಯಾಕಂದರೆ ಹುಳಿಹಿಟ್ಟು ಪಾಪದ ಅಶುದ್ಧತ್ವಕ್ಕೂ ಕೊಳಕಿಗೂ ಉಪಮೆಯಾಗಿದೆ. ಈ ಕಾಲದಲ್ಲಿ ಆದ ರಕ್ಷಣೆಯ ನೆನಪಿಗಾಗಿ ಇಸ್ರಯೇಲನವರು ವರುಷಂಪ್ರತಿಯಲ್ಲಿ ಪಶಾಯೆಂಬ ಹಬ್ಬವನ್ನಾಚರಿಸಿದರು.

ಇದಲ್ಲದೆ ಅವರಲ್ಲಿ ನಡೆದ ಬೇರೆ ಆಚರಣೆಗಳ ಪ್ರಕಾರ ಇದು ಸಹಾ ಮುಂದಣ ಮಹಿಮೆಯುಳ್ಳ ರಕ್ಷಣೆಯ ಮುಂಗುರ್ತಾಗಿತ್ತು. ಪಶಾಕುರಿಮರಿಯ ನಿಜವಾದ ಮೂಲಪ್ರತಿಯು ನಮಗಾಗಿ ಬಲಿಯರ್ಪಣೆಯಾದ ಯೇಸು ಕ್ರಿಸ್ತನೇ. ಮತ್ತು ಪಶಾಭೋಜನದಲ್ಲಿ ಮುಂಗುರ್ತಿನ ರೀತಿಯಿಂದ ಕಾಣ ಬಂದದ್ದು ಪರಿಶುದ್ಧ ರಾತ್ರಿಭೋಜನದಲ್ಲಿ ಸತ್ಯವಾಗಿ ಇರುವದು. (೧ಕೊರಿಂಥ ೫, ೭)



## § 32. ಅರಬಿಸ್ಥಾನದ ಅರಣ್ಯವು

೧) ಘೋರವಾದ ಅರಣ್ಯಗಳ ಸಾಲು ಅಫ್ರಿಕಖಂಡದ ಉತ್ತರ ಪಶ್ಚಿಮ ದಿಕ್ಕಿನ ತೀರದಲ್ಲಿಂದ (ಸಹಾರಅರಣ್ಯ) ಅಫ್ರಿಕದ ಉತ್ತರ ಭಾಗವನ್ನೆಲ್ಲಾ ಹಾದು ಪಶ್ಚಿಮ ಆಸ್ಯದ ಮಧ್ಯದ ವರಿಗೂ ಹೋಗುತ್ತದೆ. ನೀಲ್‌ನದಿಯ ಫಲಭರಿತವಾದ ಉದ್ದವೂ ಸಪೂರವೂ ಆಗಿರುವ ಪ್ರದೇಶ (ಮಿಸ್ರವು) ಅರಣ್ಯದ್ವೀಪವಾಗಿ ಅದನ್ನು ವಿಭಾಗಿಸುತ್ತವೆ. ನೀಲ್‌ನದಿಯ ಪೂರ್ವ ತೀರದ ಹತ್ತರ ಅರಬಿಸ್ಥಾನದ ಅರಣ್ಯವು ಆರಂಭಿಸಿ ಫ್ರಾತ್ ನದಿಯ ಪಶ್ಚಿಮ ತೀರದ ಸಮೀಪದಲ್ಲಿ ಮುಗಿಯುತ್ತದೆ. ಈ ಅರಣ್ಯವು ಏಲಾನಿಕ ಸಮುದ್ರದಿಂದ ಸತ್ತ ಸಮುದ್ರದ ವರಿಗೂ ನೀಡುವ ಎದೋಮ್ ಘಟ್ಟಗಳಿಂದ (ಸೇಯಿರ್ ಪರ್ವತಗಳು) ಎರಡು ಭಾಗವಾಗಿ ವಿಭಾಗಿಸಲ್ಪಡುತ್ತದೆ. ಮೂಡಣ ಭಾಗಕ್ಕೆ ಕಾಡ ಅರಬಿಸ್ಥಾನ, ಪಡುವಲಿನ ಭಾಗಕ್ಕೆ ಕಲ್ಲಿನ ಅರಬಿಸ್ಥಾನವು ಎಂದು ಹೆಸರು ಉಂಟು. ಇದಕ್ಕೆ ಗಾಜದ ವರಿಗೂ ಮಧ್ಯ ಸಮುದ್ರವು ಉತ್ತರ ಪ್ರಾಂತ್ಯವಾಗಿದೆ. ಗಾಜದಿಂದ ಸತ್ತಸಮುದ್ರದ ದಕ್ಷಿಣ ತುದಿಯ ವರಿಗೂ ಪಲೆಸ್ತೀನ ದೇಶವು ಅದರ ಉತ್ತರ ಪ್ರಾಂತ್ಯವಾಗಿದೆ. ದಕ್ಷಿಣ ಕಡೆಯಲ್ಲಿ ಅದು ಕೆಂಪುಸಮುದ್ರದ ಉತ್ತರ ಭಾಗಗಳಾದ ಏಲಾನಿಕ ಸಮುದ್ರವೂ (ಅಕಬ) ಸುಯೆಜ್‌ಸಮುದ್ರವೂ ಎರಡು ಕಡೆಯಲ್ಲಿ ಮುತ್ತುವ ಸೀನೈಪರ್ವತದ ಅರ್ಧದ್ವೀಪವೆಂದು ಹೆಸರುಳ್ಳ ಅರ್ಧದ್ವೀಪವಾಗಿದೆ. ಸೀನೈಪರ್ವತಗಳು ಅದರ ದಕ್ಷಿಣ ತುದಿಯಲ್ಲಿ, ಅಲ್ಲಿ ಘಾಳಿ ಬಹಳ ಒಳ್ಳೇದು; ಅದು ಯಾವಾಗಲೂ ನಿರ್ಮಲವಾಗಿಯೂ ತಕ್ಕಷ್ಟು ತಂಪಾಗಿಯೂ ಇರುತ್ತದೆ. ಅನೇಕ ಸ್ಥಳಗಳಲ್ಲಿ ನೀರು ನಿತ್ಯವಾಗಿ ಹರಿಯುವ ಬುಗ್ಗೆಗಳು ಅವೆ. ಗುಡ್ಡೆಗಳಲ್ಲಿ ನಾನಾವಿಧದ ಮರಗಳು, ತಗ್ಗುಗಳಲ್ಲಿ ಬೇರೆ ಬೇರೆ ಬೆಳೆಗಳು ಚನ್ನಾಗಿ ಬೆಳೆಯುತ್ತವೆ.

೨) ಸೀನೈಪರ್ವತಗಳ ಅರ್ಧದ್ವೀಪದ ಉತ್ತರ ದಿಕ್ಕಿನಲ್ಲಿ ಉಸುಬಿನ ಅರಣ್ಯವದೆ. ಇದರ ದಕ್ಷಿಣ ಕಡೆಯಲ್ಲಿ ಯೆತ್‌ಶೀ (ಅಲೆಯುವಿಕೆ) ಎಂಬ ಘಟ್ಟಗಳು ಬಿಲ್ಲಿಗನ ಆಕಾರವಾಗಿ ಸೂಯೆಜನಿಂದ ಅಕಬಾ ಕಡೆಗೆ ವಿಸ್ತರಿಸುತ್ತವೆ. ಅವು ಅನೇಕ ಸ್ಥಳಗಳಲ್ಲಿ ಸಮುದ್ರಕ್ಕಿಂತ ನಾಲ್ಕು ಸಾವಿರ ಫೂಟ ಎತ್ತರವಾಗಿದೆ. ಈ ಘಟ್ಟಗಳ ಉತ್ತರ ದಿಕ್ಕಿನಲ್ಲಿ ಯೆತ್‌ಶೀ ಎಂಬ ಅರಣ್ಯವು ಅದೆ. ಈ ಅರಣ್ಯವು ಸಹಾ ಸುಣ್ಣದ ಕಲ್ಲಿನಿಂದಲೂ ಉಸುಬಿನ ಕಲ್ಲಿನಿಂದಲೂ ಕೆಂಪು ಮರಳಿನಿಂದಲೂ ಕಪ್ಪು, ಉರಿಕಲ್ಲಿನಿಂದಲೂ ತುಂಬಿರುವದರಿಂದ ಅದರಲ್ಲಿ ಏನೂ ಬೆಳೆಯುವದಿಲ್ಲ. ವಾದಿ ಎಂಬ ತಗ್ಗುಗಳಲ್ಲಿ ಮಾತ್ರ ಮಳೆಗಾಲದಲ್ಲಿ ನೀರು ಕೂಡುವದರಿಂದ ನೆನೆದ ಭೂಮಿಯ ಆಯಾ ಸ್ಥಳಗಳಲ್ಲಿ ಸ್ವಲ್ಪ ಹುಲ್ಲು, ಹೂವು, ಸಸ್ಯಾದಿಗಳು ಬೆಳೆಯುತ್ತವೆ. ಈ ಸೀಮೆ

ಯಲ್ಲಿ ಇಸ್ರಯೇಲನವರು ಮಿಸ್ರದಿಂದ ಹೊರಟಾಗ ಅಮಲೇಕ್ಯರು ವಾಸಿಸುತ್ತಾ ಇದ್ದರು. ಆದದರಿಂದ ಮೋಶೆಯ ಕಾಲದಲ್ಲಿ ಯೆತ್‌ಶೀ ಎಂಬ ಸೀಮೆಯಲ್ಲಿ ಹೆಚ್ಚು ನೀರು ಇತ್ತೆಂದು ನೆನಸ ಬೇಕು. ಯಾಕಂದರೆ ಒಂದು ಜನಾಂಗವು ಅದರಲ್ಲಿ ಬದುಕುವ ಹಾಗೆ ಸಾಕಷ್ಟು ಸಾರವುಳ್ಳದ್ದಾಗಿತ್ತೆಂದು ತೋರುತ್ತದೆ. ಮೂಡಣ ದಿಕ್ಕಿನಲ್ಲಿ ಈ ಅರಣ್ಯವಾದ ಬೈಲುಸೀಮೆ ತಗ್ಗಾಗುವದು. ಏಲಾನಿಕ ಸಮುದ್ರದ ಉತ್ತರ ತುದಿಯಿಂದ ಸತ್ತಸಮುದ್ರದ ದಕ್ಷಿಣ ತುದಿಗೆ ಸುಮಾರು ನಾಲ್ವತ್ತು ಹರದಾರಿ ಉದ್ದವಾಗಿಯೂ ೨ ಹರದಾರಿ ಅಗಲವಾಗಿಯೂ ಇರುವ ಅರಬಾ ಎಂಬ ತಗ್ಗು ಇರುವದು. ಇದರ ಮೂಡಣ ದಿಕ್ಕಿನಲ್ಲಿ ಬಹಳ ಎತ್ತರವೂ ಇಳಿಜಾರೂ ಆದ ಏದೋಮ್‌ಘಟ್ಟಗಳಿರುತ್ತವೆ. ಈ ತಗ್ಗು ಸಹಾ ಉಸುಬಿನಿಂದ ತುಂಬಿಯದೆ. ಆದರೆ ಬೇರೆ ಬೇರೆ ಸ್ಥಳಗಳಲ್ಲಿ ಒಳ್ಳೇ ಮೇವಿನ ಸ್ಥಳಗಳೂ ಪಾದೆಗಳೂ ಈಚಲ ಮರಗಳೂ ಪೂರ್ವ ಕಾಲದಲ್ಲಿದ್ದ ಪಟ್ಣಗಳ ಹಾಳು ಗೋಡೆಗಳೂ ಇಂದಿನ ಪರ್ಯಂತರ ಕಾಣುತ್ತವೆ. ತಗ್ಗಿನ ನಡುವಿನಲ್ಲಿಂದ ನೀರು ಒಂದು ಕಡೆಯಲ್ಲಿ ಏಲಾನಿಕ ಸಮುದ್ರಕ್ಕೆ ಮತ್ತೊಂದು ಕಡೆಯಲ್ಲಿ ಸತ್ತಸಮುದ್ರಕ್ಕೆ ಹರಿಯುವದು.

ಸತ್ತಸಮುದ್ರವು ಬಹಳ ತಗ್ಗಾಗಿರುವದರಿಂದ ಅರಬಾ ತಗ್ಗಿನ ಉತ್ತರ ಭಾಗವು ಹೆಚ್ಚು ಪ್ರಪಾತವಾಗಿದೆ.

೩) ಸೇಯಿರ್ ಘಟ್ಟಗಳು (ಏದೋಮ್ ಪರ್ವತಗಳು) ಯಾರ್ದನ್ ನದಿಯ ಮೂಡಣದ ಘಟ್ಟಗಳಿಂದ ಅಂತಿಲಿಬನೋನಕ್ಕೆ ಕೂಡುತ್ತದೆ. ದಕ್ಷಿಣದಲ್ಲಿ ಅವು ಏಲಾನಿಕ ಸಮುದ್ರಕ್ಕೆ ಮುಟ್ಟುತ್ತವೆ. ಅವು ಏಳು ಎಂಟು ಹರದಾರಿ ಅಗಲವಾಗಿವೆ. ಪಶ್ಚಿಮದ ಪ್ರಾಂತ್ಯ ಎತ್ತರವಾಗಿಯೂ ಪ್ರಪಾತವಾಗಿಯೂ ಅದೆ. ಮೂಡಣ ಕಡೆಯಲ್ಲಿ ಘಟ್ಟಗಳು ಅರಬಿಸ್ಥಾನದ ಅರಣ್ಯಕ್ಕಿಂತ ಸ್ವಲ್ಪ ಮಾತ್ರ ಎತ್ತರವಾಗಿವೆ.

ಏಸಾವನ ಕುಲದವರು ಈ ಘಟ್ಟಗಳಲ್ಲಿ ವಾಸಿಸಿದರು. ಸೇಲಾ ಇಲ್ಲವೆ ಪೇತ್ರಾ ಮೊದಲಾದ ದೊಡ್ಡ ಪಟ್ಣಗಳ ದೇಗುಲಗಳು ಇಂದಿನ ವರೆಗೂ ಅಲ್ಲಿ ಉಂಟು. ತಗ್ಗಾದ ಸ್ಥಳಗಳು ಸಾರವುಳ್ಳ ಹೊಲಗದ್ದೆಗಳಿಂದ ಮುಚ್ಚಿಯವೆ. ಬೇಟೆಗಾರರಿಗೆ ಈ ತರದ ಸೀಮೆಯು ಬಹಳ ಹಿತವಾಗಿರುವದು. ಸೇಯಿರ್ ಘಟ್ಟಗಳಿಗೆ ಅರಣ್ಯವಾದ ಅರಬಿಸ್ಥಾನವು ತಗಲುತ್ತದೆ. ಅದರ ಉತ್ತರ ಪಶ್ಚಿಮ ಪ್ರಾಂತ್ಯದಲ್ಲಿ ಮೋವಾಬ್ಯರ ಅಮ್ಮೋನ್ಯರ ಅಮೋರ್ಯರ ನಾಡುಗಳು ಇದ್ದವು.



## § 33. ಪಯಣದ ಕಥೆ—ಸೀನೈಪರ್ವತ ಪರ್ಯಂತ್ರ

೧) ೨ ಮೋಶೆ. ೧೩—೧೫ ಸಂ. ವರೆಗೆ. ಯೆಹೋವನ ಮಹಿಮೆ (ಅದರ ಹೆಸರು ಇಬ್ರೀಯ ಭಾಷೆಯಲ್ಲಿ ಷೆಖಿನಾ ಅಂದರೆ ನಿವಾಸ, ಗ್ರೀಕ ಭಾಷೆಯಲ್ಲಿ ದೋಕ್ಸಾ ಅಂದರೆ ಮಹಿಮೆ) ಇಸ್ರಾಯೇಲನವರನ್ನು ಕಾದು ನಡಿಸುತ್ತಾ ಇತ್ತು. ಅವರು ಕಹಿರಾ (ಕ್ರೈರೊ) ಪಟ್ಟಣದಿಂದ ಗಾಜದ ಮಟ್ಟಿಗೂ ಸಮುದ್ರತೀರದ ಸಮೀಪದಲ್ಲಿ ಹೋಗುವ ವ್ಯಾಪಾರದ ಪರಶೆಗಳ ವಾಡಿಕೆಯಾದ ಮಾರ್ಗದಿಂದಲ್ಲ ಅರಾಬ್ಯದ ಅರಣ್ಯದ ಮಾರ್ಗವಾಗಿ ಯೆಹೋವನು ತನ್ನ ಪ್ರಜೆಯನ್ನು ನಡಿಸಿದ ಕಾರಣವೇನಂದರೆ—ಇಸ್ರಾಯೇಲನವರು ಕೆಲವು ನೂರು ವರ್ಷದ ದಾಸತ್ವದಿಂದ ಶೂರತ್ವವನ್ನು ಮರತು, ಬಲಿಷ್ಟ ಯುದ್ಧಸ್ಥರಾದ ಕನಾನ್ಯರ ಸಂಗಡ ಕಾಳಗ ಮಾಡುವದಕ್ಕೆ ಆಗ ಅಯೋಗ್ಯರಾಗಿದ್ದರು. ಕನಾನ್ಯರ ಸಂಗಡ ಮಾಡ ಬೇಕಾದ ಕಠಿಣವಾದ ಯುದ್ಧಕ್ಕೆ ಅವರು ಒಂದು ವೇಳೆ ಭಯ ಪಟ್ಟು ಹೇಡಿಗಳಾಗಿ ಮಿಚ್ರಕ್ಕೆ ತಿರಿಗಿ ಕೊಳ್ಳುತ್ತಿದ್ದರು. ಇದಲ್ಲದೆ ಯೆಹೋವನು ಮುಂಚೆ ಮೋಶೆಯನ್ನು ಕರೆದ ಸೀನೈಪರ್ವತದ ಬಳಿಯಲ್ಲಿ ಇಸ್ರಾಯೇಲನವರ ಸಂಗಡ ಮಾತಾಡಿ ಒಡಂಬಡಿಕೆ ಮಾಡಿ ಕೊಂಡು ದೇವರ ಜನಾಂಗವೆಂದು ಅವರನ್ನು ಪ್ರತ್ಯೇಕಿಸಿ ಅವರಿಗೆ ಪ್ರತಿಷ್ಟೆ ಮಾಡಲಿಕ್ಕೆ ಮನಸ್ಸಾಗಿದ್ದನು. ವಾಗ್ದತ್ತದೇಶವನ್ನು ಅವರಿಗೆ ಕೊಡುವದಕ್ಕಿಂತ ಮುಂಚೆ ದೇವರ ಆಲೋಚನೆಯ ಪ್ರಕಾರ ಆಗ ಬೇಕಾದ ಕಾರ್ಯಗಳು ಯಾವವಂದರೆ—ಇಸ್ರಾಯೇಲನವರು ಸ್ವದೇಶದ ಸ್ವತಂತ್ರಕ್ಕಾಗಿ ಜೋಡಣೆಯಾಗ ಬೇಕಾಯಿತು, ಫರೋನನಿಗೂ ಅವನ ದಂಡಿಗೂ ಶಿಕ್ಷೆಯಾಗ ಬೇಕಾಯಿತು.

ಯೆಹೋವನ ತ್ರಾಣವೂ ಮಹಿಮೆಯೂ ಸುತ್ತಲಿರುವ ಅನ್ಯ ಜನಾಂಗಗಳಿಗೂ ಪ್ರತ್ಯಕ್ಷವಾಗ ಬೇಕಾಗಿತ್ತು. (೧೫ ಸಂಧಿ ೧೧ನೇ ಮುಂತಾದ ವಚನಗಳು.)

ಆದದರಿಂದ ಇಸ್ರಾಯೇಲನವರು ಕೆಂಪುಸಮುದ್ರದ ಕಡೆಗೆ ಪ್ರಯಾಣವಾಗಿ ಹೋದರು. ಫರೋನನು ಅದನ್ನು ಕೇಳಿ ತನ್ನ ಹೃದಯವನ್ನು ಕಡೇ ಸಾರಿ ಕಠಿಣ ಪಡಿಸಿ ಅರಣ್ಯವು ಅವರನ್ನು ಮುಚ್ಚಿ ಬಿಟ್ಟಿತ್ತೆಂದು ಹೇಳಿ, ಅವರನ್ನು ಹಿಂದಟ್ಟಿದನು. ಇಸ್ರಾಯೇಲನವರು ಪರ್ವತಗಳಿಂದಲೂ ಸಮುದ್ರದಿಂದಲೂ ಫರೋನನ ದಂಡಿನಿಂದಲೂ ಸುತ್ತಿದವರಾಗಿ ತಪ್ಪಿಸಿ ಕೊಳ್ಳುವ ಮಾರ್ಗವನ್ನು ಎಲ್ಲಿಯೂ ಕಾಣದೆ ವಿಶ್ವಾಸದ ದೃಷ್ಟಿಯನ್ನು ದಿವಕ್ಕೆ ಎತ್ತಿ ದೇವರಿಂದ ಸಹಾಯವನ್ನು ಹೊಂದಿದರು. ಹ್ಯಾಗಂದರೆ—ಮೇಘಸ್ತಂಭವು ಅವರಿಗೂ ಶತ್ರುಗಳಿಗೂ ನಡುವಿನಲ್ಲಿ ಇಳುಕೊಂಡು ಮಿಚ್ರದವರನ್ನು ಕಾರ್ಗತ್ತಲೆಯಿಂದ ಕವಿದು ಇಸ್ರಾಯೇಲನವರ ಕಡೆಯಲ್ಲಿ ಬಲವಾದ ಪ್ರ

ಕಾಶವನ್ನು ಕಾಟ್ಟಿತು. ಮೋಶೆ ದೇವರ ಅಪ್ಪಣೆಯಿಂದ ಸಮುದ್ರದ ಮೇಲೆ ಕಾಲು ಚಾಚಿದಾಗ ರಾತ್ರಿ ಎಲ್ಲಾ ಬೀಸುವ ಬಲವಾದ ಮೂಡಣ ಘಾಳಿ ಬಂದು ಸಮುದ್ರದ ನೀರನ್ನು ಎಡ ಬಲದಲ್ಲಿ ಗೋಡೆಯ ಪ್ರಕಾರ ನಿಲ್ಲುವ ಹಾಗೆ ವಿಭಾಗಿಸಿತು. ಇಸ್ರಾಯೇಲನವರು ದಾಟಿದಾಗ ಅವರನ್ನು ಹಿಂದಟ್ಟಿದ ಶತ್ರುಗಳು ಗಲಿಬಿಲಿಯಾಗಿ ಮೋಶೆ ತಿರಿಗಿ ಕೈ ಚಾಚುತ್ತಲೆ ಎರಡು ಕಡೆಯಿಂದ ಕೂಡುವ ಸಮುದ್ರದಲ್ಲಿ ಮುಣುಗಿ ಸತ್ತರು. ಈ ಪ್ರಕಾರ ಮಿಚ್ರದವರ ಸೈನ್ಯವೆಲ್ಲಾ ಕೆಂಪು ಸಮುದ್ರದಲ್ಲಿ ಒಮ್ಮೆ ನಾಶವಾದಾಗ ಮೋಶೆಯೂ ಮಿರಿಯಾಮ್ ಎಂಬ ಅಕ್ಕನೂ ಇಸ್ರಾಯೇಲನ ರಕ್ಷಕನಾದ ಯೆಹೋವನಿಗೆ ಸ್ತೋತ್ರಗೀತವನ್ನು ಹಾಡಿದರು.

ಪರಿಶಿಷ್ಟ. ೧. ಇಸ್ರಾಯೇಲನವರ ದಂಡು ಯಾವ ಮಾರ್ಗವಾಗಿ ಕೆಂಪುಸಮುದ್ರದ ತೀರಕ್ಕೆ ಬಂತೆಂದು ನಿಶ್ಚಯವಾಗಿ ಹೇಳ ಕೂಡದು. ಕೆಲವರು ಹೇಳುವದೇನಂದರೆ—ಇಸ್ರಾಯೇಲನವರು ಈಗಿನ ಕಹಿರಾ (ಕೈರೋ) ಪಟ್ಟಣದ ಸಮೀಪದಲ್ಲಿರುವ ಹೆಲಿಯುಪೊಲಿಯಿಂದ ಪರಶೆಗಳ ಹಾದಿಯಲ್ಲಿ ಕೆಂಪುಸಮುದ್ರದ ಪಶ್ಚಿಮದ ಕೈಯ್ಯ ತುದಿಯ ಕಡೆಗೆ ಹೋಗ ಬೇಕೆಂದು ಹೊರಟ ಮೇಲೆ ದೇವರ ಅಪ್ಪಣೆಯ ಪ್ರಕಾರ ದಕ್ಷಿಣಕ್ಕೆ ತಿರಿಗಿ ಸೂಯೆಜಿಗೆ ಕೆಲವು ಹರದಾರಿ ದೂರವಾಗಿರುವ ದಕ್ಷಿಣ ದಿಕ್ಕಿನ ತೀರಕ್ಕೆ ಬಂದರು. ಮತ್ತೊಬ್ಬರು ನೆನಸುವದೇನಂದರೆ ಇಸ್ರಾಯೇಲನವರು ಗೋಶೆನ್ ದೇಶದ ಮಧ್ಯಕ್ಕೆ ಸಮೀಪವಾದ ಹೆರೊವೊಪೊಲಿಯಲ್ಲಿ ಕೂಡಿ ಬಂದು ಪಯಣಕ್ಕೆ ಹೊರಟು ಪೂರ್ವ ದಕ್ಷಿಣ ದಿಕ್ಕಿಗೆ ಹೋಗಿ ದೇವರ ಅಪ್ಪಣೆಯ ಪ್ರಕಾರ ಕೆಂಪುಸಮುದ್ರದ ಉತ್ತರ ತುದಿಯ ಸುತ್ತು ಹೋಗದೆ ಅದರ ಪಶ್ಚಿಮ ತೀರದಲ್ಲಿ ದಕ್ಷಿಣದ ಕಡೆಗೆ ಕೆಲವು ಹರದಾರಿ ದೂರ ಹೋದರು.

ಪರಿಶಿಷ್ಟ. ೨. ಮೇಘ ಅಗ್ನಿಗಳ ಸ್ತಂಭವು ತನ್ನ ಪ್ರಜೆಯಲ್ಲಿರುವ ಯೆಹೋವನ ಸಾಮೀಪ್ಯಕ್ಕೆ ಗುರ್ತೂ ಸಾಕ್ಷಿಯೂ ಆಗಿತ್ತು. ದೇವರ ಪರಿಶುದ್ಧತ್ವಕ್ಕೆ ಪ್ರಕಟಣೆಯಾದ ಅಗ್ನಿಸ್ತಂಭವನ್ನು ಸುತ್ತಿ ಮರೆ ಮಾಡಿದ ಅರ್ಥವೇನಂದರೆ—ಪಾಪಿಮನುಷ್ಯನ ಮಂದವಾದ ದೃಷ್ಟಿ ಮರೆಯಿಲ್ಲದ ದೇವರ ಮಹಿಮೆಯ ನೋಟವನ್ನು ತಾಳಲಾರದು. ಆದರೆ ಅಗ್ನಿಸ್ತಂಭದ ಪ್ರಕಾಶವು ಹಗಲಿನಲ್ಲಿ ಮೇಘಸ್ತಂಭವನ್ನು ಬೆಳಗಿಸಿದದರಿಂದ ಅದು ಕತ್ತಲೆಯಾಗಿ ಕಾಣಿಸದೆ ಬಿಳುಪಾದ ಮೇಘವಾಗಿ ಮಿಂಚುತ್ತಾ ಇತ್ತೆಂದು ನೆನಸ ತಕ್ಕದ್ದು. ಮತ್ತು ರಾತ್ರಿಯಲ್ಲಿ ಅದು ದಂಡಿಗೆಲ್ಲಾ ಬೆಳಕು ಕೊಡುವ ಪ್ರಕಾಶಮಯವಾದ ಅಗ್ನಿಸ್ತಂಭವಾಗಿ ಕಾಣಿಸಿತು.

೨) ೨ಮೋಶೆ. ೧೬—೧೮ವರೆಗೂ. ಕೆಂಪುಸಮುದ್ರವನ್ನು ದಾಟಿದ ಮೇಲೆ ಇಸ್ರಾಯೇಲನವರ ದಂಡು ಸಮುದ್ರದ ಮೂಡಣ ತೀರವನ್ನು ಹಿಡಿದು ಸೀನೈಪರ್ವತದ ಕಡೆಗೆ ಪಯಣ ಮಾಡಿತು. ಮಾರಾ (ಅಂದರೆ ಕಹಿ) ಎಂಬಲ್ಲಿ ಮೋಶೆ ಕಹಿಯಾದ ನೀರನ್ನು ಒಂದು ಮರದ ಕಟ್ಟಿಗೆಯನ್ನು ಅದರಲ್ಲಿ ಹಾಕಿದದರಿಂದ ಶೀಯಾಗ ಮಾಡಿದನು. ಸಿನ್ ಎಂಬ ಅರಣ್ಯದಲ್ಲಿ ಜನರು ಗುಣುಗುಟ್ಟಿ ಮಿಸ್ರದ ಮಾಂಸಭಕ್ಷ್ಯವನ್ನು ಆಶಿಸಿದದರಿಂದ ಯೆಹೋವನು ಅವರಿಗೆ ಲಾವಕ್ಕಿಗಳನ್ನೂ ಮನ್ನವನ್ನೂ ಕೊಟ್ಟನು. ರಫಿದೀಮಿನಲ್ಲಿ ಬಂಡೆಯು ಶೀಳಿ ಹೋಗಿ ಅವರಿಗೆ ನೀರು ಹರಿಸಿತು. ಅದೇ ಸ್ಥಳದಲ್ಲಿ ಅಮಲೇಕ್ಯರು ಮೊದಲು ಇಸ್ರಾಯೇಲನವರ ಮೇಲೆ ಬಿದ್ದರು. ಆರೋನನೂ ಮಿರಿಯಾಮಳ ಗಂಡನಾದ ಹೂರನೂ ಮೋಶೆ ಪ್ರಾರ್ಥನೆಯಲ್ಲಿ ಚಾಚಿದ ಕೈಗಳನ್ನು ಹಿಡಿದು ಆದರಿಸಿದದರಿಂದ ಯೋಷುವನು ಅಮಲೇಕ್ಯರನ್ನು ಜಯಿಸಿದನು. ಈ ಪ್ರಕಾರ ಅವರು ಪ್ರಾರ್ಥನೆಯಲ್ಲಿ ಚಾಚಿದ ಕೈಗಳು ಯುದ್ಧ ಮಾಡುವ ದಂಡಿಗಿಂತ ಬಲಿಷ್ಟವಾದವೆಂದು ಕಲಿತು ಕೊಂಡರು. ತರುವಾಯ ಇತ್ರೋ ಮೋಶೆಯ ಹೆಂಡತಿಯನ್ನೂ ಇಬ್ಬರು ಮಕ್ಕಳನ್ನೂ ಕರಕೊಂಡು ಬಂದು, ಹತ್ತರ ಮೇಲೆಯೂ ಐವತ್ತರ ಮೇಲೆಯೂ ನೂರರ ಮೇಲೆಯೂ ಸಾವಿರಗಳ ಮೇಲೆಯೂ ಜನರ ವ್ಯಾಜ್ಯಗಳನ್ನು ತೀರಿಸುವದರಲ್ಲಿ ಸಹಾಯಕರಾದ ನ್ಯಾಯಾಧಿಪತಿಗಳನ್ನು ನೇಮಿಸಬೇಕೆಂದು ಮೋಶೆಗೆ ಬುದ್ಧಿ ಹೇಳಿದನು. ಮೋಶೆ ಹಾಗೆ ಮಾಡಿದನು.

ಪರಿಶಿಷ್ಟ. ಕಲ್ಲಿನ ಅರಾಬ್ಯದಲ್ಲಿ ಈಗ ಸಹಾ ಬಂದೊಂದು ವೇಳೆ ಲಾವಕ್ಕಿಗಳ ದೊಡ್ಡ ಹಿಂಡುಗಳು ಬಂದು ನೆಲದ ಹತ್ತರ ಹಾರುತ್ತವೆ. ಬೇಕಾದರೆ ಅಂಥಾ ಸಮಯದಲ್ಲಿ ಯಾರಾದರೂ ಕೈಯಿಂದಲೇ ಹಕ್ಕಿಗಳನ್ನು ಹಿಡಿಯ ಬಹುದು. ಆದರೆ ಮೋಶೆಯ ಕಾಲದಲ್ಲಿ ಆದದ್ದು ಬೇರೆ. ಲೆಖ್ಖವಿಲ್ಲದ ಲಾವಕ್ಕೀ ಹಿಂಡುಗಳು ಯೆಹೋವನು ಹೇಳಿದಾಗಲೇ ಬಂದು ಇಸ್ರಾಯೇಲನವರು ಇದ್ದ ಸ್ಥಳವನ್ನು ದಾಟದೆ ನೆಲಕ್ಕೆ ಬಿದ್ದವು. ಇಪ್ಪತ್ತೈದು ಲಕ್ಷ ಜನರು ಅವುಗಳ ಮಾಂಸವನ್ನು ತಿಂದು ತೃಪ್ತಿಯಾದರು. ಅದೇ ಪ್ರಕಾರವಾಗಿ ಅರಾಬ್ಯದ ಅರ್ಧದ್ವೀಪದಲ್ಲಿ ಬಿಸಿಲುಕಾಲದಲ್ಲಿ ಹೆಚ್ಚು ಮಳೆ ಬೀಳುವ ವರ್ಷಗಳಲ್ಲಿ ಒಂದು ವಿಧದ ಮನ್ನಾ ಅಲ್ಲಿ ಪ್ರಬಲವಾದ ತಮರಿಸ್ಕ ಎಂಬ ಗಿಡದಿಂದ ಸೋರಿ ಬಂದು ನೆಲಕ್ಕೆ ಬಿದ್ದು ಘಟ್ಟಿಯಾಗುವದು. ಅರಾಬ್ಯರು ವರ್ಷವರ್ಷಕ್ಕೆ ಐನೂರು ಆರುನೂರು ರಾತಲು ಕೂಡಿಸಿಡುತ್ತಾರೆ. ಆದರೆ ಮೋಶೆಯ ಕಾಲದಲ್ಲಿ ಇಸ್ರಾಯೇಲನವರ ಆಹಾರಕ್ಕಾಗಿ ಬಿದ್ದ ಮನ್ನಾ ಬೇರೆ. ಈಗ ಸೀನೈ ಅರ್ಧದ್ವೀಪದಲ್ಲಿ ಶಿಕ್ಕುವ ಮನ್ನಾ ಅರಾಬ್ಯರು ಅದನ್ನು ಎಷ್ಟು ಕಾಲ ಇಟ್ಟು ಕೊಂಡರೂ

ಕೊಳೆತು ಹೋಗುವದಿಲ್ಲ. ಇಸ್ರಯೇಲನವರಿಗೆ ಸಿಕ್ಕಿದ ಮನ್ನಾ ಎರಡು ದಿವಸದಲ್ಲಿ ಕೊಳೆತು ಹೋಗುವದು, ಆದರೆ ಈ ನೇಮಕ್ಕೂ ಅಪವಾದವಿತ್ತು. ಯಾವದಂದರೆ ಶನಿವಾರ ಶನಿವಾರ ಬಿದ್ದ ಮನ್ನಾ ಎರಡನೇ ದಿವಸದಲ್ಲಿಯೂ ಉಳಿಯುತ್ತಾ ಇತ್ತು. ಇದಲ್ಲದೆ ಅದನ್ನು ಕೂಡಿಸಿದವರಲ್ಲಿ ಯಾರಿಗೆ ಹೆಚ್ಚೂ ಯಾರಿಗೆ ಕಡಿಮೆಯೂ ಆಗಲಿಲ್ಲ.



## § 34. ನೇಮದಾನವು

೧) ೨ ಮೋಶೆ. ೧೯ ಸಂಧಿ. ಪಯಣದ ಮೂರನೇ ತಿಂಗಳಲ್ಲಿ ಇಸ್ರಯೇಲರು ಸೀನೈಪರ್ವತದ ಅರಣ್ಯದಲ್ಲಿ ಸೇರಿದರು. ಮೋಶೆ ಬೇಗ ಪರ್ವತವನ್ನೇರಿ ಯೆಹೋವನಿಂದ ಆಗ ಬೇಕಾದ ಒಡಂಬಡಿಕೆಯ ವಿಷಯವಾಗಿ ಮೊದಲನೇ ಮಾತು ಕೇಳಿದನು. ಅದೇನಂದರೆ ನಾನು ಮಿಚ್ರದವರಿಗೆ ಮಾಡಿದ್ದನ್ನೂ ನಿಮ್ಮನ್ನು ಹದ್ದಿನ ರೆಕ್ಕೆಗಳಿಂದ ಹಾತ್ತು ಕಾಂಡು ನನ್ನ ಕಡೆಗೆ ತಂದದ್ದನ್ನೂ ನೀವು ಕಂಡಿರಿ. ಈಗ ನನ್ನ ಶಬ್ದವನ್ನು ಕೇಳಿ ನನ್ನ ಒಡಂಬಡಿಕೆಯನ್ನು ಕೈ ಕೊಳ್ಳುತ್ತೀರಾದರೆ ಎಲ್ಲಾ ಜನಾಂಗಗಳಲ್ಲಿ ನೀವೇ ನನ್ನ ಸ್ವಾಸ್ಥ್ಯವಾಗಿರುವಿರಿ. ಯಾಕಂದರೆ ಭೂಮಿ ಎಲ್ಲಾ ನನ್ನದು; ಮತ್ತು ನೀವು ನನಗೆ ಯಾಜಕರಾಜ್ಯವೂ ಪರಿಶುದ್ಧ ಜನಾಂಗವೂ ಆಗಿರುವಿರಿ.

ಪರಿಶಿಷ್ಟ. ದೇವರಾಜ್ಯವು ಈ ಒಡಂಬಡಿಕೆಯ ಭಾವವಾಗಿತ್ತು. ಭೂಲೋಕದ ಅರಸನು ತನ್ನ ಪ್ರಜೆಯನ್ನು ಆಳಿ ಕೊಳ್ಳುವ ಪ್ರಕಾರವೇ ಇಸ್ರಯೇಲರನ್ನು ಆಳಿ ಕೊಳ್ಳುವದಕ್ಕೆ ಯೆಹೋವನು ತನ್ನನ್ನು ತಗ್ಗಿಸಿ ಕೊಂಡನು. ಇಸ್ರಯೇಲನವರು ಪರಿಶುದ್ಧ ಜನಾಂಗವಾಗಲಿಕ್ಕಿದ್ದರು. ಅದೇನಂದರೆ — ಅವರು ಪ್ರತ್ಯೇಕಿಸಲ್ಪಟ್ಟವರಾಗಿ ಸಾಧಾರಣವಾದ ಜನಾಂಗವಾಗಿರದೆ ದೇವರ ಸೇವೆಗಾಗಿ ನೇಮಕವಾಗಿದ್ದರು. ಇಸ್ರಯೇಲನು ಯೆಹೋವನ ಪ್ರಥಮ ಪುತ್ರನು (೨ ಮೋಶೆ. ೪, ೨೨). ಅದೇನಂದರೆ: ಇಸ್ರಯೇಲನವರು ಎಲ್ಲಾ ಜನಾಂಗಗಳಿಂದ ಆರಿಸಲ್ಪಟ್ಟವರಾಗಿ ಎಲ್ಲಾ ಜನಾಂಗಗಳ ಪ್ರಯೋಜನಕ್ಕೆ ದಿವ್ಯ ಪ್ರಕಟಣೆಗಳ ಉಗ್ರಾಣದವರೂ ಪಾಲಕರೂ ಮಧ್ಯಸ್ಥಗಾರರೂ ಆದ ಯಾಜಕಜನಾಂಗವಾಗಲಿಕ್ಕಿದ್ದರು.

೨) ೨ ಮೋಶೆ. ೧೯—೨೦ ಸಂಧಿ. ಇಸ್ರಯೇಲನ ಜನಾಂಗವು ಈ ಮಾತಿಗೆ ಒಪ್ಪಿ ಕಾಂಡು ಧರ್ಮಸ ನ್ಯಾಯಪ್ರಮಾಣವನ್ನು ಹಾಂದುವ ಮೂರನೇ ದಿವಸ

ಕ್ಕಾಗಿ ತನ್ನನ್ನು ಸಿದ್ಧ ಮಾಡಿ ಕೊಂಡಿತು. ಪರಿಶುದ್ಧ ಪರ್ವತದ ಸುತ್ತಲು ಬೇಲಿ ಕಟ್ಟಲ್ಪಟ್ಟಿತು. ಅದನ್ನು ಮನುಷ್ಯನಾಗಲಿ ಪಶುವಾಗಲಿ ಮುಟ್ಟುತ್ತಲೆ ಸಾಯ ಬೇಕಾಗಿತ್ತು. ಮೂರನೇ ದಿವಸದಲ್ಲಿ ಗುಡುಗೂ ಮಿಂಚೂ ಬಂದು ಮೊಬ್ಬಾದ ಮೋಡವು ಪರ್ವತದಲ್ಲಿ ಕಾಣಿಸಿ ಕೊಂಡು ಅತಿ ಬಲವಾದ ತುತೂರಿಯ ಶಬ್ದವು ಕೇಳಿಸಿತು. ಮೋಶೆ ಜಯ ಹಿಡಿದ ಜನಾಂಗವನ್ನು ಬೀಡಿನಿಂದ ಪರ್ವತದ ಬುಡಕ್ಕೆ ದೇವರನ್ನು ಎದುರ್ಗೊಳ್ಳಲಿಕ್ಕೆ ಕರ ಕೊಂಡು ಬಂದನು. ಸೀನೈಪರ್ವತವೆಲ್ಲಾ ಕರ್ತನು ಅಗ್ನಿಯಿಂದ ಪರ್ವತಕ್ಕೆ ಇಳಿದು ಬಂದ ಕಾರಣ ಹೊಗೆಯುತ್ತಾ ಇತ್ತು. ಮತ್ತು ಪರ್ವತವೆಲ್ಲಾ ಅದರುತ್ತಾ ತುತೂರಿಯ ಶಬ್ದವು ಹೆಚ್ಚೆಚ್ಚುತ್ತಾ ಇತ್ತು. ಮತ್ತು ಕರ್ತನು ಹತ್ತು ಮಾತುಗಳನ್ನು ನುಡಿದನು. ಜನವೆಲ್ಲಾ ಗುಡುಗನ್ನೂ ಮಿಂಚನ್ನೂ ತುತೂರಿಯ ಶಬ್ದವನ್ನೂ ಹೊಗೆಯುವ ಪರ್ವತವನ್ನೂ ಕಂಡಿತು.

ಪರಿಶಿಷ್ಟ. ೧. ಹತ್ತು ಮಾತುಗಳು (ದಶವಚನ) ಸಮಸ್ತ ನೇಮದ ಸಾರಾಂಶವಾಗಿವೆ.

ಮೊದಲನೇ ಮಾತು ಸಮಸ್ತ ನೇಮದ ಪೂರೈಸುವಿಕೆಗೆ ದೇವರ ಪ್ರೀತಿಯು ಮೂಲವಾಗಿದೆಂದು ತೋರಿಸುತ್ತದೆ. ಸಮಸ್ತ ನೇಮದ ಮೀರುವಿಕೆಗೆ ಮೂಲವಾದ ದುರಾಶೆಯು ಕಡೇ ಮಾತಿನಲ್ಲಿ ತೋರುತ್ತದೆ.

ದಶವಚನವು ಎರಡು ಕಲ್ಲಿನ ಹಲಿಗೆಗಳಲ್ಲಿ ದೇವರ ಬೆರಳಿನಿಂದ ಬರಿಯಲ್ಪಟ್ಟಿತು.

ಮೊದಲನೇ ಹಲಿಗೆಯಲ್ಲಿ ಬರೆದ ಆಜ್ಞೆಗಳು ದೇವರ ಪ್ರೀತಿಯ ವಿಷಯವಾಗಿ ಅವೆ.

ಎರಡನೇ ಹಲಿಗೆಯ ಆಜ್ಞೆಗಳು ದೇವರ ಪ್ರಿತಿಯಿಂದ ಹುಟ್ಟುವ ನೆರೆಯವನ ಪ್ರೀತಿಯ ವಿಷಯವಾಗಿ ಅವೆ. ಹೆತ್ತವರ ಪ್ರೀತಿಯ ಆಜ್ಞೆಯು ಮೊದಲನೇ ಹಲಿಗೆಯಲ್ಲಿ ಸೇರಿಯದೆ. ಯಾಕಂದರೆ ತಂದೆತಾಯಿಗಳು ದೇವರ ಸ್ಥಳದಲ್ಲಿ ಇರುತ್ತಾರೆ. (ಮತ್ತಾ. ೨೨, ೩೭—೪೦. ೧ತಿಮೊಥಿ. ೧, ೫.) ಪಾಪದ ಗುಣವು ಮನುಷ್ಯನಲ್ಲಿರುವದರಿಂದ ದಶವಚನದ ಮಾತುಗಳಲ್ಲಿ ಹೆಚ್ಚಾದವುಗಳು ಒಳ್ಳೆದನ್ನು ಮಾಡ ಬೇಕೆಂದು ಆಜ್ಞಾಪಿಸದೆ, ಕೆಟ್ಟದನ್ನು ಮಾಡ ಬಾರದೆಂದು ನಿವಾರಿಸುತ್ತವೆ.

ಪರಿಶಿಷ್ಟ. ೨. ನೇಮಕ್ಕೆ ಒಂದು ಆಶೀರ್ವಾದವೂ ಒಂದು ಶಾಪವೂ ಉಂಟು. ಆಶೀರ್ವಾದವೇನಂದರೆ — ಇವುಗಳನ್ನು ಮಾಡುವ ಪ್ರತಿ ಮನುಷ್ಯನು ಬದುಕುವನು. (೩ಮೋಶೆ. ೧೮, ೫.)

ಶಾಪವು ಯಾವದಂದರೆ: ಈ ನೇಮದ ವಚನಗಳನ್ನೆಲ್ಲಾ ಮಾಡಿ ಪೂರೈಸದೆ ಇರುವವನು ಶಾಪಗ್ರಸ್ತನಾಗಲಿ. (೫ ಮೋಶೆ. ೨೭, ೨೬.)

ನೇಮವು ವಾಗ್ದತ್ತಕ್ಕೂ (ಅಬ್ರಹಾಮ್) ಅದರ ಪೂರೈಸುವಿಕೆಗೂ (ಕ್ರಿಸ್ತನು) ನಡುವೆ ಬಂದು ಕ್ರಿಸ್ತನ ಕಡೆಗೆ ಕೊಂಡು ಹೋಗುವ ಉಪಾಧ್ಯನಾಗಿತ್ತು. (ಗಲಾತ್ಯ ೩, ೨೪.) ನೇಮದಿಂದ ಮನುಷ್ಯರು ತಮ್ಮ ಪಾಪವನ್ನೂ ಪಾಪಕ್ಕೆ ತಕ್ಕ ಶಾಪವನ್ನೂ (ರೋಮ. ೩, ೧೦.) ತಿಳುಕೊಂಡು ರಕ್ಷಣೆಯ ಆಶೆಯನ್ನು ಹೊಂದಿ ರಕ್ಷಣೆಗಾಗಿ ಆಯುತರಾಗ ಬೇಕಾಗಿತ್ತು. ದೇವಾರಾಧನೆಯ ನೇಮವು ಸಹಾ ಮನುಷ್ಯರಲ್ಲಿ ಹುಟ್ಟಿದ ಪಾಪದ ತಿಳುವಿಕೆಯನ್ನು ಹೆಚ್ಚಿಸಿ ನೆರಳಾಗಿಯೂ ಮುಂಗುರ್ತಾಗಿಯೂ ಬರುವ ರಕ್ಷಣೆಯ ಕ್ರಮವನ್ನು ಜಾಡೆಯಾಗಿ ಸೂಚಿಸಿ ಅದಕ್ಕೆ ಮಾರ್ಗವನ್ನು ಸಿದ್ಧ ಮಾಡುತ್ತಾ ಇತ್ತು. ಬರುವ ವರಗಳನ್ನಲ್ಲ ಬರುವ ವರಗಳ ನೆರಳನ್ನೇ ನೇಮವು ಪ್ರಕಟ ಮಾಡಿತು. (ಇಬ್ರಿ. ೧೦, ೧.) ಇನ್ನು ಯಾವನಾದರೂ ಅನ್ನಪಾನಗಳಲ್ಲಿಯಾದರೂ ಹಬ್ಬ ಅಮವಾಶಿ ಸಬತ್ತುಗಳಲ್ಲಿ ಯಾದರೂ ನಿಮಗೆ ನ್ಯಾಯ ತೀರಿಸದಿರಲಿ. ಇವು ಮುಂದಿನವುಗಳ ನೆರಳಾಗಿವೆ. ಆದರೆ ಶರೀರವು ಕ್ರಿಸ್ತನದೆ. (ಕೊಲೊ. ೨, ೧೬—೧೭.) ನೇಮವು ಅನಾದಿಯಿಂದ ಯೇಸು ಕ್ರಿಸ್ತನಲ್ಲಿ ನೇಮಕವಾದ ಲೋಕರಕ್ಷಣ್ಯದ ನೆರಳಾಗಿದೆ.

೩) ೨ ಮೋಶೆ. ೨೪. ಜನರು ಅದನ್ನು ಕಂಡಾಗ ಓಡಿ ಹಾಗಿ ದೂರದಲ್ಲಿ ನಿಂತು ಮೋಶೆಗೆ ಹೇಳಿದ್ದು — ನೀನೆ ನಮ್ಮ ಸಂಗಡ ಮಾತಾಡು, ನಾವು ವಿಧೇಯರಾಗಿದ್ದೇವೆ; ನಾವು ಸಾಯದ ಹಾಗೆ ದೇವರನ್ನು ನಮ್ಮ ಸಂಗಡ ಮಾತಾಡಲೀಸದೆ ಇರು. ತರುವಾಯ ಮೋಶೆ ಒಂದು ಬಲಿಪೀಠವನ್ನು ಹನ್ನೆರಡು ಸ್ತಂಭಗಳಿಂದ ಕಟ್ಟಿ ಅದರಲ್ಲಿ ಬಲಿಯರ್ಪಿಸಿ ರಕ್ತದ ಅರೆವಾಶಿಯನ್ನು ಪೀಠದಲ್ಲಿ ಚಿಮಿಕಿಸಿ ಯೆಹೋವನು ಈವರೆಗೆ ಹೇಳಿದ ಎಲ್ಲಾ ಮಾತುಗಳೂ ಆಜ್ಞೆಗಳೂ ಬರೆಯಲ್ಪಟ್ಟ ಒಡಂಬಡಿಕೆಯ ಪುಸ್ತಕವನ್ನು ಜನರಿಗೆ ಓದಿ ಹೇಳಿದನು. ಅವರು ಅದನ್ನು ಕೇಳಿ ಕರ್ತನು ಹೇಳುವದೆಲ್ಲಾ ನಾವು ಮಾಡಿ ವಿಧೇಯರಾಗಿದ್ದೇವೆ ಅಂದರು. ಆಗ ಮೋಶೆ ಉಳಿದ ರಕ್ತವನ್ನು ತಕ್ಕೊಂಡು ಒಡಂಬಡಿಕೆಯ ಪುಸ್ತಕದ ಮೇಲೆಯೂ ಸಮಸ್ತ ಜನಾಂಗದ ಮೇಲೆಯೂ ಅದನ್ನು ಚಿಮಿಕಿಸಿದನು. ಬಳಿಕ ಮೋಶೆ ಆರೋನರೂ ನಾದಬ್ ಅಬೀಹೂ ಇವರ ಸಹಿತವಾಗಿಯೂ ಇಸ್ರಯೇಲನವರ ಎಪ್ಪತ್ತು ಮಂದಿ ಹಿರಿಯರ ಸಹಿತವಾಗಿಯೂ ಪರ್ವತವನ್ನು ಏರಿ ಇಸ್ರಯೇಲನ ದೇವರನ್ನು ಕಂಡರು. ಮತ್ತು ದೇವರನ್ನು ಕಂಡ ಮೇಲೆ ಒಡಂಬಡಿಕೆ ಪ್ರತಿಷ್ಠೆಗಳ ಬಲಿಯಾಗಿ ಅರ್ಪಿಸಿದವುಗಳನ್ನು ತಿಂದು ಕುಡಿದರು.

ಪರಿಶಿಷ್ಟ. ೧. ಇಸ್ರಯೇಲನ ಜನಾಂಗವು ದೇವರನ್ನು ಸಮೀಪಿಸುವದಕ್ಕೆ ಅಧೈರ್ಯವಾಗಿದ್ದು ಮನುಷ್ಯನಾದ ಮಧ್ಯಸ್ಥಗಾರನು ತಮಗೆ ಅವಶ್ಯವಾಗಿದ್ದಾನೆಂದು ನೆನಸಿದದರಿಂದ ಅವರು ಹಳೇ ಒಡಂಬಡಿಕೆಯ ಕಾಲದಲ್ಲಿ ಯಾಜಕತ್ವದ ಪೂರ್ಣ ಅಧಿಕಾರವನ್ನೂ ಹಕ್ಕುಗಳನ್ನೂ ಹೊಂದಲಿಲ್ಲ. ಆದದರಿಂದ ಸಮಸ್ತ ಜನಾಂಗವು ಯೆಹೋವನಿಗೆ ಯಾಜಕರಾಗಿರ ಬೇಕಾಗಿದ್ದರೂ ವಿಶೇಷವಾದ ಕುಲಕ್ಕೆ ಯಾಜಕತ್ವದ ಉದ್ಯೋಗ ಕೊಡಲ್ಪಟ್ಟಿತು.

ಪರಿಶಿಷ್ಟ. ೨. ನೇಮದಾನದ ಸ್ಥಳ. ಮಧ್ಯ ಸೀನೈಘಟ್ಟಗಳಿಗೆ ಉತ್ತರ ಪಶ್ಚಿಮದಿಂದ ದಕ್ಷಿಣ ಪೂರ್ವಕ್ಕೆ ಹೋಗುವ ಮೂರು ವಿಶೇಷವಾದ ಭಾಗಗಳು ಅವೆ; ಅವುಗಳ ಹೆಸರುಗಳು ಯಾವವಂದರೆ: ಹೋರೇಬ್, ಜೆಬೇಲ್ ಯೆದ್ದೈರ್. ಜೆಬೇಲ್ ಯೆಲ್‌ಹೋಮೆರ್ ಇವುಗಳಲ್ಲಿ ಹೋರೇಬ್ ಮಧ್ಯದಲ್ಲಿ ಇರುವದು. ಹೋಮೆರ್ ಎಂಬದು ಪಶ್ಚಿಮದಲ್ಲಿ ದೈರ್ ಎಂಬದು ಪೂರ್ವದಲ್ಲಿ ಅವೆ. ಈ ಪರ್ವತಗಳ ಕೂಟಕ್ಕೆ ಉತ್ತರ ದಿಕ್ಕಿನಲ್ಲಿ ಎರ್‌ರಾಹಾ ಎಂಬ ವಿಸ್ತಾರವಾದ ಬೈಲು ಅದೆ. ಇದು ಸಮುದ್ರದ ಮೇಲೆ ನಾಲ್ಕು ಸಾವಿರ ಅಡಿ ಪರ್ಯಂತರ ಎತ್ತರವಾಗಿದೆ. ಉತ್ತರ ಪೂರ್ವ ದಿಕ್ಕಿನಲ್ಲಿ ವಾಡಿಯೆಸ್ ಶೈಕ ಎಂಬ ಅಗಲವಾದ ತಗ್ಗು ಅದಕ್ಕೆ ಸೇರುತ್ತದೆ. ಮೇಲೆ ಬರದ ಪರ್ವತಗಳನ್ನು ವಿಭಾಗಿಸುವ ಇಕ್ಕಟ್ಟಾದ ಎರಡು ತಗ್ಗುಗಳು ಸಹಾ ಅದಕ್ಕೆ ಕೂಡುತ್ತವೆ. ಇವುಗಳಲ್ಲಿ ಪಶ್ಚಿಮ ದಿಕ್ಕಿನಲ್ಲಿರುವ ವಾಡಿಯೆಲ್ ಲೆಜ್ಜಾ ಅರ್ಧದ್ವೀಪದ ಎಲ್ಲಾ ಪರ್ವತಗಳಲ್ಲಿ ಎತ್ತರವಾದ (೮೦೦೦ ಅಡಿ) ಜೇಬೆಲ್‌ಯೆಲ್ ಹೋಮೆರ್ ಎಂಬದರ ದಕ್ಷಿಣದ ತುದಿಯಾಗಿರುವ ಕತರೀನಪರ್ವತದಿಂದ ದಕ್ಷಿಣ ಕಡೆಯಲ್ಲಿ (ತಗ್ಗು) ಮುಚ್ಚಿಯವೆ. ಎರಡನೇ ಇಕ್ಕಟ್ಟಾದ ತಗ್ಗಿಗೆ ವಾಡಿ ಶುವೈಬ್ ಎಂಬ ಹೆಸರುಂಟು. ಇದರಲ್ಲಿ ಅತಿಥಿಪ್ರೀತಿಯಿಂದ ಪ್ರಖ್ಯಾತಿಯಾದ ಕತರೀನದ ಮಠವದೆ. ಈ ತಗ್ಗು ಸಹಾ ದಕ್ಷಿಣ ಕಡೆಯಲ್ಲಿ ತೆರೆದಾಗಿರುವದಿಲ್ಲ. ಅದರ ದಕ್ಷಿಣ ಮೂಲೆಯಲ್ಲಿ ಗೋಡೆಯಂತಿರುವ ಪರ್ವತವು ಅದೆ; ಇದರ ದಕ್ಷಿಣದಲ್ಲಿ ಹೋರೇಬ್ ಪರ್ವತದ ದಕ್ಷಿಣ ಭಾಗವನ್ನು ಅರ್ಧವಾಗಿ ಸುತ್ತುವ ಸೆಬಾಯೆ ಎಂಬ ವಿಸ್ತಾರವಾದ ದೊಡ್ಡ ಬೈಲು ಅದೆ. ಈ ದಕ್ಷಿಣದ ಬೈಲಿಗೆ ವಾಡಿಯೆಸ್ ಶೈಕ್ ಎಂಬ ತಗ್ಗಿಗೆ ಕೂಡುವ ವಾಡಿಯೆಸ್ ಶೇಬಾಯೆ ಎಂಬ ತಗ್ಗು ಸೇರುತ್ತದೆ. ಈ ವಾಡಿಯೆಸ್ ಶೆಬಾಯೆ, ಶೆಬಾಯೆ ಎಂಬ ಬೈಲಿಗೂ ಎರ್‌ರಾಹಾ ಎಂಬ ಬೈಲಿಗೂ ಸಂಬಂಧವಾಗಿದ್ದು ದೈರ್ ಎಂಬ ಪರ್ವತದ ಪೂರ್ವ ದಕ್ಷಿಣ ಪಾರ್ಶ್ವಗಳನ್ನು ಸುತ್ತುತ್ತದೆ. ಹೋರೇಬ್ ಪರ್ವತದ ಉತ್ತರದ ತುದಿ ಎರ್‌ರಾಹಾ ಎಂಬ ಬೈಲಿನಿಂದ ನೆಟ್ಟಗೆ ೧೫೦೦ ಅಡಿ ಪರ್ಯಂತರ ಎದ್ದು ಉದ್ದ ಗೀಟಿಗೆ ಸರಿಯಾದ ಗೋಡೆಯಂತೆ ಕಾಣಿಸುತ್ತದೆ. ಇಲ್ಲಿಂದ ಹೋರೇಬ್ ಪರ್ವತದ ಬೆನ್ನು

ದಕ್ಷಿಣ ಕಡೆಗೆ ಹೆಚ್ಚು ಹೆಚ್ಚಾಗಿ ಏರುತ್ತಾ ಜೇಬೆಲ್‌ಮೂಸಾ (ಮೋಶೆಯ ಪರ್ವತ) ಎಂಬ ದಕ್ಷಿಣ ತುದಿಯಲ್ಲಿ ೭ಸಾವಿರ ಅಡಿಗಳ ಎತ್ತರದವರಿಗೂ ಮುಟ್ಟುತ್ತದೆ. ಜೇಬೆಲ್‌ಮೂಸಾ ಎಂಬದರ ದಕ್ಷಿಣ ಪಾರ್ಶ್ವವು ಎರಡು ಸಾವಿರ ಅಡಿಗೆ ಇಳಿಯುವ ಪ್ರಪಾತವಾಗಿದೆ. ಇದರ ಅಡಿಯಲ್ಲಿ ಹರಳುಗುಡ್ಡಗಳ ಸಾಲು ಅದೆ. ಇದಕ್ಕೆ ದಕ್ಷಿಣದಲ್ಲಿ ಸೇಬಾಯೆ ಎಂಬ ದೊಡ್ಡ ಬೈಲು ವಿಸ್ತಾರವಾಗಿದೆ.—ಇಸ್ರಾಯೇಲನವರ ದಂಡು ಎರ್‌ರಾಹಾ ಬೈಲಿನಲ್ಲಿಯೂ ಶೈಕ್ ಎಂಬ ತಗ್ಗಿನಲ್ಲಿಯೂ ಇಳುಕೊಂಡಿತು. ಇಲ್ಲಿಂದ ಮೋಶೆ ಜನರನ್ನು ವಾಡಿಷೆಬಾಯೆಯ ಮಾರ್ಗವಾಗಿ ಶೆಬಾಯೆ ಬೈಲಿಗೆ ಕರಕೊಂಡು ಹೋದನು. ಜೇಬೆಲ್‌ಮೂಸಾ ಎಂಬ ಪರ್ವತದ ಮೇಲೆ ಯೆಹೋವನು ಇಳಿದು ಬಂದನು. ಅದರ ಅಡಿಯಲ್ಲಿರುವ ಬೈಲಿನಲ್ಲಿ ಪರ್ವತವನ್ನು ಮಹೋನ್ನತನಾದ ದೇವರ ಮಹಿಮೆಯುಳ್ಳ ಪೀಠದಂತೆ ಉರಿಯುತ್ತಾ ಹೊಗೆಯುತ್ತಾ ಇರುವದನ್ನು ಕಂಡಾಗ ವಿಸ್ಮಿತರಾಗಿ ಓಡಿ ಹೋಗಿ ಎರ್‌ರಾಹಾ ಎಂಬ ಬೈಲಿಗೆ ತಿರಿಗಿ ಬಂದರು. ಎರ್‌ರಾಹಾ ಎಂಬ ಬೈಲಿನಲ್ಲಿದ್ದಾಗ ನೇಮದಾನದ ಸ್ಥಳವನ್ನು ನೋಡ ಕೂಡದಿದ್ದರು; ಯಾಕಂದರೆ ಜೇಬೆಲ್‌ಮೂಸಾ ಎಂಬ ಪರ್ವತಕ್ಕೂ ರಾಹಾ ಎಂಬ ಬೈಲಿಗೂ ಹೋರೆಬ್ ಪರ್ವತದ ಉದ್ದಬೆನ್ನು ಮಧ್ಯದಲ್ಲಿ ಅದೆ.



## § 35. ಚಿನ್ನದ ಕರು, ಯೆಹೋವನು ಹೊಸ್ತಾಗಿ ಕೊಟ್ಟ ನೇಮದ ಹಲಿಗೆಗಳು

೧) ೨ಮೋಶೆ. ೩೨—೩೩ ಸಂಧಿ. ಮೋಶೆ ಬಹಳ ಹೊತ್ತು ಪರ್ವತದಲ್ಲಿ ಇದ್ದದರಿಂದ ಜನರು ಅವನು ತಿರಿಗಿ ಬರುವದನ್ನು ಎದುರು ನೋಡುತ್ತಾ ದಣಿದರು; ಆದದರಿಂದ ಅವರು ಆರೋನನಿಗೆ ನಮ್ಮ ಮುಂದೆ ನಡಿಯುವ ದೇವರುಗಳನ್ನು ಮಾಡು! ಯಾಕಂದರೆ ಮಿಚ್ರದಿಂದ ಕರಕೊಂಡು ಬಂದ ಈ ಮೋಶೆಗೆ ಏನಾಯಿತೆಂದು ಅರಿಯೆವು ಎಂದು ಹೇಳಿದರು. ಆರೋನನು ಹೇಳುತ್ತಲೇ ಅವರು ತಮ್ಮ ಹೆಂಡರು ಮಕ್ಕಳ ಚಿನ್ನದ ಒಡವೆಗಳನ್ನು ಸಂತೋಷದಿಂದ ತಂದು ಕೊಟ್ಟರು. ಅದರಿಂದ ಆರೋನನು ಚಿನ್ನದ ಕರು ಮಾಡಿ ಪೀಠವನ್ನು ಕಟ್ಟಿಸಿ,—ನಾಳೆ ಯೆಹೋವನ ಹಬ್ಬವೆಂಬದನ್ನು ದಂಡಿನಲ್ಲಿ ಪ್ರಕಟ ಮಾಡಿದನು. ಜನರು ಪರ್ವತದ ಅಡಿಯಲ್ಲಿ ಉಂಡು ಕುಡಿದು ನಾಟ್ಯ ಮೊದಲಾದ ಆಟಗಳನ್ನು ಹೊಸ ವಿಗ್ರಹದ ಮುಂದೆ ಆಡುತ್ತಿರುವ ಸಮಯದಲ್ಲಿ ಕರ್ತನು ಮೋಶೆಗೆ ಹೇಳಿದ್ದೇನಂದರೆ—ಇಳಿದು ಹೋಗು! ನೀನು ಮಿಚ್ರದಿಂದ ಕರಕೊಂಡು ಬಂದ ನಿನ್ನ ಜನಾಂಗವು ಎಲ್ಲಾ ಕೆಡಿಸಿ ಅದೆ. ನನ್ನ ರೌದ್ರವು ಅವರನ್ನು

ದಹಿಸುವ ಹಾಗೆ ನನ್ನನ್ನು ಬಿಡು! ಆಗ ನಿನ್ನನ್ನು ದೊಡ್ಡ ಜನಾಂಗ ಮಾಡುವೆನು. ಈ ಪ್ರಕಾರ ಕರ್ತನು ತನ್ನನ್ನು ಮೋಶೆ ಕೈಗೆ ಒಪ್ಪಿಸಿದ ಹಾಗೆ ಆಯಿತು. ಮೋಶೆ ಮಧ್ಯಸ್ಥಗಾರನಿಗೆ ಯೋಗ್ಯವಾದದ್ದನ್ನು ತಿಳಿದು ಕರ್ತನನ್ನು ಬಿಡದೆ ಪೂರ್ಣ ಧೈರ್ಯದಿಂದಲೂ ಧೈರ್ಯದಿಂದಲೂ ಮಾತಾಡಿ ನೀನು ಮಿಶ್ರದಿಂದ ಕರಕೊಂಡು ಬಂದ ನಿನ್ನ ಜನಾಂಗವೆಂದು ಯೆಹೋವನಿಗೆ ಹೇಳಿ ಅಬ್ರಹಾಮ್ ಇಸಾಕ್ ಯಾಕೋಬ್ ಇವರ ಸಂಗಡ ಆಣೆ ಇಟ್ಟು ಮಾಡಿ ಕೊಂಡ ಒಡಂಬಡಿಕೆಯನ್ನು ಅವನ ನೆನಪಿಗೆ ತರುತ್ತಾನೆ. ಆಗ ಕರ್ತನು ತನ್ನ ಜನಾಂಗಕ್ಕೆ ಮಾಡಬೇಕೆಂದು ಆಲೋಚಿಸಿದ ಕೇಡಿಗೆ ಪಶ್ಚಾತ್ತಾಪ ಪಟ್ಟನು. ಮೋಶೆ ಪರ್ವತದಿಂದ ಇಳಿದು ವಿಗ್ರಹಾರಾಧನೆ ಮಾಡುವ ಜನರು ನಾಟ್ಯವಾಡುವದನ್ನು ಕಂಡಾಗಲೇ ಅವನ ಕೋಪ ಉರಿಯಿತು. ಜನರು ಯೆಹೋವನ ಒಡಂಬಡಿಕೆಯನ್ನು ಮುರಿದದರಿಂದ ಮೋಶೆಯು ಒಡಂಬಡಿಕೆಯ ಪತ್ರಗಳಾದ ನೇಮಶಾಸನಗಳನ್ನು ನೆಲಕ್ಕೆ ಹಾಕಿ ಮುರಿದು ಬಿಟ್ಟನು. ಕರುವನ್ನು ಪುಡಿ ಮಾಡಿ ಪುಡಿಯನ್ನು ಹೊರೆಬಿನ ಹಳ್ಳದಲ್ಲಿ ಹಾಕಿ ಆ ನೀರು ಜನರಿಗೆ ಕುಡಿಸಿದನು. ಆರೋನನನ್ನು ಮೋಶೆಯು ಮೊದಲು ವಿಚಾರಿಸಿದನು. ತರುವಾಯ ಕರ್ತನ ಪಕ್ಷದವರು ನನ್ನ ಬಳಿಗೆ ಬರಲಿ ಎಂದು ದಂಡಿನಲ್ಲಿ ಕೂಗಿದನು. ಆಗ ಲೇವಿಯರೆಲ್ಲರೂ ಅವನ ಬಳಿಗೆ ಬಂದು ಇನ್ನೂ ವಿಧೇಯರಾಗದೆ ದ್ರೋಹದಲ್ಲಿ ದೃಢವಾಗಿರುವ ಮೂರು ಸಾವಿರ ಜನರನ್ನು ಖಡ್ಗದಿಂದ ಕೊಂದರು. ಲೇವಿಯರು ಈ ಪ್ರಕಾರ ಪೂರ್ಣ ಹೃದಯದಿಂದ ವಿಧೇಯರಾಗಿ ಈ ಕಠಿಣವಾದ ಸೇವೆಯನ್ನು ಮಾಡಿದದರಿಂದ ಅವರ ವಂಶದ ಮೇಲೆ ಇದ್ದ ಶಾಪವು ೧ ಮೋಶೆ. ೪೯, ೫—೭. ಅಳಿದು ಹೋಯಿತು. ಮೋಶೆ ಮುಂದಿನ ಕಾಲದಲ್ಲಿ ಅವರು ಮಾಡ ತಕ್ಕ ಉದ್ಯೋಗಕ್ಕಾಗಿ ಅವರನ್ನು ಆಗಲೇ ಪ್ರತಿಷ್ಠೆ ಮಾಡಿದನು.

೨) ೨ ಮೋಶೆ. ೩೩—೩೪. ಸಂಧಿ. ಜನರು ಮಾನಸಾಂತರ ಪಟ್ಟ ಮೇಲೆ ಮೋಶೆಯು ಉದ್ಯೋಗದ ಗುಡಾರವನ್ನು ಸದ್ಯಕ್ಕೆ ದಂಡಿನ ಹೊರಗೆ ಕಟ್ಟಿ ವಿಮೋಚನೆಬಲಿಯನ್ನು ಅರ್ಪಿಸಿ ತಿರಿಗಿ ಪರ್ವತವನ್ನು ಏರಿ ನಾಲ್ವತ್ತು ದಿವಸದ ಮೇಲೆ ದೇವರು ಬರೆದ ಹೊಸ ನೇಮಶಾಸನಗಳನ್ನು ತೆಗದು ಕೊಂಡು ಬಂದನು. ಬರುವಾಗ ಅವನ ಮುಖವು ತಾನು ಪರ್ವತದಲ್ಲಿ ಕಂಡ ದೇವರ ಮಹಿಮೆಯಿಂದ ಪ್ರಕಾಶಮಯವಾದದರಿಂದ ಜನರು ಅವನ ಮುಖವನ್ನು ದೃಷ್ಟಿಸುವದನ್ನು ತಾಳಲಾರದೆ ಇರುವದರಿಂದ ಮುಸುಕು ಹಾಕಿ ಕೊಂಡನು. ಮತ್ತು ನೇಮಕ್ಕೆ ಕೂಡಿದ ಬೇರೆ ಬೇರೆ ಕಟ್ಟುಕಟ್ಟಳೆಗಳು ಸ್ಥಾಪಿಸಲ್ಪಟ್ಟವು.



## § 36. ಸಾಕ್ಷಿಗುಡಾರವು

೧) ೨ ಮೋಶೆ. ೩೫—೪೦ ವರೆಗೂ ಪರಿಶುದ್ಧ ಗುಡಾರವೂ, ಅದಕ್ಕೆ ಸಂಬಂಧವಾದ ಎಲ್ಲಾ ಸಾಮಗ್ರಿಯೂ ಜನರು ಉಚಿತವಾಗಿ ತಂದು ಕೊಟ್ಟ ದಾನಗಳಿಂದ ರಚಿಸಲ್ಪಟ್ಟವು. ಇಸ್ರಯೇಲಿನವರು ಮಿಶ್ರದಿಂದ ಬೆಳ್ಳಿ ಬಂಗಾರಗಳ ದೊಡ್ಡ ಭಾರವನ್ನು ತೆಕ್ಕೊಂಡು ಬಂದು, ಮೋಶೆ ಹೇಳಲು, ಉದಾರಿ ಗುಣದಿಂದ ಬೇಕಾದದಕ್ಕಿಂತ ಬಹಳ ಹೆಚ್ಚು ಕೊಟ್ಟರು. ಯೆಹೋವನು ಮೋಶೆಗೆ ಪರ್ವತದಲ್ಲಿ ತೋರಿಸಿದ ಮಾದ್ರಿ ಪೂರ್ಣವಾಗಿ ಅನುಸರಿಸಿ, ಸಮಸ್ತವನ್ನು ಪೂರೈಸುವದಕ್ಕಾಗಿ ಬೆಚಾಲೆಯೇಲನೂ ಒಹೋಲಿಯಾಬನೂ ಆದು ಹೇಳಲ್ಪಟ್ಟು ದೇವರ ಆತ್ಮದಿಂದ ಸಿದ್ಧಿ ಹೊಂದಿದರು. ಸ್ವಲ್ಪ ಕಡಿಮೆ ಇಡೀ ವರ್ಷದ ವರೆಗೂ ಈ ಕೆಲಸದಲ್ಲಿ ಇದ್ದರು. ಮಿಶ್ರದಿಂದ ಹೊರಟು ಬಂದ ಎರಡನೇ ವರ್ಷದ ಮೊದಲನೇ ತಿಂಗಳಿನ ಮೊದಲನೇ ದಿವಸದಲ್ಲಿ ಪರಿಶುದ್ಧ ಗುಡಾರವು ಕಟ್ಟಲ್ಪಟ್ಟಿತು. ಆಗ ಮೇಘವು ಸಾಕ್ಷಿಗುಡಾರವನ್ನು ಮುಚ್ಚಿತು. ಮತ್ತು ಯೆಹೋವನ ಮಹಿಮೆಯು ಸ್ಥಾನವನ್ನು ತುಂಬಿತು. (೪೦ ನೇ ಸಂಧಿ)

ಪರಿಶಿಷ್ಟ. ದೇವಾಲಯವು ಕಟ್ಟಲ್ಪಡುವ ಪರ್ಯಂತರ ಸಾಕ್ಷಿಗುಡಾರವು ಇಸ್ರಯೇಲಿನವರಿಗೆ ದೇವರಿಂದ ನೇಮಕವಾದ ಆರಾಧನೆ ಬಲಿಯರ್ಪಣೆಗಳ ಒಂದೇ ಸ್ಥಳವಾಗಿತ್ತು. ಕರ್ತನ ಮಹಿಮೆಯು ಅದರಲ್ಲಿಯೇ ವಾಸವಾಗಿದ್ದದರಿಂದ ಅದರ ಬಳಿಯಲ್ಲಿ ಮಾತ್ರ ಬಲಿಗಳನ್ನರ್ಪಿಸುವದು ನ್ಯಾಯವಾಗಿತ್ತು. ಆದರೆ ಕರ್ತನು ತಾನು ಒಬ್ಬನಿಗೆ ಬೇರೆ ಸ್ಥಳದಲ್ಲಿ ಪ್ರತ್ಯಕ್ಷವಾದರೆ ಆ ಸ್ಥಳದಲ್ಲಿಯೂ ಪ್ರತ್ಯಕ್ಷವಾದ ಕರ್ತನಿಗೆ ಬಲಿಯನ್ನರ್ಪಿಸ ಬಹುದಿತ್ತು. ಆದರೆ ಯೆಹೋವನ ಮಹಿಮೆಯು ಅಂಥಾ ಸ್ಥಳವನ್ನು ಬಿಟ್ಟ ಮೇಲೆ ಆರಾಧನೆಯಾಗಲಿ ಬಲಿಯಾಗಲಿ ಅದರಲ್ಲಿ ಆಗ ಕೂಡದಿತ್ತು.

೨) ಸಾಕ್ಷಿಗುಡಾರವು ಪಯಣದ ಕಾಲಕ್ಕೆ ತಕ್ಕ ಹಾಗೆ ರಚಿಸಲ್ಪಟ್ಟಿತು. ಅದರ ಗೋಡೆಗಳು ನೆಟ್ಟಗೆ ನಿಲ್ಲುವ ಶಿಟ್ಟೀಮ್ ಹಲಿಗೆಗಳು; ಅದರ ಮಾಳಿಗೆ ತೊಗಲಿನಿಂದಲೂ ಕೂದಲಿನ ಕಂಬಳಿಯಿಂದಲೂ ಮಾಡಲ್ಪಟ್ಟಿತು. ದಂಡು ಹೊರಡುವಾಗ ಲೇವ್ಯರು ಎಲ್ಲಾ ಬಿಚ್ಚಿ ಹೊತ್ತು ಕೊಂಡು ಹೋಗುತ್ತಿದ್ದರು. ಸಾಕ್ಷಿಗುಡಾರದ ಒಳಗಿನ ಸ್ಥಳವು ಖೆರೂಬರ ರೂಪಗಳನ್ನು ತೋರಿಸುವ ಅಲಂಕಾರವುಳ್ಳ ಬಿಸುಸ್ ತೆರೆಯಿಂದ ಎರಡು ಕೋಣೆಯಾಗಿ ವಿಭಾಗಿಸಲ್ಪಟ್ಟಿತ್ತು. ಈ ಕೋಣೆಗಳಲ್ಲಿ ಒಳಗಿನದು ಅತಿ ಪರಿಶುದ್ಧ ಸ್ಥಳವಾಗಿತ್ತು; ಅದು ಹತ್ತು ಮೊಳದ ಅಳತೆಯಾದ ಷಟ್ಕೋಣಾಕಾರವಾಗಿತ್ತು. ಇದರಲ್ಲಿ ಒಡಂಬಡಿಕೆಯ ಪೆಟ್ಟಿಗೆಯಿತ್ತು. ಈ ಪೆಟ್ಟಿಗೆಯಲ್ಲಿ



ನೇಮಶಾಸನಗಳೂ ಅದರ ಹತ್ತರ ಮನ್ನಾ ತುಂಬಿದ ಪಾತ್ರೆಯೂ ಆರೋನನ ಹೂವರಳಿದ ಬಾದಾಮಿನ ಗೆಲ್ಲೂ ಇತ್ತು. ಅದರ ಮುಚ್ಚಳ ಚೊಕ್ಕ ಬಂಗಾರದ್ದು; ಅದರ ಎರಡು ಪಾರ್ಶ್ವಗಳಲ್ಲಿ ಅಖಂಡವಾದ ಒಂದೇ ಬಂಗಾರದ ತುಂಡಿನಿಂದ ರಚಿಸಲ್ಪಟ್ಟ ಕೆರೂಬಿಗಳು ನಿಂತಿದ್ದವು; ಇವುಗಳ ಮುಖಗಳು ಒಂದರ ಕಡೆಗೆ ಮತ್ತೊಂದು ಕೃಪಾಸನವೆಂಬ ಮುಚ್ಚಳದ ಕಡೆಗೆ ಬಾಗಿದ್ದವು. ಅವುಗಳ ರೆಕ್ಕೆಗಳು ಅದರ ಮೇಲೆ ಚಾಚಿ ಇದ್ದವು. ಕೃಪಾಸನಕ್ಕೆ ಇಬ್ರಿಯ ಭಾಷೆಯಲ್ಲಿ ಕಪೋರೆತ್ (ವಿಮೋಚನೆ ಮುಚ್ಚಳ) ಎಂಬ ಹೆಸರು ಉಂಟು. ಹೊರಗಿನ ಕೋಣೆ ಇಪ್ಪತ್ತು ಮೊಳ ಉದ್ದವಾಗಿ ಹತ್ತು ಮೊಳ ಎತ್ತರವಾಗಿಯೂ (೧೦) ಅಗಲವಾಗಿಯೂ ಇತ್ತು. ಇದರ ಪ್ರವೇಶವು ಮೂಡಣ ಕಡೆಯಲ್ಲಿ ಇತ್ತು. ಇದಕ್ಕೂ ಬಹಳ ಅಲಂಕೃತವಾದ ತೆರೆಯು ಈ ಕೋಣೆಯ ಹೆಸರು ಪರಿಶುದ್ಧ ಸ್ಥಳವು. ಇದರ ಮಧ್ಯದಲ್ಲಿ ಧೂಪಪೀಠವು. ಉತ್ತರ ಪಾರ್ಶ್ವದಲ್ಲಿಯೂ ದಕ್ಷಿಣ ಪಾರ್ಶ್ವದಲ್ಲಿಯೂ ಏಳು ಕೈಯುಳ್ಳ ದೀಪಸ್ತಂಭವೂ ಸಮುಖದ ರೊಟ್ಟಿಗಳ ಮೇಜೂ ಇದ್ದವು. ದೀಪಸ್ತಂಭವು ಅಖಂಡವಾದ ಬಂಗಾರದ್ದು. ಮೇಜು ಬಂಗಾರದ ತಗಡು ಹಚ್ಚಿದ ಶಿಟ್ಟೀಮ್ ಮರದ್ದು; ಇದರಲ್ಲಿ ಸಬತ್ ಸಬತ್ತಿಗೆ ಹನ್ನೆರಡು ಹೊಸ ರೊಟ್ಟಿಗಳು ಇಡಲ್ಪಟ್ಟವು.

ದೀಪಸ್ತಂಭ ಒಡಂಬಡಿಕೆ ಪೆಟ್ಟಿಗೆಯ ಮುಚ್ಚಳ ಇವುಗಳ ಹೊರ್ತು ಸಾಮಗ್ರಿ ಎಲ್ಲವೂ ಹಲಿಗೆ ಎಲ್ಲವೂ ಬಂಗಾರದ ತಗಡಿನಿಂದ ಮುಚ್ಚಿ ಇದ್ದವು. ಸಾಕ್ಷಿಯ ಗುಡಾರದ ಒಳಭಾಗದ ಗೋಡೆ ಎಲ್ಲವು ಬಹಳ ಬೆಲೆಯುಳ್ಳ ವರ್ಣದ ಬಿಸೂಸ್ ಹಚ್ಚಡದಿಂದ ಸೂಸಿಯಂತೆ ಮುಚ್ಚಿ ಇತ್ತು. ಹೊರಭಾಗವು ಬೇರೆ ಮೂರು (ತೊಗಲಿನ ಮತ್ತು ಕೂದಲಿನ) ಕಂಬಳಿ ಮುಚ್ಚಳದಿಂದ ಘಾಳಿಯೂ ಮಳೆಯೂ ತಾಗದ ಹಾಗೆ ಮರೆ ಮಾಡಲ್ಪಟ್ಟಿತು. ಗುಡಾರದ ಸುತ್ತು ನೂರು ಮೊಳ ಉದ್ದವಾಗಿಯೂ ಐವತ್ತು ಮೊಳ ಅಗಲವಾಗಿಯೂ ಇರುವ ಪ್ರಾಕಾರವಿತ್ತು. ಮೂಡಣ ಕಡೆಯಲ್ಲಿರುವ ಪ್ರವೇಶವು ಇಪ್ಪತ್ತು ಮೊಳ ಅಗಲವಾಗಿತ್ತು: ಇದಕ್ಕೂ ಪ್ರಾಕಾರದ ಮೇರೆಯಾದ ಶಿಟ್ಟೀಮ್ ಮರದ ಸ್ತಂಭಗಳಿಗೆ ಬಿಸೂಸ್ ತೆರೆಯು ಕಟ್ಟಲ್ಪಟ್ಟಿತು. ಪ್ರಾಕಾರದಲ್ಲಿ ತಾಂಬ್ರದಿಂದ ಹೊದಗಿಸಿ ಮಣ್ಣಿನಿಂದ ತುಂಬಿದ ಶಿಟ್ಟೀಮ್ ಹಲಿಗೆಗಳ ಹೋಮಪೀಠವೂ ತಾಂಬ್ರದ ಹಂಡೆಯೂ ಇದ್ದವು.

ಪರಿಶಿಷ್ಟ. ಸಾಕ್ಷಿಗುಡಾರವು ಇಸ್ರಯೇಲನವರಿಗೆ ದೇವಾರಾಧನೆ ಬಲಿಯರ್ಪ
ಣೆಗಳ ಸ್ಥಳವಾಗಿತ್ತು. ಒಡಂಬಡಿಕೆಯ ಗುಡಾರವೂ ಕೂಟದ ಗುಡಾರವೂ ನಿವಾಸ
ವೂ ಎಂಬ ಹೆಸರುಗಳು ಸಹ ಅದಕ್ಕೆ ಇದ್ದವು. ಏನಂದರೆ ಯೆಹೋವನು ಅಲ್ಲಿ ಇ
ಸ್ರಯೇಲನ ಸಂಗಡ ಕೂಡಿ, ಅಲ್ಲಿ ಇಸ್ರಯೇಲನ ಮಧ್ಯದಲ್ಲಿ ವಾಸಿಸಿ, ಅಲ್ಲಿ ತನ್ನ ಪ
ರಿಶುದ್ಧತ್ವಕ್ಕೂ ಕೃಪೆಗೂ ಸಾಕ್ಷಿ ಕೊಡಲಿಕ್ಕೆ ಮನಸ್ಸಾಗಿದ್ದನು. ಹೀಗಿರುವದರಿಂದ
ಅದು ಇಸ್ರಯೇಲನಲ್ಲಿರುವ ದೇವರ ರಾಜ್ಯಕ್ಕೆ ಉಪಮೆಯೂ ಕ್ರೈಸ್ತಸಭೆಗೆ ಮುಂಗು
ರ್ತೂ ಆಗಿತ್ತು. ಅತಿ ಪರಿಶುದ್ಧಸ್ಥಳದಲ್ಲಿ (ಅಂಧಕಾರದಲ್ಲಿ) ಯೆಹೋವನು ತಾನು
ವಾಸ ಮಾಡಿದನು. ಖೆರೂಬರ ರೆಕ್ಕೆಗಳ ಮಧ್ಯದಲ್ಲಿ ಯೆಹೋವನ ಸಿಂಹಾಸನವು;
ಅಲ್ಲಿ ಯೆಹೋವನ ಮಹಿಮೆಯು ಮೇಘರೂಪವಾಗಿ ಇಳಿಯಿತು. (ಷೆಖಿನಾ ೩ ಮೋಶೆ.
೧೬—೨.) ಒಂದು ಮನೆಯ ಸಾಮಗ್ರಿ, ಅದರಲ್ಲಿ ವಾಸಿಸುವವನ ಉದ್ಯೋಗವ
ನ್ನು ಸೂಚಿಸುತ್ತದೆ. ಯೆಹೋವನು ಪಾಪಾತ್ಮರಾದ ಇಸ್ರಯೇಲನವರ ಜನಾಂಗದ
ಸಂಗಡ ನಡಿಸಿದ ವೃತ್ತಿ ಯಾವದಂದರೆ— ಅವರ ಪಾಪಗಳನ್ನು ಮುಚ್ಚಿ, ವಿನೋಚನೆ
ಮಾಡುವಂಥಾದ್ದು. ಇದನ್ನು ಕೃಪಾಸನವೂ ಮುಚ್ಚಳವಾಗಿರುವ ಒಡಂಬಡಿಕೆಯ ಪೆ
ಟ್ಟಿಗೆಯೂ ಸಾಮ್ಯವಾಗಿ ತೋರಿಸುವದು. ಹ್ಯಾಗಂದರೆ— ಒಡಂಬಡಿಕೆಯ ಪೆಟ್ಟಿಗೆಯ
ಲ್ಲಿರುವ ನೇಮಶಾಸನವು ಕೃಪಾಸನದಿಂದ ಮುಚ್ಚಲ್ಪಟ್ಟ ಅರ್ಥವೇನಂದರೆ: ಪಾಪಿಯ
ಮೇಲೆ ಅಪರಾಧ ಹೊರಿಸಿ, ಅವನಿಗೆ ನ್ಯಾಯ ತೀರಿಸುವ ನೇಮಕ್ಕೆ ಬಲಿಯ ರಕ್ತದಿಂ
ದ ಆಗುವ ವಿಮೋಚನೆಯಲ್ಲಿ ಕಾಣಿಸುವ ದೇವರ ಕೃಪೆಯಿಂದ ಮುಚ್ಚಳವೂ ಶಾಂ
ತಿಯೂ ಅಂದರೆ ವಿಮೋಚನೆಯು ಆಗುತ್ತದೆ. ಕೃಪಾಸನದಲ್ಲಿರುವ ಖೆರೂಬರು
ಬೊಗ್ಗಿಕೊಂಡು ಪಾಪಪರಿಹಾರವೆಂಬ ಅತಿ ಪರಿಶುದ್ಧ ಮರ್ಮವನ್ನು ಗ್ರಹಿಸಿಕೊಳ್ಳ ಬೇ
ಕೆಂದು ದೃಷ್ಟಿಸುವರು. ೧ಪೇತ್ರ. ೧—೧೨. ಯಜೆಕಿಯೇಲನ ಪುಸ್ತಕದಲ್ಲಿ ಖೆರೂ
ಬರ ವರ್ಣನೆ ಬರೆದದೆ; ಅವರು ನರ, ಗರುಡ, ವೃಷಭ, ಸಿಂಹರೂಪಿಗಳಾಗಿ ಸರ್ವ
ನಿರ್ಮಾಣದ ಮೂಲಮೂರ್ತಿಗಳಾಗಿ ಕಾಣಿಸುತ್ತಾರೆ.

ಪರಿಶುದ್ಧ ಸ್ಥಳವು ಯಾಜಕರಾಜತ್ವವುಳ್ಳ ಆದು ಕೊಳ್ಳಲ್ಪಟ್ಟ ಜನಾಂಗದ ನಿವಾ
ಸವು. ಜನಾಂಗವು ಪೂರ್ವದಲ್ಲಿ ತನ್ನ ಯಾಜಕೋದ್ಯೋಗಕ್ಕೆ ಬೇಕಾದ ಯೋಗ್ಯತೆ
ಯನ್ನು ಪಡಕೊಳ್ಳಲಿಲ್ಲವಾದದರಿಂದ ಮನುಷ್ಯರಾದ ಮಧ್ಯಸ್ಥಗಾರರು ೨ಮೋಶೆ.
೨೦—೧೮ ಅವರ ಸ್ಥಳದಲ್ಲಿ ಯಾಜಕವೃತ್ತಿಯನ್ನು ನಡಿಸಿ, ಹಳೇ ಒಡಂಬಡಿಕೆಯ ಕಾ
ಲದಲ್ಲಿ ಸರ್ವ ಜನಾಂಗದ ಮುಖ್ಯಸ್ಥರಾಗಿದ್ದು, ಶುದ್ಧಸ್ಥಳದಲ್ಲಿ ಕಾಲಿಟ್ಟು, ಯೆಹೋವ
ನ ಮುಂದೆ ಬಿರುದುಳ್ಳವರಾಗಿದ್ದರು. ಶುದ್ಧಸ್ಥಳದಲ್ಲಿರುವ ಸಾಮಗ್ರಿಗಳು ಒಡಂಬಡಿ
ಕೆಗೆ ಅನುಕೂಲವಾದ ಜನಾಂಗದ ಕೆಲಸವನ್ನು ಸೂಚಿಸುವವು. ಹನ್ನೆರಡು ಸಮುಖದ

ಕೊಟ್ಟಿಗಳು ಹನ್ನೆರಡು ಕುಲದವರಾದ ಇಸ್ರಯೇಲನವರು ದೇವರ ರಾಜ್ಯವೆಂಬ ಹೊಲದಲ್ಲಿ ನಡಿಸುವ ಆತ್ಮಿಕವಾದ ವೃತ್ತಿಗೆ ಸಂಬಂಧ ಸತ್ಕ್ರಿಯೆಗಳೆಂಬ ಪುಣ್ಯ ಫಲಗಳಿಗೆ ಗುರ್ತುಗಳಾಗಿದ್ದವು.

ದೀಪಸ್ತಂಭವು ಭಾಸ್ಕರವಾದ ಜನಾಂಗಕ್ಕೆ ಉಪಮೆಯಾಗಿತ್ತು.

ಧೂಪಪೀಠವು ಇಸ್ರಯೇಲನವರು ದೇವರಿಗೆ ನಿತ್ಯವಾಗಿ ಅರ್ಪಿಸುವ ಪ್ರಾರ್ಥನೆಯನ್ನು ಸೂಚಿಸುತ್ತಾ ಇತ್ತು. ಪ್ರಕಟಣೆ. ೮—೪. ಪ್ರಾಕಾರವು ಪಾಪದಲ್ಲಿ ಬಿದ್ದು, ಬಲಿಗಳಿಂದ ವಿಮೋಚನೆ ಹೊಂದ ತಕ್ಕ ಜನಾಂಗದ ಸ್ಥಳವಾಗಿತ್ತು. ಆದದರಿಂದ ಈ ಸ್ಥಳದಲ್ಲಿ ವಿಮೋಚನೆಬಲಿಗಳು ಅರ್ಪಿಸಲ್ಪಡುವ ಹೋಮಪೀಠವು ಇತ್ತು.



## § 37. ಯಾಜಕರೂ ಲೇವಿಯರೂ

### (ಅವರ ಉದ್ಯೋಗ ವಸ್ತ್ರಾದಿಗಳು)

೧) ತನ್ನ ಸ್ವಾಸ್ಥ್ಯಕ್ಕಾಗಿಯೂ ಪರಿಶುದ್ಧಸ್ಥಾನದ ಸೇವೆಗಾಗಿಯೂ ಕರ್ತನು ಲೇವಿಯರ ಇಡೀ ಕುಲವನ್ನು ಆದು ಕೊಂಡನು. ಇವರು ಎಲ್ಲಾ ಕುಲಗಳಲ್ಲಿ ಹುಟ್ಟಿದ ಚೊಚ್ಚಲ ಮಕ್ಕಳಿಗೆ ಬದಲಾಗಿ ದೇವರ ಸೇವೆಯನ್ನು ನಡಿಸುತ್ತಾ ಇದ್ದರು. ಆದದರಿಂದ ೪ ಮೋಶೆ. ೧೮ ಸಂಧಿ ೧೬ನೆಯ ಪ್ರಕಾರ ಚೊಚ್ಚಲ ಮಕ್ಕಳೆಲ್ಲಾ ಪರಿಶುದ್ಧ ಸ್ಥಾನದಲ್ಲಿ ಕರ್ತನಿಗೆ ಕಾಣಿಸಲ್ಪಡ ಬೇಕಾಗಿದ್ದರು. ಇದಲ್ಲದೆ ತಂದೆ ತಾಯಿಗಳು ಅವರಿಗಾಗಿ ವಿಮೋಚನೆ ಹಣ ಸಲ್ಲಿಸ ಬೇಕಾಯಿತು. ಇಡೀ ಕುಲದ ಉದ್ಯೋಗ ಯಾವದಂದರೆ—ನೇಮವನ್ನೂ ಯೆಹೋವನ ಪ್ರಕಟಣೆಗಳ ಮಾರ್ಗವನ್ನೂ ಕಾಪಾಡಿ ಜನಾಂಗವನ್ನು ಬೋಧಿಸಿ, ಅವುಗಳ ಪ್ರಕಾರ ಅವರಿಗೆ ನ್ಯಾಯ ತೀರಿಸುವದು. —ಸಮಸ್ತ ಲೇವಿಯರ ಕುಲದಲ್ಲಿಂದ ಆರೋನನ ಗೋತ್ರವು ಯಾಜಕತ್ವದ ವೃತ್ತಿಗಾಗಿ ಪ್ರತ್ಯೇಕಿಸಲ್ಪಟ್ಟಿತು. ಇವರು ಮಾತ್ರ ಯಾಜಕೋದ್ಯೋಗದ ಕೆಲಸಗಳನ್ನು ಮಾಡುವದಕ್ಕೆ ಸ್ವತಂತ್ರಿಕರಾಗಿದ್ದರು. ಉಳಿದ ಲೇವ್ಯರೆಲ್ಲರು (ಮೋಶೇ ಗೋತ್ರದವರು ಸಹ) ಯಾಜಕರ ಹಸ್ತಕರಾಗಿದ್ದರು. ಆರೋನನ ಗೋತ್ರದವರಲ್ಲಿ ಪ್ರಧಾನಯಾಜಕನು ಶ್ರೇಷ್ಟನಾಗಿದ್ದನು. ಈ ಉದ್ಯೋಗವು ಮಕ್ಕಳಿಗೆ ಬಾಧ್ಯತೆಯಾಗಿ ಸಿಕ್ಕುತ್ತಾ ಇತ್ತು.

೨) ಯಾಜಕರ ವಿಶೇಷವಾದ ಉದ್ಯೋಗ ಯಾವದಂದರೆ—ಯೆಹೋವನಿಗೂ ಜನಕ್ಕೂ ಮಧ್ಯಸ್ಥಗಾರರಾಗಿರುವದು ಜನಾಂಗಕ್ಕೆ ಪಾಪವಿಮೋಚನೆ ಮಾಡು

ವದು. ಕ್ರಿಸ್ತನು ಕಾಲದ ಪೂರ್ಣತೆಯಲ್ಲಿ ಕೃತ್ಯದಿಂದಲೂ ಸತ್ಯದಿಂದಲೂ ಮಾಡ ಲಿಕ್ಕೆ ನೇಮಕವಾದ ಕ್ರಿಯೆಗಳ ನೆರಳಾದ ಮುಂಗುರ್ತುಗಳನ್ನು ಆಚರಿಸುವದು. ಕರ್ತನು ತಾನು ೪ ಮೋಶೆ. ೧೬, ೫ನೇಯಲ್ಲಿ ತನ್ನವನು ಯಾರೆಂದೂ ತನ್ನ ಸಮೀಪಕ್ಕೆ ಬರಲೀಸುವ ಹಾಗೆ ಪರಿಶುದ್ಧನು ಯಾರೆಂದೂ ಕರ್ತನು ಪ್ರಕಟ ಮಾಡುವನು, ತಾನು ಆದು ಕೊಂಡವನನ್ನೇ ಸಮೀಪಕ್ಕೆ ಬರಲೀಸುವನೆಂದು ಹೇಳಿ, ಯಾಜಕರಿಗೆ ಇರುವ ವಿಶೇಷವಾದ ಉದ್ಯೋಗವನ್ನೂ ನ್ಯಾಯವನ್ನೂ ತಿಳಿಸಿದನು. ಯಾಜಕರ ಮುಖ್ಯ ಕೆಲಸಗಳು ಯಾವವಂದರೆ — ಪಾಪವಿಮೋಚನೆಗೆ ಗುರ್ತಾದ ಬಲಿಯರ್ಪಣೆ ಒಂದು. ವಿಜ್ಞಾಪನೆಯ ಗುರ್ತಾದ ಧೂಪಾರ್ಪಣೆ ಎರಡನೇದು, ಈ ಎರಡರಿಂದ ಆಗುವ ಫಲವಾದ ಆಶೀರ್ವಾದವು ಮೂರನೇ.

ಪರಿಶಿಷ್ಟ. ೧. ನಾಲ್ಕನೇ ಮೋಶೆ ೧೬ನೇ ಸಂಧಿ ೫ನೇಯಲ್ಲಿ ಬರದದ್ದು ಯಾಜಕರ ವಿಷಯವಾಗಿ ಹೇಳಿಯದೆ. (ಅವರು ಕರ್ತನವರೂ ಪರಿಶುದ್ಧರೂ ಆದು ಕೊಳ್ಳಲ್ಪಟ್ಟವರೂ ಯೆಹೋವನ ಸಮೀಪಕ್ಕೆ ಬರುವವರೂ.) ಆದರೆ ೨ ಮೋಶೆ. ೧೯, ೫. ೬ನೇ ವಚನಗಳಲ್ಲಿ ಅದೇ ಮಾತು ಇಸ್ರಯೇಲನವರ ಜನಾಂಗದ ವಿಷಯವಾಗಿ ಬರೆದದೆ. ಇದರಿಂದ ಲೇವಿಯರು ಮಾತ್ರವಲ್ಲ, ಇಸ್ರಯೇಲನವರೆಲ್ಲರೂ ಯಾಜಕರಾಗಿದ್ದರೆಂದು ತೋರುತ್ತದೆ. ಹ್ಯಾಗಂದರೆ—ಇಸ್ರಯೇಲನವರು ಬೇರೆ ಜನಾಂಗಗಳಿಗೆ ಪ್ರತ್ಯೇಕವಾದ ಪರಿಶುದ್ಧ ಜನಾಂಗವಾಗಿದ್ದು ಲೋಕಕ್ಕೆ ಯಾಜಕರಾಗಿದ್ದ ಪ್ರಕಾರ, ಲೇವಿಯರು ಪರಿಶುದ್ಧ ಜನಾಂಗದಿಂದ ದೇವರ ಆರಾಧನೆಗಾಗಿ ಪತ್ರ್ಯೇಕಿಸಲ್ಪಟ್ಟು, ಯಾಜಕಜನಾಂಗಕ್ಕೆ ಯಾಜಕರಾಗಿದ್ದರು. ಯಾಜಕರು ನರಚಿತ್ತದಿಂದಲ್ಲ, ದೇವರ ನಿರ್ಣಯದಿಂದಲೂ ಆಯುವಿಕೆಯಿಂದಲೂ, ತಮ್ಮ ಉದ್ಯೋಗವನ್ನು ಹೊಂದಿದರು. ಮತ್ತು ಯಾಜಕತ್ವವು ಯಾಜಕರ ಮಕ್ಕಳಿಗೆ ಬಾಧ್ಯತೆಯಾಗಿದ್ದದರಿಂದ ಅಂತ್ಯದ ವರೆಗೂ ಮನುಷ್ಯರಿಂದ ಆದು ಕೊಳ್ಳಲ್ಪಟ್ಟವರು ಇಲ್ಲವೇ ಸ್ವಂತ ಇಷ್ಟೆಯ ಪ್ರಕಾರ ಉದ್ಯೋಗವನ್ನು ಪಡ ಕೊಂಡವರು ಯಾಜಕತ್ವವನ್ನು ನಡಿಸುವದು ಅಸಾಧ್ಯವಾಗಿತ್ತು.

ಪರಿಶಿಷ್ಟ. ೨. ಯಾಜಕರು ಇಸ್ರಯೇಲನವರ ಸಭೆಗೆ ಕೊಡ ಬೇಕಾದ ಆಶೀರ್ವಾದವು ೪ ಮೋಶೆ. ೬, ೨೩ನೇಯಲ್ಲಿ ಬರೆದದೆ. ಕರ್ತನು ಮೋಶೆಗೆ ಹೇಳಿದ್ದೇನಂದರೆ—ಆರೋನನಿಗೂ ಅವನ ಮಕ್ಕಳಿಗೂ ಹೇಳು: ನೀವು ಇಸ್ರಯೇಲನ ಮಕ್ಕಳನ್ನು ಈ ರೀತಿಯಿಂದ ಆಶೀರ್ವದಿಸ ಬೇಕು, ಏನಂದರೆ—ಕರ್ತನು ನಿನ್ನನ್ನು ಆಶೀರ್ವದಿಸಿ ಕಾಯಲಿ. ಕರ್ತನು ತನ್ನ ಮುಖವನ್ನು ನಿನ್ನ ಮೇಲೆ ಪ್ರಕಾಶಿಸ ಮಾಡಿ, ನಿ

ನಗೆ ಕೃಪೆಯಾಗಿರಲಿ. ಕರ್ತನು ತನ್ನ ಮುಖವನ್ನು ನಿನ್ನ ಮೇಲೆ ಎತ್ತಿ ನಿನಗೆ ಸಮಾಧಾನ ಕೊಡಲಿ. ಅವರು ನನ್ನ ಹೆಸರನ್ನು ಇಸ್ರಯೇಲನ ಮಕ್ಕಳ ಮೇಲೆ ಇಡಲಿ. ಮತ್ತು ನಾನು ಅವರನ್ನು ಆಶೀರ್ವದಿಸುವೆನು. ಈ ಆಶೀರ್ವಾದಪ್ರಮಾಣದಲ್ಲಿ ತ್ರಿಯೇಕತ್ವದ ಮರ್ಮವೂ ತ್ರಿಯೇಕನಾದ ದೇವರಿಂದ ಆಗುವ ರಕ್ಷಣೆಯ ಸೂಚನೆಯೂ ಜಾಡೆಯಾಗಿ ತೋರುತ್ತವೆ. ದೇವರು ಆದು ಕೊಂಡ ಜನಾಂಗವು ಈ ಆಶೀರ್ವಾದದ ಮಾತುಗಳನ್ನು ನಿತ್ಯವಾಗಿ ಕೇಳುತ್ತಾ ಬರುವದರಿಂದ ಒಬ್ಬನಾಗಿರುವ ದೇವರು ತ್ರಿಯೇಕಭಾವವುಳ್ಳವನಾಗಿದ್ದು ರಕ್ಷಣೆಯ ಕಾರ್ಯವನ್ನು ಸಿದ್ಧ ಮಾಡಿ ಸ್ಥಾಪಿಸಿ ಪೂರೈಸುವದರಲ್ಲಿ ಮೂರು ವಿಧದಿಂದ ತನ್ನನ್ನು ಪ್ರಕಟ ಮಾಡುವನೆಂಬದನ್ನು ಗ್ರಹಿಸಿ ಕೊಳ್ಳುವದಕ್ಕೆ ಆಯತ್ತವಾಗಲಿಕ್ಕಿತ್ತು. ಮೂರು ಸಾರಿ ಯೆಹೋವನ ನಾಮವು ಸಭೆಯ ಮೇಲೆ ಉಚ್ಚರಿಸಲಟ್ಟಿತು. ಎರಡು ಸಾರಿ ಯೆಹೋವನ ಮುಖವೆಂಬದು ಆಶೀರ್ವಾದದಲ್ಲಿ ಸೇರುತ್ತದೆ. (ಮರೆಯಾದ ಅದೃಶ್ಯವಾದ ಅಂತರ್ಯವು ಮುಖದಲ್ಲಿ ದೃಶ್ಯವಾಗಿ ಪ್ರಕಟವಾಗುವದು.) ಮೊದಲನೇ ಮಾತಿನ ಪ್ರಕಾರ ಸರ್ವ ಆಶೀರ್ವಾದ ರಕ್ಷಣ್ಯ ಜೀವಿಗಳಿಗೆ ಅನಾದಿಯಾಗಿರುವ ಅದೃಶ್ಯವಾದ ಬುಗ್ಗೆಯಾದ ಯೆಹೋವನು ಆಶೀರ್ವಾದವನ್ನೂ ಆಶ್ರಯವನ್ನೂ ಕೊಡುತ್ತಾನೆ. ಎರಡನೇ ಮಾತಿನ ಪ್ರಕಾರ ಯೆಹೋವನ ಮುಖದಿಂದ ಬೆಳಕೂ ಕೃಪೆಯೂ ಬರುತ್ತದೆ. ಯೆಹೋವನ ಮುಖ ಅಂದರೆ ಎಲ್ಲಾ ಮನುಷ್ಯರಿಗೆ ಪ್ರಕಾಶ ಕೊಡುವ ನಿಜ ಬೆಳಕಾದಂಥಾ ದೇವರು, ಯೋಹಾನ್ ೧. ೯. ಅವನ ಪೂರ್ಣತೆಯಿಂದ ನಾವೆಲ್ಲರು ಕೃಪೆಯ ಮೇಲೆ ಕೃಪೆಯನ್ನು ಹೊಂದಿದ್ದೇವೆ. ಯೋಹಾನ್, ೧. ೧೬. ಮೂರನೇ ಮಾತಿನ ಪ್ರಕಾರ ಯೆಹೋವನ ಮುಖವು ಸಮಾಧಾನವನ್ನು ಕೊಡುತ್ತದೆ. ಏನಂದರೆ ರಕ್ಷಣೆಯ ಅನುಭವದಲ್ಲಿ ವಿಶ್ವಾಸಿಸುವವರನ್ನು ಸೇರಿಸುವ ದೇವರ ಆತ್ಮವು ಭಕ್ತರ ಹೃದಯಗಳಲ್ಲಿ ನಿಜ ಸಮಾಧಾನವನ್ನು ಸ್ಥಾಪಿಸುತ್ತಾನೆ.

೩) ಯಾಜಕರಿಗೆ ವಿಶೇಷವಾದ ಉದ್ಯೋಗವಸ್ತ್ರವಿತ್ತು; ೨ ಮೋಶೆ. ೨೮. ಅದು ಲೇವಿಯರಿಗೆ ಇರಲಿಲ್ಲ. ಯಾಜಕವಸ್ತ್ರವು ಬಹಳ ಸಾಧಾರಣವಾಗಿತ್ತು. ಯಾಜಕರು ಬಿಳೇ ಬಿಸುಸಿಂದ ಮಾಡಿದಂಥ ಕಾಲಿನಿಂದ ಹಿಮ್ಮಡಿಯ ಮಟ್ಟಿಗೂ ಶರೀರವನ್ನೆಲ್ಲಾ ಮುಚ್ಚುವಂಥ ಅಂಗಿಯನ್ನು ಹಾಕ್ಕೊಳ್ಳ ಬೇಕಾಗಿದ್ದರು. ಅದರ ವರ್ಣ ನಿರ್ಮಲತ್ವಕ್ಕೂ ಪರಿಶುದ್ಧತ್ವಕ್ಕೂ ಗುರ್ತಾಗಿತ್ತು. ಪ್ರಧಾನಯಾಜಕನು ನೀಲವರ್ಣವುಳ್ಳ ಮೇಲಂಗಿ ಸಹಾ ಹಾಕಿಕೊಳ್ಳುತ್ತಿದ್ದನು. ಅದರ ಸೆರಗಿನಲ್ಲಿ ಬಂಗಾರದ ಮಣಿಗಳೂ ಕಾಯಿಗಳೂ ಇದ್ದವು (ಕಾಯಿವಾಕ್ಯಕ್ಕೆ ಮಣಿ ಸಾರುವಿಕೆಗೆ ಗುರ್ತು.) ಇದರ

ಮೇಲೆ ಎಫೋದ್ ಎಂಬ ಸಣ್ಣ ಅಂಗಿ ಇತ್ತು. ಅದು ಬಹಳ ಬೆಲೆಯೂ ವಿಚಿತ್ರವಾದ ವರ್ಣವೂ ಉಳ್ಳದ್ದಾಗಿತ್ತು. ಈ ಎಫೋದಿನಲ್ಲಿ ಪ್ರಧಾನಯಾಜಕನ ಎದೆಯನ್ನು ಮುಚ್ಚುವ ಒಂದು ಪದಕ ಇತ್ತು. ಅದರ ಹೆಸರು ಇಬ್ರಿಯ ಭಾಷೆಯಲ್ಲಿ ಖೋಷೆನ್ ಇದರಲ್ಲಿ ಚಿಂಗಾರದಲ್ಲಿ ಇಟ್ಟ ಹನ್ನೆರಡು ರತ್ನಗಳು ಇದ್ದವು. ಇವುಗಳಲ್ಲಿ ಹನ್ನೆರಡು ಕುಲಗಳ ಹೆಸರುಗಳು ಕೆತ್ತಲ್ಪಟ್ಟಿದ್ದವು. ಪ್ರಧಾನಯಾಜಕನು ಈ ಗುರಾಣಿಯನ್ನು ಎದೆಯಲ್ಲಿ ಹಾತ್ತುಕೊಳ್ಳುವ ಪ್ರಕಾರ ಹಳೇ ಒಡಂಬಡಿಕೆಯ ಶ್ರೇಷ್ಠ ಮಧ್ಯಸ್ಥಗಾರನಾಗಿದ್ದು, ಸಮಸ್ತ ಜನಾಂಗವನ್ನು ಯಾವಾಗಲೂ ಹೃದಯದಲ್ಲಿಟ್ಟು ಕೊಳ್ಳಬೇಕಾಗಿತ್ತು. ಖೋಷೆನ್ ಎಂಬದರಲ್ಲಿ ಊರಿಮ್ ಮತ್ತು ತುಮ್ಮಿಮ್ ಎಂಬದು ಸಹ ಇತ್ತು. (ಈ ಶಬ್ದಗಳ ಅಭಿಪ್ರಾಯವೇನಂದರೆ ಬೆಳಕುಗಳೂ ಮತ್ತು ಸಿದ್ಧಿಗಳೂ ಅಂದರೆ ಸಿದ್ಧಿಪ್ರಕಾಶ) ಇದರ ಮುಖಾಂತ್ರವಾಗಿ ಪ್ರಧಾನಯಾಜಕನು ದೇವರ ರಾಜ್ಯದ ವಿಶೇಷವಾದ ಕಾರ್ಯಗಳ ವಿಷಯವಾಗಿ ಅರಸನಾದ ಯೆಹೋವನಿಗಾಗಿ ಪ್ರಶ್ನೆ ಕೇಳಲು ಕರ್ತನು ಉತ್ತರ ಕೊಡುತ್ತಾ ಇದ್ದನು. ಇದು ಹ್ಯಾಗೆ ಆಯಿತೆಂದು ತಿಳಿಯುವದಿಲ್ಲ. ಇದಲ್ಲದೆ ಅವನು ಮುಂದಾಸಿನಲ್ಲಿ ಕರ್ತನಿಗೆ ಪರಿಶುದ್ಧ ಎಂದು ಕೆತ್ತಿ ಬರಿಯಲ್ಪಟ್ಟ ಸಂಣ ಚಿನ್ನದ ಪಟ್ಟಿ ಕೊಂಡವನಾಗಿರುವನು.



## § 38. ಯಾಜಕರೂ ಲೇವಿಯರೂ ಇವರ ವಾಸಸ್ಥಳಗಳೂ ಪ್ರತಿಷ್ಟೆಯೂ

೧) ಲೇವಿಯರ ಇಡೀ ಕುಲಕ್ಕೆ ವಾಗ್ದತ್ತದೇಶದಲ್ಲಿ ಬಾಧ್ಯತೆಯ ಭೂಮಿ ಸಿಕ್ಕಲಿಲ್ಲ; ಯೆಹೋವ ತಾನೇ ಅವರ ಬಾಧ್ಯತೆಯಾಗಿದ್ದನು. ೪ ಮೋಶೆ. ೧೮. ೨೦. ಯೆಹೋವನು ಸಮಸ್ತ ದೇಶಕ್ಕೆ ಧನಿಯಾಗಿದ್ದನು. ಆದದರಿಂದ ಗೃಹಸ್ಥರೆಲ್ಲರೂ ಪ್ರಥಮ ಫಲಗಳನ್ನೂ ದಶಾಂಶಗಳನ್ನೂ ದೇವಾಲಯಕ್ಕೆ ತಂದು ಯೆಹೋವನಿಗೆ ತೆರಿಗೆಯಾಗಿ ಕೊಡ ಬೇಕಾಗಿತ್ತು. ಇದರಿಂದ ಯೆಹೋವನು ಲೇವ್ಯರಿಗೂ ಯಾಜಕರಿಗೂ ಸಂಬಳ ಕೊಡುತ್ತಿದ್ದನು. ಇದಲ್ಲದೆ ಯಾಜಕರು ಬಲಿಗಳಲ್ಲಿ ತಮಗೆ ನೇಮಕವಾದ ಭಾಗಗಳನ್ನು ಅನುಭವಿಸುತ್ತಿದ್ದರು. ವಾಸಸ್ಥಳಗಳಾಗಿ ಸಮಸ್ತ ದೇಶದಲ್ಲಿ ಚದರಿ ಇರುವ ೪೮ ಪಟ್ಣಗಳು ಲೇವ್ಯ ಕುಲಕ್ಕೆ ನೇಮಕವಾಗಿದ್ದವು. ಇವುಗಳಲ್ಲಿ ೧೩ ಯಾಜಕರ ಪಟ್ಣಗಳು ಇವುಗಳಲ್ಲಿ ೬ ವಿಮೋಚನೇ ಕ್ಷೇತ್ರಗಳು ಆಗಿದ್ದವು. ಯಾವವಂದರೆ: ಯೊರ್ದನ್ ನದಿಯ ಈಚೆಯಲ್ಲಿ ಕಾದೇಷ್ ಶಿಕೆಮ್ ಹೆಬ್ರೊನ್ — ಯೊರ್ದನ್

ನದಿಯ ಆಚೆಯಲ್ಲಿ ಬೇಜೆರ್, ರಾಮೋಥ್ ಗಾಲೋನ್ ೪ ಮೋಶೆ. ೩೫. ೧—೮.
ಯಾೊಷುವಾ ೨೦. ೭, ೮.

ಪರಿಶಿಷ್ಟ. ಪೂರ್ವ ಕಾಲದಲ್ಲಿ ಒಬ್ಬ ಮನುಷ್ಯನು ಬೇರೊಬ್ಬನಿಂದ ಕೊಂದು ಹಾಕಲ್ಪಟ್ಟರೆ ಅವನ ನೆಂಟರಲ್ಲಿ ಒಬ್ಬನು ಕೊಲೆಗಾರನನ್ನು ಕೊಲ್ಲ ಬೇಕೆಂಬ ಪದ್ಧತಿ ಇತ್ತು. ರಕ್ತ ಚೆಲ್ಲಿದವನ ರಕ್ತ ಚೆಲ್ಲಲ್ಪಡ ಬೇಕೆಂಬದು ದೇವರ ನೇಮವಾಗಿತ್ತು. ಅರಸುಗಳು ಮೊದಲಾದ ಅಧಿಪತಿಗಳು ಇಲ್ಲದ ಕಾಲದಲ್ಲಿ ಬೇರೆ ಮನುಷ್ಯರು ನೇಮವನ್ನು ಕೈಕೊಂಡು ಪೂರೈಸುವದು ನ್ಯಾಯವಾಗಿತ್ತು. ಆದರೆ ದೇವರು ತನ್ನ ಜನಾಂಗದಲ್ಲಿ ನ್ಯಾಯಾಧಿಪತಿಗಳನ್ನು ಸ್ಥಾಪಿಸಿದ ಮೇಲೆ ಪೂರ್ವಕಾಲದ ನೇಮವು ನಿಲ್ಲಬೇಕಾಯಿತು. ಆದದರಿಂದ ವಿಮೋಚನಕ್ಷೇತ್ರಗಳಾದ ಆರು ಪಟ್ಣಗಳು ಅಪರಾಧವಿಲ್ಲದೆ ಮನುಷ್ಯನನ್ನು ಕೊಂದವರ ಸಹಾಯಕ್ಕಾಗಿ ವಾಗ್ದತ್ತದೇಶದಲ್ಲಿ ಸ್ಥಾಪಿಸಲ್ಪಟ್ಟವು. ಕೊಲ್ಲ ಬೇಕೆಂದು ಮನಸ್ಸಿಲ್ಲದವನಾಗಿ ಒಬ್ಬನು ಮನುಷ್ಯನ ಜೀವವನ್ನು ತೆಗದು ಕೊಂಡ ಮೇಲೆ ದೇಶದ ದಕ್ಷಿಣ, ಮಧ್ಯ, ಉತ್ತರ ಭಾಗಗಳಲ್ಲಿರುವ ಈ ಪಟ್ಣಗಳಲ್ಲಿ ಒಂದಕ್ಕೆ ಓಡಿ ಹೋಗಿ ಬಂದರೆ ರಕ್ತಾಪರಾಧಿ ಸಂಹಾರಕನಾದ ಗೋಯೆಲ್ ಎಂಬವನು ಅವನನ್ನು ಮುಟ್ಟ ಕೂಡದಿತ್ತು. ಗೋಯೆಲ್ ಎಂಬವನು ಬಂದರೆ ಕೊಂದು ಹಾಕಿದವನು ಬೇಕೆಂದು ನರಹತ್ಯ ಮಾಡಿದನೋ ಇಲ್ಲವೋ ಎಂಬದರ ವಿಷಯ ನ್ಯಾಯಾಧಿಪತಿಗಳು ವಿಚಾರಣೆ ಮಾಡುವರು. ಬೇಕೆಂದು ನರಹತ್ಯ ಮಾಡಿದನೆಂಬ ತೀರ್ಪು ಆದರೆ ಅಪರಾಧಿ ಗೋಯೆಲ್ ಎಂಬವನ ಕೈಗೆ ಒಪ್ಪಿಸಲ್ಪಡುವನು. ಬೇಕೆಂದು ನರಹತ್ಯ ಮಾಡದೆ ಇರುವವನು ಪ್ರಧಾನಯಾಜಕನ ಮರಣದ ವರೆಗೂ ವಿಮೋಚನಕ್ಷೇತ್ರದಲ್ಲಿ ಇರುವನು. ಪ್ರಧಾನಯಾಜಕನು ಸತ್ತ ಮೇಲೆ ಆಶ್ರಯಸ್ಥಳವನ್ನು ಬಿಟ್ಟು ತನ್ನ ಊರಿಗೆ ತಿರಿಗಿ ಹೋಗುವದು ನಿರಪರಾಧಿಗೆ ಏನೂ ಅಡ್ಡಿ ಇಲ್ಲ. ಈ ಪ್ರಕಾರವಾಗಿ ಕರ್ತನು ತಾನು ಆರಿಸಿ ತೆಗದು ಕೊಂಡ ಜನಾಂಗವನ್ನು ಸಾಧಿಸಿ ಬೇರೆ ಜನಾಂಗಗಳಿಗೆಲ್ಲ ವಾಡಿಕೆಯಾದ ಕ್ರೂರ ಅನ್ಯಾಯದ ಪದ್ಧತಿಯನ್ನು ಅವರಲ್ಲಿ ನಿಲ್ಲಿಸಿ ನ್ಯಾಯಮಾರ್ಗವನ್ನು ಸ್ಥಾಪಿಸಿದನು.

೨) ಲೇವಿಯರ ಪ್ರತಿಷ್ಠೆಯ ಕಟ್ಟಳೆ ೪ ಮೋಶೆ. ೮. ೫ನೇ ಮೊದಲಾದ ವಚನಗಳಲ್ಲಿ ಬರದದೆ. ಮೊದಲು ದೇವರಿಗೆ ಬಲಿಯನ್ನು ಅರ್ಪಿಸಿದ ಮೇಲೆ ಯಾಜಕರು ಅವರನ್ನು ಯೆಹೋವನಿಗೆ ಊಳಿಗದವರಾಗಿ ಪ್ರತಿಷ್ಠೆ ಮಾಡುತ್ತಾ ಇದ್ದರು. ಲೇವಿಯರು ಎಲ್ಲಾ ಕುಲಗಳ ಚೊಚ್ಚಲ ಮಕ್ಕಳಿಗೆ ಬದಲಾಗಿ ಕರ್ತನ ಸ್ವಾಸ್ಥ್ಯವಾಗ ಬೇಕಾದದರಿಂದ ಮೊದಲು ಎಲ್ಲಾ ಕುಲಗಳ ಹಿರಿಯರು ಲೇವಿಯವರು ತಮ್ಮ ಬದಲಿನ

ವರೆಂದು ಸೂಚಿಸುವದಕ್ಕಾಗಿ ಅವರ ತಲೆಯ ಮೇಲೆ ಕೈಗಳನ್ನಿಡುತ್ತಾ ಇದ್ದರು. ತರುವಾಯ ಯಾಜಕರು ಅವರನ್ನು ಒಡಂಬಡಿಕೆಯ ಗುಡಾರದ ಮುಂದೆ ಅತ್ತಲಿತ್ತಲು ನಡೆದಾಡಿಸಿ ಪ್ರತಿಷ್ಠೆ ಮಾಡುತ್ತಾ ಇದ್ದರು. ಯಾಜಕದ ಪ್ರತಿಷ್ಠೆ ಇದಕ್ಕಿಂತ ಘನವಾಗಿತ್ತು. ೨ ಮೋಶೆ. ೨೯. ೩ ಮೋಶೆ. ೮. ಯಾಜಕರು ಮೊದಲು ಸ್ನಾನ ಮಾಡಿ ಕೊಂಡು ಯಾಜಕವಸ್ತ್ರವನ್ನು ಹೊದ್ದು ಕೊಂಡು ಅಭಿಷೇಕವನ್ನು ಹೊಂದಿದರು. ತರುವಾಯ ಬಲಿಗಳು ಅರ್ಪಿಸಲ್ಪಟ್ಟವು. ಇವುಗಳ ರಕ್ತವು ಪೀಠದ ಮೇಲೆ ಚಿಮಿಕಿಸಲ್ಪಟ್ಟು ಪ್ರತಿಷ್ಠೆ ಆಗ ಬೇಕಾದ ಯಾಜಕರ ಕಿವಿ ಕಾಲು ಕೈಗಳಿಗೆ ಹಚ್ಚಲ್ಪಟ್ಟಿತು. ಅನಂತರ ಬಲಿಯೌತಣ ಆಚರಿಸಲ್ಪಟ್ಟಿತು.

ಪರಿಶಿಷ್ಟ. ಸಾಕ್ಷಿಗುಡಾರದ ಮುಂದೆ ಅತ್ತಲಿತ್ತಲು ನಡೆದಾಡುವದು ಲೇವಿಯರು ಸಾಕ್ಷಿಗುಡಾರದ ಊಳಿಗದವರೆಂಬುವದಕ್ಕೆ ಗುರ್ತಾಗಿತ್ತು. ಬಲಿಯ ರಕ್ತವು ಯಾಜಕರ ಕಿವಿ ಕೈಕಾಲುಗಳಿಗೆ ಹಚ್ಚಲ್ಪಡುವದು ಅವರು ಎಲ್ಲಾ ಕೆಲಸಗಳಲ್ಲಿ ಪರಿಶುದ್ಧರಾಗಿ ಕರ್ತನಿಗೆ ಸೇವೆ ಮಾಡುವದಕ್ಕೆ ನೇಮಿಸಲ್ಪಟ್ಟವರು ಎಂಬುವದಕ್ಕೆ ಗುರ್ತಾಗಿತ್ತು. ಅವರು ಯೆಹೋವನ ವಾಕ್ಯವನ್ನೂ ಆತನ ಪ್ರಕಟಣೆಗಳನ್ನೂ ಅಪ್ಪಣೆಗಳನ್ನೂ ಕೇಳುವದಕ್ಕೆ ನೇಮಿಸಲ್ಪಟ್ಟದರಿಂದ ಬಲಿಯ ರಕ್ತವನ್ನು ಅವರ ಕಿವಿಗೆ ಹಚ್ಚ ಬೇಕಾಗಿತ್ತು. ಕರ್ತನು ಕೊಟ್ಟದ್ದನ್ನು ಜನಾಂಗಕ್ಕೆ ಹಂಚಿ ಕೊಡುವದಕ್ಕೆ ಅವರು ನೇಮಿಸಲ್ಪಟ್ಟದರಿಂದ ಬಲಿಯ ರಕ್ತವನ್ನು ಕೈಗೆ ಹಚ್ಚ ಬೇಕಾಗಿತ್ತು. ಕರ್ತನ ಮುಂದೆ ಪರಿಶುದ್ಧರಾಗಿ ನಡೆದು ಕೊಳ್ಳಲಿಕ್ಕೆ ಅವರು ಆದು ಕೊಳ್ಳಲ್ಪಟ್ಟದರಿಂದ ಬಲಿಯ ರಕ್ತವನ್ನು ಅವರ ಕಾಲಿಗೆ ಹಚ್ಚ ಬೇಕಾಗಿತ್ತು.

೩) ೩ನೇ ಮೋಶೆ. ೯. ೧೦ನೇ ಸಂಧಿಗಳು. ಆರೋನನು ಅರ್ಪಿಸಿದ ಮೊದಲನೇ ಬಲಿಯನ್ನು ಆಕಾಶದಿಂದ ಬಿದ್ದ ಬೆಂಕಿ ದಹಿಸಿ ಬಿಟ್ಟಿತು. ಈ ಬೆಂಕಿಯು ಆರಿ ಹೋಗದೆ ಯಾವಾಗಲೂ ಬಲಿಪೀಠದಲ್ಲಿ ಇರ ಬೇಕಾಗಿತ್ತು. ೩ ಮೋಶೆ. ೬. ೧೨ನೇ ವಚನ. ಆದರೆ ಆರೋನನ ಹಿರೇ ಮಕ್ಕಳಾದ ನಾದಾಬ್, ಅಬೀಹು ಎಂಬವರು ಕರ್ತನ ಅಪ್ಪಣೆಗೆ ವಿರೋಧವಾಗಿ (೨ ಮೋಶೆ. ೩೦, ೯ನೇ ಶ್ಲೋಕ.) ಬೇರೆ ಧೂಪವನ್ನು ಕರ್ತನ ಮುಂದೆ ಆರತಿ ಮಾಡಿದರು. ಆದದರಿಂದ ಕರ್ತನ ಬಳಿಯಿಂದ ಹೊರಟು ಬಂದ ಬೆಂಕಿ ಅವರನ್ನು ದಹಿಸಿ ಬಿಟ್ಟಿತು.



## § 39. ಬಲಿಗಳು

೩ ಮೋಶೆ. ೧—೭ನೇ ಸಂಧಿಯ ವರೆಗೆ. ದೇಹದ ಜೀವವು ರಕ್ತದಲ್ಲಿ ಅದೆ. ನಿಮ್ಮ ಪ್ರಾಣಗಳಿಗೆ ಅದರಿಂದ ವಿಮೋಚನೆ ಆಗುವ ಹಾಗೆ ಅದನ್ನು ಬಲಿಪೀಠದ ಮೇಲೆ ಕಾಟ್ಟೆನು. ಯಾಕಂದರೆ ರಕ್ತವು ಪ್ರಾಣಕ್ಕೆ ವಿಮೋಚನೆಯಾಗಿದೆ ಎಂದು ೩ ಮೋಶೆ. ೧೭ ಸಂ. ೧೧ನೇಯಲ್ಲಿ ಬರೆದದೆ. ಇದರಿಂದ ಬಲಿಗಳ ತಾತ್ಪರ್ಯವನ್ನು ತಿಳುಕೊಳ್ಳ ಬಹುದು. ಬಲಿಯರ್ಪಣೆಯು ಪಾಪವಿಮೋಚನೆಗಾಗಿರುತ್ತದೆ. ಪಾಪವು ಇಚ್ಛೆಯಿಂದ ಹುಟ್ಟುತ್ತದೆ. ಇಚ್ಛೆಯ ಮೂಲ ಪ್ರಾಣದಲ್ಲಿರುವದು. ಯಾಕೋಬನ. ೧—೧೪, ೧೫ ಪ್ರಾಣವು ರಕ್ತದಲ್ಲಿರುತ್ತದೆ. ಹೀಗಾಗಿರುವದರಿಂದ ಪಾಪವು ರಕ್ತದಿಂದ ಉತ್ಪತ್ತಿಯಾಗುವದು ಎಂದು ಹೇಳ ಬಹುದು. ಆದದರಿಂದ ಪ್ರಾಣಕ್ಕೆ ಸ್ಥಾನವಾದ ರಕ್ತದ ಮೇಲೆ ಪಾಪದ ಶಿಕ್ಷೆ ಬರ ಬೇಕು. ಮರಣವು ಪಾಪದ ಸಂಬಳ; ರೋಮಾ. ೬—೨೩ ಪಾಪಿಗೆ ಬದಲಾಗಿ ಬಲಿಗೆ ನೇಮಕವಾದ ಪಶು ಸಾಯುವದು. ದೇವರು ಮನುಷ್ಯನ ಮರಣಕ್ಕೆ ಬದಲಾಗಿ ಪಶುವಿನ ಮರಣವು ಆಗ ಬಹುದೆಂದು ನೇಮಕ ಮಾಡಿದ್ದಾನೆ. ರಕ್ತದ ಚೆಲ್ಲುವಿಕೆಯ ಹೊರ್ತು ಪಾಪಪರಿಹಾರ ಆಗುವದಿಲ್ಲಾ. ಇಬ್ರಿ. ೯. ೨೨. ಆದರೆ ಎತ್ತು ಆಡುಗಳ ರಕ್ತದಿಂದ ಪಾಪವನ್ನು ತೆಗದು ಹಾಕುವದು ಅಸಾಧ್ಯವಾಗಿತ್ತು. ಇಬ್ರಿ. ೧೦, ೪. ಯಾಕಂದರೆ ಪಶುಬಲಿಯಲ್ಲಿ ಮೂರು ವಿಧದ ಕೊರತೆ ಅದೆ.

೧ ಅದು ಸ್ವಯಿಚ್ಛೆಯಿಂದ ಆಗುವಂಥಾದ್ದಲ್ಲ.

೨ ಅದರ ಜೀವವು ಸರಿಯಾದ ಬೆಲೆಯುಳ್ಳದ್ದಲ್ಲ.

೩ ಮನುಷ್ಯನ ಬದಲಾಗಿ ಸತ್ತರೂ ಮನುಷ್ಯನಿಗೂ ಪಶುವಿಗೂ ಜಾವದ ಸಂಬಂಧವಿಲ್ಲ. ಆದದರಿಂದ ಪಶುಬಲಿಗೆ ಪಾಪಪರಿಹಾರವನ್ನು ಉಂಟು ಮಾಡುವ ಬಲವಿಲ್ಲ. ಹಳೇ ಒಡಂಬಡಿಕೆಯ ಪಶುಬಲಿಗಳು ದೇವರೂ ಮನುಷ್ಯನೂ ಆಗಿದ್ದು ತನ್ನನ್ನು ನಮಗಾಗಿ ಮರಣಕ್ಕೆ ಒಪ್ಪಿಸಿದ ಯೇಸು ಕ್ರಿಸ್ತನ ಬಲಿಯ ನೆರಳೂ ಮುಂಗುರ್ತೂ ಆಗಿದ್ದವು. ಕ್ರಿಸ್ತನ ಶ್ರಮೆ ಮರಣಗಳಿಗೆ ಅಮಿತವಾದ ಬೆಲೆಯೂ ನಿತ್ಯ ಬಲವೂ ಉಂಟು.

ಪರಿಶಿಷ್ಟ. ೧. ಬಲಿ ಅರ್ಪಿಸುವವರು ಪ್ರಾಣಿಗಳನ್ನು ಒಡಂಬಡಿಕೆಯ ಗುಡಾರದ ಹತ್ತರ ತಂದು ಅವುಗಳ ತಲೆಯ ಮೇಲೆ ಕೈಗಳನ್ನಿಟ್ಟು ತಮ್ಮ ಪಾಪಗಳನ್ನು ಪ್ರಾಣಿಗಳ ಮೇಲೆ ಹೊರಿಸುವ ಗುರ್ತಿನಿಂದ ಅವುಗಳನ್ನು ಪ್ರತಿನಿಧಿಗಳಾಗಿ ಇಡುತ್ತಾರೆ. ತರುವಾಯ ಪ್ರಾಣಿಗಳನ್ನು ತಮಗೆ ಪ್ರತಿಯಾಗಿ ಕೊಂದು ಹಾಕಿ ತಾವು ತಮ್ಮ ಪಾಪ

ಗಳಿಗಾಗಿ ಮರಣಕ್ಕೆ ಪಾತ್ರರಾದೆವೆಂದು ಅರಿಕೆ ಮಾಡುತ್ತಾ ಇದ್ದರು. ಯಾಜಕನು ರಕ್ತವನ್ನು ಪಾತ್ರೆಯಲ್ಲಿ ಹಿಡಿದು ದೇವರು ಅಂಗೀಕರಿಸಿದ ವಿಮೋಚನೇ ಕ್ರಿಯೆಯ ಮುದ್ರೆಗಾಗಿ ಅಂಗಳದಲ್ಲಿರುವ ಬಲಿಪೀಠಕ್ಕೆ ತಳಿಸುವನು. ತದನಂತರ ಪ್ರಾಣಿಗಳ ಮಾಂಸವು ಪೂರ್ಣವಾಗಿ ಅಥವಾ ಭಾಗವಾಗಿ ಬಲಿಪೀಠದ ಮೇಲೆ ಇಟ್ಟು ಸುಟ್ಟು ಬಿಡುವರು. ಅಗ್ನಿಯು ಶುದ್ಧೀಕರಣದ ಗುರ್ತು, ಅದನ್ನು ಮೇಲಕ್ಕೆ ಏರಿಸುವ ಪ್ರಕಾರ ಪರಲೋಕದಲ್ಲಿರುವ ಯೆಹೋವ ಅರ್ಪಿಸಲ್ಪಡುವ ಬಲಿಯನ್ನು ಅಂಗೀಕರಿಸುತ್ತಾನೆಂದು ಭಕ್ತರು ನಂಬುತ್ತಾ ಇದ್ದರು. ನರ ಎಲು ಇತ್ಯಾದಿ ಕೂಡಿದ ಮಾಂಸವು ಅಂದರೆ ಬಲಿಯ ಶರೀರವು ಯತ್ನೈಸುವ ಕರಣವಾಗಿರುವದು. ಹೀಗಾಗಿರುವದರಿಂದ ವಿಮೋಚನೆಯ ಕೆಲಸ ತೀರಿದ ಮೇಲೆ, ಭಕ್ತರು ಬಲಿಯನ್ನು ಸುಡುವದರಿಂದ ತಮ್ಮ ಪೂರ್ಣ ಭಾವವನ್ನು ಯೆಹೋವನಿಗೆ ಶುದ್ಧ ಮಾಡಿ ಒಪ್ಪಿಸಿ ಕೊಡುತ್ತೇವೆಂದು ಸೂಚಿಸುತ್ತಾ ಇದ್ದರು. ಮಾಂಸದ ಸಂಗಡ ರೊಟ್ಟಿ ದ್ರಾಕ್ಷಾರಸಗಳು ಎಣ್ಣೆ ಧೂಪ ಉಪ್ಪು ಸಹಿತವಾಗಿ ಆಹಾರ ಪಾನಗಳ ಬಲಿಗಳೆಂದು ಸುಡಲ್ಪಡುತ್ತಾ ಇದ್ದವು. ಇದರ ಅರ್ಥವೇನಂದರೆ: ರೊಟ್ಟಿಯೂ ದ್ರಾಕ್ಷಾರಸವೂ ಶುದ್ಧೀಕರಣದ ಫಲಗಳಿಗೆ ಗುರ್ತಾಗಿರುವವು (ಆತ್ಮಿಕವಾದ ವೃತ್ತಿಯಿಂದ ಅವು ದೇವರ ರಾಜ್ಯವೆಂಬ ಹೊಲದಲ್ಲಿಯೂ ಕರ್ತನ ಸಭೆ ಎಂಬ ದ್ರಾಕ್ಷಾತೋಟದಲ್ಲಿಯೂ ಉಂಟಾಗುವವು). ಎಣ್ಣೆ ಪರಿಶುದ್ಧಾತ್ಮದ ಉಪಮೆ (ಪರಿಶುದ್ಧಾತ್ಮದ ಕೃಪೆಯಿಂದ ಸತ್ಕ್ರಿಯೆಗಳು ಉಂಟಾಗುತ್ತವೆ). ಧೂಪವು ಪ್ರಾರ್ಥನೆಯ ಸಾಜ್ಞೆ (ಪ್ರಾರ್ಥನೆಯು ಸತ್ಕ್ರಿಯೆಗಳಿಗೆ ಆರಂಭದಿಂದ ಅಂತ್ಯದ ವರೆಗೂ ಕೂಡಿರುತ್ತದೆ). ಉಪ್ಪು ಯೆಹೋವನ ಸಂಗಡಲಿರುವ ಕೃಪೆಯ ಒಡಂಬಡಿಕೆಯು ನಿರ್ಲಯವಾದದ್ದು ಎಂಬದನ್ನು ಸೂಚಿಸುತ್ತದೆ. ಸ್ತೋತ್ರದ ಬಲಿಗಳಲ್ಲಿ ಮಾಂಸವನ್ನೆಲ್ಲಾ ಬಲಿಪೀಠದಲ್ಲಿ ಸುಡಲ್ಪಡದೆ ಅದರ ಮುಖ್ಯ ಭಾಗವು ಬಲಿಯೌತಣದಲ್ಲಿ ಭಕ್ಷಣೆಯಾಗುತಿತ್ತು. ಕೃತಜ್ಞತೆಯ ಬಲಿಯನ್ನರ್ಪಿಸುವವರು ಯೆಹೋವನ ಆತಿಥಿಗಳಾಗಿದ್ದರು ಅವರು ಯೆಹೋವನ ಮನೆಯಲ್ಲಿ ಸೇರಿದವರಂತೆ ಆತನ ಮೇಜಿನಲ್ಲಿ ಊಟ ಮಾಡುತ್ತಾ ಇದ್ದರು. ಈ ಪ್ರಕಾರವಾಗಿ ಬಲಿಯೌತಣವು ಯೆಹೋವನ ಸಂಗಡಲಿರುವ ಐಕ್ಯದ ಮುಖ್ಯ ಮರ್ಮಚಾರವಾಗಿತ್ತು.

ಪರಿಶಿಷ್ಟ. ೨. ಬಲಿಗಳಲ್ಲಿ ವಿಶೇಷವಾಗಿ ನಾಲ್ಕು ತರಗಳು ಇದ್ದವು. ಯಾವವಂದರೆ: ಹೋಮಬಲಿ, ಸ್ತೋತ್ರಬಲಿ, ಪಾಪಬಲಿ, ಅಪರಾಧಬಲಿ, ಮನುಷ್ಯರು ಬೇಕೆಂದು ಮಾಡಿದ ಪಾಪಗಳಿಗೆ ವಿಮೋಚನೇ ಉಪಾಯವು ಇರಲಿಲ್ಲ. ೪ ಮೋಶೆ. ೧೫. ೨೭—೩೦ ಪಾಪದ ಬಲಿಗಳೂ ಅಪರಾಧದ ಬಲಿಗಳೂ ತಿಳಿಯದೆ ಇಲ್ಲವೇ ಆಲೋಚಿಸದೆ ಮಾಡಿದ ವಿಶೇಷವಾದ ಅಕ್ರಮಗಳಿಗಾಗಿ ಅರ್ಪಿಸಲ್ಪಡುತ್ತಾ ಇದ್ದವು. ಅನ್ಯಾಯ ಮಾಡಿದವನು

ದಂಡ ಕೊಡ ತಕ್ಕ ಅಕ್ರಮಗಳಿಗಾಗಿ ಅಪರಾಧದ ಬಲಿಗಳೂ ದಂಡ ಕೊಡ ಕೂಡದ ಅಕ್ರಮಗಳಿಗಾಗಿ ಪಾಪದ ಬಲಿಗಳೂ ಅರ್ಪಿಸಲ್ಪಡ ಬೇಕಾಗಿತ್ತು. ನೇಮವನ್ನು ಮೀರಿದವರು ದೇವರ ಒಡಂಬಡಿಕೆಗೆ ಹೊರಗಾದರು, ಹೊರಗಾದವರನ್ನು ತಿರಿಗಿ ಶೇರಿಸುವದು ಪಾಪದ ಬಲಿಗಳ ಮತ್ತು ಅಪರಾಧಬಲಿಗಳ ತಾತ್ಪರ್ಯವಾಗಿತ್ತು. ಹೋಮಗಳೂ ಕೃತಜ್ಞತೆಬಲಿಗಳೂ ವಿಶೇಷವಾದ ಅಕ್ರಮಗಳಿಗಲ್ಲ ಕೃಪೆಯ ಒಡಂಬಡಿಕೆಯಲ್ಲಿ ಇರುವವರಿಗೂ ಹತ್ತುವ ಪಾಪಗುಣಕ್ಕಾಗಿ ಅರ್ಪಿಸಲ್ಪಡ ಬೇಕಾಗಿತ್ತು. ದೇವರ ಒಡಂಬಡಿಕೆಯಲ್ಲಿ ನೆಲೆಗೊಂಡವರು ಈ ಬಲಿಗಳ ಮುಖಾಂತರ ಅದರಲ್ಲಿ ಬಲಗೊಳ್ಳುತ್ತಾ ಇದ್ದರು. ಹೋಮದಲ್ಲಿ ಬಲಿಯು ಪೂರ್ಣವಾಗಿ ಸುಡಲ್ಪಡುವ ಪದ್ಧತಿ ಇತ್ತು. ಸ್ತೋತ್ರದ ಬಲಿಯಲ್ಲಿ ಕೊಬ್ಬು ಮಾತ್ರ ಶ್ರೇಷ್ಠ ಭಾಗವೆಂದು ಸುಡಲ್ಪಟ್ಟಿತು. ಉಳುಹು ಎಲ್ಲಾ ಬಲಿಯೌತಣದಲ್ಲಿ ಪ್ರಯೋಗಿಸಲ್ಪಟ್ಟಿತು. ಹೋಮವನ್ನು ಅರ್ಪಿಸುವವರು ತಮ್ಮನ್ನು ಶುದ್ಧ ಮಾಡಿ ಕೊಂಡು ಯೆಹೋವನಿಗೆ ಒಪ್ಪಿಸಿ ಕೊಳ್ಳುತ್ತಾ ಇದ್ದರು. ಸ್ತೋತ್ರದ ಬಲಿ ಅರ್ಪಿಸುವವರು ಯೆಹೋವನ ಸಂಗಡಲಿರುವ ಐಕ್ಯದಲ್ಲಿ ಬಲಗೊಳ್ಳಲಿಕ್ಕೆ ಅಪೇಕ್ಷಿಸುತ್ತಾ ಇದ್ದರು. ಆದದರಿಂದ ಕೃತಜ್ಞತೆಯ ಬಲಿ ಆಗುವದಕ್ಕಿಂತ ಮುಂಚೆ ಹೋಮವು ಅರ್ಪಿಸಲ್ಪಡ ಬೇಕಾಗಿತ್ತು.



## § 40. ಹಬ್ಬಗಳು

### ಹಬ್ಬಗಳಲ್ಲಿ ಮೊದಲಿನವುಗಳು ಸಬ್ಬತ್ ಹಬ್ಬಗಳು

೧) ೧. ಸಬ್ಬತ್ ದಿವಸ. ಇದು ದೇವರು ನಿರ್ಮಾಣ ಆದ ಮೇಲೆ ತಕ್ಕೊಂಡ ವಿಶ್ರಾಂತಿಕೆಯ ನೆನಪಿಗಾಗಿಯೂ (೨ ಮೋಶೆ. ೨೧. ೮, ೧೧) ದೇವರ ಪ್ರಜೆಗೆ ಇಟ್ಟಿರುವ ನಿತ್ಯ ವಿಶ್ರಾಂತಿಕೆಯ ಮುಂಗುರ್ತಾಗಿಯೂ ಇಬ್ರಿ. ೪. ೯. ಸ್ಥಾಪಿಸಲ್ಪಟ್ಟದೆ.

೨. ತುತೂರಿ ಹಬ್ಬವು ಇಲ್ಲವೇ ಅಮವಾಸಿ ಸಬ್ಬತ್ ಹಬ್ಬವು (೩ ಮೋಶೆ. ೨೩, ೨೪. ೨೫). ಈ ಹಬ್ಬವು ವರುಷದ ೭ನೇ ಅಮವಾಸಿಯಲ್ಲಿ (ತಿಸ್ರಿ) ಆಚರಿಸಲ್ಪಟ್ಟಿತು. ಈ ದಿವಸವು ಪೂರ್ವ ಲೆಖ್ಖದ ಪ್ರಕಾರ ವರುಷದ ಮೊದಲನೇ ದಿವಸವಾಗಿತ್ತು. ಅದರ ಆರಂಭದಲ್ಲಿ ತುತೂರಿಗಳನ್ನೂದುತ್ತಾ ಇದ್ದರು.

೩. ವರುಷದ ಸಬ್ಬತ್. ಏಳೇಳನೇ ವರುಷವು ದೇಶಕ್ಕೆ ವಿಶ್ರಾಂತಿ ವರುಷವಾಗಿತ್ತು. ೩ ಮೋಶೆ. ೨೫. ೧—೮. ಅದರಲ್ಲಿ ಕೃಷಿಕೆಲಸವೆಲ್ಲಾ ನಿಂತಿತು.

ಹೊಲದಲ್ಲಿಯೂ ದ್ರಾಕ್ಷೆತೋಟದಲ್ಲಿಯೂ ಮರಗಳಲ್ಲಿಯೂ ತನ್ನಷ್ಟಕ್ಕೆ ಬೆಳದದ್ದೆಲ್ಲಾ ಬಡವರಿಗೂ ಪರದೇಶಸ್ಥರಿಗೂ ಅಡವಿಯ ಮೃಗಗಳಿಗೂ ಬಿಡಲ್ಪಡ ಬೇಕಾಗಿತ್ತು. ೨ ಮೋಶೆ. ೨೩. ೧೧. ಈ ವರುಷದಲ್ಲಿ ಕೊಟ್ಟ ಸಾಲಗಳನ್ನು ಕೇಳಲಿಕ್ಕೆ ಅಪ್ಪಣೆ ಇರಲಿಲ್ಲ. ೫ ಮೋಶೆ. ೧೫. ೧, ೨ ಈ ವರುಷದಲ್ಲಿ ಆಗುವ ಗುಡಾರಗಳ ಹಬ್ಬದಲ್ಲಿ ಜನಾಂಗದ ಸರ್ವಸಭೆಗೆ ಸಮಸ್ತ ನೇಮವು ಓದಿ ಹೇಳಲ್ಪಡುತ್ತಾ ಇತ್ತು. ೫ ಮೋಶೆ. ೩೧. ೧೦—೧೩.

೪. ಮಹಾ ಸಬ್ಬತ್ ವರುಷವು ಅಥವಾ ಯೊಬೆಲ್ ವರುಷ ೩ ಮೋಶೆ. ೨೫. ೮ನೇಯಿಂದ ಈ ಹಬ್ಬವು ೪೯ನೇ ವರುಷದ ವಿಮೋಚನೇ ಹಬ್ಬದಿಂದ ೫೦ನೇ ವರುಷದ ವಿಮೋಚನೇ ಹಬ್ಬದ ವರೆಗೂ ಆಚರಿಲ್ಪಟ್ಟಿತು. ಈ ವರ್ಷದಲ್ಲಿ ಇಬ್ರಿಯರಾಗಿ ಹುಟ್ಟಿದ ದಾಸರೆಲ್ಲರು ಬಿಡುಗಡೆಯಾದರು. (೭ನೇ ದಾಸತ್ವದ ವರುಷದಲ್ಲಿ ಯಜಮಾನನನ್ನು ಬಿಡಲೊಲ್ಲದೆ ಇದ್ದವರೂ ೭ವರುಷಕ್ಕಿಂತ ಕಡಿಮೆ ಕಾಲ ದಾಸರಾಗಿದ್ದವರೂ) ಮತ್ತು ಕಳದ ೪೯ವರುಷಗಳಲ್ಲಿ ಯಾರಾದರೂ ಮಾರಿದ (ಅಡವಾಗಿಟ್ಟ) ಭೂಮಿಗಳು ಹಣವಿಲ್ಲದೆ ಬಾಧ್ಯಸ್ಥನಿಗೆ ತಿರಿಗಿ ಕೊಡಲ್ಪಡ ಬೇಕಾಗಿತ್ತು. ಈ ವರುಷಗಳಲ್ಲಿ ಬೆಳೆ ಆಗದದರಿಂದ ಯೆಹೋವನು ಮುಂಚಿನ ವರುಷಗಳಲ್ಲಿ ಹೆಚ್ಚು ಐಶ್ವರ್ಯವಾದ ಆಶೀರ್ವಾದವನ್ನು ಕೊಡುತ್ತೇನೆಂಬ ವಾಗ್ದತ್ತ ಮಾಡಿದನು. ೩ ಮೋಶೆ. ೨೫, ೨೦—೨೨.

ಪರಿಶಿಷ್ಟ. ಮಹಾ ಸಬ್ಬತ್ ವರುಷವು ಸರ್ವಲೋಕರಕ್ಷಣೇ ಕಾಲಕ್ಕೆ ಮುಂಗುರ್ತು ಆಗಿತ್ತು. ಆಗ ದಾಸತ್ವವೆಲ್ಲಾ ಇಲ್ಲದೇ ಹೋಗುವದು. ಸಾಲವೆಲ್ಲಾ ತೆರಯಲ್ಪಡುವದು ಕಳಕೊಂಡು ಹೋದದ್ದೆಲ್ಲಾ ತಿರಿಗಿ ದೊರಕುವದು. ಮತ್ತು ಹೊಸ ಯುಗಕ್ಕೆ ಆರಂಭವಾಗಿರುವದು. ಸಮನೋಡು ಅಪೊಸ್ತಲರ ಕ್ರಿಯೆಗಳ ೩, ೨೦—೨೧.

೨) ಸಭೆಯ ಹಬ್ಬಗಳು. ಇವುಗಳಲ್ಲಿ ತಕ್ಕ ಪ್ರಾಯವನ್ನು ಹೊಂದಿದ ಇಸ್ರಯೇಲನವರೆಲ್ಲರು ಪರಿಶುದ್ಧಸ್ಥಳದಲ್ಲಿ ಕೂಡಿ ಬರ ಬೇಕಾಗಿತ್ತು. ೨ ಮೋಶೆ. ೩೪, ೨೩—೨೪. ಅವು ವರುಷವರುಷಕ್ಕೆ ಆಚರಿಸಲ್ಪಟ್ಟವು. ಬೇರೆ ಬೇರೆ ಸೀಮೆಗಳಲ್ಲಿ ವಾಸಿಸುವ ಕುಲಗಳು ಈ ಹಬ್ಬಗಳನ್ನು ಆಚರಿಸುವದಕ್ಕಾಗಿ ವರುಷವರುಷಕ್ಕೆ ಕೂಡಿ ಬರುತ್ತಾ ತಾವು ಒಂದೇ ದೇವರಿಗೆ ಆರಾಧನೆ ಮಾಡುವ ಒಂದೇ ಜನಾಂಗವಾಗಿದ್ದೇವೆಂದು ತಿಳಿದು ಕೊಂಡು ಐಕ್ಯದಲ್ಲಿ ಸ್ಥಿರವಾದರು. ಈ ಹಬ್ಬಗಳು ಮೂರಾಗಿದ್ದವು. ೩ ಮೋಶೆ. ೨೩. ೪ ಮೋಶೆ. ೨೮. ೫ ಮೋಶೆ. ೧೬. ಈ

ಹಬ್ಬಗಳ ತಾತ್ಪರ್ಯವು ಇಪ್ಪ್ರಕಾರವಾದದ್ದು, ಒಂದಾಂದರಲ್ಲಿ ಮೋಶೆಯ ಕಾಲದ ಲ್ಲಿ ಆದ ಕಾರ್ಯವನ್ನು ನೆನಪು ಮಾಡಿ ಕೊಳ್ಳುತ್ತಾ, ಮತ್ತು ಪೈರಿಗಾಗಿ ಯೆಹೋವ ನಿಗೆ ಸ್ತೋತ್ರ ಮಾಡುತ್ತಾ ಇದ್ದರು. ಯಾಕಂದರೆ ಕೃಷಿಕೆಲಸ ಸಹ ಇಸ್ರಯೇಲ್ಯ ವರಲ್ಲಿ ಪರಿಶುದ್ಧವಾದದ್ದಾಗಿತ್ತು. ಇಸ್ರಯೇಲನವರು ಯೆಹೋವನ ಒಕ್ಕಲಿಗರಾಗಿ ದ್ದು ಭೂಮಿಯ ಫಲದಲ್ಲಿ ಪ್ರಥಮ ಫಲನ್ನೂ ದಶಾಂಶವನ್ನೂ ಸಲ್ಲಿಸುವ ಹಂಗಿ ನಲ್ಲಿದ್ದರು. ವಾಗ್ದತ್ತದೇಶದಲ್ಲಿ ಸೇರುವ ಪರ್ಯಂತರ ಇಸ್ರಯೇಲನವರೆಲ್ಲರೂ ಕುರುಬರಾಗಿ ಜೀವನ ಮಾಡಿ ಕೊಳ್ಳುತ್ತಿದ್ದರು. ವಾಗ್ದತ್ತದೇಶದಲ್ಲಿ ಸೇರಿದ ಮೇ ಲೆ ಅವರು ಒಕ್ಕಲಿಗರಾಗಿ ಕೃಷಿವೃತ್ತಿಯಿಂದ ಬದುಕ ಬೇಕೆಂದು ಯೆಹೋವನು ನೇ ಮಕ ಮಾಡಿದನು.

೧ ಪಶಾ ಹಬ್ಬವು (ಹುಳಿ ಇಲ್ಲದ ರೊಟ್ಟಿಗಳ ಹಬ್ಬ). ಇದು ಇಸ್ರಯೇಲ ನವರ ಸಭೆಗೆ ವರುಷದ ಆದಿದಿವಸವಾಗಿತ್ತು. ಅದರಲ್ಲಿ ಮಿಸ್ರ ದೇಶದಿಂದ ಬಿಡುಗ ಡೆಯಾದದ್ದನ್ನೂ ಚೊಚ್ಚಲ ಮಕ್ಕಳ ರಕ್ಷಣೆಯನ್ನೂ ನೆನಪು ಮಾಡಿ ಕೊಳ್ಳುತ್ತಿದ್ದರು. ಮತ್ತು ಈ ದಿವಸವು ಕಾನಾನ್ ದೇಶದಲ್ಲಿ ಸೇರಿದವರಿಗೆ ವಸಂತ ಕಾಲದ ಪೈರಿನ ಹ ಬ್ಬವಾಗಿತ್ತು. ಮಿಸ್ರ ದೇಶದಿಂದ ಹೊರಟು ಹೋದವರು ಪಶಾಕುರಿಯನ್ನು ಭಕ್ಷಿ ಸಿದ ಪ್ರಕಾರ ಇಸ್ರಯೇಲನವರೆಲ್ಲರು ೧೪ನೇ ನಿಸಾನ್ ಇಲ್ಲವೇ ಅಬಿಬ್ ದಿವಸದ ಹಬ್ಬದ ಮುಂಚಿನ ಸಾಯಂಕಾಲದಲ್ಲಿ ಅದೇ ಆಚರಣೆಗಳನ್ನು ಮಾಡಿ ಪಶಾವನ್ನು ಭೋಜಿಸುತ್ತಾ ಇದ್ದರು. ಪಶಾಕುರಿಯ ರಕ್ತವು ಮಾತ್ರ ಬಾಗಲುಗಳ ನಿಲುವು ಪ ಟ್ಟಿಗಳಿಗಲ್ಲ ಬಲಿಪೀಠಕ್ಕೆ ಚಿಮಿಕಿಸಲ್ಪಟ್ಟಿತು. ಈ ಹಬ್ಬವು ಎಂಟು ದಿವಸ ಪರಿ ಯಂತರ ನಡಿಯುತಿತ್ತು. ಈ ಕಾಲದಲ್ಲಿ ಹುಳಿಹಿಟ್ಟು ಯಾರ ಮನೆಯಲ್ಲಿಯೂ ಇರ ಬಾರದಿತ್ತು. ಮೊದಲನೇ ದಿವಸವೂ ಕಡೇ ದಿವಸವೂ ಸಬ್ಬತ್ ದಿವಸದ ಹಾಗೆ ಆಚರಿಸಲ್ಪಟ್ಟವು.

೨ ಪಂಚಾಶತ್ ಹಬ್ಬವು (ಇಲ್ಲವೇ ಸಪ್ತಕಗಳ ಹಬ್ಬವು ಇಲ್ಲವೇ ಪ್ರಥ ಮ ಫಲಗಳ ಹಬ್ಬವು). ಪಂಚಾಶತ್ ಹಬ್ಬವು ಪಶಾಹಬ್ಬದ ಮೇಲಿನ ೫೦ನೇ ದಿವಸದಲ್ಲಿ ಆಚರಿಸಲ್ಪಟ್ಟಿತು. ಈ ಹಬ್ಬದಲ್ಲಿ ಪಶಾ ದಿವಸದಿಂದ ಆರಂಭಿಸಿದ ಬೆಳೆ ಯು ತೀರಿದ ಮೇಲೆ ಇಸ್ರಯೇಲನವರು ಕೃತಜ್ಞರಾಗಿ ಭೂಮಿಯ ಧನಿಯಾದ ಯೆ ಹೋವನಿಗೆ ಸ್ತೋತ್ರ ಮಾಡುವದಕ್ಕಾಗಿ ಹಬ್ಬವನ್ನು ಆಚರಿಸುತ್ತಾ ಇದ್ದರು. ಈ ಹಬ್ಬಕ್ಕೆ ಒಂದೇ ದಿವಸ ನೇಮಕವಾಗಿತ್ತು. ಅದು ಸಬ್ಬತ್ ದಿವಸದ ಹಾಗಿತ್ತು. ಪ ಶಾಹಬ್ಬದಲ್ಲಿ ಹೊಸ ತೆನೆಗಳನ್ನು ಅರ್ಪಿಸಿದರು. ಪಂಚಾಶತ್ ಹಬ್ಬದಲ್ಲಿ ಸೀನಾ ಯಿ ಪರ್ವತದಲ್ಲಿ ಆದ ನೇಮದಾನವನ್ನು ನೆನಪು ಮಾಡಿ ಕೊಳ್ಳುತ್ತಾ ಇದ್ದರು.

೩ ಗುಡಾರಗಳ ಹಬ್ಬ. ತಿಸ್ರಿ ಎಂಬ ೭ನೇ ತಿಂಗಳಿನ ೧೫ನೇ ದಿವಸ ದಲ್ಲಿ ಆರಂಭಿಸಿ ೮ದಿವಸ ಹಿಡಿಯುತಿತ್ತು. ಇದನ್ನು ಬಹಳ ಸಂಭ್ರಮದಿಂದ ಆಚರಿ ಸುತ್ತಾ ಇದ್ದರು. ಅರಣ್ಯಸಂಚಾರವನ್ನು ನೆನಸಿ ಕೊಂಡು ಮನೆಗಳನ್ನು ಬಿಟ್ಟು ಹಸ ರು ಕೊಂಬೆಗಳಿಂದ ಕಟ್ಟಿದ ಗುಡಾರಗಳಲ್ಲಿ ವಾಸ ಮಾಡುತ್ತಾ ಮೇಲುಪೈರನ್ನೂ ಎ ಣ್ಣೆಯನ್ನೂ ದ್ರಾಕ್ಷೆರಸವನ್ನೂ ಕೂಡಿಸಿ ಇಟ್ಟ ಮೇಲೆ ಅದಕ್ಕಾಗಿ ಸ್ತೋತ್ರದ ಹಬ್ಬವ ನ್ನು ಆಚರಿಸುತ್ತಾ ಇದ್ದರು.

೩) ಮಹಾ ವಿಮೋಚನೇ ದಿವಸವು ಸಹಾ ವರುಷಂಪ್ರತಿಯಲ್ಲಿ ಆಗುವ ಹ ಬ್ಬವಾಗಿತ್ತು. ೩ ಮೋಶೆ. ೧೬ನೇ ಸಂಧಿ ಮತ್ತು ೨೩ನೇ ಸಂಧಿ ೨೬ನೇ ಮೊದಲಾ ದ ವಚನಗಳು ೪ ಮೋಶೆ. ೨೯. ಅದು ತಿಸ್ರಿ ತಿಂಗಳಿನ ಹತ್ತನೇಯಲ್ಲಿ ಆಚರಿಸಲ್ಪ ಟ್ಟಿತು. ಜನರೆಲ್ಲರೂ ಪಶ್ಚಾತ್ತಾಪ ಪಟ್ಟು ಅನಶನವಾಗಿರ ಬೇಕಾಗಿತ್ತು. ಈ ದಿವ ಸವು ವರುಷದ ಎಲ್ಲಾ ದಿವಸಗಳಲ್ಲಿ ಶ್ರೇಷ್ಟವಾದದ್ದು. ಯಾಕಂದರೆ ಅದರಲ್ಲಿ ಸಮ ಸ್ತ ಜನಾಂಗದ ಪಾಪಗಳೆಲ್ಲಾ ವಿಶೇಷ ಘನವಾದ ರೀತಿಯಿಂದ ಪರಿಹಾರವಾಗು ತ್ತಿದ್ದವು.

ಪರಿಶಿಷ್ಟ. ಮಹಾ ವಿಮೋಚನೇ ದಿವಸದಲ್ಲಿ ಪ್ರಧಾನಯಾಜಕನು ಒಬ್ಬನೇ ಸಾಕ್ಷಿಗುಡಾರದಲ್ಲಿ ಆಗ ಬೇಕಾದ ಕ್ರಿಯೆಗಳನ್ನು ಮಾಡುತ್ತಿದ್ದನು. ಅವನು ತನಗಾ ಗಿಯೂ ತನ್ನ ಮನೆಗಾಗಿಯೂ ಪಾಪಬಲಿಯನ್ನು ಅರ್ಪಿಸಿದ ಮೇಲೆ ಸಾಕ್ಷಿಗುಡಾರದ ಬಳಿಗೆ ತರಲ್ಪಟ್ಟ ಎರಡು ಹೋತುಗಳಲ್ಲಿ ಚೀಟು ಬಿದ್ದ ಪ್ರಕಾರ ಒಂದು ಕರ್ತನಿಗೆ ಅರ್ಪಿಸ ತಕ್ಕ ಪಾಪಬಲಿಗಾಗಿ, ಒಂದು ಅಸಸ್ಸೇಲಗಾಗಿ ನೇಮಕವಾಗುತಿತ್ತು. ಪ್ರಧಾ ನಯಾಜಕನು ವರುಷಂಪ್ರತಿ ಈ ಒಂದೇ ದಿವಸದಲ್ಲಿ ಪರಿಶುದ್ಧಸ್ಥಳದಲ್ಲಿ ಸೇರಲಿಕ್ಕೆ ಅಪ್ಪಣೆ ಹೊಂದಿ ಅರ್ಪಿಸಲ್ಪಟ್ಟ ಹೋತಿನ ರಕ್ತವನ್ನು ಪರಿಶುದ್ಧಸ್ಥಳಕ್ಕೆ ತಂದು ಕೃಪಾಸನಕ್ಕೆ ಚಿಮಿಕಿಸುತ್ತಿದ್ದನು. ತರುವಾಯ ಈ ಬಲಿಯರ್ಪಣೆಯ ಮುಖಾಂತ್ರ ಪರಿಹರಿಸಲ್ಪಟ್ಟ ಜನಾಂಗದ ಪಾಪಗಳು ಉಳಿದ ಹೋತಿನ ತಲೆಯ ಮೇಲೆ ಇಟ್ಟ ಬ ಳಿಕ ಅದನ್ನು ಅಸಸ್ಸೇಲಗಾಗಿ ಆದ ಕ್ರಿಯೆಯನ್ನು ವಿಮೋಚನೆ ಹೊಂದಿದ ಇಸ್ರಾಯೇ ಲನ ಮೇಲೆ ಅವನಿಗೆ ಅಧಿಕಾರವಿಲ್ಲವೆಂಬುವದನ್ನು ತಿಳಿಸುವದಕ್ಕಾಗಿ ಅರಣ್ಯಕ್ಕೆ ಕಳು ಹಿಸ ಬೇಕಾಗಿತ್ತು. ಏನಂದರೆ ಆ ದಿವಸದಲ್ಲಿ ಉಂಟಾದ ವಿಮೋಚನೆಯು ದೂರು ಹೇಳುವ ಸೈತಾನನು ಸಹ (ಇಯೋಬ್. ೧. ೨ನೇ ಸಂಧಿ ಜಕರೀಯ ೩ನೇ ಸ. ಪ್ರಕಟಣೆ. ೧೨, ೧೦, ೧೧) ಅದಕ್ಕೆ ಒಪ್ಪಿ ಕೊಳ್ಳ ಬೇಕಾದಷ್ಟು ಪ್ರಕಟವಾಗಿಯೂ ನಿಶ್ಚಯವಾಗಿಯೂ ಅದೆ ಎಂದು ಸೂಚಿಸಲ್ಪಟ್ಟಿತು. ಹೀಗಿರುವದರಿಂದ ಈ

ದಿವಸದಲ್ಲಿ ಅರ್ಪಿಸಲ್ಪಟ್ಟ ಬಲಿಯು ಕ್ರಿಸ್ತನ ಬಲಿಯರ್ಪಣೆಗೆ ಅತಿ ಸ್ಪಷ್ಟವಾದ ಮುಂಗುರ್ತಾಗಿತ್ತು. ಇದರ ವಿಷಯ ಇಬ್ರಿ. ೯. ೧೨ನೇಯಲ್ಲಿ ಬರದದ್ದೇನಂದರೆ: ಆತನು ಸ್ವಂತ ರಕ್ತದ ಮುಖಾಂತ್ರ ಒಮ್ಮೆ ಪರಿಶುದ್ಧಸ್ಥಳದಲ್ಲಿ ಪ್ರವೇಶಿಸಿ ನಿತ್ಯವಾದ ವಿಮೋಚನೆಯನ್ನು ಕಂಡು ಕೊಂಡಿದ್ದಾನೆ.



## § 41. ಶುದ್ಧೀಕರಣಗಳು

ನೇಮವು ನರಜೀವದ ಕೆಲವು ಸ್ಥಿತಿಗಳು ಅಶುದ್ಧವಾದವೆಂದು ನಿರ್ಣಯಿಸಿ ಬೇರೆ ಬೇರೆ ಕಾರಣಗಳಿಂದ ಇಸ್ರಯೇಲನ ಸಭೆಯವರನ್ನು ಪರಿಶುದ್ಧದರ ಅನ್ಯೋನ್ಯದಿಂದ ಪ್ರತ್ಯೇಕಿಸುತಿತ್ತು. ವಿಶೇಷವಾಗಿ ಮರಣಕ್ಕೂ ಕೊಳತು ಹೋಗುವ ಶವಕ್ಕೂ ಸಂಬಂಧವಾದದ್ದೆಲ್ಲಾ ಸೂತಕಕ್ಕೆ ಕಾರಣವಾಗಿತ್ತು. ಪಾಪದಿಂದ ಮರಣವು ಲೋಕದಲ್ಲಿ ಶೇರಿದದರಿಂದ ಮರಣವೂ ಕೊಳಿಯುವಿಕೆಯೂ ಜೀವವನ್ನು ಬಿಟ್ಟ ಶರೀರಗಳನ್ನು ಹಿಡಿದು ಪಾಪದಿಂದ ಹುಟ್ಟುವ ಆತ್ಮಿಕವಾದ ನಷ್ಟವು ಏನೆಂದು ಅಸಹ್ಯವಾದ ರೀತಿಯಿಂದ ಪ್ರತ್ಯಕ್ಷವಾಗಿ ತೋರಿಸುತ್ತವೆ. ಆತ್ಮದ ಕ್ಷೇಮಕರವಾದ ಐಕ್ಯವು ಪಾಪದಿಂದ ನಾಶವಾಗುವ ಪ್ರಕಾರ ಶರೀರದ ಎಲುಬು ಮಾಂಸ ನರ ರಕ್ತಾದಿಗಳು ಮರಣದಿಂದ ಬಿಚ್ಚಲ್ಪಟ್ಟು ನಾಶವಾಗುತ್ತವೆ. ಇದಲ್ಲದೆ ಕುಷ್ಟರೋಗ ಮೊದಲಾದ ದೋಷಗಳು ಮರಣಕ್ಕೆ ಸಂಬಂಧವಾದವುಗಳೆಂದು ಎಣಿಸಲ್ಪಟ್ಟದರಿಂದ ಅವು ಸಹ ಸೂತಕಕ್ಕೆ ಕಾರಣವಾಗಿದ್ದವು. ಮತ್ತು ಮನುಷ್ಯನ ಜೀವವು ಜನ್ಮದಿಂದಲೇ ಮರಣಕ್ಕೂ ಕೊಳವಿಗೂ ಒಳಗಾಗುವದರಿಂದ ಈ ಸ್ಥಿತಿಗೆ ಆರಂಭವಾದ ಜನ್ಮಕ್ಕೂ ಸಂಬಂಧವಾದದ್ದೆಲ್ಲಾ ಸಹ ಸೂತಕಕ್ಕೆ ಕಾರಣವಾಗಿತ್ತು. ೫೧ ಕೀರ್ತನೆ. ೭—ಈ ವಿಷಯವಾಗಿ ಎರಡು ತರದ ಪ್ರಾಯಶ್ಚಿತ್ತಗಳು ನೇಮಿಸಲ್ಪಟ್ಟವು. ಅಶುದ್ಧವಾದವರಲ್ಲಿ ಒಬ್ಬರು ಸಾಯಂಕಾಲದ ವರೆಗೂ ಬೇರೆಯಾಗಿದ್ದು ಮೈ ತೊಳಿಯುವದರಿಂದಲೇ ತಮ್ಮನ್ನು ಶುದ್ಧ ಮಾಡಿಕೊಳ್ಳ ಬಹುದಿತ್ತು. ಒಬ್ಬರು ಶುದ್ಧೀಕರಣಕ್ಕಾಗಿ ಪ್ರಾಯಶ್ಚಿತ್ತದ ಬಲಿಯನ್ನು ಅರ್ಪಿಸ ಬೇಕಾಗಿದ್ದರು. ಈ ತರದ ಸೂತಕವು ಅಶುದ್ಧರನ್ನು ಮುಟ್ಟಿದವರಿಗೂ ಹತ್ತಿತು.

ಪರಿಶಿಷ್ಟ. ಕುಷ್ಟರೋಗವು. ಈ ರೋಗದಲ್ಲಿ ಬಿದ್ದವರು ದೇವಾಲಯಕ್ಕೆ ಮಾತ್ರವಲ್ಲ ಮನುಷ್ಯರ ವಾಸಸ್ಥಳಗಳಿಗೂ ದೂರವಾಗಿರ ಬೇಕಾಗಿತ್ತು. ಒಬ್ಬನು ಸ್ವಸ್ಥವಾದ ಮೇಲೆ ಯಾಜಕರಿಗೆ ಎರಡು ಪಕ್ಷಿಗಳನ್ನು ಕೊಡ ಬೇಕಾಗಿತ್ತು. ಅವರು ರೋಗಿಷ್ಟರಿಗೆ ಕ್ಷೇಮವಾಯಿತೆಂಬದಕ್ಕೆ ಸತ್ತವನು ಪುನರುತ್ಥಾನವಾದನೆಂಬ ಹಾಗೆ ವಿ

ಶೇಷವಾದ ಆಚರಣೆಯನ್ನು ಮಾಡುತ್ತಿದ್ದರು. ಮತ್ತು ಬೇರೆ ಬೇರೆ ಬಲಿಗಳ ಅರ್ಪಣೆಯಿಂದ ಶಿರಿಗಿ ಭಕ್ತರ ಸಭೆಯಲ್ಲಿ ಸೇರಿಸಲ್ಪಡುವನು. ೩ ಮೋಶೆ. ೧೪.— ಶವವನ್ನು ಇಲ್ಲವೇ ಶವದ ಎಲುವನ್ನು ಇಲ್ಲವೆ ಶವ ಬಿದ್ದ ಕೊಠಡಿಯನ್ನು ಇಲ್ಲವೇ ಇಂಥಾ ಸ್ಥಳದಲ್ಲಿದ್ದ ಪಾತ್ರೆಗಳನ್ನು ಮುಟ್ಟಿದವನು ಏಳು ದಿವಸದ ವರೆಗೂ ಸೂತಕವಾಗಿರುತ್ತಿದ್ದನು. ಏಳು ದಿವಸವಾದ ಮೇಲೆ ಶುದ್ಧೀಕರಣವು ಆಗ ಬೇಕಾಗಿತ್ತು. ಹ್ಯಾಗಂದರೆ ಕೆಂಪು ಆಕಳಿನ ಬೂದಿ ಬೆರಸಿದ ನೀರಿನಿಂದ ಶುದ್ಧೀಕರಣವು ಆಗಲಿಕ್ಕೆ ನೇಮಕವಾಗಿತ್ತು. ಈ ಕೆಂಪು ಆಕಳಿನ ಸಂಗತಿಯು ಯಾವದಂದರೆ: ಒಂದು ಕೆಂಪು ಆಕಳು (ಕೆಂಪು ವರ್ಣ ಜೀವದ ಪೂರ್ಣತೆಯನ್ನೂ ಬಲವನ್ನೂ ಸೂಚಿಸುವಂಥಾದ್ದು) ಕಾಲಿ ಕಾಲಕ್ಕೆ ಬೇಕಾದ ವೇಳೆಯಲ್ಲಿ ಪಾಪದ ಕೂಲಿಯಾದ ಮರಣಕ್ಕೆ ಒಳಗಾದ ಇಸ್ರಯೇಲಿನವರ ಸಭೆಗಾಗಿ ಪಾಪಬಲಿಯಾಗಿ ದಂಡಿನ ಹೊರಗೆ ವೈಯ್ಯಲ್ಪಟ್ಟು ದೇವದಾರಿನ ಕಟ್ಟಿಗೆಯ ಸಂಗಡಲೂ (ನಿರ್ಲಯತ್ವದ ಗುರ್ತು) ಇಂಗಲೀಕ ಹಚ್ಚಿದ ಉಣ್ಣೆಯ ಸಂಗಡಲೂ (ಜೀವದ ಗುರ್ತು) ಇಸ್ಸೋಪಿನ ಸಂಗಡಲೂ (ಶುದ್ಧೀಕರಣದ ಸಂಗಡಲೂ) ಬೂದಿಯಾಗುವ ಪರ್ಯಂತರ ಸುಡಲ್ಪಟ್ಟಿತು. ಈ ಬೂದಿಯನ್ನು ಹರಿಯುವ ನೀರಿಗೆ ಬೆರಸಿ ಶವಗಳ ಮುಟ್ಟಿದವರನ್ನು ಚಿಮಿಕಿಸಿ ಶುದ್ಧ ಮಾಡುವದಕ್ಕಾಗಿ ಜೋಕೆಯಾಗಿ ಇಟ್ಟು ಕೊಳ್ಳಲ್ಪಟ್ಟಿತು. ೪ ಮೋಶೆ. ೧೯.



## § 42. ಆಹಾರನೇಮಗಳು

ಇಸ್ರಯೇಲನವರು ಎಲ್ಲಾ ಕೆಲಸಗಳನ್ನು ಕಟ್ಟಳೆಗಳಿಗೆ ಅನುಸಾರವಾಗಿ ನಡಿಸಬೇಕಾದ ಪ್ರಕಾರ ಉಣ್ಣುವದನ್ನೂ ಕುಡಿಯುವದನ್ನೂ ಕುರಿತು ಉಪಾಧ್ಯನಂತೆ ರಕ್ಷಣೆಗಾಗಿ ಶಿಕ್ಷಿಸುವಂಥ ನೇಮದ ಕಟ್ಟಳೆಗಳು ಅವರಿಗೆ ಕಾಡಲ್ಪಟ್ಟವು. ಗಲಾತ್ಯ. ೩, ೨೪. ಕಾಲಾಸ್. ೨, ೧೬. ೧೭. ಶುದ್ಧ ಪ್ರಾಣಿಗಳಿಗೂ ಅಶುದ್ಧ ಪ್ರಾಣಿಗಳಿಗೂ ವ್ಯತ್ಯಾಸ ನಿರ್ಣಯಿಸಲ್ಪಟ್ಟ ಕಾರಣವು ೩ ಮೋಶೆ. ೨೦, ೨೪. ೨೬ ವರೆಗೂ ಹೀಗೆ ಬರದದೆ. ಯೆಹೋವನು ಇಸ್ರಯೇಲನನ್ನು ತನಗೆ ಪರಿಶುದ್ಧ ಜನಾಂಗವಾಗುವದಕ್ಕಾಗಿ ಜನಾಂಗಗಳಿಗೆ ಪ್ರತ್ಯೇಕಿಸಿದದರಿಂದಲೂ ಪ್ರತ್ಯೇಕಿಸಿದ ಪ್ರಕಾರವಾಗಿಯೂ ಇಸ್ರಯೇಲನು ಶುದ್ಧ ಪ್ರಾಣಿಗಳನ್ನು ಅಶುದ್ಧವಾದವುಗಳಿಗೆ ಪ್ರತ್ಯೇಕಿಸ ಬೇಕು. ಅನುದಿನವು ಕೈ ಕೊಳ್ಳ ಬೇಕಾದ ಆಹಾರದ ಕಟ್ಟಳೆಗಳು ಇಸ್ರಯೇಲನವರಿಗೆ ಯೆಹೋವನು ತಮ್ಮನ್ನು ಎಲ್ಲಾ ಜನಾಂಗಗಳೊಳಗಿಂದ ಆರಿಸಿ ತೆಗದು ಕೊಂಡ ಉಪಕಾರವನ್ನೂ ವಿಶೇಷವಾಗಿ

ಕೊಂದಿದ ಕರಿಯುವಿಕೆಯನ್ನೂ ಅನ್ಯಜನರ ನಡತೆಗೆ ದೂರವಾಗಿರುವ ಹಂಗನ್ನೂ ಜ್ಞಾಪಕ ಮಾಡ ಬೇಕಾಗಿದ್ದವು. ಮೃಗಜಾತಿಯಲ್ಲಿ ಸ್ಥಾಪಿಸಲ್ಪಟ್ಟ ಶುದ್ಧ ಅಶುದ್ಧವೆಂಬ ವ್ಯತ್ಯಾಸವು ನರಜಾತಿಯಲ್ಲಿ ಪರಿಶುದ್ಧ ಜನಾಂಗವಾಗಿ ದೇವರು ಆದುಕೊಂಡ ಜನಾಂಗಕ್ಕೂ ಉಳಿದ ಜನಾಂಗಗಳಿಗೂ ಉಪಮೆಯಾಗಿತ್ತು. ನಾಶನಕ್ಕೆ ಕಾರಣವಾದ ಶಾಪವು ನರಜಾತಿಯ ಸಹಿತ ನಿರ್ಮಾಣವೆಲ್ಲಾದರ ಮೇಲೆ ರಕ್ಷಣೆ ಆಗುವ ಪರ್ಯಂತರ ಬಿತ್ತೆಂಬ ಸೂಚನೆಯೂ ಇದರಲ್ಲಿ ಉಂಟು. ರಕ್ತವನ್ನೂ ರಕ್ತವನ್ನೆಲ್ಲಾ ಚೆಲ್ಲದೇ ಕೊಂದು ಹಾಕಿದ ಪ್ರಾಣಿಗಳ ಮಾಂಸವನ್ನೂ ತಿನ್ನ ಬಾರದು ಎಂಬ ಕಟ್ಟಳೆ ಸಹ ಹಾಸ್ತಾಗಿ ಸ್ಥಾಪಿಸಲ್ಪಟ್ಟು ಮೀರುವವನಿಗೆ ಪ್ರಾಣಶಿಕ್ಷೆ ನಿರ್ಣಯಿಸಲ್ಪಟ್ಟಿತು. ವಿಮೋಚನೇಕರವಾದ ರಕ್ತವು ಪರಿಶುದ್ಧವೆಂದು ಎಣಿಸಲ್ಪಟ್ಟದರಿಂದ ಈ ಕಟ್ಟಳೆ ಕಾಡಲ್ಪಟ್ಟಿತು. (೩ ಮೋಶೆ. ೧೭, ೧೧.)

ಪರಿಶಿಷ್ಟ. ೩ ಮೋಶೆ. ೧೧. ೫ ಮೋಶೆ. ೧೪ನೇ ಸಂಧಿಯ ಪ್ರಕಾರ ಪಶುಗಳಲ್ಲಿ ನೆಮರು ಹಾಕದೆ ಗೊರಶೆ ಪೂರ್ಣವಾಗಿ ವಿಭಾಗಿಸಲ್ಪಡದೆ ಇರುವಂಥ ಜಾತಿಗಳೂ ಜಲಜಂತುಗಳಲ್ಲಿ ಮತ್ಸರೆಕ್ಕೆಗಳೂ ಪರೆಗಳೂ ಇಲ್ಲದವುಗಳೂ ಖಗಗಳಲ್ಲಿ ಮಾಂಸಗ್ರಾಸ ಪಕ್ಷಿಗಳೂ ಕೆಲವು ಜಾತೀ ಮಿಡಿತೆಗಳ ಹೊರ್ತು ಎಲ್ಲಾ ಹುಳಗಳೂ ಮೊಲೆ ಕೊಡುವ ರೆಕ್ಕೆಯುಳ್ಳ ಪ್ರಾಣಿಗಳೂ ಇವುಗಳೆಲ್ಲಾ ಅಶುದ್ಧವಾದವುಗಳೆಂದು ಎಣಿಸಲ್ಪಟ್ಟವು. ಶುದ್ಧ ಅಶುದ್ಧವು ಎಂಬ ಭೇದವು ಪ್ರಾಣಿಗಳಲ್ಲಿ ನೇಮಕವಾಗುವದಕ್ಕೆ ಕಾರಣವೇನಂದರೆ: ನಿರ್ಮಾಣವೆಲ್ಲಾದರ ಮೇಲೆ ವಿಶೇಷವಾಗಿ ಮನುಷ್ಯಜಾತಿಗೆ ಹೆಚ್ಚಾಗಿ ಸಂಬಂಧವಾದ ಪ್ರಾಣಿಗಳ ಮೇಲೆ ಮನುಷ್ಯನು ಮಾಡಿದ ಪಾಪದಿಂದ ಶಾಪವು ಬಂದದರಿಂದ ಪಾಪದ ಸೂತಕವು ಎಲ್ಲಾದಕ್ಕೆ ಹತ್ತಿತು. ಆದರೆ ಯೆಹೋವನು ತಾನು ಆದು ಕೊಂಡ ಜನಾಂಗಕ್ಕೆ ಯಾವ ಪ್ರಾಣಿಗಳ ಮಾಂಸವನ್ನು ತಿನ್ನಬಹುದೆಂಬ ಅಪ್ಪಣೆ ಕೊಟ್ಟನೋ ಅವು ಈ ಅಪ್ಪಣೆಯಿಂದಲೇ ಶುದ್ಧವಾದವು. ಕೆಲವು ಪ್ರಾಣಿಗಳು ಅಶುದ್ಧವಾದವುಗಳೆಂದು ಸ್ವಾಭಾವಿಕ ಬುದ್ಧಿಯಿಂದ ಮನುಷ್ಯರೆಲ್ಲರಿಗೆ ಗೊತ್ತಾಗಿದೆ. ಕೆಲವು ಪ್ರಾಣಿಗಳ ಮಾಂಸವು ಮನುಷ್ಯನ ದೇಹಕ್ಕೆ ವಿಷವಾಗಿದೆಂದು ಎಲ್ಲರಿಗೂ ತಿಳಿಯುತ್ತದೆ. ಇಂಥವುಗಳನ್ನು ದೇವರು ಇಸ್ರಾಯೇಲನವರಿಗೆ ಜೀವನಕ್ಕಾಗಿ ನೇಮಿಸಲಿಲ್ಲ. ಆದರೆ ಅನ್ಯಜನರು ದೇವರ ರಾಜ್ಯದಲ್ಲಿ ಶೇರಿಸಲಾರಂಭಿಸಿದ ಕಾಲದಿಂದ ಯೆಹೂದ್ಯರಿಗೂ ಅನ್ಯಜನರಿಗೂ ಇದ್ದ ಶುದ್ಧ ಅಶುದ್ಧವೆಂಬ ಭೇದ ಕಳೆದ ಪ್ರಕಾರ ಪ್ರಾಣಿಗಳಲ್ಲಿಯೂ ಈ ಭೇದವನ್ನು ಸ್ಥಾಪಿಸಿದ ಆಹಾರ ನೇಮಗಳು ಸಹಾ ತೆಗದು ಹಾಕಲ್ಪಟ್ಟಿತು. ಅಪೊ. ಕ್ರಿ. ೧೦, ೧೫. ಕೊಲೊಸ್ಸೆ. ೨, ೧೬. ೧೭.



## § 43. ಹರಿಕೆಗಳು

೩ ಮೋಶೆ. ೨೭. ೪ ಮೋಶೆ. ೩೦. ಎಲ್ಲಾ ಜನಾಂಗಗಳ ದೇವಾರಾಧನೆಯಲ್ಲಿ ಹರಿಕೆ ಹೇಳಿ ಕೊಳ್ಳುವದು ಸೇರಿಯದೆ. ದೇವರು ತಾನು ಇಸ್ರಾಯೇಲನವರಲ್ಲಿ ಸ್ಥಾಪಿಸಿದ ನೇಮದ ಪ್ರಕಾರ ಮನುಷ್ಯರು ಹೇಳಿ ಕೊಂಡ ಹರಿಕೆಗಳನ್ನು ತಪ್ಪದೆ ತಡೆಯದೆ ಸಲ್ಲಿಸ ಬೇಕಾಗಿತ್ತು. ಆದರೂ ಹರಿಕೆ ಹೇಳಿ ಕೊಳ್ಳದೆ ಇರುವದು ಪಾಪವಲ್ಲವೆಂದು ಸ್ಪಷ್ಟವಾಗಿ ಬರಿಯಲ್ಪಟ್ಟಿತು. ೫ ಮೋಶೆ. ೨೩, ೨೨. ಒಬ್ಬನು ತನಗಿದ್ದದ್ದನ್ನೆಲ್ಲಾ ತನ್ನನ್ನು ಸಹಾ ಯೆಹೋವನಿಗೆ ಕೊಡುತ್ತೇನೆಂದು ಹರಿಕೆ ಹೇಳ ಬಹುದಾಗಿತ್ತು. ಆದರೆ ಹರಿಕೆಯಾಗಿ ಕೊಟ್ಟದ್ದೆಲ್ಲಾ ಬಲಿ ಅರ್ಪಣೆಗೆ ತಕ್ಕ ಪಶುಗಳನ್ನು ಹೊರ್ತು ವಿಮೋಚನೇ ಹಣಕ್ಕೆ ಬಿಡಿಸಲ್ಪಡ ಬಹುದಿತ್ತು. ಶಾಪದ ಮಾತು ಮಾತ್ರ ಬಿಡಿಸಲ್ಪಡ ಕೂಡದಿತ್ತು. ೩ ಮೋಶೆ. ೨೭, ೨೧. ೨೮.

ಪರಿಶಿಷ್ಟ. ಹರಿಕೆಗಳಲ್ಲಿ ನಸೀರಾಯವೆಂಬ ಹರಿಕೆ ವಿಶೇಷವಾದದ್ದು. ತಮ್ಮನ್ನು ತಾವು ಹರಿಕೆ ಹೇಳಿ ಕೊಂಡು ಯೆಹೋವನಿಗೆ ಒಪ್ಪಿಸಿ ಕೊಟ್ಟವರು ನಸೀರಾಯರು ಎಂದು ಕರೆಯಲ್ಪಟ್ಟರು. ಅವರು ನೇಮಕವಾದ ಕಾಲದ ವರೆಗೂ ಯಾವ ಮದ್ಯವನ್ನಾದರೂ ಕುಡಿಯದೆ ತಲೇ ಕೂದಲು ಬೋಳಿಸದೆ ಇರುವದಕ್ಕೆ ಉಚಿತವಾದ ಹರಿಕೆ ಹೇಳಿ ಕೊಂಡು ನಿಷ್ಟೆ ಮಾಡಿದವರಾಗಿದ್ದರು (ನಸೀರಾಯನು ಅಂದರೆ ಪ್ರತ್ಯೇಕಿಸಲ್ಪಟ್ಟವನು). ಅಂಥವನು ಶವವನ್ನು ಮುಟ್ಟಿದವನಾದರೆ ಹರಿಕೆಯ ಕಾಲವನ್ನು ಹೊಸ್ತಾಗಿ ಆರಂಭಿಸ ಬೇಕಾಗಿತ್ತು. ೪ ಮೋಶೆ. ೬, ೧ ಮೊದ. ೩೦, ೪ನೇ ಮೊದಲಾದ ವಚನಗಳು. ಮೋಶೆಯ ಕಾಲದ ಮೇಲೆ ತಂದೆತಾಯಿಗಳು ಸಹಾ ಬಂದು ಕೂಸು ಹುಟ್ಟುವದಕ್ಕಿಂತ ಮುಂಚೆ ಅದು ಸಾಯುವ ತನಕ ನಸೀರಾಯ ವ್ರತವನ್ನು ಕೈಕೊಳ್ಳುವದೆಂದು ಹರಿಕೆ ಹೇಳುವ ಪದ್ಧತಿ ಉಂಟಾಯಿತು. — ನಸೀರಾಯನು ಲೋಕಕ್ಕೆ ಪ್ರತ್ಯೇಕಿಸಲ್ಪಟ್ಟು ಯೆಹೋವನಿಗೆ ಒಪ್ಪಿಸಿ ಕೊಂಡವನಾಗಿದ್ದದರಿಂದ ಪರಿಶುದ್ಧತ್ವಕ್ಕೆ ವಿರೋಧವಾದ ಲೌಕಿಕಭೋಗ ಸಂಘಗಳನ್ನೆಲ್ಲಾ ವಿಸರ್ಜಿಸುವ ಹಂಗಿನಲ್ಲಿದ್ದನು. ತಲೇ ಕೂದಲು ಬೆಳಸುವದು ಸಹಾ ಲೋಕವನ್ನು ಬಿಟ್ಟ ಗುರ್ತಾಗಿತ್ತು. ಯಾಕಂದರೆ ತಲೇ ಕೂದಲು ಕ್ಷೌರ ಮಾಡದೆ ಇರುವದು ಉಳಿದ ಜನರಿಗೆ ಅಯೋಗ್ಯವಾಗಿಯೂ ದುಃಖ ಪಡುವವರಾಗಿ ಕಾಣಿಸ ಬೇಕೆಂದಿರುವವರಿಗೆ ಮಾತ್ರ ನೇಮಕವಾಗಿಯೂ ಇತ್ತು. ನಸೀರಾಯನು ಹರಿಕೆಯನ್ನು ತೀರಿಸಿ ಲೋಕಕ್ಕೆ ತಿರುಗುವಾಗ ತಲೆಗೂದಲು ಕತ್ತರಿಸಿ ಪರಿಶುದ್ಧಸ್ಥಳದಲ್ಲಿ ಸ್ತೋತ್ರದ ಬಲಿಯ ಕೂಡಾ ಸುಡುವದು ವಾಡಿಕೆಯಾಗಿತ್ತು. ಕರ್ತನಿಗೆ ಯಾವದನ್ನಾದರೂ ಬಿಡಿಸಲ್ಪಡ ಕೂಡದ ಹಾಗೆ (ಹರಿಕೆ ಹೇಳಿ ಕೊಂಡು)

ಒಪ್ಪಿಸಿ ಕೊಟ್ಟರೆ ಅದಕ್ಕೆ ಶಾಪವೆಂದು ಹೆಸರು. ಮನುಷ್ಯರ ಮೇಲೆ ಇಂಥಾ ಶಾಪ ಬಿದ್ದರೆ ಅವರು ಬಲಾತ್ಕಾರದಿಂದ ದೇವರಿಗೆ ಒಪ್ಪಿಸಲ್ಪಟ್ಟು ದೇವರ ಶಾಸ್ತ್ರೆಯನ್ನು ಮಾನಸಾಂತರವಿಲ್ಲದ ಹೃದಯದಿಂದ ತಿರಸ್ಕರಿಸಿದ ಮೇಲೆ ದೇವರ ಶಿಕ್ಷೆಗೆ ಒಳಗಾಗಿ ನಿರ್ಮೂಲವಾಗ ಬೇಕಾಗಿತ್ತು. ೨ ಮೋಶೆ. ೨೨ನೇ ಸಂಧಿ ೨೦ನೇಯಲ್ಲಿ ೫ ಮೋಶೆ. ೧೩ನೇ ಸಂಧಿ ೧೪—೧೭ನೇ ಪರ್ಯಂತರ ವಿಗ್ರಹಾರಾಧಕರು ಮೊದಲಾದ ಅಪರಾಧಿಗಳಿಗೆ ಶಾಪವು ಬರ ಬೇಕಾಗಿತ್ತೆಂದು ತೋರುತ್ತದೆ. ವಿಶೇಷವಾದ ಶಾಪವನ್ನು ಯೆಹೋವನು ತಾನು ಕಾನಾನ್ ದೇಶದ ಪೂರ್ವ ನಿವಾಸಿಗಳಾದ ಜನಾಂಗಗಳ ಮೇಲೆ ಇಟ್ಟು ಅದರ ಪೂರೈಸುವಿಕೆಯನ್ನು ಇಸ್ರಯೇಲನವರಿಗೆ ಒಪ್ಪಿಸಿದನು. ೫ ಮೋಶೆ. ೭, ೨ನೇ ವಚ. ೨೦, ಸಂ. ೧೬—೧೮.



## § 44. ಇಸ್ರಯೇಲನವರು ಸೀನ್ಯೆ ಪರ್ವತದಿಂದ ಹೊರಟು ಹೋದದ್ದು ದುರಪೇಕ್ಷಿತರ ಸಮಾಧಿಗಳೂ, ಮಿರಿಯಾಮಳು ಮಾಡಿದ ಪಾಪವು

೧) ೪ ಮೋಶೆ. ೧—೧೦. ಇಸ್ರಯೇಲನವರು ಒಂದು ವರುಷ ಸೀನ್ಯೆ ಪರ್ವತದ ಸಮೀಪದಲ್ಲಿ ವಾಸ ಮಾಡಿದ್ದೂ ನೇಮವು ಕೊಡಲ್ಪಟ್ಟದ್ದೂ ಸಾಕ್ಷಿಗುಡಾರವು ಕಟ್ಟಿಸಲ್ಪಟ್ಟದ್ದೂ ಯಾಜಕರು ಉದ್ಯೋಗದ ವೃತ್ತಿಯನ್ನು ತೊಡಗಿಸಿದ್ದೂ ಆದ ಮೇಲೆ ಪಯಣಕ್ಕೆ ಎಲ್ಲಾ ಸಿದ್ಧ ಮಾಡಿದರು. ಯುದ್ಧಕ್ಕೆ ಆಯತ್ತರಾದ ಗಂಡಸರು ಹೊಸ್ತಾಗಿ ಎಣಿಸಲ್ಪಟ್ಟ ಮೇಲೆಯೂ ಎರಡನೇ ಪಶಾಹಬ್ಬವು ಆಚರಿಸಲ್ಪಟ್ಟ ಮೇಲೆಯೂ ಕರ್ತನು ಹೊರಡೋಣಕ್ಕೆ ಸೌಜ್ಞೆ ಮಾಡಿದನು. ೨ ಮೋಶೆ. ೪೦, ೩೬. ಹ್ಯಾಗಂದರೆ ಮೇಘವು ಸಾಕ್ಷಿಗುಡಾರದಲ್ಲಿಂದ ಏರಿ ದಂಡು ಹೋಗ ಬೇಕಾದ ದಿಕ್ಕಿನಲ್ಲಿ ಹೋಗಿ ಅದಕ್ಕೆ ಮಾರ್ಗ ತೋರಿಸಿತು. ಸಿಪ್ಪೋರಳ ಸಹೋದರನೂ ಮೋಶೆಯ ಭಾವಮೈದುನನೂ ಆದ ಹೋಬಾಬ್ ಮೋಶೆ ಬೇಡಿ ಕೊಂಡದರಿಂದ ಇಸ್ರಯೇಲಿಯರನ್ನು ಬಿಡದೆ ಕೂಡಾ ಹೊರಟು ದಂಡು ಇಳಿಸ ತಕ್ಕ ಸ್ಥಳಗಳನ್ನು ತೋರಿಸಿ ವಿಶೇಷ ಸಹಾಯ ಮಾಡಿದನು. ಯಾಕಂದರೆ ಅರಬಿಸ್ಥಾನದ ಅರಣ್ಯವು ಅವನಿಗೆ ಚೆನ್ನಾಗಿ ಗೊತ್ತಾದ ವಾಸಸ್ಥಳವಾಗಿತ್ತು.

೨) ೪ ಮೋಶೆ. ೧೧. ಒಂದು ವರುಷ ವಿಶ್ರಾಂತಿಯಾಗಿದ್ದ ಜನರು ಹೊಸ ಪಯಣದ ಆಯಾಸವನ್ನು ತಾಳಲಾರದೆ ಗುಣುಗುಟ್ಟಲಾರಂಭಿಸಿದಾಗ ಕರ್ತನ ಅಗ್ನಿ ಅ

ವರ ಮೇಲೆ ಬಿದ್ದು ದಂಡಿನ ಅಂಚಿನಲ್ಲಿರುವವರನ್ನು ಸುಟ್ಟು ಬಿಟ್ಟಿತು. ಆದರೆ ಮೋಶೆ ವಿಜ್ಞಾಪನೆ ಮಾಡುತ್ತಲೆ ಕಾಟ ನಿಂತಿತು. ಇದು ಸಂಭವಿಸಿದ ಸ್ಥಳಕ್ಕೆ ತಬೇರಾ (ಸುಡುವ ಸ್ಥಳ) ಎಂದು ಹೆಸರಾಯಿತು. ಆದಾಗ್ಯೂ ಜನರು ಈ ದಂಡನೆಯನ್ನು ಬೇಗ ಮರೆತು ಮನ್ನದ ರುಚಿಯನ್ನು ಹೇಸಿ ಮಿಚ್ರದಲ್ಲಿ ಮಾಂಸ ತಿಂದ ಹಾಗೆ ಅರಣ್ಯದಲ್ಲಿಯೂ ಮಾಂಸ ತಿನ್ನ ಬೇಕೆಂದು ಆಶಿಸಿದರು. ಮಿಚ್ರದಿಂದ ದಂಡಿನ ಸಂಗಡ ಹಾರಟು ಬಂದ ಹಾಲೆಯರು (ಫೆಲ್ಲಾ ಎಂದು ಅವರು ಈಗ ಕರಿಯಲ್ಪಡುತ್ತಾರೆ) ಈ ಪ್ರಕಾರ ಗುಣುಗುಟ್ಟಲಿಕ್ಕೆ ಆರಂಭ ಮಾಡಿದರು. ಆದರೆ ಬೇರೆ ಇಸ್ರಾಯೇಲನವರು ಬೇಗ ಅವರಿಗೆ ಒಪ್ಪಿಕೊಂಡು ಅವಿಧೇಯರಾದರು. ಆಗ ಮೋಶೆಯು ಬಹಳ ಆಯಾಸ ಪಟ್ಟು ತನ್ನ ಉದ್ಯೋಗದ ಭಾರವನ್ನು ಹಾರಲಾರೆನೆಂದು ಯೆಹೋವನಿಗೆ ಅರಿಕೆ ಮಾಡಿದನು. ಯೆಹೋವನು ಎಪ್ಪತ್ತು ಮಂದಿ ಹಿರಿಯರ ಮೇಲೆಯೂ ಮುಂಚೆ ಮೋಶೆಗೆ ಕೊಟ್ಟ ಆತ್ಮದಿಂದ ಇಟ್ಟು ಅವರನ್ನು ಅವನಿಗೆ ಸಹಾಯಕರಾಗಿ ನೇಮಿಸಿದನು. ಇಸ್ರಾಯೇಲನವರು ಮಾಂಸದ ಆಶೆಯನ್ನು ತೃಪ್ತಿಪಡಿಸುವದಕ್ಕಾಗಿ ಲಾವಕ್ಕಿಗಳು ಅಪಾರವಾಗಿ ಬಂದವು. ಜನರು ಆ ಹಕ್ಕಿಗಳನ್ನು ಕೂಡಿಸಿ ಒಣಗಿಸಿ ಮಾಂಸ ತಿನ್ನಲಾರಂಭಿಸಿದಾಗ ದೊಡ್ಡ ವ್ಯಾಧಿ ಅವರಲ್ಲಿ ಬಿದ್ದು ಹೇಳರ ಜನರನ್ನು ಒಮ್ಮೆಯೇ ಸಂಹಾರ ಮಾಡಿ ಈ ಸ್ಥಳಕ್ಕೆ ದುರಪೇಕ್ಷಿತರ ಸಮಾಧಿಗಳೆಂದು ಹೆಸರಾಯಿತು.

೩) ೪ ಮೋಶೆ. ೧೨. ಮೋಶೆಯು ಭೂಲೋಕದಲ್ಲಿರುವ ಎಲ್ಲಾ ಮನುಷ್ಯರಿಗಿಂತ ಹೆಚ್ಚಾದ ಆಯಾಸವನ್ನು ತಾಳ ಬೇಕಾಯಿತು (ಸಕಲ ಮನುಷ್ಯರಿಗಿಂತ ಅಧಿಕ ದೀನ ಮನಸ್ಸುಳ್ಳವನಾಗಿದ್ದನು). ಆರೋನನೂ ಮಿರಿಯಾಮಳೂ ಸಹಾ ಕಡೆಯಲ್ಲಿ ಅವನಿಗೆ ವಿರೋಧವಾಗಿ ಗುಣುಗುಟ್ಟಿ ತಮ್ಮ ಮುಖಾಂತ್ರವಾಗಿಯೂ ಕರ್ತನು ಮಾತಾಡುತ್ತಾನಲ್ಲವೆಂದು ಹೇಳಿದರು. ಆದರೆ ಮಿರಿಯಾಮಳು ಕುಷ್ಠರೋಗ ಹಿಡಿದವಳಾಗಿ ಹಿಮದ ಹಾಗೆ ಬಿಳುಪಾದಳು. ಮೋಶೆ ಅವಳಿಗಾಗಿ ವಿಜ್ಞಾಪನೆ ಮಾಡಿದದರಿಂದ ಅವಳು ಸ್ವಸ್ಥವಾದಳು. ಆಗ ಯೆಹೋವನು ಮೋಶೆಗೆ ಸಾಕ್ಷಿ ಕೊಟ್ಟು ಹೇಳಿದ್ದೇನಂದರೆ — ನನ್ನ ಸೇವಕನಾದ ಮೋಶೆ ನನ್ನ ಮನೆಯಲ್ಲೆಲ್ಲಾ ನಂಬಿಕೆಯುಳ್ಳವನಾಗಿದ್ದಾನೆ. ಬೇರೆ ಪ್ರವಾದಿಗಳಿಗೆ ನನ್ನನ್ನು ದರ್ಶನದ ಮುಖಾಂತ್ರ ತಿಳಿಸಿ ಅವರ ಸಂಗಡ ಸ್ವಪ್ನಗಳಲ್ಲಿ ಮಾತಾಡುವೆನು. ಆದರೆ ಈತನ ಸಂಗಡ ಮರೆಯಾಗಿ ಮಾತಾಡದೆ ಮುಖಾಮುಖಿಯಾಗಿ ಮಾತಾಡುವೆನು. ಮತ್ತು ಕರ್ತನ ಹೋಲಿಕೆಯನ್ನು ಈತನು ಕಾಣುವನು.



## § 45. ಹೊಂಚುಗಾರರು, ಕೋರಹನ ಗುಂಪು

೧) ೪ ಮೋಶೆ. ೧೩. ೧೪. ಸಂಧಿಗಳು. ಪಯಣದ ಎರಡನೇ ವರುಷದ ಆರಂಭದಲ್ಲಿ ಇಸ್ರಯೇಲನವರ ದಂಡು ಪಾರಾನ್ ಅರಣ್ಯದ ಉತ್ತರದಲ್ಲಿಯೂ ಕಾನಾನ್ ದೇಶದ ದಕ್ಷಿಣ ಪ್ರಾಂತ್ಯದಲ್ಲಿಯೂ ಇರುವ ಕಾದೇಷ್ ಬರ್ನೆಯಕ್ಕೆ ಮುಟ್ಟಿತು (ಎದೋಮಿಯರ ಘಟ್ಟಗಳು ಅಮೋರ್ಯರ ಘಟ್ಟಗಳಿಗೆ ತಗಲುವ ಮೂಲೆಯಲ್ಲಿ ಕಾದೇಷ್ ಬರ್ನೆಯವದೆ). ಮೋಶೆ ದೇವರ ಅಪ್ಪಣೆಯಿಂದ ಜನಾಂಗದ ಮಾತಿಗೆ ಒಪ್ಪಿ ಕೊಂಡು ಒಂದೊಂದು ಕುಲದಲ್ಲಿ ಒಬ್ಬೊಬ್ಬನನ್ನು ಆರಿಸಿ ತೆಗದು ಕೊಂಡು ಹನ್ನೆರಡು ಮಂದಿ ಹೊಂಚುಗಾರರನ್ನು ಕಾನಾನ್ ದೇಶಕ್ಕೆ ಕಳುಹಿಸಿದನು. ಅವರು ದೇಶವನ್ನೆಲ್ಲಾ ಸಂಚರಿಸಿ ಅದು ಫಲಭರಿತವಾದದ್ದು ಎಂಬದಕ್ಕೆ ಸಾಕ್ಷಿಗಾಗಿ ಸೆಪೆಲಾಬೈಲಿನಲ್ಲಿರುವ ಎಷ್ಕೊಲ್ ಹಳ್ಳದ ಪ್ರದೇಶದ ಒಂದು ದ್ರಾಕ್ಷೆಹಣ್ಣು ತಂದು ತೋರಿಸಿದರು. ಆದರೆ ದೇಶದಲ್ಲಿ ವಾಸಿಸುವ ಬಲಿಷ್ಠ ಜನರ ವಿಷಯವಾಗಿಯೂ ಘಟ್ಟಿಯಾದ ದುರ್ಗಗಳ ವಿಷಯವಾಗಿಯೂ ಸೈಂಥವರಾದ ಎನಾಕನ ವಂಶದವರ ವಿಷಯವಾಗಿಯೂ ಇವರ ಮುಂದೆ ನಾವು ಮಿಡಿತೆಗಳಂತೆ ಕಾಣಿಸಿದೆವು ಎಂದು ಹೇಡಿಗಳಾಗಿ ವಿವರವನ್ನು ಹೇಳಿದದರಿಂದ ವಿಶ್ವಾಸವಿಲ್ಲದ ಜನಾಂಗವು ಪೂರ್ಣ ಅಧೈರ್ಯವಾಯಿತು. ಹೊಂಚುಗಾರರಲ್ಲಿ ಇಬ್ಬರಾದ ಯೋಷುವಾ ಕಾಲೇಬರು ಮಾತ್ರ ವಿಶ್ವಾಸದಿಂದಲೂ ಧೈರ್ಯದಿಂದಲೂ ಯುದ್ಧಕ್ಕೆ ಹೋಗ ಬೇಕೆಂದು ಆಲೋಚನೆ ಹೇಳಿದದರಿಂದ ಜನಾಂಗವು ಅವರನ್ನು ಕಲ್ಲೆಸದು ಕೊಲ್ಲ ಬೇಕೆಂದು ಮನಸ್ಸು ಮಾಡಿತು. ಆಗ ಯೆಹೋವನು ಎರಡನೇ ಸಾರಿ ನಿನಗೆ ಆಶೀರ್ವಾದವನ್ನೆಲ್ಲಾ ಬಾಧ್ಯವಾಗಿ ಕೊಡುತ್ತೇನೆಂದು ಮೋಶೆಗೆ ಹೇಳಲು, ಇವನು ತಿರಿಗಿ ಮಧ್ಯಸ್ಥಗಾರನಿಗೆ ತಕ್ಕ ಹಾಗೆ ಸ್ವಾರ್ಥವಿಲ್ಲದೆ ತನ್ನನ್ನು ನಂಬಿಕೆಯುಳ್ಳವನಾಗಿ ತೋರಿಸಿದನು. ಆದದರಿಂದ ಯೆಹೋವನು ಇಸ್ರಯೇಲನವರನ್ನು ತಳ್ಳಿ ಬಿಡದೆ ಅವರ ಪಾಪಕ್ಕೆ ತಕ್ಕ ಶಿಕ್ಷೆಯನ್ನು ನಿರ್ಣಯಿಸಿದನು. ಅದೇನಂದರೆ ಯೋಷುವಾ ಕಾಲೇಬರು ಅಲ್ಲದೆ ಇಪ್ಪತ್ತು ವರುಷದ ಪ್ರಾಯದವರಾಗಿ ಮಿಚ್ರ ದೇಶವನ್ನು ಬಿಟ್ಟು ಬಂದು ದೇವರ ಮಹಾ ಕ್ರಿಯೆಗಳನ್ನು ಕಂಡವರೆಲ್ಲರು ವಾಗ್ದತ್ತದೇಶದಲ್ಲಿ ಶೇರದೆ ಅರಣ್ಯದಲ್ಲಿ ಸಾಯ ಬೇಕು. ಹೊಂಚುಗಾರರು ದೇಶವನ್ನು ಸಂಚರಿಸಿದ ೪೦ ದಿವಸಗಳಿಗೆ ಪ್ರತಿಯಾಗಿ ಜನಾಂಗವು ೪೦ ವರುಷ ಅರಣ್ಯದಲ್ಲಿ ತಿರುಗಾಡ ಬೇಕು. ಇದನ್ನು ಅವರು ಕೇಳಿದ ಮೇಲೆ ಯುದ್ಧಕ್ಕೆ ಹೋಗ ಬೇಕೆಂದು ಮನಸ್ಸು ಮಾಡಿದರು. ಆದರೆ ಅವರಿಗೆ ಅಪ್ಪಣೆ ಶಿಕ್ಕಲಿಲ್ಲ. ಮತ್ತು ಅವರು ಅಪ್ಪಣೆಯಿಲ್ಲದೆ ಯುದ್ಧಕ್ಕೆ ಹೋದಾಗ ಪೂರ್ಣ ಅಪಜಯವಾದರು.

೨) ೪ ಮೋಶೆ. ೧೬ — ೧೭. ಮೋಶೆ ದೇವರ ಶಿಕ್ಷೆಯ ಮಾತನ್ನು ಇಸ್ರಯೇಲನವರಿಗೆ ಪ್ರಕಟ ಮಾಡಿದ ಮೇಲೆ ರೂಬೆನ್ ಕುಲದವರಾದ ದಾಥಾನನೂ ಅಬಿರಾಮನೂ ಕಾಹತ್ ಗೋತ್ರದವನಾದ ಕೋರಹನೂ ಕಲಹ ಎಬ್ಬಿಸಿದರು. ರೂಬೇನನವರು ರಾಜ್ಯಾಧಿಕಾರವನ್ನೂ ಕಾಹಾತನವನು ಪ್ರಧಾನಯಾಜಕತ್ವವನ್ನೂ ಪಡಕೊಳ್ಳುವ ಆಲೋಚನೆಯಲ್ಲಿದ್ದರೆಂದು ತೋರುತ್ತದೆ. ಮೋಶೆ ವ್ಯಾಜ್ಯದ ನಿರ್ಣಯವನ್ನು ಕರ್ತನಿಗೆ ಒಪ್ಪಿಸಿದನು ಕೋರಾಹನು ಧೂಪಾರ್ಪಣೆ ಮಾಡುವಾಗ ಬೆಂಕಿ ಕರ್ತನ ಬಳಿಯಿಂದ ಹೊರಟು ಅವನನ್ನೂ ಅವನ ಗುಂಪಿನವರನ್ನೂ ತಿಂದು ಬಿಟ್ಟಿತು. ಉಳಿದ ಕಲಹಗಾರರನ್ನು ಭೂಮಿಯು ಬಿರಿದು ನುಂಗಿ ಬಿಟ್ಟಿತು. ಮರುದಿವಸದಲ್ಲಿ ಕಲಹಪ್ರಿಯವಾದ ಜನಾಂಗವು ಮೋಶೆಗೂ ಆರೋನನಿಗೂ ವಿರೋಧವಾಗಿ ಗುಂಪುಗುಟ್ಟಿ ನೀವು ಕರ್ತನ ಜನಾಂಗವನ್ನು ಕೊಂದು ಹಾಕಿದಿರಿ ಎಂದು ದೂರು ಹೇಳಿದರು. ಮೊಶೆಯೂ ಆರೋನನೂ ಸಾಕ್ಷಿಗುಡಾರಕ್ಕೆ ಓಡಿ ಹೋಗಲು ಮೇಘವು ಅವರನ್ನು ಮುಚ್ಚಿತು. ಮತ್ತು ಕರ್ತನ ಮಹಿಮೆಯು ಪ್ರತ್ಯಕ್ಷವಾಗಿ ನೀವು ಈ ಸಭೆಯನ್ನು ಅಗಲಿರಿ, ನಾನು ಅವರನ್ನು ಬೇಗನೆ ಸಂಹರಿಸುತ್ತೇನೆಂದು ಕರ್ತನು ಹೇಳಿದನು. ಆದರೆ ಆರೋನನು ಮೋಶೆಯ ಅಪ್ಪಣೆಯಿಂದ ತ್ವರಿತವಾಗಿ ಧೂಪವರ್ಗಗಳನ್ನು ಧೂಪಾರ್ತಿಯಲ್ಲಿ ಹಾಕಿ ಸಭೆಯ ಮಧ್ಯದಲ್ಲಿ ಹೊಕ್ಕು ಅವರಿಗೆ ವಿಮೋಚನೆ ಮಾಡಲಾರಂಭಿಸಿದನು. ವ್ಯಾಧಿಯು ಆಗಲೇ ಆರಂಭಿಸಿತ್ತು. ಆದರೆ ಆರೋನನು ಜೀವಿತರಿಗೂ ಸತ್ತವರಿಗೂ ಮಧ್ಯದಲ್ಲಿ ಧೂಪಾರ್ಪಣೆ ಮಾಡಿ ಬರಲು ೧೪೭೦೦ ಜನರನ್ನು ಸಂಹರಿಸಿದ ವ್ಯಾಧಿಯು ನಿಂತಿತು. ಮತ್ತು ಆರೋನನ ಕೈಯಲ್ಲಿ ಹೂವರಳಿದ ಬಾದಾಮಿ ಚಿಗುರು ಕರ್ತನು ಯಾಜಕತ್ವಕ್ಕೆ ನೇಮಿಸಿದವನು ಯಾರೆಂದು ಪೂರ್ಣ ನಿಶ್ಚಯದಿಂದ ತೋರಿಸಿತು. ಅದು ನಿತ್ಯ ನೆನಪಿಗಾಗಿ ಪರಿಶುದ್ಧದರಲ್ಲಿರುವ ಒಡಂಬಡಿಕೆಯ ಪೆಟ್ಟಿಗೆಯ ಹತ್ತರ ಇಡಲ್ಪಟ್ಟಿತು.



## § 46. ಮೂವತ್ತೆಂಟು ವರುಷದ ತಿರುಗಾಟ, ಝಗಳದ ನೀರು ಆರೋನನ ಮರಣ, ಕಂಚಿನ ಹಾವು

೧) ಮೂವತ್ತೆಂಟು ವರುಷದ ವರೆಗೂ ಇಸ್ರಯೇಲನವರು ಕರ್ತನಿಂದ ತಿರಸ್ಕರಿಸಲ್ಪಟ್ಟವರಾಗಿ ಅರಣ್ಯದಲ್ಲಿ ಅಲೆಯುತ್ತಾ ಇದ್ದರು. ಈ ಕಾಲದ ಚರಿತ್ರವು ಪರಿಶುದ್ಧ ಬರಹಗಳಲ್ಲಿ ಬರದಿರುವದಿಲ್ಲ. ದೇವರ ರಾಜ್ಯದ ಒಡಂಬಡಿಕೆ ನಿರರ್ಥಕವಾ

ದ ಕಾಲದ ಸಂಗತಿಗಳನ್ನು ದೇವರಾಜ್ಯದ ಚರಿತ್ರವು ವಿವರಿಸುವದಿಲ್ಲ. ಇಸ್ರಾಯೇಲ ನವರು ಒಡಂಬಡಿಕೆಯ ಗುರ್ತಾದ ಪರಿಚ್ಛೇದನೆಯ ನೇಮವನ್ನು ಬಿಟ್ಟು, ಕರ್ತನ ಸಬ್ಬತ್ತುಗಳನ್ನು ಅಶುದ್ಧ ಮಾಡಿ ಅವನ ನ್ಯಾಯಗಳನ್ನು ಅಲಕ್ಷಿಸಿ ಅವನ ಕಟ್ಟಳೆಗಳನ್ನು ಮೀರುತ್ತಾ ಇದ್ದರು. (ಹೆಜ್. ೨೦.) ಅವರು ಹೋಮಗಳನ್ನೂ ಆಹಾರಬಲಿಗಳನ್ನೂ ಅರ್ಪಿಸದೆ ಮೋಲೋಕನ ಗುಡಾರವನ್ನೂ ರೆಂಫನ್ ಎಂಬ ದೇವ್ವದ ನಕ್ಷತ್ರವನ್ನೂ (ಶನಿ) ತಾವು ರಚಿಸಿದ ವಿಗ್ರಹಗಳನ್ನೂ ಅಂಗೀಕರಿಸಿ ಆರಾಧಿಸುತ್ತಾ ಇದ್ದರು. ಅಪ್.ಕ್ರಿ. ೭. ೪೩. ಆಮೋಸ್ ೫, ೨೫, ೨೬. ಆದಾಗ್ಯೂ ಕರ್ತನು ತಾನು ತಿರಸ್ಕರಿಸಿದವರ ಮೇಲೆ ಕರುಣೆ ಇಟ್ಟು ಅವರನ್ನು ಪೂರ್ಣವಾಗಿ ನಾಶ ಮಾಡುವ ಕೋಪವನ್ನು ಹಿಂದೆಳೆದು ಅವರನ್ನು ಮನ್ನಾ ತಿನ್ನಿಸಿ ಬಂಡೆಯ ನೀರು ಅವರಿಗೆ ಕುಡಿಯ ಕೊಡುತ್ತಾ ಇದ್ದನು.

೨) ೪ ಮೋಶೆ. ೨೦, ೧—೧೩. ನಾಲ್ವತ್ತನೇ ವರುಷದ ಮೊದಲನೇ ತಿಂಗಳಿನಲ್ಲಿ ಇಸ್ರಾಯೇಲನವರ ದಂಡು ಎರಡನೇ ಸಾರಿ ಕಾನಾನ್ ದೇಶದ ತೆಂಕಣಕಡೆಯಲ್ಲಿರುವ ಕಾದೇಷಿಗೆ ಬಂತು. ಕರ್ತನು ತಳ್ಳಿದ ವಂಶವು ಆಗಲೇ ಸ್ವಲ್ಪ ಕಡಿಮೆಯಾಗಿ ಸತ್ತು, ಹೊಸ ವಂಶವು ಅರಣ್ಯದಲ್ಲಿ ಬೆಳದಿತ್ತು. ಈ ಕಾಲದಲ್ಲಿ ಇಸ್ರಾಯೇಲನವರ ಚರಿತ್ರವು ಪರಿಶುದ್ಧ ಬರಹದಲ್ಲಿ ತಿರಿಗಿ ಕಾಣಲಾರಂಭಿಸುತ್ತದೆ. ನೀರು ದೊರಕದೆ ಇದ್ದದರಿಂದ ಜನರು ಗುಣುಗುಟ್ಟಲು ಕರ್ತನು ಮೋಶೆಗೆ ಪರಿಶುದ್ಧಸ್ಥಳದಲ್ಲಿ ಇಟ್ಟ ಕೋಲು ಹಿಡಿದು ಬಂಡೆಗೆ ಮಾತು ಹೇಳ ಬೇಕೆಂದು ಆಜ್ಞಾಪಿಸಿದನು. ಆದರೆ ಮೋಶೆ ಜನರ ಹಟಕ್ಕೆ ಕೋಪಿಸಿ ಕೊಂಡು ವಿಶ್ವಾಸದ ನಿಶ್ಚಯದಿಂದ ಹುಟ್ಟುವ ದೃಢವಾದ ಶಾಂತಿಯನ್ನು ಮರೆತು ಬಂಡೆಗೆ ಮಾತು ಹೇಳ ಬೇಕೆಂದು ಕರ್ತನು ಆಜ್ಞಾಪಿಸಿದ ಪ್ರಕಾರ ಮಾಡದೆ ಜನರನ್ನು ಸಿಟ್ಟಿನಿಂದ ಘಟ್ಟಿಯಾಗಿ ಗದರಿಸಿ (೧೦೬ ಕೀರ್ತನೆ ೩೩) ತಾಳ್ಮೆಯನ್ನು ಬಿಟ್ಟು ಬಂಡೆಯನ್ನು ಕೋಲಿನಿಂದ ಎರಡು ಸಾರಿ ಬಡದನು. ಈ ಪ್ರಕಾರ ಮೋಶೆ ನಂಬಿಕೆಯ ದೃಢವನ್ನು ಕೈಕೊಳ್ಳದೆ ತಪ್ಪು ಮಾಡಿದದರಿಂದ ನ್ಯಾಯತೀರ್ವಿಕೆ ದೇವರ ಮನೆಯಲ್ಲಿ ಆರಂಭಿಸುವದೆಂಬ ನೇಮದ ಪ್ರಕಾರ (೧ ಪೇತ್ರ. ೪. ೧೭) ಕರ್ತನು ಅವನಿಗೆ ತೀರ್ಪು ಮಾಡಿ ಜನಾಂಗವನ್ನು ವಾಗ್ದತ್ತದೇಶದಲ್ಲಿ ಸೇರಿಸ ಬಾರದೆಂದು ನಿರ್ಣಯಿಸಿದನು. ಅದೇ ಶಿಕ್ಷೆ ಅವನ ಅಣ್ಣನಾದ ಆರೋನನ ಮೇಲೆ ಬಿತ್ತು. ಯಾಕಂದರೆ ಇವನು ಸಹಾ ಮೋಶೆಯ ಪ್ರಕಾರ ಆ ದಿವಸದಲ್ಲಿ ವಿಶ್ವಾಸವನ್ನು ಕೈಕೊಳ್ಳದೆ ಚಂಚಲನಾದನು. ಇದು ಸಂಭವಿಸಿದ ಸ್ಥಳಕ್ಕೆ ಝುಗಳದ ನೀರು ಎಂದು ಹೆಸರಾಯಿತು.

೩) ೪ ಮೋಶೆ. ೨೦, ೧೪—೨೧, ಸಂ. ೯ ವರೆಗೆ. ದಕ್ಷಿಣ ಕಡೆಯಿಂದ ವಾಗ್ದತ್ತದೇಶದಲ್ಲಿ ಪ್ರವೇಶ ಮಾಡುವದಕ್ಕೆ ಮಾರ್ಗವು ದೊರಕದೆ ಇದ್ದದರಿಂದಲೂ ಮೂಡ್ಲ ಕಡೆಯಿಂದ ಪ್ರವೇಶ ಮಾಡುವದಕ್ಕಾಗಿ ಎದೋಮ್ಯರ ಸೀಮೆಯನ್ನು ದಾಟಲವಶ್ಯವಾಗಿದ್ದದರಿಂದಲೂ ಇಸ್ರಯೇಲನವರ ಪಯಣಕ್ಕೆ ಈಗ ಆತಂಕ ಹುಟ್ಟಿತು. ಎದೋಮ್ಯರು ಇಸ್ರಯೇಲನವರಿಗೆ ತಮ್ಮ ದೇಶವನ್ನು ದಾಟಲಿಕ್ಕೆ ಅಪ್ಪಣೆ ಕೊಡದೆ ಯುದ್ಧಸನ್ನಾಹ ಮಾಡಿಕೊಂಡು ಅವರೆದುರಿಗೆ ಬಂದರು. ಸಹಜಾತರಾದ ಎದೋಮ್ಯರಿಗೆ ಯುದ್ಧ ಮಾಡುವದು ಆಗದೆಂದು ಇಸ್ರಯೇಲನವರು ತಿರಿಗಿ ದಕ್ಷಿಣ ಕಡೆಗೆ ಹೋಗಿ ಎದೋಮ್ಯರ ಪಟ್ಣಗಳನ್ನು ಸುತ್ತಿಕೊಳ್ಳ ಬೇಕಾಗಿತ್ತು. ಆರೋನನು ಕಾದೇಷಿಗೆ ದೂರವಾಗಿರದ ಹೋರ್ ಪರ್ವತದಲ್ಲಿ ಸತ್ತನು. ಅವನು ಸಾಯುವದಕ್ಕಿಂತ ಮುಂಚೆ ಮೋಶೆ ದೇವರ ಅಪ್ಪಣೆಯ ಪ್ರಕಾರ ಹೋರ್ ಪರ್ವತದಲ್ಲಿ ಪ್ರಧಾನಯಾಜಕವಸ್ತ್ರಗಳನ್ನು ಅವರಿಂದ ತೆಗದು ಕೊಂಡು ಅವನ ಹಿರೇ ಮಗನಾದ ಯೆಲಿಯಾಜರನಿಗೆ ಕೊಡಿಸಿದನು. ಇಸ್ರಯೇಲನವರ ಸಭೆ ಆರೋನನ ಮರಣಕ್ಕೆ ಮೂವತ್ತು ದಿವಸ ಪರ್ಯಂತರ ಶೋಕ ಗೈದರು. ಅಷ್ಟರೊಳಗೆ ಆರಾದ್ದದ ಅರಸನು ಅಮೋರ್ಯರ ಪಟ್ಣಗಳ ತೆಂಕಣ ಕಡೆಯಿಂದ ಅವರ ಮೇಲೆ ಬಿದ್ದು, ಕೆಲವರನ್ನು ಕೈಶೆರೆಯಾಗಿ ಪೈದನು. ಆದರೆ ಕರ್ತನು ಶತ್ರುಗಳನ್ನು ಇಸ್ರಯೇಲನವರ ಕೈಗೆ ಒಪ್ಪಿಸಿದದರಿಂದ ಇವರು ಅವರನ್ನು ಜೈಸಿ ಅವರನ್ನೂ ಅವರ ಪಟ್ಣಗಳನ್ನೂ ನಿರ್ಮೂಲ ಮಾಡಿದರು. ಅನಂತರ ದಂಡು ಹೋರ್ ಪರ್ವತದ ಬಳಿಯಿಂದ ಹೊರಟು ಎಲಾನಿಕ ಸಮುದ್ರದ ಕಡೆಗೆ ಪಯಣ ಮಾಡಿತು. ಮಾರ್ಗದಲ್ಲಿ ಜನರು ದಣಿದು ದೇವರಿಗೂ ಮೋಶೆಗೂ ವಿರೋಧವಾಗಿ ಗುಣುಗುಟ್ಟಿ ಮನ್ನ ಎಂಬ ಈ ಹೀನ ಆಹಾರಕ್ಕೆ ಹೇಸುತ್ತೇವೆ ಅಂದರು. ಆದದರಿಂದ ಯೆಹೋವನು ಉರಿಯುವ ಹಾವುಗಳನ್ನು ಕಳುಹಿಸಿದನು. ಇವು ಕಡಿದವರೆಲ್ಲರೂ ಸಾಯುತ್ತಾ ಇರಲಾಗಿ, ಜನರು ತಮ್ಮ ಅಪರಾಧವನ್ನು ತಿಳುಕೊಂಡು ತಮಗಾಗಿ ವಿಜ್ಞಾಪನೆ ಮಾಡ ಬೇಕೆಂದು ಮೋಶೆಯನ್ನು ಬೇಡಿ ಕೊಂಡರು. ಆಗ ಮೋಶೆ ಕಂಚಿನ ಹಾವು ಎತ್ತಿದನು. ಹಾವು ಕಡಿದ ಮೇಲೆ ಆ ಹಾವು ದೃಷ್ಟಿಸುವವರೆಲ್ಲರು ಸಾಯದೆ ಬದುಕುತ್ತಿದ್ದರು.

ಪರಿಶಿಷ್ಟ. ಯೇಸುವು ಯೋಹಾನ್ ೩, ೧೪ನೆಯಲ್ಲಿ ಮೋಶೆ ಅರಣ್ಯದಲ್ಲಿ ಹಾವನ್ನು ಎತ್ತಿದ್ದು ತಾನು ಹಳೇ ಹಾವು ಕಡಿದ ಮನುಷ್ಯರನ್ನು ಪಾಪದಿಂದಲೂ ಮರಣದಿಂದಲೂ ರಕ್ಷಿಸುವದಕ್ಕಾಗಿ ಕ್ರೂಜೆಯಲ್ಲಿ ಎತ್ತಲ್ಪಡೋಣಕ್ಕೆ ಮುಂಗುರ್ತಾಗಿತ್ತೆಂದು ಹೇಳುತ್ತಾನೆ. ಮೋಶೆ ಅರಣ್ಯದಲ್ಲಿ ಹ್ಯಾಗೆ ಸರ್ಪವನ್ನು ಎತ್ತಿದನೋ ಹಾಗೆಯೇ

ಮನುಷ್ಯನ ಮಗನು ತನ್ನಲ್ಲಿ ವಿಶ್ವಾಸವಿಡುವವರೆಲ್ಲರು ನಾಶವಾಗದೇ ನಿತ್ಯ ಜೀವವನ್ನು ಹೊಂದುವ ಹಾಗೆ ಎತ್ತಲ್ಪಡ ಬೇಕು.



## § 47. ಮೂಡಣ ದೇಶವನ್ನು ಸ್ವತಂತ್ರಿಸಿ ಕೊಂಡದ್ದು. ಬಿಲೆಯಾಮನು

೧) ೪ಮೋಶೆ. ೨೧ ಸಂ. ೧೦ — ೩೫. ಇಸ್ರಯೇಲನವರು ಎದೋಮ್ಯರ ಘಟ್ಟಗಳ ಮೂಡಣ ಕಡೆಗೆ ಬಂದಾಗ ಎದೋಮ್ಯರು ಬಹಳವಾಗಿ ಭಯ ಪಟ್ಟು ಆ ಪ್ರಾಂತ್ಯದಲ್ಲಿ ದುರ್ಗಗಳು ಇಲ್ಲದೆ ಇದ್ದದರಿಂದ ಇಸ್ರಯೇಲನವರ ದಂಡಿನ ಪಯಣಕ್ಕೆ ತಡೆ ಹಾಕಲಿಲ್ಲ. ಆದದರಿಂದ ದಂಡು ಅಭ್ಯಂತರವಿಲ್ಲದೆ ಮೋವಾಬ್ಯರ ಪ್ರಾಂತ್ಯದಲ್ಲಿ ಇರುವ ಅಬರಿಮ್ ಪರ್ವತದ ವರೆಗೂ ಬಂತು. ಮೋವಾಬ್ಯರಿಗೂ ಇಸ್ರಯೇಲನವರು ಶತ್ರುತ್ವ ಮಾಡ ಕೂಡದಿದ್ದರು. ಆದರೆ ಸ್ವಲ್ಪ ಕಾಲಕ್ಕೆ ಮುಂಚೆ ಅಮೋರ್ಯರು ಪಶ್ಚಿಮ ದಿಕ್ಕಿನಿಂದ ಬಂದು ಯೊರ್ದಾನಿನ ಮೂಡಣ ದೇಶವನ್ನು ಹೊಕ್ಕು ಅರ್ನೊನ್ ಹೊಳೆಗೂ ಯಾಬ್ಬೊಕ್ ಹೊಳೆಗೂ ಮಧ್ಯದಲ್ಲಿರುವ ದೇಶವನ್ನೆಲ್ಲಾ ಮೋವಾಬ್ಯರ ಕೈಯಿಂದಲೂ ಅಮ್ಮೋನ್ಯರ ಕೈಯಿಂದಲೂ ಕಸಕೊಂಡು ತಮಗೆ ವಶ ಮಾಡಿಕೊಂಡಿದ್ದರು. ಯೊರ್ದಾನಿನ ಮೂಡಣ ಸೀಮೆ ಸಹಾ ತಮಗೆ ನೇಮಕವಾಗಿದೆಂದು ಇಸ್ರಯೇಲನವರು ತಿಳಿಯದೆ ಆಗ ಮೋವಾಬ್ಯರ ದೇಶಕ್ಕೆ ಉತ್ತರ ಪ್ರಾಂತ್ಯವಾದ ಅರ್ನೊನ್ ಹಳ್ಳಕ್ಕೆ ಬಂದ ಮೇಲೆ ದಂಡು ಇಳಿಸಿ ಅಮೋರ್ಯರ ಅರಸನಾದ ಸೀಹೋನನ ಬಳಿಗೆ ದೂತರನ್ನು ಕಳುಹಿಸಿ, ತನ್ನ ದೇಶವನ್ನು ಸಮಾಧಾನವಾಗಿ ಹಾದು ಹೋಗುವದಕ್ಕೆ ಅಪ್ಪಣೆ ಕೊಡ ಬೇಕೆಂದು ಬೇಡಿ ಕೊಂಡರು. ಸೀಹೋನನು ಅವರಿಗೆ ಖಡ್ಗದಿಂದ ಉತ್ತರ ಕೊಡುವದಕ್ಕೆ ಬರಲು ಇಸ್ರಯೇಲನವರು ಪರಕುಲದವನಾದ ಅರಸನ ಸಂಗಡ ಅಂಜದೆ ಯುದ್ಧ ಮಾಡಿ ಅವನ ಸೈನ್ಯವನ್ನು ಹೊಡದು, ಅರ್ನೊನ್ ಯಾಬ್ಬೊಕ್ ನದಿಗಳ ಮಧ್ಯದಲ್ಲಿರುವ ದೇಶವನ್ನೆಲ್ಲಾ ಸ್ವತಂತ್ರಿಸಿ ಕೊಂಡು, ನಿವಾಸಿಗಳನ್ನು ನಿರ್ಮೂಲ ಮಾಡಿ ಕೊಳ್ಳೆಯನ್ನು ಹಂಚಿ ಕೊಂಡರು. ಆ ಬಳಿಕ ದಂಡು ಯಾಬ್ಬೊಕ್ ನದಿಯನ್ನು ದಾಟಿ ಉತ್ತರ ಕಡೆಗೆ ಪಯಣ ಮಾಡಲು ಸೈಂಧವನಾದ ಓಗ್ ಎಂಬ ಬಾಷಾನಿನ ಅರಸನು ಯುದ್ಧಸನ್ನಾಹ ಮಾಡಿ ಕೊಂಡು, ಇಸ್ರಯೇಲನವರೆದುರಿಗೆ ಬಂದನು. ಆದರೆ ಇಸ್ರಯೇಲನವರು ಯೆದ್ರೇಯಿಯಲ್ಲಿ ಅವನನ್ನು ಹೊಡದು ಅವನನ್ನೂ ಅವನ ಪ್ರಜೆಗಳೆಲ್ಲರನ್ನೂ ನಿರ್ಮೂಲ ಮಾಡಿ ಕೊಳ್ಳೆಯನ್ನು ಹಂಚಿ ಕೊಂಡು ಸ್ವತಂತ್ರಿಸಿ ಕೊಂಡ ದೇಶದಲ್ಲಿ ವಸ್ತಿಯಾದರು.

೨) ೪ ಮೋಶೆ. ೨೨. ಇಸ್ರಯೇಲನವರ ದಂಡು ಮೋವಾಬಿನ ಬೈಲಿನಲ್ಲಿ ಯೆರಿಖೋ ಪಟ್ಟಣಕ್ಕೆದುರಾಗಿ ಇಳಿಯಿತು. ಈ ಸ್ಥಳದಿಂದ ಇಸ್ರಯೇಲನವರು ಹೊರಟು ಯೊರ್ದಾನ್ ನದಿಯನ್ನು ದಾಟಲಿಕ್ಕೆ ಆಲೋಚನೆ ಮಾಡಿದಾಗ ಮೋವಾಬ್ಯರ ಅರಸನಾದ ಬಾಲಾಕನು ನೆರೆಯವರಾದ ಮಿದ್ಯಾನಿಯರ ಸಂಗಡ ಇಸ್ರಯೇಲನವರಿಗೆ ವಿರೋಧವಾಗಿ ಒಡಂಬಡಿಕೆ ಮಾಡಿ ಕೊಂಡನು. ಆದರೆ ಸ್ವಂತ ದೇವತೆಗಳ ಬಲವು ಸಾಲದೆಂದು ಎಣಿಸಿ ಪ್ರಖ್ಯಾತಿಯಾದ ಮಂತ್ರಗಾರನಾಗಿರುವ ಮೆಸೊಪೊತಾಮ್ಯದವನಾದ (ದ್ವಾಬಿನವನಾದ) ಬಿಲೆಯಾಮಿನ ಸಹಾಯವನ್ನು ಹುಡುಕಿದನು. ಇವನು ಯೆಹೋವನ ಪ್ರವಾದಿ ಎಂದು ಹೆಸರ್ಗೊಂಡವನಾಗಿದ್ದನು. ಮುಂಚೆ ಇಸ್ರಯೇಲನವರಿಗೆ ಸಹಾಯಕನಾಗಿದ್ದ ಯೆಹೋವನು ಅವರನ್ನು ಕೈ ಬಿಟ್ಟರೆ ತಾನು ಗೆಲ್ಲಬಹುದೆಂದು ಬಾಲಾಕನು ನೆನಸಿ ಕೊಂಡು ದೂತರನ್ನು ಬಹು ಬೆಲೆಯುಳ್ಳ ಕಾಣಿಕೆಗಳ ಸಹಿತ ಬಿಲೆಯಾಮನ ಬಳಿಗೆ ಕಳುಹಿಸಿದನು. ಆದರೆ ಯೆಹೋವನು ಬಿಲೆಯಾಮನಿಗೆ ನೀನು ಅವರ ಸಂಗಡ ಹೋಗಲೂ ಆ ಜನಾಂಗವನ್ನು ಶಪಿಸಲೂ ಬಾರದು ಯಾಕಂದರೆ ಅದು ಆಶೀರ್ವದಿಸಲ್ಪಟ್ಟದೆ ಎಂದು ಅಪ್ಪಣೆ ಕೊಟ್ಟದರಿಂದ ಬಿಲೆಯಾಮನು ಅವರನ್ನು ಸುಮ್ಮನೇ ಕಳುಹಿಸಿ ಬಿಟ್ಟನು. ಬಾಲಾಕನು ಹೆಚ್ಚು ಘನವುಳ್ಳ ದೂತರನ್ನೂ ಹೆಚ್ಚು ಬೆಲೆಯುಳ್ಳ ಕಾಣಿಕೆಗಳನ್ನೂ ಎರಡನೇ ಸಾರಿ ಕಳುಹಿಸಿದನು. ಎರಡು ಹೃದಯವುಳ್ಳ ಬಿಲೆಯಾಮನು ಎಲ್ಲಾ ನೋಡಿ ಬಾಲಾಕನಿಗೆ ಸಮ್ಮತಿಯಾಗ ಬೇಕೆಂದು ಅಪೇಕ್ಷಿಸಲಾರಂಭಿಸಿದನು. ಮತ್ತು ಇಗೋ ಯೆಹೋವನು ದೂತರ ಸಂಗಡ ಹೋಗುವದಕ್ಕೆ ಅಪ್ಪಣೆ ಕೊಡುತ್ತಾನೆ. ಆದರೆ ನಾನು ನಿನಗೆ ಹೇಳುವದನ್ನು ಮಾಡಬೇಕೆಂದು ಆಜ್ಞಾಪಿಸುತ್ತಾನೆ. ಅಂದಿನಿಂದ ಮಂತ್ರಗಾರನ ಅಶುದ್ಧ ಮನಸ್ಸಿನಲ್ಲಿ ಬಾಲಾಕನ ಚಿಂಗಾರ ಮಾನಾದಿಗಳ ಮೇಲೆ ಹುಟ್ಟಿದ ಆಶೆ ಹೆಚ್ಚು ಹೆಚ್ಚಾಯಿತು. ಆದದರಿಂದ ಕರ್ತನ ಕೋಪವು ಅವನು ಬಾಲಾಕನ ಬಳಿಗೆ ಹೊರಟು ಹೋದದ್ದಕ್ಕೆ ಎದ್ದಿತು ಮತ್ತು ಪಯಣದಲ್ಲಿ ಆದದ್ದೇನಂದರೆ ಬಿಚ್ಚುಕತ್ತಿ ಕೈಯಲ್ಲಿ ಹಿಡಿದ ಕರ್ತನ ದೂತನು ಮಾರ್ಗದಲ್ಲಿ ನಿಂತು ಬಿಲೆಯಾಮನನ್ನು ತಡೆದನು. ಇವನು ಏನೂ ನೋಡದೆ ಇರಲು, ಅವನು ಕೂತ ಹೆಣ್ಣು ಕತ್ತೆ ದೂತನನ್ನು ಕಂಡು ಹೆದರಿ ಕೊಂಡು ವಾರೆಗೆ ಹೋಯಿತು. ಬಿಲೆಯಾಮನು ಎಷ್ಟು ಪೆಟ್ಟು ಹೊಡದರೂ ಕತ್ತೆ ಮುಂದೆ ನಡಿಯಲಾರದೆ ನೆಲಕ್ಕೆ ಬಿತ್ತು. ಆಗ ಬಿಲೆಯಾಮನ ಕೋಪವು ಘೋರವಾಗಿ ಉರಿಯಲು ಕರ್ತನು ಕತ್ತೆಯ ಬಾಯಿ ತೆರೆದು ಅದನ್ನು ಮಾತಾಡಿಸಿದನು. ಬಿಲೆಯಾಮನು ಅದು ಮನುಷ್ಯಶಬ್ದದಿಂದ (೨ಪೇತ್ರ. ೨. ೧೫—೧೬.) ಮಾತಾಡಿ ಗೋಳಾಡುವದನ್ನು ಕೇಳಲು ಕರ್ತನು ಅವನ ಕಣ್ಣು ತೆರದದರಿಂದ ಅವನು ಕರ್ತನ ದೂತನನ್ನು ಕಂಡು ಅವನು ಗದರಿಸುವ

ಮಾತುಗಳನ್ನು ಕೇಳಿದನು. ಆಗ ಬಿಲೆಯಾಮನು ನಾನು ಪಾಪ ಮಾಡಿದೆನೆಂದು ಅರಿಕೆ ಮಾಡಿ ಅರ್ಧ ಹೃದಯದಿಂದ ದೇವರಿಗೆ ವಿಧೇಯನಾಗಲಿಕ್ಕೆ ಮನಸ್ಸು ಮಾಡಿ, ನಿನ್ನ ಚಿತ್ತವಾದರೆ ನಾನು ತಿರಿಗಿ ಹೋಗುತ್ತೇನೆಂದು ಹೇಳಿದನು. ಆದರೆ ಈಗ ಕರ್ತನು ಅವನಿಗೆ ಮುಂದೆ ಹೋಗು ಎಂದು ಆಜ್ಞಾಪಿಸುತ್ತಾನೆ.

೩) ೪ ಮೋಶೆ. ೨೩ — ೨೫ ವರೆಗೆ. ಬಾಲಾಕನು ಬಿಲೆಯಾಮನನ್ನು ಬಾಳನ ಗುಡ್ಡಕ್ಕೆ ಕರ ಕೊಂಡು ಹೋಗಿ, ಇಸ್ರಾಯೇಲನವರ ದಂಡು ತೋರಿಸಿದನು. ಆದರೆ ಬಿಲೆಯಾಮನು ಶಪಿಸುವದಕ್ಕಾಗಿ ಬಂದರೂ ದೇವರ ಆಜ್ಞೆಯ ಪ್ರಕಾರ ಆಶೀರ್ವದಿಸಬೇಕಾಯಿತು. ಇದಕ್ಕೆ ಬಾಲಾಕನು ಆಶ್ಚರ್ಯ ಪಟ್ಟು ಕೋಪಿಸಿ ಕೊಂಡು, ಅವನನ್ನು ಪಿಸ್ಗ ಗುಡ್ಡದ ತುದಿಗೆ ಕರಕೊಂಡು ಹೋಗಲು ಬಿಲೆಯಾಮನು ತಿರಿಗಿ ಆಶೀರ್ವಾದವನ್ನೇ ಉಚ್ಚರಿಸಿದನು. ಕಡೆಯಲ್ಲಿ ಅವನನ್ನು ಪೇಯಾರ್ ಪರ್ವತಕ್ಕೆ ಕೊಂಡು ಹೋದನು. ಆದರೆ ಎಲ್ಲಾ ವ್ಯರ್ಥವಾಯಿತು. ಪ್ರವಾದನೇ ಆತ್ಮವು ಅವನ ಮುಖಾಂತ್ರ ಹೆಚ್ಚೆಚ್ಚು ಬಲವಾದ ಆಶೀರ್ವಾದದ ಮಾತುಗಳನ್ನು ಪ್ರಕಟ ಮಾಡಿತು. ಕಡೆಯಲ್ಲಿ ಬಿಲೆಯಾಮನು ಆತ್ಮದೃಷ್ಟಿಯಿಂದ ಯಾಕೋಬನಲ್ಲಿಂದ ನಕ್ಷತ್ರವು ಮೂಡುವದನ್ನೂ ಶತ್ರುಗಳಾದ ಅನ್ಯಜನರು ಅದರಿಂದ ಬಡೆಯಲ್ಪಡುವದನ್ನೂ ಕಂಡನು. ಬಿಲೆಯಾಮನು ತಿರಿಗಿ ಹೋಗುವಾಗ ಮೋವಾಬ್ಯರಿಗೂ ಮಿದ್ಯಾನ್ಯರಿಗೂ ಠಕ್ಕುಬುದ್ಧಿಯಿಂದ ಇಸ್ರಾಯೇಲನವರನ್ನು ಮೋಸದಿಂದ ವಿಗ್ರಹಾರಾಧನೆಗೆ ಎಳೆಯ ಬೇಕೆಂದು ಆಲೋಚನೆ ಹೇಳಿದದರಿಂದ ಅವರು ಇಸ್ರಾಯೇಲನವರಿಗೆ ಮೋಸ ಮಾಡಿ ಅವರಲ್ಲಿ ಅನೇಕರನ್ನು ಕೆಡಿಸಿದನು. ಆದ ಕಾರಣ ಕರ್ತನು ವ್ಯಾಧಿಯನ್ನು ಕಳುಹಿಸಿ ಒಂದೇ ದಿನದಲ್ಲಿ ೨೩ ಸಾವಿರ ಜನರನ್ನು ಸಂಹರಿಸಿದನು. ಇಸ್ರಾಯೇಲನವರು ಬೇರೆ ಕಾಲದಲ್ಲಿ ಮಿದ್ಯಾನ್ಯರನ್ನು ದಂಡಿಸಿದಾಗ ಬಿಲೆಯಾಮನು ಸಹಾ ನಾಶ ಮಾಡಲ್ಪಟ್ಟವರಲ್ಲಿ ಇದ್ದನು.

---

## § 48. ಮೋಶೆಯ ಕಡೇ ದಿನಗಳು

೫ ಮೋಶೆ. ೧ ಮೊದಲಾದ ಸಂಧಿಗಳು. ಮೋಶೆ ನೇಮವನ್ನು ಇನ್ನೊಂದು ಸಾರಿ ಓದಿ ದೇವರ ಆಶೀರ್ವಾದಗಳನ್ನೂ ಹೆದರಿಸುವ ಮಾತುಗಳನ್ನೂ ಸಹ ಜನಾಂಗಕ್ಕೆ ಘಟ್ಟಿಯಾಗಿ ಹೇಳಿದ ಮೇಲೆ ಯೋಷುವನನ್ನು ತನ್ನ ಪ್ರತಿನಿಧಿಯಾಗಿ ನೇಮಿಸಿ ಯೊರ್ದಾನಿನ ಮೂಡಣ ದೇಶವನ್ನು ರೂಬೆನ್ ಗಾದ್ ಅರ್ಧ ಮನಸ್ಸೆ ಕುಲಗಳಿಗೆ ಹಂಚಿಕೊಟ್ಟು (ಈ ಕುಲಗಳಿಗೆ ಹೆಚ್ಚು ಮಂದೆಗಳು ಇದ್ದದರಿಂದ ಅವರಿಗೆ ಒಳ್ಳೇ ಮೇ

ವು ದಾರಕುವ ಸೀಮೆ ಅವಶ್ಯವಾಗಿತ್ತು.) ತನ್ನ ಕಡೇ ಗೀತವನ್ನು ನುಡಿದು (೫ ಮೋಶೆ. ೩೨) ಕಡೇ ಆಶೀರ್ವಾದವನ್ನು ಹನ್ನೆರಡು ಕುಲಗಳ ಮೇಲೆ ಹೇಳಿ (೫ ಮೋಶೆ. ೩೩) ನೇಬಾ ಪರ್ವತವನ್ನು ಏರಿದನು. ಅಲ್ಲಿ ಕರ್ತನು ಅವನಿಗೆ ವಾಗ್ದತ್ತದೇಶವನ್ನು ತೋರಿಸಿದನು. ಅದರಲ್ಲಿ ಶೇರ ಕೂಡದಿದ್ದರೂ ಸಾಯುವದಕ್ಕಿಂತ ಮುಂಚೆ ಅದನ್ನು ನೋಡಲಿಕ್ಕೆ ಕರ್ತನು ಅವನಿಗೆ ದಯ ಮಾಡಿದನು. ಆಗ ಮೋಶೆ ೧೨೦ ವರ್ಷದವನಾಗಿ ಸತ್ತನು. ಮತ್ತು ಕರ್ತನು ಅವನನ್ನು ಹೂಳಿಟ್ಟದದರಿಂದ ಯಾರೂ ಅವನ ಸಮಾಧಿಯನ್ನು ಎಂದೂ ನೋಡಲಿಲ್ಲ.

ಪರಿಶಿಷ್ಟ. ವಾಗ್ದತ್ತಗಳಲ್ಲಿ ಶ್ರೇಷ್ಟವಾದದ್ದೊಂದು ೫ ಮೋಶೆ. ೧೮, ಸಂ. ೧೮—೧೯ನೇ ವಚನಗಳಲ್ಲಿ ಬರದದೆ. ನಿನ್ನ ಹಾಗಿರುವ ಒಬ್ಬ ಪ್ರವಾದಿಯನ್ನು ಅವರ ಸಹೋದರರಲ್ಲಿ ಎಬ್ಬಿಸುವೆನು, ಅವನ ಬಾಯಿಯಲ್ಲಿ ನನ್ನ ವಾಕ್ಯಗಳನ್ನು ಇಡುವೆನು, ನಾನು ಅವನಿಗೆ ಆಜ್ಞಾಪಿಸುವದನ್ನೆಲ್ಲಾ ಅವರಿಗೆ ಹೇಳುವೆನು, ಅವನು ನನ್ನ ಹೆಸರಿನಲ್ಲಿ ನುಡಿಯುವ ನನ್ನ ವಾಕ್ಯಗಳನ್ನು ಕೇಳದವನಿಗೆ ನಾನು ವಿಚಾರಣೆ ಮಾಡುವೆನು. ಮೋಶೆಯ ಹಾಗಿರುವ ಪ್ರವಾದಿಯು ಎಂಥವನಾಗಿರ ಬೇಕಂದರೆ: ಮೋಶೆಯ ಹಾಗೆ ಇರುವ ಜನಾಂಗದ ರಕ್ಷಕನೂ ದೇವರ ಸಂಗಡ ಹೊಸ ಒಡಂಬಡಿಕೆಯನ್ನು ಸ್ಥಾಪಿಸುವವನೂ. ಇದಲ್ಲದೆ ಹೊಸ ಒಡಂಬಡಿಕೆಯು ಮುಂಚಿನ ಒಡಂಬಡಿಕೆಗಿಂತ ಶ್ರೇಷ್ಟವಾಗಿರ ಬೇಕಾದದರಿಂದ ಮೋಶೆಯ ಹಾಗಿರುವ ಪ್ರವಾದಿಯು ಸಹ ಮೋಶೆಗಿಂತ ಶ್ರೇಷ್ಟನೂ ಆಗಿರ ಬೇಕು. ಹಳೇ ಒಡಂಬಡಿಕೆಯ ಪ್ರವಾದಿಗಳ ಯಾರಲ್ಲಿಯೂ ಈ ಪ್ರವಾದನೆಯು ಪೂರ್ತಿ ಆಗಲಿಲ್ಲವೆಂದು ೫ ಮೋಶೆ. ೩೪. ೧೦ನೇಯಲ್ಲಿ ಬರದದೆ, ಏನಂದರೆ: ಇನ್ನು ಮುಂದೆ ಕರ್ತನನ್ನು ಮುಖಾಮುಖಿಯಾಗಿ ತಿಳುಕೊಂಡ ಮೋಶೆಯ ಹಾಗಿರುವ ಪ್ರವಾದಿ ಏಳಲಿಲ್ಲ. ಹೊಸ ಒಡಂಬಡಿಕೆಯ ಸ್ಥಾಪಕನೂ ಎಲ್ಲಾ ಮನುಷ್ಯರ ರಕ್ಷಕನೂ ಆಗಿರುವ ಯೇಸು ಕ್ರಿಸ್ತನಲ್ಲಿಯೇ ಆ ವಾಗ್ದತ್ತವು ಕುಂದು ಇಲ್ಲದೆ ಪೂರ್ಣವಾಗಿ ಈಡೇರಿತು.



## § 49. ಪಂಚಗ್ರಂಥವು

೧) ಈ ವರೆಗೆ ಬರೆದ ಚರಿತ್ರದ ಮೂಲವು ಯಾವದಂದರೆ: ಮೋಶೆ ಬರೆದ ಐದು ಪುಸ್ತಕವಾದ ಪಂಚಗ್ರಂಥವು (ಪೆಂಟಟ್ಯೂಕ್, ಇಬ್ರಿ ಭಾಷೆಯಲ್ಲಿ ಥೋರಾ

ಅಂದರೆ ನೇಮ) ಈ ಐದು ಪುಸ್ತಕಗಳಲ್ಲಿ ಮಧ್ಯದಲ್ಲಿರುವ ಮೂರು ಮುಖ್ಯವಾದ ವುಗಳು. ಯಾಕಂದರೆ ಇಸ್ರಯೇಲನನ್ನು ಸ್ವಂತ ಜನಾಂಗವಾಗಿ ಆದು ಕೊಂಡು ಚೊಚ್ಚಲಮಗನ ಮಹಿಮೆಗಾಗಿ ಸಿದ್ಧ ಮಾಡಿದ ದೇವರ ದೊಡ್ಡ ಕ್ರಿಯೆಗಳೂ ಪ್ರಕಟಣೆಗಳೂ ಅವುಗಳಲ್ಲಿ ವಿವರಿಸಲ್ಪಟ್ಟವೆ. ಹಳೇ ಒಡಂಬಡಿಕೆಯ ಸ್ಥಾಪನೆಯೂ ಮುದ್ರಿಕೆಯೂ ಅವುಗಳಲ್ಲಿ ಬರದದೆ. ಮತ್ತು ಮೋಶೆಯ ಕಾಲದ ಚರಿತ್ರವು ಅವುಗಳಲ್ಲಿ ಕಾಣುತ್ತವೆ. ಮೊದಲನೇ ಪುಸ್ತಕ ಸಹ ಇಸ್ರಯೇಲನವರಿಗೆ ಘನವಾಗಿಯೂ ಪ್ರಿಯವಾಗಿಯೂ ಇತ್ತು. ಯಾಕಂದರೆ ಮೋಶೆಯ ಮುಖಾಂತರ ಉಂಟಾದ ಮುಖ್ಯ ಪ್ರಕಟಣೆಯ ಪರ್ಯಂತರ ಯೆಹೋವನು ಲೋಕದಾರಂಭದಿಂದ ಮನುಷ್ಯರಲ್ಲಿ ತನ್ನನ್ನು ಪ್ರಕಟ ಮಾಡಿ, ಅವರನ್ನು ಆಳಿ ಕೊಳ್ಳುತ್ತಾ ಬಂದ ವಿಶೇಷ ಸಂಗತಿಗಳೆಲ್ಲಾ ಅದರಲ್ಲಿ ಬರದವೆ. ಹೀಗಿರಲಾಗಿ ಪೂರ್ವಕಾಲದ ಚರಿತ್ರವು ಪ್ರಥಮಗ್ರಂಥದಲ್ಲಿ, ಮುಂದಿನ ಕಾಲದ ಪ್ರವಾದನೆಯು ಪಂಚಮಗ್ರಂಥದಲ್ಲಿ ಪ್ರಕಟವಾಗಿದೆ.

೨) ಆದರೆ ಪಂಚಗ್ರಂಥವು ಮೋಶೆ ಪರ್ಯಂತರ ನಡೆದ ಕಾರ್ಯಗಳನ್ನು ವಿವರಿಸುವ ಚರಿತ್ರಪುಸ್ತಕ ಮಾತ್ರವಾಗಿರುವದಿಲ್ಲ. ಅದರಲ್ಲಿ ಬರೆದ ಕಥೆಗಳೂ ಪ್ರಕಟಣೆಗಳೂ ವಾಗ್ದತ್ತಗಳೂ ನೇಮಗಳೂ ಮುಂದಿನ ಕಾರ್ಯಗಳ ಬುಡವೂ ಬೀಜವೂ ಆರಂಭವೂ ಆಗಿವೆಂದು ವಿಶೇಷವಾಗಿ ತಿಳುಕೊಳ್ಳ ತಕ್ಕದ್ದು. ಹಳೇ ಒಡಂಬಡಿಕೆಯ ಚಕ್ತ್ರಿಗೂ ವಿಶ್ವಾಸಕ್ಕೂ ಪಂಚಗ್ರಂಥವು ಮೂಲವಾಗಿದೆ. ಹ್ಯಾಗಂದರೆ ಅದರಲ್ಲಿ ಬರೆದ ಕಥೆಗಳೂ ಮುಂದಿನ ತಲಾಂತರಗಳವರಿಗೆ ಅವರ ದೇವರ ಶಕ್ತಿ ಕೃಪೆಗಳ ದೃಷ್ಟಾಂತಗಳನ್ನು ತೋರಿಸಿ ಅವುಗಳ ದೃಢತ್ವವನ್ನೂ ಮುಂದಿನ ಕಾಲದಲ್ಲಿ ಆಗುವ ಮಹಿಮೆಯುಳ್ಳ ಪೂರ್ಣತೆಯನ್ನೂ ನಂಬುವ ಹಾಗೆ ಅವರ ಹೃದಯಗಳನ್ನು ಪ್ರೇರೇಪಿಸುತ್ತಿದ್ದವು. ಮತ್ತು ವಿಶ್ವಾಸದಲ್ಲಿಯೂ ಕೋರಿಕೆಯಲ್ಲಿಯೂ ತಾಳ್ಮೆಯಲ್ಲಿಯೂ ಹೆಸರ್ಗೊಂಡ ಪಿತೃಗಳ ಚರಿತ್ರವು ಮಕ್ಕಳ ಮಕ್ಕಳಿಗೂ ಒಳ್ಳೇ ನೀತಿಯ ಬೋಧನೆ ಕೊಟ್ಟು ಪೂರ್ವಿಕರ ಸತ್ಕ್ರಿಯೆಗಳನ್ನು ಒಳ್ಳೇ ನಡತೆಯ ಮಾದರಿಗಳಾಗಿ ತೋರಿಸಿ ಅವರ ಪಾಪಗಳನ್ನೂ ಪಾಪಗಳಿಗೆ ಬಂದ ಶಿಕ್ಷೆಗಳನ್ನೂ ವಿವರಿಸುವದರಿಂದ ಚಕ್ತ್ರರ ಹೃದಯಗಳನ್ನು ನೀತಿಯ ಮಾರ್ಗ ತಪ್ಪದ ಹಾಗೆ ಎಚ್ಚರಿಸುತ್ತಿದ್ದವು. ಪಂಚಗ್ರಂಥದ ನೇಮಗಳು ದೇವರು ನಿರ್ಣಯಿಸಿದ ದೇವಾರಾಧನೇ ರಾಜ್ಯನೀತಿ ಸುನಡತೆಗಳ ನೀತಿಯನ್ನು ತೋರಿಸುತ್ತವೆ. ಪಂಚಗ್ರಂಥದ ವಾಗ್ದತ್ತಗಳು ಮುಂದಿನ ಕಾಲದ ಪ್ರವಾದಿಗಳು ಹೆಚ್ಚು ಹೆಚ್ಚಾಗಿ ವಿವರಿಸಿದ ಪ್ರವಾದನೆ ಎಂಬ ಮರಕ್ಕೆ ತ್ರಾಣವಾದ ಬೀಜವಾಗಿವೆ.

ಪರಿಶಿಷ್ಟ. ೧. ಇಸ್ರಯೇಲನನ್ನು ಸ್ವಂತ ಪ್ರಜೆಯಾಗಿ ಆರಿಸಿ ತೆಗದು ಕೊಂಡು ಇಸ್ರಯೇಲನಲ್ಲಿ ದಿವ್ಯ ರಕ್ಷಣೆಯ ಕಾರ್ಯವನ್ನು ತೊಡಗಿಸಿದ ಯೆಹೋವನಿಂದ

ಉಂಟಾದ ಮಹಿಮೆಯುಳ್ಳ ಕ್ರಿಯೆಗಳನ್ನೂ ಪ್ರಕಟಣೆಗಳನ್ನೂ ಮೋಶೆ ತಾನು ಬರೆದು ಬರುವ ತಲಾಂತರಗಳಿಗೆ ಸಾಕ್ಷಿಯಾಗಿ ಇಟ್ಟುಕೊಂಡನೆಂಬದಕ್ಕೆ ಅನುಮಾನವೇನೂ ಇಲ್ಲ. ಮಿಚ್ರ್ರದವರ ಜ್ಞಾನವನ್ನೆಲ್ಲಾ ಕಲಿತುಕೊಂಡವನಾಗಿ ಜೊತೆ ಕುಲದವರಲ್ಲಿಯೂ ಜೊತೆ ಕಾಲದವರಲ್ಲಿಯೂ ಅವನು ಈ ಕೆಲಸಕ್ಕೆ ಅತಿ ಯುಕ್ತನಾಗಿದ್ದನು. ಮೋಶೆಯ ಕೈಯಿಂದ ದೇವರು ಆ ಅದ್ಭುತ ಕ್ರಿಯೆಗಳನ್ನೆಲ್ಲಾ ಮಾಡಿದ್ದನು. ಮೋಶೆಯ ಬಾಯಿಯಿಂದ ದೇವರು ಆ ಪ್ರಕಟಣೆಗಳನ್ನೆಲ್ಲಾ ತಿಳಿಸಿದ್ದನು. ಆದದರಿಂದ ಆದದ್ದನ್ನೆಲ್ಲಾ ಮುಂದಿನ ವಂಶಕ್ಕೆ ತಿಳಿಸುವದು ವಿಶೇಷವಾಗಿ ಮೋಶೆಯ ಉದ್ಯೋಗವಾಗಿತ್ತು. ತನ್ನ ಮುಖಾಂತ್ರದಿಂದ ದೇವರ ಕ್ರಿಯೆಗಳೂ ಪ್ರಕಟಣೆಗಳೂ ಕಟ್ಟಳೆಗಳೂ ವಾಗ್ದತ್ತಗಳೂ ಇಸ್ರಯೇಲ್ ಎಂಬ ಪ್ರಜೆಯು ಉತ್ಪತ್ತಿಗೆ ಕಾರಣವಾಗಿದ್ದವು. ಅವುಗಳನ್ನು ಭದ್ರವಾಗಿ ಕಾಪಾಡುವದರಿಂದಲೂ ಕೈಕೊಳ್ಳುವದರಿಂದಲೂ ಕರ್ತನ ಪ್ರಜೆಯು ತನಗೆ ನೇಮಕವಾದ ವೃದ್ಧಿಯನ್ನೂ ಮಹಿಮೆಯನ್ನೂ ಹೊಂದ ಬೇಕಾಗಿತ್ತು. ಹೀಗಿರಲಾಗಿ ಆದ ಕಾರ್ಯಗಳ ಚರಿತ್ರವನ್ನು ಮುಂದಿನ ವಂಶದವರಿಗೆ ಪೂರ್ಣವಾಗಿಯೂ ಸತ್ಯವಾಗಿಯೂ ತಿಳಿಸುವದಕ್ಕಾಗಿ ಬರೆದಿಡುವದು ಅತಿ ಅವಶ್ಯವಾದದ್ದೆಂದು ಮೋಶೆ ಚನ್ನಾಗಿ ತಿಳುಕೊಂಡನು. ಮೋಶೆಯ ಪುಸ್ತಕಗಳೆಂಬ ಗ್ರಂಥಗಳ ಮುಖ್ಯವಾದ ಭಾಗಗಳು ಮೋಶೆಯ ಕೈಯಿಂದ ಬರೆಯಲ್ಪಟ್ಟವೆಂಬದಕ್ಕೆ ಸಾಕಾದ ದೃಷ್ಟಾಂತಗಳು ಆ ಪುಸ್ತಕಗಳ ಬೇರೆ ಬೇರೆ ಸ್ಥಳಗಳಲ್ಲಿ ಕಾಣುತ್ತವೆ. ಕೆಲವು ಸ್ಥಳಗಳಲ್ಲಿ ಆ ಕಾಲದಲ್ಲಿದ್ದ ಮನುಷ್ಯನು ಗ್ರಂಥಕರ್ತನಾಗಿದ್ದನೆಂದು ತೋರುತ್ತದೆ. ಕೆಲವು ಸ್ಥಳಗಳಲ್ಲಿ ಮೋಶೆಯು ದೇವರ ಅಪ್ಪಣೆಯಿಂದ ಗ್ರಂಥದ ಭಾಗವನ್ನೂ ಇಡೀ ಗ್ರಂಥವನ್ನೂ ಬರದನೆಂದು ಸ್ಪಷ್ಟವಾಗಿ ಕಾಣುತ್ತದೆ. (೨ ಮೋಶೆ. ೧೭, ೧೪. ೨೪ನೇ ಸಂ. ೪. ೭. ೩೪ನೇ ಸಂ. ೨೭. ೨೮. ೪ ಮೋ. ೩೩, ೨. ೫ ಮೋಶೆ. ೧, ೫. ೪ನೇ ಸಂ. ೮; ೧೭ನೇ ಸಂ. ೧೮. ೨೭ನೇ ಸಂ. ೨೬. ೨೮ನೇ ಸಂ. ೫೮. ೨೯ನೇ ಸಂ. ೧೯. ೨೦. ೩೦ನೇ ಸಂ. ೧೦. ೩೧ನೇ ಸಂ. ೯—೧೨.) ಹಳೇ ಒಡಂಬಡಿಕೆಯ ಬೇರೆ ಗ್ರಂಥಗಳಲ್ಲಿ ಮೋಶೆಯ ಕಾಲದ ಮೇಲೆ ಮೋಶೆಯ ಪುಸ್ತಕಗಳೆಂಬ ಗ್ರಂಥಗಳು ಇಸ್ರಯೇಲನವರ ಕೈಯಲ್ಲಿ ಇದ್ದವೆಂದು ಸ್ಪಷ್ಟವಾಗಿ ತೋರುತ್ತದೆ. ಮತ್ತು ಕೆಲವು ಸ್ಥಳಗಳಲ್ಲಿ ಈ ಪುಸ್ತಕಗಳನ್ನು ರಚಿಸಿದವನು ಮೋಶೆಯೇ ಎಂದು ಹೇಳಿಯದೆ. (ಯೋಷುವಾ. ೧, ೭, ೮. ೨೩ ಸಂ. ೬. ೧ ಅರಸು. ೨ನೇ ೩ನೇ ಸಂಧಿಗಳು. ೨ ಅರಸು. ೧೪ನೇ ಸಂ. ೬ ಎಜ್ರ. ೭ ಸಂ. ೬. ದಾನಿಯೇಲ್. ೯ನೇ ಸಂ. ೧೧.) ಯೋಷುವನಿಂದ ಎಜ್ರನ ಪರ್ಯಂತರ ಎಜ್ರನಿಂದ ಕ್ರಿಸ್ತನ ಪರ್ಯಂತರ ಮೋಶೆಯ ೫ ಪುಸ್ತಕಗಳು ಮೋಶೆಯಿಂದಲೇ ರಚಿಸಲ್ಪಟ್ಟವೆಂಬದು ಯೆಹೂದ್ಯರಲ್ಲಿ ಒಪ್ಪಿತ ಮಾತಾಗಿತ್ತು. ಇತ್ತಲಾಗಿ ವಿದ್ವಾಂ

ಸರಲ್ಲಿ ಮಾತ್ರ ಅನೇಕರು ಈ ವಿಷಯವಾಗಿ ಬೇರೆ ಬೇರೆ ಸಂಶಯಗಳನ್ನು ಹುಟ್ಟಿಸಿದರು. ಅವರು ಈ ಪುಸ್ತಕಗಳನ್ನು ರಚಿಸಿದವನು ಮೋಶೆ ಅಲ್ಲವೆಂದೂ ಅವುಗಳಲ್ಲಿ ಬರೆದದ್ದು ಸತ್ಯ ಅಲ್ಲವೆಂದೂ ವಿಶೇಷವಾಗಿ ಅವುಗಳಲ್ಲಿ ವಿವರವಾಗಿ ಬರದ ದೇವರ ಪ್ರಕಟಣೆಗಳೂ ಅದ್ಭುತ ಕ್ರಿಯೆಗಳೂ ಹಾಗೆ ಸಂಭವಿಸಲಿಲ್ಲವೆಂದೂ ಸ್ಥಾಪಿಸಲಿಕ್ಕೆ ಪ್ರಯತ್ನ ಮಾಡುತ್ತಾರೆ. ಅದೆಲ್ಲಾ ವ್ಯರ್ಥವಾಗಿದೆ. ಅವರಿಗೆ ವಿಶ್ವಾಸವು ಇಲ್ಲದಿರುವದರಿಂದ ಸ್ವಸ್ಥಬುದ್ಧಿ ಸಹ ಇಲ್ಲ. ಒಂದು ಮಾತು ನಿಶ್ಚಯವಾಗಿದೆ, ಮೋಶೆಯ ಪುಸ್ತಕಗಳಲ್ಲಿ ಬರದ ಚರಿತ್ರವು ಕಟ್ಟುಕಥೆಯಾಗಿದ್ದರೆ ಇಸ್ರಯೇಲೆಂಬ ಜನಾಂಗದ ಉತ್ಪತ್ತಿಯೂ ಅದರ ವೃದ್ಧಿಯ ಮಾರ್ಗವೂ ಮೋಶೆ ಬರದ ಎಲ್ಲಾ ಅದ್ಭುತ ಕ್ರಿಯೆಗಳಿಗಿಂತ ಹೆಚ್ಚು ಆಶ್ಚರ್ಯವಾಗಿದೆ. ಶಿನೇ ಪುಸ್ತಕದ ಕಡೇ ಸಂಧಿ ಮೋಶೆಯ ಕೈಯಿಂದ ಬರೆಯಲ್ಪಡಲಿಲ್ಲವೆಂದು ತನ್ನಷ್ಟಕ್ಕೆ ತೋರುತ್ತದೆ. ಬೇರೊಬ್ಬನು ಒಂದು ವೇಳೆ ಯೋಷುವಾ ಗ್ರಂಥದ ಚರಿತ್ರವನ್ನು ಮುಗಿಸುವದಕ್ಕಾಗಿ ಅದನ್ನು ಬರದನೆಂದು ನೆನಸ ತಕ್ಕದ್ದು.

ಪರಿಶಿಷ್ಟ. ೨. ತೊಂಭತ್ತನೇ ಕೀರ್ತನೆಗೆ ಸಹಾ ಮೋಶೆಯ ಗೀತವೆಂಬ ಹೆಸರು ಅದೆ. ಕೀರ್ತನೆಗಳನ್ನು ಕೂಡಿಸಿ ಒಂದು ಗ್ರಂಥದಲ್ಲಿ ಸೇರಿಸಿದವನು ತೊಂಭತ್ತನೇ ಕೀರ್ತನೆಯ ಮೇಲ್ಬರಹವನ್ನು ಸಹಾ ಬರದನೆಂದು ನೆನಸ ಬಹುದು. ಆದರೆ ಅದನ್ನು ಬರದವನು ಯೆಹೂದ್ಯರೆಲ್ಲರೂ ಈ ಗೀತ ಮೋಶೆಯದು ಎಂದು ನಂಬಿದದರಿಂದಲೇ ಈ ಮೇಲ್ಬರಹವನ್ನು ಸೇರಿಸಿದನೆಂದು ತೋರುತ್ತದೆ. ಮತ್ತು ಅದರ ಅಭಿಪ್ರಾಯವನ್ನು ನೋಡಿದರೆ ಅದು ಮೋಶೆಗೂ ದೇವರ ತಿರಸ್ಕರಿಸಲ್ಪಟ್ಟ ಜನಾಂಗವೂ ಬಾಡಿದ ಎಲೆಗಳಂತೆ ಅರಣ್ಯದಲ್ಲಿ ಸತ್ತು ಬೀಳುತ್ತಾ ಇದ್ದ ಕಾಲಕ್ಕೂ ಪೂರ್ಣ ಅನುಕೂಲವಾಗಿತ್ತು.



## ಮೂರನೇ ಕಾಲವು

## ಯೋಷುವ

### ಇಸ್ರಯೇಲನವರು ವಾಗ್ದತ್ತದೇಶವನ್ನು ಸ್ವತಂತ್ರಿಸಿ ಕೊಂಡದ್ದು

(೪೦ ಅಥವ ೫೦ ವರುಷದ ಪರ್ಯಂತರ)

### § 50. ಈ ಕಾಲದ ಚರಿತ್ರದ ಸಾರಾಂಶವು. ಇಸ್ರಯೇಲನವರು ಕಾನಾನ್ ದೇಶದ ಬಾಧ್ಯಸ್ಥರಾಗಿದ್ದ ನ್ಯಾಯವು

ತ್ಯಜಿಸಲ್ಪಟ್ಟಂಥ ಅವಿಶ್ವಾಸಿಯಾದಂಥ ಕೃತಜ್ಞತೆ ಇಲ್ಲದ ಸಂತತಿಯು ಅರಣ್ಯದಲ್ಲಿ ಪೂರ್ಣವಾಗಿ ಸತ್ತು ಹೋಗಿತ್ತು. ಮತ್ತು ಅವರ ಮಕ್ಕಳು ವಿಶ್ವಾಸದಿಂದಲೂ ಕರ್ತನಲ್ಲಿರುವ ಭರವಸದಿಂದಲೂ ತುಂಬಿದ ಈ ಹೊಸ ಸಂತತಿಯವರು ಪ್ರಾಯಸ್ಥರಾಗಿದ್ದರು. ಆದರೆ ಪಾಪಿಯಾದ ಮನುಷ್ಯನಿಗೆ ಶಾಪವನ್ನು ಕಾಡುವದಲ್ಲದೆ (ಗಲಾತ್ಯ. ೩. ೧೦) ವಿಶ್ರಾಂತಿಗೆ ಕೊಂಡು ಹೋಗಲಾರದ ನೇಮವನ್ನು ರೂಪಿಸುವವನಾದ ಮೋಶೆ ಅಲ್ಲ ಸಾಧುವೂ ಮೃದು ಮನಸ್ಸಿನವನೂ ಅದೇ ಸಮಯದಲ್ಲಿ ವಿಶ್ವಾಸದ ವೀರನೂ ಕರ್ತನ ಯುದ್ಧಗಳಲ್ಲಿ ಜಯಶಾಲಿಯೂ ಮೋಶೆಯ ಮೇಲೆ ನಿವಾಸಿಸಿದಂಥ (೪ ಮೋಶೆ. ೨೭, ೧೮—೨೦) ಆತ್ಮದಿಂದ ಸನ್ನದ್ಧನೂ ಏಕನಾಮವುಳ್ಳ ಆದಿಗುರ್ತಿನ ಮುಂಗುರ್ತೂ ಆಗಿರುವ ಯೋಷುವನು (ಗ್ರೀಕರ ಉಚ್ಚಾರಣೆಯ ಪ್ರಕಾರ ಯೇಸುವು) ಆಯುವಿಕೆಯ ಜನಾಂಗವನ್ನು ವಾಗ್ದತ್ತವಿಶ್ರಾಂತಿಗಳ ದೇಶದಲ್ಲಿ ಪ್ರವೇಶಿಸ ಮಾಡುತ್ತಾನೆ. ಐಗುಪ್ತದಲ್ಲಿ ಇಸ್ರಯೇಲನು ಜನಾಂಗವಾದನು, ಸಿನ್ಯೆ ಪರ್ವತದಲ್ಲಿ ನೇಮವನ್ನೂ ಕಟ್ಟಳೆಯನ್ನೂ ದೇವಾರಾಧನೆಯನ್ನೂ ಶುದ್ಧಸ್ಥಾನವನ್ನೂ ಹೊಂದಿದನು. ಈಗ ಸ್ವತಂತ್ರವುಳ್ಳ ಜನಾಂಗವಾಗಿ ಜೀವಿಸ ಬೇಕಾದರೆ ಪ್ರಾಮುಖ್ಯವಾದಂಥಾದ್ದು ಒಂದೇ ಕಪಿಮೆ. ಅದು ಯಾವದಂದರೆ ಅವನ ಸ್ವಭಾವಗುಣಕ್ಕೂ ಸ್ಥಾನಕ್ಕೂ ತೀರಿಸ ಬೇಕಾದ ಕಾರ್ಯಕ್ಕೂ ತಕ್ಕ ದೇಶವು. ಇದು ಅವನಿಗೆ ಈಗ ಸಿಕ್ಕುತ್ತದೆ. ಅದು ಶುದ್ಧ ನೆನಪುಗಳನ್ನು ಹುಟ್ಟಿಸಲಿಕ್ಕೂ ಬುದ್ಧಿ ಹೇಳಲಿಕ್ಕೂ ಭೀತಿ ಹುಟ್ಟಿಸಲಿಕ್ಕೂ ಯೋಗ್ಯವಾದಂಥಾ ಅವರ ಪಿತೃಗಳ ದೇಶವೇ.

ಪರಿಶಿಷ್ಟ. ೧. ಅಬ್ರಹಾಮನ ಕಾಲದಲ್ಲಿ ಹೇಳಲ್ಪಟ್ಟದ್ದೇನಂದರೆ (೧ಮೋ. ೧೫, ೧೬.) "ಅಮೋರ್ಯರ ಅಕ್ರಮವು ಇನ್ನೂ ಪೂರ್ತಿಯಾಗಲಿಲ್ಲ" ಸೋದೋಮವೂ ಗಮೋರವೂ ಭಯಂಕರವಾದ ಗುರ್ತಾಗಿತ್ತು. ಸತ್ತಸಮುದ್ರವು ದಿನ ನಿತ್ಯದಲ್ಲಿಯೂ ಮೌನಸಾಂತರವನ್ನು ಪ್ರಸಂಗಿಸಿತು. ಅಬ್ರಹಾಮನೂ ಇಸಾಕನೂ ಯಾಕೋಬನೂ ಅವರ ಮಧ್ಯದಲ್ಲಿ ವಾಕ್ಯದಿಂದಲೂ ಕ್ರಿಯೆಯಿಂದಲೂ ಕರ್ತನ ಹೆಸರನ್ನು ಪ್ರಸಂಗಿಸಿ ಇದ್ದರು. ಆದರೆ ಅವರು ಹೆಚ್ಚು ಹೆಚ್ಚಾಗಿ ಅತಿ ನೀಚವಾದ ಸೃಷ್ಟಿಯ ಆರಾಧನೆಯಲ್ಲಿ ಮುಣುಗಿದರು. ಅವರ ಅಕ್ರಮದ ಅಳತೆಯು ಈಗ ಪೂರ್ತಿಯಾಯಿತು. ಮತ್ತು "ಹೆಣ ಇದ್ದಲ್ಲಿ ಹದ್ದುಗಳು ಕೂಡಿ ಬರುತ್ತವೆ" ಮೊದಲು ದೇವರು ಬೆಂಕಿಯಿಂದಲೂ ಗಂಧಕಗಳಿಂದಲೂ ಪರಲೋಕದಿಂದ ಶಿಕ್ಷಿಸಿ ಇದ್ದನು. ಆದರೆ ಈಗ ಆತನ ನ್ಯಾಯಶಿಕ್ಷೆಯನ್ನು ತೀರಿಸಲಿಕ್ಕೆ ಇಸ್ರಯೇಲ್ ಖಡ್ಗವನ್ನು ಪ್ರಯೋಗಿಸುವದು ಒಳ್ಳೇದಾಗಿ ತೋಚಿತು. ಬೇರೆ ಜನಾಂಗಗಳನ್ನು ಸಹಾ ಅವರು

ತಿಳಿಯದೆ ಇದ್ದರೂ ದೇವರು ಇದೇ ತರದ ಕಾರ್ಯಗಳಿಗೆ ಪ್ರಯೋಗಿಸಿದ್ಧಾನೆ. ಆದರೆ ಇಸ್ರಯೇಲನು ತಾನು ಮಾಡುವದೇನೆಂದು ತಿಳಿದು ಯೆಹೋವನು ಅಪದೈವಾರಾಧನೆಯ ಪಾಪವನ್ನು ಈ ಪ್ರಕಾರ ಹಗೆ ಮಾಡಿ, ಶಿಕ್ಷಿಸುತ್ತಾನೆಂಬದನ್ನು ಅದರಿಂದ ಕಲಿತು ಕೊಳ್ಳ ಬೇಕಾಗಿತ್ತು. ಹ್ಯಾಗಂದರೆ ಮೋಶೆಯು ಅವರಿಗೆ ಹೇಳಿದ್ದು ನೀನು ನಿನ್ನ ದೇವರಾದ ಕರ್ತನನ್ನು ಮರೆತು ಬಿಟ್ಟು ಬೇರೆ ದೇವರುಗಳಿಗೆ ಸೇವೆ ಮಾಡಿದರೆ ನೀವು ನಾಶವಾಗಿ ಹೋಗುವಿರೆಂದು ನಿಮಗೆ ಈಗಲೇ ಸಾಕ್ಷಿ ಕೊಡುತ್ತೇನೆ. ಕರ್ತನು ನಿಮ್ಮ ಮುಖದ ಮುಂದೆ ನಾಶ ಮಾಡುವ ಅನ್ಯಜನಾಂಗಗಳು ಹ್ಯಾಗೋ ಹಾಗೆಯೇ ನೀವು ಸಹಾ ನಾಶವಾಗುವಿರಿ (೫ ಮೋಶೆ. ೮,೧೯—೨೦ ಇಸ್ರಯೇಲನಿಗೆ ಕಾನಾನ್ ದೇಶದ ಮೇಲೆ ಮನುಷ್ಯರ ರೀತಿಯ ಪ್ರಕಾರದ ಹಕ್ಕು ಏನೂ ಇರಲಿಲ್ಲ. ದೇಶವನ್ನು ಬಾಧ್ಯವಾಗಿ ಪಡಕೊಳ್ಳುವ ಹಕ್ಕಿನ ಆಧಾರವು ದೇವರ ದಾನವೇ ಆಗಿತ್ತು. ನಿವಾಸಿಗಳನ್ನು ನಿರ್ಮೂಲ ಮಾಡಲಿಕ್ಕೆ ದೇವರು ಕೊಟ್ಟ ಅಪ್ಪಣೆಯೂ ವಿಧೇಯವಾಗ ಬೇಕೆಂಬ ಧರ್ಮವೂ ಆಧಾರವಾಗಿದ್ದವು. ಅಮೋರ್ಯರ ವಿಷಯದಲ್ಲಿ ಯಾವದು ನೀತಿಯ ಪ್ರಕಟಣೆಯಾಗಿತ್ತೋ ಅದೇ ಇವರ ಮೇಲೆ ಕೃಪೆಯ ಪ್ರಕಟಣೆಯಾಗಿತ್ತು. ದೇವರು ಆ ದೇಶವನ್ನು ಅಮೋರ್ಯರಿಗೆ ಕೊಟ್ಟದ್ದು ಹ್ಯಾಗೆ ನಡ ಕೊಂಡರೂ ಅವರ ಆಸ್ತಿಯಾಗಿರ ಬೇಕೆಂಬದಕ್ಕೆ ಅಲ್ಲ; ಆತನು ಸಮಸ್ತ ಲೋಕದ ಬಡವೆಗಳನ್ನು ಹಂಚಿಕೊಡುವಂತೆ ಅವರ ನಡತೆಗೆ ಅನುಸಾರವಾಗಿ ಎಂತ ಉಗ್ರಾಣಿಕೆಯನ್ನು ನಡಿಸಲಿಕ್ಕೆ ಅಷ್ಟೆ. ಆದರೆ ಅಮೋರ್ಯರು (ಕನಾನ್ಯರು) ತಮ್ಮನ್ನು ತಾವೇ ಅಯೋಗ್ಯ ಮಾಡಿಕೊಂಡರು. ಆದದರಿಂದ ಆತನು ಅವರನ್ನು ನಿರ್ಮೂಲ ಮಾಡಿ ಬೇರೆ ಉಗ್ರಾಣಿಕರನ್ನು ನೇಮಿಸಿದನು.

ಪರಿಶಿಷ್ಟ. ೨. ಈ ಕಾಲದ ಕಥೆಯನ್ನು ತಿಳುಕೊಳ್ಳಲಿಕ್ಕೆ ಆಧಾರವು ಯೋಷುವನ ಪುಸ್ತಕವು. ಅದರಲ್ಲಿದ್ದ ಸಮಾಚಾರಕ್ಕಾಗಿ ಅದಕ್ಕೆ ಈ ಹೆಸರು ಉಂಟು. ಯೋಷುವನು ಆ ಪುಸ್ತಕವನ್ನು ರಚಿಸಲಿಲ್ಲವೆಂದು ಕಾಣುತ್ತದೆ. ಹ್ಯಾಗಂದರೆ ಯೋಷುವನು (೨೪. ಸಂಧಿ) ಸತ್ತದರ ವಿಷಯವನ್ನು ತರುವಾಯ ಬರೆದವರು ಕೂಡಿಸಿ ಇರ ಬಹುದಾದರೂ, ೧೯ ಸಂಧಿ ೪೦ — ೪೬ವರೆಗೆ ಯೋಷುವನು ಸತ್ತ ಮೇಲೆಯೇ ಸಂಭವಿಸಿದ ಸಂಗತಿಗಳುಂಟು. (ಸಮನೋಡು. ನ್ಯಾಯಾಧಿ. ೧೮, ೧. ೨. ೨೬ ಮುಂತಾದ ವಚನಗಳು.) ಆದರೆ ಗ್ರಂಥಕಾರನು ಯೋಷುವನು ಸತ್ತ ಬಹು ಕಾಲದ ತರುವಾಯ ಬರೆದನಲ್ಲವೆಂತಲೂ ಹ್ಯಾಗಾದರೂ ದಾವಿದನ ಮೊದಲೇ ಬರದಿರ ಬೇಕೆಂತಲೂ ಯೋಷುವಾ. ೯, ೨೬ ಸಂ. ೧೩, ೬ವಚನ ಸಂ. ೧೫, ೬೩. ೧೬, ೧೦ ಸಂ. ೧೯, ೨೯ ಮುಂತಾದ ಸ್ಥಳಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ.



## § 51. ಯೋಷುವನು

### ಯಾರ್ದಾನ್ ನದಿಯನ್ನು ದಾಟಿದ್ದು

೧) ಯೋಷುವ. ೧, ೧—೯. ನೂನನ ಮಗನಾದಂಥ ಎಫ್ರಾಯಿಮ್ ಗೋತ್ರದ ಯೋಷುವನು ಮೋಶೆಯ ಅಧಿಕಾರದಲ್ಲಿ ಶೇರಿದನು. ಅಮಲೇಕ್ಯರ ಸಂಗಡ ಮಾಡಿದ ಯುದ್ಧದಲ್ಲಿಯೇ (§ ೩೩, ೨) ಈತನು ಸೈನ್ಯಾಧಿಪತಿಯಾಗಿದ್ದನೆಂದು ನಮಗೆ ಗೊತ್ತುಂಟು. ಮತ್ತು ದೇಶದ ಸೋವು ನೋಡಲಿಕ್ಕೆ ಹೋದಾಗ (§ ೪೫, ೧) ಈತನು ಧೈರ್ಯವನ್ನೂ ವಿಶ್ವಾಸವನ್ನೂ ಕಾಪಾಡಿ ಕೊಂಡನು. ಇಷ್ಟು ವರೆಗೆ ಸೈನ್ಯಕ್ಕೆ ಯಾವಾಗಲೂ ನಾಯಕನಾಗಿದ್ದರೂ ಘನವುಳ್ಳ ಮೋಶೆಯ ಅಧಿಕಾರದ ಕೆಳಗೆ ಇದ್ದನು. ಆದರೆ ಈಗ ಬಹು ತ್ರಾಣವುಳ್ಳ ಮೋಶೆಯನ್ನು ಸಹಾ ಒಂದೊಂದು ಸಾರಿ ಪುಡಿಪುಡಿ ಮಾಡಿತೋ ಏನೋ ಎಂದು ಕಂಡಂಥ ಅಸಾಧಾರಣವಾದ ಭಾರವು ಸುಮಾರು ೮೦. ೯೦ ವರ್ಷದವನಾಗಿರುವಾಗ್ಯೆ ಇವನೊಬ್ಬನ ಭುಜದ ಮೇಲೆಯೇ ಬಿತ್ತು. ಈ ಭಾರವು ಎಷ್ಟು ದೊಡ್ಡದಾಗಿರುತ್ತದೆ ಎಂಬದು ಅವನಿಗೆ ಗೊತ್ತುಂಟು. ಹ್ಯಾಗಂದರೆ ನಾಲ್ವತ್ತು ವರ್ಷ ಪರ್ಯಂತರ ಮೋಶೆಯ ಸಹಾಯಕನಾಗಿದ್ದನು. ತನ್ನ ಬಲಹೀನತ್ವ ಸಹಾ ಅವನಿಗೆ ತಿಳಿದದೆ. ಆದರೆ ಕರ್ತನು ಅವನನ್ನು ಬಲ ಪಡಿಸಿ ಬಹಳ ಆದರಿಸುತ್ತಾನೆ. ನೀನು ಜೀವದಿಂದಿರುವ ಮಟ್ಟಿಗೂ ನಿನಗೆ ಯಾವನೊಬ್ಬನಾದರೂ ಪ್ರತೀಕಾರವಾಗಿ ನಿಲ್ಲಲಾರನು. ನಾನು ಮೋಶೆಯ ಸಂಗಡ ಹ್ಯಾಗೆ ಇದ್ದೆನೋ ಹಾಗೆಯೇ ನಿನ್ನ ಸಂಗಡಲೂ ಇರುವೆನು. ನಾನು ನಿನ್ನನ್ನು ಬಿಡುವವನಲ್ಲ; ನಿನ್ನಿಂದ ತೊಲಗುವವನಲ್ಲ. ಸಂತೋಷವಾಗಿಯೂ ನಿರ್ಭಯವಾಗಿಯೂ ಇರು. ನೀನು ಈ ಜನಕ್ಕೆ ನಾನು ಅವರ ಪಿತೃಗಳಿಗೆ ಪ್ರಮಾಣ ಮಾಡಿ ಕೊಟ್ಟ ದೇಶವನ್ನು ಹಂಚಿ ಕೊಡುವಿ. ಧೈರ್ಯವಾಗಿರು! ಮೋಶೆಯ ನೇಮವನ್ನು ಕೈಕೊಂಡು ಮಾಡುವದರಲ್ಲಿ ಬಹಳ ಸಂತೋಷವಾಗಿರು. ನೀನು ನಿನ್ನ ಹೆಜ್ಜೆಗಳಲ್ಲೆಲ್ಲಾ ಬುದ್ಧಿಯಿಂದ ನಡಕೊಳ್ಳುವ ಹಾಗೆ ಅದರಿಂದ ಬಲಕ್ಕಾಗಲಿ ಎಡಕ್ಕಾಗಲಿ ತೊಲಗ ಬೇಡ. ಈ ನೇಮದ ಪುಸ್ತಕವು ನಿನ್ನ ಬಾಯಿಯಿಂದ ಹೋಗದಿರಲಿ. ರಾತ್ರಿ ಹಗಲೂ ಅದನ್ನು ಧ್ಯಾನಿಸು. ಇಗೋ ನೀನು ಧೈರ್ಯವಾಗಿಯೂ ಸಂತೋಷವಾಗಿಯೂ ಇರ ಬೇಕೆಂದು ನಿನಗೆ ಅಪ್ಪಣೆ ಕೊಟ್ಟಿದ್ದೇನೆ. ಹೆದರ ಬೇಡ. ವಿಸ್ಮಯವಾಗ ಬೇಡ. ಯಾಕಂದರೆ ನಿನ್ನ ದೇವರಾದ ಕರ್ತನು ನಿನ್ನ ಹೆಜ್ಜೆಗಳೆಲ್ಲಾದರಲ್ಲಿ ನಿನ್ನ ಸಂಗಡ ಇದ್ದಾನೆ. — ಜನರು ಸಹಾ ಅವನಿಗೆ, ನಾವು ಮೋಶೆಗೆ ಹ್ಯಾಗೆ ವಿಧೇಯರಾಗಿದ್ದೆವೋ ಹಾಗೆಯೇ ನಿನಗೆ ಸಹಾ ವಿಧೇಯರಾಗಿರುವೆವು. ನಿರ್ಭಯನಾಗು ಎಂದು

ಹೇಳಿದರು. — ಮತ್ತು ಈ ಸಾರಿ ಹ್ಯಾಗೂ ಅವರ ಮಾತು ಮತ್ತೆ ಆದ ಸಂಗತಿಯಿಂದ ನಮಗೆ ತಿಳಿದಿರುವ ಪ್ರಕಾರ ಬರೇ ವಾಗ್ದತ್ತವಾಗಿರಲಿಲ್ಲ.

೨) ಮೊದಲು ಯೋಷುವನು ದೇಶದ ಬೀಗದ ಕೈಯಾಗಿರುವ ಯೆರಿಖೋವಿಗೆ ಸೋವು ನೋಡುವವರನ್ನು ಕಳುಹಿಸಿದನು. ಇವರು ರಾಹಾಬಳ ಮನೆಯಲ್ಲಿ ಉಳ ಕೊಳ್ಳುತ್ತಾರೆ. ಮತ್ತು ಈಕೆಯು ವಿಶ್ವಾಸದಿಂದ (ಇಬ್ರಿ. ೧೧, ೩೧.) ಕರ್ತನ ಕೈಯನ್ನು ಕಾಣುತ್ತಾಳೆ. ಅವಳು ಯೆರಿಖೋವಿನ ಅರಸನ ವಿಚಾರಣೆಗೆ ತಪ್ಪಿಸುವದಕ್ಕೆ ಆ ಹೊಂಚುಗಾರರನ್ನು ಅಡಗಿಸಿಡುತ್ತಾಳೆ. ಹೀಗೆ ತನ್ನನ್ನೂ ತನ್ನ ಮನೆಯನ್ನೂ ಕಾಪಾಡುತ್ತಾಳೆ. ತರುವಾಯ ಯೆಹೂದನ ಗೋತ್ರದಲ್ಲಿ ಸಲ್ಮೋ ಎಂಬವನಿಗೆ ಮದುವೆಯಾಗಿರುತ್ತಿರಲಾಗಿ ದಾವಿದನಿಗೂ ಕ್ರಿಸ್ತನಿಗೂ (ಮತ್ತಾ. ೧, ೫.) ಕುಲಮಾತೃ ಆಗುತ್ತಾಳೆ. ಈ ಹೊಂಚುಗಾರರು ದೇಶನಿವಾಸಿಗಳೆಲ್ಲಾ ಧೈರ್ಯಹೀನರಾಗಿದ್ದಾರೆಂಬ ವರ್ತಮಾನ ತರುತ್ತಾರೆ. ಸಾಕ್ಷಿಪೆಟ್ಟಿಗೆಯು ಲೆಬನೋನಿಂದ ಇಳಿದು ಬಂದ ಕರಗಿದ ಹಿಮದಿಂದ ಈ ಸಮಯದಲ್ಲಿಯೇ ಬಹಳವಾಗಿ ಉಬ್ಬಿ ಬಂದ ಹೊಳೆಯಲ್ಲಿ ಒಣಗಿದ ಮಾರ್ಗವನ್ನು ಉಂಟು ಮಾಡುತ್ತದೆ. ಸಾಕ್ಷಿಯ ಪೆಟ್ಟಿಗೆಯನ್ನು ಹೊತ್ತು ಕೊಂಡ ಯಾಜಕರು ಯೊರ್ದಾನಿನಲ್ಲಿ ನಿಂತ ಸ್ಥಳದಲ್ಲಿ ಯೋಷುವನು ಹನ್ನೆರಡು ಕಲ್ಲುಗಳನ್ನೂ ಅದೇ ಪ್ರಕಾರ ಬಲ ಕಡೆಯ ತೀರದಲ್ಲಿ ಯೊರ್ದಾನಿನ ಮಧ್ಯದಿಂದ ಸಂಗಡ ತಂದ ಬೇರೆ ಹನ್ನೆರಡು ಕಲ್ಲುಗಳನ್ನೂ ಗುರ್ತಾಗಿ ಇಟ್ಟನು. ಅವರು ಯೆರಿಖೋವಿನ ಬೈಲಿನಲ್ಲಿ ಇರುವ ಗಿಲ್ಗಾಲಿನಲ್ಲಿ ತಂಬು ಹೊಡದು ದೇಶದ ಫಲಗಳನ್ನು ತಿನ್ನುತ್ತಾರೆ. ಮತ್ತು ಮನ್ನವು ನಿಂತು ಹೋಗುತ್ತದೆ. ಅರಣ್ಯದಲ್ಲಿ ಮಾರ್ಗ ತಪ್ಪಿ ಓಡ್ಯಾಡುವ ಸಮಯದಲ್ಲಿ ಪರಿಚ್ಛೇದನೆಯು (ಇದು ಯಾವದಕ್ಕೆ ಗುರ್ತಾಗಿತ್ತೋ ಆ ಒಡಂಬಡಿಕೆಯು ಸದ್ಯಕ್ಕೆ ತೆಗದು ಹಾಕಲ್ಪಟ್ಟಿರುವದರಿಂದ) ನಿಂತು ಹೋಗಿದ್ದದರಿಂದ ಈಗ ಎಲ್ಲರಿಗೆ ಪರಿಚ್ಛೇದಿಸಿ ಮೂರನೇ ಪಸ್ಕವನ್ನು ಆಚರಿಸುತ್ತಾರೆ.



### § 52. ಪಶ್ಚಿಮ ಯೊರ್ದಾನ್ ದೇಶವನ್ನು ಕೈವಶ ಮಾಡಿ ಕೊಂಡದ್ದು ಯೆರಿಖೋ ಮತ್ತು ಆಯಿ

೧) ಯೋಷುವ. ೬. ಯೆರಿಖೋವಿನ ಹತ್ತರ ಯೋಷುವನಿಗೆ ಕರ್ತನ ಸೈನ್ಯದ ಅಧಿಪತಿಯು ಕಾಣಿಸಿ ಕೊಳ್ಳುತ್ತಾನೆ. ಈತನು ಯೆಹೋವ. ಈತನು ಏಳು ದಿವಸ

ಪರ್ಯಂತರ ಮತ್ತು ಏಳನೇ ದಿವಸದಲ್ಲಿ ಏಳು ಸಾರಿ ಯುದ್ಧಸ್ಥರೊಡನೆಯೂ ಯಾಜಕರೊಡನೆಯೂ ಯೊಬೆಲ್ ವರ್ಷದ ಕಹಳೆಗಳನ್ನು ತಕ್ಕೊಂಡು ಯೆರಿಖೋವಿನ ಗೋಡೆಯ ಸುತ್ತಲು ಹೋಗ ಬೇಕೆಂದು ಯೋಷುವನಿಗೆ ಅಪ್ಪಣೆ ಕೊಡುತ್ತಾನೆ. ಕಡೇ ಸಾರಿ ಕಹಳೆಗಳನ್ನು ಊದುವಾಗ್ಯೆ ಜಯಧ್ವನಿ ಮಾಡುತ್ತಲೆ ಗೋಡೆಗಳು ಬೀಳುವವೆಂದು ಹೇಳಲ್ಪಟ್ಟಿತು. ಆ ಪ್ರಕಾರವೇ ಆಯಿತು. ವಿಶ್ವಾಸದಿಂದ ಯೆರಿಖೋವಿನ ಗೋಡೆಗಳು ಏಳು ದಿವಸಗಳ ಮಟ್ಟಿಗೂ ಬಳಿಸಲ್ಪಟ್ಟು ಬಿದ್ದು ಹೋದವು. (ಇಬ್ರಿ. ೧೧, ೩೦.) ಯೋಷುವನು ಪಟ್ಣಕ್ಕೂ ಅದರಲ್ಲಿರುವಂಥಾದೆಲ್ಲಕ್ಕೂ ವಿನಾಶವನ್ನು ನಿಶ್ಚೈಸಿ ಅದನ್ನು ತಿರಿಗಿ ಕಟ್ಟುವವನ ಮೇಲೆ ಶಾಪವನ್ನು ಇಡುತ್ತಾನೆ. ಈ ಶಾಪವು (೧ ಅರಸುಗಳ. ೧೬, ೩೪) ನೆಯಲ್ಲಿ ಪೂರ್ತಿಯಾಯಿತು.

ಪರಿಶಿಷ್ಟ. ೧. ಕರ್ತನ ಸೈನ್ಯದ ಅಧಿಪತಿಯು ಕರ್ತನ ದೂತನೆಂದು ಪಿತೃಗಳಿಗೆ ಕಾಣಿಸಿ ಕೊಂಡಂಥವನೇ ಇಲ್ಲಿ ದೇವರ ಶತ್ರುಗಳೆಲ್ಲರ ಮೇಲೆ ಜಯಶಾಲಿಯಾಗಿಯೂ ದೇವರ ನ್ಯಾಯಶಿಕ್ಷೆಗಳನ್ನು ಕೊಡುವವನಾಗಿಯೂ ಯುದ್ಧರೂಪದಲ್ಲಿಯೂ ಯುದ್ಧನಾಮದಲ್ಲಿಯೂ ಕಾಣಿಸಿ ಕೊಳ್ಳುತ್ತಾನೆ. ಯೆಹೋವನು ತಾನೇ ಇಸ್ರಯೇಲನಿಗೆ ಅಪ್ರತ್ಯಕ್ಷನಾದ ಅರಸನಾಗಿದ್ದಾನೋ ಅದೇ ಪ್ರಕಾರ ಆತನು ದೇವರ ರಾಜ್ಯದ ಯುದ್ಧಗಳಲ್ಲಿ (ಅಪ್ರತ್ಯಕ್ಷನಾದ) ಮುಖ್ಯ ಸೈನ್ಯಾಧಿಪತಿಯೂ ಇಸ್ರಯೇಲಿನ ನಾಯಕನೂ ಆಗಿರುತ್ತಾನೆ.

ಪರಿಶಿಷ್ಟ. ೨. ಮೊದಲನೇದಾಗಿಯೂ ದೇಶದ ಪಟ್ಣಗಳಲ್ಲೆಲ್ಲಾ ಅತಿ ಭದ್ರವಾದದ್ದಾಗಿಯೂ ಇರುವ ಯೆರಿಖೋವನ್ನು ಇಂಥ ಅಪರೂಪ ಮಾರ್ಗವಾಗಿ ರಣವಿಲ್ಲದೆ ಜೈಸ ಬೇಕೆಂಬದು ಬಹು ವಿಧವಾಗಿ ವಿಶೇಷವಾದದ್ದು. ಮುಖ್ಯವಾಗಿ ಇಸ್ರಯೇಲನ ವಿಶ್ವಾಸಕ್ಕೆ ಅವರು ಈಗ ತೊಡಗುವಂಥಾ ಯುದ್ಧಕಾರ್ಯವು ಕೈಗೂಡಿ ಬರುವದೆಂಬದಕ್ಕೆ ಸಾಕಾದ ಮುಂಗಡವಾಗಿತ್ತು. ಅತ್ತ ಕಡೆಯಲ್ಲಿ ಅವರು ತಮ್ಮ ಸ್ವಂತ ಬಲದಲ್ಲಿ ಮಾಂಸಭಾವದ ಭರವಸವನ್ನಿಡದ ಹಾಗೆಯೂ ತಮ್ಮ ಸ್ವಂತ ಧೈರ್ಯವೂ ಬುದ್ಧಿಯೂ ಬಲವೂ ಕೈಗೂಡಿ ಬರಲಿಕ್ಕೆ ಕಾರಣವೆಂಬ ಹೆಚ್ಚಳವು ಹುಟ್ಟದ ಹಾಗೆಯೂ ಆರಂಭದಲ್ಲಿಯೇ ಅದಕ್ಕೆ ಪ್ರತಿಕೂಲವಾಗಿ ಸಾಕಷ್ಟು ಕರ್ತನು ತೋರಿಸಿದನು.

೨) ಯೋಷುವ. ೭, ೮ ಸಂಧಿಗಳು. ಅಲ್ಪವೆಂದೆಣಿಸುವ ಆಯಿ ಮೂರು ಸಾವಿರ ಇಸ್ರಯೇಲರನ್ನು ಹೊಡದು ಬಿಡುತ್ತದೆ. ಯಾಕಂದರೆ ಇವರಲ್ಲಿ ಒಬ್ಬನು ನಾಶನಕ್ಕೆ ಒಳಗಾಗ ಮಾಡಿದಂಥಾದಕ್ಕೆ ಕೈ ಹಾಕಿರುತ್ತಿರಲಾಗಿ ಕರ್ತನ ಶಾಪವು ಸಚೆ

ಯ ಮೇಲೆ ಇತ್ತು. ಚೀಟು ಹಾಕುತ್ತಲೇ ಅದು ಆ ತಪ್ಪು ಮಾಡಿದವನಾದ ಆಖಾನನೆಂಬವನನ್ನು ತೋರಿಸುತ್ತದೆ. (ಸಂಗಡ ಪಾತಕವುಳ್ಳಂಥ) ಕುಟುಂಬದವರೆಲ್ಲರ ಕೂಡ ಕಲ್ಲೆಸೆಯಲ್ಪಡುತ್ತಾನೆ. ಈಗ ಆಯಿಯನ್ನು ಗೆಲ್ಲ ಬಹುದು. ಆದರೆ ಮೊದಲು ಶತ್ರುವನ್ನು ಮಾಂಸಚಾವವಾಗಿ ಅಲ್ಪವೆಂದೆಣಿಸಿದ್ದಕ್ಕೆ ಬದಲಾಗಿ ಈಗ ಸೈನ್ಯವೆಲ್ಲಾ ಸನ್ನದ್ಧವಾಗ ಬೇಕು. ಯೋಷುವನು ತೋರಿಕೆಗೆ ಓಡಿ ಹೋದದ್ದನ್ನು ಕಂಡು ಪಟ್ಟಣನಿವಾಸಿಗಳು ಅವನ ಬೆನ್ನಟ್ಟುತ್ತಾರೆ. ಅಷ್ಟರೊಳಗೆ ಅಡಗಿ ಕೊಂಡಿದ್ದ ಹೊಂಚುಗಾರರು ಪಟ್ಟಣವನ್ನು ಒಳನುಗ್ಗಿ ಸುಟ್ಟು ಬಿಡುತ್ತಾರೆ.

ಪ ರಿ ಶಿ ಷ್ಟ. ಆಖಾನನ ಪಾಪವು ಸಭೆಯೆಲ್ಲಾದರ ಮೇಲೆ ಬಿದ್ದದ್ದು ಹ್ಯಾಗಂದರೆ—ಒಂದು ಕಡೆಯಲ್ಲಿ ಸಭೆಯು ಅವಯುವಗಳುಳ್ಳ ಒಂದೇ ಶರೀರದ ಹಾಗೆ ಇತ್ತು. ಅತ್ತ ಕಡೆಯಲ್ಲಿ ಇಲ್ಲಿ ಸಂಭವಿಸಿದ ಪಾಪದ ಸ್ವಭಾವವು ಅಂಥಾದ್ದಾಗಿತ್ತು. ಮೀರಿದ ಕಟ್ಟಳೆಯು ಒಂದೇ ಸಭೆಯಾಗಿದ್ದಂಥ ಇಡೀ ಸಭೆಯನ್ನು ಕುರಿತು ಆಗಿತ್ತು. ಆದದರಿಂದ ಇಡೀ ಸಭೆಯು ಅದನ್ನು ಪೂರ್ಣವಾಗಿ ಕೈಕೊಳ್ಳುವದು ಅವಶ್ಯವಾಗಿತ್ತು. ಒಬ್ಬನು ಪಾಪವನ್ನು ಮಾಡಲಿಕ್ಕೆ ಆದದ್ದು ಸಭೆಯು ಆತ್ಮಿಕವಾಗಿ ಸದ್ಯಕ್ಕೆ ಬಲಹೀನವಾಗಿರುತ್ತದೆಂಬದಕ್ಕೆ ಸಾಕ್ಷಿಯಾಗಿರುತ್ತದೆ. ಹೀಗಿರುತ್ತಿರಲಾಗಿ ಒಬ್ಬನ ತಪ್ಪು ಎಲ್ಲರ ತಪ್ಪು ಆಯಿತು. ಅಂಥಾದ್ದಾಗಿರಲಾಗಿ ಸಭೆಯು ತನಗಿದ್ದ ಆತ್ಮಿಕಬಲದಿಂದ ಕೆಟ್ಟು ಹೋದ ಅಂಗವನ್ನು ಕಿತ್ತು ಬಿಸಾಡುವ ಮಟ್ಟಿಗೂ ಸಭೆಯ ಮೇಲೆ ಭಾರವಾಗಿತ್ತು.

೩) ಯೋಷುವ. ೮, ೩೦—೩೫. ಇದಾದ ಮೇಲೆ ಯೋಷುವನು ಯೇಬಲ್ ಪರ್ವತದಲ್ಲಿ ಒಂದು ಬಲಿಪೀಠವನ್ನು ಕಟ್ಟಿ, ಅದರ ಮೇಲೆ ಬಲಿಯರ್ಪಿಸಿ ನೇಮವನ್ನು ದೊಡ್ಡ ಕಲ್ಲುಗಳಲ್ಲಿ ಅಲ್ಲಿಯೇ ಕೆತ್ತಿ, ಮೋಶೆಯು ಸಮಸ್ತವನ್ನು ನಿಶ್ಚೈಸಿ ಆಜ್ಞಾಪಿಸಿದ ಪ್ರಕಾರ (೫ಮೋಶೆ. ೨೭.) ಯೇಬಲ್ ಮತ್ತು ಗೊರಿಜಿಂಪ್ ಪರ್ವತಗಳಲ್ಲಿ ನಿಂತ ಗೋತ್ರಗಳ ಮುಂದೆ ಆಶೀರ್ವಾದವನ್ನೂ ಶಾಪವನ್ನೂ ಸಾರಿಸುತ್ತಾನೆ.

ಪ ರಿ ಶಿ ಷ್ಟ. ಈ ಎರಡು ಪರ್ವತಗಳು ಒಂದಕ್ಕೊಂದು ಎದುರಾಗಿ ಎಫ್ರಾಯಿಮ್ ಪರ್ವತಗಳ ಎತ್ತರದಲ್ಲಿರುತ್ತವೆ. ಎರಡರ ಮಧ್ಯದಲ್ಲಿಯೂ ಶಿಖೇಮದ ಮೇಲ್ಬಯಿಲು ಉಂಟು. ಆಶೀರ್ವಾದವನ್ನೂ ಶಾಪವನ್ನೂ ಸಾರಿದ್ದು ಹೀಗೆ ಎಂತ ಕಾಣುತ್ತದೆ. ಒಂದೊಂದು ಪರ್ವತದಲ್ಲಿ ಆರಾರು ಗೋತ್ರಗಳು ನಿಂತಿರುವವು. ಎರಡರ ಮಧ್ಯದಲ್ಲಿಯೂ ತಗ್ಗಿನಲ್ಲಿ ಯಾಜಕರು ಸಾಕ್ಷಿಪೆಟ್ಟಿಗೆಯೊಡನೆ ನಿಂತು ಗರಿಜಿಮ್ ಕಡೆಗೆ ಮುಖ ಮಾಡಿ ಆಶೀರ್ವಾದದ ಮಾತುಗಳನ್ನೂ, ಯೆಬಾಲ್ ಕಡೆಗೆ ಮುಖ ಮಾಡಿ

ಶಾಪದ ಮಾತುಗಳನ್ನೂ ಗಂಭೀರ ಧ್ವನಿಯಿಂದ ಸಾರಿರುವರು. ಒಂದೊಂದು ಶಾಪದ ವಾಕ್ಯಕ್ಕೂ ಆಶೀರ್ವಾದದ ವಾಕ್ಯಕ್ಕೂ ಜನವೆಲ್ಲಾ ಉತ್ತರ ಕೊಟ್ಟು— ಆಮೆನ್ ಹೇಳಿರುವದು.—ಶಾಪದ ಪರ್ವತವಾಗಿದ್ದ ಏಬಾಲವು ಬರೇದಾಗಿಯೂ ಬೋಳಾಗಿಯೂ ಇರುತ್ತದೆ. ಆಶೀರ್ವಾದದ ಪರ್ವತವಾಗಿದ್ದ ಗಾರಿಜಿಂಮ್ ಹಸುರಾಗಿಯೂ ಫಲಭರಿತವಾಗಿಯೂ ಇರುತ್ತದೆ.—ನೇಮವನ್ನು ಕೆತ್ತುವದೂ, ಬಲಿಪೀಠವನ್ನು ಕಟ್ಟುವದೂ ಬಲಿಯನ್ನು ತರುವದೂ ಶಾಪದ ಪರ್ವತದಲ್ಲಿ ನಡಿಯ ಬೇಕೆಂದು ನಿಶ್ಚೈಸಲ್ಪಟ್ಟದ್ದಕ್ಕೆ ವಿಶೇಷವಾದ ಕಾರಣವು ಏನಂದರೆ—ನೇಮವೂ ಬಲಿಯೂ ಶಾಪಕ್ಕೆ ವಿಶೇಷ ಸಂಬಂಧವುಳ್ಳವುಗಳಾಗಿರುತ್ತವೆ. ನೇಮವು ಶಾಪವನ್ನು ಹೆಚ್ಚಿಸುತ್ತದೆ. ಬಲಿಯು ಅದನ್ನು ತೆಗದು ಹಾಕುತ್ತದೆ.



## § 53. ಮುಂದಿನ ವೃತ್ತಾಂತ

### ಗಿಬಿಯೋನ್ಯರು ಅದೋನಿಜೇದೆಕ್ ಯಾಬಿನ್

೧) ಯೋಷುವ. ೯. ಹೀಗೆ ಬಹಳ ವೇಗದಿಂದಲೂ ಆಶ್ಚರ್ಯ ರೀತಿಯಿಂದಲೂ ಇವರು ಜಯ ಹೊಂದಿದ್ದನ್ನು ನೋಡಿ, ಗಿಬಿಯೋನೆಂಬ ಮಹಾ ಪಟ್ಣದ ನಿವಾಸಿಗಳು ಭಯ ಪಟ್ಟು ಯೋಷುವನಿಂದಲೂ ಹಿರಿಯರಿಂದಲೂ ಕಪಟದಿಂದ ಒಡಂಬಡಿಕೆಯನ್ನು ಹೊಂದುತ್ತಾರೆ. ಅವರು ಹರಕುವಸ್ತ್ರಗಳನ್ನೂ ಬೂಜು ಹಿಡಿದ ರೊಟ್ಟಿಗಳನ್ನೂ ತೋರಿಸಿ ತಾವು ದೂರ ದೇಶದಿಂದ ಬಂದವರೆಂದು ಸುಳ್ಳಾಡಿ ಅವರ ಮೇಲೆ ಸಹಾ ಬರಲಿಕ್ಕಿದ್ದ ನ್ಯಾಯಶಿಕ್ಷೆಗೆ ತಂತ್ರದಿಂದ ತಪ್ಪಿಸಿ ಕೊಳ್ಳುತ್ತಾರೆ. ಹ್ಯಾಗಂದರೆ ಮೋಸವು ತಿಳಿದು ಬಂದಾಗ ಹಿರಿಯರು ಪ್ರಮಾಣಕ್ಕಾಗಿ ಏನೂ ಮಾಡ ಕೂಡದು. ಯೋಷುವನು ಕರ್ತನ ಹತ್ತರ ಕೇಳದೆ ಇದ್ದದರಿಂದ ಜನವು ಗುಣುಗುಟ್ಟುತ್ತದೆ. ಗಿಬಿಯೋನ್ಯರು ಅವರ ಮೋಸದ ಶಿಕ್ಷೆಗಾಗಿ ಶುದ್ಧ ನಿವಾಸಕ್ಕೂ ಸಮಸ್ತ ಸಭೆಗೂ ಬೇಕಾಗಿ ಕಟ್ಟಿಗೆ ಕಡಿಯುವವರೂ ನೀರು ತರುವವರೂ ಆಗ ಬೇಕೆಂಬ ತೀರ್ಪು ಹೊಂದುತ್ತಾರೆ.

೨) ಯೋಷುವ. ೧೦ — ೧೨. ಗಿಬಿಯೋನಕ್ಕೆ ಪ್ರತೀಕಾರ ಮಾಡ ಬೇಕೆಂಬದಾಗಿ ಯೆರೂಸಲೇಮದ ಅರಸನಾದ ಅದೋನಿಜೇದೆಕನ ಒಳಗೆ ದಕ್ಷಿಣದ ಐದು ಅರಸುಗಳು ಒಡಂಬಡಿಕೆ ಮಾಡಿ ಕೊಳ್ಳುತ್ತಾರೆ. ಯೋಷುವನು ಗಿಬಿಯೋನದ ಮುತ್ತಿಗೆಯನ್ನು ತೆಗದು ಬಿಡುತ್ತಾನೆ. ಇಸ್ರಯೇಲನ ಖಡ್ಗದಿಂದಲೂ ಇನ್ನೂ ಹೆಚ್ಚಾಗಿ ಆಕಾಶದ ಮಳೆಗಲ್ಲುಗಳಿಂದಲೂ ಓಡಿ ಹೋಗುವ ಶತ್ರುಗಳು ಬಿದ್ದುಹೋಗುತ್ತಾರೆ. ಜಯವು

ಳ್ಳ ರಣದ ಕಾವಿನಲ್ಲಿ ಯೋಷುವನು ಇಸ್ರಯೇಲ ಜನರ ಮುಂದೆ ಸೂರ್ಯನೇ ಗಿಬಿಯೋನಿನಲ್ಲಿಯೂ ಚಂದ್ರನೇ ಅಯಲೋನ್ ತಗ್ಗಿನಲ್ಲಿಯೂ ನಿಲ್ಲು ಎಂದು ಹೇಳಿದನು. ಆಗ್ಯೆ ಸೂರ್ಯನೂ ಚಂದ್ರನೂ ಜನಾಂಗವು ಶತ್ರುಗಳಿಗೆ ಬದಲು ಕೊಡುವ ಮಟ್ಟಿಗೂ ನಿಂತವು. ಈ ಸಂಗತಿಯು ಚಕ್ತನ ಪುಸ್ತಕದಲ್ಲಿ ಬರದಿರುತ್ತದೆ. ಸೂರ್ಯವು ಆಕಾಶದ ಮಧ್ಯದಲ್ಲಿ ನಿಂತಿತು. ಸ್ವಲ್ಪ ಕಡಿಮೆ ಒಂದು ದಿವಸವೆಲ್ಲಾ ಕಂತಲಿಕ್ಕೆ ತಡ ಮಾಡಿತು. ಕರ್ತನು ಒಬ್ಬ ಮನುಷ್ಯನ ಮಾತಿಗೆ ಕಿವಿ ಕೊಟ್ಟಂಥ ಈ ದಿವಸದ ಹಾಗೆ ಮೊದಲಾಗಲಿ ಮತ್ತೆಯಾಗಲಿ ದಿವಸವಿರಲಿಲ್ಲ. ಯಾಕಂದರೆ ಕರ್ತನು ಇಸ್ರಯೇಲನಿಗಾಗಿ ಝುಗಳವಾಡಿದನು. — ಐದು ಅರಸುಗಳು ಒಂದು ಗವಿಯಲ್ಲಿ ಓಡಿ ಅಡಗಿ ಕೊಂಡಿರಲಾಗಿ ಯೋಷುವನು ಬೆನ್ನಟ್ಟುವದರಲ್ಲಿ ಆತಂಕ ಪಡದ ಹಾಗೆ ಗವಿಯ ಮೇಲೆ ದೊಡ್ಡ ಕಲ್ಲುಗಳನ್ನು ಇಟ್ಟು ಹೋಗಿದ್ದನು. ಈಗ ಅವರನ್ನು ಹೊರಗೆ ತರಿಸುತ್ತಾನೆ. ಯೋಷುವನು ಅವರ ಕುತ್ತಿಗೆಯ ಮೇಲೆ ಮೆಟ್ಟ ಬೇಕೆಂದು ನಾಯಕರಿಗೆ ಅಪ್ಪಣೆ ಕೊಡುತ್ತಾನೆ. ಇದರ ತರುವಾಯ ಅವರು ಕೊಂದು ಹಾಕಲ್ಪಡುತ್ತಾರೆ. ಈಗ ದಕ್ಷಿಣದಲ್ಲಿರುವ ಪಟ್ಟಣಗಳಲ್ಲಿ ಸ್ವಲ್ಪ ಕಡಿಮೆ ಎಲ್ಲಾ ಒಂದೊಂದೆಯಾಗಿ ಜಯಿಸುತ್ತಾರೆ. ಇವರ ಒಡಂಬಡಿಕೆಯ ಹಾಗೆಯೇ ಬಡಗಲಾಗಿನ ಅರಸುಗಳು ಸಹಾ ಹಜೋರದ ಯಾಬೀನನ ಕೆಳಗೆ ಒಡಂಬಡಿಕೆಯನ್ನು ಮಾಡಿ ಕೊಳ್ಳುತ್ತಾರೆ. ಬಹು ದೊಡ್ಡದಾಗಿರುವ ಅವರ ಸೈನ್ಯವು ಬಹಳವಾದ ಕಬ್ಬಿಣದ ರಥಗಳಿಗಾಗಿ ಭಯಂಕರವಾಗಿತ್ತು. (ರಥಗಳಿಗೆ ಕತ್ತಿಗಳಿದ್ದವಂತೆ.) ಮೇರೋಮ್ ಸಮುದ್ರದ ಹತ್ತರ ಶತ್ರುಗಳು ತಂಬು ಹೊಡದಿದ್ದರು. ಯೋಷುವನು ಅವರ ಮೇಲೆ ಬಿದ್ದು ಹೊಡದು ಬಿಡುತ್ತಾನೆ. ಹಜೋರವು ನಾಶನಕ್ಕೆ ಒಪ್ಪಿಸಲ್ಪಡುತ್ತದೆ. ಮಿಕ್ಕಾದ ಪಟ್ಟಣಗಳನ್ನು ಜೈಸಿ ಯುದ್ಧಸ್ಥರನ್ನು ಅಳ್ಳಿಡುತ್ತಾರೆ.

ಪರಿಶಿಷ್ಟ. ೧. ಯೋಷುವನು ಧೈರ್ಯವಾಗಿ ವಿಶ್ವಾಸದಿಂದ ಹೇಳಿದ ಮಾತೂ ಅದು ಸಂಪೂರ್ತಿಯಾದದ್ದೂ ಮಾರ್ಕ. ೧೧, ೨೩. ೨೪ನೆಯಲ್ಲಿ ಇರುವ ವಾಗ್ದತ್ತಕ್ಕೆ ಹಳೇ ಒಡಂಬಡಿಕೆಯಲ್ಲಿ ನಡದ ದೃಷ್ಟಾಂತವಾಗಿರುತ್ತದೆ. ಯೋಷುವನು ಶತ್ರುಗಳನ್ನು ಬೆನ್ನಟ್ಟಿ ತನ್ನ ಆಲೋಚನೆಯನ್ನು ತೀರಿಸುವ ಮಟ್ಟಿಗೂ ದಿವಸದ ಬೆಳಕು ಇರುವದೂ ರಾತ್ರಿಯ ಕತ್ತಲೆಯು ಭೂಮಿಯನ್ನು ಮುಚ್ಚದಿರುವದೂ ಅವಶ್ಯವಾಗಿತ್ತು. ಇದನ್ನು ಅವನು ತನ್ನ ವಿಶ್ವಾಸದ ಅದ್ಭುತ ಬಲದಿಂದ ಪಡಕೊಂಡನು. ಯೋಷುವನು ತಾನು ತಿಳಿದ ಪ್ರಕಾರ ವಿಶ್ವಾಸದ ಅಪ್ಪಣೆಯನ್ನು ಉಚ್ಚರಿಸಿರುವನು. ಮತ್ತು ದೇವರು ತಾನು ತಿಳಿದ ಪ್ರಕಾರ ಅವನ ವಿಜ್ಞಾಪನೆಯನ್ನು ಈಡೇರಿಸಿರುವನು — ಇದರಿಂದ ಜೋತಿಷ್ಯ ಸೂತ್ರಗಳನ್ನು ನಿಶ್ಚೈಸಲಿಕ್ಕೆ ಏನೂ ಆಧಾರವಾಗದು.

ಪರಿಶಿಷ್ಟ. ೨. ಭಕ್ತನ ಪುಸ್ತಕವು (ಭಕ್ತನು ಅಂದರೆ ಇಸ್ರಯೇಲ್) ಪರಿಶುದ್ಧವಾದ ಯುದ್ಧಗೀತಗಳ ಸಂಗ್ರಹವೆಂತ ಕಾಣುತ್ತದೆ. ಅದು ಈಗ ನಮಗೆ ಇಲ್ಲ. ಕರ್ತನ ಯುದ್ಧಗಳನ್ನು ಕುರಿತು ಎಂಬ ಪುಸ್ತಕವು ಅದೇ ಪುಸ್ತಕ ಎಂದು ಕಾಣುತ್ತದೆ. ೪ ಮೋಶೆ. ೨೧, ೧೪. ೨ ಸಾಮುವೇಲ್. ೧, ೧೮ನೇ ನೋಡು. ಈ ಸಂಗ್ರಹವನ್ನು ಅರಣ್ಯದಲ್ಲಿ ಪ್ರಯಾಣ ಮಾಡುವಾಗಲೇ ಕೂಡಿಸಲಿಕ್ಕೆ ಆರಂಭ ಮಾಡಿರಬಹುದು. ಇದನ್ನು ಆಗಾಗ್ಯೆ ಹೊಸ ಗೀತಗಳಿಂದ ಹೆಚ್ಚಿಸಿ ಇರುವರು.



## § 54. ದೇಶವನ್ನು ಹಂಚಿ ಕೊಟ್ಟದ್ದು. ಯೋಷುವನ ಮರಣವು

೧) ಯೋಷುವ. ೧೩—೨೨. ಹೀಗೆ ಏಳು ವರ್ಷ ಯುದ್ಧ ಮಾಡಿ ದೇಶವನ್ನೆಲ್ಲಾ ತಮ್ಮ ಕೈವಶ ಮಾಡಿ ಕೊಂಡರು. ಹ್ಯಾಗೂ ಕೆಲವು ದುರ್ಗಗಳು ಕನಾನ್ಯರ ಕೈಗಳಲ್ಲಿ ಇರುತ್ತಿದ್ದವು. ಮುಖ್ಯವಾಗಿ ದಕ್ಷಿಣ ಸಮುದ್ರ ತೀರದಲ್ಲಿ ಫಿಲಿಷ್ಟ್ಯರ ಬಲವು ಕುಂದದೆ ಇತ್ತು. ಆದರೂ ಒಟ್ಟಿಗೆ ಮಾತಾಡುವದಾದರೆ ಕೆಲಸವು ತೀರಿತೆಂದು ಹೇಳ ಬಹುದು. ಉಳಿದದ್ದನ್ನು ಒಂದೊಂದು ಗೋತ್ರದವರು ತೀರಿಸಲಿಕ್ಕೆ ಶಕ್ತರಾಗಿದ್ದರು. ಅವರು ತೀರಿಸುವದು ಅವಶ್ಯವಾಗಿತ್ತು. ಹೀಗಿರಲಾಗಿ ದೇಶವನ್ನು ಚೀಟುಗಳಿಂದ ಹಂಚಿ ಕೊಡಲಿಕ್ಕೆ ಯೋಷುವನು ಅಪ್ಪಣೆ ಹೊಂದುತ್ತಾನೆ. ಈಗ ಗಿಲ್ಗಾಲಿನಿಂದ ಬೆಥೇಲಿಗೂ ಶಿಖೇಮಿಗೂ ಮಧ್ಯದಲ್ಲಿರುವ ಶೀಲೋ ಎಂಬಲ್ಲಿಗೆ ಬಂದು ತಂಬು ಹೊಡಿಯುತ್ತಾರೆ. ಇಲ್ಲಿಯೇ ಸಾಕ್ಷಿಗುಡಾರವನ್ನು ಸಹಾ ನಿಲ್ಲಿಸುತ್ತಾರೆ. ರೂಬೇನ್, ಗಾದ್, ಅರ್ಧ ಮನಸ್ಸೆ, ತಮಗೆ ಮೋಶೆಯು ಯೊರ್ದಾನ್ ಅತ್ತ ಕಡೆಯಲ್ಲಿ ಕೊಟ್ಟ ದೇಶಕ್ಕೆ ತಿರಿಗಿ ಹೋಗಿ ಯೊರ್ದಾನಿನ ತೀರದಲ್ಲಿ ಒಂದು ಬಲಿಪೀಠವನ್ನು ಮಾಡಿರುತ್ತಾರೆ. ಇದು ಬಲಿಯರ್ಪಣೆಗೂ ದೇವರ ರಾಜ್ಯಕ್ಕೆ ವಿರೋಧವಾದ ದೇವಾರಾಧನೆಗೂ ಮಾಡಿರುತ್ತದೆ ಎಂಬದಾಗಿ ಉಳಿದ ಗೋತ್ರದವರು ಬಹಳವಾಗಿ ಕೋಪ ಮಾಡುತ್ತಾರೆ. ಆದರೆ ಅವರು ಯೊರ್ದಾನ್ ನದಿಯು ತಮ್ಮನ್ನೂ ತಮ್ಮ ಸಹೋದರರನ್ನೂ ಭಕ್ತಿಯನ್ನು ಕುರಿತಾಗಲಿ ರಾಜ್ಯವನ್ನು ಕುರಿತಾಗಲಿ ಪ್ರತ್ಯೇಕಿಸಲಾರದೆಂಬದಕ್ಕೆ ಸಾಕ್ಷಿಶಾಸನವಾಗಿಯೂ ಗುರುತಾಗಿಯೂ ಮಾಡಿಟ್ಟಿದ್ದರು.

೨) ಯೋಷುವ. ೨೩, ೨೪. ಯೋಷುವನು ತನ್ನ ಭಾರವಾದ ಕೆಲಸದಿಂದ ದಣಿದವನಾಗಿ ಇದನ್ನೆಲ್ಲಾ ಬಿಟ್ಟು ತನ್ನ ಬಾಧ್ಯದ ಭೂಮಿಗೆ ಹೋಗುತ್ತಾನೆ.

ಬಹು ಕಾಲದ ವರೆಗೆ ಸಮಾಧಾನವೂ ವಿಶ್ರಾಂತಿಯೂ ಇದ್ದ ತರುವಾಯ ಅವನು ಬಹಳ ಮುದುಕನಾಗಿಯೂ ಪ್ರಾಯ ಹೋದವನಾಗಿಯೂ ಇದ್ದಾಗ ಹಿರಿಯರನ್ನೂ ಮತ್ತೆ ಜನಾಂಗವನ್ನೆಲ್ಲಾ ಶಿಬೇಮಕ್ಕೆ ಕೂಡ ಕರೆಸಿದನು. ಅವರನ್ನು ದೇವರು ಆಶ್ಚರ್ಯ ರೀತಿಯಾಗಿ ಹ್ಯಾಗೆ ನಡಿಸಿದನೆಂಬದನ್ನು ಅವರ ಮುಂದಿಟ್ಟು ಯೆಹೋವನಿಗೆ ನಂಬಿಕೆಯಾಗಿ ಸೇವೆ ಮಾಡ ಬೇಕೆಂದು ಬುದ್ಧಿ ಹೇಳುತ್ತಾನೆ. ಅವನು ಹೇಳಿದ್ದು, ಆದರೆ ಕರ್ತನಿಗೆ ಸೇವೆ ಮಾಡಲಿಕ್ಕೆ ನಿಮಗೆ ಮನಸ್ಸಿಲ್ಲದಿದ್ದರೆ ನಿಮ್ಮ ಪಿತೃಗಳ ದೇವರಿಗಾಗಲೀ ಇಲ್ಲವೇ ಅಮೋರ್ಯರ ದೇವರುಗಳಿಗಾಗಲೀ ಯಾರಿಗೆ ಸೇವೆ ಮಾಡಲಿಕ್ಕೆ ನಿಮಗೆ ಮನಸ್ಸುಂಟಾಗಲೀ ಅವನನ್ನು ಇಂದೇ ಆಯಿದು ಕೊಳ್ಳಿರಿ. ಆದರೆ ನಾನೂ ನನ್ನ ಮನೆಯೂ ಕರ್ತನಿಗೆ ಸೇವೆ ಮಾಡುವೆವು. ಇದಕ್ಕೆ ಜನಾಂಗವೆಲ್ಲಾ ಉತ್ತರ ಹೇಳಿದ್ದು.— ನಾವು ಕರ್ತನನ್ನು ಬಿಟ್ಟು ಅನ್ಯದೇವರುಗಳಿಗೆ ಸೇವೆ ಮಾಡುವದು ನಮಗೆ ದೂರವಾಗಿರಲಿ.—ಹಾಗಲ್ಲ ನಾವು ಕರ್ತನಿಗೆ ಸೇವೆ ಮಾಡುವೆವು. ಹೀಗೆ ಯಾಹೋಷುವನು ಅದೇ ದಿನದಲ್ಲಿ ಜನರೊಡನೆ ಒಡಂಬಡಿಕೆಯನ್ನು ಮಾಡಿ ಒಡಂಬಡಿಕೆಯ ಸಾಕ್ಷಿಗಾಗಿ ಒಂದು ಸಾಕ್ಷಿಶಾಸನವನ್ನು ಮಾಡಿಟ್ಟನು. ಇದಾದ ಮೇಲೆ ಸಭೆಯನ್ನು ಹೋಗಗೊಡಿಸಿ ಸ್ವಲ್ಪ ಕಾಲದಲ್ಲಿಯೇ ನೂರಹತ್ತು ವರ್ಷದವನಾಗಿ ಶೀರಿ ಹೋದನು.

ಪರಿಶಿಷ್ಟ. ೧. ದೇವರ ರಾಜ್ಯದಲ್ಲಿ ಯಾರು ತನ್ನಿಂದ ತಾನೇ ಏನೂ ಅಲ್ಲವೆಂದು ತಿಳಿದು ಇರುತ್ತಾನೋ ಅವನೇ ದೊಡ್ಡವನು. ಈ ದೊಡ್ಡಸ್ಥಿಗೆಯು ಯೋಷುವನಿಗೆ ಇತ್ತು. ಪರಿಶುದ್ಧ ಚರಿತ್ರದ ಶೂರರಲ್ಲಿ ಈತನು ಎಲ್ಲರಿಗಿಂತಲೂ ಹೆಚ್ಚಾಗಿ ಸ್ವೇಚ್ಛೆಯಿಲ್ಲದವನಾಗಿ ಕಾಣುತ್ತಾನೆ. ನೇಮದ ಕಡೆಗೆ ಅವನಿಗಿದ್ದ ಬಹಳವಾದ ನಂಬಿಕೆಯೂ ದೇವರ ರಾಜ್ಯಕ್ಕೆ ಬೇಕಾದ ನಿಷ್ಕಳಂಕವಾದ ಮನೋಭಾವನೆಯೂ ಅವನ ಮುಖ್ಯ ಗುಣಗಳಾಗಿದ್ದವು. ತಾನೇ ಏನಾದರೂ ನಡಿಸ ಬೇಕಾಗಿದ್ದರೆ ಜಾಗ್ರತೆಯಿಂದಲೂ ಆಲೋಚನೆಯಿಂದಲೂ ನಡಕೊಂಡನು. ಯಾಕಂದರೆ ಕರ್ತನ ಯುದ್ಧಗಳನ್ನು ನಡಿಸುವವನಾಗಿದ್ದನು. ಆದರೆ ಕರ್ತನು ಅವನನ್ನು ಕಳುಹಿಸುವದಾದರೆ ಅನುಮಾನವಿಲ್ಲದೆಯೂ ವೇಗದಿಂದಲೂ ಖಂಡಿತ ಮನಸ್ಸಿನಿಂದಲೂ ಕಾರ್ಯವನ್ನು ನಡಿಸುವನು. ಅವನ ಧೈರ್ಯವು ದೈನ್ಯವೇ ಅವನ ತ್ರಾಣವು ವಿಶ್ವಾಸವೇ ಅವನ ಬುದ್ಧಿಯು ವಿಧೇಯತ್ವವೂ ಕರ್ತನ ಭಯವೂ ಇವುಗಳೇ. ಮೃದುಮನಸ್ಸಿನವನು, ಆದರೆ ಎಷ್ಟಾದರೂ ಪಾಪಕ್ಕಾಗಿ ಮೃದುಮನಸ್ಸಿನವನಲ್ಲ. ಇದು ಅವನು ಆಖಾನನ ಮೇಲೆ ತೀರಿಸಿದ ಕಠಿಣವಾದ ತೀರ್ಪಿನಿಂದ ಕಾಣುತ್ತದೆ. ಅದೇ ಪ್ರಕಾರ

ಕನಾನ್ಯರ ಮೇಲೆ ವಿನಾಶಶಾಪವನ್ನು ಸ್ವಲ್ಪವಾದರೂ ಬಿಡದೆ ಪೂರ್ಣವಾಗಿ ತೀರಿಸುವದರಲ್ಲಿಯೂ ತೋರುತ್ತದೆ. ಈ ಪ್ರಕಾರ ಮೃದುಮನಸ್ಸಿಗೆ ಕೂಡಿದ ಕಾಠಿಣ್ಯವೂ ಭೋಳೆತನಕ್ಕೆ ಕೂಡಿದ ಚತುರತ್ವವೂ ದೈನ್ಯಭಾವಕ್ಕೆ ಕೂಡಿದ ಮನಸ್ಸಿನ ಶ್ರೇಷ್ಟತ್ವವೂ ಇದೆಲ್ಲಾ ಸುವಾರ್ತೆಗೆ ತಕ್ಕವಾದದ್ದು. ಇಂಥಾ ವಿಶೇಷವಾದ ಸ್ವಭಾವದಿಂದಲೂ ಅದಕ್ಕೆ ಕೂಡಿದ ಅವನು ಬದುಕಿದ್ದಂಥಾ ದೇವರ ರಾಜ್ಯದಲ್ಲಿ ಇಂಥಾ ವಿಶೇಷವಾದ ಕಾಲದಿಂದಲೂ ಅವನಿಗಿದ್ದ ಅಧಿಕಾರದಿಂದಲೂ ಅವನೂ ಅವನ ಕೆಲಸವೂ ಮತ್ತೆ ಬರುವವನಿಗೆ ವಿಶೇಷವಾದ ಮುಂಗುರ್ತಾಗಿತ್ತು. ಅವನು ಜನಾಂಗವನ್ನು ವಾಗ್ದತ್ತವಿಶ್ರಾಂತಿಗಳ ದೇಶದಲ್ಲಿ ಪ್ರವೇಶಿಸ ಮಾಡುತ್ತಾನೆ. ಆದರೆ ಇದಕ್ಕಿಂತ ಹೆಚ್ಚಾಗಿ ಒಳ್ಳೇದಾಗಿರುವ ಮತ್ತೊಂದು ವಿಶ್ರಾಂತಿಯುಂಟು. ಇದರಲ್ಲಿ ಇದೇ ಹೆಸರ್ಗೊಂಡ ಮೂಲ ಗುರ್ತಾಗಿರುವವನು ಪ್ರವೇಶಿಸ ಮಾಡುತ್ತಾನೆ; (ಇಬ್ರಿ. ೪, ೮.) ಅವನು ಕರ್ತನ ಯುದ್ಧಗಳನ್ನೂ ತೀರ್ಪುಗಳನ್ನೂ ತೀರಿಸುತ್ತಾನೆ. ಇವುಗಳಲ್ಲಿ ಕ್ರಿಸ್ತನ ಜಯಗಳೂ ತೀರ್ಪುಗಳೂ ನೆರಳಾಗಿರುತ್ತವೆ.

ಪರಿಶಿಷ್ಟ. ೨. ಯೋಷುವನ ಮನೋಭಾವನೆಯಿಂದಲೇ ಅವನ ಕಾಲದಲ್ಲಿದ್ದ ಜನಾಂಗವು ಸಹಾ ಕುಮಾರು ತುಂಬಾಗಿದ್ದರು. ಈ ಕಾಲದ ಸಂತತಿಯ ಹಾಗೆ ದೇವರ ರಾಜ್ಯಕ್ಕಾಗಿ ಇಂಥಾ ಆಸಕ್ತಿಯಿಂದಲೂ ನೇಮಕ್ಕಾಗಿ ಇಂಥಾ ನಿಷ್ಕಪಟವಾದ ನಂಬಿಕೆಯಿಂದಲೂ ಅದೇ ಪ್ರಕಾರ ಬಲವಾದ ವಿಶ್ವಾಸದಿಂದಲೂ ಸತ್ಯವಾದ ದೇವರ ಭಯದಿಂದಲೂ ಅಷ್ಟು ತುಂಬಿ ಇದ್ದ ಬೇರೊಂದು ಕಾಲದ ಸಂತತಿಯೂ ಈ ಆಯಿದು ಕೊಂಡ ಜನಾಂಗದ ಕಥೆಯಲ್ಲೆಲ್ಲಿಯೂ ಕಾಣುವದಿಲ್ಲ. ಇದು ಮೊದಲನೇ ಪ್ರೀತಿಯ ಕಾಲವಾಗಿತ್ತು. ಹೀಗಿರುತ್ತಿರಲಾಗಿ ಕ್ರೈಸ್ತಸಭೆಯ ಮೊದಲನೇ ಶತಮಾನಗಳಿಗೆ ಸಮಾನವಾಗಿತ್ತು.



## ನಾಲ್ಕನೇ ಕಾಲ

## ನ್ಯಾಯಾಧಿಪತಿಗಳ ಕಾಲವು

(೩೨೦ ವರ್ಷದ ಕಾಲ)

### § 55. ಈ ಕಾಲದ ಸ್ವಭಾವವು

೧) ಜನಾಂಗವಾಗಿಯೂ ಸಂಸ್ಥಾನವಾಗಿಯೂ ಅಭಿವೃದ್ಧಿಯಾಗಿ ಜೀವಿಸಲಿಕ್ಕೆ ಬೇಕಾದದ್ದು ಎಲ್ಲಾ ಕಾಡಲ್ಪಟ್ಟಿತು. ಇಸ್ರಯೇಲನಿಗೆ ಹಾಲೂ ಜೇನೂ ಹರಿಯು

ವಂಥಾ ದೇಶವೂ, ಸಮಸ್ತ ಲೋಕದ ರಕ್ಷಣ್ಯದ ಬಲವಾದ ವೊಳಿಕೆಗಳುಳ್ಳ ಶಕ್ತಿಯೂ,
ಯೆಹೋವನು ತಾನೇ ತಲೆಯಾಗಿರುವಂಥ, ಜನಾಂಗದ ವಿಶ್ವಾಸವೇ ಪ್ರಾಣವಾಗಿರು
ವಂಥ ನ್ಯಾಯಧರ್ಮವೂ ಇತ್ತು. ಎಲ್ಲಾದಕ್ಕೂ ಮಧ್ಯಸ್ಥಳವು ಶಿಲೋವದಲ್ಲಿ
ಇದ್ದ ಪರಿಶುದ್ಧಸ್ಥಳವೇ. ಜನಾಂಗಕ್ಕೂ ಅದರ ಅದೃಶ್ಯನಾದ ಅರಸನಿಗೂ ನಡುವಿ
ನಲ್ಲಿರುವ ಮಧ್ಯಸ್ತನೂ ಪ್ರಧಾನಯಾಜಕನೇ. ಹಬ್ಬದ ಸಮಯದಲ್ಲಿ ಪರಿಶುದ್ಧಸ್ಥ
ಳದ ಹತ್ತರ ಕೂಡಿ ಬರುವ ಸಭೆಗಳು ಶಕ್ತಿಯಲ್ಲಿ ತಾವು ಒಂದೇಯಾಗಿರುತ್ತೇವೆಂ
ತಲೂ ಬೇರೆ ಕಾರ್ಯಗಳಿಗಾಗಿ ಕೂಡಿ ಬರುವ ಸಭೆಗಳು ಸಂಸ್ಥಾನವಾಗಿ ತಾವು ಒಂ
ದೇ ಎಂತಲೂ ನಿಶ್ಚಯಿಸಿ ಕೊಳ್ಳಲಿಕ್ಕೆ ಕಾರಣವಾದವು. ನ್ಯಾಯತೀರಿಸುವಿಕೆಯು ಹಿ
ರಿಯರ ಕೆಲಸವಾಗಿತ್ತು. ವಿಶೇಷವಾದ ವಿದ್ಯಮಾನಗಳಲ್ಲಿ ಎಲ್ಲಾ ಯೆಹೋವನು
ತಾನೇ ಊರಿಮ್ ತುಮ್ಮಿಮ್ ಎಂಬವುಗಳಿಂದ ನಿಶ್ಚಯಿಸುವದು. (ಸಮ ನೋಡು
§ ೩೭,೩.) ಕಷ್ಟದ ಸಮಯಗಳಲ್ಲಿ ಸಹಾ ಗುರುತುಗಳಿಂದಲೂ ಆಶ್ಚರ್ಯಗಳಿಂದಲೂ
ಕರಿಯುತ್ತಾ ಬುದ್ಧಿ ಹೇಳುತ್ತಾ ಸಹಾಯ ಮಾಡುತ್ತಾ ಶಿಕ್ಷಿಸುತ್ತಾ ತಾನೇ ಅವರ ಮ
ಧ್ಯದಲ್ಲಿ ಕೈ ಹಾಕಿದನು. ಈಗ ಪಿತೃಗಳ ಕಾಲದ ವೊಗ್ಗೆಗಳೂ ಆಶೀರ್ವಾದವೂ ಮ
ಹತ್ವವುಳ್ಳವುಗಳಾಗಿಯೂ ಬಲವುಳ್ಳವುಗಳಾಗಿಯೂ ಮಹಿಮೆಯುಳ್ಳವುಗಳಾಗಿಯೂ
ಅರಳುವದು ಅವಶ್ಯವಾಗಿತ್ತು, ಅರಳ ಬಹುದಾಗಿತ್ತು. ರಕ್ಷಣ್ಯದ ವೊಳಿಕೆಗಳು ಬಹ
ಳ ಸಮಾಧಾನದಲ್ಲಿಯೂ ಒಳ್ಳೇ ಬೆಳಿಯುವಿಕೆಯಲ್ಲಿಯೂ ಏನೂ ಅಡ್ಡಿ ಇಲ್ಲದೆ
ವೃದ್ಧಿ ಹೊಂದ ಬಹುದಾಗಿತ್ತು, ಹೊಂದ ಬೇಕಾಗಿತ್ತು.

೨) ಆದರೆ ಪ್ರತ್ಯಕ್ಷವಾದದ್ದು ಆಲೋಚನೆಯಲ್ಲಿ ಇದ್ದದಕ್ಕಿಂತಲೂ ಮಾಡಿದ್ದು
ಮಾಡ ಬೇಕಾದದಕ್ಕಿಂತಲೂ ಕಡಿಮೆಯಾಯಿತು. ಕರ್ತನು ಇಸ್ರಯೇಲನನ್ನು ರಣದ
ಲ್ಲಿಯೂ ವಿಧೇಯತ್ವದಲ್ಲಿಯೂ ಅಭ್ಯಾಸ ಮಾಡಿಸಲಿಕ್ಕಾಗಿಯೂ ಇಲ್ಲವೇ ತನ್ನ ಜ
ನಾಂಗಕ್ಕೆ ಕಾರಡೆಯು ಕೈಯ ಹತ್ರ ಇರ ಬೇಕೆಂಬದಾಗಿಯೂ ಕನಾನ್ಯ ಜನಾಂಗಗಳಲ್ಲಿ
ಕೆಲವು ಇನ್ನೂ ಉಳಿಸಿ ಇದ್ದನು. (ನ್ಯಾಯಾ. ೨, ೨೨. ೩, ೧. ೪.) ಕರ್ತನನ್ನು
ಅರಿಯದೆಯೂ ಆತನು ಇಸ್ರಯೇಲಿನಲ್ಲಿ ಮಾಡಿದ ಕ್ರಿಯೆಗಳನ್ನೂ ಅರಿಯದೆಯೂ
ಇದ್ದ ಮತ್ತೊಂದು ಸಂತತಿಯು ಬೆಳದಿತ್ತು. (೨, ೧೦.) ಅವರನ್ನು ನಿರ್ಮೂಲ
ಮಾಡುವಂಥಾ ದಿವ್ಯ ನ್ಯಾಯಶಿಕ್ಷೆಯನ್ನು ವಿಧೇಯರಾಗಿ ನಡಿಸುವದನ್ನು ಬಿಟ್ಟು
ಇಸ್ರಯೇಲನು ಅವರನ್ನು ಕಪ್ಪ ಕೊಡುವವರಾಗ ಮಾಡುವದರಲ್ಲಿ ತೃಪ್ತನಾದನು.
(ನ್ಯಾ. ೧, ೨೮. ವೊದಲಾದ) ಆದದರಿಂದ ಅವರು ಇವರಿಗೆ ಉರ್ಲೂ ಅವರ ದೇ
ವರುಗಳು ಇವರಿಗೆ ಬಲೆಯೂ ಆದರು. (೨, ೩.) ಪೂರ್ಣವಾಗಿ ಕೆಟ್ಟು ಹೋದಂ
ಥಾ ಶಪಿಸಲ್ಪಟ್ಟಂಥಾ ಈ ಸಂತತಿಯ ಸಂಗಡ ಏನೂ ಸಹವಾಸವನ್ನು ಮಾಡದೆ

ಇರುವದನ್ನು ಬಿಟ್ಟು ಅವರ ಹೆಣ್ಣುಗಳನ್ನು ಹೆಂಡರಾಗಿ ತಕ್ಕೊಂಡು ತಮ್ಮ ಹೆಣ್ಣುಗಳನ್ನು ಅವರ ಮಕ್ಕಳಿಗೆ ಕೊಟ್ಟು, ಅವರ ದೇವರುಗಳಿಗೆ ಸೇವೆ ಮಾಡಿದರು. (೩, ೬.) ಕನಾನ್ಯರ ಸೃಷ್ಟಿ ಆರಾಧನೆಯು ಆ ಸಮಯದಲ್ಲಿ ಬಹಳ ಶೋಭನೆಯುಳ್ಳ ರಮ್ಯತ್ವದ ಪೂರ್ಣ ಬಲದಿಂದ ಇವರಿಗೆದುರಾಯಿತು. ಮತ್ತು ವಿಶ್ವಾಸದ ವಿಕಾಸಾಪೇಕ್ಷೆಯಿಂದಲೂ ಪೂರ್ಣವಾದ ವಿಧೇಯತ್ವದಿಂದಲೂ ಒಂದು ಸಾರಿ ತಾಲಗಿದ ಮೇಲೆ ತಿರಿಗಿ ಪ್ರತೀಕಾರವಾಗಿ ನಿಲ್ಲಲಿಕ್ಕೆ ಶಕ್ತರಾಗಿರಲಿಲ್ಲ. ಆದರೆ ದೇವರು ತನ್ನ ಜನಾಂಗವನ್ನು ಬಿಡುವದಿಲ್ಲ. ಆರಂಭದಲ್ಲಿಯೇ ಕರ್ತನ ದೂತನು ಶಿಕ್ಷಿಸುವವನಾಗಿಯೂ ಬುದ್ಧಿ ಹೇಳುವವನಾಗಿಯೂ ಬೋಕಿಮ್ (ಅಂದರೆ ಅಳುವವರು) ಎಂಬಲ್ಲಿ ಪ್ರತ್ಯಕ್ಷವಾಗುತ್ತಾನೆ. (೨, ೧—೫.) ಇಸ್ರಾಯೇಲ್ಯರೆಲ್ಲರೂ ಅಳುತ್ತಾರೆ. ಆದರೆ ಅಷ್ಟೆ. ಮತ್ತು ಮುನ್ನೂರು ವರ್ಷಕ್ಕಿಂತ ಹೆಚ್ಚಾದ ಒಂದು ಅಹಿತವಾದ ಕಾಲವು ಆರಂಭವಾಗುತ್ತದೆ. ಇದರಲ್ಲಿ ಕನಾನ್ಯರ ಸೃಷ್ಟಿ ಆರಾಧನೆಯಲ್ಲಿ ಬೀಳುವದೂ ಕೂಡಲೇ ಕನಾನ್ಯರ ಒತ್ತಾಯದಿಂದ ಉಂಟಾಗುವ ಶಿಕ್ಷೆಯೂ ಯೆಹೋವನ ಹತ್ತರ ಮಾನಸಾಂತರ ಪಟ್ಟು ಬೇಡಿ ಕೊಳ್ಳುವದೂ ಯೆಹೋವನು ಅವರಿಗೆ ರಕ್ಷಕರಾಗಿ ಎಬ್ಬಿಸುವ ನ್ಯಾಯಾಧಿಪತಿಗಳಿಂದ ಉಂಟು ಮಾಡುವ ಬಿಡುಗಡೆಯೂ ಸ್ವಲ್ಪ ಕಾಲದಲ್ಲಿಯಾಗಲಿ ಹೆಚ್ಚು ಕಾಲದಲ್ಲಿಯಾಗಲಿ ತಿರಿಗಿ ತಿರಿಗಿ ಸಂಭವಿಸುತ್ತಾ ಇರುವದು (೨, ೧೧. ಮೊದ).

ಪರಿಶಿಷ್ಟ. ೧. ಸೃಷ್ಟಿಯಾರಾಧನೆ ಅಂದರೆ ಅದರ ಸ್ವಭಾವವನ್ನು ವಿಚಾರಿಸಿಕೊಂಡರೆ ಸೃಷ್ಟಿಯನ್ನೇ ದೇವರಾಗ ಮಾಡುವದೆಂದು ಕಂಡು ಬರುವದು. (ಸೃಷ್ಟಿ ದೈವೀಕರಣವು) ದೈವವು ನಿರ್ಮಾಣದಿಂದ ಪೂರ್ಣವಾಗಿ ಬೇರೆಯಾಗಿಯೂ ಅದಕ್ಕಿಂತ ಅಮಿತವಾಗಿ ಉನ್ನತವಾಗಿಯೂ ಆದರೂ ಅದೇ ಸಮಯದಲ್ಲಿ ಅದರಲ್ಲಿಯೂ ಅದರ ಪರಿಮುಖವಾಗಿಯೂ ಸರ್ವಶ್ರಾಣವುಳ್ಳದ್ದಾಗಿಯೂ ಸರ್ವತ್ರವಾಗಿಯೂ ಯತ್ನೈಸುವಂಥಾದ್ದಾಗಿ ಮೋಶೆಯಲ್ಲಿ ಕಂಡು ಬರುವ ಹಾಗೆ ಅನ್ಯಜನರು ಆಲೋಚಿಸಲಿಲ್ಲ. ದೈವವೂ ಅಡಗಿ ಇರುವಂಥಾ (ಹುಟ್ಟಿಸಿ ರಕ್ಷಿಸಿ ನಾಶ ಮಾಡುವಂಥಾ) ನಿರ್ಮಾಣದ ಬಲವೂ ಒಂದೇ ಎಂದು ನೆನಸಿದರು.

ಕನಾನ್ಯರ ನಿರ್ಮಾಣ್ಯಾರಾಧನೆಯಲ್ಲಿ ಬಾಲನು (ಸೂರ್ಯನು) ಗಂಡಾಗಿಯೂ ಅಸ್ತರ್ತೆ ಇಲ್ಲವೇ ಬಾಲ್ತಿ (ಚಂದ್ರ) ಹೆಣ್ಣಾಗಿಯೂ ಇರುವ ದೈವವೆಂದು ನೆನಸಿದರು. ಈ ಇಬ್ಬರ ಪೂಜೆಗಳಲ್ಲಿ ವ್ಯಭಿಚಾರ ಇತ್ಯಾದಿ ಬಹಳ ಅಸಹ್ಯಗಳು ನಡದವು. ಫಿಲಿಷ್ಟ್ಯರು ದಾಗೋನನನ್ನು ಆರಾಧಿಸಿದರು, ಮೋವಾಬ್ಯರು ಮೊಲೋಕನನ್ನು ಇವನಿಗೆ ವಿಶೇಷವಾಗಿ ಮನುಷ್ಯಬಲಿಗಳಿಂದ ಸೇವೆ ಮಾಡಿದರು. ಮಿದ್ಯಾನ್ಯರ

ಬಾಲ್‌ಪೆಯೋರನನ್ನು ಆರಾಧಿಸಿದರು. ಇವನ ಪೂಜೆಯಲ್ಲಿ ಬಹಳ ಮಲಿನವಾದ ಕೃತ್ಯಗಳಾದವು.

ಪರಿಶಿಷ್ಟ. ೨. ಇಸ್ರಯೇಲ್ಯರ ನ್ಯಾಯಾಧಿಪತಿಗಳ ಉದ್ಯೋಗವು ಯಾವಾಗಲೂ ಇರುವಂಥಾದ್ದಾಗಿರಲಿಲ್ಲ. ವಿಶೇಷವಾದ ಸಂಕಷ್ಟದ ಕಾಲಗಳಲ್ಲಿ ಜನಾಂಗವನ್ನು ರಕ್ಷಿಸಲಿಕ್ಕಾಗಿ ದೇವರಿಂದ ಕರೆಯಲ್ಪಟ್ಟ ಮೇಲೆ ತಮಗೆ ಆದ ಅಪ್ಪಣೆಯನ್ನು ತೀರಿಸಿ ಇದ್ದರೂ ಅವಸಾನಕಾಲದ ಪರ್ಯಂತರ ನ್ಯಾಯಾಧಿಪತ್ಯವನ್ನೂ ಆಳುವಿಕೆಯನ್ನೂ ವಿಶೇಷವಾಗಿ ಇಟ್ಟುಕೊಂಡರು. ಇವರ ಸ್ಥಿತಿಯೂ ಉದ್ಯೋಗವೂ ಪ್ರವಾದಿಗಳಿಗೆ ಸಂಬಂಧವಾದದ್ದು. ಇವರು ಕ್ರಿಯೆಗಳ ಪ್ರವಾದಿಗಳಾಗಿದ್ದರು.

೩) ಈ ಕಾಲದ ಕಥೆಗೆ ಮೂಲಾಧಾರವಾಗಿರುವ ನ್ಯಾಯಾಧಿಪತಿಗಳ ಪುಸ್ತಕವು ಜನಾಂಗವು ಅನೇಕ ಸಾರಿ ನಂಬಿಕೆಯನ್ನು ಬಿಟ್ಟು ಬಿಟ್ಟರೂ ಯೆಹೋವನ ಕೃಪೆಯೂ ನಂಬಿಕೆಯೂ ಸ್ಥಿರವಾಗಿ ನಿಂತಿತೆಂಬದಾಗಿ ಅವುಗಳನ್ನು ಮಹಿಮೆ ಪಡಿಸುವದಕ್ಕೋಸ್ಕರ ಜನಾಂಗವು ಬಿದ್ದು ಹೋದದ್ದನ್ನೂ ಅದಕ್ಕೆ ಬಂದ ಶಿಕ್ಷೆಯನ್ನೂ ರಕ್ಷಣೆಯನ್ನೂ ಹೊರ್ತು ಮತ್ತೇನೂ ಹೇಳುವದಿಲ್ಲ. ಆದರೆ ಈ ಕಾಲದಲ್ಲೆಲ್ಲಾ ಬಿದ್ದು ಹೋದದ್ದು ವಿಗ್ರಹಾರಾಧನೆಯೂ ಗಲಿಬಿಲಿಯೂ ಹೊರ್ತು ಮತ್ತೇನೂ ಇರಲಿಲ್ಲವೆಂದು ನೆನಸ ಬಾರದು. ಈ ಗಲಿಬಿಲಿಯ ಕಾಲಗಳ ಮಧ್ಯದಲ್ಲಿ ನಾಲ್ವತ್ತು ಎಂಭತ್ತು ವರ್ಷಗಳ ಪರ್ಯಂತರ ವಿಶ್ರಾಂತಿಸಮಾಧಾನಗಳ ಸಮಯಗಳು ಇದ್ದವು. ಆದರೆ ಈ ಸಮಯಗಳ ವಿಷಯವಾಗಿ ಎಲ್ಲಾ ವಿಸ್ತರಿಸ ಬೇಕೆಂದು ಕಥೆಯ ಆಲೋಚನೆಯಾಗಿರಲಿಲ್ಲ. ಅದರ ಹೊರ್ತು ಸರ್ವತ್ರವೂ ಸಮಾಧಾನವೂ ಕ್ರಮವೂ ಇರಲಾಗಿ ಆ ಸಮಯಗಳ ವಿಷಯ ಬಹಳ ವಿಸ್ತರಿಸಲಿಕ್ಕೆ ಅಷ್ಟು ಇರಲಿಕ್ಕೂ ಇಲ್ಲ. ಅಂಥಾ ಒಳ್ಳೇ ಸಮಯಗಳಲ್ಲಿ ಅಂತರಂಗದಲ್ಲಿ ದೇವರ ರಾಜ್ಯಕ್ಕೆ ಅನುಸಾರವಾದ ಮಹಿಮೆಯುಳ್ಳ ಫಲಗಳು ನಿಶ್ಚಯವಾಗಿ ಬೆಳದಿರ ಬೇಕು. ಆ ಪ್ರಕಾರದ ಒಂದು ಕಥೆಯನ್ನು ಶುದ್ಧ ಬರಹವು ರೂಥ್ ಎಂಬ ಪುಸ್ತಕದಲ್ಲಿ ಉದಾಹರಣೆಯಾಗಿ ಕಾಡುತ್ತದೆ.

ಪರಿಶಿಷ್ಟ. ನ್ಯಾಯಾಧಿಪತಿಗಳ ಪುಸ್ತಕವು ಮೊದಲನೇ ಸಂಧಿ ಇಪ್ಪತ್ತೊಂದನೇ ಶ್ಲೋಕದಿಂದ ನಿಶ್ಚಯವಾಗಿ ಕಾಣುವ ಪ್ರಕಾರ (ಸಮ ನೋಡು ೨ ಸಾಮು. ೫, ೬. ೭.) ದಾವಿದನ ಕಾಲದ ಮೊದಲೇ ಬರೆದಿರ ಬೇಕು. ಯೆಹೂದ್ಯರ ಸಂಪ್ರದಾಯದ ಪ್ರಕಾರ ಸಾಮುವೇಲನು ಗ್ರಂಥಕಾರನಾಗಿರುತ್ತಾನೆ.

## § 56. ಯೋಷುವನ ಮರಣದ ಮೇಲೆ ಆದ ಸಂಗತಿಗಳು

### ಮೊದಲನೇ ನ್ಯಾಯಾಧಿಪತಿಗಳು

೧) ನ್ಯಾಯಾ. ೧ ಸಂ. ಯೋಷುವನು ಸತ್ತನಂತರ ಕರ್ತನು ಕನಾನ್ಯರಿಗೆ ವಿರೋಧವಾಗಿ ಮಾಡುವ ಯುದ್ಧದಲ್ಲಿ ಯೆಹೂದಗೋತ್ರಕ್ಕೆ ನಾಯಕತ್ವವನ್ನು ಕೊಡುತ್ತಾನೆ. ಅವರು ಮೊದಲಾಗಿ ಬೇಸೀಕದ ಅರಸನಾಗಿರುವ ಅದೋನಿ ಬೇಸಿಕನ ಮೇಲೆ ಆಯುಧಗಳನ್ನು ಎತ್ತುತ್ತಾರೆ. ಈತನು ೭೦ ಅರಸುಗಳಿಗೆ ತಾನು ಮಾಡಿದೆನೆಂದು ಅರಿಕೆ ಮಾಡುವ ಹಾಗೆ ಇವನ ಕೈಕಾಲುಗಳ ಹೆಬ್ಬೆರಳುಗಳನ್ನೂ ಕಡಿದು ಹಾಕುತ್ತಾರೆ. ಯೆಹೂದನು ಯೆಹೂದಪರ್ವತಗಳನ್ನು ಜೈಸುತ್ತಾನೆ. ಬೆನ್ಯಮೀನನು ಆಲಸ್ಯಗಾರನಾಗಿದ್ದು ಯೆರೂಸಲೇಮದ ಮೇಲ್ಪಟ್ಟಣವಾಗಿರುವ ಚಿಯೋನ್ ಪರ್ವತವನ್ನು ಕಾಪಾಡಿ ಕೊಂಡಿರುವ ಯೆಬೂಸ್ಯರನ್ನು ಜೈಸಲಿಕ್ಕೆ ಆಗಲಿಲ್ಲ. ಮಿಕ್ಕಾದ ಗೋತ್ರಗಳು ಉಳಿದ ನಿವಾಸಿಗಳನ್ನು ಓಡಿಸಲೇ ಇಲ್ಲ. ಸದ್ಯಕ್ಕೆ ಅವರನ್ನು ಕಪ್ಪ ಕೊಡುವವರಾಗ ಮಾಡುವದರಲ್ಲಿ ಸಂತೃಪ್ತರಾದರು.

೨) ನ್ಯಾಯಾ. ೩ — ೫. ಕಾಲೇಬನ ಸಹೋದರನ ಮಗನಾದ ಒತ್ನಿಯೇಲನು ಮೊದಲನೇ ನ್ಯಾಯಾಧಿಪತಿಯಾಗಿದ್ದನು. ಕರ್ತನು ಇಸ್ರಯೇಲನು ಬಿದ್ದು ಹೋದದರಿಂದ ಯಾರ ಕೈಕೆಳಗೆ ಅವರನ್ನು ಮಾರಿ ಬಿಟ್ಟನೋ ಮೆಸೋಪತಾಮ್ಯದ ಅರಸನಾದ ಕೂಸನ್ ರಿಷಥಾಯಿಮ್ ಎಂಬವನ ಒತ್ತಾಯಕ್ಕೆ ಇಸ್ರಯೇಲ್ಯರನ್ನು ಒತ್ನಿಯೇಲನು ಬಿಡುಗಡೆ ಪಡಿಸಿದನು. ತಿರಿಗಿ ಬಿದ್ದದರಿಂದ ಮೋವಾಬ್ಯರ ಅರಸನಾದ ಯೆಗ್ಲೋನಿನ ದಾಸತ್ವದಲ್ಲಿ ಬೀಳುತ್ತಾರೆ. ಈತನಿಗೆ ನ್ಯಾಯಾಧಿಪತಿಯಾದ ಯೆಹೂದನು ಕಪ್ಪದೊಡನೆ ಒಂದು ಕತ್ತಿಯನ್ನು ತಂಪಿನ ಕೋಣೆಯಲ್ಲಿ ತಕ್ಕೊಂಡು ಹೋಗುತ್ತಾನೆ. ನಾನು ನಿನಗೆ ದೇವರ ವಾಕ್ಯವನ್ನು ತಂದಿದ್ದೇನೆಂದು ಹೇಳಿ ಅವನನ್ನು ತಿವಿದು ಬಿಟ್ಟು ಸೈನ್ಯವನ್ನು ಕೂಡಿಸಿ ಮೋವಾಬ್ಯರಲ್ಲಿ ಒಬ್ಬನಾದರೂ ಓಡದ ಹಾಗೆ ಹೊಡದು ಬಿಡುತ್ತಾನೆ. ಈ ಶೂರವಾದ ಕೆಲಸದಿಂದ ದೇಶಕ್ಕೆ ೮೦ ವರ್ಷದ ವಿಶ್ರಾಂತಿಯುಂಟಾಗುತ್ತದೆ. — ಶಮ್ಗರನು ಎತ್ತಿನ ಕೋಡಿನಿಂದ ಆರುನೂರು ಫಿಲಿಷ್ಟ್ಯರನ್ನು ಕೊಂದನು. ಇದಾದ ತರುವಾಯ ಸ್ವಲ್ಪ ಕಾಲದ ಮೇಲೆ ಜನಾಂಗವು ತಿರಿಗಿ ಹಚೋರದ ಯಾಬೀನನ ಕಠಿಣವಾದ ಒತ್ತಾಯವನ್ನು ಇಪ್ಪತ್ತು ವರ್ಷ ಪರ್ಯಂತರ ತಾಳಿ ಕೊಳ್ಳ ಬೇಕಾಯಿತು. (ಹಚೋರವನ್ನು ಯೋಷುವನು ನಾಶ ಮಾಡಿದನು. ಆದರೆ ಮತ್ತೆ ಅನ್ಯಜನರು ಅದನ್ನು ತಿರಿಗಿ ಕಟ್ಟಿದರು. ಯಾಬೀನ್ ಅದರ ಎಲ್ಲಾ ಅರಸುಗಳಿಗೂ ಇರುವ ಹೆಸರು) ಪ್ರವಾದಿನಿಯಾದ ದೆಬೋರಳು

ಬಾರಕನನ್ನು ಅಧಿಪತಿಯಾಗ ಮಾಡಿ ಅವನು ಬೇಡಿ ಕೊಂಡದರಿಂದ ಅವನ ಸಂಗಡ ಯುದ್ಧಕ್ಕೆ ಹೋಗುತ್ತಾಳೆ. ಶತ್ರುಗಳ ಸೈನ್ಯದ ಮುಖ್ಯಸ್ಥನು ಸಿಸರನು (ಆ ಸೈನ್ಯಕ್ಕೆ ೯೦ ಒಂಬೈನೂರು ಕತ್ತಿಗಳ ರಥಗಳು ಇದ್ದವು.) ಆಪರೆ ಈ ಮಹಾ ಸೈನ್ಯವು ಪೂರ್ಣವಾಗಿ ಅಪಜಯ ಪಡುತ್ತದೆ. ಮತ್ತು ಸಿಸರನು ತಾನೇ ಓಡಿ ಹೋಗುವವನಾಗಿ ಯಾಯೇಲಳ ಗುಡಾರದಲ್ಲಿ ಸತ್ತು ಹೋಗುತ್ತಾನೆ. ದೆಬೋರಳು ಜಯಕೀರ್ತನೆ ಹಾಡುತ್ತಾಳೆ. ನಾಲ್ವತ್ತು ವರುಷದ ವಿಶ್ರಾಂತಿಯಾಗುತ್ತದೆ.

ಪ ರಿ ಶಿ ಷ್ಟ. ಯಾಯೇಲಳು ಮಾಡಿದ್ದು (ಅವಳು ಮಲಗಿದ ಸಿಸರನ ತಲೆಯಲ್ಲಿ ಗೂಟ ಬಡಿದಳು) ಸಮವೆಂದು ಹೇಳುವದಿಲ್ಲ. ಆದರೂ ಅವಳನ್ನು ವಿಚಾರಿಸುವದಾದರೆ, ಅವಳು ಅಂಥಾ ಕೆಲಸವನ್ನು ಮಾಡಲಿಕ್ಕೆ ಆದ ಕಾರಣಗಳನ್ನು ಮರಿಯ ಬಾರದು. ಅವಳು ಜೀವಿಸಿದ ಕಾಲವೂ ಈ ಜನಾಂಗದ ಮೇಲೆ ವಿಶೇಷವಾದ ಉರಿಯುವ ಪ್ರೀತಿಯೂ ಅದನ್ನು ಬಲಾತ್ಕಾರದಿಂದ ಕಠಿಣವಾಗಿ ನಡಿಸುವವನ ಮೇಲೆ ಇರುವ ಮಹಾ ದೊಡ್ಡ ಹಗೆಯೂ ಇವುಗಳೆಲ್ಲಾ ಕಾರಣವಾದವು. ಯೆಹೂದನ ಕೆಲಸವು ಅದೇ ಪ್ರಕಾರದ್ದು. ನಾವು ಈಗ ಆಲೋಚಿಸುವ ಪ್ರಕಾರ ಅದು ಕೆಟ್ಟ ನರಹತ್ಯವೆಂಬದಾಗಿ ಕಂಡೀತು ಸರಿ.



## § 57. ಗಿದಿಯೋನ್. ಅಬಿಮೇಲೆಕ್

೧) ನ್ಯಾಯಾ. ೬—೮ ಸಂ. ತಿರಿಗಿ ಇಸ್ರಯೇಲನು ಕರ್ತನ ಮುಂದೆ ಅಕೃತ್ಯ ಮಾಡಿದನು. ಮತ್ತು ಏಳು ವರ್ಷ ಪರ್ಯಂತರ ಮಿದ್ಯಾನ್ಯರ ಕೈ ಬಹು ಜೋರವಾಗಿ ಅವರ ಮೇಲೆ ಬಿತ್ತು. ಆ ಸಮಯದಲ್ಲಿ ಅವರು ಬಂಡೆಗಳಲ್ಲಿಯೂ ಗವಿಗಳಲ್ಲಿಯೂ ಅಡಗಿ ಕೊಂಡರು. ಯಾಕಂದರೆ ಶತ್ರುಗಳು ಸುಲು ಕೊಳ್ಳುತ್ತಾ ಕೊಂದು ಹಾಕುತ್ತಾ ಎಲ್ಲಾ ಗದ್ದೆಗಳನ್ನು ಹಾಳು ಮಾಡುತ್ತಾ ಎಲ್ಲಾ ದನಗಳನ್ನು ಕದ್ದು ಕೊಳ್ಳುತ್ತಾ ಇದ್ದರು. ಗಿದಿಯೋನನನ್ನು ಕರ್ತನು ಅವರಿಗೆ ಹೊಸ ರಕ್ಷಕನಾಗಿ ಎಬ್ಬಿಸುತ್ತಾನೆ. (ಎಫ್ರಾಯಿಮ್ ಪರ್ವತಗಳಲ್ಲಿರುವ) ಒಫ್ರದ ವೃಕ್ಷರಾಜದ ಕೆಳಗೆ ಕರ್ತನ ದೂತನು ಬಂದು ಗಿದಿಯೋನನು ಸಮೀಪದಲ್ಲಿ ತನ್ನ ತಂದೆಯ ಕಣದಲ್ಲಿ ಗೋಧಿಯನ್ನು ಬಡಿಯುವಾಗ್ಯೆ ಅವನನ್ನು ವಂದಿಸಿ ಹೇಳಿದ್ದೇನಂದರೆ—ಯುದ್ಧಸ್ಥನಾದ ಶೂರನೇ! ಕರ್ತನು ನಿನ್ನ ಸಂಗಡ ಇರಲಿ! ಗಿದಿಯೋನನು ಬಲಿಯರ್ಪಿಸುತ್ತಾನೆ. ಮತ್ತು ಬೆಂಕಿಯು ಬಂಡೆಯಿಂದ ಎದ್ದು ಬಲಿಯನ್ನು ನುಂಗಿ ಬಿಡುತ್ತದೆ. ದೂತನ ಅಪ್ಪಣೆ

ಯ ಪ್ರಕಾರ ಅವನು ಬಾಲನ ಬಲಿಪೀಠವನ್ನೂ ತೋಪನ್ನೂ ಹಾಳು ಮಾಡಿದನು. ಹೀಗಾಗಿ ಅವನಿಗೆ ಎರುಬಾಲ್ ಎಂಬ ಹೆಸರಾಯಿತು. (ಬಾಲ್ ತಾನೇ ಬದಲು ಕಾಡಲಿ!) ದೇವರೇ ತನ್ನನ್ನು ಕರೆದನೆಂಬದನ್ನು ಪೂರ್ಣವಾಗಿ ನಿಶ್ಚೈಸಿ ಕೊಳ್ಳುವದಕ್ಕಾಗಿ ಬಹಳ ವಿಶ್ವಾಸದ ಧೈರ್ಯದಿಂದ ಟಗರಿನ ಚರ್ಮದ ಮೇಲೆ ಗುರುತನ್ನು ಎರಡು ಸಾರಿ ಕೇಳಿ ಹೊಂದುತ್ತಾನೆ. ಸ್ವಲ್ಪ ಕಾಲದಲ್ಲಿ ಒಂದು ದೊಡ್ಡ ಸೈನ್ಯವು ಅವನ ಬಳಿಗೆ ಕೂಡಿ ಬರುತ್ತದೆ. ಆದರೆ ಇಸ್ರಯೇಲನು ನನ್ನ ಕೈ ನನ್ನನ್ನು ರಕ್ಷಿಸಿತ್ತೆಂದು ಹೇಳದ ಹಾಗೆ ಕರ್ತನು ಈ ಸಾರಿ ಬಹಳ ಮಂದಿಯಿಂದಲ್ಲ ಕೆಲವರಿಂದಲೇ ಸಹಾಯವನ್ನುಂಟು ಮಾಡಲಿಚ್ಛೈಸುತ್ತಾನೆ. ಆದದರಿಂದ ಭಯಸ್ಥರೂ ಪುಕ್ಕರೂ ಆಗಿರುವ ೨೨೦೦೦ ಜನರನ್ನು ತಿರಿಗಿ ಕಳುಹಿಸುತ್ತಾನೆ. ಆದರೆ ಉಳಿದ ಹತ್ತುಸಾವಿರ ಮಂದಿ ಸಹಾ ಬಹಳವಾಯಿತು. ಹಳ್ಳದ ಹತ್ತರ ಕರ್ತನು ಅವರೊಳಗಿಂದ (ಕೈಯಲ್ಲಿ ನೀರು ಕುಡಿದವರಾದ) ಮುನ್ನೂರು ಮಂದಿಯನ್ನು ಮಾತ್ರವೇ ಆಯಿದು ಕೊಳ್ಳುತ್ತಾನೆ. ಒಂದು ಜವೆಗೋಧಿಯ ರೊಟ್ಟಿಯು ಮಿದ್ಯಾನ್ಯರ ಗುಡಾರದ ಮೇಲೆ ಮಗಚಿ ಬಿದ್ದು ಅದನ್ನು ಕೆಡವಿ ಹಾಕಿತ್ತೆಂಬ ಸ್ವಪ್ನಗಳ ವಿಷಯವಾಗಿ ಧೈರ್ಯಗೆಟ್ಟ ಶತ್ರುಗಳು ತಾವೇ ಅದೆಲ್ಲಾ ಗಿದಿಯೋನನ್ನು ಕುರಿತೆಂದು ಅರ್ಥ ಮಾಡುವಾಗ್ಗೆ ಈತನು ಶತ್ರುಗಳ ದಂಡಿಗೆ ಬಂದು ಅದನ್ನು ಕೇಳುತ್ತಾನೆ. ದೀವಟಿಗೆಗಳೂ ಕಹಳೆಗಳ ಧ್ವನಿಯೂ ಒಡದು ಹೋಗುವಂಥಾ ಗಡಿಗೆಗಳ ಶಬ್ದವೂ ಇಲ್ಲಿ ಕರ್ತನ ಖಡ್ಗವೂ ಗಿದಿಯೋನನ ಖಡ್ಗವೂ ಎಂಬ ರಣಗರ್ಜನೆಯು ಶತ್ರುಗಳನ್ನು ಬಹಳವಾಗಿ ಗಲಿಬಿಲಿ ಮಾಡುತ್ತಿರಲಾಗಿ, ಅವರು ತಮ್ಮೊಳಗೆ ತಾವೇ ಒಬ್ಬನ ಮೇಲೆ ಒಬ್ಬನು ಕತ್ತಿಯನ್ನೂ ನಡಿಸುತ್ತಾರೆ. ನಾಲ್ವತ್ತು ವರ್ಷ ಪರಿಯಂತ್ರ ಗಿದಿಯೋನನು ನ್ಯಾಯವಿಚಾರತನ ನಡಿಸಿ ಜನರು ಆತನಿಗೆ ಕೊಡಲಿಕ್ಕೆ ಇದ್ದಂಥಾ ಸಂತಾನ ಪಾರಂಪರ್ಯವಾಗುವಂಥಾ ರಾಜ್ಯಉದ್ಯೋಗವನ್ನು ದೇವರಾಜ್ಯಕ್ಕೆ ಪೂರ್ಣವಾಗಿ ಅನುಸಾರವಾದ ಮನೋಭಾವನೆಯಲ್ಲಿ ತಿರಸ್ಕರಿಸಿ ನಾನೂ ನಿಮ್ಮ ಮೇಲೆ ಅಧಿಪತಿಯಾಗಲೊಲ್ಲೆ ನನ್ನ ಮಗನೂ ನಿಮ್ಮ ಮೇಲೆ ಅಧಿಪತಿಯಾಗಲಾಗದು ಕರ್ತನೇ ನಿಮ್ಮ ಮೇಲೆ ಅಧಿಪತಿಯಾಗ ಬೇಕು ಎಂದು ಹೇಳುತ್ತಾನೆ.

ಪ ರಿ ಶಿ ಷ್ಟ. ಸಂಪೂರ್ಣವಾಗಿ ದೇವರ ರಾಜ್ಯಕ್ಕೆ ಅನುಸಾರವಾದ ಈ ಕೆಲಸವನ್ನು ಗಿದಿಯೋನನು ಮಾಡಿದ ಸ್ವಲ್ಪ ಕಾಲದೊಳಗೆ ದೇವರ ರಾಜ್ಯಕ್ಕೆ ಅಷ್ಟೇ ಅನನುಸಾರವಾದ ಮತ್ತೊಂದು ಕೆಲಸವನ್ನು ಇದೇ ವಿಶ್ವಾಸಶೂರನು ಮಾಡುತ್ತಾನೆ. ಇಂಥಾದ್ದು ನ್ಯಾಯಾಧಿಪತಿಗಳ ಕಾಲದಲ್ಲಿ ವಿಶೇಷವಾದ ಸ್ವಭಾವವೆಂದು ಹೇಳ ಬೇಕು. ಏನಂದರೆ

ಅವನು ಶಿಲೋವಿನಲ್ಲಿರುವ ಸಾಕ್ಷಿಗುಡಾರಕ್ಕೆ ಪ್ರತಿಕೂಲವಾಗಿ ನೇಮಕ್ಕೆ ವಿರೋಧ ವಾಗಿಯೂ ಅಪಕೀರ್ತಿಯುಳ್ಳದ್ದಾಗಿಯೂ ಇರುವ ಪ್ರತ್ಯೇಕವಾದ ಆರಾಧನೆಯನ್ನು ಒಪ್ರದಲ್ಲಿ ಸ್ಥಾಪಿಸಿದನು. ಇದು ಅವನ ಸ್ವಂತ ಮನೆಯನ್ನು ಬೀಳ ಮಾಡಿತು ಮಾ ತ್ರವಲ್ಲ, ಎಲ್ಲಾ ಇಸ್ರಯೇಲ್ಯರನ್ನು ಶಿಲೋವಿನಲ್ಲಿರುವ ಸಮವಾದ ಶುದ್ಧಸ್ಥಳದಿಂದ ಲೂ ದೇವಾರಾಧನೆಯಿಂದಲೂ ಬೀಳ ಮಾಡಲಿಕ್ಕೆ ಕಾರಣವಾಯಿತು.

೨) ನ್ಯಾಯಾ. ೯ ಸಂ. ಆದರೆ ಗಿದಿಯೋನನಿಗೆ ಶಿಖೇಮಿನವಳಾದ ಅವನು ಇಟ್ಟುಕೊಂಡ ಸ್ತ್ರೀಯಿಂದ ಹುಟ್ಟಿದ ಮಗನಾಗಿರುವ ಅಬಿಮೇಲೆಕನನ್ನು ತಂದೆಯು ಸತ್ತು ಹೋದ ಮೇಲೆ ಶಿಖೇಮ್ಯರು ಅರಸನಾಗ ಮಾಡುತ್ತಾರೆ. ಈತನು ಎಪ್ಪತ್ತು ಸಹೋದರರನ್ನು ಮೋಸದಿಂದ ಕೊಂದು ಹಾಕಿಸುತ್ತಾನೆ. ಯೋಥಾಮ್ ಎಂಬ ಕಿರೆ ಮಗನು ಮಾತ್ರವೇ ತಪ್ಪಿಸಿ ಕೊಂಡನು. ಇವನು ಗೆರಿಜಿಮ್ ಪರ್ವತದಿಂದ ಶಿಖೇಮ್ಯರಿಗೆ (ಇಪ್ಪೇ ಮರವೂ ಅಂಜೂರದ ಮರವೂ ದ್ರಾಕ್ಷೇ ಬಳ್ಳಿಯೂ ಬೇಡವೆಂದು ಹೇಳಿದ ತರುವಾಯ ಮರಗಳು ತಮ್ಮ ನಾಶನಕ್ಕೆ ಅರಸನಾಗ ಮಾಡಿ ಕೊಂಡ) ಮುಳ್ಳಿನ ಪೊದೆಯ ಸಾಮ್ಯವನ್ನು ಹೇಳಿ ಉಭಯಪಕ್ಷದವರು ಒಬ್ಬರನ್ನೊಬ್ಬರು ನಿರ್ಮೂಲ ಮಾಡುವರೆಂಬ ಶಾಪವನ್ನು ಉಚ್ಚರಿಸುತ್ತಾನೆ. ಮೂರು ವರ್ಷ ಆಳಿದನಂತರ ಒಂದು ಯುದ್ಧ ಉಂಟಾಗುತ್ತದೆ. ಇದರಲ್ಲಿ ಶಿಖೇಮ್ಯದಲ್ಲಿ ಹೆಚ್ಚಾದವರು ಅಬಿಮೇಲೆಕನ ಕೋಪಕ್ಕೆ ಒಳಗಾದವರಾಗಿ ನಾಶವಾಗುತ್ತಾರೆ. ಅವನು ತಾನೇ ಒಂದು ಗೋಪುರದಿಂದ ಒಬ್ಬ ಸ್ತ್ರೀಯು ಕೆಳಗೆ ಬಿಸಾಡಿದ ಬೀಸುವ ಕಲ್ಲಿನಿಂದ ಪುಡಿಯಾಗಿ ಹೋಗುತ್ತಾನೆ.



## § 58. ಯೆಫ್ತಾಹನು

೧) ನ್ಯಾಯಾ. ೧೦ ಸಂ. ತರುವಾಯ ಜನಾಂಗವು ತಿರಿಗಿ ಬಾಲೀಮ್ (ಬಾಳುಗಳನ್ನು) ಅಷ್ಟರೋತಳನ್ನೂ ಸೇವಿಸಿತು. ಮತ್ತು ಕರ್ತನ ಕೋಪವು ಪಶ್ಚಿಮ ದೇಶವನ್ನು ಫಿಲಿಷ್ಟ್ಯರ ಕೈಯೊಳಗೂ, ಪೂರ್ವ ದೇಶವನ್ನು ಅಮ್ಮೋನ್ಯರ ಒತ್ತಾಯದೊಳಗೂ ಮಾರಿ ಬಿಟ್ಟಿತು. ಇವರು ಹದಿನೆಂಟು ವರ್ಷದ ಪರ್ಯಂತರ ಯೋರ್ದಾನದ ಅತ್ತಕಡೆಯಲ್ಲಿ ಇಸ್ರಯೇಲ್ಯರ ಮಕ್ಕಳನ್ನು ಮೆಟ್ಟುತ್ತಾ ಬಂದರು. ಕಡೆಯಲ್ಲಿ ಅವರು ಕರ್ತನ ಕಡೆಗೆ ತಿರುಗುತ್ತಿರಲಾಗಿ ಅವರು ಸೇವಿಸಿದ ಅನ್ಯದೇವತೆಗಳ ಕಡೆಗೆ ತೋರಿಸಿ ಅವುಗಳೇ ನಿಮಗೆ ಸಹಾಯ ಮಾಡಲಿ ಎಂದು ಹೇಳುತ್ತಾನೆ. ಹ್ಯಾಗೂ

ಜನಾಂಗವು ತನ್ನನ್ನು ತಗ್ಗಿಸಿ ಕೊಳ್ಳುತ್ತದೆ. ಮತ್ತು ಕರ್ತನ ಹತ್ತರ ತಿರಿಗಿ ಕೃಪೆಯನ್ನು ಹೊಂದುತ್ತದೆ. ಶತ್ರುವಿಗೆದುರಾಗಿ ಇಸ್ರಯೇಲ್ಯರ ಸೈನ್ಯವು ಮಿಚ್ಪದಲ್ಲಿ ದಂಡು ಇಳಿಸುತ್ತದೆ. ಆದರೆ ಸೈನ್ಯಾಧಿಪತಿ ಇನ್ನೂ ಇಲ್ಲ.

೨) ನ್ಯಾಯಾ. ೧೧. ೧೨ನೇ ಸಂಧಿಗಳು. ಇಟ್ಟು ಕೊಂಡವಳ ಮಗನಾದ ಯೆಫ್ತಾಹನೆಂಬವನೊಬ್ಬನು ಇದ್ದನು. ಈತನನ್ನು ಕರ್ತನು ರಕ್ಷಕನಾಗಲಾಯಿದು ಕೊಂಡಿದ್ದನು. ತಂದೆಯ ಮನೆಯಿಂದ ಹೊರಗೆ ಹಾಕಲ್ಪಟ್ಟವನಾಗಿ ತೋಬ್ ಎಂಬ ದೇಶದಲ್ಲಿ ಉಳಕೊಂಡಿದ್ದನು (ಈ ಪ್ರದೇಶವು ಪೂರ್ವ ಯೊರ್ದಾನ್ ದೇಶದಲ್ಲಿರ ಬೇಕು, ಆದರೆ ಎಲ್ಲಿಯಂತ ನಿಶ್ಚೈಸಲಿಕ್ಕೆ ಆಗುವದಿಲ್ಲ). ಇಲ್ಲಿಂದ ಅವನ ಸುತ್ತಲು ಕೂಡಿ ಬಂದಿದ್ದ ಒಂದು ಸಂಗ ಪಾಳ್ಯವನ್ನು ತಕ್ಕೊಂಡು ತನ್ನ ಸ್ವಂತ ಮನಸ್ಸಿನ ಪ್ರಕಾರ ಅಮ್ಮೋನ್ಯರಿಗೆ ಪ್ರತಿಕೂಲವಾಗಿ ಅವರ ದೇಶದಲ್ಲಿ ಬೀಳುತ್ತಾ ಇದ್ದನು. ಸಚೆ ಎಲ್ಲಾದರ ರಾಯಚಾರಿಗಳು ತಾವು ಆಯಿದು ಕೊಂಡ ಪ್ರಕಾರ ನಾಯಕನಾಗ ಬೇಕೆಂದು ಬೇಡಿ ಕೊಳ್ಳುತ್ತಾರೆ; ಅವನು ಮೊದಲಾಗಿ ಅಮ್ಮೋನ್ಯರ ಅರಸನ ಹತ್ತರ ಸಂಧಾನಕ್ಕಾಗಿ ರಾಯಚಾರಿಗಳನ್ನು ಕಳುಹಿಸುತ್ತಾನೆ. ಆದರೆ ಇದು ವ್ಯರ್ಥವಾಗಿ ಹೋಗುತ್ತದೆ. ಅಮ್ಮೋನ್ಯರು ಅಪಜಯ ಪಡುತ್ತಾರೆ. ಆದರೆ ಯೆಫ್ತಾಹನು ತನ್ನ ಹರಿಕೆಗಾಗಿ ತನಗಿದ್ದ ಒಬ್ಬಳೇ ಮಗಳನ್ನು ಸಹಾ ಕೊಟ್ಟು ಬಿಡ ಬೇಕಾಗುತ್ತದೆ. ಈ ಯುದ್ಧಕಾರ್ಯವು ಚನ್ನಾಗಿ ನಡದದರಿಂದ ಗರ್ವವುಳ್ಳ ಎಫ್ರಾಯಿಮ್ ಗೋತ್ರದ ಹೊಟ್ಟೆಕಿಚ್ಚು ಉದ್ರೇಕವಾಗುತ್ತದೆ. ಯೆಫ್ತಾಹನು ಅವರನ್ನು ಸಹಾಯಕ್ಕೆ ಕರಿಯದೆ ಇದ್ದದರಿಂದ ಪೂರ್ವದೇಶದಲ್ಲಿ ಬೀಳುತ್ತಾರೆ. ಆದರೆ ಜೈಸಲ್ಪಡುತ್ತಾರೆ. ಅದರ ಹೊರ್ತು ಷಿಬೊಲೆತ್ (ಹಾಗಂದರೆ — ತೆನೆ, ಎಫ್ರಾಯಿಮ್ಯರು ಸಿಬೊಲೆತ್ ಅಂದರು) ಎಂಬ ಶಬ್ದವನ್ನು ಉಚ್ಚರಿಸ ಕೂಡದವನೊಬ್ಬನಿಗಾದರೂ ಯೊರ್ದಾನ್ ದಾಟಲಿಕ್ಕೆ ಬಿಡದೆ ಇರುತ್ತಿರಲಾಗಿ ಒಬ್ಬನೂ ತಪ್ಪಲಿಲ್ಲ. ಯೆಫ್ತಾಹನು ನ್ಯಾಯ ವಿಚಾರಿಸಿದ್ದು ಆರೇ ವರುಷ.

ಪ ರಿ ಶಿ ಷ್ಟ. ಯೆಫ್ತಾಹನು ಹೇಳಿ ಕೊಂಡ ಹರಿಕೆ ಏನಂದರೆ—ನಾನು ಅಮ್ಮೋನ್ಯರ ಮಕ್ಕಳ ಬಳಿಯಿಂದ ಸಮಾಧಾನವಾಗಿ ಮನೆಗೆ ಬರುವಾಗ ನನ್ನ ಮನೆಯ ಬಾಗಲಿಂದ ನನಗೆದುರಾಗಿ ಏನು ಹೊರಗೆ ಬರುತ್ತದೋ ಅದು ಕರ್ತನದಾಗಿರಲಿ. ಮತ್ತು ನಾನು ಅದನ್ನು ದಹನಬಲಿಯಾಗಿ ಅರ್ಪಿಸುವೆನು. ಅವನಿಗೆ ಹುಟ್ಟಿದ ಒಂದೇ ಮಗುವಾಗಿದ್ದ ಅವನ ಮಗಳು ಅವನಿಗೆದುರಾಗಿ ಬಂದಳು. ಈಗ ಯೆಫ್ತಾಹನ ಮಗಳು ಬಲಿಯರ್ಪಣೆಯ ಮರಣಕ್ಕೆ ಅಲ್ಲ, ಅವಸಾನಕಾಲದ ಪರ್ಯಂತರಕ್ಕೂ ಕನ್ಯಾಸ್ತ್ರೀಯಾಗಿ

ಶುದ್ಧಸ್ಥಳದ ಸೇವೆಗೆ ಒಳಗಾಗಿರುತ್ತಾಳೆಂದು ಈ ಹರಿಕೆಯ ಅರ್ಥವಾಗಿರ ಬೇಕೆಂದು ನಿಶ್ಚೈಸುತ್ತಾರೆ. ಈ ಅರ್ಥವು ಸರಿ ಎಂಬದಕ್ಕೆ ಶುದ್ಧಸ್ಥಳದ ಹತ್ತರ ಸೇವಿಸುವ ಹೆಂಗಸರ ಉದಾಹರಣೆ ಕೊಡುತ್ತಾರೆ (೨ನೇ ಮೋಶೆ. ೩೮, ೮. ೧ ಸಮು. ೨, ೨೨. ಲೂಕ. ೨, ೩೭). ಆದರೆ ಲುಥರನು ಸಹಾ— ಅವನು ಅವಳನ್ನು ಬಲಿಯರ್ಪಿಸಲಿಲ್ಲವೆಂದು ಹೇಳುತ್ತಾರೆ, ಆದರೆ ವಾಕ್ಯವು ಸ್ಪಷ್ಟವಾಗಿ ಕಾಣುತ್ತದೆ ಎಂದು ಹೇಳುತ್ತಾನೆ. ದ್ವಯಾರ್ಥವಿಲ್ಲದ ಹರಿಕೆಯ ಮಾತುಗಳಿಗಿಂತ ತಂದೆಯ ಶೋಕವೂ ತನ್ನನ್ನು ತಾನೇ ಒಪ್ಪಿಸಿ ಕೊಡುವಂಥಾ ಕನ್ನಿಕೆಯ ಉದಾರತ್ವವೂ ಇಸ್ರಯೇಲನ ಕುಮಾರ್ತೆಯರು ವರ್ಷಂಪ್ರತಿ ಮಾಡುವ ಗೋಳಾಟದ ಹಬ್ಬವೂ ಮತ್ತು ಮುಖ್ಯವಾಗಿ ಆಶ್ಚರ್ಯವನ್ನೂ ಅಸಹ್ಯವನ್ನೂ ಪಡ ಬೇಕಾದ ಈ ಭಯಂಕರವಾದ ಸಂಗತಿಯನ್ನು ಕೂಲಂಕುಷವಾಗಿಯೂ ಬರಿಯಲೊಲ್ಲದೆ ಇರಲಿಕ್ಕೆ ಆದ ಕಾರಣವೂ ಇದೆಲ್ಲಾದರಿಂದ ಬಲಿಯರ್ಪಣೆಯು ನಡಿಯಿತೆಂದು ಕಾಣುತ್ತದೆ. ನೇಮವು ಮನುಷ್ಯಬಲಿಯು ಎಲ್ಲಾ ಅನ್ಯಜನರ ಅಸಹ್ಯಗಳಿಗೆ ಶಿಖರವೆಂಬದಾಗಿ ಆಗದೆಂದು ಹೇಳುತ್ತದೆ (೩ ಮೋಶೆ. ೧೮, ೨೧. ೫ ಮೋಶೆ. ೧೨, ೩೧). ಆದರೆ ನೇಮವು ಇದ್ದ ಉನ್ನತದಿಂದ ನ್ಯಾಯಾಧಿಪತಿಗಳ ಕಾಲವು ಬಹಳವಾಗಿ ಕೆಳಗೆ ಬಿದ್ದಿತ್ತು. ದೇವರಾಜ್ಯದ ನೇಮವುಂಟೆಂಬ ಬೋಧವು ಬಹು ಒಳ್ಳೇಯವರಲ್ಲಿ ಸಹಾ (ಉದಾಹರಣೆ ಗಿದಿಯೋನನಲ್ಲಿ) ಬಹು ವಿಧವಾಗಿ ಕಳಂಕವಾಗಿಯೂ ಕಡಿಮೆಯಾಗಿಯೂ ಹೋಗಿತ್ತು. ಮತ್ತು ಘನವುಳ್ಳಂಥಾದ್ದಾಗಿದ್ದರೂ ಸ್ವಲ್ಪ ಮೊರಟಾಗಿರುವಂಥಾ ಯೆಫ್ತಾಹನ ಗುಣಭಾವವು ಈ ವಿಷಯದಲ್ಲಿ ಭಯಂಕರವಾದ ಅಪವಿಶ್ವಾಸದ ಅಧಿಕಾರದ ಕೆಳಗೆ ಬಿದ್ದು ಬಂಧಿತವಾದದ್ದು ಗ್ರಹಿಸ ಕೂಡದಂಥಾದ್ದಲ್ಲ.



## § 59. ಸಿಂಸೋನನು

೧) ನ್ಯಾಯಾ. ೧೩ ಸಂ. ಪಶ್ಚಿಮ ದೇಶದ ಮೇಲೆ ಫಿಲಿಷ್ಟ್ಯರ ಒತ್ತಾಯವು ರಕ್ಷಕನು ಏಳುವಷ್ಟರೊಳಗೆ ಇನ್ನು ಇಪ್ಪತ್ತು ವರ್ಷ, ಹೀಗೆ ಒಟ್ಟಿಗೆ ನಾಲ್ವತ್ತು ವರ್ಷ ಪರ್ಯಂತ್ರ ನಡಿಯಿತು. ಈ ಕಾಲದಲ್ಲಿ ಕರ್ತನ ದೂತನು ಬಂಜೆಯಾಗಿರುವಂಥಾ ದಾನನವನಾದ ಮನೋಹನ ಹೆಂಡತಿಗೆ ಒಬ್ಬ ಮಗನು ಹುಟ್ಟುವನೆಂಬದನ್ನು ಹೇಳಿದನು. ಈತನು ಗರ್ಭದಿಂದಲೇ ನಜೀರನಾಗಿದ್ದು (ಸಮನೋಡು § ೪೩.) ಇಸ್ರಯೇಲನನ್ನು ಫಿಲಿಷ್ಟ್ಯರ ಕೈಯಿಂದ ತಪ್ಪಿಸಲಿಕ್ಕೆ ಆರಂಭಿಸ ಬೇಕಾದವನಾಗಿದ್ದನು.

೨) ನ್ಯಾಯಾ. ೧೪. ೧೫ ಸಂ. ತಿಮ್ನಾಥದಲ್ಲಿ ಸಿಂಸೋನನು ಫಿಲಿಷ್ಟ್ಯರ ಒಬ್ಬ ಸ್ತ್ರೀಯನ್ನು ನೋಡುತ್ತಾನೆ. ಇವಳು ಅವನಿಗೆ ಛಂದ ಕಾಣುತ್ತಾಳೆ. ಅವಳನ್ನು ಮದಿವೆ ಮಾಡಿ ಕೊಂಡೇ ಕೊಂಡಿರುವೆನೆಂತ ಹೇಳುತ್ತಾನೆ. ಮತ್ತು ಫಿಲಿಷ್ಟ್ಯರ ಮೇಲೆ ಕಾರಣ ಶಿಕ್ಕ ಬೇಕೆಂಬದಾಗಿ ಕರ್ತನಿಂದ ಬಂದಿತ್ತು. (ಅವನು ಕಣ್ಣುಗಳ ಅಭಿಲಾಷೆಯಿಂದ ಬಂಧಿತನಾಗಿ ಅನ್ಯಸ್ತ್ರೀಯನ್ನು ತೆಗೆದು ಕೊಳ್ಳ ಬಾರದೆಂಬ ನೇಮಕ್ಕೆ ವಿರೋಧವಾಗಿ ನಡಕೊಂಡದ್ದು ಕರ್ತನಿಂದ ಬರಲಿಲ್ಲವೆಂಬದು ಸರಿ. ಆದರೂ ಅವನು ತನ್ನ ಕರಿಯುವಿಕೆಯನ್ನು ತೀರಿಸ ಬೇಕಾದರೆ, ಇಂಥಾ ಕ್ರಮೆ ಸಹಾ ಸಹಾಯವಾಗ ಬೇಕಾಯಿತೆಂಬದು ಕರ್ತನಿಂದ ಬಂದಿತ್ತು.) ಅವನ ಹೆಂಡತಿಯು ಅವನ ಒಗಟನ್ನು ಬಿಚ್ಚುವದು ಹ್ಯಾಗೆ ಎಂಬದನ್ನು (ತಿನ್ನುವನೊಳಗಿಂದ ತಿನ್ನುವು ಬಲವಂತನೊಳಗಿಂದ ಮಧುರವು) ಮತ್ತಾತ್ಬರಿಗೆ ಹೇಳಿದ್ದು ಹಚ್ಚಡಗಳಿಗಾಗಿ ಮೂವತ್ತು ಫಿಲಿಷ್ಟ್ಯರನ್ನು ಕೊಲ್ಲಲಿಕ್ಕೆ ಕಾರಣವಾಯಿತು. ಅವಳು ಮತ್ತೆ ಮತ್ತಾತ್ಬನಿಗೆ ಹೆಂಡತಿಯಾಗಿ ಕೊಡಲ್ಪಟ್ಟದ್ದು ಉರಿಯುವ ಸೂಟೆಗಳುಳ್ಳ ಮುನ್ನೂರು ನರಿಗಳನ್ನೂ ಫಿಲಿಷ್ಟ್ಯರ ಪೈರುಹಾಲಗಳಲ್ಲಿ ಓಡಿಸಲಿಕ್ಕೂ ಅವರನ್ನೇ ಕಂಡಲ್ಲಿ ಕೊಂದು ಹಾಕಲಿಕ್ಕೂ ಕಾರಣವಾಯಿತು. (ಯೆಹೂದ ಪರ್ವತಗಳಲ್ಲಿರುವ) ಏಥಾಮದ ಗುಹೆಗಳಲ್ಲಿದ್ದಾಗ ಯೆಹೂದ್ಯರು ಅವನನ್ನು ಕಟ್ಟಿ, ಫಿಲಿಷ್ಟ್ಯರಿಗೆ ಒಪ್ಪಿಸಿ ಕೊಡುವದನ್ನು ಸಂತೋಷದಿಂದ ಆಗಗೊಡಿಸಿದನು. ಆದರೆ ಫಿಲಿಷ್ಟ್ಯರು ಆರ್ಭಟಿಸಿದ್ದು ಸ್ವಲ್ಪ ಬೇಗವಾಯಿತು. ಕರ್ತನ ಆತ್ಮವು ಅವನ ಮೇಲೆ ಬೀಳುತ್ತದೆ. ಅವನು ಬಂಧಗಳನ್ನು ಸುಟ್ಟ ನೂಲಿನ ಹಾಗೆ ಕಡಿದು ಬಿಡುತ್ತಾನೆ. ಮತ್ತು ಅಲ್ಲಿ ಬಿದ್ದಿರುವ ಕತ್ತೆಯ ದವಡೆಯನ್ನು ತಕ್ಕೊಂಡು ಸಾವಿರ ಮಂದಿಯನ್ನು ಕೊಂದು ಬಿಡುತ್ತಾನೆ. ಆ ಸ್ಥಳಕ್ಕೆ ರಾಮಾತ್ ಲೆಹಿ (ದವಡೆ ಬಿಸಾಡುವಿಕೆ) ಎಂಬ ಹೆಸರಿಡುತ್ತಾನೆ. ಮತ್ತೆ ಬಾಯಾರಿಕೆಯಿಂದ ಸಂಕಟ ಪಡುವಾಗ್ಯೆ ದೇವರು ಲೆಹಿಯಲ್ಲಿ ಒಂದು ಗವಿ ಮಾಡಿ ನೀರು ಹರಿಯ ಮಾಡಿದನು.

೩) ನ್ಯಾಯಾ. ೧೬ ಸಂ. ಗಾಜದಲ್ಲಿ ಸಿಂಸೋನನು ಒಬ್ಬ ಸೂಳೆಯ ಮನೆಗೆ ಹೋಗುತ್ತಾನೆ. ಅವನನ್ನು ಹಿಡಿಯಲಿಕ್ಕೆ ನಿವಾಸಿಗಳು ಹೆಬ್ಬಾಗಲುಮುಚ್ಚಿದರು. ಆದರೆ ಸಿಂಸೋನನು ನಿಲುವುಪಟ್ಟಿಗಳನ್ನೂ ಅಡ್ಡಗೋಲುಗಳನ್ನೂ ಸಹಿತವಾಗಿ ಬಾಗಲುಗಳನ್ನು ಎತ್ತಿ ಹೆಗಲ ಮೇಲೆ ಹೊತ್ತು ಕೊಂಡು ಹೆಬ್ರೋನಿನ ಮುಂದೆ ಇರುವ ಗುಡ್ಡದ ಮೇಲೆ ತೆಗದು ಕೊಂಡು ಹೋದನು. ಮೂರನೇ ಸಾರಿ ಅವನು ತಿರಿಗಿ ಕಾಮಾತುರತ್ವದಿಂದ ಸೋರೇಕ್ ಹಳ್ಳದ ಹತ್ತರ ಇದ್ದ ದೆಲೀಲಾ ಎಂಬ ಫಿಲಿಷ್ಟ್ಯಸ್ತ್ರೀಯಲ್ಲಿ ಮೋಹಗೊಳ್ಳುತ್ತಾನೆ. ಇವಳು ಫಿಲಿಷ್ಟ್ಯರ ಅರಸುಗಳಿಂದ ಒಬ್ಬೊಬ್ಬನ ಹತ್ತರ ಸಾವಿರದ ನೂರು ರೂಪಾಯಿಗಳನ್ನು ಲಂಚ ತಕ್ಕೊಂಡು ಸಿಂಸೋನನ ಬಲದ ರಹ

ಸ್ಯವನ್ನು ತಿಳಕೊಳ್ಳಲಿಕ್ಕೂ ಅವನನ್ನು ಫಿಲಿಷ್ಟ್ಯರ ಕೈಯಲ್ಲಿ ಒಪ್ಪಿಸಿ ಕೊಡುವದಕ್ಕೂ ಅ
ವಳಿಗೆ ತಿಳಿದಷ್ಟು ಮೋಹದ ಮೋಸತಂತ್ರಗಳನ್ನು ಪ್ರಯೋಗಿಸುತ್ತಾಳೆ. ಮೂರು
ಸಾರಿ ಈ ವಿಶ್ವಾಸಘಾತಕಿಯಾದ ಸ್ತ್ರೀಯನ್ನು ವಂಚಿಸಿದನು. ಆದರೆ ನಾಲ್ಕನೇ ಸಾ
ರಿ ಅವಳು ಅವನಿಗೆ ರಾತ್ರಿಹಗಲೂ ಉಪದ್ರ ಕೊಡಲಾಗಿ, ಅವನ ಜೀವವು ದಣಿದು,
ಅವಳಿಗೆ ಹೃದಯಪೂರ್ವಕವಾಗಿ ಎಲ್ಲಾ ಹೇಳಿ ಬಿಡುತ್ತಾನೆ. ಅವಳು ನಜೀರನ
ಕೂದಲುಗಳಿಂದ ಏಳು ಜಡೆಗಳನ್ನು ಕೊಯ್ಯುತ್ತಲೇ ಅವನ ಬಲವು ತೊಲಗಿ ಹೋ
ಗುತ್ತದೆ. (ಕತ್ತರಿಸದ ತಲೆಕೂದಲೇ ಗುರುತೂ ಮುಂಗಡವೂ ಆಗಿದ್ದ) ನಜೀರನ ಹ
ರಿಕೆಯು ಭ್ರಷ್ಟವಾಗಿ ಹೋಯಿತು. (ದೇವರಾಜ್ಯಕ್ಕೆ ಪ್ರತಿಕೂಲವಾಗಿರುವ ಪಾಪವನ್ನು
ಮಾಡಲಿಕ್ಕೆ ಶೋಧಿಸಿದ) ಕಣ್ಣುಗಳನ್ನೇ ಫಿಲಿಷ್ಟ್ಯರು ಕಿತ್ತಿ ಹಾಕುತ್ತಾರೆ. ಮತ್ತು ಸಿಂ
ಸೋನನು ಸಂಕೋಲೆಯಲ್ಲಿ ಗಾಜದಲ್ಲಿ ಬೀಸ ಬೇಕು. ಆದರೆ ಅವನ ಕೂದಲು ಮೆ
ಲ್ಲಗೆ ತಿರಿಗಿ ಬೆಳಿಯಿತು. ಮತ್ತು ಈಗ ತನ್ನ ಪಾಪದ ಮಾರ್ಗವನ್ನು ತಿಳುಕೊಂಡು
ಪಶ್ಚಾತ್ತಾಪ ಪಟ್ಟಿರುತ್ತಿರಲಾಗಿ ಬಹಿರಂಗದ ಗುರುತಿನೊಡನೆ ಒಳಗಿನ ದಿವ್ಯಬಲವು
ಸಹಾ ಬೆಳಿಯಿತು. ದಾಗೋನ್ ವಿಗ್ರಹಕ್ಕೆ ಆದ ಹಬ್ಬದ ದಿವಸದಲ್ಲಿ ಈತನು ಕೂಡಿ ಬಂ
ದ ಫಿಲಿಷ್ಟ್ಯರ ಮುಂದೆ ಆಟ ಮಾಡಿ, ಅವರನ್ನು ಸಂತೋಷ ಪಡಿಸ ಬೇಕಾಗಿತ್ತು. ಇ
ಡೀ ಮನೆಗೆ ಆಧಾರವಾಗಿದ್ದ ಎರಡು ಮಧ್ಯಸ್ತಂಭಗಳ ಕಡೆಗೆ ಬೊಗ್ಗಿ ಕೊಂಡು, ಒಂ
ದೊಂದು ಕೈಯಿಂದ ಒಂದೊಂದನ್ನು ಅಪ್ಪಿಕೊಂಡು, ಮತ್ತೊಂದು ಸಾರಿ ಚನ್ನಾಗಿ ಬೊ
ಗ್ಗಿ ಕಂಭಗಳನ್ನು ಎಳಿಯುತ್ತಲೇ ಅವನು ಕೂಡಿ ಬಂದ ಜನರೊಡನೆಯೂ ಫಿಲಿಷ್ಟ್ಯರ
ಅರಸುಗಳೆಲ್ಲರೊಡನೆಯೂ ಮುರಿದು ಬೀಳುವ ಮನೆಯ ಕೆಳಗೆ ಸಾಯುತ್ತಾನೆ. ಹೀ
ಗೆ ಜೀವಿಸುವ ಸಮಯದಲ್ಲಿ ಸಮವಾಗಿ ತೀರಿಸದಂಥಾ ಕರಿಯುವಿಕೆಯನ್ನು ಈಗ
ಮರಣಕಾಲದಲ್ಲಿ ಸಂಪೂರ್ಣ ಮಾಡುತ್ತಾನೆ.

ಪರಿಶಿಷ್ಟ. ಸಿಂಸೋನನು ಇಸ್ರಯೇಲ್ಯರನ್ನು ಫಿಲಿಷ್ಟ್ಯರ ಕೈಯಿಂದ ರಕ್ಷಿಸಲಿ
ಕ್ಕೆ ಆರಂಭ ಮಾತ್ರ ಮಾಡಲಿಕ್ಕೆ ಶಕ್ತನಾಗಿದ್ದನು. (೧೩, ೫.) ಹೀಗಾಗಲಿಕ್ಕೆ ಇದರ ತ
ಪ್ಪು ಅವನ ಮೇಲೆಯೇ ಇರುತ್ತದೆ. ಅವನಲ್ಲಿ ಇಟ್ಟ ದೇವರ ಬಲವನ್ನು ಚನ್ನಾಗಿ
ಪ್ರಯೋಗಿಸಲಿಲ್ಲ. ಕಣ್ಣುಗಳ ಅಭಿಲಾಷೆಯಿಂದ ಬಹಳ ಬಹಳ ಸಾರಿ ದಿವ್ಯ ಕರಿಯು
ವಿಕೆಯನ್ನು ಮರತು ಬಿಟ್ಟನು. ಆದರೆ ಅದೇ ಸಮಯದಲ್ಲಿ ಅವನ ಹಾಗೆಯೇ ಒಂ
ದು ವೇಳೆ ಅವನಿಗಿಂತ ಹೆಚ್ಚಾಗಿ ಅವನ ಜನಾಂಗವೆಲ್ಲಾದರ ಮೇಲೆ ತಪ್ಪು ಹೊರಿಸ
ಲಿಕ್ಕೆ ಕಾರಣ ಉಂಟು. ಯಾವಾಗಲೂ ಅವನು ಒಬ್ಬನೇಯನಾಗಿದ್ದನು. ಜನಾಂಗ
ವು ಅವನಿಗೆ ಸಹಾಯ ಮಾಡಲಿಲ್ಲ. ಅದರ ಹೊರ್ತು ಹೇಡಿಗಳಾಗಿ ಅವನನ್ನು ಶತ್ರು

ಗಳ ಕೈಯಲ್ಲಿ ಒಪ್ಪಿಸಿ ಬಿಟ್ಟರು ಸಹಾ. ದೇವರಿಂದ ನಡಿಸಲ್ಪಟ್ಟ ಒಬ್ಬನೇಯಾದ ಮನುಷ್ಯನು ಜನಾಂಗವೆಲ್ಲಾದರ ರಕ್ಷಕನಾಗುವ ಕಾಲವು ಕಳೆದು ಹೋಗಿತ್ತು. ಗಿದಿಯೋನನೂ ಯೆಫ್ತಾಹನೂ ಸಹಾ ಸಿಂಸೋನನ ಸ್ಥಳದಲ್ಲಿ ಬಹಳ ಹೆಚ್ಚು ನಡಿಸುತ್ತಿದ್ದಿಲ್ಲ. ಸಿಂಸೋನನು ಆರಂಭ ಮಾಡಿದ್ದನ್ನು ಸಮುವೇಲನ ಪುನಃಸ್ಥಾಪನೆಯಿಂದ ಜನಾಂಗವು ತನ್ನ ದೇವರಲ್ಲಿ ನವೀಕರಿಸಲ್ಪಟ್ಟ ತರುವಾಯ ದಾವಿದನು ಸಂಪೂರ್ತಿ ಮಾಡಲಿಕ್ಕೆ ಶಕ್ತನಾದನು.



## § 60. ರೂಥಳು

ನ್ಯಾಯಾಧಿಪತಿಗಳ ಕಾಲದಲ್ಲಿ (ಗಿದಿಯೋನನು ತೀರಿಸಿದ ಮಿದ್ಯಾನ್ಯರ ಲೂಟಿಯ ಕಾಲದಲ್ಲಿ ಶುಮಾರು) ಬೆಥ್ಲೆಹೇಮ್ಯನಾದ ಯೆಲಿಮೇಲೆಕನು ತನ್ನ ಹೆಂಡತಿಯಾದ ನವೊಮಿಯೊಡನೆಯೂ ಇಬ್ಬರು ಮಕ್ಕಳೊಡನೆಯೂ ಬರಗಾಲಕ್ಕಾಗಿ ಮೊವಾಬ್ಯರ ದೇಶಕ್ಕೆ ಹೋದನು. ಇವರಿಬ್ಬರೂ ಅಲ್ಲಿ ಮೊವಾಬ್ಯರಾದ ಅರ್ಫಳನ್ನೂ ರೂಥಳನ್ನೂ ಮದಿವೆ ಮಾಡಿ ಕೊಳ್ಳುತ್ತಾರೆ. ಯೆಲಿಮೇಲೆಕನು ಸತ್ತನು. ಅವನ ಇಬ್ಬರು ಮಕ್ಕಳು ಸಹಾ ಮಕ್ಕಳಿಲ್ಲದೆ ಸತ್ತರು. ನಾವೊಮಿಯು ಸ್ವದೇಶಕ್ಕೆ ತಿರಿಗಿ ಬರಲಿಕ್ಕೆ ಹೊರಡುತ್ತಾಳೆ. ಇಬ್ಬರು ಸೊಸೆಯಂದಿರು ಅವಳ ಸಂಗಡ ಹೋಗಲಿಕ್ಕೆ ಇಚ್ಛೈಸುತ್ತಾರೆ. ನಾವೊಮಿಯ ಪ್ರತಿಕೂಲವಾದ ಮಾತುಗಳಿಗಾಗಿ ಅರ್ಫಳು ಅಲ್ಲಿಯೇ ನಿಲ್ಲುತ್ತಾಳೆ. ಆದರೆ ಮಹಾ ಮನಸ್ಸುಳ್ಳ ರೂಥಳಿಗೆ ಯೆಹೋವನ ದೇಶಕ್ಕೆ ಹೋಗ ಬೇಕೆಂಬ ಅಭಿಲಾಷೆಯನ್ನು ಜಯಿಸಲಿಕ್ಕೆ ಅತ್ತೆಯಿಂದ ಆಗಲಿಲ್ಲ. ಬೆಥ್ಲೆಹೇಮದಲ್ಲಿ ರೂಥಳು ತನ್ನನ್ನೂ ತನ್ನ ಅತ್ತೆಯನ್ನೂ ಪೋಷಿಸಲಿಕ್ಕಾಗಿ ಹೊಲಗಳಲ್ಲಿ ತೆನೆಗಳನ್ನು ಕೂಡಿಸುತ್ತಾ ಇರಲಾಗಿ, ಬೋವಾಸನ ಹೊಲದಲ್ಲಿ ಅವಳಿಗೆ ವಿಶೇಷ ಸ್ನೇಹವನ್ನು ತೋರಿಸುತ್ತಾರೆ. ಇದರಲ್ಲಿ ನಾವೊಮಿಯು ದೇವರ ಕೈಯುಂಟೆಂದು ನೆನಸುತ್ತಾಳೆ. ಯಾಕಂದರೆ ಬೋವಾಸನು ಸಮೀಪ ಸಂಬಂಧಿಕನಾಗಿ ಇರುತ್ತಿರಲಾಗಿ ದೇವರನ ಲಗ್ನ ಮಾಡುವದು ಅವನಿಗೆ ಧರ್ಮವಾಗಿತ್ತು. ಬೋವಾಸನು ಈ ಸಂಗತಿಯನ್ನು ತಿಳುಕೊಂಡ ಕೂಡಲೇ ಸಂತೋಷವಾಗಿ ಈ ಧರ್ಮವನ್ನು ಕೈಕೊಳ್ಳುತ್ತಾನೆ. ಹೀಗಾಗಿ ರೂಥಳು ದಾವಿದನ ಅಜ್ಜನ ತಾಯಿಯಾಗುತ್ತಾಳೆ.

ಪರಿಶಿಷ್ಟ. ೧. ದೇವರನ ಲಗ್ನದ ವಿಷಯದಲ್ಲಿ (ದೇವರನು ಅಂದರೆ ಗಂಡನ ಸಹೋದರನು) ೫ ಮೋಶೆ. ೨೫, ೫—೧೦. ಒಬ್ಬ ಇಸ್ರಯೇಲ್ಯನು ಮಕ್ಕಳಿಲ್ಲದೆ

ಸತ್ತನಾದರೆ ಅವನಿಗೆ ಎಲ್ಲರಲ್ಲಿ ಸಮೀಪನಾದ ದಾಯಾದಿಯು ಮುಂದುಳಿದ ವಿಧವೆ ಯನ್ನು ಮದಿವೆ ಮಾಡಿ ಕೊಳ್ಳ ಬೇಕಾಯಿತು. ಹೀಗೆ ಹುಟ್ಟಿದ ಮೊದಲನೇ ಮಗನು ಸತ್ತವನ ಮಗುವೆಂದು ಎಣಿಸುವದರಿಂದ ಅವನ ಸಂತತಿಯ ಪಂಕ್ತಿಯಲ್ಲಿ ಸೇರಿದನು.

ಪರಿಶಿಷ್ಟ. ೨. ಈ ಮನೋಹರವಾದಂಥಾ ನ್ಯಾಯಾಧಿಪತಿಗಳ ಕಾಲದಲ್ಲಿ ನಡದಂಥಾ ಕಥೆ ಹೇಳುವ ರೂಥೆಂಬ ಪುಸ್ತಕವನ್ನು ದಾವಿದನ ಕಾಲದ ಮೇಲೆ ಬರೆಯ ಲಾಯಿತೆಂತ ಕಾಣುತ್ತದೆ. ಆದರೆ ಗ್ರಂಥಕಾರನು ಯಾರೆಂದು ನಿಶ್ಚಯಿಸಲಿಕ್ಕಾಗುವ ದಿಲ್ಲ. ಸಮುವೇಲನ ಪುಸ್ತಕಗಳಲ್ಲಿ ದಾವಿದನ ಹಿರಿಯರ ಪಾರಂಪರ್ಯವು ಕಾಣದೆ ಇರುವದರಿಂದ ಇದನ್ನು ಬರೆದು ಇಡ ಬೇಕೆಂತ ಗ್ರಂಥಕಾರನಲ್ಲಿದ್ದ ಅಪೇಕ್ಷೆಯು ಈ ಪುಸ್ತಕಕ್ಕೆ ಕಾರಣವಾಗಿರುವದು. (ರೂಥ್. ೪, ೧೮—೨೨.)



## ಐದನೇ ಕಾಲ

### ಸಮುವೇಲನಿಂದ ದೇವಾಲಯ ಕಟ್ಟುವ ವರೆಗೂ ರಾಜ್ಯ ಭೇದವಾಗುವ ವರೆಗೂ (ಶುಮಾರು ೯೦ (೧೨೦) ವರ್ಷದ ಕಾಲ)

### § 61. ಈ ಕಾಲದ ಸ್ವಭಾವವು

೧) ಹಳೇ ಕಾಲವು ಸಿಂಸೋನನಲ್ಲಿಯೂ ಅದೇ ಸಮಯದಲ್ಲಿ ಜೀವಿಸಿದ ಏಲಿ ಯಲ್ಲಿಯೂ ತೀರಿ ಹೋಗುವಾಗ್ಯೆ ಸಮುವೇಲನ ಸಂಗಡ ದೇವರಾಜ್ಯವನ್ನು ಅತ್ಯಂ ತ ಶ್ರೇಷ್ಠತ್ವಕ್ಕೆ ತರಲಿಕ್ಕೆ ಕೈಕೂಡಿ ಬರುವಂಥಾ ಹೊಸ ಕಾಲವು ಸಿದ್ಧವಾಗುತ್ತದೆ. ಕರ್ತ ನು ಮೋಶೆಯ ಸಂಮುಖವಾಗಿಯೂ ಯೆಹೋಷುವನ ಪರಿಮುಖವಾಗಿಯೂ ತನ್ನ ಜ ನಾಂಗಕ್ಕೆ ಕೊಟ್ಟದ್ದು (ಅಂದರೆ ಸ್ವದೇಶವೂ ಸ್ವತಂತ್ರವೂ ಜನಾಂಗತನವೂ ನೇಮವೂ ಆರಾಧನೆಯೂ) ಇದೆಲ್ಲಾ ಜನಾಂಗದ ತಪ್ಪಿನಿಂದ ದೇವರಾಜ್ಯವು ವಿಕಸಿತವಾಗಲಿಕ್ಕಾ ಗಿ ಕಾಡ ಬೇಕಾಗಿರುವಂಥಾ ಮತ್ತು ಕಾಡ ಬಹುದಂಥಾ ಫಲಗಳನ್ನು ಕಾಡಲಿಲ್ಲ (§ ೫೫). ಇಷ್ಟು ವರೆಗೆ ಫಲ ಕಾಡ ಬೇಕಾದ ಮರಗಳಾಗಿದ್ದ ಜನಾಂಗತನವೂ ಯಾ ಜಕತನವೂ ಸಾಕಾಗಲಿಲ್ಲ, ಆದದರಿಂದ ಎರಡು ಹೊಸ ತ್ರಾಣಗಳಾಗಿರುವ ಪ್ರವಾ ದಿತನವೂ ರಾಜತ್ವವೂ ಪ್ರವೇಶಿಸುತ್ತವೆ. ಈಗ ಕರ್ತನ ವಾಕ್ಯವು ದೇಶದಲ್ಲಿ ಪ್ರಿ ಯವಾಗಿ (ಅಂದರೆ ದುರ್ಲಭವಾಗಿ) ಪ್ರವಾದನೆಯು ಸ್ವಲ್ಪವೇ ಇರುತ್ತಿರಲಾಗಿ (೧ ಸಮು. ೩, ೧.) ಇದರ ಮೊದಲು ದೇವರ ರಾಜ್ಯವು ವಿಕಸಿತವಾಗುವದರಲ್ಲಿ ಸ್ವಲ್ಪ

ಹಾತ್ತು ಮಾತ್ರವೇ ಒಂದೊಂದು ಸಾರಿ ಕಂಡು ಬಂದ ಪ್ರವಾದನೆಯು ಸಮುವೇಲ
ನ ಸಂಗಡಲೂ ಅವನ ಪರಿಮುಖವಾಗಿ ಇಸ್ರಯೆಲ್ ಜನಾಂಗದ ಸಂಸ್ಥಾನಸ್ಥಿತಿಯ
ನ್ನು ಬಿಡದೇ ಬದಲಿಸುವಂಥ ಹುಳಿಹಿಟ್ಟಿನ ಹಾಗೆ ಆಯಿತು. ಸಮುವೇಲನ ಪ್ರ
ವಾದಿಶಾಲೆಗಳಿಂದ ಶಾಶ್ವತವಾದ ಪ್ರವಾದಿಯ ಉದ್ಯೋಗ ಇರುವ ಪ್ರವಾದಿಜಾ
ತಿ ಉಂಟಾಯಿತು. ಆದರೆ ಪ್ರವಾದನೆಯು ದೇವರ ಬಾಯಿಯೂ (೨ ಮೋಶೆ.
೪, ೧೬.) ಸಂಸ್ಥಾನದ ಮನಸ್ಸಾಕ್ಷಿಯೂ ಆಗಿರುತ್ತದೆ. ಅದು ವರ್ತಮಾನಕಾಲವ
ನ್ನು ಬೋಧಿಸಿ ತನ್ನ ಸ್ಥಾನವನ್ನೂ ಉದ್ಯೋಗವನ್ನೂ ಭೂತ ಭವಿಷ್ಯಗಳಿಂದ ತಿಳಿಯ
ಮಾಡುತ್ತದೆ.

ಪರಿಶಿಷ್ಟ. ಪ್ರವಾದಿಶಾಲೆಗಳೆಂದು ಹೇಳಲ್ಪಡುವ ಈ ಶಾಲೆಗಳಿಂದ ಪ್ರಾಯ
ಹೋದಂಥಾ ಪರೀಕ್ಷಿತರಾದಂಥಾ ಪ್ರವಾದಿಗಳ ಕೈಕೆಳಗೆ ಯೌವನಸ್ಥರಿಗೆ ಪ್ರವಾದಿಯ
ಉದ್ಯೋಗಕ್ಕೆ ಬೇಕಾದದ್ದು ಉಂಟಾಯಿತು. ಸ್ವಭಾವಿಕವಾದ ಗುಣಗಳಿಂದಲೂ ದಿವ್ಯ
ಕರಿಯುವಿಕೆಯಿಂದಲೂ ಪ್ರವಾದಿತನಕ್ಕೆ ಯೋಗ್ಯವಾದಂಥವರನ್ನು ಆಯಿದು ನೇಮಿ
ಸುವದೂ ನಿಶ್ಚಯವಾಗಿ ಪ್ರವಾದಿಯ ಕಣ್ಣುಗಳಿಂದ ಚುರುಕಾಗಿ ನೋಡುವಂಥ ಮು
ಖ್ಯಸ್ಥರ ಮನಸ್ಸಿನ ಪ್ರಕಾರವಾಗಿರ ಬೇಕು. ಪ್ರವಾದನೆಯು ಒಂದು ವಿದ್ಯೆಯಲ್ಲ, ದಾ
ನವಾಗಿಯೇ ಇರುವದರಿಂದ ಇಲ್ಲಿ ಕಲಿಸಿ ಕೊಟ್ಟ ಬೋಧನೆಗೆ ನೇಮವನ್ನು ಕಲಿಸಿ
ಕೊಡುವದು ದೇವರಾಜ್ಯಕ್ಕೆ ಯೋಗ್ಯವಾದ ಮನೋಭಾವನೆಯನ್ನು ಉಜ್ವಲಿಸಿ ಬೆ
ಳಿಯ ಮಾಡುವದೂ ಆತ್ಮಿಕವಾದ ಜೀವನವನ್ನೂ ಒಟ್ಟಿಗೆ ಸಾಧಿಸುವದೂ ಮುಖ್ಯವಾ
ದದ್ದಾಗಿರ ಬೇಕು. ಇದೇ ಪ್ರವಾದಿಯ ಉದ್ಯೋಗಕ್ಕೆ ಅವಶ್ಯವಾಗಿ ಬೇಕಾದ ಬು
ದ್ಧಿಯೂ ಆಧಾರವೂ ಆಗಿತ್ತು. ಅಂಥಾ ಶಾಲೆಗಳು ರಾಮದಲ್ಲಿಯೂ ಯೆರಿಖೋ
ವಿನಲ್ಲಿಯೂ ಬೆಥೆಲದಲ್ಲಿಯೂ ಗಿಲ್ಗಾಲದಲ್ಲಿಯೂ ಇದ್ದವು. ಶಿಷ್ಯರು ವಿಶೇಷವಾಗಿ
ಪ್ರಾಯಸ್ಥರಾದ ಪುರುಷರೂ ಒಬ್ಬೊಬ್ಬರು ಮದಿವೆಯಾದವರೂ ಆಗಿದ್ದರು. ಅವ
ರು ಕೆಲವು ಕಡೆಗೆ ಬಹಳ ಮಂದಿಯಾಗಿ ಒಟ್ಟಿಗೆ ಒಂದೇ ಮನೆತನವನ್ನು ನಡಿಸಿ ಬ
ದುಕಿದರು. ಒಂದೊಂದು ಸಾರಿ ಶಾಲೆಯ ಮುಖ್ಯಸ್ಥರು ಅವರನ್ನು ಪ್ರವಾದಿಯ ರಾ
ಯಭಾರಿಗಳಾಗಿ ಕಳುಹಿಸುವದು. (೨ ಅರ. ೯, ೧.) ಆದರೂ ಎಲ್ಲಾ ಪ್ರವಾದಿಗಳು
ಅಂಥಾ ಪ್ರವಾದಿಶಾಲೆಯಿಂದಲೇ ಬರಲಿಲ್ಲ. ಕೆಲವು ಪ್ರಖ್ಯಾತಿ ಪಟ್ಟ ಪ್ರವಾದಿಗಳು ತ
ಮ್ಮ ಗೃಹಸ್ಥಧರ್ಮದ ಕೆಲಸದಿಂದ ಪ್ರವಾದಿಯ ಉದ್ಯೋಗಕ್ಕೆ ಕರಿಯಲ್ಪಟ್ಟರು.
(೧ ಅರ. ೧೯, ೧೯. ಆಮೋ. ೭, ೧೪.) ಸ್ನಾನಿಕನಾದ ಯೋಹಾನನೂ ಅವನ
ಶಿಷ್ಯರೂ ಅದೇ ಪ್ರಕಾರ ಕ್ರಿಸ್ತನೂ ಅವನ ಶಿಷ್ಯರೂ ಇವರಲ್ಲಿರುವ ಸಹವಾಸವು

ಸಹಾ ಪೂರ್ವದಲ್ಲಿದ್ದ ಪ್ರವಾದಿಶಾಲೆಗಳ ಹಾಗೆಯೇ ಕೆಲವು ವಿಷಯಗಳಲ್ಲಿ ಇದ್ದಿರಬಹುದು.

೨) ಪ್ರವಾದನೆಯ ಸಂಗಡ ಹಾಸತಾದ ಬಲವಾಗಿ ರಾಜತನವು ಹುಟ್ಟುತ್ತದೆ. ಇದರಲ್ಲಿ ಜನರಿಗೆ ಪ್ರತ್ಯಕ್ಷವಾದ ಐಕ್ಯಸ್ಥಾನವು ಶಿಕ್ಕುತ್ತದೆ. ಅದು ದೇವರಾಜ್ಯಕ್ಕೆ ಪ್ರತಿಕೂಲವಾದಂಥಾ ಸ್ವಬುದ್ಧಿಯಿಂದ ಸ್ವೇಚ್ಛೆಯಿಂದ ಉಂಟಾಗಿತ್ತೆಂಬದು ಸರಿ ಆದರೂ ಅದೃಶ್ಯರಾಜನಾದ ಯೆಹೋವನು ಚಿತ್ತೈಸಿ ಒಪ್ಪಿ ಕೊಂಡಿದ್ದನು. (ಜನಾಂಗದ ಹಾಗೆ ಅಲ್ಲ ಮತ್ತೊಂದು ವಿಧವಾಗಿ) ಮೊದಲೇ ಭದ್ರವಾಗಿ ಬೇರೂರಿದ ಪ್ರವಾದಿತನವು ರಾಜತನಕ್ಕೆ ಒಂದು ಬಲವಾಗಿ ಸಂಗಡ ನಿಲ್ಲುವದರಿಂದ ಅದು ಸಹಾ ಆಗಲಿಕ್ಕೆ ಅಷ್ಟು ಆತಂಕವಿರಲಿಲ್ಲ. ಹ್ಯಾಗಂದರೆ (ದೇವರ ವಾಕ್ಯವೆಂಬ ಎಫೆ. ೬, ೧೭.) ಆತ್ಮದ ಖಡ್ಗವನ್ನು ಕೈಯಲ್ಲಿ ತಕ್ಕೊಂಡು ಅದನ್ನು ಕಾಯುತ್ತಾ ಅದನ್ನು ತಿದ್ದುತ್ತಾ ಪ್ರತಿ ಅನ್ಯಾಯವನ್ನು ಶಿಕ್ಷಿಸುತ್ತಾ ಇರ ಬೇಕಾಗಿತ್ತಲ್ಲಾ. ದಾವಿದನ ಜಯಗಳಿಂದ ಬಹಿರಂಗವಾಗಿಯೂ ಸೊಲೊಮೋನನ ದೇವಾಲಯದಿಂದ ಅಂತರಂಗವಾಗಿಯೂ ಹಳೇ ಒಡಂಬಡಿಕೆಯ ಮನೇವಾರ್ತೆಯು ಶಿಕ್ಕ ಬಹುದಾದ ಉನ್ನತಸ್ಥಾನವನ್ನು ಹೊಂದುತ್ತದೆ. ಮೆಸ್ಸಿಯನು ದಾವಿದನ ಸಂತಾನದಲ್ಲಿಂದ ಬರುವನೆಂಬ ಕೋರಿಕೆಯು ಸ್ಥಾಪಿತವಾಗುತ್ತದೆ. ಮತ್ತು ರಾಜತನವು ಉಂಟಾಗಿರಲಾಗಿ ದಾವಿದನ ಬಲವೂ ಜಯಗಳೂ ಸೊಲೊಮೋನನ ಸಮಾಧಾನವೂ ಮಹಿಮೆಯೂ ಉಳ್ಳ ರಾಜ್ಯಾಧಿಪತ್ಯವೂ ಮೆಸ್ಸಿಯ ರಾಜತನಕ್ಕೆ ಮುಂಗುರ್ತುಗಳಾಗಲಿಕ್ಕೆ ಉಪಾಯವಾಯಿತು. ಅತ್ತಕಡೆಯಲ್ಲಿ ಸೊಲೊಮೋನನ ದೇವಾಲಯದಿಂದ ಹಳೇ ಒಡಂಬಡಿಕೆಯ ದೇವಾರಾಧನೆಯೂ ಅತಿ ಶ್ರೇಷ್ಠವಾದಂಥಾ ಅತಿ ಮಹಿಮೆಯುಳ್ಳಂಥಾ ಸ್ಥಾನಕೆ ವಿಕಸಿತವಾಯಿತು.

ಪರಿಶಿಷ್ಟ. ೧. ರಾಜತನವು ಉಂಟಾಗಿರಲಾಗಿ ಸಂಸ್ಥಾನವು ಸಂಪೂರ್ಣವಾದ ರೂಪವನ್ನು ಹೊಂದಿದ ಹಾಗಾಯಿತು. ಆದರೆ ಇಸ್ರಯೇಲಿನ ಅರಸನು ಸ್ವಂತ ನಾಮದಲ್ಲಿ ಅಲ್ಲ ದೇವರ ನಾಮದಲ್ಲಿ ಅರಸನಾಗಿರ ಬೇಕು. ಪ್ರವಾದಿಯೂ ಯಾಜಕನೂ ಉದ್ಯೋಗದ ಪ್ರಕಾರ ಅರಸನ ಕೈಕೆಳಗೆ ಅಲ್ಲ ಅವನಿಗೆ ಸಮಾನರಾಗಿ ನಿಂತರು. ಮನುಷ್ಯರೆಂದೂ ಗೃಹಸ್ಥರೆಂದೂ ಎಲ್ಲಾ ಪ್ರಜೆಯವರ ಹಾಗೆಯೇ ಅರಸನಿಗೆ ವಿಧೇಯವಾಗಿ, ಆದರೆ ತಮ್ಮ ಉದ್ಯೋಗದಲ್ಲಿ ಯಾಜಕರೆಂದೂ ಪ್ರವಾದಿಗಳೆಂದೂ ದೇವರಿಗೆ ಮಾತ್ರವೇ ವಿಧೇಯವಾಗಿರ ಬೇಕೇ ಹೊರ್ತು ಅರಸನಿಗೆ ಅಲ್ಲ.

ಪರಿಶಿಷ್ಟ. ೨. ಈ ಕಾಲದ ಕಥೆಗೂ ಅದರ ತರುವಾಯದ ಕಥೆಗೂ ಆಧಾರವಾದ ಪುಸ್ತಕಗಳು ಯಾವವಂದರೆ—ಸಮುವೇಲನವೆಂಬ ೨ ಪುಸ್ತಕಗಳು. ಇವು

ಗಳು ಏಲಿ, ಸಮುವೇಲರ ಕಥೆಗಳನ್ನು ಆರಂಭ ಮಾಡಿ, ದಾವಿದನ ಕಡೇ ದಿನಗಳ ವರೆಗೂ ಮುಟ್ಟುತ್ತವೆ. ಗ್ರಂಥಕಾರನು ಯಾರೆಂದು ನಿಶ್ಚಯವಾಗಿ ಹೇಳ ಕೂಡದು. ಆದರೂ ಅವನು ದಾವಿದನ ಕಾಲದಲ್ಲಿ ಬದುಕಿ ಇವನು ಸತ್ತ ಸ್ವಲ್ಪ ಕಾಲದೊಳಗೆ ಬರೆದನೆಂತ ಕಾಣುತ್ತದೆ.

ಅರಸುಗಳವೆಂಬ ಎರಡು ಪುಸ್ತಕಗಳು ಇವುಗಳು ಸೊಲೊಮೋನನು ರಾಜ್ಯಾಧಿಕಾರಕ್ಕೆ ಬಂದಂದಿನಿಂದ ಬಬಿಲೋನದ ವಾಸಾಂತರದ ವರೆಗೆ ಮುಟ್ಟುತ್ತವೆ. ವಿಭಾಗವಾದಂದಿನಿಂದ ಎರಡು ರಾಜ್ಯಗಳ ಕಥೆಯನ್ನು ಸಮಾನಕಾಲವಾಗಿ ಹೇಳುತ್ತವೆ. ಯೆಹೂದ್ಯರ ಸಂಪ್ರದಾಯದ ಪ್ರಕಾರ ಯೆರೆಮಿಯನು ಗ್ರಂಥಕಾರನು.

ನಡವಡಿಕೆಯ (ದಿನಚರ್ಯ.) ಪುಸ್ತಕಗಳು ಎರಡು ಇವುಗಳು ಮೂಲಪಿತೃಗಳ ವರೆಗೆ ಹಿಂದೆ ಹೋಗುವಂಥಾ ವಂಶಾವಳಿಯನ್ನು ಹೇಳಿ ಅರಂಭ ಮಾಡುತ್ತವೆ. ಇದಕ್ಕೆ ಸಂಬಂಧವಾಗಿ ದಾವಿದನ ಕಥೆಯೂ ಸೊಲೊಮೋನನ ಕಥೆಯೂ ಯೆಹೂದ ರಾಜ್ಯದ ಕಥೆಯೂ ಬರುತ್ತದೆ. ವಾಸಾಂತ್ರದಲ್ಲಿದ್ದವರಿಗೆ ಸ್ವದೇಶಕ್ಕೆ ಹೋಗ ಬಹುದೆಂಬ ಕೂರನ (ಕೊರೇಷನ) ಅಪ್ಪಣೆಯನ್ನು ಹೇಳಿ ಮುಗಿಸುತ್ತವೆ. ಸಾಲನ ಕಥೆಯು ದಶಗೋತ್ರ ರಾಜ್ಯದ ಕಥೆಯು ಬರುವದಿಲ್ಲ. ಆದರೆ ಗ್ರಂಥಕಾರನು ಭಕ್ತಿಯ ಸ್ಥಿತಿಯನ್ನೂ ಯೆಹೋವಾರಾಧನೆಯನ್ನೂ ವಿಶೇಷವಾದ ಪ್ರೀತಿಯಿಂದ ವಿಸ್ತರಿಸುತ್ತಾನೆ. ಯೆಹೂದ್ಯರ ಸಂಪ್ರದಾಯದ ಪ್ರಕಾರ ಎಸ್ರನೇ ಗ್ರಂಥಕಾರನು.

ಕಡೇ ಕಾಲಗಳ ವಿಷಯದಲ್ಲಿ ಮೇಲೆ ಹೇಳಿದ ಪುಸ್ತಕಗಳ ಹೊರ್ತು ಪ್ರವಾದಿಗಳ ಬರಹಗಳೂ ಎಸ್ರ, ನೆಹೆಮ್ಯ, ಎಸ್ತರ ಎಂಬ ಪುಸ್ತಕಗಳೂ ಕಥೆಗೆ ಆಧಾರವಾಗಿರುತ್ತವೆ.



## § 62. ಏಲಿಯೂ, ಸಮುವೇಲನೂ

೧ ಸಮು. ೧—೨ ಸಂ. ಏಲಿಯು — ಒಂದು ವೇಳೆ ಸಿಂಸೋನನ ಸಮಯದಲ್ಲಿಯೇ — ೪೦ ವರ್ಷ ಪರ್ಯಂತರ ನ್ಯಾಯಾಧಿಪತಿಯೂ ಪ್ರಧಾನಯಾಜಕನೂ ಆಗಿದ್ದನು. ಇವನ ಕಾಲದಲ್ಲಿ ಎಲ್ಕಾನನ ಹೆಂಡತಿಯಾದ ಹನ್ನಳು ಕರ್ತನಿಂದ ಒಬ್ಬ ಮಗನ್ನ ಬೇಡಿ ಕೊಂಡು ಅವನಿಗೆ ಸಮುವೇಲೆಂಬ ಹೆಸರಿಟ್ಟು (ಸಮುವೇಲ್ ಅಂದರೆ ದೇವಶ್ರುತನು.) ಅವನನ್ನು ಶುದ್ಧಸ್ಥಳದ ಸೇವೆಗೆ ನಜೀರನಾಗಿ ಅರ್ಪಿಸುತ್ತಾಳೆ. — ಏಲಿಯ ಮಕ್ಕಳಾದ ಒಫ್ನಿಯೂ ಫಿನೆಹಾಸನೂ ಹ್ಯಾಗೂ ಕೆಟ್ಟತನವನ್ನೂ

ಬಲಾತ್ಕಾರವನ್ನೂ ನಡಿಸುತ್ತಾರೆ. ಮತ್ತು ಅಶಕ್ತನಾದ ತಂದೆಯು ಶಿಕ್ಷಿಸುವದಿಲ್ಲ. ರಾತ್ರಿಯಲ್ಲಿ ಕರ್ತನು ಸಮುವೇಲನಿಗೆ ಪ್ರತ್ಯಕ್ಷವಾಗುತ್ತಾನೆ. ಈತನು ಕರ್ತನನ್ನು ತಿಳಿಯಲಿಲ್ಲ, ಆದರೆ ಏಲಿಯ ಮಾತಿನ ಪ್ರಕಾರ ಕರ್ತನೇ ಮಾತಾಡು ನಿನ್ನ ದಾಸನು ಕೇಳುತ್ತಾನೆಂದು ಉತ್ತರ ಕೊಡುತ್ತಾನೆ. ಯೆಹೋವನು ಏಲಿಗೂ ಅವನ ಮನೆಗೂ ನಾಶ ಬರುವದೆಂದು ಅವನಿಗೆ ತಿಳಿಸುತ್ತಾನೆ. ಏಲಿಯು ಹೇಳಿದ್ದು "ಅದು ಕರ್ತನು ಆತನಿಗೆ ಒಳ್ಳೇದೆಂದು ಕಾಣುವ ಪ್ರಕಾರ ಮಾಡಲಿ„ ಫಿಲಿಷ್ಟಿಯರ ಸಂಗಡ ಮಾಡಿದ ಯುದ್ಧದಲ್ಲಿ ಅಪವಿಶ್ವಾಸದ ಭರವಸದಲ್ಲಿ ಸಂಗಡ ತಕ್ಕೊಂಡು ಹೋದ ಸಾಕ್ಷಿಪೆಟ್ಟಿಗೆಯು ಶತ್ರುಗಳ ಕೈಯಲ್ಲಿಯೂ ಇವರ ಕೈಯಿಂದ ದಾಗೋನಿನ ಗುಡಿಯಲ್ಲಿಯೂ ಬರುತ್ತದೆ. ಆದರೆ ಅಲ್ಲಿದ್ದ ವಿಗ್ರಹವು ಇದರ ಮುಂದೆ ಎರಡು ಸಾರಿ ಮೋರೆ ಕೆಳಗಾಗಿ ಬೀಳುತ್ತದೆ. ಮತ್ತು ಫಿಲಿಷ್ಟ್ಯರು ಬಹಳ ನೋವುವುಳ್ಳ ರೋಗಗಳಿಂದ ಕಷ್ಟ ಪಡುತ್ತಾರೆ. ಎರಡು ಕರಿಯುವ ದನಗಳು ಯೂದಾಗೋತ್ರದ ಪ್ರಾಂತ್ಯಪುರವಾಗಿರುವ ಬೇಥ್‌ಷೆಮೇಷ್ ಎಂಬಲ್ಲಿಗೆ ಭಂಗಾರದ ಕಾಣಿಕೆಗಳುಳ್ಳ ಸಾಕ್ಷಿಪೆಟ್ಟಿಗೆಯನ್ನು ಕೊಂಡು ಹೋಗುತ್ತವೆ. ಅಲ್ಲಿ ದನಗಳನ್ನು ಬಲಿಯರ್ಪಿಸಿ ಪೆಟ್ಟಿಗೆಯನ್ನು ಲೇವ್ಯರು ತಕ್ಕೊಂಡು ಹೋಗುತ್ತಾರೆ. ಉತ್ವೇಗದಿಂದಲೂ ಆಶ್ಚರ್ಯಕ್ಕಾಗಿಯೂ ಬೇಥ್‌ಷೆಮೇಷದವರು ಸಾಕ್ಷಿಪೆಟ್ಟಿಗೆಯನ್ನು ತೆರೆದು ನೋಡಿದಾಗ (೪ ಮೋಶೆ. ೪, ೨೦.) ೭೦ ಮಂದಿ ಸಾಯುತ್ತಾರೆ. ಇಲ್ಲಿಂದ ಕಿರಿಯತ್ ಯೆಯಾರಿಮ್ ಎಂಬಲ್ಲಿಗೆ ತರುತ್ತಾರೆ. ಇಲ್ಲಿ ಶಿಲೋವದಲ್ಲಿದ್ದ ಸಾಕ್ಷಿಗುಡಾರಕ್ಕೆ ದೂರವಾಗಿ ದಾವಿದನ ಕಾಲದ ಪರ್ಯಂತರಕ್ಕೂ ಇತ್ತು. ಏಲಿಯ ಮಕ್ಕಳು ರಣದಲ್ಲಿ ಬಿದ್ದು ಹೋದರು. ಮತ್ತು ಏಲಿಯು ತಾನೇ ಸಾಕ್ಷಿಪೆಟ್ಟಿಗೆಯು ಕಳದು ಹೋಯಿತೆಂಬ ವರ್ತಮಾನ ಕೇಳಿ ಆಸನದಿಂದ ಕೆಳಗೆ ಬಿದ್ದು ಕುತ್ತಿಗೆ ಮುರುಕೊಂಡನು. ಈಗ ಸಮುವೇಲನು ಮಿಚ್ಪದಲ್ಲಿ ಕೂಡಿ ಬಂದ ರಾಜಸಭೆಯೊಡನೆ ಎಲ್ಲಾ ವಿಗ್ರಹಗಳನ್ನು ಬಿಸಾಡಿ ಬಿಟ್ಟು, ಫಿಲಿಷ್ಟ್ಯರು ಅಪಜಯ ಪಟ್ಟ ತರುವಾಯ ಯೆಬೆನೇಜರ್ (ಸಹಾಯದ ಕಲ್ಲು) ಎಂಬ ಜ್ಞಾಪಕಶಾಸನವನ್ನು ಮಾಡಿಟ್ಟು ಹೇಳಿದ್ದು ಇಲ್ಲಿ ಪರ್ಯಂತರ ಕರ್ತನು ಸಹಾಯ ಮಾಡಿದ್ದಾನೆ.



## § 63. ಸೌಲನನ್ನು ಆಯಿದು ಕೊಂಡದ್ದೂ ತ್ಯಜಿಸಿದ್ದೂ

೧) ೧ ಸಮು. ೮—೧೪ ಸಂ. ಸಮುವೇಲನು ಮುದುಕನಾದಾಗ ಅವನ ಮಕ್ಕಳು ಆತನ ಮಾರ್ಗಗಳಲ್ಲಿ ನಡಿಯದೆ ನ್ಯಾಯವನ್ನು ಬೊಗ್ಗಿಸಿದರು. ಇದರ ಹೊ

ತರ್ಣ ಅಮ್ಮೋನ್ಯರ ಅರಸನಾದ ನಾಹಾಸನಿಂದ ಒತ್ತಾಯ ಪಟ್ಟವರಾಗಿ (೧೨, ೧೨.) ಇಸ್ರಾಯೇಲ್ಯರು ಸುತ್ತಲಿರುವ ಅನ್ಯಜನರಿಗೆ ಇರುವ ಹಾಗೆ ತಮಗೆ ಸಹಾ ಒಬ್ಬ ಅರಸನು ಬೇಕೆಂದು ಸಮುವೇಲನ ಹತ್ತರ ಬೇಡಿ ಕೊಂಡರು. ಸಮುವೇಲನು ದೇವರ ಅಪ್ಪಣೆಯ ಪ್ರಕಾರ ಬೆನ್ಯಮೀನನ ಗೋತ್ರದ ಕೀಷನ ಮಗನಾದ ಸೌಲನನ್ನು ಅರಸನಾಗಿ ಅಭಿಷೇಕಿಸದಾಗ ದೇವರು ಈತನಿಗೆ ಬೇರೊಂದು ಹೃದಯವನ್ನು ಕೊಟ್ಟನು. ನಾಹಾಸನು ಗಿಲಿಯಾದದ ಯಾಬೇಷಕ್ಕೆ ಸುತ್ತು ಮುತ್ತಿಗೆ ಹಾಕಿ, ಎಲ್ಲರಿಗೂ ಬಲಗಣ್ಣು ಕೀಳ ಬೇಕೆಂದು ಹೆದರಿಸುವಾಗ್ಯೆ ಅಪಜಯ ಪಡುತ್ತಾನೆ. ಫಿಲಿಷ್ಟ್ಯರ ಮೇಲೆ ಸಹಾ ಮುಖ್ಯವಾಗಿ ಮಗನಾದ ಯೋನಥಾನನ ಶೂರತ್ವದಿಂದ ಪೂರ್ಣ ಜಯವನ್ನು ಹೊಂದುತ್ತಾನೆ. ಈಗ ಸಮುವೇಲನು ಜನರಿಂದ ಅಪ್ಪಣೆ ತಕ್ಕೊಳ್ಳುತ್ತಾನೆ. ಅವರು ಕರ್ತನ ಮುಂದೆಯೂ ಆತನ ಅಭಿಷಿಕ್ತನ ಮುಂದೆಯೂ ಸಮುವೇಲನ ಮೇಲೆ ದೂರು ಹೇಳಲಿಕ್ಕೆ ಏನೂ ಇಲ್ಲವೆಂದು ಅರಿಕೆ ಮಾಡ ಬೇಕು. ತರುವಾಯ ಅರಸ ಬೇಕೆಂದು ಕೇಳಿದಂಥಾ ದೇವರಾಜ್ಯಕ್ಕೆ ವಿರೋಧವಾದಂಥಾ ಅವರ ಮನೋಭಾವವನ್ನು ಅವರಿಗೆ ತಿಳಿಸುತ್ತಿರಲು ಆ ಕಾಲದಲ್ಲಿ ಎಂದೂ ಆಗದಂಥಾದ್ದು ಅಂದರೆ ಆಕಾಶದಿಂದ ಗುಡುಗೂ ಮಳೆಯೂ ಬಂದು ಸಮುವೇಲನ ಮಾತುಗಳನ್ನು ಬಲಪಡಿಸಿ ಜನರನ್ನು ಭಯದಿಂದ ತುಂಬಿಸುತ್ತವೆ. ಆದರೆ ಸಮುವೇಲನು ಅವರನ್ನು ಆಧರಿಸಿ ತಮ್ಮ ಅರಸನಿಗೆ ವಿಧೇಯವಾಗಿರ ಬೇಕೆಂದು ಬುದ್ಧಿ ಹೇಳಿ, ತಾನು ಇನ್ನು ಮುಂದೆ ನ್ಯಾಯಾಧಿಪತಿಯಾಗಿರದಿದ್ದರೂ ಪ್ರವಾದಿಯಾಗಿದ್ದು ಅವರಿಗಾಗಿ ಪ್ರಾರ್ಥನೆಮಾಡುವೆನೆಂತಲೂ ಅವರಿಗೆ ಕರ್ತನ ಮಾರ್ಗವನ್ನು ಕಲಿಸಿ ಕೊಡುವೆನೆಂತಲೂ ಆಣೆ ಇಡುತ್ತಾನೆ.

೨) ೧ ಸಮು. ೧೩. ೧೫ ಸಂ. ಹ್ಯಾಗೂ ಸೌಲನು ದೇವರಾಜ್ಯದಲ್ಲಿ ತಾನು ಹ್ಯಾಗೆ ಇರ ಬೇಕೆಂದು ಮಾಂಸಭಾವದ ಸ್ವೇಚ್ಛೆಯಿಂದ ಮರತು ಬಿಟ್ಟನು. ಫಿಲಿಷ್ಟ್ಯರ ಸಂಗಡ ಮಾಡಿದ ಯುದ್ಧದ ಮೊದಲೇ ತಾನೇ ಬಲಿಯರ್ಪಿಸಿ ಅನ್ಯಾಯ ಮಾಡಿದ್ದನು. ಆ ಸಮಯದಲ್ಲಿಯೇ ಸಮುವೇಲನು ಅವನಿಗೆ ಅವನ ರಾಜ್ಯವು ನಿಲ್ಲಲಾರದೆಂಬದನ್ನು ಸಾರಿದ್ದನು. ದೇವರ ಅಪ್ಪಣೆಯ ಪ್ರಕಾರ ಅವನು ಅಮಾಲೇಕನನ್ನು ಹೊಡದು ನಾಶನಕ್ಕೆ ಒಪ್ಪಿಸಿ ಕೊಡ ಬೇಕಾಯಿತು. ಆದರೆ ಈತನು ಅರಸನಾದ ಆಗಾಗನನ್ನೂ ಉತ್ತಮವಾದ ಪಶುಗಳನ್ನೂ ಸ್ವೇಚ್ಛಾನುಸಾರವಾಗಿ ಉಳಿಸುತ್ತಾನೆ. ಸಮುವೇಲನು ಅವನನ್ನು ಇದರ ವಿಷಯವಾಗಿ ವಿಚಾರಿಸುತ್ತಾನೆ. ಸೌಲನು ಸುಳ್ಳು ಹೇಳಿ ಡಂಭ ಮಾಡುತ್ತಾನೆ. ಆದರೆ ಬಚ್ಚಿಟ್ಟ ಪಶುಗಳು ಅದೇ ಸಮಯದಲ್ಲಿ ಕೂಗುತ್ತಿರಲಾಗಿ ಇವನ ಸುಳ್ಳು ಪ್ರಕಟವಾಯಿತು. ಮತ್ತು ಸಮುವೇಲನು ಅವನಿಗೆ

ದೇವರು ಆತನನ್ನು ಪೂರ್ಣವಾಗಿ ತ್ಯಜಿಸಿ ಬಿಟ್ಟಿದ್ದಾನೆಂಬದನ್ನು ತಿಳಿಸಿ, ದೇವರ ರಾಜ್ಯದ ವಾತ್ಸಲ್ಯದಲ್ಲಿ ಸ್ವಂತ ಕೈಯಿಂದ ಆಗಾಗನ ಮೇಲೆ ಶಾಪವನ್ನು ಸಂಪೂರ್ಣ ಮಾಡುತ್ತಾನೆ. ಕರ್ತನು ಬೆಥ್ಲೆಹೇಮದ ಕುರುಬನ ಹುಡುಗನಾದಂಥಾ ಇಸಾಯಿಯ ಕಿರೇ ಮಗನಾದಂಥಾ ದಾವಿದನನ್ನು ಅಭಿಷಿಕ್ತನಾಗಿ ಆಯಿದು ಕೊಳ್ಳುತ್ತಾನೆ. ಹೀಗಾಗಿ ಪೂರ್ವದ ವಾಗ್ದತ್ತದ ಪ್ರಕಾರವೂ (೧ಮೋಶೆ. ೪೯, ೮—೧೦.) ಮೊದಲು ನಿಶ್ಚಯ ಮಾಡಿದ ಪ್ರಕಾರವೂ (ನ್ಯಾಯಾ. ೧, ೧. ೨.) ತನಗೆ ದೇವರಿಂದ ಬರುವ ಸ್ಥಾನಕ್ಕೆ ಮುಟ್ಟುವದಾಯಿತು. (ದಾವಿದನ ವಂಶಾವಳಿಯನ್ನು ರೂಥ್. ೪, ೧೮. ೧ದಿನಚ. ೨, ೧—೧೫. ಮತ್ತಾ. ೧, ೩—೬. ನೋಡಿ ಕೊಳ್ಳಬೇಕು.) ಸಮುವೇಲನು ಅವನನ್ನು ಅಭಿಷೇಕಿಸಿ ಒಂದು ಬೋಧನೆಯನ್ನು ಹೊಂದುತ್ತಾನೆ. ಮನುಷ್ಯನು ನೋಡುವ ಪ್ರಕಾರ ಇದು ನಡಿಯುವದಿಲ್ಲಾ ಮನುಷ್ಯನು ಕಣ್ಣಿನ ಮುಂದೆ ಇರುವದನ್ನು ನೋಡುತ್ತಾನೆ. ಆದರೆ ಕರ್ತನು ಹೃದಯವನ್ನು ನೋಡುತ್ತಾನೆ. ಈಗ ದಾವಿದನ ಮೇಲೆ ದೇವರ ಆತ್ಮವು ಆದರೆ ಸೌಲನ ಮೇಲೆ ಕರ್ತನಿಂದ ಒಂದು ದುರಾತ್ಮವು ಬರುತ್ತದೆ. ದಾವಿದನು ವೀಣೆಯ ವಾದ್ಯದಿಂದ ಸೌಲನ ದುರಾತ್ಮವನ್ನು ಹೊರಡಿಸ ಬೇಕೆಂಬದಕ್ಕಾಗಿ ಆತನನ್ನು ಅರಮನೆಗೆ ತರುತ್ತಾರೆ.

ಪರಿಶಿಷ್ಟ. ಪೂರ್ವದ ಪ್ರವಾದನೆಗಳ ಪ್ರಕಾರ (೧ ಮೋಶೆ. ೧೭, ೬. ೧೬.—೩೫, ೧೧.—೧ ಮೋಶೆ. ೩೬, ೩೧.) ಅಬ್ರಹಾಮನ ಬೀಜದಿಂದ ಅರಸುಗಳು ಹೊರಡ ಬೇಕೆಂಬದು ಇತ್ತು. ಮತ್ತು ಮೋಶೆಯು ಈ ಕಾಲವನ್ನು ಪ್ರವಾದಿಯ ದೃಷ್ಟಿಯಿಂದ ನೋಡಿ ರಾಜನೇಮವನ್ನು ಸಹಾ ಕೊಟ್ಟಿದ್ದನು. (೫ ಮೋಶೆ. ೧೭, ೧೪—೨೦.) ಅದೇ ಪ್ರಕಾರ ಮೆಸ್ಸಿಯನ ಉದ್ಯೋಗಕ್ಕೆ ಅತ್ಯವಶ್ಯವಾಗಿರುವಂಥಾ ರಾಜ ಉದ್ಯೋಗವನ್ನು ಯಾಜಕಪ್ರವಾದಿಗಳ ಉದ್ಯೋಗದ ಹಾಗೆಯೇ ಹಳೇ ಒಡಂಬಡಿಕೆಯು ವಿಕಸಿತವಾಗುವಾಗಲೇ ಸ್ಥಾಪಿಸಲಿಕ್ಕೆ ಪ್ರಯತ್ನ ಮಾಡಿ ಮುಂಗುರ್ತಾಗಿ ಕಾಣಿಸ ಬೇಕಾಯಿತು. ಜನಾಂಗವು ಅರಸನನ್ನು ಬೇಡಿ ಕೊಳ್ಳಲಿಕ್ಕೆ ತನಗೆ ಸಾಕಷ್ಟು ಕಾರಣವು ಉಂಟೆಂಬದನ್ನು ತೋರಿಸಲಿಕ್ಕಾಗಿ ೫ ಮೋಶೆ. ೧೭, ೧೪. ೧೫. ಶ್ಲೋಕಗಳ ಪ್ರಕಾರ ಅದೇ ಶಬ್ದಗಳನ್ನೇ ಹೇಳುತ್ತದೆ. ಹಾಗೆಯೇ ಅವರು ತಾವೇ ಒಬ್ಬ ಅರಸನನ್ನು ಆಯಿದು ಕೊಳ್ಳುವವರಲ್ಲ. ಆಯಿದು ಕೊಳ್ಳುವದನ್ನು ೫ ಮೋಶೆ. ೧೭, ೧೫. ಶ್ಲೋಕದ ಪ್ರಕಾರ (ಸಮುವೇಲನ ಮಧ್ಯಸ್ಥಿಗೆಯಿಂದ) ಕರ್ತನಿಗೆ ಒಪ್ಪಿಸಿ ಬಿಡುತ್ತಾರೆ. (ಸಮ ನೋಡು. ೧ ಸಮು. ೧೦, ೨೪.) ಆದರೂ ಅವರು ಬೇಡಿ ಕೊಂಡದ್ದು ದೈವಹೀನವಾದದ್ದಾಗಿತ್ತು. ಯಾಕಂದರೆ ಅದು ಅಕಾಲವಾಗಿಯೂ ಸಾ

ಕಾದ ಕಾರಣವಿಲ್ಲದೆಯೂ ಇತ್ತು. ಇದರಿಂದ ಕರ್ತನು ಅವರಿಗೆ ನ್ಯಾಯಾಧಿಪತಿಯಾಗಿ ಕೊಟ್ಟ ಸಮುವೇಲನನ್ನೂ ಮತ್ತು ಸಮುವೇಲನಲ್ಲಿ ಕರ್ತನನ್ನೇ ಸಹಾ ತ್ಯಜಿಸಿದ ಹಾಗಾಯಿತು. ಅವರು ದೇವರು ಚಿತ್ತೈಸುವ ಮೊದಲೇ ಅರಸನನ್ನು ಇಚ್ಛೈಸಿರುತ್ತಿರಲಾಗಿ ದೇವರು ಸಹಾ ಅವರು ಚಿತ್ತೈಸಿದ ಹಾಗೆಯೇ ದೇವರ ಹೃದಯದ ಪ್ರಕಾರವಲ್ಲ, ಜನಾಂಗದ ಹೃದಯದ ಪ್ರಕಾರವೇ ಅವರಿಗೆ ಅರಸನನ್ನು ಕೊಡುತ್ತಾನೆ. ಈತನು ಯೂದನ ಗೋತ್ರದಿಂದಲ್ಲ. ಆದರೆ ಎಲ್ಲಾ ಜನರಿಗಿಂತ ಒಂದು ತಲೆಯಷ್ಟು ಹೆಚ್ಚು ಉದ್ದವಾಗಿರುವವನು (೧೦, ೨೩.) ಆದರೆ ದಾವಿದನು ದೇವರ ಹೃದಯದ ಪ್ರಕಾರವಿರುವ ಈ ಮನುಷ್ಯನು (೧೩, ೧೪.) ಯೂದಗೋತ್ರದವನೂ ತನ್ನ ಸಹೋದರರಲ್ಲಿ ಕಿರಿಯನೂ ಕಡಿಮೆಯವನೂ ಆಗಿದ್ದನು. (೧೬, ೭. ೧೧.)



## § 64. ದಾವಿದನ ಸಂಕಷ್ಟಗಳೂ ಸಾಉಲನ ಮರಣವೂ

೧) ೧ ಸಮು. ೧೭—೨೨ ಸಂ. ಫಿಲಿಷ್ಟ್ಯರ ಸಂಗಡ ತಿರಿಗಿ ಯುದ್ಧ ಆರಂಭವಾಗುತ್ತದೆ. ರಾಕ್ಷಸನಾದಂಥಾ ಗಾಥಿನ ಗೊಲಿಯಾಥನು ಇಸ್ರಯೇಲನ ಸೈನ್ಯವನ್ನು ಎಲ್ಲರ ಮುಂದೆ ಹೀನೈಸುತ್ತಾನೆ. ಅವನ ಮಾತಿಗೆ ಪ್ರತಿಕೂಲವಾಗಿ ಮಾತಾಡುವವನೊಬ್ಬನೂ ಇಲ್ಲ. ಕಡೆಯಲ್ಲಿ ಅಷ್ಟು ಕಾಲ ತನ್ನ ಹೆತ್ತವರ ಮನೆಗೆ ತಿರಿಗಿ ಹೋಗಿದ್ದು ಈಗ ತನ್ನ ತಂದೆಯಿಂದ ಸೈನ್ಯದಲ್ಲಿರುವ ಸಹೋದರರ ಹತ್ತರ ಕಳುಹಿಸಲ್ಪಟ್ಟವನಾಗಿ ಬಂದ ದಾವಿದನು — ಇದನ್ನು ಕೇಳಿ ಹೃದಯದಲ್ಲಿ ದೇವರ ಮೇಲೆ ಪೂರ್ಣ ಭರವಸವನ್ನಿಟ್ಟವನಾಗಿ ಕುರುಬರ ಚೀಲದಲ್ಲಿ ಕೆಲವು ಕವಣೆ ಕಲ್ಲುಗಳನ್ನು ತಕ್ಕೊಂಡು ಈ ಬಲವುಳ್ಳ ರಾಕ್ಷಸನಿಗೆ ಎದುರು ಹೋಗುತ್ತಾನೆ. ಆದರೆ ಅವನ ಜಯವೂ ಮತ್ತೂ ಹೆಚ್ಚಾಗಿ ಹೆಂಗಸರು ಮಾಡಿದ ಜಯಗೀತವೂ ಸೌಲನ ಹೊಟ್ಟೆಕಿಚ್ಚು ಉದ್ರೇಕ ಮಾಡುತ್ತಿರಲಾಗಿ, ಅವನು ಮಿಖಾಲಳ ಗಂಡನಾಗಿ ತನ್ನ ಅಳಿಯನಾಗಿದ್ದರೂ ದಾವಿದನ ಜೀವವನ್ನು ತೆಗಿಯಲಿಕ್ಕೆ ನೋಡಿದನು. ಸೌಲನ ಈಟಿಗೆ ತಪ್ಪಿಸಿ ಕೊಂಡು ದಾವಿದನು ರಾತ್ರಿಯಲ್ಲಿ ತನ್ನ ಮನೆಗೆ ಓಡಿ ಹೋಗುತ್ತಾನೆ. ಇಲ್ಲಿಂದ ಹೆಂಡತಿಯ ತಂತ್ರದಿಂದ ಕ್ಷೇಮದಲ್ಲಿ ರಾಮಕ್ಕೆ ಸಮುವೇಲನ ಬಳಿಯ ಓಡಿ ಹೋಗಲಾಯಿತು. ಸೌಲನು ಅವನನ್ನು ಹಿಡಿಯಲಿಕ್ಕಾಗಿ ದೂತರನ್ನು ಕಳುಹಿಸುತ್ತಾನೆ. ಆದರೆ ಇಲ್ಲಿ ಆಳುವಂಥಾ ಆತ್ಮವು ದೂತರನ್ನು ಹಿಡುಕೊಳ್ಳಲಾಗಿ ಅವರು ಪ್ರವಾದಿಸುತ್ತಾರೆ. ೨ನೇ ಸಾರಿಯೂ ಮೂರನೇ ಸಾರಿಯೂ ಸೌಲನು ದೂತರನ್ನು ಕಳುಹಿಸುತ್ತಾನೆ. ಆದರೆ

ಇವರಿಗೂ ಹಾಗೆಯೇ ಆಗುತ್ತದೆ. ಕಡೆಯಲ್ಲಿ ತಾನೇ ಹೋದಾಗ ಅವನ ಮೇಲೆಯೂ ದೇವರ ಆತ್ಮ ಬಂದಿರಲು ಅವನು ಪ್ರವಾದಿಸುತ್ತಾನೆ. ಆದದರಿಂದ ಸೌಲನು ಪ್ರವಾದಿಗಳೊಳಗಿನವನು ಎಂಬ ಗಾದೆ ಉಂಟಾಯಿತು. ದಾವಿದನು ರಾಮದಿಂದ ತನ್ನ ಆತ್ಮಪ್ರಿಯನಾದ ಯೋನಥಾನನ ಸಂಗಡ ಇನ್ನೊಮ್ಮೆ ಮಾತಾಡಲಿಕ್ಕಾಗಿ ಹೋಗುತ್ತಾನೆ. ಈತನು ದಾವಿದನ ಮೇಲೆ ತನ್ನ ತಂದೆಗಿರುವ ದ್ವೇಷವನ್ನು ಉಪಶಮಿಸಲಿಕ್ಕೆ ಪ್ರಯತ್ನ ಮಾಡಿದ್ದು ವ್ಯರ್ಥವಾಯಿತು. ಮತ್ತು ತನ್ನ ತಂದೆಯು ದಾವಿದನನ್ನು ಕೊಲ್ಲಲಿಕ್ಕೆ ಪೂರ್ಣವಾಗಿ ನಿಶ್ಚಯಿಸಿ ಕೊಂಡಿದ್ದಾನೆಂಬದು ಅವನಿಗೆ ತಿಳಿಯ ಬಂತು. ಈಗ ಯೋನಥಾನನು ತಾನೇ ದಾವಿದನಿಗೆ ಓಡಿ ಹೋಗ ಬೇಕೆಂದು ಹೇಳುತ್ತಾನೆ. ದಾವಿದನು ಯೆರೂಸಲೇಮದ ಸಮೀಪದಲ್ಲಿರುವ ಯಾಜಕಪುರವಾದ ನೋಬದ ಕಡೆಗೆ ತಿರಿಗಿ ಕೊಳ್ಳುತ್ತಾನೆ. ಇಲ್ಲಿ ಪ್ರಧಾನಯಾಜಕನಾದ ಅಹಿಮೆಲೇಕನು ಆಹಾರಕ್ಕೆ ಸಮುಖದ ರೊಟ್ಟಿಗಳನ್ನು ಕೊಟ್ಟು ಗೊಲಿಯಾಥನ ಖಡ್ಗವನ್ನು ಒಪ್ಪಿಸಿ ಕೊಡುತ್ತಾನೆ. ಅಲ್ಲಿಂದ ಫಿಲಿಷ್ಟ್ಯರ ಅರಸನಾದ ಗಾಥಿನ ಆಕೀಷನ ಹತ್ತರ ಓಡಿ ಹೋಗುತ್ತಾನೆ. ಇಲ್ಲಿ ಆಕೀಷನ ಸೇವಕರು ಇವನಲ್ಲಿ ಚರವಸವಿಡದಿರಲಾಗಿ ಇವನಿಗೆ ಸಂಕಟಸ್ಥಿತಿಯು ಪ್ರಾಪ್ತವಾಯಿತು. ಆದರೆ ಈತನು ಹುಚ್ಚನ ಹಾಗೆ ಮಾಡಿ ಕೊಂಡು ತಪ್ಪಿಸಿ ಕೊಳ್ಳುತ್ತಾನೆ. ಬೆಥ್ಲೆಹೇಮದಿಂದ ದೂರವಾಗಿರದಂಥಾ ಅದುಲ್ಲಾಮ್ ಗವಿಗೆ ಈಗ ಓಡಿ ಹೋದಾಗ ನಾನೂರು ಮಂದಿ ಅವನ ಹತ್ತರ ಕೂಡಿಕೊಳ್ಳುತ್ತಾರೆ. ಎದೋಮ್ಯನಾದ ಆ ಭ್ರಷ್ಟ ದೋಯೆಗನು ನೋಬದಲ್ಲಿ ಆದದ್ದನ್ನು ತನ್ನಧ್ಯ ಸೌಲನಿಗೆ ತಿಳಿಸಿ ಇದ್ದನು. ಮತ್ತು ಈತನು — ಯಾಜಕರನ್ನೆಲ್ಲಾ ಕೊಂದು ಹಾಕಿ ತನ್ನ ಕೋಪವನ್ನು ಶಾಂತ ಪಡಿಸುತ್ತಾನೆ. ಅಬಿಯಾಥರನು ಮಾತ್ರವೇ ಉರಿಮ್ ತುಮ್ಮಿಮ್ ತಕ್ಕೊಂಡು ಜಾರಿ ಬಿಟ್ಟು ದಾವಿದನ ಹತ್ತರ ಬಂದನು.

೨) ೧ ಸಮು. ೨೩ ಇತ್ಯಾದಿ — ಸೀಫ್ ಎಂಬ ಅರಣ್ಯದಲ್ಲಿ ಸೌಲನು ದಾವಿದನಿಗೆ ಮುತ್ತಿಗೆ ಹಾಕಿದಾಗ ಫಿಲಿಷ್ಟ್ಯರು ದೇಶದಲ್ಲಿ ಬಿದ್ದದರಿಂದ ದಾವಿದನಿಗೆ ತಪ್ಪಿಸಿಕೊಳ್ಳಲಿಕ್ಕೆ ಉಪಾಯವಾಯಿತು. ಶಿಲಾದುರ್ಗವಾಗಿರುವ ಎಂಗೆಡಿಯಲ್ಲಿಯೂ ತರುವಾಯ ಇನ್ನೊಂದು ಸಾರಿ ಸೀಫ್ ಅರಣ್ಯದಲ್ಲಿಯೂ ದಾವಿದನು ತೋರಿಸಿದ ಗಂಭೀರಮನಸ್ಸಿನಿಂದ ಅರಸನಾದ ಸೌಲನು ದಾವಿದನನ್ನು ಹಿಂಸಿಸುವದನ್ನು ಬಿಟ್ಟು ಅವನಿಗೆ ನೀನು ನನಗಿಂತ ಹೆಚ್ಚು ನೀತಿಯುಳ್ಳವನೆಂದು ಅರಿಕೆ ಮಾಡ ಬೇಕಾಯಿತು. ೨ನೇ ಸಾರಿ ದಾವಿದನು ಫಿಲಿಷ್ಟ್ಯರ ಅರಸನಾದ ಆಕೀಷನ ಆಶ್ರಯವನ್ನು ಹುಡುಕಲಾಗಿ ಈತನು ಅವನಿಗೆ ಚಿಕ್ಲಾಗ್ ಪಟ್ಟದಲ್ಲಿ ವಾಸ ಮಾಡಲಿಕ್ಕೆ ಅಪ್ಪಣೆ ಕೊಡುತ್ತಾನೆ. ಆಕೀಷನು ಸೌಲನ ಸಂಗಡ ಯುದ್ಧ ಮಾಡುವಾಗ್ಯೆ ದಾವಿದನು ತ

ನ್ನ ಸಂಗಡ ಸೌಲನ ಹತ್ತರ ಯುದ್ಧ ಮಾಡಲಿಕ್ಕೆ ಹೋಗ ಬೇಕೆಂದಿದ್ದಾಗ ಆಕೀಷನ ಪ್ರಭುಗಳು ಭರವಸವಿಲ್ಲದವರಾಗಿದ್ದದರಿಂದ ಈ ಆಲೋಚನೆಯನ್ನು ಬಿಟ್ಟು ದಾವಿದನನ್ನು ಆಕೀಷನು ತಿರಿಗಿ ಕಳುಹಿಸಿದನು. ಸೌಲನು ಮೊದಲು ಒಳ್ಳೇ ಕಾಲಗಳಲ್ಲಿ ಎಲ್ಲಾ ಮಂತ್ರಗಾರರನ್ನೂ ಶೂನ್ಯಗಾರರನ್ನೂ ನಿರ್ಮೂಲ ಮಾಡಲಿಕ್ಕೆ ಪ್ರಯತ್ನ ಮಾಡಿದವನಾಗಿದ್ದರೂ ಈಗ ಕರ್ತನು ಅವನಿಗೆ ಉರಿಮ್ ತುಮ್ಮಿಮ್ ಎಂಬವುಗಳಿಂದಲಾದರೂ ಸ್ವಪ್ನಗಳಿಂದಲಾದರೂ ಪ್ರವಾದಿಗಳಿಂದಲಾದರೂ ಉತ್ತರ ಕಾಡದಿರಲಾಗಿ ಎಂದೋರದಲ್ಲಿರುವ ಸತ್ತವರನ್ನೂ ಕೇಳುವವಳ ಹತ್ತರ ಆಶ್ರಯ ಹುಡುಕುತ್ತಾನೆ. ಅಲ್ಲಿ ಸಮುವೇಲನ ಆತ್ಮವು ಅವನಿಗೆ ನಾಳೆ ನೀನೂ ನಿನ್ನ ಮಕ್ಕಳೂ ನನ್ನ ಸಂಗಡಲಿರುವಿರೆಂದು ಹೇಳುತ್ತದೆ. ಹಾಗೆಯೇ ಆಯಿತು. ಸೌಲನು ಅಪಜಯ ಪಟ್ಟು ತಾನೇ ತನ್ನ ಕತ್ತಿಯಲ್ಲಿ ಬೀಳುತ್ತಾನೆ.

ಪರಿಶಿಷ್ಟ. ಚನ್ನಾಗಿ ವಿಚಾರಿಸಿದರೆ ಸಮುವೇಲನ ಆತ್ಮವು ಪ್ರತ್ಯಕ್ಷವಾದದ್ದು ಸತ್ಯವೆಂತ ಕಾಣುತ್ತದೆ. ಆದರೆ ಆ ಹೆಂಗಸಿನ ಬಲದಿಂದಲ್ಲ. ಇವಳು ಅವನು ಪ್ರತ್ಯಕ್ಷವಾದಾಗ ಅಮಿತವಾಗಿ ವಿಸ್ಮಯ ಪಡುತ್ತಾಳಲ್ಲಾ. ಮೊದಲು ಸೌಲನಿಗೆ ದೇವರು ಅವನನ್ನು ತ್ಯಜಿಸಿದ್ದಾನೆಂಬದನ್ನು ಸಾರಿದ ಪ್ರವಾದಿಯೇ ಈಗ ಅವನಿಗೆ ಬೇಗ ಬರುವಂಥಾ ನಾಶನವನ್ನು ಸಹಾ ಸಾರ ಬೇಕೆಂಬದಾಗಿ—ದೇವರೇ ಅವನನ್ನು ಕಳುಹಿಸಿ ಇರ ಬೇಕು.



## § 65. ದಾವಿದನು ರಾಜ್ಯವನ್ನಾಳಲಾರಂಭಿಸಿದ್ದು
### (ಕ್ರಿ. ಮುಂಚೆ ೧೦೫೫)

೨ ಸಮು. ೧—೬. ಸಂ. (೧ ದಿನಚ. ೧೨—೧೭.) ದಾವಿದನು ಸೌಲನೂ ಯೋನಥಾನನೂ ಸತ್ತರೆಂದು ಬಹಳ ಪ್ರಳಾಪ ಮಾಡುತ್ತಾನೆ. ಈ ವರ್ತಮಾನ ತಂದಂಥಾ ಸೌಲನನ್ನು ತಾನೇ ಕೊಂದು ಹಾಕಿದೆನೆಂದು ಹೆಚ್ಚಳ ಪಡುವಂಥಾ ಅಮಲೇಕ್ಯನಿಗೆ ಸುಳ್ಳಾಡಿದ ಈ ಪಾತಕಕ್ಕಾಗಿ ತಕ್ಕ ಸಂಬಳವನ್ನು ಕೊಡುತ್ತಾನೆ. ಹೆಬ್ರೋನಿನಲ್ಲಿ ಯೆಹೂದ ಗೋತ್ರವು ದಾವಿದನು ಅರಸನಾಗಿರುತ್ತಾನೆಂದು ಸಾರುತ್ತದೆ. (ಕ್ರಿಸ್ತ ಮುಂಚೆ ೧೦೫೫) ಆದರೆ ಸೌಲನ ನಾಯಕನಾಗಿದ್ದ ಅಬ್ನೇರನು ಸೌಲನ ಮಗನಾದ ಇಷ್ಬೋಶೇತನು ಮಿಕ್ಕಾದ ಗೋತ್ರಗಳ ಮೇಲೆ ಅರಸನಾಗಿದ್ದಾನೆಂದು ಮಹಾನಾಯಿಮಿನಲ್ಲಿ ಸಾರುತ್ತಾನೆ. ಇವನು ೨ ವರ್ಷ ಆಳಿದ ತರುವಾಯ ಅವನನ್ನು

ಕೊಂದು ಹಾಕಿದರು. ಅಬ್ನೆರನು ದಾವಿದನ ಕಡೆಗೆ ತಿರುಗಲಿಕ್ಕೆ ಇದ್ದಾಗ (ದಾವಿದನ ಸೋದರ ಅಳಿಯನೂ ನಾಯಕನೂ ೧ ದಿನಚ. ೨, ೧೬. ಆಗಿದ್ದ) ಯೋವಾಬನಿಂದ ಹೊಟ್ಟೆಕಿಚ್ಚಿನಿಂದಲೂ ಗೃಹಮತ್ಸರದಿಂದಲೂ (ಅವನು ಯುದ್ಧದಲ್ಲಿ ಯೋವಾಬನ ಸಹೋದರನಾದ ಅಸಹೇಲನನ್ನು ಕೊಂದು ಹಾಕಿದ ಕಾರಣ) ಮೋಸದಿಂದ ಕೊಂದು ಹಾಕಲ್ಪಟ್ಟಿದ್ದನು. ಕಡೆಯಲ್ಲಿ ದಾವಿದನು (ಏಳುವರೆ ವರ್ಷದ ತರುವಾಯ) ಅರಸನಾಗಿರುತ್ತಾನೆಂದು ಮಿಕ್ಕಾದ ಗೋತ್ರದವರು ಸಹಾ ಒಪ್ಪಿ ಕೊಂಡು ಹೆಬ್ರೋನದಲ್ಲಿ ಅವನನ್ನು ಉತ್ಸವದಲ್ಲಿ ಅಭಿಷೇಕಿಸುತ್ತಾರೆ. ಅವನು ಯೆರೂಸಲೇಮದ ಪರ್ವತದುರ್ಗವಾಗಿರುವ ಚಿಯೋನನ್ನು ಯೆಬೂಸ್ಯರ ಕೈಯಿಂದ ತಪ್ಪಿಸಿ (ಸಮ ನೋಡು § ೫೬, ೧.) ಅಲ್ಲಿಯೇ ದಾವಿದನ ಪುರವನ್ನು ಕಟ್ಟಿ ಸಾಕ್ಷಿಪೆಟ್ಟಿಗೆಯನ್ನು (§ ೬೨) ಅಲ್ಲಿಗೆ ತರುತ್ತಾನೆ. ಊಸನು ಅನುಜ್ಞೆ ಇಲ್ಲದೆ ಶುದ್ಧಸ್ಥಾನವನ್ನು ಮುಟ್ಟಲಾಗಿ ಸಾಯ ಬೇಕಾಗುತ್ತದೆ. (೪ ಮೋಶೆ. ೪, ೧೫.) ಇದರಿಂದ ದಾವಿದನು ಭಯ ಪಟ್ಟು ತನ್ನ ಅಪೇಕ್ಷೆಯನ್ನು ಮಾಡದಿರುತ್ತಾನೆ. ಆದರೆ ಸಾಕ್ಷಿಪೆಟ್ಟಿಗೆ ಉಳಿದ ಒಬೆದ್ ಎದೋಮನ ಮನೆಯನ್ನು ಕರ್ತನು ಪ್ರತ್ಯಕ್ಷವಾಗಿ ಆಶೀರ್ವದಿಸುತ್ತಾನೆ ಎಂದು ಸಾಕ್ಷಿಪೆಟ್ಟಿಗೆಯನ್ನು ಚಿಯೋನ್‌ಪರ್ವತಕ್ಕೆ ತರಿಸುತ್ತಾನೆ. ಬಲಿಗಳಿಂದಲೂ ಉತ್ಸವವುಳ್ಳ ನಾಟ್ಯಗಳಿಂದಲೂ ಲೇವ್ಯರು ಅದನ್ನು ಅದಕ್ಕಾಗಿ ಸಿದ್ಧ ಮಾಡಿದ ಗುಡಾರಕ್ಕೆ ತರುತ್ತಾರೆ. ದಾವಿದನು ರಾಜಭೂಷಣವನ್ನೆಲ್ಲಾ ತೆಗದು ಬಿಟ್ಟು ಅಂಗಿಯಲ್ಲಿ ಸಾಕ್ಷಿಪೆಟ್ಟಿಗೆಯ ಮುಂದೆ ಕುಣಿಯುತ್ತಾನೆ. ಮತ್ತು ಮಿಕಲಳು ಅವನಿಗೆ ಇದಕ್ಕಾಗಿ ಅಪಹಾಸ್ಯ ಮಾಡಲು ಈತನು ಹೇಳಿದ್ದು: ನಾನು ಇದಕ್ಕಿಂತ ಇನ್ನೂ ನೀಚನಾಗಿರುವೆನು. ಮತ್ತು ನನ್ನ ಸ್ವಂತ ಕಣ್ಣುಗಳಲ್ಲಿ ದೀನನಾಗಿರುವೆನು. ಸೌಲನ ಮಗಳಾದ ಮಿಕಲಳು ಅವಸಾನಕಾಲದ ಪರ್ಯಂತರಕ್ಕೂ ಬಂಜೆಯಾಗಿದ್ದಳು.



## § 66. ರಾಜಧಾನಿಯಾಗಿರುವ ಯೆರೂಸಲೇಮು

೧) ಚಿಯೋನ್ ಪರ್ವತದುರ್ಗವನ್ನು ಜೈಸಿದಂದಿನಿಂದ ಯೆರೂಸಲೇಮವೂ ದೇಶದ ಮುಖ್ಯ ಪಟ್ಟಣವೂ ಅರಸುಗಳ ನಿವಾಸವೂ ದೇವರಾಜ್ಯದ ಮಧ್ಯಸ್ಥಳವೂ ಆಯಿತು. ಇದಕ್ಕೆ ಅದು ಮುಖ್ಯವಾಗಿ ಅದರ ಸ್ಥಾನದಿಂದಲೂ ಪ್ರದೇಶದಿಂದಲೂ ಯೋಗ್ಯವಾಯಿತು. ಯೆರೆಮಿಯನು ಮತ್ತೆ ಅದು ಹಾಳು ಬಿದ್ದ ಮೇಲೆ

ದುಖ್ಖದಿಂದ ಹೇಳುವದೇನಂದರೆ — ಅತಿ ಸುಂದರವಾದದ್ದು ಸಮಸ್ತ ದೇಶದ ಅಪೇಕ್ಷೆಯೂ ಎಂಬ ಪಟ್ಣವು ಇದೇ ಅಲ್ಲವೋ (ಗೋಳಾ. ೨, ೧೫.) ಮತ್ತು ಹೆಜೆಕಿಯೇಲನಲ್ಲಿ (೨, ೫.) ಕರ್ತನು ಜನಾಂಗಗಳ ಮಧ್ಯದಲ್ಲಿ ನಾನಿಟ್ಟ ಯೆರೂಸಲೇಮವು ಇದೇ ಅವಳ ಸುತ್ತಲು ದೇಶಗಳುಂಟು ಎಂದು ಹೇಳುತ್ತಾನೆ. ಶುದ್ಧದೇಶವು ಭೂಮಿಯ ಮಿಕ್ಕಾದ ದೇಶಗಳಿಗೆ ಹ್ಯಾಗೋ? ಹಾಗೆ ಯೆರೂಸಲೇಮವು ಶುದ್ಧದೇಶಕ್ಕೆ ಇರುತ್ತದೆ. (ಸಮ ನೋಡು. § ೧೪, ೧.) ಯೆರೂಸಲೇಮವು ದೇಶದ ಮಧ್ಯಸ್ಥಳವೂ ಹೃದಯವೂ ಆಗಿರುವ ಹಾಗೆ ಪಶ್ಚಿಮ ಯೊರ್ದಾನ್ ದೇಶದ ಪರ್ವತಗಳು ಪ್ರಯತ್ನ ಮಾಡುವಂತೆ ಕಾಣುತ್ತದೆ. ಇದು ಎಫ್ರಾಯಿಮ್ ಯೆಹೂದ ಪರ್ವತಗಳ ಮಧ್ಯದಲ್ಲಿ ಉಂಟು. ಇವುಗಳು ಮಹಿಮೆಯುಳ್ಳ ರಾಜಧಾನಿಗೆ ಪ್ರಾಕಾರಗಳಾಗಿಯೂ ದುರ್ಗಗಳಾಗಿಯೂ ಇರುತ್ತವೆ. ಈ ಮಧ್ಯಸ್ಥಳದಿಂದ ಎಲ್ಲಾ ಕಡೆಗೂ ನಡೆದು ಬಹಳ ಪಾಲುಗಳಾಗುವ ವಾದಿಗಳು (ತಗ್ಗುಗಳು) ಕೋಟೆಯ ದ್ವಾರಗಳ ಹಾಗೆ ಇರುತ್ತವೆ.

೨) ಯೆರೂಸಲೇಮವು ಉತ್ತರದಿಂದ ದಕ್ಷಿಣಕ್ಕೆ ನಡಿಯುವಂಥಾ ಎಫ್ರಾಯಿಮ್ ಪರ್ವತಗಳು ನಾಲಿಗೆಯ ಹಾಗೆ ವಿಸ್ತಾರವಾಗುವಂಥಾ ಒಂದು ನೆತ್ತಿಯ ಮೇಲೆ ಶುಮಾರು ೨೫೦೦ ಅಡಿ ಎತ್ತರವಾಗಿರುತ್ತದೆ. ಅದು ಯೆರೂಸಲೇಮದ ಸುತ್ತಲೂ ನಡದು ದಕ್ಷಿಣದಲ್ಲಿ ಕೂಡಿ ಕೊಳ್ಳುವಂಥಾ ಎರಡು ತಗ್ಗುಗಳಿಂದ ಮುಚ್ಚಿಯದೆ. ಉತ್ತರ ಪಶ್ಚಿಮದಲ್ಲಿ ಮಾತ್ರವೇ ಪಟ್ಣಕ್ಕೆ ಸುತ್ತಲೂ ತಗ್ಗು ಇರುವದಿಲ್ಲ. ಇಲ್ಲಿ ಗೀಹೋನ್ ಪರ್ವತದ ದಕ್ಷಿಣ ಪೂರ್ವ ಇಳಿಜಾರು ಪಟ್ಣದಲ್ಲಿ ಸೇರುತ್ತದೆ. ಪಟ್ಣದ ಉತ್ತರದಲ್ಲಿಯೂ ಪೂರ್ವದಲ್ಲಿಯೂ ಬಹಳ ಗುಂಡಿಯಾದ ತಗ್ಗಿನಲ್ಲಿ (ಸತ್ತಸಮುದ್ರದ ಕಡೆಗೆ) ಕೀದ್ರೋನ್ ಹಳ್ಳವು ಹರಿಯುತ್ತದೆ. ಮತ್ತೆ ಈ ತಗ್ಗಿಗೆ ಯೋಸಫಾತ್ ತಗ್ಗು ಎಂಬ ಹೆಸರಾಯಿತು. (ಇದರ ಅರ್ಥವೇನಂದರೆ ಯೆಹೋವನು ವಿಚಾರಿಸುತ್ತಾನೆ. ಯೋವೇಲ್. ೩, ೨. ೧೨. ಶ್ಲೋಕಗಳನ್ನು ಕಾರಣವಿಲ್ಲದೆ ಈ ತಗ್ಗಿನ ವಿಷಯವಾಗಿ ಎಂದು ವಿವರಿಸುವದರಿಂದ ಈ ಹೆಸರಾಯಿತು.) ಪಟ್ಣದ ಪಶ್ಚಿಮ ದಿಕ್ಕಿಗೆ ಸಮವಾಗಿ ಗೀಹೋನ್ ತಗ್ಗು ಕೆಳಗಿಳಿದು ಬೆನ್‌ಹಿನ್ನೋಮ್ (ಗೆಹೆನ್ನಾ) ತಗ್ಗು ಎಂಬ ಹೆಸರ್ಗೊಂಡು ದಕ್ಷಿಣ ಪಾರ್ಶ್ವದ ಸುತ್ತಲು ಬಾಗ್ಗುತ್ತದೆ. ಅಲ್ಲಿಂದ ಮತ್ತೆ ಕೀದ್ರೋನ್ ತಗ್ಗಿಗೆ ಕೂಡುತ್ತದೆ. ಪಟ್ಟಣವಿರುವ ಪರ್ವತಶಿಖರವು ಈ ತಗ್ಗುಗಳ ಕಡೆಗೆ ದೊಡ್ಡ ಪ್ರಪಾತವಾಗಿ ಇರುತ್ತಿರಲಾಗಿ ತನ್ನಷ್ಟಕ್ಕೆ ಸ್ವಾಭಾವಿಕವಾದ ಕೋಟೆಯಾಗುತ್ತದೆ. ಅದರ ಹೊರ್ತು ಈ ತಗ್ಗುಗಳ ಅತ್ತ ಕಡೆಯಲ್ಲಿ ಏರಿ ಬರುವಂಥಾ ಇನ್ನೂ ಎತ್ತರವಾದ ಪರ್ವತಗಳು ಅದನ್ನು ಸುತ್ತಿ ಕೊಳ್ಳುವದರಿಂದ ಕೋಟೆಯು ಇನ್ನೂ ಹೆಚ್ಚಾಗಿ ಭದ್ರವಾಗು

ತ್ತದೆ. (ಕೀರ್ತ. ೧೨೫, ೨.) ಆತಂಕದ ಪರ್ವತವೂ (೧ ಅರ. ೧೧, ೭. ೮.) ಇಪ್ಪೇ ಪರ್ವತವೂ ಪೂರ್ವ ಪಾರ್ಶ್ವದಲ್ಲಿಯೂ ಸ್ಕೋಪ ಪರ್ವತವು ಉತ್ತರ ಪಾರ್ಶ್ವದಲ್ಲಿಯೂ ಗೀಹೋನ್ ಪರ್ವತವು ಪಶ್ಚಿಮ ಪಾರ್ಶ್ವದಲ್ಲಿಯೂ ಒಟ್ಟಿಗೆ ಒಂದೇ ಪರ್ವತದೋಪಾದಿಯಲ್ಲಿ ಆಗಿರುವದರಿಂದ ಪಟ್ಟಣದ ಸ್ಥಳವು ನಾಲಿನಂತೆ ಈ ಮೂರು ಪಾರ್ಶ್ವಗಳಿಂದ ಮುಚ್ಚಿರುತ್ತವೆ. ಪಟ್ಟಣದ ದಕ್ಷಿಣಪಶ್ಚಿಮದಲ್ಲಿ ಮಾತ್ರವೇ ಕಣ್ಣುಗಳ ಮುಂದೆ ರೆಫಾಯಿಮ್ ಬೈಲು ವಿಸ್ತಾರವಾಗುತ್ತದೆ. ಆದರೆ ದಕ್ಷಿಣ ಕಡೆಯಲ್ಲಿ ದುರಾಲೋಚನೆಯ ಪರ್ವತದಿಂದ ಮುಚ್ಚಿಯದೆ. (ಸಂಪ್ರದಾಯದ ಪ್ರಕಾರ ಮತ್ಥಾ. ೨೬, ೩.೪. ಹೇಳಿರುವ ಯಾಜಕಸಭೆಯು ಆದ ಕಾಯಫನ ಮನೆಯು ಇಲ್ಲಿ ಇತ್ತಂತೆ.) ಇದು ಗೀಹೋನ್ ತಗ್ಗಿನೊಡನೆ ಕೂಡಿ ಕೊಂಡ ತರುವಾಯ ಮುಂದೆ ನಡಿಯುವಂಥಾ ಸಪೂರವಾದ ಕೀದ್ರೋನ್ ತಗ್ಗು ಮಧ್ಯದಲ್ಲಿ ಬಂದಿರುವದರಿಂದ ಪೂರ್ವಪಾರ್ಶ್ವದ ಪರ್ವತ ಪಂಕ್ತಿಗೆ ಮುಟ್ಟಲಿಲ್ಲ.

೩) ಉತ್ತರದಿಂದ ದಕ್ಷಿಣ ಕಡೆಗೆ (ದಮಸ್ಕ ದ್ವಾರ ಮೊದಲುಗೊಂಡು) ಇಡೀ ಪಟ್ಟಣದ ಮಧ್ಯದಲ್ಲಿಂದ ಒಂದು ತಗ್ಗು ನಡಿಯುತ್ತದೆ. ಇದು ಬೆನ್‌ಹಿನೋಮ್ ಕೀದ್ರೋನ್ ತಗ್ಗುಗಳು ಕೂಡಿ ಕೊಂಡಲ್ಲಿ ಪ್ರಪಾತವಾಗಿ ಕೆಳಗಿಳಿಯುತ್ತವೆ. (ಈ ಪ್ರಪಾತದ ಕೆಳಗೆ ಶಿಲೋವದ ಬುಗ್ಗೆಯೂ ಕೆರೆಯೂ ಉಂಟು.) ರೋಮಾಯರ ಕಾಲದಲ್ಲಿ ಇದಕ್ಕೆ ಶೀರೋಪೋಯ್ಯದ ತಗ್ಗು (ಗಿಣ್ಣುಗಾರರ ತಗ್ಗು) ಎಂಬ ಹೆಸರಾಯಿತು. ಪಶ್ಚಿಮ ಕಡೆಯಲ್ಲಿ ಶೀರೋಪೋಯ್ಯಕ್ಕೆ ಕೂಡುವಂಥಾ ಪರ್ವತಗಳು ಪೂರ್ವದಲ್ಲಿರುವವುಗಳಿಗಿಂತ ಬಹಳ ಎತ್ತರವಾಗಿರುವದರಿಂದ ಅವುಗಳಲ್ಲಿರುವ ಪಟ್ಣಭಾಗವು ಮೇಲ್‌ಪಟ್ಟಣವೆಂಬ ಹೆಸರ್ಗೊಂಡಿತು. ಈ ಪಶ್ಚಿಮ ಕಡೆಯಿಂದ ಬರುವ ಪರ್ವತಗಳ ದಕ್ಷಿಣಾರ್ಧವು ಚಿಯೋನ್‌ಪರ್ವತವಾಗಿರುತ್ತದೆ. ಇದು ಬೆನ್‌ಹಿನೋಮ್ ತಗ್ಗಿನಿಂದ ಪ್ರಪಾತವಾಗಿ ಏರಿ ಬರುತ್ತದೆ. ಉತ್ತರಾರ್ಧವು ರೋಮಾಯರ ಕಾಲದಲ್ಲಿ ಪ್ರಥಮತಾ ಪಟ್ಣಕ್ಕೆ ಕೂಡಿಸಲ್ಪಟ್ಟಿತು. ಶೀರೋಪೋಯ್ಯಕ್ಕೆ ಪೂರ್ವದಲ್ಲಿರುವ ಪರ್ವತಗಳು ಉತ್ತರದಿಂದ ದಕ್ಷಿಣಕ್ಕೆ ನಡಿಯುತ್ತವೆ. ಇವುಗಳು ಬೆಜೇಥದ ಪರ್ವತವೂ ಅಕ್ರದ ಶಿಖರವೂ ದೇವಾಲಯದ ಪರ್ವತವಾಗಿರುವ ಮೊರಿಯವೂ ಆಗಿರುತ್ತವೆ. ಈ ಪಂಕ್ತಿಯು ದೊಡ್ಡ ಪ್ರಪಾತವಾಗಿ ಬೆನ್‌ಹಿನೋಮ್ ತಗ್ಗಿನಲ್ಲಿ ಶೀರುತ್ತದೆ. ಪೂರ್ವದಲ್ಲಿ ಅಕ್ರವು ದೇವಾಲಯಪರ್ವತಗಿಂತ ಎತ್ತರವಾಗಿತ್ತು. ಮತ್ತು ಅದಕ್ಕೂ ಇದಕ್ಕೂ ಮಧ್ಯದಲ್ಲಿ ಒಂದು ಅಗಲವಾದ ತಗ್ಗು ಇತ್ತು. ಆದರೆ ಮಕಬಾಯರು ಯುದ್ಧಕ್ಕಾಗಿಯೂ ಬೇರೆ ಕಾರಣಗಳಿಗಾಗಿಯೂ ಅಕ್ರವನ್ನು ತೆಗಿಸಿ ಆ ತಗ್ಗನ್ನು ತುಂಬಿಸಿದರು. ಮೇಲ್‌ಪಟ್ಟಣವೂ ಕೀಳ್ಪಟ್ಟಣವೂ ಹೋತುರ್ (ಇವುಗಳಿಗೆ ಚಿಯೋನ್ ಮತ್ತು

ಅಕ್ರವೆಂಬ ಹೆಸರುಗಳಿದ್ದವು.) ರೋಮಾಯರ ಕಾಲದಲ್ಲಿ ನವಪಟ್ಟಣವು (ಇಲ್ಲವೇ ಬೆಜೆಥಾ) ಉಂಟಾಯಿತು. ಇದು ಬೆಜೇಥ ಪರ್ವತದಲ್ಲಿ ಮಾತ್ರವಲ್ಲ ಕೀರೋಪೋಯ್ಯದ ಅತ್ತ ಕಡೆಯಲ್ಲಿ ಎದುರಾಗಿದ್ದ ಶಿಖರದಲ್ಲಿ ಸಹಾ ವಿಸ್ತಾರವಾಗಿತ್ತು.

ಪರಿಶಿಷ್ಟ. ೧. ಈ ಪಟ್ಟಣದ ಮೊದಲನೇ ಹೆಸರು ಸಾಲೆಂ. ಅಂದರೆ: ಸಮಾಧಾನ (§ ೧೭, ೨.) ಅದರ ನಿವಾಸಿಗಳಾದ ಎಬೂಸ್ಯರಿಂದ ಅದಕ್ಕೆ ಎಬುಸ್ ಎಂಬ ಹೆಸರಾಯಿತು. (ನ್ಯಾಯಾ. ೧೯, ೧೦.) ದಾವಿದನು ಅದನ್ನು ಜೈಸಿದಾಗ ಹಳೇ ಹೆಸರನ್ನು ನವೀಕರಿಸಿ ಸ್ವಲ್ಪ ಬದಲು ಮಾಡಿ ಯೆರೂಸಲೇಮ್ ಎಂದಾಯಿತು. (ಹ್ಯಾಗಂದರೆ ಸಮಾಧಾನದ ಆಸ್ತಿ ಇಲ್ಲವೆ ನಿವಾಸ.) ಎಬೂಸ್ಯರು ಮೇಲ್ಪಟ್ಟಣದಲ್ಲಿರುವಾಗ ಇಸ್ರಯೇಲ್ಯರು ಕೀಲ್ಪಟ್ಟಣದಲ್ಲಿದ್ದರು. ಬಹು ವಿಸ್ತಾರವಾಗಿದ್ದ ಬೆಜೇಥವು ರೋಮಾಯರ ಕಾಲದಲ್ಲಿ ಪ್ರಥಮತ ಪಟ್ಟಣಕ್ಕೆ ಕೂಡಿಸಲ್ಪಟ್ಟಿತು.—ಅಬ್ರಹಾಮನ ಕಾಲದಲ್ಲಿ ಮೊರಿಯ ಪರ್ವತವು ಪ್ರಯೋಗಿಸಲ್ಪಡಲೇ ಇಲ್ಲ. ದಾವಿದನ ಕಾಲದಲ್ಲಿ ಸಹಾ ಅದು ಬರೇ ಧಾನ್ಯದ ಹೊಲವಾಗಿತ್ತು.

ಪರಿಶಿಷ್ಟ. ೨. ಮೇಲ್ಪಟ್ಟಣವಾದ ಚಿಯೋನಪರ್ವತವು ಅದರ ಸ್ಥಾನದಿಂದಲೇ ಪಟ್ಟಣದ ಪ್ರಾಮುಖ್ಯ ಭಾಗವಾಗಿತ್ತು. ದಾವಿದನು ಅಲ್ಲಿ ರಾಜದುರ್ಗವನ್ನು ಕಟ್ಟಿಸಿದಂದಿನಿಂದ ಅದು ಇನ್ನೂ ವಿಶೇಷವಾದದ್ದಾಯಿತು. ಆದದರಿಂದ ಚಿಯೋನವು ಉನ್ನತವಾದಂಥಾ ಕಾವ್ಯಭಾಷೆಯಲ್ಲಿ ಶುದ್ಧಪಟ್ಟಣ ತಾನೇ ಎಂಬ ಹಾಗೆಯೂ ಮುಖ್ಯವಾಗಿ ದೇವಾಲಯಪರ್ವತದ ಸಂಗಡಲೂ ವರ್ಣಿಸಲ್ಪಡುತ್ತದೆ. ಇದು ದೇವಾಧಿಪತ್ಯಕ್ಕೂ ದೇವರಾಜ್ಯಕ್ಕೂ ಮಧ್ಯಸ್ಥಳವೂ ಮುಖ್ಯಸ್ಥಳವೂ ಆಗಿ ಕಾಣುತ್ತದೆ. ರಾಜಧಾನಿಯಾಗಿರುತ್ತಿರಲಾಗಿ ಚಿಯೋನವು ದೇವರ ರಾಜ್ಯದಲ್ಲಿ ರಾಜಜಯಕ್ಕೂ ರಾಜಾಧಿಪತ್ಯಕ್ಕೂ ವಿಶೇಷವಾದ ಮುಂಗುರ್ತಾಗಿರುತ್ತದೆ. ಇಸ್ರಯೇಲನಲ್ಲಿ ಇದ್ದ ರಾಜಉದ್ಯೋಗವು ಎಲ್ಲಾ ಸಂಪೂರ್ಣ ಮಾಡುವಂಥಾ ಮೆಸ್ಸೀಯನ ಅಂದರೆ ಕ್ರಿಸ್ತನ ರಾಜ್ಯಕ್ಕೆ ಮುಂಗುರ್ತಾಗಿರುತ್ತಿರಲಾಗಿ ಪ್ರವಾದಿಗಳ ಭಾಷೆಯಲ್ಲಿಯೂ ಇದೇ ಆಧಾರವಾಗಿರುವಂಥಾ ಸಭೆಯ ಭಾಷೆಯಲ್ಲಿಯೂ ಯೆರೂಸಲೇಮವೂ ಚಿಯೋನವೂ ಸಂಪೂರ್ಣವಾದಂಥಾ ಅಥವಾ ಸಂಪೂರ್ಣವಾಗುವಂಥಾ ದೇವರ ರಾಜ್ಯದ ರೂಪಕ್ಕೆ ಸಾಕ್ಷ್ಮಿಯಾಗಿತ್ತು.



## § 67. ದಾವಿದನಿಗೆ ಆದ ವಾಗ್ದತ್ತವೂ, ಜಯವುಳ್ಳ ಅವನ ಅರಸುತನವೂ ಅವನ ಪಾಪವೂ ಮಾನಸಾಂತರವೂ

೧) ೨ ಸಮು. ೭ ಸಂ. (೧ನೆ ದಿನಚ. ೧೮ ಸಂ.) ದಾವಿದನು ಸಮಾಧಾನವಾಗಿ ತನ್ನ ಕೋಟೆಯಲ್ಲಿದ್ದಾಗ ಕರ್ತನಿಗೆ ಒಂದು ಮನೆಯನ್ನು ಕಟ್ಟಲಿಕ್ಕೆ ನಿಶ್ಚೈಸಿದನು. ಯಾಕಂದರೆ ತಾನೇ ದೇವದಾರುಗಳ ರಾಜಗೃಹದಲ್ಲಿ ಇರುತ್ತಿರಲಾಗಿ ಸಾಕ್ಷಿಪೆಟ್ಟಿಗೆಯು ಒಂದು ಗುಡಾರದಲ್ಲಿ ನಿವಾಸ ಮಾಡುವದು ಅವನ ಹೃದಯಕ್ಕೆ ಭಾರವಾಗಿತ್ತು. ಪ್ರವಾದಿಯಾದ ನಾಥಾನನು ಮೊದಲು ಈ ಆಲೋಚನೆಗೆ ಮೆಚ್ಚುತ್ತಾನೆ. ಆದರೆ ದೇವರಿಂದ ಬೋಧಿಸಲ್ಪಟ್ಟವನಾಗಿ ಮರುದಿವಸ ಅರಸನಿಗೆ ನೀನಲ್ಲ ನಿನ್ನ ತರುವಾಯ ಬರುವ ನಿನ್ನ ಬೀಜವು ಕರ್ತನಿಗೆ ಮನೆಯನ್ನು ಕಟ್ಟತಕ್ಕದ್ದು, ಯಾಕಂದರೆ ನೀನು ರಕ್ತ ಚೆಲ್ಲಿದಂಥಾ ಯುದ್ಧಸ್ಥನಾಗಿರುತ್ತಿ ಮತ್ತು ಸುತ್ತಲಿರುವಂಥಾ ಅನೇಕ ದೇವಾಧಿಪತ್ಯದ ಶತ್ರುಗಳನ್ನು ಜೈಸ ಬೇಕು ಎಂದು ಸಾರಿದನು (ಸಮನಾೇಡು ೧ ದಿನಚ. ೨೯, ೩.—೧ ಅರ. ೫, ೩). ಅದಕ್ಕೆ ಬದಲಾಗಿ ಕರ್ತನು ದಾವಿದನಿಗೆ ಮನೆಯನ್ನು ಕಟ್ಟುವೆನೆಂದೂ ಅವನ ಬೀಜವು ನಿತ್ಯವಾಗಿ ಆಳುವದೆಂದೂ ಅವನ ಸಿಂಹಾಸನವೂ ರಾಜ್ಯವೂ ನಿತ್ಯವಾಗಿ ಬಾಳುವದೆಂದೂ ಸಾರಿದನು.

ಪರಿಶಿಷ್ಟ. ಈ ಪ್ರವಾದನೆಯು ಮೊದಲಾಗಿ ಸೊಲೊಮೋನನ (ಹಾಗಂದರೆ ಸಮಾಧಾನ ರಾಜನ) ವಿಷಯವಾಗಿ ಆಗಿತ್ತು. ಆದರೆ ಅದರ ಸಂಪೂರ್ತಿಯು ಬರಲಿಕ್ಕಿದ್ದ ಸಮಾಧಾನ ರಾಜನಲ್ಲಿ ಆಯಿತು. ಈತನು ದಾವಿದನ ಮಗನೂ ದಾವಿದನ ಕರ್ತನೂ (ಮತ್ತಾ. ೨೨, ೪೨.) ಸೊಲೊಮೋನನ ಅದಿಗುತ್ತರ್ ಆಗಿದ್ದು ದೇವರ ನಿಜವಾದ ಆಲಯವನ್ನು ಕಟ್ಟಿದನು. (ಯೋಹಾ. ೨, ೧೯.—೪, ೨೩). ಈತನ ಸಿಂಹಾಸನವು ತಂದೆಯ ಬಲಕಡೆಯಲ್ಲಿ ನಿತ್ಯವಾಗಿ ಬಾಳುತ್ತದೆ. ಯಾಕಂದರೆ ದಾವಿದನ ಸಿಂಹಾಸನವು ಕ್ರಿಸ್ತನ ಲೋಕಾಧಿಕಾರ ನ್ಯಾಯವಿಚಾರಗಳ ಸಿಂಹಾಸನದಲ್ಲಿ ಸ್ಥಿರವಾದ ಸಂಪೂರ್ಣತೆಯನ್ನು ಕಡೆಯಲ್ಲಿ ಹೊಂದಿರುತ್ತದೆ. ಅದೇ ಪ್ರಕಾರ ಸೊಲೊಮೋನನು ಕಟ್ಟಿದ ದೇವಾಲಯದಲ್ಲಿ ಕಾಣುವ ಆಲೋಚನೆಯು ನಿಜವಾದಂಥಾ ಸಂಪೂರ್ಣವಾದಂಥಾ ಪ್ರಕಟಣೆಯನ್ನು ಕ್ರೈಸ್ತ ಸಭೆಯಲ್ಲಿ ಹೊಂದಿರುತ್ತದೆ.—ಈ ಪ್ರವಾದನೆಯಿಂದ ಮೆಸ್ಸೀಯನ ವಿಷಯವಾಗಿ ದೇವರ ಜನಾಂಗಕ್ಕೆ ಹೆಚ್ಚು ಪ್ರಕಟವಾಯಿತು. ಯೆಹೂದನ ಗೋತ್ರದಿಂದ ದಾವಿದನ ಕುಲವು ವಾಗ್ದತ್ತವನ್ನು ಪಡ ಕೊಂಡಂಥಾದ್ದಾಗಿ ಪ್ರತ್ಯೇಕಿಸಲ್ಪಡುತ್ತದೆ. ಮೋಕ್ಷೆಯು ತಾನೇ ಮೆಸ್ಸೀಯನು ಬರುವಾಗ ಸಂಪೂರ್ಣತೆಯು ಹೊಂದುವದೆಂಬ ಪ್ರವಾದಿತನಕ್ಕೆ (ಜೈಸುವಂಥಾದ್ದಾಗಿಯೂ ಸಮಾಧಾನವನ್ನು ತರುವಂಥಾ

ಪ್ಪಾಗಿಯೂ ಕಾಣುವಂಥಾ) ರಾಜತನವು ಕೂಡುತ್ತದೆ. ಸ್ವಲ್ಪ ಕಾಲದಲ್ಲಿಯೇ ಪ್ರಧಾನಯಾಜಕತನವು ಸಹಾ ಏರುತ್ತಿರಲಾಗಿ ಮೆಸ್ಸೀಯನ ಆಲೋಚನೆಯು ಸಂಪೂರ್ಣವಾಯಿತು.

೨) ೨ ಸಮು. ೮—೧೨ ಸಂ. (೧ ದಿನಚ. ೨೦, ೨೧ನೇ ಸಂ.) ದಾವಿದನು ಫಿಲಿಷ್ಟ್ಯರ ಮೇಲೆಯೂ ಮೋವಾಬ್ಯರ ಮೇಲೆಯೂ ಅಮ್ಮೋನ್ಯರ ಮೇಲೆಯೂ ದಮಸ್ಕ ಚೋಬ ಎಂಬವುಗಳ ಸುರ್ಯರ ಮೇಲೆಯೂ ಎದೋಮ್ಯ ಮೊದಲಾದವರ ಮೇಲೆಯೂ ಹೊಂದಿದ ಜಯಗಳಿಂದ ದೇವಾಧಿಕಾರದ ಸಂಸ್ಥಾನವು ಅತ್ಯಂತವಾದ ವಿಸ್ತಾರವನ್ನು ಹೊಂದುತ್ತದೆ, ಐಫ್ರಾತದಿಂದ ಮಧ್ಯಸಮುದ್ರದ ವರೆಗೂ ಲೆಬನೋನದಿಂದ ಅರಾಬ್ಯಸಮುದ್ರದ ವರೆಗೂ (೧ ಮೋಶೆ. ೧೫, ೧೮.) ದಾವಿದನು ಯೋನಥಾನನ ಕುಂಟಮಗನಾದ ಮೆಫಿಬೋಷೇತನ ಮೇಲೆ ಕರುಣೆಯನ್ನು ತೋರಿಸುತ್ತಾನೆ. ದುಃಖವನ್ನು ತೋರಿಸಲಿಕ್ಕಾಗಿ ಕಳುಹಿಸಲ್ಪಟ್ಟ ರಾಯಬಾರಿಯ ಮೇಲೆ ಮಾಡಿದ ಅನ್ಯಾಯಕ್ಕಾಗಿ ಅಮ್ಮೋನ್ಯರ ಅರಸನಾದ ಹನೋನನನ್ನೂ ಅವನ ಸಂಗಡ ಒಡಂಬಡಿಕೆ ಮಾಡಿ ಕೊಂಡಂಥಾ ಮಹಾ ಬಲವುಳ್ಳಂಥಾ ಸುರ್ಯದ ಹದದೇಸರನನ್ನು ಶಿಕ್ಷಿಸುತ್ತಾನೆ. ಯೋವಾಬನು ಅಮ್ಮೋನ್ಯರ ಕಡೇ ಪಟ್ಣವಾದ ರಬ್ಬಥ್ ಅಮ್ಮೋನಕ್ಕೆ ಸುತ್ತ ಮುತ್ತಿಗೆ ಹಾಕಿದಾಗ ದಾವಿದನು ತನ್ನ ದುರ್ಗದಲ್ಲಿ ಕೆಲಸವಿಲ್ಲದವನಾಗಿದ್ದು ಬತ್ಸೇಬಳ ಸಂಗಡ ವ್ಯಭಿಚಾರದಲ್ಲಿ ಬಿದ್ದು ಅವಳ ಗಂಡನಾದ ಉರೀಯನ ಕೊಲೆಗಾರನಾಗುತ್ತಾನೆ. ಜೈಸಲ್ಪಟ್ಟ ಅಮ್ಮೋನ್ಯರಿಗೆ ಕ್ರೂರವಾದಂಥಾದ್ದಾಗಿದ್ದರೂ ಬದಲು ಕೊಡುವಂಥಾದ್ದಾದ ಶಿಕ್ಷೆಯನ್ನು ಕೊಡುತ್ತಾನೆ (ಆಮೋ. ೧, ೩. ೧೩). ನಾಥಾನನು ದಾವಿದನಿಗೆ ಬಡವನ ಕುರಿಯ ಸಾಮ್ಯವನ್ನು ಹೇಳಿ ದಾವಿದನು ತಾನೇ ತನ್ನ ಮೇಲೆಯೇ ಮರಣದ ತೀರ್ಪು ಉಚ್ಚರಿಸುವ ಹಾಗೆ ಮಾಡುತ್ತಾನೆ. ತರುವಾಯ ಈ ಪಾಪಕ್ಕಾಗಿ ಕೊಲೆಯೂ ರಕ್ತಾಪರಾಧವೂ ಅವನ ಮನೆಯ ಮೇಲೆ ಬರುವದೆಂಬ ದಿವ್ಯ ಶಾಪವನ್ನು ಸಾರುತ್ತಾನೆ. ಆದರೆ ನೀನೇ ಆ ಮನುಷ್ಯನು ಎಂಬ ನಾಥಾನನ ಮಾತು ಅವನನ್ನು ಹಿಡಿಯಿತು. ದಾವಿದನು ಪಶ್ಚಾತ್ತಾಪ ಪಟ್ಟು ತೀವ್ರವಾದಂಥಾ ನಿಷ್ಕಪಟವಾದ ಮಾನಸಾಂತರವನ್ನು ಮಾಡುತ್ತಾನೆ. ಈ ಮಾನಸಾಂತರವು ಕೀರ್ತ ೫೧ನೇಯಲ್ಲಿ ಪ್ರಕಟವಾಗಿರುತ್ತದೆ. (ಸಮಸ್ತ ಕಾಲಗಳಿಗೂ ಸಮಸ್ತ ಸ್ಥಿತಿಗಳಿಗೂ ಈ ಕೀರ್ತನೆಯು ಮಾನಸಾಂತರದ ಸೌಜ್ಞೆಯಾಗಿರುತ್ತದೆ.)

## § 68. ಅಬ್ಸಲೋಮನೂ ಸೇಬನೂ ಮಾಡಿದ ಕಾಟಕಾಯಿ

೧) ೨ ಸಮು. ೧೩—೧೯. ಜಯ ಪಡಿಸಿ ಉಚ್ಚರಿಸಿದ ಶಿಕ್ಷೆ ದಾವಿದನ ಮನೆಯ ಮೇಲೆ ಬೇಗ ಬರುತ್ತದೆ. ಅವನು ಕರ್ತನ ಮುಂದೆ ತಿರಿಗಿ ಕೃಪೆಯನ್ನು ಹೊಂದಿದ್ದಾನೆ. ಅವನ ಪಾಪವು ಅವನಿಗೆ ಮನ್ನಿಸಲ್ಪಟ್ಟದೆ ಆದರೂ ಪಾಪದ ಶಾಪದಿಂದ ಉಂಟಾಗುವ ಲೌಕಿಕ ಸಂಕಷ್ಟಗಳು ಬಾರದೆ ಇರಲಾರವು. ಅವನ ಮಗನಾದ ಅಮ್ನೋನನು ತನ್ನ ಅರ್ಧ ಸಹೋದರಿಯಾದ ಥಾಮಾರಳನ್ನು ಕೆಡಿಸಿ ಉಪದ್ರಪಡಿಸುತ್ತಾನೆ. ಇವಳ ಸಹೋದರನಾದ ಅಬ್ಸಲೋಮನು ಇದಕ್ಕಾಗಿ ಅವನನ್ನು ಕೊಂದು ತನ್ನ ಅಜ್ಜನಾಗಿರುವ ಗೆಸುರದ ಅರಸನ ಬಳಿಗೆ ಓಡಿ ಹೋಗುತ್ತಾನೆ. ಯೋವಾಬನು ಮೂರು ವರ್ಷಗಳ ತರುವಾಯ ಅವನನ್ನು ತಿರಿಗಿ ಕರಿಯುವ ಹಾಗೆ ಮಾಡುತ್ತಾನೆ. ಆದರೂ ದಾವಿದನು ಇನ್ನೂ ಎರಡು ವರ್ಷವಾಗುವ ವರೆಗೂ ಆತನನ್ನು ತನ್ನ ಕಣ್ಣಿನ ಮುಂದೆ ಬರಬಿಡುವದಿಲ್ಲ. ಬಹು ನೀಚವಾದ ಮುಖಸ್ತೋತ್ರದಿಂದ ಅಬ್ಸಲೋಮನು ಜನರ ಹೃದಯವನ್ನು ಕದ್ದು ಕೊಂಡು ಹೆಬ್ರೋನದಲ್ಲಿ ತಾನು ಅರಸನೆಂದು ಸಾರಿಸುತ್ತಾನೆ. ದಾವಿದನು ಕರ್ತನ ಶಿಕ್ಷೆಯ ಕೆಳಗೆ ದೈನ್ಯಭಾವದಿಂದ ತನ್ನನ್ನು ಬಾಗ್ಗಿಸಿ ಕೊಂಡು ಯೆರೂಸಲೇಮದಿಂದ ಓಡಿ ಹೋಗುತ್ತಾನೆ. ಅವನ ಸ್ನೇಹಿತನಾದ ಹೂಷಾಯಿಯು ಅಬ್ಸಲೋಮನ ಆಲೋಚನಾಕರ್ತನಾಗಿರುವ ಅಹಿತೋಫೆಲನು ಮಾಡಿದ ದುರಾಲೋಚನೆಗಳನ್ನು ನಿರರ್ಥಕ ಮಾಡಲು ಅಹಿತೋಫೆಲನು ಮನೋವ್ಯಥೆಯಿಂದ ತನಗೆ ತಾನೇ ಉರ್ಲು ಹಾಕಿ ಕೊಳ್ಳುತ್ತಾನೆ. ಸೌಲನ ಸಂಬಂಧಿಕನಾದ ಸಿಮೆಯ್ಯು ದಾವಿದನಿಗೆ ಬೈದು ಕಲ್ಲು ಹೊಡಿಯುತ್ತಾನೆ. ದಾವಿದನು "ಅವನು ಬೈಯ್ಯಲಿ ಕರ್ತನು ಅವನಿಗೆ ಆಜ್ಞಾಪಿಸಿದ್ದಾನೆ" ಎಂದು ಹೇಳುತ್ತಾನೆ. ದಾವಿದನು ಅಷ್ಟರೊಳಗೆ ಸಾಕಾದ ಸಮಯ ಉಂಟಾದವನಾಗಿ ತನ್ನ ಸೈನ್ಯದಲ್ಲಿ ಕ್ರಮ ಮಾಡಿ ತನ್ನ ಸೈನ್ಯಾಧಿಪತಿಗಳಾದ ಯೋವಾಬನಿಗೂ ಅವನ ಸಹೋದರನಾದ ಅಬಿಷಾಯಿಗೂ ಅರಸನನ್ನು ಕಾಯುವ ಕಾವಲಿಗಾರರ ನಾಯಕನಾದ ಇತ್ತಾಯಿಗೂ ಹಂಚಿ ಕೊಟ್ಟನು. ಯೆಫ್ರಾಯಿಮ್ ಅಡವಿಯಲ್ಲಿ ರಣವಾಯಿತು. ದಾವಿದನು ಯೌವನಸ್ಥನಾದ ಅಬ್ಸಲೋಮನ ಸಂಗಡ ಸಮಾಧಾನದಿಂದ ನಡಕೊಳ್ಳಿರಿ ಎಂದು ಅಪ್ಪಣೆ ಕೊಟ್ಟಿದ್ದರೂ ಅಬ್ಸಲೋಮನು ಓಡಿ ಹೋಗುವಾಗ್ಯೆ ಒಂದು ಮರಕ್ಕೆ ಶಿಕ್ಕಿ ಕೊಂಡು ಜೋಲಾಡುತ್ತಿರಲಾಗಿ ಯೋವಾಬನು ಪೂರ್ವದ ಸಂತಾಪದಿಂದ ಅವನನ್ನು ಕೊಂದು ಬಿಡುತ್ತಾನೆ (೧೮, ೩೦). ಆದರೆ ದಾವಿದನು ನನ್ನ ಮಗನಾದ ಅಬ್ಸಲೋಮನೇ ನಿನಗಾಗಿ ನಾನು ಸಾಯುವದು ದೇವರ ಚಿತ್ತವಾಗಿರುತಿತ್ತಾದರೆ

ಎಂದು ಬಹಳವಾಗಿ ಅಳುತ್ತಾನೆ. (ದಾವಿದನ ಸಹೋದರಳಿಯನಾದ ೧ ದಿನಚ. ೨, ೧೭.) ಅಬ್ಸಲೋಮನ ನಾಯಕನಾಗಿದ್ದ ಅಮಾಸನು ದಾವಿದನ ಸೇವೆಯಲ್ಲಿ ಸೇರುತ್ತಾನೆ. ಶಿಮೆಯಿಯು ಕೃಪೆಯನ್ನು ಬೇಡಿ ಕಂಡು ಹೊಂದುತ್ತಾನೆ. ಯೆಹೂದ ಗೋತ್ರದವರು ಅರಸನನ್ನು ಬಹಳ ಉತ್ಸವದಿಂದ ಯೆರೂಸಲೇಮಕ್ಕೆ ತಿರಿಗಿ ತರುತ್ತಾರೆ. ಇದಕ್ಕಾಗಿ ಮಿಕ್ಕಾದ ಗೋತ್ರಗಳ ಹೊಟ್ಟೆಕಿಚ್ಚು ಉದ್ರೇಕವಾಗುತ್ತದೆ.

ಪರಿಶಿಷ್ಟ. ದಾವಿದನು ತನ್ನ ಕೆಟ್ಟ ಮಗನ ವಿಷಯದಲ್ಲಿ ಆಶ್ಚರ್ಯಕರವಾಗಿ ನಡಕೊಂಡದ್ದು ಧರ್ಮಗುಣದಲ್ಲಿ ಬಲಹೀನನಾಗಿದ್ದದರಿಂದ ಉಂಟಾದದ್ದಲ್ಲ—ಹಾಗಿದ್ದದ್ದಾದರೆ ಐದು ವರ್ಷ ಪರ್ಯಂತರ ತನ್ನ ಕಂಣಿನ ಮುಂದೆ ಬರಗೊಡಿಸಿದಂಥಾ ಅಸಾಧಾರಣವಾದ ಕಠಿಣತ್ವವು ಹ್ಯಾಗೆ ಉಂಟಾಯಿತು? ಅಬ್ಸಲೋಮನ ಪಾಪವೂ ಭಂಡುತನವೂ ಎರಡು ವಿಧದ್ದಾಗಿತ್ತು. ಒಂದು ವಿಧವಾಗಿ ದಾವಿದನ ಪಾಪದಿಂದ ದಾವಿದನ ಮನೆಯ ಮೇಲೆ ಬಂದ ಶಾಪವು. (೨ಸಮು. ೧೨, ೧೦.) ಮಕ್ಕಳ ಮೇಲೆ ಪ್ರಕಟವಾಗುವಂಥಾ ಪಿತೃಗಳ ದುಷ್ಕರ್ಮವೂ ಕಾಣ ಬಂತು (೨ಮೋಶೆ. ೨೦, ೫). ಮತ್ತೊಂದು ವಿಧವಾಗಿ ಸಂಸಾರದ ಮೇಲೆ ಬಂದ ಶಾಪವನ್ನು ನಡಿಸಲಿಕ್ಕೆ ಅಬ್ಸಲೋಮನೇ ಪ್ರಯೋಗಿಸಿದಂಥಾ ದುಷ್ಟತನವೂ ಕೆಟ್ಟತನವೂ ಪ್ರತ್ಯಕ್ಷವಾಯಿತು. ಈ ಕಡೆಯಿಂದ ಅಲ್ಲ ಆ ಕಡೆಯಿಂದಲೇ ದಾವಿದನು ಅಬ್ಸಲೋಮನ ಕ್ರಿಯೆಯನ್ನು ದೃಷ್ಟಿಸಿದನು. (ಯಾಕಂದರೆ ತನ್ನ ಸ್ವಂತ ಪಾಪವು ಅವನ ಕಂಣಿನಲ್ಲಿ ಬಹಳ ದೊಡ್ಡದಾಗಿದ್ದದರಿಂದ ಅಬ್ಸಲೋಮನ ದುಷ್ಟತನವನ್ನೂ ಪಾಪವನ್ನೂ ಅಷ್ಟು ಗಣ್ಯ ಮಾಡಲಿಲ್ಲ.) ಆದದರಿಂದ ಈ ಕೆಟ್ಟ ಮಗನಲ್ಲಿ ವಿಶೇಷವಾದಂಥಾ ಮಿತಿಯಿಲ್ಲದ ಕರುಣೆಯನ್ನು ದಾವಿದನು ತೋರಿಸಿದ್ದು—ಅದೇ ಪ್ರಕಾರ ದಾವಿದನು ಸ್ವಾಮಿದ್ರೋಹಿಯಾದ ಸಿಮೇಯಿಯ ವಿಷಯವಾಗಿಯೂ ನಡಕೊಂಡದ್ದು. ಇಲ್ಲಿಯೂ ದಾವಿದನು ತನ್ನ ಸ್ವಂತ ಪಾಪವನ್ನು ತಿಳುಕೊಂಡು ಮತ್ತೊಬ್ಬನ ಪಾಪವನ್ನು ಮರತು ಬಿಡುತ್ತಾನೆ.

೨) ೨ ಸಮು. ೨೦ ಸಂ. ಮಿಕ್ಕಾದ ಗೋತ್ರಗಳ ಹೊಟ್ಟೆಕಿಚ್ಚನ್ನು ಬೆನ್ಯಮೀನನಾದ ಸೇಬನು ಹೊಸ ಕಾಟಕಾಯಿಗೆ ಪ್ರಯೋಗಿಸುತ್ತಾನೆ. ಅಮಾಸನು ಯೆಹೂದದಲ್ಲಿ ಸೈನ್ಯವನ್ನು ಕೂಡಿಸುತ್ತಾ ಇರಲಾಗಿ, ಯೋವಾಬನು ದಾವಿದನ ಶರೀರರಕ್ಷಕರನ್ನು (ಕೆರೇತಿ, ಪೆಲೇತಿ) ಎಂಬವರನ್ನು ಗಲಿಲಾಯದ ಆಬೆಲ್ ಎಂಬ ಪಟ್ಟಕ್ಕೆ ಮುತ್ತಿಗೆ ಹಾಕುತ್ತಾನೆ. ನಿವಾಸಿಗಳು ಒಬ್ಬ ಸ್ತ್ರೀಯ ಆಲೋಚನೆಯ ಪ್ರಕಾರ ಸೇಬನ ತಲೆಯನ್ನು ಗೋಡೆಯ ಮೇಲಿಂದ ಬಿಸಾಡುತ್ತಾರೆ. ಯೋವಾಬನು ತಿರಿಗಿ ಕಂಡು

ಹೋಗುವಾಗ್ಯೆ ದಾರಿಯಲ್ಲಿ ಅಮಾಸನ್ನ ಕಂಡು ತನ್ನ ಹಾಗೆ ಮತ್ತೊಬ್ಬ ಪ್ರಶಸ್ತನಿರ ಬಾರದೆಂದು ಅವನನ್ನು ಮುದ್ದಿಟ್ಟು ಕೊಂದು ಹಾಕಿದನು.

ಪರಿಶಿಷ್ಟ. ದಾವಿದನು ತನ್ನ ಪಾಪದಿಂದ ತನಗೆ ಮಾಡಿಟ್ಟ ಸಂಕಷ್ಟಗಳಲ್ಲಿ ಇದು ಒಂದು ಸಹಾ ಸೇರಿತು. ಅದೇನಂದರೆ ಬಲಾತ್ಕಾರಿಯಾದಂಥಾ ಬಹಳ ಸಾಮರ್ಥ್ಯ ಕೀರ್ತಿಯುಳ್ಳಂಥಾ (೨ಸಮು. ೩, ೩೯) ಯೋವಾಬನನ್ನು ಸಹಿಸಿ ಅವನು ಮಾಡಿದ ಅನೇಕ ದುಷ್ಕರ್ಮಗಳಿಗಾಗಿ ಶಿಕ್ಷೆ ಕೊಡದೆ ಇರ ಬೇಕಾಯಿತು. ಯಾಕಂದರೆ ಉರೀಯನನ್ನು ಕೊಲ್ಲ ಬೇಕೆಂದು ಯೋವಾಬನಿಗೆ ಅಪ್ಪಣೆ ಕೊಟ್ಟದರಿಂದ ಯೋವಾಬನ ದುಷ್ಟತನದಲ್ಲಿ ತಾನೇ ಸೇರಿದವನಾಗಿ ಯೋವಾಬನ ದುಷ್ಕರ್ಮಗಳಲ್ಲಿ ತಾನೇ ಪಾಲುಗಾರನಾದನು.



## § 69. ದಾವಿದನು ಜನರನ್ನು ಎಣಿಸಿದ್ದು

೨ಸಮು. ೨೦—೨೪ ಸಂ. (೧ದಿನಚ. ೨೧—೨೯ ಸಂ.) ಈ ಪ್ರಕಾರವಾಗಿ ದೇಶದಲ್ಲಿಯೂ ದೇಶದ ಹೊರಗೂ ಇರುವಂಥಾ ದೇವಾಧಿಪತ್ಯದ ಶತ್ರುಗಳನ್ನು ಜೈಸಲಾಗಿ ಸಂಸ್ಥಾನವು ರಾಜ್ಯಾರ್ಥವಾದ ಸಾಮರ್ಥ್ಯದಲ್ಲಿಯೂ ದೊಡ್ಡಸ್ಥಿಕೆಯೂ ನಿಶ್ಚೈಸಲ್ಪಟ್ಟ ಮಿತಿಯನ್ನು ಹೊಂದಿದ ತರುವಾಯ ದಾವಿದನು ಸಮಾಧಾನದಲ್ಲಿಯೂ ವಿಶ್ರಾಂತಿಯಲ್ಲಿಯೂ ತನ್ನ ರಾಜ್ಯವನ್ನು ಆಳುವದನ್ನು ಬಿಟ್ಟು ದೇವರ ಚಿತ್ತಕ್ಕೆ ಪ್ರತಿಕೂಲವಾಗಿ ಯುದ್ಧಸ್ಥಜನರ ಗಣನೆಯನ್ನು ಮಾಡ ಬೇಕೆಂದು ಅಪ್ಪಣೆ ಕೊಡುತ್ತಾನೆ. ಪ್ರವಾದಿಯಾದ ಗಾದನು ಏಳು ವರ್ಷ ಬರಗಾಲ! ಮೂರು ತಿಂಗಳು ಶತ್ರುಗಳ ಮುಂದೆ ಓಡಿ ಹೋಗುವದು, ಅಥವಾ ಮೂರು ದಿವಸ ಮಹಾವ್ಯಾಧಿ. ಈ ಮೂರರಲ್ಲಿ ಯಾವ ಶಿಕ್ಷೆ ಬೇಕೆಂದು ದಾವಿದನ ಹತ್ತರ ಕೇಳುತ್ತಾನೆ. ದಾವಿದನು ಮನುಷ್ಯರ ಕೈಗಳಲ್ಲಿ ಬೀಳುವದಕ್ಕಿಂತ ಕರ್ತನ ಕೈಯಲ್ಲಿಯೇ ಬೀಳಲಿಚ್ಛೈಸುತ್ತಾನೆ. ಹೀಗಾಗಿ ಆ ವ್ಯಾಧಿಯು ಗಣನೆಯು ಪೂರ್ಣವಾಗುವ ಮೊದಲೇ ೭೦ ಸಾವಿರ ಮಂದಿಯನ್ನು ಕೊಂದು ಬಿಡುತ್ತದೆ. (ಇದು ಜನಾಂಗಕ್ಕೆ ಅದು ಬಹಳ ಸರ್ತಿ ಕರ್ತನ ಅಭಿಷಿಕ್ತನಿಗೆ ವಿರೋಧವಾಗಿ ಮಾಡಿದ ಕೋಟಕಾಯಿಗೆ ಶಿಕ್ಷೆಯಾಗಿತ್ತು. ದಾವಿದನಿಗೆ ಅವನ ಗರ್ವದ ಶಿಕ್ಷೆಯಾಗಿತ್ತು.) ಕರ್ತನು ನಾಶವಾಗುವದನ್ನು ನೋಡಿ ಕೇಡಿಗಾಗಿ ಮನಸ್ತಾಪ ಪಟ್ಟು ನಾಶನಕ್ಕೆ ಅಡ್ಡಿ ಮಾಡಿದನು. ದಾವಿದನು ತನ್ನ ಕಣ್ಣುಗಳನ್ನೆತ್ತಿ ಕರ್ತನ ದೂತನು ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ನಿಂತಿರುವದನ್ನೂ ಅವನ ಕೈಯಲ್ಲಿ ಯೆರೂಸಲೇಮದ ಮೇಲೆ ಚಾಚಿದಂಥಾ ಬಿಚ್ಚು

ಕತ್ತಿಯನ್ನೂ ಕಂಡನು. ಆಗೈ ದಾವಿದನು ಗೋಣಿಯಲ್ಲಿಯೂ ಬೂದಿಯಲ್ಲಿಯೂ ದುಃಖ ಮಾಡಿ ಹೇಳಿದ್ದು ಪಾಪ ಮಾಡಿದವನು ನಾನೇ ಆದರೆ ಈ ಕುರಿಗಳು, ಅವುಗಳು ಏನು ಮಾಡಿದ್ದಾವೆ ನನ್ನ ದೇವರಾದ ಕರ್ತನೇ ಕಷ್ಟ ಪಡಿಸಲಿಕ್ಕಾಗಿ ನಿನ್ನ ಕೈ ನಿನ್ನ ಜನಾಂಗದ ಮೇಲೆ ಅಲ್ಲ, ನನ್ನ ಮೇಲೆಯೂ ನನ್ನ ತಂದೆಯ ಮನೆಯ ಮೇಲೆಯೂ ಇರಲಿ. "ಪ್ರವಾದಿಯಾದ ಗಾದನ ಅಪ್ಪಣೆಯ ಪ್ರಕಾರ ದೂತನು ನಿಂತಿದ್ದ ಸ್ಥಳವಾದ ಮೋರೀಯ ಪರ್ವತದಲ್ಲಿರುವ ಯೆಬೂಸ್ಯನಾದ ಅರವ್ನನ ಕಣದಲ್ಲಿ ಬಲಿಯರ್ಪಿಸುತ್ತಾನೆ. ಅಲ್ಲಿಯೇ ಮುಂದಿನ ದೇವಾಲಯದ ಸ್ಥಳವನ್ನು ದಾವಿದನು ನಿಶ್ಚೈಸುತ್ತಾನೆ. ಇದಕ್ಕಾಗಿ ಬಹಳ ಸನ್ನಾಹವನ್ನು ಕೂಡಿಸಿಟ್ಟಿದ್ದನು.

ಪರಿಶಿಷ್ಟ. ಪೂರ್ವದ ಪ್ರವಾದನೆಗಳ ಪ್ರಕಾರ (೧ ಮೋಶೆ. ೧೫, ೧೮). ಅಬ್ರಹಾಮನ ಬೀಜವು ರಾಜ್ಯವಾಗಿ ವಿಕಸಿತವಾಗುವಾಗ್ಯೆ ಅದರ ಮಹತ್ವದಲ್ಲಿ ನೀಲ್ ಐಫ್ರತ್ ನದಿಗಳ ಮಧ್ಯದಲ್ಲಿರುವ ದೇಶದ ಪ್ರಶಸ್ತ ಭಾಗವನ್ನು ಹೊಂದಿ ಇರ ಬೇಕು. ಹೀಗಾಗಿ ದೇವಾಧಿಕಾರದ ಸಂಸ್ಥಾನವು ಆ ಎರಡು ನದಿಗಳಿಂದ ತಿಳಿಯ ಬರುವಂಥಾ ಪೂರ್ವದಲ್ಲಿಯೂ ಪಶ್ಚಿಮದಲ್ಲಿಯೂ ಇರುವ ಲೋಕರಾಜ್ಯಗಳ ಮಧ್ಯದಲ್ಲಿ ಸ್ವತಂತ್ರವುಳ್ಳದ್ದಾಗಿಯೂ ರಾಜಾರ್ಥವಾಗಿ ಸಮಾನವಾದದ್ದಾಗಿಯೂ ಇರ ಬೇಕು. ಇದು ದಾವಿದನ ಜಯಗಳಿಂದ ಆಯಿತು. ದೇವಾಧಿಕಾರದ ಮುಖ್ಯ ಕೆಲಸವು ಲೋಕಾಧಿಪತ್ಯವಾಗಿರುತ್ತಿದ್ದಾದರೆ ಅದನ್ನು ಪೂರ್ಣ ಮಾಡಲಿಕ್ಕೆ ಇದೇ ತಕ್ಕ ಸಮಯವಾಗಿರುತಿತ್ತು. ದಾವಿದನು ಅಲೆಕ್ಸಂದರನ ಹಾಗೆಯೂ ಯೆರೂಸಲೇಮವು ಲೋಕವನ್ನಾಳುವ ರೋಮದ ಹಾಗೆಯೂ ಆಗ ಬಹುದಾಗಿತ್ತು. ಅದಕ್ಕೆ ಬೇಕಾದ ಆಧಾರವೂ ಉಪಾಯಗಳೂ ಎಲ್ಲಾ ಶಿದ್ಧವಾಗಿತ್ತು. ದೇವಾಧಿಕಾರದ ಸಂಸ್ಥಾನವು ಸಮಸ್ತವನ್ನು ಜೈಸುವಂಥಾ ಸೈನ್ಯದಲ್ಲಿ ಮಾತ್ರ ಮುಖ್ಯ ಬಲವುಳ್ಳ ಸಂಸ್ಥಾನವಾಗುವದು ಮಾತ್ರವೇ ಉಳಿದಿತ್ತು. ಈ ದೇವಾಧಿಕಾರದ ಸಂಸ್ಥಾನದ ಶಿಖರದಲ್ಲಿ ನಿಂತವನ ಮಾನಾಭಿಲಾಷೆಗೆ ಈ ಶೋಧನೆಯು ಸಮೀಪವಾಗಿತ್ತು; ಮತ್ತು ದಾವಿದನು ಅದಕ್ಕೆ ವಶವಾಗುತ್ತಾನೆ. ಜನವನ್ನು ಗಣನೆ ಮಾಡ ಬೇಕೆಂಬದಕ್ಕೆ ನಿಸ್ಸಂಶಯವಾಗಿ ಇದೇ ಕಾರಣವಾಗಿತ್ತು; ಮತ್ತು ದೇವರು ಕೊಟ್ಟ ಶಿಕ್ಷೆಯು ಗಣನೆಗೆ ಕಾರಣವಾದ ಅದೈವಿಕವಾದ ಡೊಂಕುತನಕ್ಕೆ ಸಮವಾಗಿತ್ತು. ಗಣನೆ ಮಾಡಿದಾಗ ಯೆಹೂದದಲ್ಲಿ ೫ಲಕ್ಷ, ಇಸ್ರಯೇಲದಲ್ಲಿ ೮ ಲಕ್ಷ ಯುದ್ಧಸ್ಥರಿದ್ದರು. ಲೇವ್ಯರನ್ನು ಕೂಡಿಸಲಿಲ್ಲ ಬೆನ್ಯಾಮೀನರನ್ನು ಎಣಿಕೆ ಮಾಡುವಷ್ಟರೊಳಗೆ ಮಹಾ ವ್ಯಾಧಿಯು ಆರಂಭವಾಯಿತು.



## § 70. ದಾವಿದನು ದೇವರಾಜ್ಯಕ್ಕೆ ಏನೆಂಬದು. ಅವನ ಕೀರ್ತನೆಗಳು

ಹಳೇ ಒಡಂಬಡಿಕೆಯ ಕಥೆ ಎಲ್ಲಾದರ ಮುಖ್ಯ ಭಾವವು ಯಾವವಂದರೆ ಕ್ರಿಸ್ತನ ಮುಂಗುರ್ತುಗಳನ್ನು ತೋರಿಸುವದೂ ಕ್ರಿಸ್ತನನ್ನು ಪ್ರವಾದಿಸುವದೂ ಈ ಪ್ರವಾದನೆಯನ್ನು ಅಭಿವೃದ್ಧಿ ಮಾಡುವದೂ ಇದೆಲ್ಲಾ ದಾವಿದನ ಜೀವನದಲ್ಲಿ ಒಟ್ಟಿಗೆ ಕೂಡಿರುತ್ತದೆ. ಅವನು ಕ್ರಿಸ್ತನ ಮೂಲತಂದೆಯು, ವಾಗ್ದತ್ತದ ಆಶೀರ್ವಾದವು ಅವನ ಸಂತತಿಯಲ್ಲಿರುವದೆಂದು ನಿಶ್ಚಯವಾಗಿ ಹೇಳಲ್ಪಡುತ್ತದೆ. ಮತ್ತು ಆ ಸಮಯ ಮೊದಲುಗೊಂಡು ಪ್ರವಾದಿಗಳೆಲ್ಲರೂ ಕ್ರಿಸ್ತನನ್ನು ಇಶಾಯನ ಚಿಗುರಾಗಿಯೂ ದಾವಿದನ ಮಗನಾಗಿಯೂ ವರ್ಣಿಸುತ್ತಾರೆ. ಇದರ ಹೊರ್ತು ಅವನು ಕ್ರಿಸ್ತನ ಮುಂಗುರ್ತಾಗಿದ್ದಾನೆ. ಸಂಕಷ್ಟದಿಂದಲೂ ತಗ್ಗಿಸುವಿಕೆಯಿಂದಲೂ ಈತನು ಮಹಿಮೆಗೆ ಶೇರುತ್ತಾನೆ. ಇವನು ದೇವರ ಜನಾಂಗದ ಅರಸನೂ ಅನ್ಯಜನಾಂಗಗಳನ್ನು ಜೈಸುವವನೂ ಆಗುತ್ತಾನೆ ಇತ್ಯಾದಿ. ಅವನ ಜೀವನದಲ್ಲಿ ಇದೆಲ್ಲಾ ಸಮೃದ್ಧಿಯಾಗಿ ಮುಂಗುರ್ತುಗಳಾಗಿರುವದರಿಂದ ಅವನು ದುಃಖ ಪಟ್ಟು ಕೂಗಿದರೂ ಕೃತಜ್ಞನಾಗಿ ಸ್ತುತಿಸಿದರೂ ದೇವರಿಂದ ಪ್ರೇರೇಪಿಸಲ್ಪಟ್ಟ ಅವನ ಕೀರ್ತನೆಗಳೆಲ್ಲಾ ಆಶ್ಚರ್ಯವಾದ ಪ್ರವಾದನೆಗಳುಳ್ಳವುಗಳಾಗಿ ಅವನ ಮಗನೂ ಕರ್ತನೂ ಆಗಿರುವ ಆ ಬಿಗುರ್ತಿನ ಅದೇ ತರದ ಸ್ಥಿತಿಗಳಿಗೆ ಸಮಾನವಾಗುತ್ತವೆ. ಹೀಗಾಗಿ ದಾವಿದನು ಕ್ರಿಸ್ತನ ಪ್ರವಾದಿಯಾಗಿ ಹೊಂದಿದ ವಾಗ್ದತ್ತವನ್ನು ವಿಶ್ವಾಸವುಳ್ಳ ಮನಸ್ಸಿನಲ್ಲಿಟ್ಟುಕೊಂಡು ದೇವರ ಆತ್ಮದ ಪ್ರಕಾಶದಿಂದ ಅಭಿವೃದ್ಧಿ ಮಾಡಿದನು.

ಪರಿಶಿಷ್ಟ. ಆದದರಿಂದ ಒಂದು ವಿಧವಾಗಿ ದಾವಿದನ ಕೀರ್ತನೆಗಳೆಲ್ಲಾ ಮೆಸ್ಸೀಯನ ವಿಷಯವಾಗಿ ಬರೆದಿರುತ್ತವೆ ಎಂದು ಹೇಳ ಬಹುದು. ಖಂಡಿತವಾಗಿಯೂ ತಿಳುವಿಕೆಗೆ ಬಂದದ್ದಾಗಿಯೂ ಮೆಸ್ಸೀಯಭಾವವು ಕೆಳಗೆ ಬರುವ ಕೀರ್ತನೆಗಳಲ್ಲಿ ಕಾಣುತ್ತದೆ. ೨ ನೇ ಕೀರ್ತನೆಯು ರಕ್ಷಣ್ಯವನ್ನೂ ನ್ಯಾಯವಿಚಾರಣೆಯನ್ನೂ ಬಹಳ ಘನದಲ್ಲಿ ತೋರಿಸುತ್ತದೆ. ನನ್ನ ಮಗನು ನೀನೇ ನಾನು ಇಂದು ನಿನ್ನನ್ನು ಪಡೆದಿದ್ದೇನೆ. (೭ ಶ್ಲೋ.)

ಮಗನು ಕೋಪ ಮಾಡಲು ನೀವು ಮಾರ್ಗ ತಪ್ಪಿ ಅಳಿದು ಹೋಗದ ಹಾಗೆ ಅವನಿಗೆ ಮುದ್ದು ಕೊಡಿರಿ (೧೨ನೇ ಶ್ಲೋ.) ೨೨ ನೇ ಕೀರ್ತನೆಯು ಹಾಡುವಂಥಾ ನೀತಿವಂತನು ಸಂಕಷ್ಟಗಳ ಪೂರ್ಣತೆಯಲ್ಲಿ ಏನು ಅನುಭವಿಸಿದನೆಂಬದನ್ನು ವರ್ಣಿಸುತ್ತದೆ. ಅದು ಹೀಗೆ ಆರಂಭವಾಗುತ್ತದೆ. ನನ್ನ ದೇವರೇ ನನ್ನ ದೇವರೇ ಯಾತಕ್ಕೆ

ನನ್ನನ್ನು ಕೈ ಬಿಟ್ಟು ನನ್ನ ರಕ್ಷಣೆಗೂ ನನ್ನ ನರಳುವ ಶಬ್ದಗಳಿಗೂ ದೂರವಾಗಿದ್ದೀ "ಶ್ಲೋ. ೧೯ನೆಯಲ್ಲಿ ಅವನು ಹೇಳುವದು" ನನ್ನ ಕೈಕಾಲುಗಳನ್ನು ತಿವಿದಿದ್ದಾರೆ. ಶ್ಲೋ. ೧೮ನೆಯಲ್ಲಿ ನನ್ನ ವಸ್ತ್ರಗಳನ್ನು ಹಂಚಿ ಕೊಳ್ಳುತ್ತಾರೆ, ನನ್ನ ಅಂಗಿಗೋಸ್ಕರ ಚೀಟು ಹಾಕುತ್ತಾರೆ.

೧೧೦ನೆ ಕೀರ್ತನೆಯು: ಮೆಸ್ಸೀಯನ ನಿತ್ಯವಾದ ರಾಜ್ಯವನ್ನೂ ಯಾಜಕತ್ವವನ್ನೂ ವರ್ಣಿಸುತ್ತದೆ.

ಕರ್ತನಿಂದ ನನ್ನ ಕರ್ತನಿಗೆ ಆದ ಉತ್ತರವೇನಂದರೆ: ನಾನು ನಿನ್ನ ಶತ್ರುಗಳನ್ನು ನಿನ್ನ ಪಾದಗಳಿಗೆ ಪೀಠವಾಗಿ ಇಡುವ ಪರ್ಯಂತರ ನನ್ನ ಬಲಪಾರ್ಶ್ವದಲ್ಲಿ ಕೂತುಕೋ (ಶ್ಲೋ. ೧ ಸಮ ನೋಡು. ಮತ್ಥಾ. ೨೨, ೪೨—೪೫.) ನೀನು ಮೆಲ್ಕಿಜೇದೆಕನ ತರದ ಪ್ರಕಾರ ಸದಾಕಾಲಕ್ಕೂ ಯಾಜಕನಾಗಿದ್ಧಿ ಎಂದು ಕರ್ತನು ಆಣೆ ಇಟ್ಟು ಪಶ್ಚಾತ್ತಾಪ ಪಡನು. (ಶ್ಲೋ. ೪. ಸಮ ನೋಡು. ಇಬ್ರಿ. ೬, ೨೦ನೆ ವೊದ.) ಮಾನಸಾಂತರದ ಕೀರ್ತನೆಗಳು ಇವೇ—೬. ೩೨. ೩೮. ೫೧. ೧೦೨. ೧೩೦. ೧೪೩. ೧೫೦—ಕೀರ್ತನೆಗಳಲ್ಲಿ ೭೩ಕ್ಕೆ ದಾವಿದನ ಹೆಸರು ಉಂಟು. ಕೆಲವು ತಿಳಿಯ ಕೂಡದಂಥಾ ಮೇಲ್ಬರಹಗಳು ರಾಗದ ಹೆಸರುಗಳಾಗಿರ ಬೇಕು. (ಹಾಗೆ ೨೨. ೫೬ನೇ ಕೀರ್ತನೆಗಳವು ಬಹಳ ಸರ್ತಿ ಬರುವಂಥಾ ಸೇಲಾ ಎಂಬದು ಗಾಯನದ ಗುರ್ತಾಗಿರ ಬೇಕು. ಒಂದು ವೇಳೆ ಸ್ವಲ್ಪ ನಿಲ್ಲ ಬೇಕು. ಇಲ್ಲವೇ ಬೇರೇನಾದರೂ ಮಧ್ಯದಲ್ಲಿ ಹಾಡುವದು ಇಲ್ಲವೆ ಬಾರಿಸುವದು ಉಂಟು ಎಂಬದಾಗಿ ಕಾಣುತ್ತದೆ.— ಲುಥರನು ಕೀರ್ತನೆಗಳ ವಿಷಯವಾಗಿ ಹೇಳುವದೇನಂದರೆ—ಇಲ್ಲಿ ನೀನು ಸಮಸ್ತ ಪರಿಶುದ್ಧರ ಹೃದಯವನ್ನು ನೋಡ ಬಹುದು. ಇದೇ ಕಾರಣದಿಂದಲೇ ಕೀರ್ತನೆಗಳು ಸಮಸ್ತ ಪರಿಶುದ್ಧರ ಪುಸ್ತಕವಾಗಿರುತ್ತವೆ. ಮತ್ತು ಒಬ್ಬೊಬ್ಬನು ಯಾವ ಸ್ಥಿತಿಯಲ್ಲಿದ್ದರೂ ಇದಕ್ಕಿಂತ ಒಳ್ಳೇದಾಗಿ ಹೇಳಲೂ ಹೊಂದಲೂ ಇಷ್ಟೈಸಲೂ ಕೂಡದಂತೆ ತನಗಾಗಿಯೇ ಎಲ್ಲಾ ಬರೆದಿಟ್ಟ ಹಾಗೆ ಅವನ ಸ್ಥಿತಿಗಳಿಗೆ ಯೋಗ್ಯವಾದಂಥಾ ಕೀರ್ತನೆಗಳನ್ನೂ ವಾಕ್ಯಗಳನ್ನೂ ಹೊಂದುತ್ತಾನೆ.



## § 71. ಸೊಲೊಮೋನನು ಪಟ್ಟ ಹೊಂದಿದ್ದು

೧ನೆ ಅರಸುಗಳ ೧—೪. (೨ನೇ ದಿನಚರ್ಯೆಗಳ ೧ನೇ ಸಂಧಿ.) ಸೊಲೊಮೋನನನ್ನು ಬೋಧಿಸಿ ಬೆಳಸಿದಂಥಾ ನಾಥಾನನಿಗೆ ದಾವಿದನ ಮಗನಾದ ಅದೋನಿಯನು ಯೋವಾಬ್ ಅಬಿಯಾಥಾರ ಇವರ ಸಂಗಡ ಪಟ್ಟದ ಬಾಧ್ಯತೆಯನ್ನು ತ

ನಗೆ ನೋಯಿಸಿಕೊಳ್ಳ ಬೇಕೆಂದು ತಮ್ಮೊಳಗೆ ಆಲೋಚನೆ ಮಾಡಿ ಕೊಳ್ಳುತ್ತಾರೆ ಎಂಬ ಸಂಗತಿಯು ತಿಳಿಯ ಬರುತ್ತದೆ. ದಾವಿದನು ೪೦ ವರ್ಷ ಆಳಿದ ತರುವಾಯ ಬತ್ಸೇಬಳಿಂದ ಹುಟ್ಟಿದ ತನ್ನ ಮಗನಾದ ಸೊಲೊಮೋನನನ್ನು ಯಾಜಕನಾದ ಜದೋಕನಿಂದ ಅಭಿಷೇಕಿಸಿ ಅರಸನೆಂದು ಸಾರಿಸುತ್ತಾನೆ. ಮತ್ತು ಇವನಿಗೆ ತಾನು ಸ್ವತಾ ಕೊಡದಂಥಾ ಶಿಕ್ಷೆಯನ್ನು ಮೂರು ಸಾರಿ ಮೋಸದಿಂದ ಕೊಂದು ಹಾಕಿದಂಥಾ ಕಾಟಕಾಯಿ ಎಬ್ಬಿಸಿದಂಥಾ ಯೋವಾಬನಿಗೂ ಸ್ವಾಮಿದ್ರೋಹಿಯಾದ ಶಿಮೇಯಿಗೂ ಈಗ ಕೊಡ ಬೇಕೆಂದು ಅಪ್ಪಣೆ ಕೊಡುತ್ತಾನೆ. ದಾವಿದನು ಕ್ರಿಸ್ತನ ಮೊದಲು ೧೦೧೫ ನೇ ವರುಷದಲ್ಲಿ ಸತ್ತ ತರುವಾಯ ಅದೋನಿಯನು ತಿರಿಗಿ ಮೋಸ ಮಾಡಲಿಕ್ಕೆ ಆರಂಭಿಸುತ್ತಿರಲಾಗಿ ಮರಣಶಿಕ್ಷೆಯನ್ನು ಹೊಂದುತ್ತಾನೆ. ಯಾಜಕನಾದ ಅಬಿಯಾಥಾರನನ್ನು ದಂಡಿಸುತ್ತಾನೆ. ಆಶ್ರಯ ಹುಡುಕಿದ ಬಲಿಪೀಠದ ಹತ್ತರ ಯೋವಾಬನಿಗೆ ಮರಣಶಿಕ್ಷೆ ಪ್ರಾಪ್ತವಾಗುತ್ತದೆ. ಅದೇ ಪ್ರಕಾರ ಶಿಮೇಯಿ ಪಟ್ಟಣದಲ್ಲಿಯೇ ಇರುತ್ತೇನೆಂದು ಪ್ರಮಾಣ ಮಾಡಿ ಹೇಳಿದ ಮಾತನ್ನು ಓಡಿ ಹೋದ ದಾಸನ ನಿಮಿತ್ತವಾಗಿ ಮೀರಿ ಇರಲಾಗಿ ಅವನನ್ನು ಸಹಾ ಕೊಲ್ಲ ಅಪ್ಪಣೆ ಕೊಡುತ್ತಾನೆ. ನಾಥಾನನು ಯೆದಿದ್ಯಾ (ಹಾಗಂದರೆ ಕರ್ತನಿಗೆ ಪ್ರಿಯನು) ಎಂದು ಹೆಸರಿಟ್ಟ ಸೊಲೊಮೋನನು ಕರ್ತನು ಅವನಿಗೆ ಗಿಬಿಯೋನದಲ್ಲಿ ಸ್ವಪ್ನದಲ್ಲಿ ಪ್ರತ್ಯಕ್ಷವಾದಾಗ ಆತನ ಹತ್ತರ ತನಗೆ ಕೇಳುವ ಹೃದಯವನ್ನು ಕೊಡ ಬೇಕೆಂದು ಬೇಡಿಕೊಂಡಾಗ್ಯೆ ಕರ್ತನು ಸಂಪತ್ತನ್ನೂ ಮಾನವನ್ನೂ ಸಹಾ ಅವನಿಗೆ ವಾಗ್ದತ್ತ ಮಾಡುತ್ತಾನೆ.

ಪರಿಶಿಷ್ಟ. ಯೋವಾಬನೂ ಶಿಮೇಯಿಯೂ ಜೀವ ನಷ್ಟವಾಗುವ ಕೆಲಸ ಮಾಡಿದ್ದರು. ಅರಸನು ಸತ್ಯಧರ್ಮದ ಪ್ರಕಾರ ನೀತಿಯನ್ನು ಸ್ಥಾಪಿಸ ಬೇಕು. ದಾವಿದನು ತನ್ನ ಸ್ವಂತ ತಪ್ಪಿನಿಂದ ಅದನ್ನು ಮಾಡದೆ ಇಸ್ರಯೇಲಿನಲ್ಲಿರುವ ಶಾಪವನ್ನು ತೆಗದು ಹಾಕುವದಕ್ಕೆ ಆಗಲಿಲ್ಲವೆಂಬದೇ ಅವನ ಹೃದಯಕ್ಕೆ ಬಹಳ ಭಾರವಾಗಿತ್ತು. ಆದದರಿಂದ ಪಾಪವುಳ್ಳ ಮುಖದಾಕ್ಷಿಣ್ಯವು ತನ್ನ ಕೈಕಟ್ಟಿದ ಹಾಗೆ ಸೊಲೊಮೋನನ ಕೈಕಟ್ಟುವದಿಲ್ಲವೆಂದು ತಿಳಿದು ಈತನು ಅಣಗಿಸಲ್ಪಟ್ಟ ನೀತಿಯನ್ನು ತಿರಿಗಿ ಸ್ಥಾಪಿಸಿ ನ್ಯಾಯವಾದ ಶಿಕ್ಷೆಯನ್ನು ದ್ರೋಹಿಗಳಿಗೆ ಕೊಡುವನೆಂದು ತನಗೆ ನಿಶ್ಚಯವಾಗುವ ಮಟ್ಟಿಗೂ ಸಮಾಧಾನವಾಗಿ ಸಾಯಲಿಕ್ಕೆ ಆಗಲಿಲ್ಲ.

## § 72. ದೇವಾಲಯ ಕಟ್ಟಿದ್ದು

೧ ನೇ ಅರಸುಗಳ ೫ –೮. (೨ ನೇ ದಿನಚರ್ಯೆಗಳ ೨ – ೬.) ಸೊಲೊಮೋನನು ತಾನು ಆಳಿದ ನಾಲ್ಕನೇ ವರ್ಷದಲ್ಲಿ ಐಗುಪ್ತ ದೇಶದಿಂದ ಹೊರಟು ಬಂದ ೪೮೦ನೇ ವರ್ಷದಲ್ಲಿ ದೇವಾಲಯ ಕಟ್ಟಲಿಕ್ಕೆ ಆರಂಭ ಮಾಡುತ್ತಾನೆ. ಇದಕ್ಕೆ ಏಳು ವರ್ಷ ತಾಗುತ್ತದೆ. ತೂರಿನ ಅರಸನಾದ ಹಿರಾಮನ ಸಂಗಡ ಒಡಂಬಡಿಕೆ ಮಾಡಿಕೊಂಡಿರುತ್ತಿರಲಾಗಿ ಅವನ ಪರಿಮುಖವಾಗಿ ಸೊಲೊಮೋನನಿಗೆ ಲಿಬನೋನದ ದೇವದಾರುಗಳೂ ತೂರಿನ ಶಿಲ್ಪಿಗಳೂ ಶಿಕ್ಕಲಿಕ್ಕೆ ಉಪಾಯವಾಗುತ್ತದೆ. ಇದಕ್ಕೆ ಪ್ರತಿಯಾಗಿ ಫೈನಿಕ್ಯರಿಗೆ ಸೊಲೊಮೋನನು ಧಾನ್ಯ ಕೊಡ ಬೇಕಾಯಿತು. ೨೫೦ ಸಾವಿರ ಮಂದಿ ಪಂತಿನ ಪ್ರಕಾರ ದೇವಾಲಯಕ್ಕಾಗಿ ಕೆಲಸ ಮಾಡಿದರು. ದೇವಾಲಯಕ್ಕೆ ಎರಡು ಮುಂಗೋಣೆಗಳು (ಪ್ರಾಕಾರಗಳು) ಇದ್ದವು. ಹೊರಗಿನದು ಜನಾಂಗಕ್ಕೆ ಒಳಗಿನದು ಯಾಜಕರಿಗೆ ಹೊರಗಿನದರಲ್ಲಿ ದಹನಬಲಿಪೀಠದ ಹೊರತು ಯಾಜಕರು ತೊಳ ಕೊಳ್ಳುವದಕ್ಕೆ ತಾಂಬ್ರದ ಸಮುದ್ರವು ಸಹಾ ಇತ್ತು. ಇದರ ರೂಪವು ಅರಳಿದ ನೈದಿಲೆಯ ಹಾಗೆ ಇತ್ತು. ಅದು ಹನ್ನೆರಡು ತಾಂಬ್ರದ ಎತ್ತುಗಳ ಮೇಲೆ ಇಟ್ಟಿತ್ತು. ಪರಿಶುದ್ಧಗೃಹದ ಅಳತೆಗಳು ಮುಂಚೆ ಇದ್ದ ಗುಡಾರಕ್ಕಿಂತ ಎರಡಷ್ಟಾಗಿದ್ದವು. ಇದು ೬೦ ಮೊಳ ಉದ್ದ ೨೦ ಮೊಳ ಅಗಲ ೨೦ ಮೊಳ ಎತ್ತರ ದೇವದಾರಿನ ಹಲಿಗೆಗಳಿಂದ ಮುಚ್ಚಿ ಭಂಗಾರದ ತಗಡುಗಳನ್ನು ಇವುಗಳ ಮೇಲೆ ಹಚ್ಚಿದ್ದವು. ಮತ್ತು ಹೊರಗೆ ಒಂದು ಗೋಡೆ ಇತ್ತು. ಶುದ್ಧಗೃಹದ ಮೇಲೆ ೧೦ ಮೊಳ ಎತ್ತರದ ಕೋಣೆಗಳಿದ್ದವು ಆದದರಿಂದ ಶುದ್ಧಗೃಹದ ಎತ್ತರವು ೩೦ ಮೊಳವೆಂತ ಸಹಾ ಉಂಟು. ಅದರ ದ್ವಾರದಲ್ಲಿ ಹತ್ತು ಮೊಳ ಅಡ್ಡಗಲವಾಗಿರುವ ಮುಖಮಂಟಪವಿತ್ತು. ಇದರ ಮುಂದೆ ಬಹಳ ಘನವಾದ ಎರಡು ತಾಂಬ್ರದ ಕಂಭಗಳಿದ್ದವು, ಒಂದು ಯಾಕೀನ್ ಮತ್ತೊಂದು ಬೋವಾಜ್ (ಅಂದರೆ ಭದ್ರತ್ವ ಮತ್ತು ತ್ರಾಣ.) ಇದರ ಹೊರತು ಶುದ್ಧಗೃಹಕ್ಕೆ ಉಳಿದ ೩ ಪಾರ್ಶ್ವಗಳಲ್ಲಿ ಸುತ್ತಲೂ ಮೂರು ಮಾಳಿಗೆಗಳುಳ್ಳ ಕೋಣೆಗಳಿದ್ದವು. ಇದು ದೇವಾಲಯದ ಎತ್ತರದ ಮೂರನೇ ಎರಡು ಪಾಲು ಆಗಿತ್ತು. ಶುದ್ಧಸ್ಥಳವು ೪೦ ಮೊಳ ಉದ್ದವಾಗಿತ್ತು. ಇದರಲ್ಲಿ ಭಂಗಾರದ ಧೂಪಪೀಠವೂ, ಹತ್ತು ಭಂಗಾರದ ದೀಪಗಳೂ, ಹತ್ತು ಭಂಗಾರದ ಸಮುಖದ ರೊಟ್ಟಿಗಳ ಮೇಜುಗಳೂ, ಇದ್ದವು. ಅತಿ ಶುದ್ಧಗೃಹವು ಇಪ್ಪತ್ತು ಮೊಳ ಅಡ್ಡಗಲ ಎತ್ತರವಾಗಿತ್ತು. ಇದರಲ್ಲಿ ಇಪ್ಪೇ ಮರದಿಂದ ಮಾಡಿದಂಥಾ ಭಂಗಾರದಿಂದ ಹೊದಗಿಸಿದಂಥಾ ೧೦ ಮೊಳ ಎತ್ತರವಾಗಿರುವ ಎರಡು ಕೆರೂಬಿಗಳು ನಿಂತಿದ್ದವು. ಇವುಗಳ ಬಿಚ್ಚಿದ ರೆಕ್ಕೆಗಳು

ಮಧ್ಯದಲ್ಲಿ ಒಂದಕ್ಕೊಂದು ಮುಟ್ಟಿ ಪಾರ್ಶ್ವಗಳಲ್ಲಿ ಗೋಡೆಗಳಿಗೆ ತಗಲಿದವು. ಮಧ್ಯದಲ್ಲಿರುವ ಎರಡು ರೆಕ್ಕೆಗಳ ಕೆಳಗೆ ಹಳೇ ಸಾಕ್ಷಿಪೆಟ್ಟಿಗೆಯೂ ನೇಮದ ಹಲಿಗೆಗಳೊಡನೆ ಇಟ್ಟಿತ್ತು. ಆರೋನನ ಕೋಲೂ ಮನ್ನದ ಗಡಿಗೆಯೂ ಇರಲಿಲ್ಲ. ಪ್ರತಿಷ್ಠೆ ಮಾಡುವಾಗ್ಯೆ ಮೇಘವು ಅತಿ ಶುದ್ಧಸ್ಥಳವನ್ನು ತುಂಬಿಸಿತು; ಮತ್ತು ಕರ್ತನ ಮಹಿಮೆಯು ಅಲ್ಲಿ ಉಳ ಕೊಂಡಿತು. ಸೊಲೊಮೋನನು ಅಲ್ಲಿ ಮಾಡಿದ ಪ್ರಾರ್ಥನೆಯು ಅವನಿಗಿದ್ದ ಮಹಾ ಪ್ರಜ್ಞೆಗೂ ದೇವರ ಜ್ಞಾನಕ್ಕೂ ವಿಶೇಷವಾದ ಸಾಕ್ಷಿಯಾಗಿರುತ್ತದೆ.

ಪರಿಶಿಷ್ಟ. ೧. ನೇಮದಲ್ಲಿಯೇ ಕರ್ತನು ತನ್ನ ನಾಮವು ಉಳಕೊಳ್ಳುವ ಹಾಗೆ ಶುದ್ಧದೇಶದಲ್ಲಿ ಒಂದು ಸ್ಥಳವನ್ನು ಆಯಿದು ಕೊಳ್ಳುವನೆಂದು ತಿರಿಗಿ ತಿರಿಗಿ ಕಾಣಿಸಿ ಅದೆ. ಸಾಕ್ಷಿಗುಡಾರವು ನಿಶ್ಚಯವಾಗಿ ಸದ್ಯಕ್ಕೆ ಬೇಕಾದ ಆರಾಧನೆಯ ಸ್ಥಳವಾಗಿತ್ತು. ಅದು ಗುಡಾರವಾಗಿರುವದರಿಂದಲೇ ಸದ್ಯಕ್ಕೆ ಎಂಬದು ಕಾಣ ಬರುತ್ತದೆ. ಇಸ್ರಯೇಲನು ಪ್ರಯಾಣದಲ್ಲಿರುವಾಗ್ಯೆ ಆ ಕಾಲಕ್ಕೆ ನಿಶ್ಚೈಸಲ್ಪಟ್ಟದ್ದಾಗಿತ್ತು. ದೇವಾಲಯವು ಸಾಕ್ಷಿಗುಡಾರಕ್ಕೆ ಪ್ರತಿಕೂಲವಾಗಿ ಈಗ ದೇವರ ರಾಜ್ಯವು ಇಸ್ರಯೇಲನಲ್ಲಿ ಬೆಳಿಯುವದಕ್ಕೂ ವಿಕಸಿತವಾಗುವದಕ್ಕೂ ಬೇಕಾದ ದೃಢವಾದ ಅಸ್ತಿವಾರವನ್ನು ಹೊಂದಿಯದೆ ಎಂಬದನ್ನು ತೋರಿಸಿತು; ಆದರೂ ಮಿಕ್ಕಾದವುಗಳಲ್ಲಿ ಅದರ ಸ್ವಭಾವವು ಅದೇಯಾಗಿತ್ತು. ಹಳೇ ಒಡಂಬಡಿಕೆಯಲ್ಲಿ ದೇವರ ರಾಜ್ಯದ ಪ್ರಕಟಣೆಯ ಮುಖ್ಯ ಸ್ವಭಾವವಾಗಿರುವಂಥಾ ಶುದ್ಧಗೃಹದ ತ್ರಿಭಾಗವು ಮೊದಲಿನ ಹಾಗೆಯೇ ಈಗ ಸಹಾ ಇರುವದು.

ಪರಿಶಿಷ್ಟ. ೨. ದೇವಾಲಯವು ಮೊದಲು ಇದಕ್ಕೆ ಶುದ್ಧ ಮಾಡಿ ಅದಕ್ಕೆ ನಿಶ್ಚೈಸಿದ ಮೊರೀಯ ಪರ್ವತದಲ್ಲಿ ಕಟ್ಟಲ್ಪಟ್ಟಿತು. ದೇವಾಲಯದ ಸ್ಥಳವು ಅಂಗಳಗಳೂ ಬೇರೆ ಕಟ್ಟುವಿಕೆಗಳೂ ಸಹಿತವಾಗಿ ಹೆಚ್ಚು ಕಡಿಮೆ ಒಂಭೈನೂರು ಅಡಿ ಚಚ್ಚೌಕವಾಗಿತ್ತು. ಇದಕ್ಕೆ ಬೇಕಾದ ಮೇಲ್ಬೈಲು ಪಡಕೊಳ್ಳುವದಕ್ಕಾಗಿ ತೀರೊಪೊಯೊ ದಿಂದಲೂ ಕಿದ್ರೋನ ತಗ್ಗಿನಿಂದಲೂ ಅದೇ ಪ್ರಕಾರ ಬಹು ಪ್ರಪಾತವಾಗಿರುವ ಮೊಫೆಲ್ ದಿಂದಲೂ ದೊಡ್ಡ ಗೋಡೆಗಳನ್ನು ಕಟ್ಟಿಸಿ ಮಧ್ಯದಲ್ಲಿರುವ ಸ್ಥಳವನ್ನು ಮಣ್ಣಿನಿಂದ ತುಂಬಿಸ ಬೇಕಾಯಿತು. ಈ ಗೋಡೆಗಳು ಕೆಲವು ಕಡೆಯಲ್ಲಿ ಇನ್ನೂ ಇರುತ್ತವೆ. ಈ ಪ್ರಕಾರ ಹೊಂದಿದಂಥಾ ಮೇಲ್ಬೈಲಿನ ಸುತ್ತಲೂ ಸೊಲೊಮೋನನೂ ಅವನ ಮೇಲೆ ಬಂದವರೂ ದೊಡ್ಡ ಮಂಟಪಗಳನ್ನೂ ಅಡ್ಡ ಬೀದಿಗಳನ್ನೂ ಮಾಡಿಸಿದರು. ಇವುಗಳಲ್ಲಿ ಅತಿಸುಂದರವಾದಂಥಾದ್ದು ರಾಜಮಂಟಪವಾಗಿತ್ತು. ಇದಕ್ಕೆ ಸೊಲೊಮೋನನ ಮಂಟಪವೆಂದು ಹೆಸರು.

ಇದು ದೇವಾಲಯದ ದಕ್ಷಿಣಭಾಗದ ಅಗಲವನ್ನೆಲ್ಲಾ ತುಂಬಿಸಿತು. ಇದಕ್ಕೆ ಚೀಯೋನ ಪರ್ವತದಲ್ಲಿರುವ ಅರಮನೆಯಿಂದ ಕೀರೊಪ್ಯೊಯದ ಮೇಲೆ ಒಂದು ದೊಡ್ಡ ಸೇತುವೆಯ ಬಾಗು ನಡಿಸಿತು. ದೇವಾಲಯದ ಸ್ಥಳದಲ್ಲಿ ಕಲೀಫನಾದ ಓಮಾರನು ಕಟ್ಟಿಸಿದ ಯೆಸ್ಸಖಾರ ಎಂಬ ದೊಡ್ಡ ಮಶೀದಿ ಉಂಟು.



## § 73. ಸೊಲೊಮೋನನ ಐಶ್ವರ್ಯವೂ ಪತನವೂ ಅವನ ಬರಹಗಳೂ

೧ ನೇ ಅರಸುಗಳ ೯—೧೧. (೨ನೇ ದಿನಚರ್ಯೆಗಳ ೮, ೯.) ಕರ್ತನು ಸೊಲೊಮೋನನಿಗೆ ಎರಡನೇ ಸಾರಿ ಬುದ್ಧಿ ಹೇಳುವವನಾಗಿಯೂ ಬೀತಿ ಹುಟ್ಟಿಸುವವನಾಗಿಯೂ ವಾಗ್ದತ್ತ ಕಾಡುವವನಾಗಿಯೂ ಶಿಕ್ಷೆ ಉಚ್ಚರಿಸುವವನಾಗಿಯೂ ಕಾಣಿಸಿಕೊಂಡ ಮೇಲೆ ಈತನು ಯೆರೂಸಲೇಮುವನ್ನು ಬದ್ರ ಮಾಡಿ ಅದನ್ನು ಸುಂದರವಾದ ಅರಮನೆಗಳಿಂದ ಶೃಂಗರಿಸಿದನು. ಅದರ ಹಾರ್ತು ಕೆಲವು ಬದ್ರವಾದ ಪ್ರಾಂತ್ಯಪುರಗಳನ್ನು ಸಹಾ ಕಟ್ಟಿಸಿದನು. ಹಾಗೆ ಬಾಯೆಲಾತ್ ಅಥವಾ ಬಾಲ್‌ಬೆಕ್ ಪಲೆಸ್ತೀನದ ಉತ್ತರದಲ್ಲಿ ಮತ್ತು ಥದ್ಮೋರ್ ಇಲ್ಲವೇ ಪಲ್ಮೀರ ಸುರ್ಯದಲ್ಲಿ ಸುತ್ತಲಿರುವ ಜನಾಂಗಗಳೆಲ್ಲಾ ಅವನಿಗೆ ಕಪ್ಪ ಕಾಡುವವರಾಗಿದ್ದರು. ಅವನು ತನಗೂ ತನ್ನ ಅರಮನೆಯವರಿಗೂ ವಿಚಿತ್ರವಾದ ವೈಬೋಗವನ್ನು ಮಾಡಿ ಕೊಂಡನು. ಐಲಾನ್ ಸಮುದ್ರತೀರದಲ್ಲಿರುವ ಯೆಲಾತ್. ಯೆಜಿಯೋನಗೇಬರಗಳ ಅಳವೆಗಳಿಂದ ವ್ಯಾಪಾರದ ಹಡಗಗಳು ಒಫೀರಿಗೆ (ಹಿಂದುಸ್ಥಾನದ ಅಬೀರಕ್ಕೆ) ಮತ್ತು ಅವನ ಥರ್ಸಿಸ್ ಹಡಗವು (ಸ್ಪನ್ಯದಲ್ಲಿ ಇರುವ ತರ್ತೆಸುಸ್) ಮೂರು ಮೂರು ವರ್ಷಕ್ಕೆ ಮಧ್ಯಸಮುದ್ರದಲ್ಲಿ ನಡಿಯಿತು. ಶೇಬದ ರಾಣಿಯು (ಬಲ್ಕಿಸ್?) ಅರಾಬ್ಯದಿಂದ (ಇಂದಿನ ಯೇಮೆನದಿಂದ) ಅವನನ್ನು ನೋಡಲಿಕ್ಕೆ ಬಂದು ಅವನ ಮಹಿಮೆಗೂ ಜ್ಞಾನಕ್ಕೂ ಆಶ್ಚರ್ಯ ಪಟ್ಟಳು. ಹ್ಯಾಗೂ ಕಡೆಯಲ್ಲಿ ಅನ್ಯ ದೇಶದಿಂದ ಬಂದ ಅನೇಕ ಹೆಂಡರು ಅವನನ್ನು ಹುಚ್ಚುತನದಲ್ಲಿ ಸೇರಿಸಿದರು. ಹೀಗಾಗಿ ಈತನು ಅವರ ದೇವರುಗಳಿಗೆ ಪೀಠಗಳನ್ನು ಕಟ್ಟಿಸಿದನು. ಪ್ರವಾದಿಯಾದ ಅಹೀಯನು ತನ್ನ ಅಂಗಿಯನ್ನು ಹರದು ಹತ್ತು ತುಂಡುಗಳನ್ನು ಯೆರೊಬೆಆಮನಿಗೆ ಕಾಡುತ್ತಾನೆ. ಈತನು ಸೊಲೊಮೋನನಿಗೆ ಹೆದರಿ ಅರಸನಾದ ಸೀಸಾಕನ (ಸಿಸಾನ್ಕಿಸ) ಬಳಿಯ ಐಗುಪ್ತಕ್ಕೆ ಓಡಿ ಹೋಗುತ್ತಾನೆ. ಸೊಲೊಮೋನನು ನಾಲ್ವತ್ತು ವರುಷವಾಳಿ ಸತ್ತನು.

ಪರಿಶಿಷ್ಟ. ಶುದ್ಧ ಬರಹವು ಸೊಲೊಮೋನನು ಮೂರು ಸಾವಿರ ಗಾದೆಗಳನ್ನು ಮಾತಾಡಿದನೆಂದು, ಅವನ ಗೀತಗಳು ಸಾವಿರದ ಐದು ಆಗಿರುತ್ತವೆ ಎಂದು ಹೇಳಿದರೂ ಅವನ ಹೆಸರಿನ ಪುಸ್ತಕಗಳು ಮೂರೇ ಉಂಟು.

I ಗಾದೆಗಳು. (ಸಾಮತಿಗಳು.) ಸೊಲೊಮೋನನು ಸಂಕ್ಷಿಪ್ತವಾಗಿಯೂ ಚುರುಕಾಗಿಯೂ ಇರುವ ವಾಕ್ಯಗಳನ್ನಾಡಿದನು. ಇವುಗಳು ಬೆಳ್ಳಿಯ ಚಿತ್ರಗಳುಳ್ಳ ಭಂಗಾರದ ಕಾಯಿಗಳ ಹಾಗೆ ಇರುತ್ತವೆ. (೨೫, ೧೧.) ಇವುಗಳಲ್ಲಿ ಮನುಷ್ಯನ ಜ್ಞಾನವೂ ದೇವರ ಜ್ಞಾನವೂ ಒಂದಾಗಿರುತ್ತದೆ.

II ಪ್ರಸಂಗಿಯು. ಇದು ಭೂಮಿಯಲ್ಲಿ ನಡಿಸಿ ಬೆನ್ನಟ್ಟುವಂಥಾದ್ದೆಲ್ಲಾದರ ಪಾಪವುಳ್ಳ ಮಾಯೆಯನ್ನು ತೋರಿಸುತ್ತದೆ. ಈ ಪುಸ್ತಕದ ಮುಖ್ಯ ಸಂಗತಿಯು ಇದೇ — ಎಲ್ಲಾ ಮಾಯೆ. ರಹಸ್ಯವಾದಂಥಾ ಎದೆ ಒಡಿಯುವಂಥಾ ಚೇಷ್ಟೆಯನ್ನು ತನಗೂ ಲೋಕಕ್ಕೂ ಮಾಡಿ ಗ್ರಂಥಕಾರನು ಎಲ್ಲರನ್ನು ಭೋಗಕ್ಕೆ ಕರಿಯುತ್ತಾನೆ. ಆದರೆ ಹಿಂದಕಡೆಯಲ್ಲಿ ಭಯ ಪಡಿಸುವಂಥಾ ಬೆರಳಿನಂತೆ ನಿರ್ಣಯವೂ ಲೆಖ್ಖವೂ ಬರುತ್ತದೆ ಎಂಬ ಮಾತು ಉಂಟು. ಇದು ನಿಶ್ಚಯವಾಗಿ ಮುಳ್ಳುಗಳೂ ಮೊಳೆಗಳೂ (೧೨, ೧೧.) ಇವುಗಳೊಡನೆ ಜ್ಞಾನದಲ್ಲಿ ಬಾಲಕರು ಆಡ ಕೂಡದು. ಸೊಲೊಮೋನನು ಅದನ್ನು ನಿಶ್ಚಯವಾಗಿ ವೃದ್ಧಪ್ರಾಯದಲ್ಲಿ ಬರೆದಿರ ಬೇಕು. ಮತ್ತು ಈ ಪ್ರಕಾರವಾಗಿ ಆ ಪುಸ್ತಕವು ಸೊಲೊಮೋನನಲ್ಲಿ ಮಾನಸಾಂತರವೂ ಕಡೆಯಲ್ಲಿ ಆದರೂ ಹುಟ್ಟಿತೆಂಬದಕ್ಕೆ ಸಾಕ್ಷಿಯಾಗಿರುವದು.

III ಮಹಗ್ಗೀತ. ಇದು ಸೊಲೊಮೋನನೂ ಸುಲಮಿತಳೂ ತಮ್ಮೊಳಗೆ ಮಾಡಿದ ಲೌಕಿಕ ಶುದ್ಧವಾದ ಪ್ರೀತಿಯ ಸಾಮ್ಯವಾಗಿ ದೇವರಿಗಾಗಿ ನಿರ್ಮಿಸಲ್ಪಟ್ಟ ಪ್ರಾಣವು ತನ್ನ ಪರಲೋಕದ ಮದಲಿಂಗನಲ್ಲಿ ಬಹಳ ಇಚ್ಛಾತುರನಾಗಿರುವದನ್ನು ವರ್ಣಿಸುತ್ತದೆ. ಈ ಗೀತವು ಮುಂಗುರ್ತಾದ ಪ್ರವಾದನೆಯಾಗಿರುತ್ತದೆ. ಮತ್ತು ಅದು ದೇವಾಧಿಕಾರದೊಳಗಿರುವ ಇಸ್ರಾಯೇಲನನ್ನೂ ಅದೇ ಪ್ರಕಾರ ಕ್ರೈಸ್ತ ಸಭೆಯನ್ನೂ ಅದರಲ್ಲಿರುವ ಒಬ್ಬೊಬ್ಬನನ್ನೂ ಸಹಾ ರೂಪಿಸುತ್ತದೆ.



## ಆ ರ ನೇ ಕಾ ಲ

### ದೇವಾಲಯವನ್ನು ಕಟ್ಟಿದ್ದು ಮೊದಲುಗೊಂಡು ಪ್ರವಾದನೆಯು ನಿಂತು ಹೋಗುವ ಮಟ್ಟಿಗು

(ಹೆಚ್ಚು ಕಡಿಮೆ ೬೦೦ ವರ್ಷದ ಕಾಲ)

### § 74. ಈ ಕಾಲದ ಸ್ವಭಾವವು

೧) ದಾವಿದನ ಜಯಗಳಿಂದ ದೇವಾಧಿಕಾರದ ಸಂಸ್ಥಾನವು ದೇವರಿಂದ ಅದಕ್ಕೆ ನಿಶ್ಚಯಿಸಲ್ಪಟ್ಟ ಅಳತೆಯನ್ನು ಹೊಂದಿತ್ತು. ಆದರೆ ಈ ಶ್ರೇಷ್ಠವಾದ ಸ್ಥಿತಿಯಲ್ಲಿ ಸ್ಥಿರವಾಗಿರದೆ ಅಂದಿನಿಂದ ಅದು ರಾಜ, ಪ್ರಜೆಗಳ ಅಪರಾಧದಿಂದ ಕುಂದಿ ಹೋಗಲಿಕ್ಕೆ ಆರಂಭವಾಯಿತು. ಸೊಲೊಮೋನನ ರಾಜಭಾರದ ಕಡೇ ಕಾಲವು ಅದೇ ಮತ್ತೆ ಕೆಟ್ಟು ಹೋಗುವದಕ್ಕೆ ಬೇಕಾದ ಮೊಳಿಕೆಗಳನ್ನು ಧರಿಸಿತು. ಒಂದು ಕಡೆಯಲ್ಲಿ ರಾಜ್ಯ ವಿಭಾಗದಿಂದಲೂ ಎರಡು ಭಾಗಗಳು ತಮ್ಮೊಳಗೆ ಶತ್ರುತ್ವದಲ್ಲಿರುವದರಿಂದಲೂ ಮತ್ತೊಂದು ಕಡೆಯಲ್ಲಿ ಲೌಕಿಕ ಸಂಸ್ಥಾನಗಳಿಗೆ ದೈವಹೀನವಾಗಿ ಅನುಕೂಲವಾಗುವದರಿಂದಲೂ ಇಲ್ಲವೆ ಪ್ರತಿಕೂಲವಾಗಿ ನಿಲ್ಲುವದರಿಂದಲೂ ಮತ್ತು ಅದೇ ಸಮಯದಲ್ಲಿ ಪರ್ವತಾರಾಧನೆಯನ್ನೂ ಕರುಗಳಾರಾಧನೆಯನ್ನೂ ನಿರ್ಮಾಣ್ಯಾರಾಧನೆಯನ್ನೂ ಅಂಗೀಕರಿಸುವದರಿಂದಲೂ ಸಂಸ್ಥಾನವು ತನ್ನಲ್ಲಿರುವ ಶಕ್ತಿಯನ್ನು ಕಳಕೊಂಡಿತು. ಮತ್ತು ಬಹು ತಾಳ್ಮೆಯಿಂದ ಹಿಂದೆ ನಿಂತರೂ ತಕ್ಕ ಕಾಲದಲ್ಲಿ ಬರ ಬೇಕಾದಂಥಾ ಅನ್ಯರಿಗೆ ಸುಲಿಗೆಯಾಗಿ ಒಪ್ಪಿಸಲ್ಪಡುವದೆಂಬಂಥಾ ದಿವ್ಯ ನ್ಯಾಯಶಿಕ್ಷೆಯನ್ನು ತನ್ನ ಮೇಲೆ ಎಳಕೊಂಡಿತು. ಧೈರ್ಯವಾಗಿಯೂ ದಿವ್ಯ ವಾತ್ಸಲ್ಯದಿಂದ ತುಂಬಿದವರಾಗಿಯೂ ಅನೇಕ ಪ್ರವಾದಿಗಳು ದೇವರನ್ನು ಬಿಟ್ಟು ಹೋದ ಅರಸುಗಳಿಗೂ ಜನಾಂಗಕ್ಕೂ ಪ್ರತಿಕೂಲವಾಗಿ ನಿಂತರು. ಆದರೂ ಇದರಿಂದುಂಟಾದ ಫಲವು ಬಹು ಕಾಲ ಇರಲಿಲ್ಲ.

ಪ ರಿ ಶಿ ಷ್ಟ. ಪರ್ವತಾರಾಧನೆ ಯೆಹೋವಾರಾಧನೆ ಎಂದು ಸ್ವೇಚ್ಛೆಯಿಂದಲೂ ಅವೈದಿಕವಾಗಿಯೂ ಪಿತೃಗಳು ನಡಕೊಂಡ ಪ್ರಕಾರವೇ ತಾವು ಸಹಾ ನಡಿಯುವೆವೆಂಬ ಹಾಗೆ ಪುನಃಸ್ಥಾಪಿಸಿದ ಆರಾಧನೆಯಾಗಿರುತ್ತದೆ. ಆ ಸಮಯದಲ್ಲಿ ಕ್ರಮಪ್ರಕಾರವಾಗಿರುವಂಥಾದ್ದು (ಯಾಕಂದರೆ ಪರ್ವತವು ಸ್ವಭಾವಿಕವಾದ ಬಲಿಪೀಠವಾಗಿರುತ್ತದೆ) ಈಗ ದೇವರಾಜ್ಯದ ಸ್ಥಿತಿಯು ವಿಕಸಿತವಾದ ತರುವಾಯ ದೇವರು ಸಾಕ್ಷಿಗುಡಾರದ

ಲ್ಲಿಯೂ ದೇವಾಲಯದಲ್ಲಿಯೂ ನಿಶ್ಚಯಿಸಿದ ದೇವಾರಾಧನೆಗೆ ಪ್ರತೀಕಾರವಾಗಿರುವದ ರಿಂದ ಪಾಪವುಳ್ಳದ್ದಾಗಿತ್ತು. ಒಂದು ವೇಳ್ಯೆ ದೇವಾಲಯವನ್ನು ಕಟ್ಟುವದರಿಂದ ಅದಕ್ಕೆ ಪ್ರತಿಕೂಲವಾಗಿ ಇದು ಹೊಸ್ತಾಗಿ ಬಲ ಹೊಂದಿರ ಬಹುದು. ಆದರೂ ಪರ್ವತಾರಾಧನೆಯು ಇಸ್ರಯೇಲ ರಾಜ್ಯದಲ್ಲಿ ಬೇರೆ ಎಂದೂ ಯೆಹೂದ ರಾಜ್ಯದಲ್ಲಿ ಬೇರೆ ಎಂದೂ ಹೇಳ ಬೇಕು. ಅಲ್ಲಿ ಅದು ಕಾಲಾನುಭಾಗದಲ್ಲಿ ಚಿಂತೆಯಿಲ್ಲವೆಂದೂ ಒಂದೊಂದು ಸಾರಿ ಸಮವೆಂದೂ ಸಹಾ ಹೇಳ ಬಹುದು. ಯಾಕಂದರೆ ರಾಜ್ಯವಿಭಾಗದಿಂದ ದೇವಾಲಯದಲ್ಲಿ ಅವರಿಗೆ ಏನೂ ಪಾಲಿರಲಿಲ್ಲ. ಇಸ್ರಯೇಲ ರಾಜ್ಯದವರು ಯೆರೊಬಾಮನ ಬಲಾತ್ಕಾರದಿಂದ ಪಿತೃಗಳ ಆರಾಧನೆಯ ಸ್ಥಿತಿಯಲ್ಲಿ ತಿರಿಗಿ ಸೇರಿಸಲ್ಪಟ್ಟರೆಂದು ಹೇಳ ಬಹುದು. ಆದದರಿಂದಲೇ ಇಸ್ರಯೇಲ ರಾಜ್ಯದಲ್ಲಿ ಹೆಸರ್ಗೊಂಡ ಪ್ರವಾದಿಗಳಾದ ಯೆಲೀಯ ಎಲೀಶ ಮುಂತಾದವರು ಸಹಾ ಪರ್ವತದಲ್ಲಿ ಆರಾಧನೆ ಮಾಡುವವರಾಗಿ ಕಾಣಿಸಿ ಕೊಳ್ಳುತ್ತಾರೆ. ಕರುಗಳ ಆರಾಧನೆಯು. ಇದು ಒಂದು ಸಾರಿ ಅರಣ್ಯದಲ್ಲಿಯೇ ತೋರಿಕೆಗೆ ಬಂದಿತ್ತು. ಆದರೆ ಮೋಶೆಯ ತ್ರಾಣವುಳ್ಳ ಅಧಿಕಾರದಿಂದ ನಿರ್ಮೂಲ ಮಾಡಲ್ಪಟ್ಟಿತು. ಇದು ಹ್ಯಾಗೂ ಯೆಹೋವಾರಾಧನೆ ಎಂದು ಹೇಳ ಬಹುದು. ಆದರೆ ಅದರ ರೀತಿಯ ಪ್ರಕಾರ ಐಗುಪ್ತದ ವೃಷಭಾರಾಧನೆಗೆ ಅನುಕೂಲವಾಗಿತ್ತು. ಮತ್ತು ನೀನು ನಿನಗೆ ಒಂದು ರೂಪವನ್ನಾದರೂ ಆಕಾರವನ್ನಾದರೂ ಮಾಡಿಕೊಳ್ಳ ಬೇಡ ಎಂದು ಖಂಡಿತವಾಗಿ ಕೊಟ್ಟ ಕಟ್ಟಳೆಯನ್ನು ಮೀರಿದ ಕಾರಣ ಅದು ಅದೈವಿಕವಾಗಿತ್ತೆಂದು ಆಯಿತು.

೨) ದೇವಾಲಯವನ್ನು ಕಟ್ಟಿರುತ್ತಿರಲಾಗಿ ಹಳೇ ಒಡಂಬಡಿಕೆಯ ಆರಾಧನೆಯು ಸಾಧ್ಯವಾದಷ್ಟು ಪೂರ್ಣತ್ವ ಹೊಂದಿತ್ತು. ಆದರೆ ಪ್ರವಾದನೆಯು ಈ ಸ್ಥಾನಕ್ಕಿಂತ ಮುಂದೆ ಹೋಗುತ್ತದೆ. ಹ್ಯಾಗಂದರೆ — ಈಗ ಕಣ್ಣಿನ ಮುಂದೆ ಇರುವ ಪ್ರತ್ಯೇಕವಾದ ಮುಂಗುರ್ತಾಗಿರುವ ದೇವರಾಜ್ಯದ ಆಕಾರವು ಸರ್ವವನ್ನು ಆಕ್ರಮಿಸುವಂಥಾ ಎಲ್ಲಾ ಮುಂಗುರ್ತುಗಳನ್ನೂ ನಿಜ ಮಾಡುವಂಥಾ ಹೊಸ ಆಕಾರವನ್ನೂ ಹೊಂದಿ, ಇವರಲ್ಲಿ ಸಂಪೂರ್ಣವಾಗುವದೆಂಬದನ್ನು ಪ್ರವಾದನೆಯು ತಿಳುವಿಕೆಗೆ ತಂತು. ಈ ಪ್ರಕಾರ ಅದು ಹಳೇ ಒಡಂಬಡಿಕೆಯ ಆಕಾರವನ್ನು ತೆಗದು ಹಾಕಲಿಕ್ಕೆ ಆರಂಭಿಸಿತು. ಆದರೆ ಮುಂಗುರ್ತಾಗಿ ಕಾಣುವ ಸಾರವನ್ನು ಸಂಪೂರ್ತಿ ಮಾಡುವದಕ್ಕೆ ಮಾರ್ಗ ಮಾಡಿತು. ಪ್ರವಾದನೆಯು ಇಷ್ಟು ಹೊತ್ತು ಮುಖ್ಯವಾಗಿ ನೇಮ ಆರಾಧನೆಗಳ ವಾತ್ಸಲ್ಯವುಳ್ಳದ್ದಾಗಿ ಮೋಶೆಯನ್ನು ಹಿಂಬಾಲಿಸುವಂಥಾದ್ದಾಗಿ ಕಾಣಿಸಿ ಕೊಂಡಿತ್ತಾದರೆ, ಈಗ ಮೋಶೆಯನ್ನು ದಾಟಿ ಮೋಶೆಯ ಕೆಲಸವನ್ನು ಮುಂದ

ರಿಸಿ ಹೆಚ್ಚಾಗಿ ವಿಕಸಿತ ಮಾಡುವದಕ್ಕೆ ಆರಂಭಿಸಿತು. ಹೀಗಾಗಿ ಅದು ಸಮಸ್ತ ಹಳೇದನ್ನು ಸಂಪೂರ್ಣ ಮಾಡಿ ಯುಗಯುಗಾಂತರಗಳಲ್ಲಿ ನಿಲ್ಲುವಂಥಾದ್ದಾಗಿ ಹಾಸದಾಗುವ ಹಾಗೆ ಮಹಿಮೆ ಪಡಿಸುವಂಥಾ ಕ್ರಿಸ್ತನ ಮುಂದೆ ಬರುವ ಆಳಾಗಿ ನಿಂತಿತು. ಈ ಪ್ರಕಾರವಾಗಿ ಮೆಸ್ಸೀಯಜ್ಞಾನವು ಉನ್ನತವಾಗಿಯೂ ಪೂರ್ಣ ವಿಕಸಿತವಾಗಿಯೂ ಪ್ರಕಟವಾಗುತ್ತದೆ. ಹೆಚ್ಚೆಚ್ಚು ಖಂಡಿತವಾಗಿಯೂ ಶುಭ್ರವಾಗಿಯೂ ಪ್ರವಾದನೆಯು ವಾಗ್ದತ್ತವಾದ ದಾವಿದಪುತ್ರನ ರೂಪವನ್ನು ಪ್ರಕಟಿಸಿತು. ವರ್ತಮಾನದಲ್ಲಿ ಕಂಡು ಬರುವ ರೂಪವು ಎಷ್ಟು ಅಹಿತವಾಗಿತ್ತೋ ಅಷ್ಟೇ ಹೆಚ್ಚು ಆತುರತ್ವದಿಂದ ವಿಶ್ವಾಸವು ನೇಮಪ್ರವಾದನೆಗಳ ಸಂಪೂರ್ತಿಯನ್ನು ಹಾರೈಸಿತು.

## ಪರಿಶಿಷ್ಟ. ಎರಡು ರಾಜ್ಯಗಳ ಅರಸುಗಳ ಪಟ್ಟಿ

| ಯೆಹೂದ ರಾಜ್ಯ | ಆಳ್ವಿಕೆಯಾರಂಭ | ಇಸ್ರಾಯೇಲ್ ರಾಜ್ಯ |
|---|---|---|
| ೧. ರೆಹಬಾಮ್ | ೯೭೫ | ಯೆರಾಬಾಮ್ ೧ |
| ೨. ಅಬಿಯಾ | ೯೫೭ | |
| ೩. ಆಸಾ | ೯೫೫ | |
| | ೯೫೪ | ನಾದಾಬ್ ೨ |
| | ೯೫೨ | ಬಯೇಸಾ ೩ |
| | ೯೩೦ | ಏಲಾ ೪ |
| | ೯೨೯ | ಸಿಮ್ರಿ ೫ |
| | ೯೨೯ | ಒಮ್ರಿ ೬ |
| | ೯೧೮ | ಆಹಾಬ್ ೭ |
| ೪. ಯಾಸಫಾತ್ | ೯೧೪ | |
| | ೮೯೭ | ಆಹಾಸ್ಯ ೮ |
| | ೮೯೬ | ಯಾರಾಮ್ ೯ |
| ೫. ಯಾರಾಮ್ | ೮೮೯ | |
| ೬. ಅಹಸ್ಯ | ೮೮೪ | |
| ೭. (ಅಥಾಲ್ಯ) | ೮೮೩ | ಯೇಹು ೧೦ |
| ೮. ಯಾಆಸ್ | ೮೭೭ | |
| | ೮೫೬ | ಯಾಅಹಾಸ್ ೧೧ |
| | ೮೪೦ | ಯಾಅಸ್ ೧೨ |
| ೯. ಅಮಾಜೀಯ | ೮೩೮ | |
| | ೮೨೪ | ಎರಡನೇಯೆರಾಬಾಮ್ ೧೩ |
| ೧೦. ಉಸೀಯ | ೮೧೦ | |

| | | | | |
|---|---|---|---|---|
| | | ೭೮೩ | ರಾಜರಹಿತತ್ವ | |
| | | ೭೭೨ | ಸಖರ್ಯ | ೧೪ |
| | | ೭೭೧ | ಶಲ್ಲೂಮ್ | ೧೫ |
| | | ೭೭೧ | ಮೆನಾಹೆಮ್ | ೧೬ |
| | | ೭೬೦ | ಪೇಕಾಯ | ೧೭ |
| | | ೭೫೯ | ಪೇಕಾ | ೧೮ |
| ೧೧. | ಯೋಥಾಮ್ | ೭೫೮ | | |
| ೧೨. | ಆಹಾಸ್ | ೭೪೨ | | |
| | | ೭೩೯ | ರಾಜರಹಿತತ್ವ | |
| | | ೭೩೦ | ಹೋಸೇಯಾ | ೧೯ |
| ೧೩. | ಹಿಸ್ಕಿಯಾ | ೭೨೭ | | |
| | | ೭೨೨ | ರಾಜ್ಯಾಂತ್ಯ | |
| ೧೪. | ಮನಸ್ಸೆ | ೬೯೬ | | |
| ೧೫. | ಆಮೋನ್ | ೬೪೧ | | |
| ೧೬. | ಯೋಸೀಯಾ | ೬೩೯ | | |
| ೧೭. | ಯೋಅಹಾಸ್ | ೬೦೯ | | |
| ೧೮. | ಯೋಯಾಕೀಮ್ | ೬೦೮ | | |
| ೧೯. | ಯೋಯಾಕೀನ್ | ೫೯೯ | | |
| ೨೦. | ಚಿದ್ಕೀಯಾ | ೫೯೮ | | |
| | ರಾಜ್ಯಾಂತ್ಯ | ೫೮೮ | | |

(೧೩೪ ವ. ಹೆಚ್ಚು ನಿಂತಿತು)

ಈ ಲೆಖ್ಖಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುವದಕ್ಕೆ ರಾಜವಿಭಾಗವು ೯೭೫.—ಯೋಸಫಾತ್ ಮತ್ತು ಆಹಾಬ ಸುಮಾರು ೯೦೦.—ಯೇಹೂ ಮತ್ತು ಅತಾಲಿಯಾ ಸುಮಾರು ೮೭೮. IIನೇ ಯೆರೊಬಾಮ್ ಮತ್ತು ಉಸೀಯ (ತಮ್ಮ ಕೆಲಸಗಳ ವಿಷಯವಾಗಿ ಬರೆದಿಟ್ಟ ಪ್ರವಾದಿಗಳು ಎದ್ದ ಸಮಯ) ಸುಮಾರು ೮೦೦.—ಇಸ್ರಾಯೇಲ್ ರಾಜ್ಯಾಂತ್ಯವು ಮತ್ತು ಹಿಸ್ಕೀಯ ೭೨೨.—ಯೆಹೂದ ರಾಜ್ಯಾಂತ್ಯವು ೫೮೮.



## § 75. ಒಂದೇ ಕಾಲದಲ್ಲಿ ಇದ್ದ ಲೌಕಿಕ ಸಂಸ್ಥಾನಗಳಿಗೂ ಇಸ್ರಯೇಲನ ಕಥೆಗೂ ಇರುವ ಸಂಬಂಧಗಳು

೧) ಈಗಿನಿಂದ ಇಸ್ರಯೇಲನ ಕಥೆಯು ಮೊದಲನೇಗಿಂತ ಅತಿ ವಿಶೇಷವಾಗಿಯೂ ಸಂಕಷ್ಟವುಳ್ಳದ್ದಾಗಿಯೂ ಇರುವ ಸಂಬಂಧಗಳನ್ನು ಅನ್ಯಜನಾಂಗಗಳ ಸಂಗಡ ಆರಂಭಿಸುತ್ತದೆ. ಹೆಚ್ಚುಹೆಚ್ಚು ಖಂಡಿತವಾಗಿಯೂ ಕೂಲಂಕುಷವಾಗಿಯೂ ಲೋಕಸಂಸ್ಥಾನವಾಗ ಬೇಕೆಂಬ ಪ್ರಯತ್ನವು ಕಂಡು ಬರುತ್ತದೆ. ಇಸ್ರಯೇಲ್ ದೇಶವು ಲೋಕವ್ಯಾಪಾರಕ್ಕೂ ಲೋಕರಾಜ್ಯಗಳಿಗೂ ಮಧ್ಯದಲ್ಲಿಯೂ (ಆಸ್ಯ ಅಫ್ರಿಕ ದೇಶಗಳಲ್ಲಿರುವ) ಲೋಕಾಧಿಕಾರಕ್ಕಾಗಿ ಒಡದಾಡಿ ಕೊಳ್ಳುವ ಬಲಗಳ ಶಕ್ತಿಗಳ ಮಧ್ಯದಲ್ಲಿಯೂ, ಇದ್ದದ್ದಾಗಿ ತಿರಿಗಿ ತಿರಿಗಿ ಅವರ ಅಭಿಲಾಷೆಯುಳ್ಳ ದೃಷ್ಟಿಯನ್ನು ತನ್ನ ಮೇಲೆ ತಿರಿಗಿಸಿ ಕೊಳ್ಳುತ್ತದೆ. ಮತ್ತು ಆಯಲ್ಪಟ್ಟ ಜನಾಂಗವು ವಿಶೇಷವಾಗಿಯೂ ಸಮಾನರಹಿತವಾಗಿಯೂ ಇರುವ ತನ್ನ ಕರೆಯುವಿಕೆಯನ್ನು ಮರತು ಬಿಟ್ಟು, ಎಷ್ಟು ಹೆಚ್ಚಾಗಿ ಅನ್ಯಜನರಿಗೆ ಸಮಾನವಾದರೋ ಅಷ್ಟಕ್ಕೆ ಹೆಚ್ಚಾಗಿ ಲೋಕವ್ಯವಹಾರಗಳ ಸುಳಿಯಲ್ಲಿ ಬಿತ್ತು. ಮತ್ತು ಅದರಲ್ಲಿ ಕೆಟ್ಟು ಹೋಯಿತು. ಯಾಕಂದರೆ ಇಸ್ರಯೇಲನಿಗೆ ಆ ಸಮಯದಲ್ಲಿ ಇದ್ದ ತ್ರಾಣವು ಪ್ರತ್ಯೇಕವಾಗಿರುವದರಲ್ಲಿಯೇ ಇತ್ತು. ಹೀಗಾಗಿ ಸ್ವಾಭಾವಿಕವಾಗಿಯೇ ಲೋಕಬಲಗಳು, ದೇವರು ಕೊಟ್ಟ ಕರೆಯುವಿಕೆಯನ್ನು ಬಿಟ್ಟು ಬಿದ್ದು ಹೋದ ಆತನ ಜನಾಂಗಕ್ಕೆ, ದೇವರ ಕೈಯಲ್ಲಿ ಶಿಕ್ಷೆಯ ಬೆತ್ತವಾದವು. ಮತ್ತು ಅವರ ಯುದ್ಧಚಾತುರ್ಯ ಮಾತ್ರವಲ್ಲ, ದೇವರ ಕೈ ಸಹಾ ಅವರ ಯುದ್ಧಸೈನ್ಯಗಳಿಗೆ, ಸಮುದ್ರಗಳನ್ನೂ ಅರಣ್ಯಗಳನ್ನೂ ಪರ್ವತಗಳನ್ನೂ ತಗ್ಗುಗಳನ್ನೂ ದಾಟಿ ಸ್ಥಾನದಿಂದಲೂ ದೇಶಸ್ವಭಾವದಿಂದಲೂ ಭದ್ರವಾಗಿರುವಂಥ ಶುದ್ಧದೇಶದ ಮಧ್ಯಕ್ಕೆ ಮಾರ್ಗ ಮಾಡುತ್ತದೆ.

೨) ಆದರೆ ದ್ರೋಹವುಳ್ಳ ಗರ್ವವೂ ಇಸ್ರಯೇಲನ ದೇವರಾದ ಯೆಹೋವನ ತುಚ್ಛೀಕಾರವೂ ಪ್ರತಿಫಲವಿಲ್ಲದೆ ನಿಲ್ಲುವದಿಲ್ಲ. ಯೆಹೋವನು ತನ್ನ ಮಾನವನ್ನು ಕಾದು ಕೊಳ್ಳುತ್ತಾನೆ. ದಿವ್ಯನ್ಯಾಯಶಿಕ್ಷೆಯು ದ್ರೋಹಿಗಳನ್ನು ಹಿಡುಕೊಳ್ಳುತ್ತದೆ. ಒಂದರ ಮೇಲೊಂದು ಲೋಕರಾಜ್ಯವು ದೇವರ ಶುದ್ಧಸ್ಥಳದ ಮೇಲೆ ಕೈ ಹಾಕುತ್ತದೆ. ಮತ್ತು ಒಂದರ ಮೇಲೊಂದು ದೇವರ ಆಲೋಚನೆಗಳಿಗೆ ಅನುಕೂಲವಾದ ತರುವಾಯ ನಾಶವಾಗಿ ಹೋಗುತ್ತದೆ. ಈ ಪ್ರಕಾರವಾಗಿ ದೇವರು ಅಬ್ರಹಾಮನಿಗೆ ಕೊಟ್ಟ ವಾಕ್ಯವು ನಿನ್ನನ್ನು ಶಪಿಸುವವರನ್ನು ನಾನು ಶಪಿಸುವೆನು ಎಂಬದು ಈಗ ಸಹಾ ನಿಜವಾಯಿತು (ಸಹ ನೋಡು §೧೬,೧). ಮೊದಲು ಐಗುಪ್ತ, ಅಮಲೆ

ಕ್, ಎದೋಮ್, ಮೊವಾಬ ಮತ್ತು ಅಮ್ಮೋನ್ ಎಂಬ ಜನಾಂಗಗಳು ದೇವರ ಜನಾಂಗದ
ಮೇಲೆ ಶಾಪವನ್ನು ತರ ಬೇಕೆಂದಿದ್ದಾಗ್ಯೂ ಅದು ಹ್ಯಾಗೆ ಅವರ ಮೇಲೆಯೇ ಬಿತ್ತೋ,
ಹಾಗೆಯೇ ಈಗ ಸಹಾ ಒಬ್ಬರಮೇಲೊಬ್ಬರು ಅಸೂರ್ಯರೂ ಕಲ್ದಾಯರೂ ಪಾ
ರ್ಸಿಯರೂ ಗ್ರೇಕರೂ ರೋಮಾಯರೂ ದೇವರ ಶಿಕ್ಷೆಗೆ ಒಳಗಾಗುತ್ತಾರೆ. ಮತ್ತು
ಶುಚೀಕರಿಸಲ್ಪಟ್ಟಂಥ ಮತ್ತು ತುಳಿಯಲ್ಪಟ್ಟಂಥ ಇಸ್ರಯೇಲನೊಳಗಿಂದಲೇ ಕರ್ತ
ನಾದ ದೇವರು ಸ್ಥಾಪಿಸುವಂಥ ನಿತ್ಯದಲ್ಲಿಯೂ ಇರುವಂಥ ಆ ರಾಜ್ಯವು ಹುಟ್ಟು
ತ್ತದೆ. ಬಹಳ ಸಾರಿ ತಪ್ಪಿ ಹೋದರೂ ಕಡೇ ಸಾರಿ ತ್ಯಜಿಸಲ್ಪಡುವ ಮಟ್ಟಿಗೂ,
ಇನ್ನೂ ದೇವರ ಜನಾಂಗವಾಗಿದ್ದ ಇಸ್ರಯೇಲನು, ಕ್ರಿಸ್ತನು ಹೊಸ ಲೋಕದ ಜ
ನಾಂಗಗಳಿಗೆ ಹ್ಯಾಗೋ, ಹಾಗೆಯೇ ಪೂರ್ವದ ಜನಾಂಗಗಳಿಗೆ ಆತಂಕದ ಕಲ್ಲಾಗಿ
ದ್ದನು, ಹೀಗೆ ಇಸ್ರಯೇಲನ ವಿಷಯವಾಗಿ ಸಹಾ ಈ ಕಲ್ಲಿನ ಮೇಲೆ ಬೀಳುವವನು
ಪುಡಿಪುಡಿಯಾಗಿ ಹೋಗುವನೆಂಬದು (ಮತ್ಥಾ. ೨೧, ೪೪.) ಒಂದು ವಿಧ
ವಾಗಿ ಸರಿಯಾಗಿತ್ತು.

ಪರಿಶಿಷ್ಟ. ಈ ಕಾಲದ ಕಥೆಯ ವರ್ಣನೆಯನ್ನು ಮಧ್ಯದಲ್ಲಿ ತುಂಡು ಮಾಡದ
ಹಾಗೆ ದೇವರ ಜನಾಂಗಕ್ಕೆ ವ್ಯವಹಾರವಿದ್ದ ಲೋಕಬಲಗಳ ಕಥೆಯ ಮುಖ್ಯ ಸಾರಾಂ
ಶವನ್ನು ಇಲ್ಲಿ ಹೇಳ ಬೇಕಾಗುತ್ತದೆ.

I ದೇವರು ಈ ಕಾಲದಲ್ಲಿ ತನ್ನ ಜನಾಂಗಕ್ಕೆ ಶಿಕ್ಷೆಯ ಬೆತ್ತವಾಗಿ ಪ್ರಯೋಗಿಸಿ
ದಂಥ ಮೊದಲನೇ ಲೌಕಿಕ ಬಲವು ದಮಸ್ಕವೆಂಬ ರಾಜಧಾನಿಯುಳ್ಳ ಸುರಿಯವು. ದಾ
ವಿದನು ದಮಸ್ಕವನ್ನು ಜೈಸಿದ್ದನು; ಆದರೆ ಸೊಲೊಮೋನನ ಕಾಲಗಳಲ್ಲಿಯೇ ಸ್ವಸಾಮ
ರ್ಥ್ಯವುಳ್ಳ ರಾಜ್ಯವು, ರೇಸೋನನ ಕೈಕೆಳಗೆ ಅಲ್ಲಿ ತಿರಿಗಿ ಉಂಟಾಯಿತು (೧ನೇ ಅರ
ಸುಗಳ ೧೧, ೨೪). ಈತನ ಮೊಮ್ಮಗನಾದ ೧ನೇ ಬೆನ್ ಹಾದಾದನು, ಆಸನಿಂದ
ಪ್ರೇರೇಪಿಸಲ್ಪಟ್ಟು, ಇಸ್ರಯೇಲನ ಅರಸನಾದ ಬಯೇಸನನ್ನು ವಿಶೇಷವಾದ ಅಪಜ
ಯ ಪಡಿಸಿದನು; ಅಂದಿನಿಂದ ಇಸ್ರಯೇಲ ರಾಜ್ಯದ ಮೇಲೆ ಸುರಿಯದ ಶತ್ರುತ್ವ
ವು ಬಹಳ ಸಾರಿ ಪ್ರಕಟವಾಯಿತು.

೧ನೇ ಬೆನಹಾದಾದನ ಮೇಲೆ ಆತನ ಮಗನಾದ ೨ನೇ ಬೆನಹಾದಾದನು ಪ
ಟ್ಟವೇರಿದನು. ಈತನನ್ನು ರಾಜ್ಯಾಪಹಾರಿಯಾದ ಹಸಯೇಲನು ಕೊಂದು ಹಾಕಿದ
ನು. ಈತನು ಇಸ್ರಯೇಲನಿಗೆ ಬಹಳ ಉಪದ್ರ ಕೊಟ್ಟು, ಪೂರ್ವ ಯೊರ್ದಾನ ದೇ
ಶವನ್ನು ಜಯಿಸಿ ಕೊಂಡನು. ಆದರೂ ಇವನ ಮಗನಾದ ೩ನೇ ಬೆನಹಾದಾದನು
ತಿರಿಗಿ ತಿರಿಗಿ ಇಸ್ರಯೇಲರ ಅರಸರಾದ ಯೊವಾಸನಿಂದಲೂ ೨ನೇ ಯೆರೊಬಾಮ

ನಿಂದಲೂ ಅಪಜಯು ಪಟ್ಟಿವನಾಗಿ ಹಿರಿಯರು ಜೈಸಿದ ದೇಶಗಳನ್ನೆಲ್ಲಾ ತಿರಿಗಿ ಬಿಟ್ಟು ಕೊಡ ಬೇಕಾಯಿತು. ಮತ್ತೆ ಇಸ್ರಯೇಲಿನಲ್ಲಿ ಪೇಕಾಹನೂ, ದಮಸ್ಕದಲ್ಲಿ ರೆಚಿನನೂ ಆಳುತ್ತಿರುವಾಗ, ಎರಡು ಸಂಸ್ಥಾನಗಳು ಯೆಹೂದದ ಆಹಾಸನಿಗೆ ಪ್ರತಿಕೂಲವಾಗಿ ತಮ್ಮೊಳಗೆ ಒಡಂಬಡಿಕೆ ಮಾಡಿ ಕೊಂಡರು. ಆದರೆ ಈ ಒಡಂಬಡಿಕೆಯು ಸುರಿಯರಾಜ್ಯದ ವಿನಾಶಕ್ಕೆ ಕಾರಣವಾಯಿತು. ಹ್ಯಾಗಂದರೆ ಆಹಾಸನು ಅಸೂರ್ಯದ ತಿಗಲತ್ ಪಿಲೇಸರನನ್ನು ಸಹಾಯಕ್ಕೆ ಕರಿಯುತ್ತಿರಲು, ಈತನು ಸುರಿಯದ ನಿವಾಸಿಗಳನ್ನು ಕೆರೆವೈದು, ಸುರಿಯ ದೇಶವನ್ನು ತನ್ನ ರಾಜ್ಯಕ್ಕೆ ಶೇರಿಸಿ ಬಿಟ್ಟನು.

II ಇದಕ್ಕಿಂತ ಕಠಿಣವಾದ ಶಿಕ್ಷೆಯ ಬೆತ್ತವನ್ನು ತನ್ನ ಜನಾಂಗಕ್ಕೋಸ್ಕರ ಕರ್ತನು ಬಹಳ ಹೆಚ್ಚು ಬಲವುಳ್ಳ ಅಸೂರ್ಯರಾಜ್ಯದಲ್ಲಿ ಸಿದ್ಧ ಮಾಡಿ ಕೊಂಡನು. ಅಸೂರ್ಯವು ಬಾಬೆಲದಿಂದ ಬಂದ ಜನರು ಸ್ಥಾಪಿಸಿದ ಸ್ಥಳವಾಗಿತ್ತು. (Iನೇ ಮೋಶೆ. ೧೦, ೧೧.) ಅದರ ಶ್ರೇಷ್ಟತ್ವದ ಕಾಲದಲ್ಲಿ ಐಪ್ರಾತ್ ತೀಗ್ರಿಸ್ ಎಂಬ ನದಿಗಳ ದೇಶವೆಲ್ಲಾ ಅದಕ್ಕೆ ಕೂಡಿತ್ತು. ಅದರ ರಾಜಧಾನಿ ನಿನವೇ ತೀಗ್ರಿಸ್ ನದಿಯ ಪೂರ್ವ ತೀರದಲ್ಲಿ ಇತ್ತು. ಈ ರಾಜ್ಯದ ಕಥೆಯು ತಿಳಿಯಲಿಕ್ಕೆ ಬಹಳ ಕಷ್ಟವಾದದ್ದು. ಮತ್ತು ಬೇರೆ ಬೇರೆ ತರವಾಗಿಯೂ ಒಂದಕ್ಕೊಂದು ವಿರೋಧವಾಗಿಯೂ ಇರುವ ಸುದ್ದಿಗಳನ್ನೆಲ್ಲಾ ಕೂಡಿಸಿ ಒಂದೇ ಮಾಡುವದು ಒಂದು ವೇಳೆ ಯಾವಾಗಲೂ ಸಾಧ್ಯವಾಗಲಿಕ್ಕಿಲ್ಲ. ಇಲ್ಲೊಂದು ಅಲ್ಲಿ ಒಂದಾಗಿದ್ದರೂ ಭರವಸಕ್ಕೆ ಪೂರ್ಣವಾಗಿ ಯೋಗ್ಯವಾದಂಥ ದೇವರ ವಾಕ್ಯದ ಸುದ್ದಿಗಳಲ್ಲಿ ಬಹಳ ಸ್ವಲ್ಪ ಕಾಲದ ವಿಷಯವಾಗಿ ಮಾತ್ರವೇ ಬರದಿರುತ್ತದೆ. ಇಸ್ರಯೇಲರ ಕಥೆಯಲ್ಲಿ ಕಾಣ ಬರುವಂಥಾ ಮೊದಲನೇ ಅಸೂರ್ಯದ ಅರಸನು ಫುಲ್. ಈತನು ಮೆನಹೇಮನು ಅರಸನಾಗಿರುವಾಗ್ಯೆ ಇಸ್ರಯೇಲರನ್ನು ಕಪ್ಪ ಕೊಡುವವನಾಗಿ ಮಾಡಿ ಕೊಂಡನು. ತಿಗಲಾತಪಿಲೇಸರನು ಸುರಿಯದಿಂದಲೂ ಉತ್ತರ ಪಲೆಸ್ತೀನದಿಂದಲೂ ನಿವಾಸಿಗಳನ್ನು ಕೊಂಡು ಹೋದನು. ಸಲ್ಮನಸ್ಸರನು ಇಸ್ರಯೇಲ ರಾಜ್ಯವನ್ನು ತೀರಾ ಹಾಳು ಮಾಡಿ ಉಳಿದ ನಿವಾಸಿಗಳನ್ನು ಸಹಾ ಶೆರೆಯಾಗಿ ವೈದನು. ಸಂನ್ಹೇರೀಬನು ಐಗುಪ್ತದ ಕಡೆಗೆ ಯುದ್ಧ ಪ್ರಯಾಣ ಮಾಡುತ್ತಿರುವಾಗ ಹಿಸ್ಕೀಯನ ಕಾಲದಲ್ಲಿ ಯೆರೂಸಲೇಮಕ್ಕೆ ಮುತ್ತಿಗೆ ಹಾಕಿದನು. ಸನ್‌ಹರೀಬನ ಮಗನೂ ಅವನ ತರುವಾಯ ಪಟ್ಟವನ್ನು ಏರಿದವನೂ ಆಗಿರುವ ಅಸ್ಸರಹದ್ದೋನನು ಅರಸನಾದ ಮನಸ್ಸೆಯನ್ನು ಬಾಬೆಲಕ್ಕೆ ಕೊಂಡು ಹೋದನು. ಗ್ರೇಕರ ಕಥಾಕರ್ತರು ಅಸೂರ್ಯದ ಅರಸುಗಳಲ್ಲಿ ಮೊದಲನೇಯವನು ನೀನನೆಂದು ಹೇಳಿ, ಕ್ರಿಸ್ತನಿಗಿಂತ ಸುಮಾರು ೮೦೦ ವರ್ಷದ ಮೊದಲೇ ಸರ್ದನಪಾಲನು ಕಡೇ ಅರಸನೆಂದು ಕಥೆಯನ್ನು ತೀರಿಸುತ್ತಾರೆ. ಈತನು ಸೇನಾನಾಯಕನಾದ

ಮೇದಿಯದ ಅರ್ಬಕೆಯೂ ಬಾಬಿಲೋನದ ಬೆಲೇಸಿಯೂ ತನಗೆ ವಿರೋಧವಾಗಿ ಕಾಟಕಾಯಿ ಎಬ್ಬಿಸಿದರೆಂದು ನೋಡಿ ತನ್ನ ಹೆಂಡರ ಆಸ್ತಿಯೊಡನೆ ಸುಟ್ಟುಕೊಂಡನು. ಈ ವರ್ತಮಾನಗಳನ್ನು ದೇವವಾಕ್ಯದವುಗಳಿಗೆ ಅನುಕೂಲ ಮಾಡಲಿಕ್ಕಾಗಿ ಬಹಳ ಕಥಾಕರ್ತರು ನವ ಅಸೂರ್ಯ ರಾಜ್ಯವು ಇತ್ತೆಂದು ಹೇಳುತ್ತಾರೆ. ಇದು ಸ್ವಲ್ಪ ಕಾಲ ಮೇದಿಯದ ಕೈಕೆಳಗೆ ಇದ್ದ ಮೇಲೆ ದೇವರ ವಾಕ್ಯದಲ್ಲಿ ಬರದಿರುವ ಅರಸುಗಳ ಕಾಲದಲ್ಲಿ ಬಹಳ ಸ್ವತಂತ್ರವನ್ನು ಹೊಂದಿದ ತರುವಾಯ ಕಡೆಯಲ್ಲಿ ಮೇದಿಯದ ಕಿಯಕ್ಸರೆಯಿಂದಲೂ ಬಾಬೇಲದ ನಬೊಪೊಲಸ್ಸರಿನಿಂದಲೂ ಕ್ರಿಸ್ತನಿಗಿಂತ ಶುಮಾರು ಆರುನೂರ ಇಪ್ಪತ್ತೈದು ವರ್ಷದ ಮೊದಲು ಪೂರ್ಣವಾಗಿ ನಾಶವಾಯಿತು.

III ದೇವರ ಜನಾಂಗವನ್ನು ಶಿಕ್ಷಿಸಿ ತಗ್ಗಿಸುವದಕ್ಕೆ ಪ್ರಯೋಗಿಸಿದ ಮೂರನೇ ಲೋಕಬಲವು ಮಹಾ ತ್ರಾಣವುಳ್ಳಂಥ ಬಬಿಲೋನದ ಲೋಕರಾಜ್ಯವು. ಬಬಿಲೋನವು ಮೂಲದಲ್ಲಿ ಅಸೂರ್ಯವನ್ನು ಸ್ಥಾಪಿಸಿದ್ದರೂ ಪೂರ್ವಕಾಲದಲ್ಲಿ ಇದರ ಜಿಲ್ಲೆಗಳಲ್ಲಿ ಒಂದಾಗಿತ್ತು. ಸರ್ದನಪಾಲನ ಕಾಲದಲ್ಲಿ ಬಬಿಲೋನದ ಸುಭೆದಾರನಾಗಿದ್ದ ಬೆಲೆಸಿಯು ಸ್ವತಂತ್ರವನ್ನು ಪಡಕೊಂಡನು. ಇದು ಹ್ಯಾಗೂ ನವ ಅಸೂರ್ಯದ ರಾಜ್ಯದಿಂದ ತಿರಿಗಿ ಹೋಯಿತು. ಆದರೆ ಇದು ಎಷ್ಟು ಹೆಚ್ಚಾಗಿ ಹೊರಗೆ ದೇಶಗಳನ್ನು ಆಕ್ರಮಿಸಿ ಕೊಂಡಿತೋ ಅಷ್ಟಕ್ಕೆ ಹೆಚ್ಚಾಗಿ ಅದರ ಒಳಗಿನ ಬಲವು ಮುರಿದು ಹೋಯಿತು. ಬಬಿಲೋನದ ನಬೊನಸ್ಸರನು ಕ್ರಿಸ್ತನಿಗೆ ೭೪೭ ಮೊದಲು ಹೊಸ ಶಕಾಬ್ದವನ್ನು ಆರಂಭಿಸಿ ಹೊಸತಾಗಿ ಸ್ವತಂತ್ರವನ್ನು ಸ್ಥಾಪಿಸಿದನು. ಮತ್ತು ೭೧೪ ನೇ ವರ್ಷದಲ್ಲಿ ಬಬಿಲೋನದ ಅರಸನಾದ ಮೆರೊದಾಕಬಲಾದಾನನು ರಾಯಭಾರಿಗಳಿಂದ ಯೆಹೂದ್ಯರ ಅರಸನಾದ ಹಿಸ್ಕೀಯನ ಸಂಗಡ ಸ್ನೇಹ ಮಾಡಿಕೊಂಡನು. ಆದರೂ ಮನಸ್ಸೆಯ ಕಾಲದಲ್ಲಿಯೇ ಅಸೂರ್ಯದ ಅರಸನಾದ ಅಸರಹದ್ದೋನನು ಬಾಬೇಲನ್ನು ತಿರಿಗಿ ಪಡಕೊಂಡು ಆಳುತ್ತಾ ಇದ್ದನು. ಹ್ಯಾಗಾದರೂ ಅಸೂರ್ಯವು ಬಹು ವೇಗದಿಂದ ವಿನಾಶಕ್ಕೆ ಎದುರಾಗಿ ನಡಿಯಿತು. ಬಬಿಲೋನದ ಸುಭೆದಾರನಾದ ನಬೊಪೊಲಸ್ಸರನು ೬೨೫ ನೇ ವರ್ಷದಲ್ಲಿ ಸ್ವತಂತ್ರವುಳ್ಳ ಅರಸನಾಗಿ ಬಬಿಲೋನ್ಯ ಕಲ್ದೇಯ ಎಂಬಂಥ ಲೋಕವನ್ನಾಳುವಂಥ ಹೊಸ ರಾಜಕುಲವನ್ನು ಸ್ಥಾಪಿಸಿದನು. ನಬೊಪೊಲಸ್ಸರನ ಮಗನೂ ಯೆಹೂದ ರಾಜ್ಯಕ್ಕೆ ಅಂತಕನೂ ಆಗಿರುವ ನೆಬುಕದ್ನೇಜರನು ಈ ಹೊಸ ಲೋಕಾಧಿಪತ್ಯವನ್ನು ಅತಿ ಶ್ರೇಷ್ಠವಾದ ಮಹತ್ವಕ್ಕೆ ತಂದನು. ಆದರೆ ಅದು ಹಾಗೆಯೇ ಬೇಗ ಮುರಿದು ಹೋಯಿತು. ೫೬೨ನೇ ವರ್ಷದಲ್ಲಿ ನೆಬುಕದ್ನೇಜರನು ಸತ್ತ ಮೇಲೆ ಅವನ ರಾಜ್ಯವು ಮೇದರ

ಪರಿಮುಖವಾಗಿಯೂ ಪರ್ಸರ ಪರಿಮುಖವಾಗಿಯೂ ನಾಶವಾಗುವ ತನಕ ಇಪ್ಪತ್ತ ಮೂರು ವರ್ಷಕ್ಕಿಂತ ಹೆಚ್ಚು ಕಳಿಯಲಿಲ್ಲ. ಈತನ ಮಗನಾದ ಯೆವಿಲ್ ಮೆರೊದಾಕ್ (ಬೆಲ್ಷಾಜರ್?) ಎರಡು ವರ್ಷ ಆಳಿದ ತರುವಾಯ ಅವನ ಭಾವಮೈದುನನಾದ ನೆರಿಗ್ಲಿಸರ್ (ಮೇದ್ಯನಾದ ದರಿಯನು?) ಅವನನ್ನು ಕೊಂದು ಹಾಕಿದನು. ಮತ್ತು ಈತನು ೪ ವರ್ಷದ ತರುವಾಯ ಕೂರನ ಸಂಗಡ ಮಾಡಿದ ರಣದಲ್ಲಿ ಜೀವ ಕಳೆ ಕೊಂಡನು. ಅವನ ಮಗನಾದ ಲಬೊರೊಸೊಅರ್ಕದನು ಒಂಭತ್ತು ತಿಂಗಳ ತರುವಾಯ ಕಾಟಿಕಾಯಿಯಲ್ಲಿ ಬಿದ್ದು ಹೋದನು. ಇದರಿಂದ ಬಬಿಲೋನ್ಯನಾದ ನಬೊನೇದನು ಪಟ್ಟವನ್ನು ಏರಿದನು. ಇವನ ಸಂಗಡ ಕಲ್ದೇಯರ ಲೋಕರಾಜ್ಯವು ಹಾಳಾಯಿತು (೫೩೮ ಕ್ರಿ. ಮುಂಚೆ).

ದೇವವಾಕ್ಯದ ವರ್ತಮಾನಗಳನ್ನೂ ಗ್ರೇಕರ ವರ್ತಮಾನಗಳನ್ನೂ ಕೂಡಿಸಿಟ್ಟು ನೋಡುವಾಗ್ಯೆ ಎರಡು ಕಡೆಯಿಂದಲೂ ಬರೆದಿಟ್ಟ ಕಲ್ದೇಯ ಮೇದ್ಯ ಪರ್ಸ್ಯ ಅರಸುಗಳ ಹೆಸರುಗಳು ಬಹಳ ಸರ್ತಿ ಒಂದೇಯಾಗಿರುವದಿಲ್ಲ. ಇದಕ್ಕೆ ಕಾರಣವೇನಂದರೆ—ಪೂರ್ವ ದೇಶದ ಹೆಸರುಗಳು ಗ್ರೇಕರ ಬಾಯಲ್ಲಿ ಕೆಟ್ಟು ಹೋದವು; ಮತ್ತು ಅರಸುಗಳ ಹೆಸರುಗಳು ಒಬ್ಬೊಬ್ಬನ ಹೆಸರಲ್ಲ, ಹೆಚ್ಚಾಗಿ ಮಾನದ ಹೆಸರುಗಳಾಗಿರುವದರಿಂದ ಅಂಥಾ ಹೆಸರುಗಳು ಪೂರ್ವ ದೇಶದ ಮರ್ಯಾದೆಯ ಪ್ರಕಾರ ಬಹಳವಾಗಿದ್ದವು.

IV ಅಷ್ಟು ವಿಶೇಷವಾಗಿಲ್ಲದಿದ್ದರೂ ಇಸ್ರಯೇಲರಾಜ್ಯದ ವಿನಾಶವನ್ನು ಬೇಗ ಬರ ಮಾಡಲಿಕ್ಕೆ ಒಂದೇ ಸಮಯದಲ್ಲಿ ಐಗುಪ್ತದ ಸಂಗಡ ಇಸ್ರಯೇಲ್ಯರ ದ್ವಿರಾಜ್ಯಕ್ಕೆ ಇದ್ದ ಸಂಬಂಧಗಳು ಸಹಾ ಕಾರಣವಾದವು. ಐಗುಪ್ತ ದೇಶದಿಂದ ಹೊರಟಂದಿನಿಂದ ಸೊಲೊಮೋನನ ಕಾಲದ ವರೆಗೂ ಇಸ್ರಯೇಲರಿಗೆ ಅಲ್ಲೇನೂ ಕೆಲಸವಿರಲಿಲ್ಲ. ಆದರೆ ಸೊಲೊಮೋನನು ಐಗುಪ್ತದ ರಾಜಪುತ್ರಿಯಾದ ಒಬ್ಬಳನ್ನು ಮದಿವೆ ಮಾಡಿ ಕೊಂಡನು, ಐಗುಪ್ತದ ರಾಜಕುಲವು ಬೇರೆಯಾಗಲು ಐಗುಪ್ತಕ್ಕೂ ಯೆಹೂದಕ್ಕೂ ಇದ್ದ ಸ್ನೇಹವು ತೀರಿ ಹೋಯಿತೆಂತ ಕಾಣುತ್ತದೆ. ಯೆರೊಬಾಮನು ಐಗುಪ್ತದ ಅರಸನಾದ ಸಿಸಾಕನ (ಸಿಸೊನ್ಕಿಸ್) ಹತ್ತರ ಓಡಿ ಹೋದನು; ಈತನು ರೆಹಬಾಮನ ಕಾಲದಲ್ಲಿ ಯೆರೂಸಲೇಮವನ್ನು ಲೂಟಿ ಮಾಡಿದನು. ಅಸ್ಸ್ಯದ ಮಹಾರಾಜ್ಯಗಳು ತಮ್ಮ ಅಧಿಕಾರವನ್ನು ಎಲ್ಲಾ ಕಡೆಯಲ್ಲಿ ವಿಸ್ತರಿಸುತ್ತವೆಂದು ಐಗುಪ್ತವು ಪ್ರತಿಯಾಗಿ ನಿಲ್ಲಲಿಕ್ಕೆ ಪ್ರಯತ್ನ ಮಾಡಿತು. ಆದರೆ ಆಗಲಿಲ್ಲ ಮತ್ತು ಇಸ್ರಯೇಲ್ ಯೆಹೂದ ರಾಜ್ಯಗಳು ಸಹಾ ಪ್ರವಾದಿಗಳು ಎಷ್ಟು ಖಂಡಿತವಾಗಿ ಬೆದರಿಸಿದರೂ ಕೇಳದೆ ಐಗುಪ್ತದ ಆಶ್ರಯವನ್ನು ಹುಡುಕಿದ್ದಾದರೆ, ತಾವು ಭದ್ರವಾಗಿ ನಿಲ್ಲ ಬಹುದೆಂದು ನೆನಸಿದವು (ಯೆಶಾ. ೩೦, ೩೧ ಮೊದಲಾದ ಸಂಧಿಗಳು). ಇಸ್ರಯೇಲಿ

ನ ಕಡೇ ಅರಸನಾದ ಹೊಸೇಯನು ಐಗುಪ್ತವನ್ನು ತಮ್ಮ ಕೈಕೆಳಗೆ ತಂದು ಕೊಂಡಂಥ ಎಥಿಯೋಪ್ಯದ ರಾಜಕುಲದ ಮೊದಲನೇ ಅರಸನಾದ (ಸೋಸಬಕೋ) ಎಂಬವನ ಸಂಗಡ ಒಡಂಬಡಿಕೆಯನ್ನು ಮಾಡುತ್ತಿರಲಾಗಿ ಅವನ ರಾಜ್ಯಕ್ಕೆ ಸಲ್ಮನಸ್ಸರನಿಂದ ವಿನಾಶವು ಪ್ರಾಪ್ತಿಯಾಯಿತು. ಸನ್ಹೇರಿಬನು ಐಗುಪ್ತಕ್ಕೆ ಯುದ್ಧಪ್ರಯಾಣ ಮಾಡಲಿಕ್ಕೆ ಹೊರಟು ಮಾರ್ಗದಲ್ಲಿ ಯೆರೂಸಲೇಮಕ್ಕೆ ಹಿಸ್ಕೀಯನಿರುವಾಗ್ಯೆ ಮುತ್ತಿಗೆ ಹಾಕಿದನು. ಆದರೆ ಎಥಿಯೋಪ್ಯ ರಾಜಕುಲದ ೩ನೇ ಅರಸನಾದ ತಿರ್ಹಕನು (ತರಕೋ) ದೊಡ್ಡ ಸೈನ್ಯವನ್ನು ತೆಗದು ಕೊಂಡು ಅವನಿಗೆದುರಾಗಿ ಬಂದದರಿಂದಲೂ ಅದೇ ಸಮಯದಲ್ಲಿ ಒಂದು ಮಹಾರೋಗವು ಅವನ ದಂಡು ಬಹಳವಾಗಿ ಕ್ಷೀಣ ಮಾಡಿರುವದರಿಂದಲೂ ಸನ್ಹೇರಿಬನು ತಿರಿಗಿ ಹೋಗ ಬೇಕಾಯಿತು. ಪ್ಸಮ್ಮೆಥಿಕನು ೬೯೦ ನೇ ವರ್ಷದಲ್ಲಿ ಶುಮಾರು ಸ್ಥಾಪಿಸಿದಂಥ ಐಗುಪ್ತದ ಹೊಸ ರಾಜಕುಲಕ್ಕೂ ಕಲ್ದೇಯರ ಲೋಕಬಲಕ್ಕೂ ಉಂಟಾದ ಝಗಳಗಳು ಹೆಚ್ಚು ವಿಶೇಷವಾಗಿದ್ದವು. ಪ್ಸಮ್ಮೆಥಿಕನ ಮಗನಾದ ನೇಕೋ ಪರಾಕ್ರಮಶಾಲಿಯಾಗಿದ್ದು ನಬೊಪೊಲಸ್ಸರನಿಗೆ ಪ್ರತಿಯಾಗಿ ಯುದ್ಧಕ್ಕೆ ನಡೆದು ಮೆಗಿದ್ದೊವಿನ ಹತ್ರ ೬೦೯ನೇ ವರ್ಷದಲ್ಲಿ ಯೆಹೂದಿಯದ ಅರಸನಾದ ಯೊಸೀಯನನ್ನು ಜೈಸಿದನು. ಆದರೆ ನೆಬುಕದ್ನೇಜರನು ಕಿರ್ಕೇಸ್ಯದ (ಕರ್ಕೆಮಿಷ್) ಹತ್ತರ ೬೦೬ನೇ ವರ್ಷದಲ್ಲಿ ಅವನನ್ನು ಪೂರ್ಣವಾಗಿ ಪರಾಜಯ ಮಾಡಿದ ತರುವಾಯ ಅವನು ಐಗುಪ್ತದಿಂದಲೇ ಸಂತೃಪ್ತನಾಗ ಬೇಕಾಯಿತು. ತರುವಾಯ ಬಂದ ಯೆಹೂದಿಯದ ಅರಸುಗಳು ತಿರಿಗಿ ತಿರಿಗಿ ಅಬಲವಾದ ಐಗುಪ್ತದ ಆಶ್ರಯವನ್ನು ಹುಡುಕಿದರು. ಈ ಪ್ರಕಾರವಾಗಿ ತಮ್ಮ ರಾಜ್ಯದ ವಿನಾಶವನ್ನು ಬೇಗ ಬಿಟ ಮಾಡಿದರು. ಐಗುಪ್ತವು ಹ್ಯಾಗೂ ಬಬಿಲೋನರಾಜ್ಯಕ್ಕಿಂತ ಹೆಚ್ಚು ಕಾಲ ಉಳಿಯಿತು. ಮತ್ತೆ ಕಂಬೂಸಿಯು ಅದನ್ನು ಪರ್ಸಿರಾಜ್ಯಕ್ಕೆ ಕೂಡಿಸಿದನು. (ಕ್ರಿ. ಮು. ೫೨೫.)

V ಈ ಕಾಲದ ಪರಿಶುದ್ಧ ಚರಿತ್ರದಲ್ಲಿ ಕಡೆಯಲ್ಲಿ ಕಂಡು ಬರುವ ಲೋಕರಾಜ್ಯವು ಮೇದ್ಯ ಪರ್ಸ್ಯವಾಗಿತ್ತು. ಮೇದ್ಯರು ಬಹು ಪೂರ್ವಕಾಲದಲ್ಲಿಯೇ ಅಸೂರ್ಯರ ಅಧಿಕಾರದ ಕೈಕೆಳಗೆ ಇದ್ದರು. ಆದರೆ ಪೂರ್ವ ಅಸೂರ್ಯರಾಜ್ಯವು ವಿನಾಶವಾಗುವಾಗ್ಯೆ ಅರ್ಬಾಕೆಯು ಶುಮಾರು ಎಂಟನೂರನೇ ವರ್ಷದಲ್ಲಿ ಮೇದ್ಯದ ಸ್ವತಂತ್ರವನ್ನು ಸ್ಥಾಪಿಸಿದನು. ಆದರೂ ಈ ಮೇದ್ಯರಾಜ್ಯವು ಸ್ವಲ್ಪ ಕಾಲದ ತರುವಾಯ ನವ ಅಸೂರ್ಯದ ಅಧಿಕಾರಕ್ಕೆ ಒಳಗಾಗ ಬೇಕಾಯಿತು. (ಹ್ಯಾಗಂದರೆ ೨ ಅರಸು. ೧೭, ೬ನೇ ಶ್ಲೋಕದ ಪ್ರಕಾರ ಸೆರೆಯೊಯ್ಯಲ್ಪಟ್ಟ ಇಸ್ರಯೇಲಿನವರಲ್ಲಿ ಒಂದು ಭಾಗವನ್ನು ಅಸೂರ್ಯರು ಮೇದ್ಯರ ಪಟ್ಟಣಗಳಲ್ಲಿ ಇರಲಿಕ್ಕೆ ಹಂಚಿ ಕೊ

ಡುತ್ತಾರೆ. ೭೨೧ನೇ ವರ್ಷ) ತರುವಾಯ ದೆಯೊಕೆಯು ಅದಕ್ಕೆ ಹೆಚ್ಚು ಕಾಲ ಉಳಿಯುವಂಥಾ ಸ್ವತಂತ್ರವನ್ನು ಸ್ಥಾಪಿಸಿದನು. ಈತನ ಮಗನಾದ ಫ್ರಾವೊರ್ತೆಯು ಪರ್ಸಿಯರನ್ನು ಸಹಾ ಮೇದ್ಯರ ಮೇಲಧಿಕಾರಕ್ಕೆ ಒಳಗಾಗ ಮಾಡಿದನು. ಈತನನ್ನು ಹಿಂಬಾಲಿಸಿದ ಕಿಯಕ್ಸರೆಯು ಕಲ್ದೇಯದ ನಬೊಪೊಲಸ್ಸರನ ಸಹಿತವಾಗಿ ಅಸೂರ್ಯರಾಜ್ಯವನ್ನು ಹಾಳು ಮಾಡಿದನು. (೬೨೫.) ಇವನ ತರುವಾಯ ಪಟ್ಟವೇರಿದವನು ಅಸ್ತ್ಯೇಯಗೇಯು. ಇಲ್ಲಿಂದ ಗ್ರೇಕರ ವರ್ತಮಾನಗಳಲ್ಲಿ ಹೆಚ್ಚು ಕಡಿಮೆ ಉಂಟು. ಕ್ಸೆನಪೊನನು ಬರೆದ ಕಿರೊಪೈದಯ ಎಂಬ ಪುಸ್ತಕದಲ್ಲಿ ಅಸ್ತ್ಯೇಯಗೇಯ ಮೇಲೆ ಅವನ ಮಗನಾದ ೨ನೇ ಕಿಯಕ್ಸರೆಯು ಪಟ್ಟವೇರಿದನೆಂದೂ (ಪರ್ಸಿವೊಳ ಅರಸನಾದ ಕಂಬೂಸಗೆ ಅಸ್ತ್ಯೇಯಗೇಯ ಮಗಳಾದ ಮಂದನೆಯಲ್ಲಿ ಹುಟ್ಟಿದಂಥವನೂ) ೨ನೇ ಕಿಯಕ್ಸರೆಯ ಸೋದರಳಿಯನೂ ಹೆಣ್ಣು ಕೊಟ್ಟ ಅಳಿಯನೂ ಆಗಿರುವ ಕೂರನು (ಕೊರೆಷ್) ಕುಂದಿ ಹೋಗುವ ಕಲ್ದೇಯರ ಅಧಿಕಾರಕ್ಕೆ ಪ್ರತಿಕೂಲವಾಗಿ ಯುದ್ಧ ಮಾಡುವದಕ್ಕೆ ಮೇದ್ಯಸೈನ್ಯದ ಮುಖ್ಯಾಧಿಪತಿಯಾಗಿ ಕಲ್ದೇಯರ ಸೈನ್ಯವನ್ನು ಹಿಮ್ಮೆಟ್ಟಿಸಿ ಬಬಿಲೋನವನ್ನು ಜೈಸಿ ಬಬಿಲೋನದ ರಾಜ್ಯವನ್ನು (೫೩೮) ಹಾಳು ಮಾಡಿದನೆಂದೂ ೨ನೇ ಕಿಯಕ್ಸರೆಯು ಗಂಡುಮಗು ಇಲ್ಲದೆ ಸಾಯಲು ಕೂರನು ಒಟ್ಟಾದ ಮೇದ್ಯಪರ್ಸಿ ರಾಜ್ಯವನ್ನು ಒಬ್ಬನೇ ಆಳಿದನೆಂದೂ (೫೩೬) ಕಂಡು ಬರುತ್ತದೆ. ಹೆರೊದೋತನು ಹೇಳುವದು ಬೇರೆ. ಇವನು ಬರಿಯುವ ಪ್ರಕಾರ ಅಸ್ತ್ಯೇಯಗೇಯು ಕಡೇ ಮೇದ್ಯ ಅರಸನಾಗಿದ್ದನು. ಮತ್ತು ಕೂರನು ತನ್ನನ್ನು ಮಗುವಾಗಿರುವಾಗ ದುಃಶಕುನದ ಕನಸಿಗಾಗಿ ಹೊರಗೆ ಇಡಿಸಿದ ಅಜ್ಜನಿಗೆ ಪ್ರತಿಕೂಲವಾಗಿ ಕಾಟಕಾಯಿ ಮಾಡಿ ಅವನ ಸಿಂಹಾಸನವನ್ನೂ ಜೀವವನ್ನೂ ತೆಕ್ಕೊಂಡಿರ ಬೇಕು. ಆದರೆ ಹೆರೊದೋತನ ವರ್ತಮಾನದಲ್ಲಿ ಸಹಾ ಕಟ್ಟುಕಥೆಯ ವರ್ಣನೆಯು ಉಂಟೆಂದು ಕಾಣುತ್ತದೆ. ಕ್ತೇಸಿಯನ ವರ್ತಮಾನವು ಹೆಚ್ಚು ನಂಬಿಕೆಯುಳ್ಳದ್ದೆಂದು ಕಾಣುತ್ತದೆ. ಈತನು ಪರ್ಸೀ ವರ್ತಮಾನಲೇಖನಗಳಿಂದ ತನ್ನ ವರ್ತಮಾನವನ್ನು ಪಡಕೊಂಡನು. ಕೂರನು ಅಸ್ತ್ಯೇಯಾಗೆಗೆ ಯಾವದೊಂದು ಸಂಬಂಧವಾದರೂ ಇಲ್ಲದವನಾಗಿದ್ದು ಈತನನ್ನು ಜೈಸಿ (೫೫೯) ಅವನ ರಾಜ್ಯವನ್ನು ತನ್ನ ವಶ ಮಾಡಿ ಕೊಂಡು ಅವನ ಮಗಳಾದ ಅಮಿತಿಯನ್ನು ಮದಿವೆ ಮಾಡಿ ಕೊಂಡನು.

| ಪರ್ಸಿಅರಸುಗಳು | ಅವರು ಸತ್ತ ವರುಷಗಳು |
|---|---|
| ೧ ಕೂರನು | ೫೨೯ |
| ೨ ಕಂಬೂಸಿಯು | ೫೨೨ |
| ೩ ಪ್ಸೈದೊಸ್ಮಿರ್ದೆಯು | ೫೨೧ |

ಕಾಲದಲ್ಲಿ ಪರ್ಸಿರಾಜ್ಯವು ಮಕೆದೊನ್ಯದ ಅಲೆಕ್ಸಂದ್ರನಿಂದ ವಿನಾಶವಾಯಿತು. ಈತನು ಸತ್ತದ್ದು ೩೩೦.



## § 76. ರಾಜ್ಯದ ವಿಭಾಗ

### ಯೆರಾಬಾಮ್, ರೆಹಬಾಮ್

೧) ೧ನೇ ಅರಸುಗಳ ೧೨, ೧—೨೪. (೨ನೇ ದಿನಚರ್ಯೆಗಳ ೧೦—೧೨ನೇ ಸಂಧಿಗಳು) ಸೊಲೊಮೋನನು ಸತ್ತ ಮೇಲೆ, (೯೭೫) ಹತ್ತು ಗೋತ್ರಗಳು ಬಲವುಳ್ಳ ಯೆಫ್ರಾಯಿಮ್ ಗೋತ್ರದಿಂದ ನಡಿಸಲ್ಪಟ್ಟು, ನ್ಯಾಯಾಧಿಪತಿಗಳ ಕಾಲ ದಂದಿನಿಂದ ಯೆಹೂದ ಗೋತ್ರದ ನಾಯಕತ್ವಕ್ಕೆ ಮತ್ಸರದಿಂದ ಪ್ರತಿಕೂಲವಾಗಿದ್ದು, ಈಗ ಸಹಾ ಶಿಖೇಮಿಗೆ ಕೂಡಿ ಬಂದು, ರೆಹಬಾಮನ ಹತ್ತರ ಕಂದಾಯ ಕಡಿಮೆ ಮಾಡ ಬೇಕೆಂದು ಅಪೇಕ್ಷಿಸಿದರು. ರೆಹಬಾಮನು ತನ್ನ ಹತ್ತರ ಇರುವ ಯೌವನಸ್ಥರ ಬುದ್ಧಿಯಿಲ್ಲದ ಆಲೋಚನೆಗೆ ಕಿವಿ ಕೊಟ್ಟು, ಜನರ ಅರಿಕೆಗೆ ಬಹಳ ವಾಗಿ ತುಚ್ಛೀಕರಿಸುವ ಅಪಹಾಸ್ಯದಿಂದ ಉತ್ತರ ಕೊಟ್ಟನು. ಇವರು ಆತನು ಕಂಬಾಯ ಕೂಡಿಸ ಕಳುಹಿಸಿದ ಅದೋರಾಮನನ್ನು ಕಲ್ಲೆಸೆದು, ಐಗುಪ್ತದಿಂದ ತಿರಿಗಿ ಬಂದ ಯೆರಾಬಾಮನನ್ನು ಅರಸನಾಗ ಮಾಡುತ್ತಾರೆ. ರೆಹಬಾಮನು ಯೆರೂಸಲೇಮಕ್ಕೆ ಓಡಿ ಹೋಗಿ, ಸೈನ್ಯ ಸಿದ್ಧ ಮಾಡುತ್ತಾನೆ. ಆದರೆ ಪ್ರವಾದಿಯಾದ

ಶೆಮಾಯನು ಸಹೋದರಯುದ್ಧ ಮಾಡ ಬಾರದೆಂದು ಹೇಳುತ್ತಾನೆ. ರೆಹಬಾಮನಿಗೆ ಯೆಹೂದ್ಯರೂ ಬೆನ್ಯಮೀನ್ಯರಲ್ಲಿ ಒಂದು ಪಾಲೂ ನಂಬಿಕಸ್ತರಾಗಿರುತ್ತಾರೆ. ಇವರ ಹೊರ್ತು, ದೇವಾಲಯದ ಅನ್ಯೋನ್ಯವನ್ನು ಬಿಡಲೊಲ್ಲದವರಾದ ದೇವಾಧಿಕಾರಕ್ಕೆ ಅನುಕೂಲವಾದ ಮನೋಭಾವನೆ ಉಳ್ಳ ಅನೇಕ ಇಸ್ರಯೇಲ್ಯರೂ, ಅದೇ ಪ್ರಕಾರ ಎಲ್ಲಾ ಯಾಜಕರೂ ಲೇವ್ಯರೂ, ಯೆಹೂದಕ್ಕೆ ವಾಸಾಂತ್ರ ಮಾಡುತ್ತಾರೆ. ಆದರೆ ರೆಹಬಾಮನು ಸಹಾ ೧೭ ವರ್ಷ ಆಳುವ ಸಮಯದಲ್ಲಿ ಕರ್ತನಿಗೆ ಹಿತವಾದದ್ದನ್ನು ಮಾಡಲಿಲ್ಲ. ಅವನು ಸಹಾ ಪರ್ವತಾರಾಧನೆಯನ್ನು ಆರಂಭಿಸಿದನು. ಆದದರಿಂದ ದೇವರು ಅವನನ್ನು ಐಗುಪ್ತದ ಅರಸನಾದ (ಸಿಸೊನ್ಕಿಸ್) ಸಿಸಾಕನಿಂದ ತಗ್ಗಿಸಿದನು. ಹ್ಯಾಗಂದರೆ ಈತನು ಯೆರೂಸಲೇಮಕ್ಕೆ ಬಂದು ದೇವಾಲಯವನ್ನೂ ಅರಮನೆಯನ್ನೂ ಸುಲು ಕೊಂಡನು.

೨) ೧ನೇ ಅರಸುಗಳ ೧೨, ೨೫—೧೪ ಸಂಧಿ. ಯೆರೊಬಾಮನು ಶಿಖೇಮನ್ನು ರಾಜಧಾನಿಯಾಗ ಮಾಡಿದನು. ರಾಜ್ಯವಿಭಾಗವನ್ನೂ ಮತವಿಭಾಗವನ್ನೂ ಬಲಪಡಿಸಲಿಕ್ಕಾಗಿ ಅದೈವಿಕವಾದ ಆಲೋಚನೆಯಲ್ಲಿ ತನ್ನ ರಾಜ್ಯದ ಉತ್ತರ ಪ್ರಾಂತ್ಯದಲ್ಲಿಯೂ ದಕ್ಷಿಣ ಪ್ರಾಂತ್ಯದಲ್ಲಿಯೂ ದಾನಿನಲ್ಲಿಯೂ ಬೆಥೇಲಿನಲ್ಲಿಯೂ ಎರಡು ಬಂಗಾರ ಕರುಗಳನ್ನು ಸ್ಥಾಪಿಸಿ ಹಬ್ಬಗಳನ್ನು ಒಂದು ತಿಂಗಳ ಮೇಲೆ ಆಗ ಬೇಕೆಂದು ನಿಶ್ಚೈಸಿ ಲೇವ್ಯರಲ್ಲದ ಯಾಜಕರನ್ನು ನೇಮಿಸಿ ತಾನೇ ಪ್ರಧಾನಯಾಜಕನಾಗಿ ಕೆಲಸ ನಡಿಸಿ ಪರ್ವತಾರಾಧನೆಯನ್ನು ಹೆಚ್ಚಿಸಿದನು. ಒಂದು ಸಾರಿ ಅವನು ಬೆಥೇಲಿನಲ್ಲಿ ಬಲಿಯರ್ಪಿಸುತ್ತಾ ಇದ್ದನು. ಆ ಸಮಯದಲ್ಲಿ ಒಬ್ಬ ಪ್ರವಾದಿಯು ದಾವಿದನ ಮನೆಯವನಾದ ಯೋಸೀಯನೆಂಬ ಹೆಸರುಳ್ಳವನಿಂದ ಈ ಬಲಿಪೀಠವು ಅಶುದ್ಧ ಮಾಡಲ್ಪಡುವದೆಂದು ಸಾರಿದನು. ಬಲಿಪೀಠವು ಒಡದು ಹೋಗುತ್ತದೆ. ಪ್ರವಾದಿಯನ್ನು ಹಿಡಿಯ ಅಪ್ಪಣೆ ಕೊಡುವದಕ್ಕಾಗಿ ಚಾಚಿದ ಅರಸನ ಕೈ ಬತ್ತಿ ಹೋಗುತ್ತದೆ. ಆದರೂ ಪ್ರವಾದಿಯ ಪ್ರಾರ್ಥನೆಯಿಂದ ತಿರಿಗಿ ಗುಣವಾಗುತ್ತದೆ. ಆದರೆ ಪ್ರವಾದಿಯು ಸಹಾ ಒಬ್ಬ ಮುದುಕನಾದ ಪ್ರವಾದಿಯ ಸುಳ್ಳಿಗೆ ಕಿವಿ ಕೊಟ್ಟು ಅವನ ಮನೆಯಲ್ಲಿ ಉಂಡದರಿಂದ ಅವನನ್ನು ಸಿಂಹವು ಶೀಳಿ ಕೊಂದು ಹಾಕುತ್ತದೆ. ಯಾಕಂದರೆ ದೈವಹೀನವಾದ ದೇಶಕ್ಕೆ ಸಾಕ್ಷಿಗಾಗಿ ಅಲ್ಲಿ ರೊಟ್ಟಿ ತಿನ್ನ ಬಾರದೆಂದೂ ನೀರು ಕುಡಿಯ ಬಾರದೆಂದೂ ದೇವರು ಅವನಿಗೆ ಅಪ್ಪಣೆ ಕೊಟ್ಟಿದ್ದನು. ಯೆರೊಬಾಮನ ಮಗನು ರೋಗದಲ್ಲಿ ಬಿದ್ದಿರಲಾಗಿ ಅವನು ತನ್ನ ಹೆಂಡತಿಯನ್ನು ಕುರುಡನಾಗಿದ್ದ ಪ್ರವಾದಿಯಾದ ಅಹಿಯನ ಹತ್ರ ಕಳುಹಿಸಿದನು. ಈತನು ದಿವ್ಯ

ಪ್ರಕಟಣೆಯಿಂದ ಅವಳನ್ನು ತಿಳಿದು ಸ್ವಸ್ಥವಿಲ್ಲದ ಮಗನು ಸಾಯುವನೆಂದು ಮಾತ್ರವಲ್ಲ, ಅವಳ ಮನೆಯು ನಿರ್ಮೂಲವಾಗುವದೆಂದು ಸಹಾ ಸಾರಿ ಹೇಳಿದನು.



## § 77. ಯೆಹೂದದಲ್ಲಿ ಅಬೀಯ ಮತ್ತು ಆಸಾ
## ಇಸ್ರಯೇಲದಲ್ಲಿ ಯೆರೊಬಾಮನ ಮೇಲೆ ಪಟ್ಟವೇರಿದವರು

೧) ೧ನೇ ಅರಸುಗಳ ೧೫, ೧—೨೪. (೨ನೇ ದಿನಚರ್ಯಗಳ ೧೩—೧೬ ಸಂಧಿಗಳು.) ರೆಹಬಾಮನ ತರುವಾಯ ಪಟ್ಟವೇರಿದ ಅವನ ಮಗನಾದ ಅಬೀಯನು ಯೌವನಸ್ಥನೂ ಧೈರ್ಯವುಳ್ಳ ಅರಸನೂ ಆಗಿದ್ದು ರಾಜ್ಯಕ್ಕಾಗಿಯಾದರೂ ದೇವರಾಜ್ಯಕ್ಕೆ ಅನುಸಾರವಾಗಿ ಕಾಣಿಸಿ ಕೊಂಡನು. ಈ ಭಾವನೆಯಿಂದ ಯೆರೊಬಾಮನ ಹತ್ರ ಯುದ್ಧ ಮಾಡುವಾಗ್ಯೆ ಶತ್ರುಸೈನ್ಯಕ್ಕೆ ಬಹು ಚಾತುರ್ಯವುಳ್ಳ ಪ್ರಸಂಗವನ್ನು ಮಾಡಿ (೧ನೇ ದಿನಚರ್ಯಗಳ ೧೩ ಸಂ.) ದೊಡ್ಡ ಜಯವನ್ನು ಹೊಂದಿದನು. ಮೂರು ವರ್ಷದ ತರುವಾಯ ಈತನ ಮಗನಾದ ಆಸ ಪಟ್ಟವನ್ನೇರಿದನು. ಈತನ ಹೃದಯವು ಕರ್ತನ ಮುಂದೆ ನೆಟ್ಟಗಾಗಿತ್ತು. ಇವನು ಅನ್ಯದೈವಾರಾಧನೆಗಳನ್ನು ತೆಗದು ಹಾಕಿ ಕೆಲವು ಪಟ್ಟಣಗಳನ್ನು ಛದ್ರ ಮಾಡಿ, ಬಲವುಳ್ಳ ಯುದ್ಧ ಸೈನ್ಯಗಳನ್ನು ಮಾಡಿ ಕೊಂಡನು. ೧೦ ಲಕ್ಷದ ಮಹಾ ಸೈನ್ಯವನ್ನು ತೆಕ್ಕೊಂಡು ಬಂದ ಕೂಷ ಅಥವಾ ಐಥಿಯೋಪ್ಯದ ಅರಸನಾದ ಸೇರಹನನ್ನು ಪ್ರಾರ್ಥನೆಯ ಬಲದಿಂದ ಹಿಮ್ಮೆಟ್ಟಿಸಿದನು. ಆದರೆ ಇಸ್ರಯೇಲನ ಅರಸನಾದ ಬಾಯೇಸನು ಸುರಿಯದ ಅರಸನಾದ ಮೊದಲನೇ ಬೆನ್ಹದಾದನ ಸಂಗಡ ಅವನಿಗೆ ವಿರೋಧವಾಗಿ ಒಡಂಬಡಿಕೆ ಮಾಡಲು ಅವನು ಮಾಂಸವನ್ನು ತನ್ನ ಆಧಾರ ಮಾಡಿ ಕೊಂಡು ಬೆನ್ಹದಾದನು ತನ್ನ ಆಯುಧಗಳನ್ನು ಯೆಹೂದ್ಯದ ಕಡೆಗೆ ಅಲ್ಲ ಇಸ್ರಯೇಲದ ಕಡೆಗೆ ತಿರುಗಿಸ ಬೇಕೆಂದು ಇವನಿಗೆ ಕಾಣಿಕೆಗಳನ್ನು ಕೊಟ್ಟನು. ಇದಕ್ಕಾಗಿ ಕರ್ತನು ಆಸನಿಗೆ ರೋಗದ ಕಾಲುಗಳನ್ನು ಕೊಟ್ಟು ಶಿಕ್ಷಿಸುತ್ತಾನೆ. ಆದರೆ ಇವನು ರೋಗದಲ್ಲಿ ಕರ್ತನನ್ನಲ್ಲ ವೈದ್ಯರನ್ನು ಹುಡುಕಿದನು.

೨) ೧ನೇ ಅರಸುಗಳ ೧೫, ೨೫ನೇ ವಚನದಿಂದ ೧೬ನೇ ಸಂಧಿಯ ವರೆಗೆ. ಯೆರೊಬಾಮನ ಮೇಲೆ ಅವನ ಮಗನಾದ ನಾದಾಬನು ಪಟ್ಟವನ್ನೇರಿದನು. ಆದರೆ ಈತನು ೨ ವರ್ಷ ಆಳುವಷ್ಟರೊಳಗೆ ರಾಜ್ಯಾಪಹಾರಿಯಾದ ಬಯೇಸನು ಅವನನ್ನು ಎಲ್ಲಾ ಮನೆತನದೊಡನೆ ಕೊಂದು ಹಾಕುತ್ತಾನೆ. ಈತನು ರಾಜಧಾನಿಯ

ನ್ನು ತಿರ್ಜದಲ್ಲಿ ಮಾಡಿ ಸ್ವಲ್ಪ ಕಡಿಮೆ ೨೪ ವರ್ಷ ಆಳುತ್ತಾನೆ. ಅವನ ಮಗನಾದ
ಏಲನು ಆಳಿದ ೨ನೇ ವರ್ಷದಲ್ಲಿಯೇ ಅವನನ್ನು ಎಲ್ಲಾ ಮನೆತನದಾಡನೆ ಸವಾ
ರರ ಸೈನ್ಯಾಧಿಪತಿಯಾದ ಸಿಮ್ರಿಯು ಕೊಂದು ಹಾಕುತ್ತಾನೆ. ಆದರೆ ಇವನು ಸ
ಹಾ ಪಟ್ಟವನ್ನು ಏಳೇ ದಿವಸ ಅನುಭವಿಸಿದನು. ಸೈನ್ಯವು ಸೈನ್ಯಾಧಿಪತಿಯಾದ
ಒಮ್ರಿಯನ್ನು ಅರಸನಾಗ ಮಾಡಿದರೆಂದು ವರ್ತಮಾನ ಬಂದಾಗ ಸಿಮ್ರಿಯು
ತನ್ನನ್ನು ತಿರ್ಜದಲ್ಲಿರುವ ಅರಮನೆಯೊಡನೆ ಸುಟ್ಟು ಬಿಡುತ್ತಾನೆ. ಒಮ್ರಿಯು ಪ್ರ
ತಿರಾಜನಾದ ತಿಬ್ನಿಯನ್ನು ಜೈಸಿ ಸಮಾರ್ಯವನ್ನು ಕಟ್ಟಿಸಿದನು. ಇದು ಅಂದಿನಿಂ
ದ ರಾಜಧಾನಿಯಾಯಿತು. ಇವನು ೧೨ ವರ್ಷ ಆಳಿದನು. ಇವನ ಮಗನಾದ
ಅಹಾಬನು ಸಿದೋನದ (ಯಿತೋಬಾಲ) ಯೆತ್ಬಾಳನ ಮಗಳಾದ ಇಸಬೇಲಳ
ನ್ನು ಮದಿವೆ ಮಾಡಿಕೊಂಡನು. (ಈ ಯೆತ್ಬಾಳನು ಮೊದಲು ಅಸ್ತಾರ್ತೆಯ ಯಾ
ಜಕನೂ ಮತ್ತೆ ರಾಜಘಾತಕನೂ ರಾಜ್ಯಾಪಹಾರಿಯೂ ಆಗಿದ್ದನು. ಇವನ ಮೊಮ್ಮ
ಗಳು ದೀದೋ.) ಇವಳ ಅಧಿಕಾರದಿಂದ ಬಾಳ್ ಮತ್ತು ಅಸ್ತಾರ್ತೆ ಎಂಬ ದೇವತೆಗ
ಳ ಆರಾಧನೆಯು ಇಸ್ರಯೇಲದಲ್ಲಿ ಸಂಸ್ಥಾನದ ಮತವಾಯಿತು.



## § 78. ತಿಸ್ಬೀಯನಾದ ಎಲೀಯನು

೧) ೧ನೇ ಅರಸುಗಳ ೧೭, ೧೮ ಸಂಧಿಗಳು. ತಿಸ್ಬೀಯನಾದ ಎಲೀಯನು
ಸರ್ವತ್ರಾಣದ ವಾಕ್ಯವನ್ನು ತಂದು, ದೀರ್ಘಕಾಲ ಅನಾವೃಷ್ಟಿ ಇರುವದೆಂದು ಅ
ಹಾಬನಿಗೆ ಸಾರಿ ಹೇಳುತ್ತಾನೆ. ಅವನು ಹೇಳಿದ್ದು — ನಾನು ಮುಂದೆ ನಿಲ್ಲುವಂ
ಥ ಇಸ್ರಯೇಲನ ದೇವರಾದ ಕರ್ತನ ಜೀವದಾಣೆ — ಈ ವರ್ಷಗಳಲ್ಲಿ ನಾನು ಹೇಳಿ
ದ ಹೊರ್ತು ಮಂಜಾಗಲಿ ಮಳೆಯಾಗಲಿ ಬಾರದು! ಕ್ರಿತ್ ಹಳ್ಳದ ಹತ್ತರ ಕಾಗೆಗ
ಳು ಅವನಿಗೆ ಆಹಾರ ತರುತ್ತವೆ. ಹಳ್ಳವು ಆರಿ ಹೋದಾಗ ಪ್ಸಾನಿಕ್ಯದಲ್ಲಿರುವ
(ಸರೆಪ್ತ) ಜರ್ಫ್ಪಾತಿಗೆ ಒಬ್ಬ ವಿಧವೆಯ ಬಳಿಗೆ ಹೋಗುತ್ತಾನೆ; ಇವಳಿಗೆ ಮರಿಗೆಯ
ಲ್ಲಿರುವ ಹಿಟ್ಟನ್ನೂ ಗಡಿಗೆಯಲ್ಲಿರುವ ಎಣ್ಣೆಯನ್ನೂ, ಆಶ್ಚರ್ಯಕರವಾಗಿ ಹೆಚ್ಚಿಸಿ
ದ್ದಲ್ಲದೆ, ಅವಳ ಮಗನನ್ನು ಸಹಾ ಸತ್ತವರೊಳಗಿಂದ ಎಬ್ಬಿಸುತ್ತಾನೆ. ೩ ವರ್ಷ
ಮಳೆಯಿಲ್ಲದ ಮೇಲೆ ಕರ್ತನು ಮಳೆ ಸುರಿಸಲಿಕ್ಕೆ ಮನಸ್ಸು ಮಾಡುತ್ತಾನೆ. ಎಲೀ
ಯನು ಆಹಾಬನಿಗೆ ಇದನ್ನು ತಿಳಿಸಲಿಕ್ಕೆ ಹೋಗುತ್ತಾನೆ. ಭಕ್ತಿಯುಳ್ಳ ಒಬಾದ್ಯನಿಂದ

ಈ ಸಮಾಚಾರ ಕೇಳಿದವನಾಗಿ, ಅಹಾಬನು ಅವನಿಗೆ ಎದುರಾಗಿ ಹೋಗುತ್ತಾನೆ. ಕರ್ಮೆಲ ಪರ್ವತದಲ್ಲಿ ಜನಾಂಗವೆಲ್ಲಾ ಕೂಡಿ ಬರುತ್ತದೆ; ಪ್ರವಾದಿಯು ಅವರಿಗೆ ಹೇಳಿದ್ದು—ನೀವು ಯಾಕೆ ಎರಡು ಕಡೆಯಲ್ಲಿ ಕುಂಟುತ್ತೀರಿ? ಯೆಹೋವನು ದೇವರಾದರೆ, ಅವನಿಗೆ ನಡಕೊಳ್ಳಿರಿ. ಬಾಳನು ದೇವರಾದರೆ, ಅವನಿಗೆ ನಡಕೊಳ್ಳಿರಿ. ಹೀಗೆ ಹೇಳಿದ ತರುವಾಯ ಅರಸನ ಮುಂದೆಯೂ ಜನಾಂಗದ ಮುಂದೆಯೂ, ಬಾಳನ ೪೫೦ ಯಾಜಕರಿಗೆ ಪ್ರತಿಕೂಲವಾಗಿ ಯೆಹೋವನೇ ದೇವರೆಂದು, ಸಾಧಿಸಿ ತೋರಿಸುತ್ತಾನೆ. ಆಗಲು ಜನಾಂಗವು ಬಾಳನ ಯಾಜಕರನ್ನೆಲ್ಲಾ ಕೀಸೋನ್ ಹಳ್ಳದ ಹತ್ರ ಕೊಂದು ಹಾಕುತ್ತದೆ. ತರುವಾಯ ಎಲೀಯನು ಆಕಾಶದಲ್ಲಿ ಮೋಡವಿಲ್ಲದಿದ್ದರೂ, ಮಳೆಯು ಸಮೀಪವಾಯಿತೆಂದು ಸಾರುತ್ತಾನೆ. ಅವನು ವಾಕ್ಯವನ್ನು ಹೇಳಿದ್ದಾನೆ. ಆದರೆ ೬ ಸಾರಿ ತನ್ನ ಆಳನ್ನು ಕರ್ಮೆಲದ ತುದಿಗೆ ಕಳುಹಿಸಿದರೂ, ಎಲ್ಲಿಯೂ ಒಂದು ಸಣ್ಣ ಮೋಡ ಸಹಾ ಕಂಡು ಬರಲಿಲ್ಲ. ಕಡೆಯಲ್ಲಿ ೭ನೇ ಸಾರಿ ಮನುಷ್ಯನ ಕೈಯಷ್ಟಿರುವ ಒಂದು ಸಣ್ಣ ಮೋಡವು ಸಮುದ್ರದಿಂದ ಎದ್ದು ಬರುತ್ತದೆ ಎಂಬ ವರ್ತಮಾನ ತರುತ್ತಾನೆ. ಮತ್ತು ಈಗ ಆಕಾಶವೆಲ್ಲಾ ಮೋಡಗಳಿಂದ ಬೇಗ ಕಪ್ಪಾಯಿತು; ಅಹಾಬನು ಬೇಗ ಮನೆಗೆ ಹೋಗುತ್ತಾನೆ. ಮತ್ತು ಎಲೀಯನು ಅವನ ರಥದ ಮುಂದೆ ಓಡುತ್ತಾನೆ.

೨) ೧ನೇ ಅರಸುಗಳ ೧೯ನೇ ಸಂಧಿ. ಮುಯ್ಯಿಗೆಮುಯ್ಯಿ ಕೊಡ ಬೇಕೆಂದು, ಆರ್ಭಟಿಸುವ ಈಸಬೇಲಳಿಗೆ ಭಯ ಪಟ್ಟು, ಪ್ರವಾದಿಯು ಯೆಹೂದದ ಅರಣ್ಯಕ್ಕೆ ಓಡುತ್ತಾನೆ; ಒಬ್ಬ ದೇವದೂತನು ಆಹಾರ ಕೊಟ್ಟು ಅವನನ್ನು ಆದರಿಸುತ್ತಾನೆ; ಈ ಆಹಾರದ ಬಲದಿಂದ ೪೦ ದಿವಸ ರಾತ್ರಿ ಹಗಲು ಹೋರೆಬ್ ಪರ್ಯಂತ್ರಕ್ಕೆ ನಡದು ಹೋಗುತ್ತಾನೆ. ಇಲ್ಲಿ ಕುಂದಿದ ಹೃದಯವುಳ್ಳವನಾಗಿ ತನ್ನ ದುಃಖವನ್ನು ಅರಿಕೆ ಮಾಡುತ್ತಾನೆ. ಪರ್ವತಗಳನ್ನು ಸೀಳಿ, ಬಂಡೆಕಲ್ಲುಗಳನ್ನು ಒಡದು ಬಿಟ್ಟ ಪ್ರಚಂಡ ವಾಯುವಿನಲ್ಲಿಯೂ ಭೂಕಂಪದಲ್ಲಿಯೂ ಬೆಂಕಿಯಲ್ಲಿಯೂ ಕರ್ತನು ಇಲ್ಲ. ಆದರೆ ಬೆಂಕಿಯ ಮೇಲೆ ಶಾಂತವಾದ ಮೃದುಶಬ್ದ ಉಂಟಾಯಿತು. ಮತ್ತು ಎಲೀಯನು ತನ್ನ ಮೋರೆ ಮುಚ್ಚಿ ಕೊಂಡನು. ಯಾಕಂದರೆ ದೇವರು ಸಮೀಪಿಸುತ್ತಾನೆಂದು ತಿಳುಕೊಂಡನು. ಕರ್ತನು ಅವನು ಅರಿಕೆ ಮಾಡಿದ ದುಃಖದ ಮಾತುಗಳಿಗೆ ಉತ್ತರವಾಗಿ ಇಸ್ರಯೇಲನಲ್ಲಿ ಬಾಳನಿಗೆ ತಮ್ಮ ಮೊಣಕಾಲು ಬಾಗ್ಗಿಸದಂಥಾ ತಮ್ಮ ಬಾಯಿ ಅವನನ್ನು ಮುದ್ದಿಡದಂಥ ೭ ಸಾವಿರ ಮಂದಿ ಉಳಿದಿದ್ದಾರೆಂದು ಹೇಳಿ ಧೈರ್ಯಹೀನವಾದ ಇಸ್ರಯೇಲನಿಗೆ ಮುಯ್ಯಿಗೆಮುಯ್ಯಿ ಕೊಡಲಿಕ್ಕಾಗಿ ಹಸಯೇಲನನ್ನು ಸುರಿಯದ ಅರಸನಾಗಿಯೂ ಅಹಾಬನ ಮನೆಗೆ ಮುಯ್ಯಿಗೆಮುಯ್ಯಿ ಕೊಡಲಿಕ್ಕಾಗಿ

ಯೇಹು ವನ್ನು ಇಸ್ರಾಯೇಲಿನ ಅರಸನಾಗಿಯೂ ಸ್ವಂತ ಕೆಲಸವನ್ನು ಮುಂದೆ ನಡಿಸಲಿಕ್ಕಾಗಿ ಎಲೀಶನನ್ನು ಪ್ರವಾದಿಯಾಗಿಯೂ ಅಭಿಷೇಕಿಸ ಬೇಕೆಂದು ಅಪ್ಪಣೆ ಕೊಡುತ್ತಾನೆ. ಅವನು ಅಲ್ಲಿಂದ ಹೋಗುವಾಗ್ಯೆ ಎಲೀಶನನ್ನು ನೇಗಿಲ ಹಿಂದೆ ಕಂಡನು. ಅವನು ಎಲೀಶನ ಮೇಲೆ ತನ್ನ ಮೇಲಂಗಿ ಹಾಕಿದನು. ಮತ್ತು ಎಲೀಶನು ತಂದೆ ತಾಯಿಗಳನ್ನು ಮೊದಲು ಮುದ್ದಿಟ್ಟ ಮೇಲೆ ಎಲೀಯನ ಹಿಂದೆ ಹೋದನು.

ಪರಿಶಿಷ್ಟ. ಇಸ್ರಾಯೇಲನು, ಈಗ ಕಡದು ಬಿಟ್ಟ ಒಡಂಬಡಿಕೆಯನ್ನು ಮಾಡಿದ ಹೋರೆಬ್‌ಪರ್ವತ ಮುಂದೆ ನಿಂತು, ಎಲೀಯನು ಬಿದ್ದು ಹೋದ ಜನಾಂಗಕ್ಕೆ ಪ್ರತಿಯಾಗಿ ಕರ್ತನಿಗೆ ಅರಿಕೆ ಮಾಡುತ್ತಾನೆ. ಎಲೀಯನು ೨ನೇ ಮೋಶೆಯಂತೆ ಇದ್ದನು. ಆದರೆ ಮೋಶೆಯು ಹೋರೆಬ್‌ಪರ್ವತದಲ್ಲಿ ಕರ್ತನು ಕೋಪಿಸಿದಾಗ್ಯೂ ಬಿದ್ದು ಹೋದ ಜನಾಂಗಕ್ಕಾಗಿ ಎಡೆಬಿಡದೆ ಪ್ರಾರ್ಥನೆ ಮಾಡುತ್ತಾ ಇದ್ದನು. (§ ೩೫, ೧.) ಇಲ್ಲಿ ಎಲೀಯನು ಕೋಪಿಸುತ್ತಾನೆ. ಮತ್ತು ಕರ್ತನು ನುಂಗಿ ಬಿಡುವಂಥ ಅವನ ಆಸಕ್ತಿಯ ಅಗ್ನಿಯನ್ನು ಶಾಂತ ಪಡಿಸ ಬೇಕು.



## § 79. ಇಸ್ರಾಯೇಲಿನಲ್ಲಿ ಅಹಾಬನು

೧) ೧ ಅರಸುಗಳ ೨೦ ಸಂಧಿ. ಸುರಿಯದ ಅರಸನಾದ ೨ನೇ ಬೆನ್ಹದಾದನು ಅಹಾಬನ ಮೇಲೆ ಯುದ್ಧ ಮಾಡುತ್ತಾನೆ. ಆದರೆ ಒಬ್ಬ ಪ್ರವಾದಿಯು ಸಾರಿ ಹೇಳಿದ ಪ್ರಕಾರ ತಹಶಿಲ್‌ದಾರರ ೨೩೨ ಆಳುಗಳು ಕುಡಿಯುತ್ತಿದ್ದ ೩೨ ಒಡಂಬಡಿಕೆಯವರೊಡನೆ ಮತ್ತನಾಗಿದ್ದ ಬೆನ್ಹದಾದನನ್ನು ಓಡಿಸಿ ಬಿಡುತ್ತಾರೆ. ಮರುವರ್ಷದಲ್ಲಿ ಬೆನ್ಹದಾದನು ಯೆಹೋವನು ತಗ್ಗುಗಳ ದೇವರಲ್ಲ ಗುಡ್ಡಗಳ ದೇವರೆಂದು ನೆನಸಿ ತಿರಿಗಿ ಬರುತ್ತಾನೆ. ಆದರೆ ಯೆಸ್ರೆಯೇಲ್ ಬೈಲಿನಲ್ಲಿ ಸಹಾ ಅಪಜಯ ಪಟ್ಟನು. ಮತ್ತು ಅವನನ್ನು ಕಟ್ಟಿ ಕೊಂಡು ಹೋದರು. ಆದರೆ ತಬ್ಲಿಯಾದ ಅಹಾಬನು ಅವನಿಗೆ ನ್ಯಾಯಶಿಕ್ಷೆ ಕೊಡದೆ ಸಹೋದರನೆಂದು ಕರಿಯಲಾಗಿ ಒಬ್ಬ ಪ್ರವಾದಿಯು ಬೇಕಾಗಿ ಘಾಯ ತಕ್ಕೊಂಡವನಾಗಿ ಅಹಾಬನಿಗೆ ನಿನ್ನ ಜೀವವು ಅವನ ಜೀವಕ್ಕಾಗಿ ಎಂದು ಸಾರಿ ಹೇಳುತ್ತಾನೆ.

೨) ೧ ಅರಸುಗಳ ೨೧—೨೨, ೪೦. ಯೆಸ್ರಯೇಲ್ಯನಾದ ನಾಬೋತನು ೪ ಮೋಶೆ. ೩೬, ೭ನೇ ಶ್ಲೋಕಕ್ಕೆ ಅನುಸಾರವಾಗಿ ಅರಸನಾದ ಅಹಾಬನಿಗೆ, ತನ್ನ

ದ್ರಾಕ್ಷೀ ತೋಟವನ್ನು ಕೊಡಲೊಲ್ಲೆನೆಂದು ಹೇಳಿದನು. ಅಹಾಬನು ಅದಕ್ಕಾಗಿ ಕರ್ಕರೆ ಪಟ್ಟು, ಚಿಂತಾಕ್ರಾಂತನಾಗುತ್ತಾನೆ. ಆದರೆ ಈಸಬೇಲಳು ಅವನನ್ನು ಆದರಿಸ ಬಲ್ಲಳು. ಅವಳ ಹೇಳಿಕೆಯ ಪ್ರಕಾರ ಯೆಸ್ರೆಯೇಲದ ಹಿರಿಯರು ಬಡ ನಾಬೋತನು ದೇವದೂಷಕನೂ ರಾಜದೂಷಕನೂ ಆಗಿರುತ್ತಾನೆಂದು ಹುಸಿ ಕೊಂಡ ಸಾಕ್ಷಿಗಳಿಂದ ಹೇಳಿಸಿ, ಅವನನ್ನು ಕಲ್ಲೆಸೆದರು. ಕರ್ತನ ವಾಕ್ಯವು ಎಲೀಯನ ಮುಖಾಂತರ ಪ್ರಶೀಕಾರವನ್ನು ಸಾರುತ್ತದೆ. ನಾಬೋತನ ರಕ್ತವನ್ನು ನೆಕ್ಕಿದ ಸ್ಥಳದಲ್ಲಿಯೇ ಅಹಾಬನ ರಕ್ತವನ್ನು ನಾಯಿಗಳು ನೆಕ್ಕ ಬೇಕು. ಯೆರೊಬಾಮನ ಮನೆಯ ಹಾಗೆಯೇ, ಇವನ ಮನೆ ಸಹಾ ನಿರ್ಮೂಲವಾಗ ಬೇಕು. ಮತ್ತು ಈಸಬೇಲಳನ್ನು ಯೆಸ್ರಯೇಲದ ಗೋಡೆಗಳ ಹತ್ತರ ನಾಯಿಗಳು ತಿಂದು ಬಿಡ ಬೇಕು. ಅಹಾಬನು ಅನುತಾಪ ಪಡುತ್ತಾನೆ. ಹೃದಯಪೂರ್ವಕವಾದ ಅನುತಾಪವಲ್ಲ ಸರಿ; ಆದರೂ ಅವನು ತನ್ನನ್ನು ಕರ್ತನ ಮುಂದೆ ಹ್ಯಾಗಾದರೂ ಬಾಗ್ಗಿಸಿ ಕೊಂಡನೆಂಬದರಿಂದ ಅವನ ಮನೆಯು ನಿರ್ಮೂಲವಾಗುವಂಥಾದ್ದು, ಮಗನ ಕಾಲದಲ್ಲಿ ಸಂಭವಿಸ ಬೇಕೆಂದಾಯಿತು. ತರುವಾಯ ಒಡಂಬಡಿಕೆ ಕೈಕೊಳ್ಳದಂಥಾ ಬೆನ್ಹದಾದನು ಕೊಡದೆ ಇದ್ದ ಗಿಲ್ಯಾದದ ರಾಮೋಥನ್ನು ಕೈವಶ ಮಾಡಿ ಕೊಳ್ಳುವದಕ್ಕಾಗಿ ಯೆಹೂದದ ಭಕ್ತಿಯುಳ್ಳ ಅರಸನಾದ ಯಾ ೯ ಸ ಪಾ ತ ನ ಸಂಗಡ ಒಡಂಬಡಿಕೆ ಮಾಡುತ್ತಾನೆ. ಇಬ್ಬರೂ ಸತ್ಯ ಪ್ರವಾದಿಯಾದ ಮಿೞಖ ನ ಮಾತು ಕೇಳದೆ, ಕರ್ತನು ಕಳುಹಿಸಿದಂಥಾ ಸುಳ್ಳು ಆತ್ಮದಿಂದ ತುಂಬಿ ಇರುವ ಅಹಾಬನ ೪೦೦ ಪ್ರವಾದಿಗಳಿಗೆ ಕಿವಿ ಕೊಟ್ಟು ತಪ್ಪಿ ಹೋಗುತ್ತಾರೆ. ಅಹಾಬನು ಪರವಸ್ತ್ರ ಹಾಕಿ ಕೊಂಡರೂ ಶುಮಾರಿಗೆ ಬಂದಂಥಾ ಬಾಣದಿಂದ ಬಿದ್ದು ಹೋಗುತ್ತಾನೆ. ಮತ್ತು ಸಮಾರ್ಯದ ಕೆರೆಯ ಹತ್ತರ ಅವನ ರಥವನ್ನು ತೊಳೆಯುವಾಗ್ಯೆ ನಾಯಿಗಳು ಅವನ ರಕ್ತವನ್ನು ನೆಕ್ಕಿದವು.



## § 80. ಯೆಹೂದದಲ್ಲಿ ಯೋಸಫಾತ್ ಇಸ್ರಯೇಲದಲ್ಲಿ ಅಹಸ್ಯ ಮತ್ತು ಯೋರಾಮ್

೧) ೧ ಅರಸುಗಳ ೨೨, ೪೧ ಇತ್ಯಾದಿ. (೨ ದಿನಚರ್ಯಗಳ ೧೭—೨೦.) ಭಕ್ತಿಯುಳ್ಳ ಆಸನ ಮಗನಾದ ಭಕ್ತಿಯುಳ್ಳ ಯಾ ೯ ಸ ಫಾ ತ ನ ನ್ನು ಕರ್ತನು ಬಹಳವಾಗಿ ಆಶೀರ್ವದಿಸಿದನು. ಯಾಕಂದರೆ ಅವನು ಪರ್ವತಾರಾಧನೆಗಳನ್ನೂ ತೋ

ಮಗಳನ್ನೂ ತೆಗದು ಹಾಕಿದನು. ಲೇವ್ಯರನ್ನೂ ಯಾಜಕರನ್ನೂ ನೇಮಪುಸ್ತಕದಾಡನೆ ದೇಶದಲ್ಲೆಲ್ಲಾ ಕಳುಹಿಸಿದನು. ಮತ್ತೆ ತಾನೇ ದೇಶವನ್ನೆಲ್ಲಾ ನಾಡಿ ಕೊಂಡು ನ್ಯಾಯಕಾರ್ಯವನ್ನು ನೇಮಿಸಿದನು. ಯೋಸೇಫನ ಘಾಯವನ್ನು ಸಹಾ (ಆಮೋಸ್. ೬, ೬.) ಅಂದರೆ ಯೆಹೂದ ಇಸ್ರಯೇಲ ಗೋತ್ರಗಳು ತಮ್ಮೊಳಗೆ ವಿಭಾಗವಾಗಿ ಶತ್ರುತ್ವದಲ್ಲಿರುವಂಥಾದ್ದನ್ನು ಉಭಯಪಕ್ಷದವರಿಗೂ ಹಿತವಾದಂಥಾದರಲ್ಲಿ ಅನ್ಯೋನ್ಯ ಮಾಡಿ ತನ್ನಿಂದ ಆಗುವ ಮಟ್ಟಿಗೂ ಗುಣ ಮಾಡ ಬೇಕೆಂದು ಪ್ರಯತ್ನ ಮಾಡಿದರು. ಆದರೆ ಯಾವ ಒಡಂಬಡಿಕೆಯಲ್ಲಿ ಕರ್ತನು ಮೂರನೆಯವನಾಗಿರುತ್ತಾನೋ ಆ ಒಡಂಬಡಿಕೆಯ ಅನ್ಯೋನ್ಯ ಮಾತ್ರವೇ ಸ್ಥಿರವೂ ಆಶೀರ್ವಾದ ಉಳ್ಳದ್ದೂ ಆಗಿರುವದೆಂಬದನ್ನು ಮರತನು. ಹ್ಯಾಗಂದರೆ: ಅಹಾಬನ ಮನೆಯ ಮೇಲೆ ದೇವರ ಶಾಪ ಇತ್ತು. ಆದದರಿಂದ ಅವನ ಸಂಗಡ ಮಾಡಿ ಕೊಂಡ ಸಂಬಂಧವು ಭಕ್ತಿಯುಳ್ಳ ಈ ಅರಸನಿಗೆ ನಷ್ಟವನ್ನು ಮಾತ್ರವೇ ತಂತು. ರಾಮೋಥಕ್ಕೆ ಮುತ್ತಿಗೆ ಹಾಕಿದಾಗ ಇವನೇ ಅಹಾಬನೆಂದು ಶತ್ರುಗಳು ನೆನಸಿದದರಿಂದ ಸಾಯಲಿಕ್ಕೆ ಸ್ವಲ್ಪ ತಪ್ಪಿತು. ಅಹಾಬನ ಮಗನಾಗಿಯೂ ಪಟ್ಟವೇರಿದವನಾಗಿಯೂ ಇರುವ ಅಹಸ್ಯನ ಸಂಗಡ ನಿಶ್ಚೈಸಿ ಹಡಗಗಳನ್ನು ಕಳುಹಿಸಲಾಗಿ ಬಿರುಘಾಳಿಯು ಎಲ್ಲಾ ಹಡಗಗಳನ್ನು ಒಡದು ಬಿಡುತ್ತದೆ. ಆದರೆ ತನ್ನ ಮಗನಾದ ಯೋರಾಮನಿಗೆ ಇಸಬೇಲಳ ಮಗಳಾದ ಅಥಾಲ್ಯಳನ್ನು ಮದಿವೆ ಮಾಡಿ ಕೊಂಡು ತಂದದ್ದೇ ಅವನ ಮನೆಗೆ ಅತ್ಯಂತ ವಿನಾಶಕರವಾಗಿತ್ತು.

ಪರಿಶಿಷ್ಟ. ಈ ನೆಂಟಸ್ತಿಗೆಯಿಂದ ೨ ಮನೆತನಗಳಲ್ಲಿ ಉಂಟಾದ ಸಂಬಂಧವು ಇದೇ:




೨) ೨ ಅರಸುಗಳ ೧. ಸಂಧಿ. ಅಹಾಬನ ಮೇಲೆ ಮಗನಾದ ಅಹಾಸ್ಯನು ಅರಸನಾದನು. ಈತನು ಸ್ವಸ್ಥವಿಲ್ಲದಿರುವಾಗ್ಯೆ ಯೆಹೋವನ ಹತ್ರ ಅಲ್ಲ, ಫಿಲಿಷ್ಟ್ಯರ ಪಟ್ಟವಾದ ಎಕ್ರೋನದ ದೇವರಾಗಿರುವ ಬಾಳ್ಜೆಬೂಬನ ಹತ್ರ ಕೇಳಿದನು. ಯೆಲೀಯನು ದೂತರಿಗೆದುರಾಗಿ ಹೇಳಿದ್ದು ನೀವು ಎಕ್ರೋನದ ದೇವರಾದ ಬಾಳ್ಜೆ

ಬೂಬನ ಹತ್ರ ಕೇಳುವದಕ್ಕೆ ಹೋಗುವ ಹಾಗೆ ಇಸ್ರಯೇಲಿನಲ್ಲಿ ದೇವರಾಬ್ಬನು ಇಲ್ಲವೋ? ಆದದರಿಂದ ಹಾಸಿಗೆಯಿಂದ ಏಳದೆ ನೀನು ಸಾಯ ಬೇಕೆಂದು ಕರ್ತನು ಹೇಳುತ್ತಾನೆ. ದೂತರು ಅವನನ್ನು ತಿಳಿಯದೆ ಇದ್ದರೂ ಅಹಸ್ಯನು ದಾರಗುಚರ್ಮ ವೂ ಚರ್ಮದ ಬಿಗಿಪಟ್ಟಿಯೂ ಇದ್ದಂಥ ಮನುಷ್ಯನನ್ನು ಬಲ್ಲವನಾಗಿ ಅವನನ್ನು ಹಿಡಿಯಲಿಕ್ಕೆ ಅಪ್ಪಣೆ ಕೊಡುತ್ತಾನೆ. ೨ಸಾರಿ ೫೦ ಜನರ ನಾಯಕನು ಅವರೇ ಹೇಳಿದ ಪ್ರಕಾರ ದೇವರ ಮನುಷ್ಯನನ್ನು ಹಿಡಿಯಲಿಕ್ಕೆ ಬಂದಾಗ ಆಕಾಶದಿಂದ ಬೆಂ ಕಿಯು ಅವರನ್ನು ನುಂಗಿ ಬಿಡುತ್ತದೆ. ೩ನೆಯವನು ದೈನ್ಯಭಾವದಿಂದ ಅವನ ಮುಂ ದೆ ಬಂದಾಗ ಯೆಲೀಯನು ಈತನ ಸಂಗಡ ಹೋಗಿ ಅರಸನಿಗೆ ಮರಣನಿರ್ಣಯವ ನ್ನು ಮುಖದಲ್ಲಿ ಹೇಳಿ ಬಿಡುತ್ತಾನೆ.

ಪರಿಶಿಷ್ಟ. ೧. ಬಾಳ್ ಜೆಬೂಬ ಅಂದರೆ ನೊಣಗಳ ಬಾಳನು. ಈ ದೇವರು ಪೂರ್ವ ದೇಶಗಳಲ್ಲಿ ಬಹಳ ಉಪದ್ರಕರವಾಗಿರುವಂಥ ನೊಣಗಳ ಉಪಹತಿಯನ್ನು ನಿವಾರಿಸುತ್ತಾನೆಂದು ನೆನಸಿದರು. ಮತ್ತೆ ಯೆಹೂದ್ಯರು ಈ ಹೆಸರನ್ನು ಸತಾನನಿಗೆ ಇಟ್ಟರು. ಒಂದು ಅಕ್ಷರ ಬೇರೆ ಮಾಡಿ ಬೆಳ್‌ಜೆಬೂಬ ಹೋಗಿ ಬೆಳ್‌ಜೇಬೂಲ್ ಆ ಯಿತು, ಇದರ ಅರ್ಥವೇನಂದರೆ ಮಲದ ಬಾಲನು.

ಪರಿಶಿಷ್ಟ. ೨. ಯೆಲೀಯನು ದೇವರ ಪ್ರವಾದಿಯೂ ಸೇವಕನೂ ಆಗಿರುತ್ತಾನೆಂ ದು ಅವನನ್ನು ಬೈದು ಹೀನೈಸಿದವರ ಮೇಲೆ ಬೆಂಕಿಮಳೆ ಬರ ಮಾಡಿದನು. ಆದರೆ ಯೇಸುವಿನ ಶಿಷ್ಯರು ಅದೇ ತರದ ಸಂಗತಿಯಲ್ಲಿ (ಲೂಕ. ೯, ೫೪ ೫೬.) ಅದೇ ಪ್ರ ಕಾರ ಮಾಡಲಿಕ್ಕೆ ಇದ್ದಾಗ ಕರ್ತನು ಅವರಿಗೆ ಅಡ್ಡ ಮಾಡಿ ನೀವು ಯಾವ ಆತ್ಮದ ಮಕ್ಕಳೆಂದು ಅರಿಯಿರಾ ಎಂದು ಹೇಳ ಬೇಕಾಯಿತು. ಎಲೀಯನು ಕ್ಷಮೆ ತಿಳಿಯದಂ ಥಾ ನೇಮದ ರಾಯಭಾರಿಯಾಗಿದ್ದನು. ಆದರೆ ಕ್ರಿಸ್ತನ ಶಿಷ್ಯರು ಪಾಪಪರಿಹಾರವ ನ್ನು ಪ್ರಸಂಗಿಸುವಂಥ ಸುವಾರ್ತೆಯ ರಾಯಭಾರಿಗಳಾಗಿದ್ದರು. ದೇವರ ರಾಜ್ಯದ ಶತ್ರುಗಳನ್ನು ಹಳೇ ಒಡಂಬಡಿಕೆಯಲ್ಲಿ ಹೆದರಿಸಿ ಶಿಕ್ಷಿಸುವಂಥ ಕಠಿಣತ್ವದಿಂದ ಭ ಯ ಪಡಿಸಿ ಸುಮ್ಮನಿರ ಮಾಡುವದು ಅವಶ್ಯವಾಗಿತ್ತು. ಆದರೆ ಹೊಸ ಒಡಂಬಡಿಕೆ ಯಲ್ಲಿ ಕ್ಷಮಿಸುವ ಪ್ರೀತಿಯಿಂದ ಪರಾಜಯ ಪಡಿಸಿ ಹ್ಯಾಗಾದರೂ ಗೆಲ್ಲುವದು ಅವಶ್ಯ ವಾಗಿರುತ್ತದೆ.

೩) ೨ನೇ ಅರಸುಗಳ ೩. ಸಂಧಿ. ಅಹಸ್ಯನ ತರುವಾಯ ಸಹೋದರನಾ ದ ಯಾೇರಾಮ್ ಅರಸನಾದನು. ಈತನು ಮಕ್ಕಳು ತಂದೆಯನ್ನು ಪ್ರೀತಿ ಮಾಡು ವ ಹಾಗೆ ಎಲೀಶನನ್ನು ಪ್ರೀತಿ ಮಾಡಿದನೆಂದು ಹೇಳ ಬಹುದು. ಆದರೂ ಯೆ

ರಾಬಾಮನ ಪಾಪಗಳನ್ನು ಬಿಡಲಿಲ್ಲ. ಅವನು ಬಿದ್ದು ಹೋದ ಮೋವಾಬ್ಯರ ಮೇಲೆ ಯುದ್ಧ ಮಾಡಲಿಕ್ಕಾಗಿ ಯೋಸಫಾತನ ಸಂಗಡಲೂ ಎದೋಮಿನ ಅರಸನ ಸಂಗಡಲೂ ಒಡಂಬಡಿಕೆ ಮಾಡುತ್ತಾನೆ. ಆರಿ ಹೋದ ಅರಣ್ಯದಲ್ಲಿ ಎಲೀಶನು ಯೋಸಫಾತನಿಗಾಗಿ ನೀರು ಉಂಟು ಮಾಡುತ್ತಾನೆ. ಮುಂಬೆಳಗು ಅದರಲ್ಲಿ ಹೊಳವಿದದರಿಂದ ಶತ್ರುಗಳು ಹುಚ್ಚು ಕುರುಡರಾಗಿ ಅದು ರಕ್ತವೆಂದು ಒಡಂಬಡಿಕೆ ಮಾಡಿ ಕೊಂಡು ಬಂದವರೊಳಗೆ ಲಡಾಯಿಯಾಗಿ ನಾಶವಾದರೆಂದು ನೆನಸಿದರು. ಈ ಆಲೋಚನೆಯಲ್ಲಿ ಛದ್ರವಾಗಿರುತ್ತೇವೆಂದು ನೆನಸುವಾಗ ಪೂರ್ಣವಾಗಿ ಅಪಜಯ ಪಟ್ಟರು.



## § 81. ಯೆಲೀಯನ ದಿವಾರೋಹಣವು, ಎಲೀಶನು

೧) ೨ನೇ ಅರಸುಗಳ ೨ ಸಂಧಿ. ಯೆಲೀಯನು ಎಲೀಶನ ಸಂಗಡ ಯೆರಿಖೋವಿಗೆ ಪ್ರಯಾಣ ಮಾಡುತ್ತಿರುವಾಗ ಈತನು ಏನಾದರೂ ವಿಶೇಷವಾದದ್ದು ಸಂಭವಿಸುವದೆಂದು ಎಲೀಯನನ್ನು ಬಿಟ್ಟು ಹೋಗುವದಿಲ್ಲ. ಎಲೀಯನ ಅಂಗಿಯಿಂದ ಅವರಿಗೆ ಯೋರ್ದಾನದಲ್ಲಿ ಮಾರ್ಗವಾಗುತ್ತದೆ. ಎಲೀಶನು ಯಜಮಾನನು ಬಿಟ್ಟು ಹೋಗುವಾಗ್ಯೆ ನಿನ್ನ ಆತ್ಮದ ೨ ಅಂಶಗಳು ನನಗಾಗ ಬೇಕೆಂದು ಅವನ ಹತ್ರ ಬೇಡಿ ಕೊಳ್ಳುತ್ತಾನೆ. ಆಗಲು ಬೆಂಕಿಯ ರಥವೂ ಕುದುರೆಗಳೂ ಬಂದವು. ಎಲೀಯನು ಬಿರುಘಾಳಿಯಲ್ಲಿ ಆಕಾಶಕ್ಕೆ ಏರಿ ಹೋದನು. ಆಗ್ಯೆ ಎಲೀಶನು ಅವನಿಗೆ ನನ್ನ ತಂದೆಯೇ ನನ್ನ ತಂದೆಯೇ ಇಸ್ರಯೇಲಿನ ರಥವೂ ಸವಾರರೂ ಆಗಿರುವವನೇ ಎಂದು ಕೂಗುತ್ತಾನೆ. ಕರ್ತನ ಆತ್ಮವು ಅವನನ್ನು ಎಲ್ಲಿಯಾದರೂ ತಕ್ಕೊಂಡು ಹೋಯಿತೆಂದು ನೆನಸುವಂಥ ಯೆರಿಖೋವಿನ ಪ್ರವಾದಿಗಳ ಮಕ್ಕಳು ಅವನನ್ನು ಹುಡುಕಲಿಕ್ಕಾಗಿ ೫೦ ಜನರನ್ನು ಕಳುಹಿಸ ಬೇಕೆಂದು ಹೇಳಿದಾಗ ಯೆಲೀಶನು ಮನಸ್ಸಿಲ್ಲದವನಾಗಿಯೇ ಅಪ್ಪಣೆ ಕೊಟ್ಟನು. ಮತ್ತು ಅವರ ಪ್ರಯತ್ನಗಳು ಸಹಾ ನಿರರ್ಥಕವಾದದ್ದು ಸಹಜವಾಗಿದೆ.

ಪರಿಶಿಷ್ಟ. ಎಲೀಯನು ೨ನೇ ಮೋಶೆಯು, ಅವನು ದೇವರಾಜ್ಯದ ಸ್ಥಾಪಕನು, ಇವನು ನವೀಕಾರಕನು. (ಆದ ಕಾರಣ ಇವನು ಆತನೊಡನೆ ದೇವರಾಜ್ಯದ ಪರಿಪೂರಕನ ಮುಂದೆ ರೂಪಾಂತ್ರದ ಪರ್ವತದಲ್ಲಿ ಕಾಣಿಸಿ ಕೊಂಡದ್ದು ಮತ್ಥಾ. ೧೭, ೩.

ಎಲೀಯನು ಬಲವುಳ್ಳ ಮಾನಸಾಂತರ ಪ್ರಸಂಗಿಯಾಗಿ ಸ್ನಾನಿಕ ಯೋಹಾನನಿಗೆ ಮುಂಗುರ್ತಾಗಿದ್ದನು. (ಲೂಕ. ೧, ೧೭. ಮತ್ತಾ. ೧೧, ೧೪.)

೨) ೨ ಅರಸುಗಳ ೪—೬, ೪—೭. ಕೆಳಗೆ ಬಿದ್ದ ಎಲೀಯನ ಅಂಗಿಯಿಂದ ಎಲೀಶನಿಗೆ ತಿರಿಗಿ ಯೊರ್ದಾನದಲ್ಲಿ ಆರಿದ ಮಾರ್ಗವಾಗುತ್ತದೆ. ಯೆರಿಖೋವಿನಲ್ಲಿ ಉಪ್ಪಿನಿಂದ ಕಹಿಯಾದ ಒಸರು ಶೀಯಾಗ ಮಾಡುತ್ತಾನೆ. ಅಪಧೈವಾರಾಧನೆಯ ಬೇಥೆಲದ ಹತ್ರ ಬೋಳ್ಕಂಡೆಯೇ ಮೇಲೆ ಏರು (ಎಲೀಯನ ಹಾಗೆ ಮೇಲಕ್ಕೆ ಏರು?) ಎಂದು ಕುಚೋದ್ಯ ಮಾಡಿ, ಅವನಿಗೆ ಕೂಗಿದ ೪೨ಹುಡುಗರನ್ನು ೨ ಕರಡಿಗಳು ಶೀಳಿ ಬಿಡುತ್ತವೆ. ಸಾಲವುಳ್ಳ ಒಬ್ಬ ಪ್ರವಾದಿವಿಧವೆ ಎಲೀಯನಂತೆ ಎಣ್ಣೆಯ ಗಡಿಗೆಯ ಆಶ್ಚರ್ಯದಿಂದ ಸಹಾಯ ಮಾಡುತ್ತಾನೆ. ಆತಿಥ್ಯ ಮಾಡಿದ ಸುನಮಿತ್ಯಳಿಗೆ ಮಗನನ್ನು ವಾಗ್ದತ್ತ ಮಾಡಿ, ಮತ್ತೆ ಮರಣದಿಂದ ಎಬ್ಬಿಸುತ್ತಾನೆ. ಬರಗಾಲದ ಸಮಯದಲ್ಲಿ ಪ್ರವಾದಿಶಿಷ್ಯರಿಗೆ ಒಂದು ಹಿಡಿಹಿಟ್ಟಿನಿಂದ ಕಾಡುಸೌತೆಕಾಯಿ ತಿನ್ನಲಿಕ್ಕೆ ಯೋಗ್ಯ ಮಾಡುತ್ತಾನೆ. ಮತ್ತು ೨೦ ಜವೆರೊಟ್ಟಿಗಳಿಂದ ಬಹಳ ಜನರಿಗೆ ತೃಪ್ತಿ ಮಾಡುತ್ತಾನೆ. ಬೆನ್ಹದಾದನು ಸೈನ್ಯಾಧಿಪತಿಯಾದ ನಯಮಾನನನ್ನು ಕುಷ್ಠರೋಗದಿಂದ ಗುಣ ಮಾಡಿ ಕಪಟಿಯಾದ ತನ್ನ ಸೇವಕ ಗೆಹಾಸಿಗೆ ಆತನ ಕುಷ್ಠರೋಗದಿಂದ ಶಿಕ್ಷೆ ಕೊಡುತ್ತಾನೆ. ಪ್ರವಾದಿಶಿಷ್ಯನೊಬ್ಬನು ಎರವು ತಂದಂಥ ಕೊಡ್ಲಿಯು ಯೊರ್ದಾನದಲ್ಲಿ ಬಿದ್ದಾಗ ಆಶ್ಚರ್ಯದಿಂದ ಅದನ್ನು ಮೇಲೆ ಬರ ಮಾಡುತ್ತಾನೆ.

೩) ೨ ಅರಸುಗಳ ೬, ೮ನೇ ವಚನದಿಂದ ೭ನೇ ಸಂಧಿ ವರೆಗೆ. ತರುವಾಯ ಯೋರಾಮನಿಗೆ ೨ ನೇ ಬೆನ್ಹದಾದನು ಅಂತರಂಗದಲ್ಲಿ ಮಾಡಿದ ಆಲೋಚನೆಗಳನ್ನು ತಿಳಿಸುತ್ತಾನೆ. ಮತ್ತು ಈತನು ಅವನ್ನ ಹಿಡಿಯಲಿಕ್ಕಾಗಿ ದೊತಾನಕ್ಕೆ ಸೈನ್ಯವನ್ನು ಕಳುಹಿಸುತ್ತಾನೆ. ಎಲೀಶನ ಸೇವಕನು ಭಯಭ್ರಷ್ಟನಾದಾಗ ಅವನು ಇವನನ್ನು ಆದರಿಸಿ ಹೇಳಿದ್ದು: "ಭಯ ಪಡ ಬೇಡ ಯಾಕಂದರೆ ಅವರ ಸಂಗಡಲಿರುವವರಿಗಿಂತ ನಮ್ಮ ಸಂಗಡಲಿರುವವರು ಹೆಚ್ಚು" ಅವನ ಪ್ರಾರ್ಥನೆಗಾಗಿ ಕರ್ತನು ಆಳಿನ ಕಣ್ಣುಗಳನ್ನು ತೆರಿಯುತ್ತಾನೆ. ಮತ್ತು ಇಗೋ ಪರ್ವತವೆಲ್ಲಾ ಎಲೀಶನ ಸುತ್ತಲು ಬೆಂಕಿಯ ರಥಗಳಿಂದಲೂ ಕುದುರೆಗಳಿಂದಲೂ ತುಂಬಿತ್ತು. ಎಲೀಶನ ಪ್ರಾರ್ಥನೆಯಿಂದ ಶತ್ರುಗಳು ಕುರುಡರಾಗುತ್ತಾರೆ. ತರುವಾಯ ಅವನು ತಾನೇ ಅವರನ್ನು ಸಮಾರ್ಯಕ್ಕೆ ಕರ ಕೊಂಡು ಹೋಗಿ ಗುಣ ಮಾಡಿ ಕಾಪಾಡಿ ತೃಪ್ತಿ ಪಡಿಸಿ ತಿರಿಗಿ ಕಳುಹಿಸುತ್ತಾನೆ. ಬೆನ್ಹದಾದನು ಸ್ವಲ್ಪ ಕಾಲದೊಳಗೆ ಸಮಾರ್ಯಕ್ಕೆ ಮುತ್ತಿಗೆ ಹಾಕುತ್ತಾನೆ. ಮತ್ತು

ಆಹಾರವು ಇಲ್ಲದೆ ಹೋಗಿರಲಾಗಿ, ಒಬ್ಬ ತಾಯಿಯು ತನ್ನ ಸ್ವಂತ ಮಗುವನ್ನು ಕೊಂದು ತಿಂದಳು. ಇದರಿಂದ ಅರಸನು ಅತಿ ಕ್ರೋಧವುಳ್ಳವನಾಗಿ ಮುತ್ತಿಗೆಗೆ ಕಾರಣವು ಎಲೀಶನೇ ಎಂದು ಅವನನ್ನು ಕೊಲ್ಲ ಬೇಕೆಂತ, ಕೋಪದಲ್ಲಿ ಪ್ರಮಾಣ ಮಾಡಿದನು; ಕೂಡಲೇ ಅವನನ್ನು ತರಲಿಕ್ಕೆ ಒಬ್ಬ ದೂತನನ್ನು ಕಳುಹಿಸುತ್ತಾನೆ. ಆದರೂ ತಾನು ಮಾಡಿದ್ದು ಉತ್ತ್ವೇಗವಾಯಿತೆಂದು ತಾನೇ ಅವನ ಹಿಂದೆ ಹೋದನು. ಎಲೀಶನು ಮರುದಿವಸವೇ ಎಲ್ಲಾ ಎಂದೂ ಕೇಳದಷ್ಟು ಅಗ್ಗವಾಗಿರುವದೆಂದು ಅವನಿಗೆ ತಿಳಿಸುತ್ತಾನೆ. ಅರಸನು ಒಬ್ಬ ಸವಾರನ ಕೈಗೆ ಒರಗಿ ಕೊಂಡಿದ್ದನು. ಇವನು ಹೇಳಿದ್ದು: ಕರ್ತನು ಆಕಾಶಕ್ಕೆ ಕಿಟಿಕಿಗಳನ್ನು ಮಾಡಿದರೂ ಇದು ಆಗುವದು ಹ್ಯಾಗೆ ಅದಕ್ಕೆ ಎಲೀಶನು ಪ್ರತ್ಯುತ್ತರ ಹೇಳಿದ್ದು: ನಿನ್ನ ಕಣ್ಣುಗಳಿಂದ ಅದನ್ನು ನೋಡುವಿ. ಆದರೆ ಅದನ್ನು ಉಣ್ಣಲಾರಿ — ರಾತ್ರಿಸಮಯದಲ್ಲಿ ಕುದುರೆಗಳೂ ರಥಗಳೂ ಒಂಟೆಗಳೂ ಇತ್ಯಾದಿಗಳ ದೊಡ್ಡ ಘೋಷವನ್ನು ಕೇಳಿ ಸುರಿಯರು ಹೆದರಿ ಕೊಂಡು ಐಗುಪ್ತದ ಸೈನ್ಯವು ತಮ್ಮ ಮೇಲೆ ಬರುತ್ತದೆಂದು ನೆನಸಿ ಬಹುವೇಗದಿಂದ ಪಲಾಯನ ಮಾಡುವಾಗ್ಯೆ ತಮಗೆ ಇದ್ದದ್ದನ್ನೆಲ್ಲಾ ಬಿಟ್ಟು ಹೋಗುತ್ತಾರೆ. ನಾಲ್ಕು ಮಂದಿ ಕುಷ್ಟರೋಗಿಗಳು ದಂಡು ಬರಿದಾಗಿರುತ್ತದೆಂದು ಮರುದಿವಸ ಪಟ್ಟಣದಲ್ಲಿ ಹೇಳುತ್ತಾರೆ. ಇಲ್ಲಿ ಎಲ್ಲಾ ಅಮಿತವಾಗಿ ಸಿಕ್ಕಿದದರಿಂದ ಆಹಾರವು ಅತ್ಯಂತ ಅಗ್ಗವಾಗುತ್ತದೆ. ಆದರೆ ಅವಿಶ್ವಾಸಿಯಾದ ಸವಾರನು ದ್ವಾರದಲ್ಲಿ ಇರಿಕಿಸಲ್ಪಟ್ಟು ಸಾಯುತ್ತಾನೆ.

೪) ೨ ಅರಸು. ೮, ೧—೧೫. ತರುವಾಯ ಎಲೀಶನು ಬೆನ್ಹದಾದನ ಸೇವಕನಾದ ಹಸಯೇಲನನ್ನು ಅಭಿಷೇಕಿಸುವದಕ್ಕಾಗಿ ಕರ್ತನು ಎಲೀಯನಿಗೆ ಅಪ್ಪಣೆ ಕೊಟ್ಟ ಪ್ರಕಾರ ದಮಸ್ಕಕ್ಕೆ ಹೋಗುತ್ತಾನೆ. ಈತನು ಅವನಿಗೆ ಎದುರಾಗಿ ಬರುತ್ತಾನೆ. ಹ್ಯಾಗಂದರೆ ರೋಗದಲ್ಲಿ ಬಿದ್ದ ಅವನ ಯಜಮಾನನು ರೋಗವು ಮರಣಕ್ಕೋ ಎಂದು ಕೇಳಲಿಕ್ಕೆ ಅವನನ್ನು ಎಲೀಶನ ಬಳಿಗೆ ಕಳುಹಿಸಿ ಇದ್ದನು. ಎಲೀಶನು ರೋಗವು ಮರಣಕ್ಕಲ್ಲ. ಆದರೂ ಅವನು ಸಾಯುವನೆಂದು ಉತ್ತರ ಕೊಟ್ಟಾದ ಮೇಲೆ ಹಸಯೇಲನು ಇಸ್ರಯೇಲ್ಯರಿಗೆ ಮತ್ತೆ ಕೊಡುವ ಉಪದ್ರವನ್ನು ಆಲೋಚಿಸಿ ಬಹಳ ಬಹಳವಾಗಿ ಅತ್ತನು. ಹಸಯೇಲನು ತಿರಿಗಿ ಬಂದು ಬೆನ್ಹದಾದನನ್ನು ಶ್ವಾಸ ಕಟ್ಟಿ ಕೊಂದು ತಾನೇ ಅರಸನಾದನು.



## § 82. ಯೆಹೂದದಲ್ಲಿ ಯೊರಾಮ್ ಮತ್ತು ಅಹಸ್ಯ ಇಸ್ರಯೇಲದಲ್ಲಿ ಯೇಹು ಯೆಹೂದದಲ್ಲಿ ಅಥಾಲ್ಯ ಮತ್ತು ಯೋವಾಸ್

೧) ೨ ಅರಸು. ೮, ೧೬ ಮೊದಲಾದ ಶ್ಲೋಕಗಳು. (೨ ದಿನಚರ್ಯ. ೨೧. ೨೨ ಸಂ.) ಯೋಸಫಾತನ ಮಗನಾದ ಯೋರಾಮನು ತನಗಿಂತ ಒಳ್ಳೆಯವರಾಗಿದ್ದ ಸಹೋದರರನ್ನು ಕೊಂದು ಹಾಕಿ ಆಳಲಾರಂಭಿಸಿದನು. ದೈವಹೀನ ಹೆಂಡತಿಯಾದ ಅಥಲಿಯಳೊಡನೆ ಒಂದೇ ಮನಸ್ಸಿನವನಾಗಿ ಬಾಳಪೂಜೆಯನ್ನು ಯೆಹೂದದಲ್ಲಿ ತಂದನು. ಫಿಲಿಷ್ಟ್ಯರೂ ಅರಾಬ್ಯರೂ ಯೆರೂಸಲೇಮನ್ನು ಸುಲುಕೊಂಡು ಮಕ್ಕಳನ್ನೂ ಭಂಡಾರವನ್ನೂ ತಕ್ಕೊಂಡು ಹೋಗುತ್ತಾರೆ. ಚಿಕ್ಕ ಮಗನಾದ ಅಹಸ್ಯನು ಮಾತ್ರವೇ ತಪ್ಪಿಸಿ ಕೊಂಡನು. ಅದರ ಹೊರ್ತು ಕರ್ತನು ಗುಣವಾಗದಂಥ ಕರುಳುಗಳ ರೋಗದಿಂದ ಯೋರಾಮನನ್ನು ಪೀಡಿಸಿದನು. ಈ ರೋಗದಿಂದಲೇ ಭಯಂಕರವಾದ ವೇದನೆ ಪಟ್ಟು ಸತ್ತನು. ಆ ಪ್ರಕಾರ ಆಗುವದೆಂದು ಎಲೀಯನಿಂದ ಬಂದ ಬರಹವು ಮುಂತಿಳಿಸಿತು. (ಒಂದು ವೇಳ್ಯ ಎಲೀಯನು ಈ ಬರಹವನ್ನು ತಾನು ಬದುಕುವಾಗಲೇ ಬರೆದಿಟ್ಟಿದ್ದನು. ಇಲ್ಲದಿದ್ದರೆ ತನ್ನ ನಾಮದಲ್ಲಿ ಬರಿಯ ಬೇಕೆಂದು ಪ್ರವಾದಿ ಶಿಷ್ಯರಿಗೆ ಅಪ್ಪಣೆ ಕೊಟ್ಟಿರುವನು.) ಅಹಸ್ಯನು ಅರಸನಾದನು. (ಇವನಿಗೆ ಯೋವಹಾಸ್ ಎಂಬ ಹೆಸರು ಸಹ ಇತ್ತು) ಈತನು ಸುರಿಯದ ಹಸಯೇಲನಿಗೆ ವಿರೋಧವಾಗಿ ಗಿಲ್ಯಾದದ ರಾಮೋಥಕ್ಕೆ ಮುತ್ತಿಗೆ ಹಾಕಲಿಕ್ಕಾಗಿ ಇಸ್ರಯೇಲದ ಯೋರಾಮನ ಸಂಗಡ ಒಡಂಬಡಿಕೆ ಮಾಡುತ್ತಾನೆ. ಯೋರಾಮನು ಘಾಯ ಪಟ್ಟನು. ಅವನನ್ನು ಉಷ್ಣಕಾಲದ ನಿವಾಸವಾಗಿರುವ ಯೆಸ್ರೆಯೇಲಕ್ಕೆ ತರುತ್ತಾರೆ. ಅಲ್ಲಿ ಅವನನ್ನು ನೋಡಲಿಕ್ಕೆ ಅಹಸ್ಯನು ಹೋಗುತ್ತಾನೆ.

೨) ೨ ಅರಸು. ೯. ೧೦. ಸಂ. ಅಷ್ಟರೊಳಗೆ ಎಲೀಶನು ರಾಮೋಥದ ಮುಂದೆ ದಂಡು ಇಳಿಸಿ ಇದ್ದ ಯೋರಾಮನ ಸೈನ್ಯಾಧಿಪತಿಯಾದ ಯೇಹುವನ್ನು ಒಬ್ಬ ಪ್ರವಾದಿಶಿಷ್ಯನಿಂದ ಅಭಿಷೇಕಿಸುತ್ತಾನೆ. ಸೈನ್ಯವು ಅವನೇ ಅರಸನಾಗಿರುತ್ತಾನೆಂದು ಕೂಗಿದರು. ಮತ್ತು ಯೇಹು ಯೆಸ್ರೆಯೇಲಿಗೆ ಬಂದು ಯೋರಾಮನು ತನ್ನ ಹತ್ತರ ಕೇಳಲಿಕ್ಕಾಗಿ ಕಳುಹಿಸಿದಂಥ ದೂತರನ್ನು ಇಟ್ಟು ಕೊಂಡನು. ಮತ್ತು ಯೋರಾಮನು ತನ್ನ ಅಳಿಯನಾಗಿದ್ದ ಯೆಹೂದದ ಅರಸನಾಗಿರುವ ಅಹಸ್ಯನೊಡನೆ ಎದುರು ಹೋದಾಗ ಯೇಹುವಿನ ಬಾಣವು ನಾಬೋತನ ಕ್ಷೇತ್ರದಲ್ಲಿ ಅವನ ಹೃದಯವನ್ನು ಭೇದಿಸುತ್ತದೆ. ಅಹಸ್ಯನು ಓಡಿದನು. ಆದರೆ ಅವನ

ನ್ನು ಹಿಡಿದು ಕೊಂದರು. ಈಸಬೇಲಳನ್ನು ಅರಮನೆಯ ಕಿಟಕಿಯಿಂದ ಹೊರಗೆ ಹಾಕಿದರು ಮತ್ತು ನಾಯಿಗಳು ಅವಳನ್ನು ತಿಂದು ಬಿಟ್ಟವು.

ಸಮಾರ್ಯದಲ್ಲಿ ಅಹಾಬನ ೭೦ ಮೊಮ್ಮಕ್ಕಳು ಇದ್ದರು, ಅವರಲ್ಲಿ ಉತ್ತಮನನ್ನು ಅರಸನಾಗ ಮಾಡಿರಿ ಎಂದು ಯೇಹು ಕಾಗದ ಬರದು ಕಳುಹಿಸಿದಾಗ ಸಾಕುವವರೇ ಅವರನ್ನು ಕೊಂದರು. ಸಮಾರ್ಯಕ್ಕೆ ಹೋಗುವ ಮಾರ್ಗದಲ್ಲಿದ್ದಾಗ ಅಲ್ಲಿಗೆ ನೋಡಲಿಕ್ಕಾಗಿ ಯೆಹೂದದಿಂದ ಬಂದ ನಾಲ್ವತ್ತೆರಡು ಅಹಾಬನ ಸಂಬಂಧಿಕರನ್ನು ಸಹಾ ಕೊಂದನು. ಸಮಾರ್ಯದಲ್ಲಿ ಕೂಡಿ ಬಂದ ಜನಕ್ಕೆ ಅವನು ಸಾರಿ ಹೇಳಿದ್ದು ಅಹಾಬನು ಬಾಳನಿಗೆ ಚನ್ನಾಗಿ ಪೂಜೆ ಮಾಡಲಿಲ್ಲ; ಯೇಹು ಚನ್ನಾಗಿ ಪೂಜೆ ಮಾಡುವನು. ಅವನು ಬಾಳನ ಪೂಜಾರಿಗಳನ್ನೆಲ್ಲಾ ಕೂಡಿಸಿ ಉತ್ಸಹವುಳ್ಳ ಒಂದು ಬಲಿಯರ್ಪಣೆ ಉಂಟೆಂದು ಸಾರಿಸಿ ಬಲಿಯಾದ ಮೇಲೆ ವಿಗ್ರಹಪೂಜಾರಿಗಳನ್ನೆಲ್ಲಾ ಬಾಳನ ಗುಡಿಯಲ್ಲಿ ಕೊಂದು ಹಾಕಿಸಿದನು. ಗುಡಿಯನ್ನು ಬಹಿರ್ಭೂಮಿಯಾಗ ಮಾಡಿದನು.—ಆದರೆ ಯೆರೊಬಾಮನ ಪಾಪವನ್ನು ಅವನೂ ಬಿಡಲಿಲ್ಲ. ಆದದರಿಂದ ಅವನ ಮನೆ ಸಹಾ ನಾಲ್ಕನೇ ತಲಾಂತ್ರ ಪರಿಯಂತರಕ್ಕೆ ಹೊರ್ತು ಹೆಚ್ಚಿರಲಾಗದು. ಅದೇ ಸಮಯದಲ್ಲಿ ಕರ್ತನು ಸಹಾ ಇಸ್ರಯೇಲ್ಯರ ಮೇಲೆ ಉದಾಸೀನ ಮಾಡಲಾರಂಭಿಸಿದನು. ಮತ್ತು ಹಸಯೇಲನು ಅವರ ಪ್ರಾಂತ್ಯಗಳಲ್ಲೆಲ್ಲಾ ಅವರನ್ನು ಹೊಡದನು.

೩) ೨ ಅರಸು. ೧೧. ೧೨. ಸಂ. (೨ ದಿನಚರ್ಯ. ೨೨—೨೪.) ಅಹಾಸ್ಯನು ಸತ್ತನೆಂಬ ವರ್ತಮಾನವನ್ನು ಕೇಳಿದಾಗ ಅಥಲ್ಯಳು ತನಗೆ ಅಧಿಕಾರವನ್ನು ಸ್ಥಾಪಿಸಿ ಕೊಳ್ಳಲಿಕ್ಕಾಗಿ ರಾಜಸಂತತಿಯನ್ನು ಎಲ್ಲಾ ನಾಶ ಮಾಡಿದಳು. ಅವಳ ಮೊಮ್ಮಗನೂ ಅಹಸ್ಯನ ಮಗನೂ ಆಗಿರುವ ಒಂದು ವರ್ಷದ ಯೋವಾಸನು ಅವನ ಸೋದರತ್ತೆಯೂ ಪ್ರಧಾನಯಾಜಕನಾದ ಯೋಯದನ ಹೆಂಡತಿಯೂ ಆಗಿದ್ದ ಯೋಸೇಬಳ ಪರಿಮುಖವಾಗಿ ತಪ್ಪಿ ಹೋಗುತ್ತಾನೆ. ಅವನನ್ನು ದೇವಾಲಯದಲ್ಲಿ ಅಡಗಿಸಿಟ್ಟರು. ಆರು ವರ್ಷದ ತರುವಾಯ ಅವನನ್ನು ಸಿಂಹಾಸನದಲ್ಲಿ ಕೂಡ್ರಿಸಲಿಕ್ಕೆ ಯೋಯದನು ಪ್ರಯತ್ನ ಮಾಡಿದನು. ಅಥಾಲ್ಯಳನ್ನು ಕೊಂದು ಹಾಕಿದರು. ಬಾಳನ ಪೂಜೆಯನ್ನು ಯೆಹೂದದಲ್ಲಿ ನಿರ್ಮೂಲ ಮಾಡಿದರು. ಯಾಜಕರು ದೇವಾಲಯವನ್ನು ನವೀಕರಿಸುವದಕ್ಕಾಗಿ ತಮ್ಮ ಹುಟ್ಟುವಳಿಯನ್ನು ಸ್ವೇಚ್ಛೆಯಿಂದ ಕೊಟ್ಟರು.—ಆದರೆ ಯೋಯದನು ಸತ್ತ ಮೇಲೆ ಯೋವಾಸನು ಬಾಳನ ಪೂಜೆಯನ್ನು ಆಗ ಗೊಡಿಸುತ್ತಾನೆ. ಯೋಯದನ ಮಗನಾದ ಪ್ರವಾದಿ ಜಕರಿಯನು ವಿಗ್ರಹಾರಾಧನೆಗಾಗಿ ಜನಾಂಗಕ್ಕೆ ಶಿಕ್ಷೆಯ ಮಾತುಗಳನ್ನು ಹೇಳಿದರಿಂದ

ಅವನ್ನ ಕಲ್ಲೆಸದರು. ಜಕರಿಯನು ಪ್ರವಾದಿಸಿದಂಥ ಕೇಡು ಹ್ಯಾಗೂ ಬಂತು. ಸುರಿಯರು ಯೆರೂಸಲೇಮದಲ್ಲಿ ಬಿದ್ದು ಕೊಂದು ಸುಲು ಕೊಂಡರು. ಮತ್ತು ಯೋವಾಸನನ್ನು ಅವನ ಸ್ವಂತ ಸೇವಕರು ಕೊಂದು ಹಾಕಿದರು.



## § 83. ಇಸ್ರಯೇಲದಲ್ಲಿ ಯೋವಹಾಸ್, ಯೊವಾಸ್ ಮತ್ತು ೨ ನೇ ಯೆರೊಬಾಮ್, ಯೆಹೂದದಲ್ಲಿ ಅಮಾಜೀಯ

೧) ೨ ಅರಸು. ೧೩. ಸಂ. ೧೪, ೨೩. ಮೊದಲಾದ ಶ್ಲೋಕಗಳು. ಯೇಹುವಿನ ಮಗನಾದ ಯೋವಹಾಸನು ಸಹಾ ಯೆರೊಬಾಮನ ಪಾಪಗಳಲ್ಲಿ ನಡಕೊಂಡನು. ಮತ್ತು ಕರ್ತನು ಅವನನ್ನು ಹಸಯೇಲನ ಕೈಯಲ್ಲಿ ಕೊಟ್ಟನು. ಅವನ ಮಗನಾದ ಯೋವಾಸನು ಆಳುವಾಗ್ಯೆ ಎಲೀಶನು ಅವನಿಗೆ ಸುರಿಯರ ಮೇಲೆ ೩ ಸಾರಿ ಜಯವಾಗುವದೆಂದು ಗುರ್ತಿನಿಂದ ತಿಳಿಸಿದ ತರುವಾಯ ಸತ್ತನು. ಯೋವಾಸನು ಈ ನಷ್ಟದಿಂದ ಬಹು ವೇದನೆ ಪಟ್ಟು ಅವನಿಗೆ ಕೂಗಿದ್ದು — ನನ್ನ ತಂದೆಯೇ ನನ್ನ ತಂದೆಯೇ ಇಸ್ರಯೇಲದ ರಥಗಳೂ ಸವಾರರೂ ಆಗಿರುವವನೇ, ಸತ್ತವನೊಬ್ಬನು ಅಕಸ್ಮಾತ್ತಾಗಿ ಎಲೀಶನ ಎಲುಬುಗಳಿಗೆ ತಗಲಿದಾಗ ಸಜೀವಿಯಾದನು. ಯೋವಾಸನ ಮಗನಾದ ೨ ನೇ ಯೆರೊಬಾಮನು ಸುರಿಯದ ಅರಸನಾದ ೩ ನೇ ಬೆನ್ಹದಾದನ ಕೈಯಿಂದ ಯೋನನ ಪ್ರವಾದನೆಯ ಪ್ರಕಾರ ಯೊರ್ದಾನ ಪೂರ್ವ ದೇಶವನ್ನೆಲ್ಲಾ ತೆಕ್ಕೊಂಡನು. ಯಾಕಂದರೆ ಕರ್ತನು ಇಸ್ರಯೇಲಿನ ದುರಾವಸ್ಥೆಯನ್ನು ದೃಷ್ಟಿಸಿದನು. ಮತ್ತು ಸಹಾಯಕನು ಕಾಣಲಿಲ್ಲ; ಆದದರಿಂದ ಅವನು ಯೆರೊಬಾಮನ ಪರಾಕ್ರಮದ ಭುಜದಿಂದ ಸಹಾಯ ಮಾಡಿದನು. ಮತ್ತು ಇಸ್ರಯೇಲನ ಅರಸನಿಗೆ ಯೆಹೋವನ ಮಾರ್ಗಗಳನ್ನು ಕಲಿಸಲಿಕ್ಕಾಗಿ ಹೋಸೇಯ ಆಮೋಸ ಯೋನ ಮೊದಲಾದ ಪ್ರವಾದಿಗಳನ್ನು ಕಳುಹಿಸಿದನು. ಆದರೆ ಈ ರಾಜ್ಯದ ಹೊಸ ತ್ರಾಣವು ಸಹಾ ಅಲ್ಪ ಕಾಲವೇ ಇತ್ತು. ಯಾಕಂದರೆ ಅವರು ದೇವರ ಒಳ್ಳೇತನದಿಂದ ಮಾನಸಾಂತ್ರ ಹೊಂದಲಿಲ್ಲ.

೨) ೨ ಅರಸು. ೧೪, ೧—೨೨. (೨ ದಿನಚರ್ಯ. ೨೬.) ಯೆಹೂದದ ಅರಸನಾದ ಯೋವಾಸನ ಮಗನೂ ಅವನ ತರುವಾಯ ಅರಸನೂ ಆಗಿದ್ದ ಅಮಾಜೀಯನು ತನ್ನ ರಾಜ್ಯದಲ್ಲಿ ಮೂರು ಲಕ್ಷ ಮಂದಿ ಶಸ್ತ್ರಧಾರಿಗಳನ್ನು ಗಣನೆ ಮಾ

ಡುತ್ತಾನೆ. ಆದರೂ ಇಸ್ರಯೇಲ ರಾಜ್ಯದಿಂದ ಒಂದು ಲಕ್ಷ ಶಿಪಾಯರನ್ನು ಸಂಬಳ ಕೊಟ್ಟು ಸೇವೆಗೆ ತಕ್ಕೊಂಡನು. ಆದರೆ ಇವರನ್ನು ಒಬ್ಬ ಪ್ರವಾದಿಯ ಬುದ್ಧಿಯ ಮಾತು ಕೇಳಿ ಬಿಟ್ಟು ಬಿಟ್ಟನು. ಅವನು ಯೆದೋಮ್ಯರ ಮೇಲೆ ಯುದ್ಧ ಮಾಡಿ ಅವರನ್ನು ಜೈಸಿ ರಾಜಧಾನಿಯಾದ ಪೇತ್ರವನ್ನು (ಸೇಲಾ) ಕೈವಶ ಮಾಡಿ ಕೊಂಡನು. ಆದರೆ ಬರುವಾಗ್ಯೆ ಯೆದೋಮ್ಯರ ವಿಗ್ರಹಗಳನ್ನು ಸಹಾ ತಂದು ಅವುಗಳಿಗೆ ಧೂಪ ಹಚ್ಚಿದನು. ಅವನು ರಾಜ್ಯದಲ್ಲಿ ಇರದಿದ್ದಾಗ ತಿರಿಗಿ ಕಳುಹಿಸಲ್ಪಟ್ಟ ಇಸ್ರಯೇಲದ ಶಿಪಾಯರು ಯೆಹೂದದಲ್ಲಿ ಸುಲುಕೊಳ್ಳುತ್ತಾ, ಕೊಂದು ಹಾಕುತ್ತಾ ಹೋದರು. ಒಂದು ವೇಳೆ ಇದೇ ಇಸ್ರಯೇಲದ ಅರಸನಾದ ಯೋವಾಸನು ತನ್ನ ಹತ್ರ ಯುದ್ಧಕ್ಕೆ ಬರ ಬೇಕೆಂದು ಹೇಳಲಿಕ್ಕೆ ಕಾರಣವಾಯಿತು. ಯೋವಾಸನು ದೇವದಾರು ಮತ್ತು ಮುಳ್ಳಿನ ಹಿಂದು ಇವುಗಳ ಸಾಮ್ಯದಿಂದ ಉತ್ತರ ಕೊಡುತ್ತಾನೆ. ಅಮಾಜೀಯನು ಇದಕ್ಕೆ ಕಿವಿ ಕೊಡದೆ ಯುದ್ಧಕ್ಕೆ ಹೋದಾಗ ಅಪಜಯ ಪಟ್ಟು ಶತ್ರುಗಳ ಕೈಯಲ್ಲಿ ಬಿದ್ದನು. ಯೋವಾಸನು ಯೆರೂಸಲೇಮದ ಗೋದೆಗಳನ್ನು ಕಿತ್ತು ಹಾಕಿಸಿ ದೇವಾಲಯವನ್ನೂ ಅರಮನೆಯನ್ನೂ ಸುಲುಕೊಂಡು, ತರುವಾಯ ಅಮಾಜೀಯನನ್ನು ತಿರಿಗಿ ಬಿಡುಗಡೆ ಮಾಡುತ್ತಾನೆ. ಆದರೆ ಸ್ವಂತ ದೇಶದಲ್ಲಿ ಕೊಟಕೊಯಿ ಆಗುತ್ತದೆ. ಮತ್ತು ಸೇವಕರು ಅವನನ್ನು ಕೊಂದು ಹಾಕುತ್ತಾರೆ.



## § 84. ಯೆಹೂದದಲ್ಲಿ ಉಸೀಯ ಮತ್ತು ಯೊಥಾಮ್ ಇಸ್ರಯೇಲದಲ್ಲಿ ಆ ಕಾಲದಲ್ಲಿದ್ದ ಅರಸುಗಳು

೧) ೨ ಅರಸು. ೧೫, ೧—೭. (೨ ದಿನಚರ್ಯ. ೨೬.) ಅಮಾಜೀಯನ ಮಗನಾದ ಉಸೀಯನು (ಅಸಾರಿಯ) ಹದಿನಾರು ವರ್ಷದವನಾಗಿ ಪಟ್ಟವೇರಿ ೫೨ ವರ್ಷ ಆಳಿದನು. ಪ್ರವಾದಿಯಾದ ಜಕರಿಯನು ಅವನ ಹತ್ತರ ಇರುವ ಮಟ್ಟಿಗೂ ಅವನು ಕರ್ತನನ್ನು ಹುಡುಕಿದನು. ಆದದರಿಂದ ಕರ್ತನು ಅವನಿಗೆ ಎಲ್ಲಾ ಕೈ ಕೂಡಿ ಬರ ಮಾಡಿದನು. ಅವನು ಫಿಲಿಷ್ಟ್ಯರನ್ನೂ ಅರಾಬ್ಯರನ್ನೂ ಜೈಸಿದನು. ಯೆರೂಸಲೇಮನ್ನು ತಿರಿಗಿ ಭದ್ರ ಮಾಡಿದನು. ಬೇರೆ ಪಟ್ಟಣಗಳನ್ನೂ ದುರ್ಗಗಳನ್ನೂ ಕಟ್ಟಿಸಿದನು. ಮತ್ತು ಭೂಮಿಯ ವ್ಯವಸಾಯಕ್ಕೆ ಬಹಳ ಸಹಾಯ ಮಾಡಿದನು. ಯಾಕಂದರೆ ಕೃಷಿಕಷ್ಟದ ಮೇಲೆ ಅವನಿಗೆ ಬಹಳ ಪ್ರೀತಿ ಇತ್ತು. ಅವನ ಯುದ್ಧಸೈ

ನ್ಯವು ಮೂರುಲಕ್ಷ ಮಂದಿಯಾಗಿತ್ತು. ಆದರೆ ಕಡೆಯಲ್ಲಿ ಅವನಿಗೆ ಗರ್ವ ಬಂದಿರ ಲಾಗಿ ರಾಜಾೋದ್ಯೋಗಕ್ಕೆ ಪ್ರಧಾನಯಾಜಕನ ಉದ್ಯೋಗವನ್ನು ಸಹಾ ಅಪೇಕ್ಷಿಸಿದ ನು. ಆದರೆ ಯಾಜಕರು ಪ್ರತಿಕೂಲವಾಗಿ ನಿಂತರೂ ಅವನು ಧೂಪವರ್ಪಿಸುತ್ತಿರ ಲಾಗಿ ಅವನನ್ನು ಕೂಡಲೇ ಕುಷ್ಟರೋಗವು ಹಿಡಿಯಿತು. ಮತ್ತು ಸಾಯುವ ವರೆ ಗೂ ಬಿಡಲಿಲ್ಲ. ಅಂದಿನಿಂದ ಅವನ ಮಗನಾದ ಯೊಥಾಮನು ಯುವರಾಜ ನಾದನು. ಇವನು ತಂದೆ ಸತ್ತ ಮೇಲೆ ಸಹಾ ಇನ್ನು ೧೬ ವರ್ಷ ಆಳಿದನು. ಈ ತನು ಕರ್ತನಿಗೆ ಹಿತವಾದದ್ದನ್ನು ಮಾಡಿದನು. ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನು. ಅಮೊರ್ಯರನ್ನು ಕಪ್ಪ ಕೊಡುವವರಾಗ ಮಾಡಿದನು. ಮತ್ತು ತಾನು ಬಹು ಬಲಾಢ್ಯನಾದನು.

೨) ೨ ಅರಸು. ೧೫, ೮ ಮೊದಲಾದ ಶ್ಲೋಕಗಳು. ೨ನೇ ಯೆರೊಬಾಮ ನು ಸತ್ತ ತರುವಾಯ ಇಸ್ರಯೇಲದಲ್ಲಿ ಬಹು ಕಷ್ಟಕಾಲಗಳು ಬಂದಪರಿಂದ ಅವ ನ ಮಗನಾದ ಜಕರಿಯನು ೧೧ ವರ್ಷ ಪರ್ಯಂತರ ಅರಸನಿಲ್ಲದೆ ಹೋದ ಮೇ ಲೆ ಪಟ್ಟವೇರಲಿಕ್ಕೆ ಶಕ್ತನಾದನು. ಆದರೆ ೬ ತಿಂಗಳ ಮೇಲೆ ಅವನನ್ನು ಕೊಂದರು. ಇವನಲ್ಲಿ ಯೇಹುವಿನ ಸಂತತಿಯು ತೀರಿತು. ಅವನನ್ನು ಕೊಂದ ಷಲ್ಲುಮನು ಒಂ ದೇ ತಿಂಗಳು ಸಿಂಹಾಸನದಲ್ಲಿ ಕೂತಿದ್ದ ಮೇಲೆ, ಅವನ ಸೈನ್ಯಾಧಿಪತಿಯಾದ ಮೆನ ಹೇಮನು ಅವನನ್ನು ಕೊಂದನು. ಈತನು ದುಷ್ಟತನದಿಂದಲೂ ಅಸೂರ್ಯದ ಅ ರಸನಾದ ಬಲವುಳ್ಳ ಫುಲ್ಲನ ಆಶ್ರಯವನ್ನು ಸಾವಿರ ಬೆಳ್ಳೀ ತಲಾಂತುಗಳಿಂದ ಕೊಂಡ ದರಿಂದಲೂ ಹತ್ತು ವರ್ಷ ಪರ್ಯಂತರ ಮರಣದ ವರೆಗೂ ಆಳಿದನು. ಅವನ ಮ ಗನಾದ ಪೆಕಾಯನು ೨ ವರ್ಷ ಆಳಿದ ತರುವಾಯ ಪೇಕಾಹನು ಅವನನ್ನು ಕೊ ಲ್ಲುತ್ತಾನೆ. (ಇವನು ೨೦ ವರ್ಷ ಆಳಿದನಂತರ ಇಸ್ರಯೇಲಿನ ಕಡೇ ಅರಸನಾ ದ ಹೋಸೇಯನು ಅವನನ್ನು ಸಹಾ ಕೊಂದನು.) ಪೇಕಾಹನು ಯೆಹೂದದ ಅರಸ ನಾದ ಅಹಾಸನಿಗೆ ಪ್ರತಿಕೂಲವಾಗಿ ದಮಸ್ಕದ ರೇಜಿನನ ಸಂಗಡ ಒಡಂಬಡಿಕೆ ಮಾ ಡುತ್ತಾನೆ. ಆದರೆ ಅಹಾಸನು ಅಸೂರ್ಯದ ತಿಗ್ಲತ ಪಿಲೇಸರನನ್ನು ಸಹಾಯಕ್ಕೆ ಕರಿಯಲು, ಈತನು ಸುರಿಯರನ್ನೂ ಗಲಿಲಾಯದ ಉತ್ತರಭಾಗದ ನಿವಾಸಿಗಳನ್ನೂ ಪೂರ್ವ ಯೊರ್ದಾನ ದೇಶದವರನ್ನೂ ಸೆರೆವೈದನು.



## § 85. ಪ್ರವಾದನೆಯಲ್ಲಿ ಹೊಸ ರೀತಿಯು

೧) ಎಂಟನೇ ವರ್ಷಶತದ ಆರಂಭದಲ್ಲಿ, ಹಳೇ ಒಡಂಬಡಿಕೆಯ ಪ್ರವಾದನೆಯು ವಿಕಸಿತವಾಗುವದರಲ್ಲಿ ಹೊಸ ರೀತಿ ಆರಂಭವಾಗುತ್ತದೆ. ಇಷ್ಟುವರೆಗೆ ಸಮುವೇಲನು ನವೀಕರಿಸಿದ ಪ್ರವಾದನೆಯು ಪ್ರಾಮುಖ್ಯವಾಗಿ ವರ್ತಮಾನಕಾಲದ ವಿಷಯವಾಗಿ ಮಾತಾಡಿತು. ಸಮುವೇಲನ ಪುನಃಸ್ಥಾಪನೆಯಿಂದ ದೇವಾಧಿಕಾರಕ್ಕೆ ಅನುಸಾರವಾದ ಜೀವನಕ್ಕೂ ಆಕಾರಕ್ಕೂ ಹೊಸತಾದ ತ್ರಾಣವುಳ್ಳ ರೂಪವು ಉಂಟಾಗಿತ್ತು. ಅದು ದಾವಿದನ ಅರಸ್ತನದಲ್ಲಿಯೂ ಸೊಲೊಮೋನನ ಅರಸ್ತನದಲ್ಲಿಯೂ ಸಂಪೂರ್ಣತೆ ಹೊಂದಿತ್ತು. ಹಳೇ ಒಡಂಬಡಿಕೆಯು ಪ್ರಯತ್ನ ಮಾಡಿದಂಥ ಮುಂದಿನ ಕಾಲದಲ್ಲಿ ಅತ್ಯಂತ ಶ್ರೇಷ್ಠವಾಗಿ ಹೊಂದ ಬೇಕಾದ ಸಂಪೂರ್ಣತೆಯ ಮೊಳಿಕೆಗಳೂ ಮುಂಗುರ್ತುಗಳೂ ವರ್ತಮಾನಕಾಲದಲ್ಲಿ ಪ್ರತ್ಯಕ್ಷವಾಗಿದ್ದವು. ಈ ಮೊಳಿಕೆಗಳನ್ನೂ ಮುಂಗುರ್ತುಗಳನ್ನೂ ಸಾಕಿ ಆಧರಿಸಿ ಸಂರಕ್ಷಿಸಿ ಸಮವಾಗಿ ಮುಂದೆ ವಿಕಸಿತ ಮಾಡುವದೇ ಆ ಸಮಯದಲ್ಲಿದ್ದ ಪ್ರವಾದನೆಯ ಕೆಲಸವಾಗಿತ್ತು. ಅದೇ ಪ್ರಕಾರ ಮೆಸ್ಸೀಯನನ್ನು ಕುರಿತಾದ ಪ್ರವಾದನೆಗೆ ವರ್ತಮಾನಕಾಲದಲ್ಲಿದ್ದ ಸಂಗತಿಗಳೇ ಆಧಾರ ಕೊಟ್ಟವು. ಅದು ಮೆಸ್ಸೀಯನ ಕಾಲವು ವರ್ತಮಾನಕಾಲದ ಸ್ಥಿತಿಯ ಸಂಪೂರ್ಣತೆ ಎಂದು ದೃಷ್ಟಿಸಿತು. ಆದರೆ ಈ ಯೌವನಕಾಲವು ಬಹಳ ಹೊತ್ತು ಇರಲಿಲ್ಲ. ದೇವಾಧಿಕಾರದ ಸಂಸ್ಥಾನದ ವಿಭಾಗವು ಅಂದಿನಿಂದ ಹೆಚ್ಚು ಹೆಚ್ಚಾಗಿ ಬರುವ ಕೇಡಿನ ಮೊದಲನೇ ಪ್ರಕಟಣೆಯಾಗಿತ್ತು. ಆದರೆ ಇನ್ನೂ ಇರುವಂಥ ದೇವಾಧಿಕಾರದ ಅಂಶವನ್ನು ಬಲ ಪಡಿಸುವದರಿಂದಲೂ ಒಳಗೆ ಸೇರಿದ ಕೇಡಿಗೆ ಪ್ರತಿಕೂಲವಾಗಿ ಹೋರಾಡುವದರಿಂದಲೂ ಎಲ್ಲಾ ತಿರಿಗಿ ಸಮವಾಗುವದೆಂಬ ಕೋರಿಕೆಯು ಇರುವ ಮಟ್ಟಿಗೂ ಪ್ರವಾದನೆಯು ಇದಕ್ಕಾಗಿ ಪ್ರಯತ್ನ ಮಾಡುವದನ್ನು ಬಿಡಲಿಲ್ಲ. ಆದದರಿಂದ ಕಳೆದು ಹೋದ ಸ್ಥಿತಿಯನ್ನು ತಿರಿಗಿ ಸ್ಥಾಪಿಸುವದೇ ಪ್ರವಾದನೆಯ ಕೆಲಸವಾಗಿರುತ್ತಿರಲಾಗಿ ಅಂಥಾ ವಿದ್ಯಮಾನಗಳಲ್ಲಿ ದೇವರಾಜ್ಯದ ಭಾವನೆಯನ್ನೂ ಮೆಸ್ಸೀಯರಾಜ್ಯದ ಭಾವನೆಯನ್ನೂ ಪ್ರವರ್ಧಿಸಲಿಕ್ಕೆ ಆಗಲಿಲ್ಲವೆಂಬದು ಸಹಜವಾಗಿರುತ್ತದೆ. ಆದರೆ ಆ ಆಶೆಯು ನಿರಾಶೆಯಾಗಲು ಹೆಚ್ಚು ಹೆಚ್ಚಾಗಿ ಅಟಕವಿಲ್ಲದೆ ಕೆಟ್ಟು ಹೋದ ಸಂತತಿಯನ್ನು ಪೂರ್ಣವಾಗಿ ತಿರಿಗಿಸುವದಕ್ಕೆ ಪ್ರವಾದನೆಯು ಮಾಡಿದ ಕಷ್ಟವು ವ್ಯರ್ಥವಾಗಲು ಆ ಸಮಯದಲ್ಲಿ ವರ್ತಮಾನಕಾಲವನ್ನು ತಾನೇ ನವೀಕರಿಸುವದು ತನಗೆ ಅಸಾಧ್ಯವೆಂದು ಪ್ರವಾದನೆಯು ತಿಳುಕೊಳ್ಳ ಬೇಕಾಯಿತು. ಮತ್ತು ಇದೇ ನಾವು ಮುಟ್ಟಿದ ಕಾಲವು.

೨) ಆದರೆ ದೇವರು ಪಿತೃಗಳ ಸಂಗಡ ಮಾಡಿದ ಒಡಂಬಡಿಕೆಯು ಇನ್ನು ಭದ್ರವಾಗಿರುತ್ತದೆ. ವರ್ತಮಾನಕಾಲವು ಸಮವಾಗಿ ವಿಕಸಿತವಾಗುವದರಿಂದ ಹೊಂದಲಿಕ್ಕೆ ಕೂಡದದಂಥಾದ್ದು ನ್ಯಾಯಶಿಕ್ಷೆಯಿಂದ ಸಾಧ್ಯವಾಗ ಬಹುದು; ಸಾಧ್ಯವಾಗ ಬೇಕು. ಮತ್ತೆ ಹೊಸತಾಗಿ ವಿಕಸಿತವಾಗಲಿಕ್ಕೆ ಆರಂಭವಾಗ ಬೇಕು. ಆದದರಿಂದ ಪ್ರವಾದನೆಯು, ವರ್ತಮಾನಕಾಲವನ್ನು ಒಂದು ವಿಧವಾಗಿ ಬಿಟ್ಟು, ಭವಿಷ್ಯತ್ತಿಗೆ ದೃಷ್ಟಿ ತಿರುಗಿಸುತ್ತದೆ. ಆದರೆ ಮೊದಲಾಗಿ ಇಸ್ರಾಯೇಲ್ಯರ ಮೇಲೆಯೂ, ಯೆಹೂದ್ಯರ ಮೇಲೆಯೂ, ಬಾರದೆ ಇರ ಕೂಡದ ನ್ಯಾಯಶಿಕ್ಷೆಯು ಅದಕ್ಕೆ ಕಾಣುತ್ತದೆ. ದೇವರ ಜನಾಂಗವು, ಅನ್ಯಜನರಿಗೆ ಸಮಾನ ಮಾಡಿ ಕೊಂಡು ತನ್ನ ಕರಿಯುವಿಕೆಯನ್ನು ಮರತು ಬಿಟ್ಟು ಲೋಕವ್ಯವಹಾರಗಳಲ್ಲಿ ಬೀಳಲಾಗಿ, ನ್ಯಾಯಶಿಕ್ಷೆಯು ಸಹಾ ಆ ಕಡೆಯಿಂದಲೇ ಬರುತ್ತದೆ. ಆದರೆ ದೇವರ ಒಡಂಬಡಿಕೆಯು ಇನ್ನೂ ಭದ್ರವಾಗಿರುವದರಿಂದ ನ್ಯಾಯಶಿಕ್ಷೆಯು, ರಕ್ಷಣೆ ತರುವಂಥ ದಂಡನೆಯಾಗಿ ಕಾಣ ಬರುತ್ತದೆ. ಈ ವಿಷಯದಲ್ಲಿ ಇಸ್ರಾಯೇಲನ ಮೇಲೆ ಬರುವ ನ್ಯಾಯಶಿಕ್ಷೆಗೂ ಜನಾಂಗಗಳ ಮೇಲೆ ಬರ ಬೇಕಾದ ನ್ಯಾಯಶಿಕ್ಷೆಗೂ ಹೆಚ್ಚು ಕಡಿಮೆ ಉಂಟು. ಇಸ್ರಾಯೇಲನಿಗೆ ನ್ಯಾಯಶಿಕ್ಷೆಯಿಂದ ರಕ್ಷಣ್ಯವೂ, ಬೀಳೋಣದರಿಂದ ಏಳೋಣವೂ ಉಂಟು. ಒಬ್ಬ ಹೊಸ ದಾವಿದನು ಮೊದಲನೆಯವನಿಗಿಂತ ಅನಂತ ಮಹಿಮೆಯುಳ್ಳವನೂ ದೊಡ್ಡವನೂ ಆಗಿ, ದೇವರಾಜ್ಯವನ್ನು ಪುನಃಸ್ಥಾಪಿಸಿ, ನವೀಕರಿಸಿ, ಮಹಿಮೆ ಪಡಿಸಿ, ಸಂಪೂರ್ಣ ಮಾಡುವನು. ಈ ಪ್ರಕಾರವಾಗಿ ಪ್ರವಾದನೆಯ ಮುಖವು ತಿರಿಗಿದಾಗ ಕೆಲವು ನೂರು ವರ್ಷಗಳಿಂದ (ದಾವಿದನ ಕಾಲ ಮೊದಲುಗೊಂಡು) ಹಿಂದೆ ಬಿದ್ದು, ಮೆಸ್ಸೀಯನ ಭಾವನೆಯು ತಿರಿಗಿ ಮುಂದೆ ಬರುತ್ತದೆ. ಅದು ಹಳೇ ಒಡಂಬಡಿಕೆಯಲ್ಲಿ ಉಂಟಾಗ ಬಹುದಾದ ಸಂಪೂರ್ಣರೂಪವನ್ನೂ ಸಂಪೂರ್ಣತೆಯನ್ನೂ ಹೊಂದುತ್ತದೆ. ಹೀಗಾಗಿ ಪ್ರವಾದನೆಯ ಸ್ಥಿತಿಯೂ ಕೆಲಸವೂ ಬೇರೆಯಾಗಿರುತ್ತಿರಲಾಗಿ, ಮೊದಲಿದ್ದ ಪ್ರವಾದನೆಯು ಪೂರ್ಣವಾಗಿ ವರ್ತಮಾನದ ಕಾಲದ ವಿಷಯವಾಗಿ ಮಾತ್ರವೇ ಮಾತಾಡದೆ ಇರುವದರಿಂದ, ಪ್ರವಾದನೆಗಳನ್ನು ಬರೆದಿಡುವದು ಅವಶ್ಯವಾಗಿತ್ತು. ಅದು ವರ್ತಮಾನಕಾಲದ ಸಂತತಿಯನ್ನು ಬಿಟ್ಟು ತನ್ನ ಮುಖವನ್ನು ಭವಿಷ್ಯತ್ತಿನ ಸಂತತಿಗಳಿಗೆ ತಿರಿಗಿಸಿತು.

ಪರಿಶಿಷ್ಟ. ಪ್ರವಾದನೆಯ ಪುಸ್ತಕಗಳು ದೊಡ್ಡ ಪ್ರವಾದಿಗಳೂ ಚಿಕ್ಕ ಪ್ರವಾದಿಗಳೂ ಎಂದು ೨ ಭಾಗವಾಗಿರುತ್ತವೆ. ಒಂದೊಂದು ಭಾಗದಲ್ಲಿ ಬರುವ ಪ್ರವಾದಿಗಳು ಕಾಲವನ್ನನುಸರಿಸುತ್ತಾರೆ. ಬೇರೆ ಪ್ರಕಾರವಾಗಿ ವಿಭಾಗಿಸುವದು ಸಹಾ ಉಂಟು.

I ವಾಸಾಂತ್ರದ ಮೊದಲಿನ ಪ್ರವಾದಿಗಳು. ಇವರು ಒಡಂಬಡಿಕೆಯ ಜನಾಂಗದ ಮೇಲೆ ಬಂದ ನ್ಯಾಯಶಿಕ್ಷೆಯ ಸಮಯದಲ್ಲಿ ಇರಲಿಲ್ಲ. ಹೊಸೇಯ, ಯೋವೇಲ್, ಆಮೋಸ್, ಒಬದಿಯ, ಯೋನ, ಮಿಕ, ಯೆಶಾಯ.

II ವಾಸಾಂತ್ರದ ಪ್ರವಾದಿಗಳು. ಇವರು ವಾಸಾಂತ್ರದ ಸಮಯದಲ್ಲಿ ಜೀವಿಸಿ ವಾಸಾಂತ್ರದ ಸ್ವಲ್ಪ ಮೊದಲೇ ಇಲ್ಲವೇ ಅದೇ ಸಮಯದಲ್ಲಿ ಪ್ರವಾದಿಸಿದವರು. ನಾಹುಮ್, ಹಬಕೂಕ್, ಜಫನಿಯ, ಯೆರೆಮಿಯ, ಎಜೆಕಿಯೇಲ್, ದಾನಿಯೇಲ್.

III ವಾಸಾಂತ್ರದ ಮೇಲಿನ ಪ್ರವಾದಿಗಳು. ಇವರು ವಾಸಾಂತ್ರದಿಂದ ತಿರಿಗಿ ಬಂದ ಜನರಲ್ಲಿ ಕೆಲಸ ಮಾಡಿದವರು. ಹಗ್ಗಾಯ, ಜಕರಿಯ, ಮಲಕಿಯ.



## § 86. ವಾಸಾಂತ್ರದ ಮೊದಲಿನ ಪ್ರವಾದಿಗಳು

### (ಹೊಸೇಯ, ಯೋವೇಲ್, ಆಮೋಸ್, ಒಬದಿಯ, ಯೋನ.)

೧) ಹೊಸೇಯನ ಉದ್ಯೋಗವು, ೨ನೇ ಯೆರೊಬಾಮನ ಕಾಲದಲ್ಲಿಯೂ, ಉಸೀಯನ ಕಾಲದಲ್ಲಿಯೂ ಆರಂಭವಾಯಿತು. ಇದಕ್ಕೆ ಮುಖ್ಯವಾದ ಗುರಿಯು, ಇಸ್ರಯೇಲ ರಾಜ್ಯವಾಗಿತ್ತು; ಕ್ರಿಯೆಗಳಿಂದ ಪ್ರಸಂಗಿಸಿ, ಯೆಹೋವನಿಂದ ಬಿದ್ದು ಹೋಗೃದೆ ಎಂಬದನ್ನು ಜನಾಂಗದ ಕಣ್ಣಿನ ಮುಂದೆ ಇಟ್ಟು, ದೇವರ ನ್ಯಾಯಶಿಕ್ಷೆಗಳನ್ನು ಸಾರಿ, ಮತ್ತೆ ಮಾನಸಾಂತ್ರ ಪಡುವ ಇಸ್ರಯೇಲಿನ ಮನಸ್ಸೀಕಾರವನ್ನು ಸಹಾ ವಾಗ್ದತ್ತ ಮಾಡಿದನು.

ಪರಿಶಿಷ್ಟ. ಹೊಸೇಯನ ೩ ನೇ ಸಂಧಿಯ ೪ ನೇ ೫ ನೇ ವಚನಗಳಲ್ಲಿ ಸಾರಿ ಹೇಳಿದ್ದು: ಇಸ್ರಯೇಲನ ಮಕ್ಕಳು ಬಹುಕಾಲದ ವರೆಗೆ ಅರಸನಿಲ್ಲದೆಯೂ, ಶ್ರೀಮಂತನಿಲ್ಲದೆಯೂ, ಬಲಿಯಿಲ್ಲದೆಯೂ, ಪೀಠವಿಲ್ಲದೆಯೂ, ಏಫೋದ್ ಇಲ್ಲದೆಯೂ, ಶುದ್ಧಸ್ಥಳ ಇಲ್ಲದೆಯೂ ಇರುವರು. ತರುವಾಯ ಇಸ್ರಯೇಲಿನ ಮಕ್ಕಳು ಮಾನಸಾಂತ್ರ ಪಟ್ಟು ತಮ್ಮ ದೇವರಾದ ಯೆಹೋವನನ್ನೂ ತಮ್ಮ ಅರಸನಾದ ದಾವಿದನನ್ನೂ ಹುಡುಕಿ ಕರ್ತನನ್ನೂ ಅವನ ಕೃಪೆಯನ್ನೂ ಕಡೇ ಕಾಲದಲ್ಲಿ ಸನ್ಮಾನಿಸುವರು.

೨) ಯೋವೇಲ್ ಯೆಹೂದ ರಾಜ್ಯದಲ್ಲಿ ಜೀವಿಸಿದನೆಂತ ಕಾಣುತ್ತದೆ. ವಿನಾಶ ಮಾಡುವ ಮಿಡಿತೆಗಳ ಸಾಮ್ಯವಾಗಿ ದೇವರ ನ್ಯಾಯಶಿಕ್ಷೆಗಳನ್ನು ಸಾರಿ

ಹೇಳುತ್ತಾನೆ. (ಯೋಸಫಾತನ ತಗ್ಗು § ೬೬, ೨.) ಮಾನಸಾಂತ್ರ ಮಾಡ ಬೇಕೆಂದು ಹೇಳಿ ಪರಿಶುದ್ಧಾತ್ಮವು ಹಾಯ್ಯಲ್ಪಡುವದೆಂಬದನ್ನು ಪ್ರವಾದಿಸುತ್ತಾನೆ.

ಪರಿಶಿಷ್ಟ. ೨, ೨೮ ನೇ ಮೊದಲಾದ ವಚನಗಳಲ್ಲಿ ಪ್ರವಾದಿಸಿದ್ದು: ಆ ದಿವಸಗಳ ತರುವಾಯ ನಾನು ನನ್ನ ಆತ್ಮವನ್ನು ಎಲ್ಲಾ ಮಾಂಸದ ಮೇಲೆ ಹೊಯ್ಯುವೆನು. ನಿಮ್ಮ ಪುತ್ರರೂ ಪುತ್ರಿಯರೂ ಪ್ರವಾದಿಸುವರು; ನಿಮ್ಮ ಹಿರಿಯರಿಗೆ ಕನಸುಗಳು ಬೀಳುವವು; ನಿಮ್ಮ ಯೌವನಸ್ಥರು ದರ್ಶನಗಳನ್ನು ನೋಡುವರು; ಆ ದೊಡ್ಡ ಭಯಂಕರವಾದ ಕರ್ತನ ದಿವಸವು ಬರುವ ಮೊದಲು, ಆ ಸಮಯದಲ್ಲಿ ದಾಸದಾಸಿಯರ ಮೇಲೆಯೂ, ನನ್ನ ಆತ್ಮವನ್ನು ಹೊಯಿದು, ಆಕಾಶದಲ್ಲಿಯೂ ಭೂಮಿಯಲ್ಲಿಯೂ ಆಶ್ಚರ್ಯದ ಗುರ್ತುಗಳನ್ನು ಕೊಡುವೆನು; ಮತ್ತು ಕರ್ತನ ನಾಮವನ್ನು ಆರಾಧಿಸುವವನು ರಕ್ಷಿಸಲ್ಪಡುವನು.

೩) ಆಮೋಸನು ಯೆಹೂದದಲ್ಲಿರುವ ತೆಕ್ಕೋವದ ಕುರುಬನಾಗಿದ್ದನು. ಕುರಿಮಂದೆ ಮೇಯಿಸುವಲ್ಲಿಂದ ಪ್ರವಾದಿಯ ಉದ್ಯೋಗಕ್ಕೆ ಕರಿಯಲ್ಪಟ್ಟವನಾಗಿ, ಪ್ರಾಂತ್ಯದಲ್ಲಿರುವ ಅನ್ಯ ಜನಾಂಗಗಳ ಮೇಲೆ, ದೇವರ ನ್ಯಾಯಶಿಕ್ಷೆಗಳನ್ನು ಸಾರುತ್ತಾನೆ. ಪ್ರವಾದಿದರ್ಶನಗಳಲ್ಲಿ ಇಸ್ರಯೇಲನು ಪ್ರತಿಫಲಕ್ಕೆ ಹಣ್ಣಾಗಿರುತ್ತಾನೆಂದು ನೋಡುತ್ತಾನೆ. ಆದರೆ ಅದೇ ಸಮಯದಲ್ಲಿ ಮುಂದೆ ಬರುವ ರಕ್ಷಣ್ಯವನ್ನು ಸಹಾ ಸಾರುತ್ತಾನೆ.

ಪರಿಶಿಷ್ಟ. ೯, ೧೧ ನೆಯಲ್ಲಿ ಪ್ರವಾದಿಸಿದ್ದು: ಆ ಸಮಯದಲ್ಲಿ ನಾನು ಬಿದ್ದು ಹೋದಂಥಾ ದಾವಿದನ ಗುಡಾರವನ್ನು ತಿರಿಗಿ ಕಟ್ಟಿ ಎಡೆಗಳಲ್ಲಿ ಬೇಲಿ ಹಾಕಿ, ಮುರಿದು ಹೋದದ್ದನ್ನು ತಿರಿಗಿ ನಿಲ್ಲಿಸಿ, ಪೂರ್ವದಲ್ಲಿದ್ದ ಹಾಗೆಯೇ ಅದನ್ನು ತಿರಿಗಿ ಕಟ್ಟುವೆನು.

೪) ಒಬದಿಯನು. ಇವನ ಪುಸ್ತಕದಲ್ಲಿ ಸಣ್ಣದಾಗಿದ್ದರೂ, ಕಠಿಣವಾದಂಥಾ ಎದೋಮ್ಯರಿಗೆ ವಿರೋಧವಾದ ಶಿಕ್ಷೆಯ ಪ್ರವಾದನೆಯುಂಟು.

೫) ಯೋನನು. ಇಸ್ರಯೇಲದಲ್ಲಿದ್ದ ಅಮಿತ್ತಾಯ ಮಗನು; ಅರಸನಾದ ೨ನೇ ಯೆರೊಬಾಮನಿಗೆ ಸುರಿಯರ ಮೇಲೆ ಜಯವನ್ನು ಸಾರಿದ್ದನು; ಅವನೇ ಇಸ್ರಯೇಲನ ಮೇಲೆ ಸಾಕ್ಷಿಗಾಗಿ ಅಸೂರ್ಯದ ರಾಜಧಾನಿಯಾಗಿರುವ ನಿನವೆಗೆ ಮಾನಸಾಂತ್ರವನ್ನು ಪ್ರಸಂಗಿಸ ಬೇಕು. ಕಂಟಕವುಳ್ಳದ್ದಾಗಿ ಕಂಡು ಬರುವಂಥ ಸ್ವಾರ್ಥದ ಚಾ

ವನೆಗೆ ಅಹಿತವಾದಂಥ ಅಪ್ಪಣೆಗೆ ತಪ್ಪಿಸಿ ಕೊಳ್ಳಲಿಕ್ಕಾಗಿ ಯಾಪ್ಪೆಯಲ್ಲಿ ಒಂದು ತರ್ಷಿಸ್ ಹಡಗವನ್ನು ಏರಿದನು. ಬಿರುಘಾಳಿ ಬಂದಾಗ, ಇವನ ಮೇಲೆ ಚೀಟು ಬೀಳಲಾಗಿ, ಹಡಗದವರು ಯೆಹೋವನ ನೀತಿಯುಳ್ಳ ನ್ಯಾಯಶಿಕ್ಷೆಯನ್ನು ತಿಳಿದು, ಆತನ ಹೆಸರನ್ನು ಆರಾಧಿಸಿ, ಯೋನನನ್ನು ಸಮುದ್ರದಲ್ಲಿ ಹಾಕಿದರು. ಅಲ್ಲಿ ಕರ್ಬಾರಿಯಾ ಎಂಬ ಒಂದು ದೊಡ್ಡ ಮೀನು ಅವನನ್ನು ನುಂಗಿ ಬಿಟ್ಟು, ೩ನೇ ದಿವಸದಲ್ಲಿ ಜೀವಂತನಾಗಿ ತೀರದಲ್ಲಿ ಕಾರಿತು. ಈಗ ಅವನು ನಿನವೆಯವರಿಗೆ ೪೦ ದಿವಸದೊಳಗೆ ಪಟ್ಟಣವು ನಾಶವಾಗುವದೆಂದು ಸಾರಿದನು. ಆದರೆ ಅರಸನೂ (ಫುಲ್?) ಪ್ರಜೆಯೂ ಮನಸ್ತಾಪ ಪಡಲಾಗಿ ದೇವರು ಅವರನ್ನು ಇಡುತ್ತಾನೆ. ಇದಕ್ಕಾಗಿ ಯೋನನು ಕೋಪಗೊಳ್ಳಲು ದೇವರು ಅವನ ಪಾಪವುಳ್ಳ ಹುಚ್ಚುತನವನ್ನು ಕಿಕ್ಕಾಯೋನ ಎಂಬ ಗಿಡದಿಂದ (ಜಾಡ್ಲಗಿಡ) ತೋರಿಸುತ್ತಾನೆ.

ಪರಿಶಿಷ್ಟ. ಯೋನನು ಮಾಂಸಭಾವದ ಸ್ವಾರ್ಥದ ಭಾವನೆಯಿಂದ ಅವನ ಜನಾಂಗಕ್ಕೆ ಪ್ರತಿ ಬಿಂಬವೂ ಮುಂಗುರ್ತೂ ಆಗಿದ್ದನು. ಇದು ಸಹಾ ಅವನ ಹಾಗೆಯೇ ಅನ್ಯಜನರಿಗೆ ಪ್ರಸಂಗಿಸ ಬೇಕೆಂಬ ಕರೆಯುವಿಕೆಗೆ ತಪ್ಪಿಸಿ ಕೊಂಡಿತು. ಅವನ ಹಾಗೆಯೇ ಅದಕ್ಕಾಗಿ ಬಲಾತ್ಕಾರ ಹೊಂದುತ್ತದೆ. ಮತ್ತು ಅವನ ಹಾಗೆಯೇ ಬಹು ಕಾಲದ ಮೇಲೆ ದೈನ್ಯಭಾವವಾಗಿ ಕರ್ತನ ಕಡೆಗೆ ತಿರುಗುತ್ತದೆ. ಆದರೆ ಅವನು ರಕ್ಷಕನಿಗೆ ಸಹಾ ಮುಂಗುರ್ತಾಗಿದ್ದನು. ಯೋನನು ಮನಸ್ಸಿಲ್ಲದೆಯಾದರೂ ರೂಪಿಸಿದಂಥ ಆಲೋಚನೆಯನ್ನು ರಕ್ಷಕನು ಸಂಪೂರ್ಣವಾಗಿ ಸ್ಥಾಪಿಸಿದನು. ಯಾವ ಆಲೋಚನೆಯಂದರೆ ಮಾನಸಾಂತರ ವಿಶ್ವಾಸಗಳ ಪ್ರಸಂಗವೂ ಇವುಗಳ ಸಂಗಡ ಬರುವ ರಕ್ಷಣ್ಯವೂ ಮಾನಸಾಂತರ ಪಡದ ಇಸ್ರಯೇಲ್ಯರಿಂದ ತಕ್ಕೊಂಡು ಮಾನಸಾಂತರ ಪಡುವ ಅನ್ಯಜನರಿಗೆ ತಿರಿಗಿಸಲ್ಪಡುವದೇ. ಅನ್ಯಜನರಿಗಾಗಿ ಯೋನನ ಪ್ರಸಂಗವು ಕರ್ಬಾರ್ಯದ ಹೊಟ್ಟೆಯಲ್ಲಿ ೩ ದಿವಸ ಇರುವದರಿಂದ ಹ್ಯಾಗೆ ಸಿದ್ಧ ಮಾಡಲ್ಪಟ್ಟಿತ್ತೋ ಹಾಗೆಯೇ ಅನ್ಯಜನರ ಮಧ್ಯದಲ್ಲಿ ಆಗುವ ಸುವಾರ್ತೆಯ ಪ್ರಸಂಗವು ಭೂಮಿಯ ಹೊಟ್ಟೆಯಲ್ಲಿ ರಕ್ಷಕನು ಮೂರು ದಿವಸ ಇರುವದರಿಂದ (ಅಂದರೆ) (ರಕ್ಷಣಾಕಾರ್ಯದ ಮುಖ್ಯ ಸಂಗತಿಗಳಾದ ಮರಣದಿಂದಲೂ ಉತ್ಥಾನದಿಂದಲೂ) ಸಾಧ್ಯವಾಯಿತು. ಆದರೆ ಮನಃಸ್ಥಾಪ ಪಟ್ಟ ನಿನವೆಯವರು ಇಸ್ರಯೇಲನಿಗೆ ಪ್ರತೀಕಾರ ಬಿಂಬಗಳಾಗಿರುತ್ತಾರೆ. ಅವರು ಯೋನನಿಗಿಂತ ಅಧಿಕವಾದವನ ಪ್ರಸಂಗವನ್ನು ತುಚ್ಛೀಕರಿಸಿದವರೆಲ್ಲರಿಗೆ ವಿರೋಧವಾಗಿ ನ್ಯಾಯತೀರ್ವಿಕೆಯಲ್ಲಿ ಎದ್ದು ಆಜ್ಞೆ ನಿರ್ಣಯಿಸುವರು (ಮತ್ಥಾ. ೧೨, ೩೮—೪೧. ಸಮ ನೋಡು. ಮತ್ಥಾ. ೧೬, ೪. ಪ್ರವಾದಿಯಾದ ಯೋನನ ಗುರ್ತು).

ನಿನವೆಯು ತಿಗ್ರಿಸ್ ನದಿಯ ಪೂರ್ವ ತೀರದಲ್ಲಿದ್ದು ದೀಯೊಗೋರನು ಹೇಳುವ ಪ್ರಕಾರ ೪೮೦ ಸ್ತಾದ್ಯ (೨೪ ಹರದಾರಿ) ದೊಡ್ಡದಾಗಿತ್ತು. ಮತ್ತು ಯೋನನ ಪುಸ್ತಕದ ಪ್ರಕಾರ ಎಡಬಲ ತಿಳಿಯದಂಥ ಒಂದು ಲಕ್ಷ ಇಪ್ಪತ್ತು ಸಾವಿರ ಮಕ್ಕಳಿದ್ದವು. ಹಾಗಾದರೆ ೨೦ ಲಕ್ಷ ನಿವಾಸಿಗಳು.



## § 87. ಯೆಶಾಯ, ಮೀಕ

೧) ಯೆಶಾಯನು ಯೆಹೂದದಲ್ಲಿದ್ದನು. ಆಮೋಜನ ಮಗನು ಸಂಪ್ರದಾಯದ ಪ್ರಕಾರ ರಾಜಸಂತತಿಯವನು (ಅಮಾಜೀಯನ ಸಹೋದರನ ಮಗನು). ಇವನು ಉಸ್ಸೀಯನು ಸತ್ತ ವರುಷದಲ್ಲಿ ಕೆಲಸವನ್ನಾರಂಭಿಸಿದನು. ಅವನ ಪುಸ್ತಕವು ಚನ್ನಾಗಿ ಕಾಣುವಂಥ ೨ ಭಾಗವಾಗಿ ವಿಭಾಗಿಸಿ ಅದೆ. ೧ನೇ ಭಾಗದ ಮುಖ್ಯ ಸಂಗತಿಯು ಮೆಸ್ಸೀಯನೂ ಇಮ್ಮಾನುವೇಲನೂ (ಅಂದರೆ ನಮ್ಮ ಸಂಗಡ ದೇವರು) ಅರಸನೂ ನ್ಯಾಯಾಧಿಪತಿಯೂ ಆಗಿರುತ್ತಾನೆಂಬದೇ. ಪ್ರವಾದನೆಗಳ ಈ ಮೊದಲನೇ ಭಾಗದಲ್ಲಿ ಪ್ರವಾದಿಯು, ಜನಾಂಗದ ಕಠಿಣ ಕೃತಜ್ಞತಹೀನತ್ವವನ್ನು ಶಿಕ್ಷಿಸುತ್ತಾನೆ. ಮಾನಸಾಂತರ ಪಡ ಬೇಕೆಂದು ಬುದ್ಧಿ ಹೇಳುತ್ತಾನೆ. ಅನ್ಯಜನರ ಕರಿಯುವಿಕೆಯ ವಿಷಯವಾಗಿಯೂ, ಯೆಹೂದದ ಮೇಲೆ ಬರುವ ದೇವರ ನ್ಯಾಯಶಿಕ್ಷೆಗಳ ವಿಷಯವಾಗಿಯೂ ಪ್ರವಾದಿಸುತ್ತಾನೆ. ದ್ರಾಕ್ಷೆಗಳನ್ನು ಕಾಡದೆ ಕಹಿಯಾದ ಕಾಯಿಗಳನ್ನು ಕೊಟ್ಟಂಥ ಕರ್ತನ ದ್ರಾಕ್ಷೆಯ ತೋಟವನ್ನು ಕುರಿತು ವಿವರಿಸುತ್ತಾನೆ. ಮತ್ತು ಮತ್ತೆ ಬರುವ ದಾವಿದನ ಮಗನಾದ ಇಮ್ಮಾನುವೇಲನ ದೈವಮಾನುಷ್ಯಸ್ವಭಾವವನ್ನು ವರ್ಣಿಸುತ್ತಾನೆ.

ಪರಿಶಿಷ್ಟ. ಯೆಶಾಯ. ೪, ೨ ನೇ ವಚನದಲ್ಲಿ ಹೇಳುವದು: ಆ ಸಮಯದಲ್ಲಿ ಯೆಹೋವನ ಚಿಗುರು ಪ್ರಿಯವಾಗಿಯೂ, ಮಾನ್ಯವಾಗಿಯೂ ಇರುವದು. ಇಸ್ರಾಯೇಲಿನಲ್ಲಿ ಉಳಿದವರಿಗೆ ಭೂಮಿಯ ಫಲವು, (ಮನುಷ್ಯನ ಮಗನು) ಮಹಿಮೆಯುಳ್ಳದ್ದೂ ಸುಂದರವೂ ಆಗಿರುವದು.—೭, ೧೪. ಇಗೋ ಕನ್ಯೆಯು ಗರ್ಭಿಣಿಯಾಗಿದ್ದಾಳೆ, ಮತ್ತು ಮಗನನ್ನು ಹೆರುವಳು. ಅವನನ್ನು ಇಮ್ಮಾನುವೇಲ್ ಎಂದು ಕರಿಯುವಳು ೯, ೬. ನಮಗೆ ಒಂದು ಮಗು ಹುಟ್ಟಿಯದೆ, ಮಗನು ನಮಗೆ ಕೊಡಲ್ಪಟ್ಟಿದ್ದಾನೆ. ಅವನ ಆಧಿಪತ್ಯವು ಅವನ ಭುಜದ ಮೇಲೆ ಉಂಟು. ಅವನ

ಹೆಸರು ಆಶ್ಚರ್ಯಕರನು, ಆಲೋಚನಾಕರ್ತನು, ಬಲಿಷ್ಟದೇವರು, ನಿತ್ಯಪಿತನು, ಸಮಾಧಾನರಾಜನು.—೧೧, ೧. ೨. ವಚನ. (ಅಸೂರ್ಯದ ಘೋರಾರಣ್ಯವು ಕಡಿಯಲ್ಪಡುವದು. ಆದರೆ) ಒಂದು ಸಸಿಯು ಇಸಾಯ ಬುಡದಿಂದ ಎದ್ದು ಬರುವದು. ಅವನ ಬೇರಿನಿಂದ ಆದ ಚಿಗುರಿಗೆ ಫಲ ಬರುವದು. ಅವನ ಮೇಲೆ ಕರ್ತನ ಆತ್ಮವೂ ಜ್ಞಾನಬುದ್ಧಿಗಳ ಆತ್ಮವೂ ಆಲೋಚನೇ ತ್ರಾಣಗಳ ಆತ್ಮವೂ ಕರ್ತನ ತಿಳುವಿಕೇ ಭೀತಿಗಳ ಆತ್ಮವೂ ನಿವಾಸವಾಗಿರುವದು. ಈತನಿಂದ ಭೂಮಿಯಲ್ಲಿಯೇ ಎಲ್ಲಾ ಕಡೆಯಲ್ಲಿಯೂ ಸರ್ವತ್ರವಾದ ಸಮಾಧಾನದ ಕಾಲವು ಉಂಟಾಗುವದು. ಶ್ಲೋ. ೬—೯.—ಆಗ್ಯೆ ತೋಳಗಳು ಕುರಿಮರಿಗಳೊಡನೆ ಉಳಕೊಳ್ಳುವವು; ಮತ್ತು ಚಿರ್ತೆಗಳು ಆಡುಗಳೊಡನೆ ಮಲಗುವವು. ಒಬ್ಬ ಚಿಕ್ಕ ಹುಡುಗನು, ಕರುಗಳನ್ನೂ ಯೌವನದ ಸಿಂಹಗಳನ್ನೂ ಕೊಬ್ಬಿದ ಪಶುಗಳನ್ನೂ ಒಟ್ಟಿಗೆ ಬಡಕೊಂಡು ಹೋಗುವನು. ದನಗಳೂ ಕರಡಿಗಳೂ ಒಟ್ಟಿಗೆ ಮೇಯುವವು; ಮತ್ತು ಸಿಂಹಗಳು ಎತ್ತುಗಳ ಹಾಗೆ ಹುಲ್ಲು ತಿನ್ನುವವು. ಮೊಲೆಕೂಸು ವಿಷಸರ್ಪದ ಬಿಲದ ಹತ್ತರ ಆಡುವದು ಮತ್ತು ಮೊಲೆ ಬಿಟ್ಟದ್ದು ಬಸಿಲಿಸ್ಕದ ಬಿಲದಲ್ಲಿ ಕೈ ಹಾಕುವದು.—ನನ್ನ ಪರಿಶುದ್ಧ ಪರ್ವತದಲ್ಲಿ ಎಲ್ಲಿಯೂ, ಕೆಡಿಸುವದೂ ನಾಶ ಮಾಡುವದೂ ಇರಲಿಕ್ಕಿಲ್ಲ. ಯಾಕಂದರೆ ಸಮುದ್ರವು ನೀರಿನಿಂದ ತುಂಬಿರುವ ಪ್ರಕಾರ ದೇಶವು ಕರ್ತನ ತಿಳುವಿಕೆಯಿಂದ ತುಂಬಿಯದೆ.

೨) ೨ ನೇ ಭಾಗವನ್ನು (ಸಂಧಿ. ೪೦ — ೬೬ ವರೆಗೆ) ಪ್ರವಾದಿಯು ವೃದ್ಧಪ್ರಾಯದಲ್ಲಿ ಬರೆದನೆಂತ ಕಾಣುತ್ತದೆ. ಇದರಲ್ಲಿ ಮೆಸ್ಸೀಯನು ಯೆಹೋವನ ದಾಸನಾಗಿಯೂ ಲೋಕದ ಪಾಪವನ್ನು ಹೊತ್ತು ಕೊಳ್ಳುವ ಕುರಿಮರಿಯಾಗಿಯೂ ಹೀನನಾಗಿಯೂ ತುಚ್ಛೀಕರಿಸಲ್ಪಟ್ಟವನಾಗಿಯೂ ವಾಶಿ ಮಾಡುವವನಾಗಿಯೂ ರಕ್ಷಿಸುವವನಾಗಿಯೂ ಅಲ್ಪನಾಗಿ ಮಹಿಮೆಗೆ ಹೋಗುವವನಾಗಿಯೂ ಕಾಣುತ್ತಾನೆ. ಜನಾಂಗದ ಪಾಪಕ್ಕಾಗಿ ಶ್ರಮೆ ಪಟ್ಟು ತನ್ನ ಶ್ರಮದಿಂದ ಅವರನ್ನು ವಿಮೋಚಿಸುವಂಥ ಮೆಸ್ಸೀಯನ ಭಾವನೆಯು ೫೩ನೇ ಸಂಧಿಯಲ್ಲಿ ಹೊಸ ಒಡಂಬಡಿಕೆಯಲ್ಲಿದ್ದ ಹಾಗೆ, ಸ್ಪಷ್ಟವಾಗಿಯೂ ಖಂಡಿತವಾಗಿಯೂ ಪ್ರಕಾಶಿಸುತ್ತದೆ.

ಪರಿಶಿಷ್ಟ. ೫೩, ೪. ೫ ನೇಯಲ್ಲಿ ಬರದದ್ದೇನಂದರೆ—ನಿಶ್ಚಯವಾಗಿ ಅವನು ನಮ್ಮ ರೋಗಗಳನ್ನು ಹೊತ್ತುಕೊಂಡನು: ನಮ್ಮ ವೇದನೆಗಳನ್ನು ತನ್ನ ಮೇಲೆ ತಕ್ಕೊಂಡನು; ಆದರೆ ನಾವು ಅವನನ್ನು ಉಪದ್ರ ಪಟ್ಟವನಾಗಿಯೂ, ದೇವರಿಂದ ಹೊಡಿಯಲ್ಪಟ್ಟವನಾಗಿಯೂ, ಪೀಡಿಸಲ್ಪಟ್ಟವನಾಗಿಯೂ ಎಣಿಸಿದೆವು; ಆದರೆ ಅವನು,

ನಮ್ಮ ದುಷ್ಕರ್ಮಕ್ಕಾಗಿ ತಿವಿಯಲ್ಪಟ್ಟನು, ನಮ್ಮ ಪಾಪಕ್ಕಾಗಿ ಜಡಿಯಲ್ಪಟ್ಟನು; ನಮಗೆ ಸಮಾಧಾನವಾಗುವ ಹಾಗೆ, ಶಿಕ್ಷೆಯು ಅವನ ಮೇಲೆ ಬಿದ್ದದೆ; ಅವನ ಘಾಯಗಳಿಂದ ನಾವು ವಾಸಿಯಾದೆವು. — ಶ್ಲೋ. ೬. ೭. ಕರ್ತನು ನಮ್ಮೆಲ್ಲರ ಪಾಪವನ್ನು ಅವನ ಮೇಲೆ ಹಾಕಿದನು; ಅವನನ್ನು ಶಿಕ್ಷಿಸಿ ಪೀಡಿಸುವಾಗ, ಕಸಾಯಿನ ಹಲಿಗೆಗೆ ತರುವ ಕುರಿಮರಿಯು ಹಾಗೆಯೂ, ಕತ್ತರಿಸುವವನ ಮುಂದೆ ಮೂಕವಾಗಿ ಬಾಯಿಯನ್ನು ತೆರಿಯದಂಥಾ ಕುರಿಯು ಹಾಗೆಯೂ, ಅವನು ತನ್ನ ಬಾಯಿಯನ್ನು ತೆರಿಯಲಿಲ್ಲ.

೩) ಮೀಕ ಯೆಹೂದದಲ್ಲಿ, ಯೆಶಾಯನ ಕಾಲದಲ್ಲಿ ಜೀವಿಸುವವನಾಗಿ, ಯಾಥಾಮ್ ಅಹಾಸ್ ಹಿಸ್ಕೀಯ ಎಂಬವರು ಆಳುವಾಗೈ ತನ್ನ ಕೆಲಸವನ್ನು ನಡಿಸಿದನು. ಅವನು ಜನಾಂಗದ ಮೇಲೆ ಬರುವ ದೇವರ ನ್ಯಾಯಶಿಕ್ಷೆಗಳನ್ನು, ಆದರೆ ಮೆಸ್ಸೀಯನಿಂದ ಉಂಟಾಗುವ ರಕ್ಷಣ್ಯವನ್ನು ಸಹಾ ಸಾರಿದನು.

ಪರಿಶಿಷ್ಟ. ೫, ೨. ಬೆಥ್ಲೇಮ ಯೆಫ್ರಾಥಾ! ನೀನು ಯೆಹೂದದ ಸಹಸ್ರಗಳಲ್ಲಿ ಚಿಕ್ಕವಳಾಗಿರುತ್ತಿ. (ಸಾವಿರ ಜನರು ಇರುವ ಒಂದು ಕುಲಕ್ಕೆ ಅಥವಾ ಗೋತ್ರಕ್ಕೆ ಸಹಸ್ರವೆಂದು ಹೆಸರುಂಟು.) ನಿನ್ನೊಳಗಿಂದ ಇಸ್ರಯೇಲನಲ್ಲಿ ಆಳುವವನು ನನಗೆ ಬರುವನು; ಅವನ ಹೊರಡೋಣಗಳು ಆದಿಯಿಂದಲೂ ಯುಗಾಂತ್ರದಿಂದಲೂ ಇದ್ದವು



## § 88. ಯೆಹೂದದಲ್ಲಿ ಅಹಾಸನು, ಇಸ್ರಯೇಲ್ ರಾಜ್ಯದ ವಿನಾಶವು

೧) ೨ ಅರಸು. ೧೬. (೨ ದಿನಚರ್ಯ. ೨೭. ೨೮. ಸಂ. ಯೆಶಾಯ. ೭—೧೨.) ಶಕ್ತಿಯುಳ್ಳ ಯಾಥಾಮನ ಹಿಂದೆ ಅವನ ಮಗನಾದ ಅಹಾಸನು ಅರಸನಾದನು. ಈತನು ಬಾಳನಿಗೆ ಪೂಜೆ ಮಾಡಿ, ತನ್ನ ಮಕ್ಕಳನ್ನು ಬೆಂಕಿ ದಾಟಿಸಿ, ಪರ್ವತಗಳಲ್ಲಿಯೂ ಗುಡ್ಡಗಳಲ್ಲಿಯೂ ಹಸರು ಮರಗಳ ಬುಡದಲ್ಲಿಯೂ ಬಲಿಯರ್ಪಿಸಿದನು. ಇಸ್ರಯೇಲದ ಪೇಕಾಹನೂ ಸುರಿಯದ ರೆಚಿನನೂ ಯೆರೂಸಲೇಮಕ್ಕೆ ಮುತ್ತಿಗೆ ಹಾಕುತ್ತಾರೆ. ಅಹಾಸನು ಗುರ್ತು ಕೊಡಲಿಕ್ಕೆ ಸಿದ್ಧವಾಗಿದ್ದ ಪ್ರವಾದಿಯಾದ ಯೆಶಾಯನ ಮಾತಿಗೆ ಕಿವಿ ಕೊಡದೆ, ಅಸೂರ್ಯದ ತಿಗ್ಲತಪಿಲೇಸೆರನ ಸಹಾಯವನ್ನು ಹಣದಿಂದ ಹೊಂದುತ್ತಾನೆ. ಅವಿಶ್ವಾಸಿಯಾದ ಅಹಾಸನು ಗುರ್ತು ಧಿಕ್ಕರಿಸಿದಾಗ ಪ್ರವಾದಿಯು ದೂರದಲ್ಲಿರುವ ಒಂದು ಗುರ್ತು ತೋರಿಸುತ್ತಾನೆ. ಮೆಸ್ಸೀಯನು ಕನ್ನಿಕೆಯಿಂದ ಹುಟ್ಟುವನೆಂಬದನ್ನೇ!

ದೂರದಲ್ಲಿರುವಂಥಾದ್ದು ಸರಿ ಎಂಬದಕ್ಕೆ ಮುಂಗಡವೆಂಬ ಹಾಗೆ, ಸಮೀಪದಲ್ಲಿರುವ ಮತ್ತೊಂದು ಗುರ್ತು ಹೇಳುತ್ತಾನೆ; ಹ್ಯಾಗಂದರೆ — ಹುಡುಗನು ಕೆಟ್ಟದ್ದನ್ನು ತ್ಯಜಿಸಿ, ಒಳ್ಳೇದನ್ನು ತಕ್ಕೊಳ್ಳಲಿಕ್ಕೆ ಶಕ್ತನಾಗುವ ಮೊದಲೇ ಶತ್ರುಗಳಾದ ಇಬ್ಬರು ಅರಸುಗಳ ದೇಶವು ಹಾಳು ಬೀಳುವದು. — ತಿಗಲತ್‌ಪಿಲೇಸರನು ಸುರಿಯವನ್ನು ಕೆಡವಿ ಬಿಟ್ಟು ಇಸ್ರಯೇಲರ ಒಂದು ಭಾಗವನ್ನು ಶೆರೆವೈದು, ಮಿಕ್ಕಾದವರನ್ನು ಕಪ್ಪಕ್ಕೊಳಗಾಗ ಮಾಡಿ, ಸಹಾಯ ಮಾಡಿದನೆಂಬದು ಸರಿ; ಆದರೆ ಯೆಶಾಯನು ಪ್ರವಾದಿಸಿದ ಪ್ರಕಾರ ತನ್ನ ಖಡ್ಗವನ್ನು ಬೇಗ ಯೆರೂಸಲೇಮದ ಕಡೆಗೆ ಸಹಾ ತಿರುಗಿಸಿದನು. ಆದರೂ ಈ ಸಾರಿ ಅದನ್ನು ಗೆಲ್ಲಲಿಕ್ಕೆ ಆಗಲಿಲ್ಲ. ಯೆಹೋವನ ದೇವಾಲಯವು, ಅಹಾಸನು ಆಳುವಾಗ್ಯೆ ಪೂರ್ಣವಾಗಿ ವಿಗ್ರಹಾಲಯವಾಯಿತು.

ಪರಿಶಿಷ್ಟ. ಬೆಂಕಿ ದಾಟಿಸುವದಂದರೆ ನಿಜವಾಗಿ ಸುಡುವದು; ಅಶುದ್ಧವಾದ ಮನುಷ್ಯನ ಜೀವವನ್ನು ಅದರಲ್ಲಿ ಅಶುದ್ಧವಾದದ್ದೆಲ್ಲಾ ಸುಟ್ಟು ಹೋಗಿ, ದಿವ್ಯವಾದದ್ದು ಪೂರ್ಣಶುದ್ಧವಾಗಿ ದೇವರ ಅನ್ಯೋನ್ಯವನ್ನು ಹೊಂದುವ ಹಾಗೆ, ಬೆಂಕಿಗೆ ಅದು ದಿವ್ಯ ಅಂಶದ್ದಾಗಿರುತ್ತದೆಂದು ಒಪ್ಪಿಸಿ ಕೊಟ್ಟರು. ಮೋಶೆಯ ನ್ಯಾಯಪುಸ್ತಕದಲ್ಲಿ ಈ ಭಯಂಕರವಾದ ವಿಗ್ರಹಪೂಜೆಯ ರೀತಿಯು, ಸರ್ವಥಾ ಆಗ ಬಾರದೆಂದು ನಿಶ್ಚಯಿಸಿ ಅದೆ. (೩ ಮೋಶೆ. ೧೮, ೨೧; ೨೦, ೨ ನೇ ಮೊದಲಾದ ಶ್ಲೋಕಗಳು.)

೨) ೨ನೆ ಅರಸು. ೧೭. ಪೇಕಹನನ್ನು ಕೊಂದು ಹಾಕಿದ ಹೋಶೇಯನು ರಾಜ್ಯದಲ್ಲಿ ಒಂಬತ್ತು ವರ್ಷ ಅರಸನಿಲ್ಲದ ಮೇಲೆ ಇಸ್ರಯೇಲ್ ರಾಜ್ಯದ ಸಿಂಹಾಸನವನ್ನು ಏರಿದನು. ಐಗುಪ್ತದ ಅರಸನಾದ ಸೋ ಎಂಬವನ ಹತ್ತರ ಮಾಡಿದ ಒಡಂಬಡಿಕೆಯ ಮೇಲೆ ಭರವಸವಿಟ್ಟು ಅಸೂರ್ಯರಿಗೆ ಕಪ್ಪ ಕೊಡಲೊಲ್ಲನು; ಮತ್ತು ಸಲ್ಮನಸರನು ೩ ವರ್ಷ ಮುತ್ತಿಗೆ ಹಾಕಿದ ಮೇಲೆ ಸಮಾರ್ಯವನ್ನು (೭೨೨ನೇ ವರ್ಷದಲ್ಲಿ) ಕೈವಶ ಮಾಡಿ ಕೊಳ್ಳುತ್ತಾನೆ. ಅವನು ಇಸ್ರಯೇಲ್ಯರನ್ನು ಮೇದ್ಯದಲ್ಲಿಯೂ, ಅಸೂರ್ಯದಲ್ಲಿಯೂ ನಿವಾಸಿಸ ಮಾಡುತ್ತಾನೆ. ಮತ್ತು ಈ ದೇಶದಲ್ಲಿ ಅನ್ಯಜನರನ್ನು ಹಾಕುತ್ತಾನೆ. ಇವರು ಹಿಂದುಳಿದ ಇಸ್ರಯೇಲರ ಸಂಗಡ ಒಟ್ಟು ಕೂಡಿ, ಸಮರ್ಯರೆಂದಾಗುತ್ತಾರೆ. ದೇವರು ದೇಶದಲ್ಲಿ ಸಿಂಹಗಳನ್ನು ಕಳುಹಿಸಿದನು; ಇವುಗಳು ಅವರನ್ನು ಸೀಳಿ ಹಾಕಿದವು. ಈ ಪ್ರಕಾರ ಅವರು ಆ ದೇಶದ ದೇವರ ಮರ್ಯಾದೆಯನ್ನು ವಿಚಾರಿಸಲಿಕ್ಕೆ ಕಾರಣವಾಯಿತು. ಆದದರಿಂದ ಸಲ್ಮನಸರನು ಅವರು ಬೇಡಿ ಕೊಂಡ ಕಾರಣ, ಜನರನ್ನು ಕಲಿಸಲಿಕ್ಕಾಗಿ ಇಸ್ರಯೇಲ್ಯನಾದ ಒಬ್ಬ ಯಾಜಕನನ್ನು ಅವರ ಬಳಿಗೆ ಕಳುಹಿಸುತ್ತಾನೆ. ಹೀಗಾಗಿ ಅವರು

ಯೆಹೋವನಿಗೆ ಭಯಪಡಲಿಕ್ಕೆ ಕಲಿತರು. ಆದರೂ ಸಂಗಡ ತಂದ ವಿಗ್ರಹಪೂಜೆಯನ್ನು ಸಹಾ ಅವರು ಬಿಡದೆ, ಎರಡೂ ಬೆರಸಿದರು.

ಪರಿಶಿಷ್ಟ. ೧. ಇಸ್ರಯೇಲ್ಯರು ದಾವಿದನ ಮನೆಯಿಂದ ಪ್ರತ್ಯೇಕಿಸಿ ಕೊಂಡಂದಿನಿಂದ ಇನ್ನೂರ ಐವತ್ತಮೂರು ವರ್ಷ ಪರ್ಯಂತರ ಕರ್ತನಿಗೆ ಪ್ರತೀಕಾರವಾಗಿ ನಿಂತರು. ಎಲ್ಲಾ ತ್ರಾಡಣೆಯು ವ್ಯರ್ಥವಾಯಿತು. ೭ ರಾಜಕುಲಗಳು ನಿರ್ಮೂಲವಾದವು. ಮತ್ತು ೧೯ ಅರಸುಗಳಲ್ಲಿ ಒಬ್ಬನ ವಿಷಯವಾಗಿಯಾದರೂ, ಅವನು ಕರ್ತನಿಗೆ ಹಿತವಾದದ್ದನ್ನು ಮಾಡಿದನೆಂದು ಹೇಳಲಿಕ್ಕೆ ಆಗಲಿಲ್ಲ. ಯೇಹು ಸಹಾ ಕರುಗಳ ಪೂಜೆಗೂ ಪರ್ವತಪೂಜೆಗೂ ಒಪ್ಪಿ ಕೊಂಡನು; ಕಡೆಯಲ್ಲಿ ಪಾಪದ ಅಳತೆಯು ತುಂಬಿತು. ದೇವರ ದೀರ್ಘಶಾಂತಿಯು ತೀರಿತು.

ಪರಿಶಿಷ್ಟ. ೨. ಅಸೂರ್ಯಕ್ಕೆ ಶೆರೆವೈದ ಇಸ್ರಯೇಲರಲ್ಲಿ ಅಪೊ. ಕ್ರಿ. ಎಂಬ ಪುಸ್ತಕಗಳಲ್ಲಿ ಇರುವ ಕಥೆಯ ಪ್ರಕಾರ ಭಕ್ತಿಯುಳ್ಳ ತೊಬೀಯನು ಇದ್ದನು. ಅವನ ಹಾಗೆಯೇ ಮತ್ತೊಬ್ಬರು ಸಹಾ ಮೊಣಕಾಲುಗಳನ್ನು ಬಾಳನ ಮುಂದೆ ಬೊಗ್ಗಿಸದೆ, ಶ್ರಮಗಳಿಂದಲೂ, ನಡತೆಯಿಂದಲೂ ಜೀವನದಿಂದಲೂ, ಅನ್ಯದೇಶದಲ್ಲಿ ಅನ್ಯ ಜನರನ್ನು ಯೆಹೋವನ ಕಡೆಗೂ, ಅವನ ವಾಗ್ದತ್ತಗಳಿಗೂ ತೋರಿಸಿ, ವಿಶ್ವಾಸ ತಿಳುವಿಕೆಗಳ ದ್ವಾರವನ್ನು ತೆರೆದಂಥಾ ಭಕ್ತಿಯುಳ್ಳ ಜನರಾಗಿದ್ದರು.



## § 89. ಹಿಸ್ಕೀಯ ಮನಸ್ಸೆ ಮತ್ತು ಅಮ್ಮೊನ್

೧) ೨ ಅರಸು. ೧೮—೨೦. (೨ ದಿನಚರ್ಯ. ೨೯—೩೨. ಯೆಶಾಯ. ೩೬,—೩೯.) ದೈವಹೀನನಾದ ಅಹಾಸನ ಭಕ್ತಿಯುಳ್ಳ ಮಗನಾದ ಹಿಸ್ಕೀಯನು ೨೯ ವರ್ಷವಾಳಿದನು. ಪಟ್ಟವೇರಿದಾಗಲೇ ಪರ್ವತಾರಾಧನೆಗಳನ್ನೂ ವಿಗ್ರಹಾರಾಧನೆಗಳನ್ನೂ ನಿರ್ಮೂಲ ಮಾಡಲಾರಂಭಿಸಿದನು; ಮೋಶೆಯು ಅರಣ್ಯದಲ್ಲಿ ಮಾಡಿದ ತಾಂಬ್ರದ ಸರ್ಪವನ್ನು ಸಹಾ (ನೆಹುಷ್ಟಾನ್ ಅಂದರೆ ತಾಂಬ್ರದ್ದು) ಹಾಳು ಮಾಡಿದನು. ಇದಕ್ಕೆ ಇಸ್ರಯೇಲನ ಮಕ್ಕಳು ಇಷ್ಟು ವರೆಗೆ ಧೂಪ ಇಡುತ್ತಾ ಬಂದಿದ್ದರು. ದೇವಾಲಯವನ್ನೂ ಯಾಜಕರನ್ನೂ ಜನಾಂಗವನ್ನೂ ಶುದ್ಧ ಮಾಡಿಸಿದ ತರುವಾಯ ಅವನು ಉತ್ಸವ ಉಳ್ಳಂಥ ೧೪ ದಿವಸ ಪರ್ಯಂತರ ಇದ್ದಂಥಾ ಪಸ್ಕಹಬ್ಬವನ್ನು ಆಚರಿಸಿದನು. ಇದಕ್ಕೆ ಇಸ್ರಯೇಲ್ಯರನ್ನೆಲ್ಲಾ ಸಹಾ ಪ್ರತ್ಯೇಕವಾಗಿ ಕರೇ ಕಳುಹಿಸಿ

ದನು. (ಸಲ್ಮನಸರನ ಪರಿಮುಖವಾಗಿ ಬಂದಂಥ ಕಡೇ ನ್ಯಾಯಶಿಕ್ಷೆಯು ಆ ಸಮಯದಲ್ಲಿ ಇನ್ನೂ ಬರಲಿಲ್ಲ.) ಆದರೆ ಅವರು ಬಹಳ ನಿಂದಿಸಿ, ತಿರಿಗಿ ಕಳುಹಿಸಿದರು. ಅವನು ಅಸೂರ್ಯರಿಗೆ ಅಹಾಸನ ಕಾಲದಿಂದ ಕೊಡುತ್ತಾ ಬಂದ ಕಪ್ಪವನ್ನು ಕೊಡಲಿಕ್ಕಿಲ್ಲವೆಂದು ಹೇಳಲಾಗಿ, ಸನ್ಹರೀಬನು ಮಹಾ ಸೈನ್ಯವನ್ನು ತಕ್ಕೊಂಡು ಯುದ್ಧಕ್ಕೆ ಬಂದನು. ಹಿಸ್ಕೀಯನು ಶತ್ರುವು ತಿರಿಗಿ ಹೋಗ ಬೇಕೆಂದು, ಅವನಿಗೆ ಬಹಳ ಬಹಳ ಹಣ ಕೊಡುತ್ತಾನೆ. ಆದರೆ ಸನ್ಹರೀಬನು ಐಗುಪ್ತವನ್ನು ಜೈಸಲಿಕ್ಕಾಗಿ ಮುಂದೆ ನಡಿಯುವವನಾಗಿದ್ದದರಿಂದ ಹಿಂದೆ ಶತ್ರುವು ಇರ ಬಾರದೆಂದು ಯೆಹೂದವನ್ನು ನಾಶ ಮಾಡಲಿಕ್ಕೆ ನಿಶ್ಚಯಿಸುತ್ತಾನೆ. ಅಸೂರ್ಯದ ಸೈನ್ಯಾಧಿಪತಿಯಾದ ರಬ್ಶಾಕೆಯು ಯೆರೂಸಲೇಮಕ್ಕೆ ಮುತ್ತಿಗೆ ಹಾಕಿ ಎಲ್ಲಾ ಜನರ ಮುಂದೆ ಯೆಹೋವನನ್ನೂ ಅರಸನನ್ನೂ ನಿಂದಿಸುತ್ತಾನೆ. ಹಿಸ್ಕೀಯನು ಕರ್ತನಿಗೆ ಕೂಗುತ್ತಾನೆ. ಮತ್ತು ಯೆಶಾಯನು ರಕ್ಷಣೆಯನ್ನು ವಾಗ್ದತ್ತ ಮಾಡುತ್ತಾನೆ. ಅಷ್ಟರೊಳಗೆ ಮೇಲಿನ ಐಗುಪ್ತದ ಅಧಿಪತಿಯಾದ ತಿರ್ಹಕನೆಂಬ (ತರಕಾಸ್) ಎಥಿಯೋಪ್ಯದ ರಾಜನು ಸನ್ಹರೀಬನಿಗೆ ಎದುರಾಗಿ ಬರಲು, ಈತನು ಇದಕ್ಕಾಗಿಯೇ ಯೆರೂಸಲೇಮನ್ನು ಬಿಟ್ಟು ಹೋಗಲಿಕ್ಕೆ ಕಾರಣವಾಯಿತು. ಆದರೆ ವಾಗ್ದತ್ತವಾದ ರಕ್ಷಣ್ಯವು ತಿರ್ಹಕನಿಂದ ಅಲ್ಲ; ಕರ್ತನಿಂದಲೇ ಬರ ತಕ್ಕಂಥಾದ್ದು; ಕರ್ತನ ದೂತನು (ಮಹಾ ವ್ಯಾಧಿಯಿಂದ) ಒಂದೇ ರಾತ್ರಿಯಲ್ಲಿ ಒಂದು ಲಕ್ಷ ಎಂಭತ್ತೈದು ಸಾವಿರ ಜನರನ್ನು ಸನ್ಹರೀಬನ ದಂಡಿನಲ್ಲಿ ಕೊಂದು ಹಾಕುತ್ತಾನೆ. ಈತನು ನಿನೆವೆಗೆ ಓಡಿ ಹೋಗಲು, ಅಲ್ಲಿ ವಿಗ್ರಹಾಲಯದಲ್ಲಿ ಸ್ವಂತ ಮಕ್ಕಳು ಅವನ್ನ ಕೊಂದು ಹಾಕುತ್ತಾರೆ. ತರುವಾಯ ಸ್ವಲ್ಪ ಕಾಲದಲ್ಲಿಯೇ ಹಿಸ್ಕೀಯನು ಮರಣಸಂಕಟದಲ್ಲಿ ಬಿದ್ದನು; ಆದರೆ ಅವನು ಪ್ರಾರ್ಥಿಸಲಾಗಿ, ಕರ್ತನು ಅವನ ಜೀವನಕ್ಕೆ ೧೫ ವರ್ಷ ಕೂಡಿಸಿ, ಇದಕ್ಕೆ ಗುರ್ತಾಗಿ ಹಿಸ್ಕೀಯನು ಆಯಿದು ಕೊಂಡ ಪ್ರಕಾರ ಛಾಯಾಸ್ತಂಭದಲ್ಲಿ ನೆರಳನ್ನು ಹತ್ತು ಮೆಟ್ಟು ಹಿಂದೆ ಹೋಗ ಮಾಡಿದನು. ಯೆಶಾಯನು ಅಂಜೂರವನ್ನು ವ್ಯಾಧಿಯ ಬಾವಿನ ಮೇಲೆ ಇಳಿಸಲು, ಅವನಿಗೆ ವಾಶಿಯಾಗುತ್ತದೆ. ಅಸೂರ್ಯದಿಂದ ಬಿಡಿಸಿ ಕೊಂಡ ಬಬಿಲೋನದ ಅರಸನಾದ ಮೆರೊದಾಕ್ ಬಲದಾನನ ರಾಯಭಾರಿಗಳು ಹಿಸ್ಕೀಯನಿಗೆ ಉಂಟಾದ ದ್ವಿವಿಧವಾದ ರಕ್ಷಣೆಗಾಗಿ ಉಪಚಾರವನ್ನು ಮಾಡಲಿಕ್ಕೆ ಬಂದಾಗ ಹಿಸ್ಕೀಯನು, ವ್ಯರ್ಥವಾದ ಅಭಿಮಾನದಿಂದ ತನ್ನ ಭಂಡಾರವನ್ನು ಅವರಿಗೆ ತೋರಿಸಿದನು. ಮತ್ತು ಯೆಶಾಯನು ಇದಕ್ಕಾಗಿ, ಇದೆಲ್ಲಾ ಅದರ ಹೊರ್ತು ಅವನ ಮಕ್ಕಳು ಸಹಾ ಬಾಬೇಲಕ್ಕೆ ವೈಯಲ್ಪಡುವರೆಂದು ಸಾರಿದನು.

೨) ೨ ಅರಸು. ೨೧. (೨ ದಿನಚರ್ಯ. ೩೩.) ಹಿಸ್ಕೀಯನ ಮಗನಾದ ಮನಸ್ಸೆಯು ೫೫ ವರ್ಷ ಆಳಿ ವಿಗ್ರಹಪೂಜೆಯಿಂದಾಗುವ ಎಲ್ಲಾ ತರದ ಅಸಹ್ಯಗಳನ್ನು ಆರಂಭಿಸುತ್ತಾನೆ; ಸನ್ಹೇರೀಬನ ಹಿಂದೆ ಅರಸನಾದ ಅಸ್ಸರ್‌ಹದ್ದೋನನು (ಹಾಗಾದರೆ ಈತನು ಬಾಬೇಲವನ್ನು ತಿರಿಗಿ ತನ್ನ ವಶ ಮಾಡಿ ಕೊಂಡಿರ ಬೇಕು) ಅವನನ್ನು ಬಾಬೇಲಕ್ಕೆ ಶೆರೆಯವನಾಗಿ ವೈಯುತ್ತಾನೆ. ಅಲ್ಲಿ ಅವನು ನಿಜವಾಗಿ ಮಾನಸಾಂತ್ರ ಪಟ್ಟನು. ದೇವರು ಅವನನ್ನು ತಿರಿಗಿ ಅವನ ರಾಜ್ಯದಲ್ಲಿ ತಂದನು. ಮತ್ತು ಅವನು ಸಹಾ ವಿಗ್ರಹಪೂಜೆಯನ್ನು ತೆಗದು ಹಾಕಿದನು. ಆದರೆ ಅವನ ಮಗನಾದ ಅಮೋನನು ತಿರಿಗಿ ವಿಗ್ರಹಪೂಜೆ ಮಾಡಿದನು. ೨ ವರ್ಷದ ಮೇಲೆ ಅವನನ್ನು ಕೊಂದು ಹಾಕಿದರು.



## § 90. ಯೋಸೀಯನು ಮತ್ತು ಅವನ ತರುವಾಯ ಬಂದ ಅರಸುಗಳು ಯೆಹೂದರಾಜ್ಯದ ವಿನಾಶವು ಮತ್ತು ಗೆದಾಲಿಯ

೧) ೨ನೇ ಅರಸು. ೨೨, ೨೩ ಸಂ. (೨ನೇ ದಿನಚರ್ಯ. ೩೪, ೩೫. ಸಂ.) ಅಮೋನನ ಮಗನಾದ ಯೋಸೀಯನು ೮ ವರ್ಷದವನಾಗಿ ಪಟ್ಟವನ್ನೇರಿ ೧೬ ವರ್ಷದವನಾಗಿ ಕರ್ತನನ್ನು ಹುಡುಕಲಿಕ್ಕೆ ಆರಂಭಿಸಿ ೨೦ ವರ್ಷದವನಾಗಿ ದೇವಾಧಿಕಾರಕ್ಕೆ ಸರಿಯಾದ ಪುನಃಸ್ಥಾಪನೆಯನ್ನು ಪೂರ್ಣವಾಗಿ ಮಾಡಲಿಕ್ಕೆ ತೊಡಗಿದನು. ಅದೇ ಸಮಯದಲ್ಲಿ ನಾನೂರು ವರ್ಷದ ಹಿಂದೆ ಬೆಥೇಲದ ಬಲಿಪೀಠದ ಮೇಲೆ ಉಚ್ಚರಿಸಿದ ಪ್ರವಾದನೆಯನ್ನು (§ ೭೬, ೨.) ಸಂಪೂರ್ಣ ಮಾಡಿದನು. ದೇವಾಲಯವನ್ನು ಜೀರ್ಣೋದ್ಧಾರ ಮಾಡುವಾಗ್ಯೆ ಪ್ರಧಾನಯಾಜಕನಾದ ಹಿಲ್ಕೀಯನು ಪೂರ್ಣವಾಗಿ ಮರತು ಹೋದ ಹಾಗಿದ್ದ ಮೋಶೆಯ ನೇಮಪುಸ್ತಕವನ್ನು ಕಂಡನು. ಆ ಸಮಯದಿಂದ ಅದೇ ಪುನಃಸ್ಥಾಪನೆಗೆ ಅಸ್ತಿವಾರವಾಯಿತು. ಸುರುಳಿಯನ್ನು ಬಿಚ್ಚಿದಾಗ ರಾಜಲೇಖನಿಕನಾದ ಶಾಫಾನನ ದೃಷ್ಟಿಯು, ಮೋಶೆಯು ಬಿದ್ದು ಹೋಗುವ ಜನಾಂಗದ ಮೇಲೆ ಉಚ್ಚರಿಸಿದ ಶಾಪಗಳ ಮೇಲೆ ಬಿತ್ತು. ಇವುಗಳನ್ನು ಅರಸನಿಗೆ ಓದಿ ಹೇಳಿದನು. ಪ್ರವಾದಿನಿಯಾದ ಹುಲ್ದಳು ಇದೆಲ್ಲಾ ನಿಶ್ಚಯವಾಗಿ ಸಂಭವಿಸುವದೆಂಬದನ್ನು ಸ್ಥಿರ ಪಡಿಸುತ್ತಾಳೆ. ಯೋಸೀಯನು ಒಂದು ಸರ್ವಜನಸಭೆಯನ್ನು ಕರೆದು ನೇಮಪುಸ್ತಕವನ್ನೆಲ್ಲಾ ಓದಿ ಹೇಳಿಸಿ, ಉತ್ಸವ ಉಳ್ಳಂಥ ಪೂರ್ಣವಾಗಿ ನೇಮಕ್ಕೆ ಅನುಸಾರವಾದಂಥ ಪಸ್ಕವನ್ನು ನಿಶ್ಚಯಿಸುತ್ತಾನೆ. ಅಂಥಾದ್ದು ಸ

ಮುವೇಲನ ಕಾಲದಿಂದ ಆಚರಿಸಲ್ಪಡಲಿಲ್ಲವು. ನೇಖೋ ಎಂಬ ಫರೋಹನನು ಕ ಲ್ದೇಯರಾಜ್ಯಕ್ಕೆ ವಿರೋಧವಾಗಿ ಏರಿ ಬಂದನು. ಯೋಸೀಯನು ಅವಶ್ಯವಿಲ್ಲದೆ ಅ ವನಿಗೆ ಪ್ರತಿಕೂಲವಾಗಿ ನಿಂತು ಮೆ ಗಿ ದ್ದೋ ೯ ಹತ್ತಿರ ಆದ ರಣದಲ್ಲಿ ಬಿದ್ದನು. (೬೦೯.) ಅವನ ಮರಣದಿಂದ ಅಪರಾಧದಿಂದ ತುಂಬಿದ ಜನಾಂಗವು ಜಯಭ್ರಷ್ಟ ವಾಯಿತು. ಯಾಕಂದರೆ ಭಕ್ತಿಯುಳ್ಳ ಅರಸನಿಗಾಗಿ ಮಾತ್ರವೇ ದುಡಿದ ನ್ಯಾಯಶಿ ಕ್ಷೆಗಳು ತಮ್ಮ ಮೇಲೆ ಇನ್ನು ಬರಲಿಲ್ಲವೆಂದು ಅವರು ಚನ್ನಾಗಿ ತಿಳುಕೊಂಡರು. ಆ ದರೆ ದೇವರು ತನ್ನ ಭಕ್ತಿಯುಳ್ಳ ಸೇವಕನು ಕಷ್ಟ ಇಲ್ಲದೆ ಇರುವ ಹಾಗೆ ಅವನನ್ನು ತಕ್ಕೊಂಡು ಹೋಗಿದ್ದನು. (೨೦, ೨೦.)

೨) ೨ ಅರಸು. ೨೪—೨೫, ೨೧. (೨ ದಿನಚರ್ಯ. ೩೬. ಯೆರೆಮಿ. ೩೯—೫೨ ಸಂ.) ಜನಾಂಗವು ಯೋಸೀಯನ ಕಿರೇ ಮಗನಾದ ಯೋ ೯ ವ ಹಾ ಸ ನ ನ್ನು ಅರಸನಾಗ ಮಾಡಿದರು. ಆದರೆ ೩ ತಿಂಗಳಾದಾಗ ನೇಖೋ ಅಷ್ಟರೊಳಗೆ ಪ್ರಾ ನಿಕ್ಯವನ್ನು ಕೈವಶ ಮಾಡಿ ಕೊಂಡವನಾಗಿ, ಹಿರೇ ಸಹೋದರನಾದ ಯೆಲಿಯಕೀಮ ನಿಗೆ ಯೋ ಯಾ ಕೀ ಮ ನೆಂ ಬ ಹೆಸರಿಟ್ಟು, ಅವನನ್ನು ಅರಸನಾಗ ಮಾಡಿ, ಯೋ ವಹಾಸನನ್ನು ಐಗುಪ್ತಕ್ಕೆ ಸೆರೆವೈದನು. ಯೋಯಾಕೀಮನು ಹನ್ನೊಂದು ವರ್ಷ ಪಾಳಿದನು. ಬಾಬೇಲದ ಅರಸನಾದ ನೆಬುಕದ್ನೇಜರನು ಕಿರ್ಕಸಿಯದ ಹತ್ತಿರ ನೇಖೋ ವನ್ನು (ಕ್ರಿ. ಮು. ೬೦೫.) ಹೊಡದ ತರುವಾಯ ಯೆರೂಸಲೇಮಕ್ಕೆ ಬಂದನು. ಯೋಯಾಕೀಮನು ತನ್ನನ್ನು ತಾನೇ ಒಪ್ಪಿಸಿ ಕೊಟ್ಟನು. ನೆಬುಕದ್ನೇಜರನು ದೇವಾಲ ಯದ ಪಾತ್ರೆಗಳ ಒಂದು ಭಾಗವನ್ನು ತಕ್ಕೊಂಡು, ಕೆಲವು ಪ್ರಾಮುಖ್ಯ ಯೌವನಸ್ಥರ ನ್ನು ಇವರಲ್ಲಿ ದಾನಿಯೇಲನನ್ನು ಸಹಾ ಬಾಬೇಲಕ್ಕೆ ಸೆರೆವೈದನು. (ಇದೇ ಮೊದಲ ನೇ ಸಾರಿ ಸೆರೆವೈದಂದಿನಿಂದ ವಾಸಾಂತ್ರದ ೭೦ ವರುಷಗಳ ಲೆಖ್ಖ ಆರಂಭವಾಗುತ್ತ ದೆ, ಯೆರೆಮಿಯ. ೨೫, ೧೧. ೧೨. ೨೯, ೧೦.) ಆದರೆ ಸ್ವಲ್ಪ ಕಾಲದೊಳಗೆ ಯೋ ಯಾಕೀಮನು ನೇಖೋವಿನಿಂದ ಬಿದ್ದು ಹೋಗಲು, ಕಲ್ದೇಯರು ಯೆರೂಸಲೇಮಕ್ಕೆ ಮುತ್ತಿಗೆ ಹಾಕಿದಾಗ ಯೋಯಾಕೀಮನು ಸತ್ತು ಅವನ ಮಗನಾದ ಯೋ ಯಾ ಕೀ ನ ನು ಪಟ್ಟವೇರಿದನು. ಆದರೆ ಮೂರೇ ತಿಂಗಳು ಆಳಿದನು. ಅವನು ಸ್ವೇಚ್ಛೆಯಿಂದ ತನ್ನನ್ನು ತಾನೇ ಒಪ್ಪಿಸಿ ಕೊಟ್ಟ ಮೇಲೆ ಅವನನ್ನೂ ಅವನ ಸಂಸಾರವನ್ನೂ ದೇಶದ ಶ್ರೀಮಂತರೆಲ್ಲರನ್ನೂ ಅದೇ ಪ್ರಕಾರ ಯುದ್ಧಯೋಗ್ಯರಾದ ಎಲ್ಲಾ ಜನರನ್ನೂ ಬ ಡಿಗೆಯವರನ್ನೂ ಕಮ್ಮಾರರನ್ನೂ ಸೆರೆವೈದನು. ಈ ಸಾರಿಯವರಲ್ಲಿ ಪ್ರವಾದಿಯಾದ ಯೆಹೆಸ್ಕೇಲನು (ಎಜೆಕಿಯೇಲನು) ಇದ್ದನು.

ನೆಬುಕದ್ನೇಜರನು ಯೋಸೀಯನ ಕಡೇ ಮಗನಾದ ಮತನ್ಯನಿಗೆ ಜೆದೆಕೀಯನೆಂಬ ಹೆಸರಿಟ್ಟು, ಅವನನ್ನು ಅರಸನಾಗ ಮಾಡುತ್ತಾನೆ. ಯೆರೆಮಿಯನು ಬಹು ವಿಧವಾಗಿ ಬುದ್ಧಿ ಹೇಳಿದರೂ ಅವನು ಸಹಾ ತಾನು ಫಾರವೊ ಹೊಫ್ರನ ಸಂಗಡ ಮಾಡಿದ ಒಡಂಬಡಿಕೆಯಲ್ಲಿ ಬುದ್ಧಿರಹಿತನಾಗಿ ಭರವಸವಿಟ್ಟದರಿಂದ ೯ನೇ ವರ್ಷದಲ್ಲಿ ನೆಬುಕದ್ನೇಜರನಿಂದ ಬಿದ್ದು ಹೋಗುತ್ತಾನೆ. ನೆಬುಕದ್ನೇಜರನು ಯೆರೂಸಲೇಮಕ್ಕೆ ೩ನೇ ಸಾರಿ ೨ ವರುಷ ಪರ್ಯಂತರ ಮುತ್ತಿಗೆ ಹಾಕುತ್ತಾನೆ. ಭಯಂಕರವಾದ ಬರಗಾಲವು ಆರಂಭವಾಗುತ್ತದೆ. ಜೆದೆಕೀಯನು ಓಡಿ ಹೋಗುವಾಗೈ ಅವನನ್ನು ಹಿಡಿದು, ಎಜೆಕಿ. ೧೨, ೧೩. ವಚನದಲ್ಲಿ ಪ್ರವಾದಿಸಿದ ಪ್ರಕಾರ ಜೆದೆಕೀಯನನ್ನು ಕುರುಡನಾಗ ಮಾಡಿ ಸಂಕೋಲೆಯಲ್ಲಿ ಬಾಬೇಲಕ್ಕೆ ಕೊಂಡು ಹೋಗುತ್ತಾರೆ. ಯೆರೂಸಲೇಮವು ಪೂರ್ಣ ನಾಶ ಮಾಡಲ್ಪಟ್ಟಿತು. ಎಲ್ಲಾ ಶುದ್ಧ ಪಾತ್ರಗಳು ಬಾಬೇಲದ ದೇವಾಲಯಕ್ಕೆ ವೈಯಲ್ಪಟ್ಟವು (ಕ್ರಿ. ಮು. ೫೮೮).

ಪರಿಶಿಷ್ಟ. ಯೆಹೂದ ರಾಜ್ಯದಲ್ಲಿ ವಿಭಾಗವಾದಂದಿನಿಂದ ಮುನ್ನೂರ ಎಂಭತ್ತೇಳು ವರ್ಷದ ಪರ್ಯಂತರ ಆಳಿದ ೨೦ ಅರಸುಗಳು ಎಲ್ಲರೂ ದಾವಿದನ ಸಂತಾನದವರಾಗಿದ್ದರು. (ಬಲಾತ್ಕಾರಿಯಾದ ಅತಲ್ಯಳ ಹೊರ್ತು) ಇವರಲ್ಲಿ ೮ ಜನರು ಮಾತ್ರವೇ ತಂದೆಯಾದ ದಾವಿದನ ಮಾರ್ಗಗಳಲ್ಲಿ ನಡಕೊಂಡರು. ಆದರೆ ದೇವರು ಬಹುಕಾಲ ಪರ್ಯಂತರ ದಂಡಿಸಿ ತಾಳಿಕೊಂಡರೂ ಕಡೆಯಲ್ಲಿ ಹ್ಯಾಗೂ ಬಂದಂಥ ಕೇಡಿಗೆ, ಅವರಾಗಲಿ ಪ್ರಾಣವುಳ್ಳ ಅನೇಕ ಪ್ರವಾದಿಗಳಾಗಲಿ ಬಹಳ ಹೊತ್ತು ಎದುರು ನಿಲ್ಲಲಿಕ್ಕೆ ಶಕ್ತರಾಗಿರಲಿಲ್ಲ.

೩) ೨ ಅರಸು. ೨೫, ೨೨ನೇ ಮೊದಲಾದ ಶ್ಲೋಕಗಳು. (ಯೆರೆಮಿ. ೪೦ — ೪೪). ನೆಬುಕದ್ನೇಜರನು ಕೆಲವು ಕೀಳುಜನರನ್ನು ಮಾತ್ರವೇ ಹಿಂದೆ ಬಿಟ್ಟು, ಗೆದಲ್ಯನನ್ನು ಸುಭೆದಾರನಾಗಿ ನೇಮಿಸಿದನು. ಈತನು ಸ್ವಲ್ಪ ಕಲ್ದೇಯರ ಶಿಪಾಯರ ಸಂಗಡ ಮಿಚ್ಪದಲ್ಲಿ ವಾಸ ಮಾಡಿದನು. ಅವನು ಯೆರೆಮಿಯನ ಸಂಗಡ ಸ್ನೇಹದಲ್ಲಿಯೇ ನಡಕೊಂಡು, ಬಹು ನಿಧಾನದಿಂದಲೇ ಆಳಿದನು; ಓಡಿ ಹೋದವರಲ್ಲಿ ಅನೇಕರು ತಿರಿಗಿ ಬಂದರು. ರಾಜ್ಯವು ಕ್ರಮವಾಗಿ ನಡಿಯಲಿಕ್ಕೆ ಆರಂಭವಾಯಿತು. ಆದರೆ ಅಷ್ಟರೊಳಗೆ ಗೆದಲ್ಯನು ೨ ತಿಂಗಳು ಸುಭೆದಾರಿ ನಡಿಸಿದ ಮೇಲೆ ಮತ್ತೊಬ್ಬರಿಂದ ಕೇಳಿ ಇದ್ದರೂ, ಇಷ್ಮಯೇಲನಲ್ಲಿ ಭರವಸವಿಟ್ಟಿರಲಾಗಿ, ರಾಜಸಂತತಿಯವನಾದ ಈ ಮತಭ್ರಾಂತ ಯೆಹೂದ್ಯನು, ಗೆದಲ್ಯನನ್ನು ಕೊಂದು ಹಾಕಿದನು.

ಉಳಿದ ಜನರೆಲ್ಲರೂ ಕಲ್ದೇಯರು ಪ್ರತಿಫಲ ಕಾಡುವರೆಂದು ಹೆದರಿ ಐಗುಪ್ತಕ್ಕೆ ಓಡಿ ಹೋದರು.



## § 91. ವಾಸಾಂತ್ರದ ಪ್ರವಾದಿಗಳು: ನಾಹುಮ್, ಹಬಕುಕ್, ಜೆಫನಿಯ, ಯೆರೆಮಿಯ

೧) ಗಲಿಲಾಯದ ಯೆಲ್ಕೋಷದವನಾದ ಪ್ರವಾದಿಯಾದ ನಾಹುಮನು ನಿನವೆಯ ವಿನಾಶವನ್ನು ಪ್ರವಾದಿಸಿದನು.

ಹಬಕುಕನು ಯೆಹೂದರಾಜ್ಯಕ್ಕೆ ಕಲ್ದೇಯರ ಪರಿಮುಖವಾಗಿ ಬರುವಂಥ ನ್ಯಾಯವಾದ ವಿನಾಶವನ್ನೂ ಆದರೆ ದ್ರೋಹಿಗಳಾದ ವಿನಾಶಕರಿಗೆ ಮತ್ತೆ ಸಂಭವಿಸುವಂಥ ನ್ಯಾಯಶಿಕ್ಷೆಯನ್ನೂ ಸಹಾ ಸಾರಿದನು.

ಜೆಫನ್ಯನು ಅರಸನಾದ ಯೋಸೀಯನ ದಿವಸಗಳಲ್ಲಿ ಪ್ರವಾದಿಸಿದನು. ಈತನು ಯೆರೂಸಲೇಮದ ಮೇಲೆ ದೇವರ ನ್ಯಾಯಶಿಕ್ಷೆಗಳನ್ನೂ, ಆದರೆ ಅದೇ ಪ್ರಕಾರ ದೇವರ ಜನಾಂಗದ ಶತ್ರುಗಳ ಮೇಲೆ ಸಹಾ ನ್ಯಾಯಶಿಕ್ಷೆಗಳನ್ನೂ ತರುವಾಯ ಸಮಸ್ತ ಜನಾಂಗಗಳಿಗೆ ಸುವಾರ್ತೆಯ ಪ್ರಸಂಗದಿಂದ ಉಂಟಾಗುವ ರಕ್ಷಣ್ಯವನ್ನೂ ಆಶಿರ್ವಾದವನ್ನೂ ಸಹಾ ಸಾರಿದನು.

ಪರಿಶಿಷ್ಟ. ಲೋಕದಲ್ಲಿ ಪ್ರಾಮುಖ್ಯವಾದ ಆ ಮಾತನ್ನು ಹೇಳಿದವನು ಹಬಕುಕ್ ೨, ೪. ಸಮ ನೋಡು. ರೋಮಾ. ೧, ೧೭. ನೀತಿವಂತನು ವಿಶ್ವಾಸದಿಂದ ಬದುಕುವನು.

ಜೆಫನಿಯನು ಮೆಸ್ಸೀಯನ ಕಾಲದ ವಿಷಯವಾಗಿ ಸಾರಿದ್ದು: ೩, ೯. ವಚನ "ತರುವಾಯ ನಾನು ಜನಾಂಗಗಳಿಗೆ ಅವರೆಲ್ಲರೂ ಯೆಹೋವನ ನಾಮಕ್ಕೆ ಮೊರೆ ಇಟ್ಟು ಅವನನ್ನು ಯೇಕಮತ್ಯವಾಗಿ ಸೇವಿಸ ಬೇಕೆಂದು, ಬೇರೆ ತರದಲ್ಲಿ ಹಿತಕರವಾದ ತುಟಿಗಳಿಂದ ಪ್ರಸಂಗಿಸ ಮಾಡುವೆನು."

೨) (ಪ್ರಧಾನ)ಯಾಜಕನ ಮಗನಾದ ಹಿಲ್ಕೀಯನ ಮಗನೂ ಒಂದು ವೇಳೆ ಪ್ರವಾದಿನಿಯಾದ ಹುಲ್ದಳ ಮೊಮ್ಮಗನೂ ಆಗಿದ್ದ ಯೆರೆಮಿಯನು ಬಹಳ ಚಿಕ್ಕವನಾಗಿ ಯೋಸೀಯನ ಕಾಲದಲ್ಲಿ ಉದ್ಯೋಗಕ್ಕೆ ಕರಿಯಲ್ಪಟ್ಟನು. ಮತ್ತು ಯೆರೂಸಲೇಮವು ನಾಶವಾದ ತರುವಾಯ ಸಹಾ ಅದನ್ನು ನಡಿಸಿದನು. ಈ ನಿಧಾನಿಯಾದ ಮೃದುಮನಸ್ಸಿನ ಮನುಷ್ಯನಿಗೆ ಬಿದ್ದು ಹೋದ ಯೆಹೂದ್ಯರಿಗೆ, ನ್ಯಾಯಶಿಕ್ಷೆಗಳ

ನ್ನು ಸಾರುವದು ಮಾತ್ರವಲ್ಲ, ಅವುಗಳ ಸಮಯದಲ್ಲಿ ತಾನೇ ಬದುಕುವದು ಸಹಾ ಬಂತು. ಅವನು ಕರ್ತನಿಗೆ — ಅಯ್ಯೋ ಕರ್ತನಾದ ಯೆಹೋವನೇ ಈಗೋ ನಾನು ಪ್ರವಾದಿಸಲಿಕ್ಕೆ ಯೋಗ್ಯನಲ್ಲ ಯಾಕಂದರೆ ನಾನು ಬಹಳ ಚಿಕ್ಕವನು ಎಂದು ದುಃಖದಿಂದ ಹೇಳಿದರೂ ಕರ್ತನು ಅವನಿಗೆ ಪ್ರತಿಯಾಗಿ ಹೇಳಿದ್ದು "ನಾನು ಬಹಳ ಚಿಕ್ಕವನೆಂದು ನನಗೆ ಹೇಳ ಬೇಡ, ನಾನು ನಿನ್ನನ್ನು ಕಳುಹಿಸುವಲ್ಲಿ ನೀನು ಹೋಗ ಬೇಕು. ನಾನು ಆಜ್ಞಾಪಿಸುವದನ್ನು ಪ್ರಸಂಗಿಸ ಬೇಕು. ಅವರಿಗೆ ಹೆದರ ಬೇಡ! ಯಾಕಂದರೆ ನಾನು ನಿನ್ನ ಸಂಗಡಲಿದ್ದೇನೆ. ನಿನ್ನನ್ನು ರಕ್ಷಿಸುವೆನು" ಮತ್ತು ಕರ್ತನು ಕೈಚಾಚಿ ಅವನ ಬಾಯಿಯನ್ನು ಮುಟ್ಟಿ ಹೇಳಿದ್ದು "ಈಗೋ ನಾನು ನನ್ನ ಮಾತನ್ನು ನಿನ್ನ ಬಾಯಲ್ಲಿಡುತ್ತೇನೆ; ಈಗೋ ನಾನು ಈ ದಿವಸವೇ ಜನಾಂಗಗಳ ಮೇಲೆಯೂ ರಾಜ್ಯಗಳ ಮೇಲೆಯೂ ನೀನು ಅವುಗಳನ್ನು ಕಿತ್ತು ಒಡದು ಕೆಡಿಸಿ ನಿರ್ಮೂಲ ಮಾಡಿ ಕಟ್ಟಿ ನೆಡುವ ಹಾಗೆ ಸಹಾ ನಿನ್ನನ್ನು ಇಡುತ್ತೇನೆ." ಅವನು ಮೋಶೆಯ ಹಾಗೆಯೇ ಭೂಮಿಯಲ್ಲಿರುವ ಎಲ್ಲಾ ಮನುಷ್ಯರಿಗಿಂತಲೂ ಉಪದ್ರ ಪಡುವಂಥಾ ತಾಳ್ಮೆಯುಳ್ಳ ಮನುಷ್ಯನಾಗಿದ್ದನು. ಮತ್ತು ಎಲೀಯನ ಹಾಗೆಯೇ ಹಿಂಸೆಗೂ ಹಗೆಗೂ ಗುರಿಯಾಗಿದ್ದನು. ಆದರೆ ಮೋಶೆಯ ಸ್ವಾಭಾವಿಕವಾದ ತ್ರಾಣವೂ ಎಲೀಯನ ಖಂಡಿತವಾದ ಮನಸ್ಸೂ ಅವನಿಗೆ ಇರಲಿಲ್ಲ. ಉಪದ್ರವೂ ಹಿಂಸೆಯೂ ಎಲ್ಲಾ ಕಡೆಯಿಂದ ಅವನ ಮೇಲೆ ಬಂದವು. ಆದರೆ ಮೇಲಿನಿಂದ ಬಂದ ಬಲದ ಸಹಾಯವೂ ಆದರಣೆಗಳೂ ಅದೇ ಪ್ರಕಾರ ಸಮೀಪದಲ್ಲಿಯೂ ಬಹು ಕಾಲದ ಮೇಲೆಯೂ ಬರುವಂಥ ರಕ್ಷಣ್ಯದ ಮೇಲೆ ಸ್ಥಿರವಾಗಿಟ್ಟ ದೃಷ್ಟಿಯೂ ಅವನನ್ನು ಸ್ಥಿರವಾಗಿ ನಿಲ್ಲಿಸಿ ಎಲ್ಲಾ ದೇಶಕ್ಕೂ ಯೆಹೂದದ ಅರಸುಗಳಿಗೂ ಅವರ ಯಾಜಕರಿಗೂ ಅಧಿಪತಿಗಳಿಗೂ ದೇಶದಲ್ಲಿರುವ ಜನರಿಗೂ ಪ್ರತಿಕೂಲವಾಗಿ ಭದ್ರವಾದ ಪಟ್ಟವಾಗಿಯೂ ಕಬ್ಬಿಣದ ಸ್ತಂಭವಾಗಿಯೂ ತಾಂಬ್ರದ ಗೋಡೆಯಾಗಿಯೂ ಇರಲಿಕ್ಕೆ ಬಲಪಡಿಸಿದವು. ೧, ೧೮. ಅವನು ೨೦, ೭—೧೧ ವರೆಗೆ ಹೇಳುವದು "ಕರ್ತನೇ ನೀನು ನನ್ನನ್ನು ಪುಸಲಾಯಿಸಿದಿ, ಮತ್ತು ನಾನು ಪುಸಲಾಯಿಸಲಿಕ್ಕೆ ಬಿಟ್ಟೆ; ನೀನು ನನಗಿಂತ ಬಲವಂತನಾದಿ, ಮತ್ತು ಗೆದ್ದಿ; ಆದರೆ ನಾನು ಅದಕ್ಕಾಗಿ ಅಪಹಾಸ್ಯಕ್ಕೆ ಗುರಿಯಾದೆ: — ಆಗಲು ನಾನು ನೆನಸಿದ್ದು ಒಳ್ಳೇದು, ನಾನು ಇನ್ನು ಅವನ ಹೆಸರಿನಲ್ಲಿ ಮಾತಾಡಲಾರೆ; ಆದರೆ ನನ್ನ ಎಲುಬುಗಳಲ್ಲಿ ಮುಚ್ಚಿದಂಥ ಉರಿಯುವ ಬೆಂಕಿಯ ಹಾಗೆ ನನ್ನ ಹೃದಯದಲ್ಲಿ ಉಂಟಾಗಿರಲು ಅದನ್ನು ಇಟ್ಟು ಕೊಳ್ಳಲಿಕ್ಕೆ ಕೂಡದೆ, ದಣಿದು, ಗೆಲ್ಲಲಿಕ್ಕೆ ಆಗಲಿಲ್ಲ. — ಆದರೆ ಕರ್ತನು ಬಲವುಳ್ಳ ಶೂರನಾಗಿ ನನ್ನ ಹತ್ತರ ಇದ್ದಾನೆ." ಯೆರೆಮಿಯನು ಹಳೇ ಒಡಂಬಡಿಕೆಯ ಯೋಹಾನನೂ ನಿಧಾನಿಯೂ ಮೃದುಮನಸ್ಸಿನವನೂ ಆಗಿದರೂ ಉರಿಯುವ ಕೆಂಡಗಳುಳ್ಳ ಬೆಂಕಿಯ ಪ್ರಾಣದವನು

ಮನಸ್ಸಿನ ದುಃಖದಲ್ಲಿ ಹುಟ್ಟಿದ ದಿನವನ್ನು ಸಹಾ ಶಪಿಸುವಷ್ಟು ತಪ್ಪು ಮಾಡಿದನು. (೨೦, ೧೪—೧೮)

೩) ಯೆರೆಮಿಯನು ನಿಧಾನವಾಗಿ ಬಾಬೇಲದ ಕೈಕೆಳಗೆ ಆಗ ಬೇಕೆಂದು ತನ್ನ ಜನರಿಗೆ ಬುದ್ಧಿ ಹೇಳಿದನು. ಆದರೆ ಈ ಪ್ರಸಂಗವು ನಿಷ್ಫಲವಾದಾಗ, ಶುದ್ಧ ಪಟ್ಟಣವು ನಾಶವಾಗುವದೆಂದು ಅವರು ಬಾಬೇಲಕ್ಕೆ ಶೆರೆವೈಯಲ್ಪಡುವರೆಂದು ಸಾರಿದನು. ಆದರೆ ೭೦ ವರ್ಷ ಶೆರೆಯಲ್ಲಿದ್ದ ಮೇಲೆ ತಿರಿಗಿ ಬರ ಬಹುದೆಂಬ ವಾಗ್ದತ್ತದಿಂದ ಅವರನ್ನು ಆದರಿಸಿದನು. ನೆಬುಕದ್ನೇಜರನು ಮನಸ್ಸು ಬಂದಲ್ಲಿ ಇರಲಿಕ್ಕೆ ಅವನಿಗೆ ಅನುಜ್ಞೆ ಕೊಟ್ಟನು. ಅವನು ತನ್ನ ಜನಾಂಗದವರಲ್ಲಿ ಉಳಿದವರ ಮೇಲೆ ಶುದ್ಧ ಪ್ರೀತಿಯಿಂದ ತುಂಬಿದವನಾಗಿ, ಶುದ್ಧದೇಶದಲ್ಲಿ ಉಳಕೊಂಡನು. ಗೆದಾಲ್ಯನನ್ನು ಕೊಂದು ಹಾಕಿದ ತರುವಾಯ ಅವರ ಸಂಗಡ ಐಗುಪ್ತಕ್ಕೆ ಹೋದನು. ಉಳಿದ ಜನರಿಗೆ ಅಲ್ಲಿ ಸಹಾ ಬುದ್ಧಿಯನ್ನೂ ಆದರಣೆಯನ್ನೂ ಹೇಳುತ್ತಾ ಇದ್ದನು. ಆದರೆ ಅವರು ಅಲ್ಲಿ ಸಹಾ ಅವನನ್ನು ಹಿಂಸಿಸಿ, (ಯೆಹೂದ್ಯರಲ್ಲಿರುವ ಒಂದು ಸಂಪ್ರದಾಯದ ಪ್ರಕಾರ) ಕಡೆಯಲ್ಲಿ ಕಲ್ಲೆಸೆದರು. ಅವನ ದುಃಖಾಲಾಪನೆಗಳಲ್ಲಿ (ಗೋಳಾಟಗಳು) ನಾಶವಾದ ಶುದ್ಧಪಟ್ಟದಲ್ಲಿ ತನ್ನ ಜನಾಂಗದ ಸಂಕಟವನ್ನು ಗೋಳಾಡಿ, ಮಾನಸಾಂತರ ಪಡಬೇಕೆಂದು ಹೇಳುತ್ತಾನೆ.

ಪರಿಶಿಷ್ಟ. ಕ್ರಿಸ್ತನ ವಿಷಯವಾಗಿ ಅವನು ಪ್ರವಾದಿಸುವದು: ಇಗೋ ನಾನು ಇಸ್ರಯೇಲ ಮನೆಗೂ ಯೆಹೂದ ಮನೆಗೂ ಮಾತಾಡಿದ ಕೃಪೆಯ ವಾಕ್ಯವನ್ನು ಎಬ್ಬಿಸುವ ಕಾಲವು ಬರುತ್ತದೆ. ಆ ದಿವಸಗಳಲ್ಲಿ ದಾವಿದನಿಗೆ ನೀತಿಯುಳ್ಳ ಚಿಗುರನ್ನು ಮೇಲೆ ಬರ ಮಾಡುವೆನು. ಮತ್ತು ಅರಸನಾಗಿ ಅವನು ಚನ್ನಾಗಿ ಆಳಿ ನ್ಯಾಯವನ್ನೂ ನೀತಿಯನ್ನೂ ಭೂಮಿಯಲ್ಲಿ ಸ್ಥಾಪಿಸುವನು. ಆ ಸಮಯದಲ್ಲಿ ಯೆಹೂದಕ್ಕೆ ಸಹಾಯವಾಗುವದು. ಯೆರೂಸಲೇಮವು ಭದ್ರವಾಗಿ ನಿವಾಸ ಮಾಡುವದು. ಮತ್ತು ಅವನನ್ನು ಯೆಹೋವನು ನಮ್ಮ ನೀತಿ (ಯೆಹೋವಾ ಜಿದ್ಕೇನು) ಎಂದು ಕರಿಯುವರು. ಯಾಕಂದರೆ ಕರ್ತನು ಹೇಳುವದು ಯಾವಾಗಲೂ ಕುಂದದೇ ದಾವಿದನಿಂದ ಒಬ್ಬನು ಇಸ್ರಯೇಲ ಮನೆಯ ಸಿಂಹಾಸನದಲ್ಲಿ ಕೂತು ಕೊಳ್ಳ ಬೇಕು. ೩೩, ೧೪—೧೭.



## § 92. ಶೆರೆವೈಯಲ್ಪಟ್ಟವರು ಎಜೆಕಿಯೇಲನು ಅವರನ್ನು ನಡಿಸಿದ್ದು

೧) ಶೆರೆವೈಯಲ್ಪಟ್ಟವರಲ್ಲಿ ಸಹಾ ಸುಳ್ಳುಪ್ರವಾದಿಗಳೂ ಮೋಸಗಾರರೂ ಎದ್ದು, ದೇವರ ನ್ಯಾಯಶಿಕ್ಷೆಯಿಂದ ಇಡಲ್ಪಟ್ಟ ಕಲ್ದೇಯರ ನೊಗಕ್ಕೆ ಪ್ರತೀಕಾರವಾಗಿ ತಂಟೆ ಮಾಡುವ ಜನರ ವಿಪರೀತ ಬುದ್ಧಿಯನ್ನು ಬೆಳಿಸಿ, ಕನಸಿನ ಗಂಟಿನ ಹಾಗೆ ಇರುವ ಕೋರಿಕೆಯಿಂದ ಅವರನ್ನು ದಾರಿ ತಪ್ಪಿಸಿದರು. ಯೆರೆಮಿಯನು ಈ ವರ್ತಮಾನವನ್ನು ಕೇಳಿದಾಗ ಅರಸನಾದ ಜೆದೆಕೀಯನು ಬಾಬೇಲಕ್ಕೆ ಕಳುಹಿಸಿದ ರಾಯಭಾರಿಗಳ ಸಂಗಡ ಒಂದು ಕಾಗದವನ್ನು ಬರದು (ಯೆರೆಮಿ. ೨೯.) ಅವರಿಗೆ ಬುದ್ಧಿ ಹೇಳಿದನು. ಕರ್ತನ ನಾಮದಲ್ಲಿ ಅವನು ಬರದದ್ದು “ಉಳಕೊಳ್ಳುವದಕ್ಕೆ ಮನೆಗಳನ್ನು ಕಟ್ಟಿಕೊಳ್ಳಿರಿ, ಫಲಗಳನ್ನು ತಿನ್ನುವದಕ್ಕಾಗಿ ಹಿತ್ತಲುಗಳನ್ನು ನೆಡಿರಿ. ನಾನು ನಿಮ್ಮನ್ನು ವೈಯ ಮಾಡಿದ ಪಟ್ಟಣಕ್ಕೆ ಒಳ್ಳೇದನ್ನು ಹುಡುಕಿರಿ. ಮತ್ತು ಅದಕ್ಕಾಗಿ ಕರ್ತನ ಹತ್ತರ ಬೇಡಿಕೊಳ್ಳಿರಿ. ಯಾಕಂದರೆ ಅದಕ್ಕೆ ಒಳ್ಳೇದಾದರೆ ನಿಮಗೆ ಒಳ್ಳೇದಾಗುತ್ತದೆ. ಬಾಬೇಲಕ್ಕೆ ೭೦ ವರ್ಷ ತುಂಬಿದಾಗ ನಾನು ನನ್ನ ಕೃಪೆಯ ವಾಕ್ಯವನ್ನು ನಿಮ್ಮ ಮೇಲೆ ಎಬ್ಬಿಸಿ ನಿಮ್ಮನ್ನು ಈ ಸ್ಥಳಕ್ಕೆ ತಿರಿಗಿ ತರುವೆನು. ಯಾಕಂದರೆ ನಿಮ್ಮ ಮೇಲೆ ನನಗಿರುವ ಆಲೋಚನೆಗಳನ್ನೂ ನಾನು ತಿಳಿದು ಇರುತ್ತೇನೆ, ಅವು ಸಮಾಧಾನದ ಆಲೋಚನೆಗಳು ದುಃಖದವುಗಳಲ್ಲ”.

೨) ಯೆರೆಮಿಯನು ಹಿಂದುಳಿದವರ ಮಧ್ಯದಲ್ಲಿ ಹೋರಾಡಿದ ಹಾಗೆಯೇ ಎಜೆಕಿಯೇಲನು (ಐಫ್ರಾತಕ್ಕೆ ಕಿರ್ಕೆಸ್ಯದ ಹತ್ತರ ಸಂಗಮವಾಗುವ) ಖಬೋರ (ಕೇಬಾರ್) ನದಿಯ ಹತ್ತರ ಶೆರೆವೈಯಲ್ಪಟ್ಟವರ ಮಧ್ಯದಲ್ಲಿ ಸುಳ್ಳುಪ್ರವಾದಿಗಳ ಮೋಸಕ್ಕೂ ಜನರಲ್ಲಿರುವ ಮಾಂಸಭಾವದ ಕೋರಿಕೆಗಳಿಗೂ ಮಾನಸೋಂತ್ರ ಪಡದ ಭಾವನೆಗೂ ಪ್ರತಿಕೂಲವಾಗಿ ಹೋರಾಡ ಬೇಕಾಯಿತು. ಆದರೆ ಇವನು ಯೆರೆಮಿಯನ ಹಾಗಲ್ಲ. ಪೂರ್ಣವಾಗಿ ಬೇರೆ ಸ್ವಭಾವದವನಾಗಿದ್ದನು. ಉತ್ವೇಗಿಯೂ ಬಲವುಳ್ಳವನೂ ತಾಪವೂ ಉರಿಯುವ ವಾತ್ಸಲ್ಯವೂ ಉಳ್ಳವನಾಗಿದ್ದನು. ಅವನ ಪುಸ್ತಕವು ಮಹತ್ವವುಳ್ಳ ತಿಳಿಯ ಕೂಡದ ದರ್ಶನಗಳಿಂದ ತುಂಬಿಯದೆ. ಯೆರೂಸಲೇಮುವು ಇದ್ದ ಮಟ್ಟಿಗೂ ಶೆರೆಯವರು ಸುಳ್ಳುಪ್ರವಾದಿಗಳಿಂದ ಭ್ರಮೆಗೊಂಡು ಬೇಗ ತಿರಿಗಿ ಬರ ಬಹುದೆಂದು ನೆನಸಿದರು. ಯೆಹೆಜ್ಕಿಯೇಲನು ಈ ಭ್ರಮೆಯನ್ನು ತೆಗಿಯಲಿಕ್ಕೆ ಪ್ರಯತ್ನ ಮಾಡಿ, ವಾಕ್ಯದಿಂದಲೂ ಕ್ರಿಯೆಯಿಂದಲೂ ಗುರ್ತಿನಿಂದಲೂ ಪ್ರಸಂಗದಿಂದಲೂ ನಿಸ್ಸಂಶಯವಾಗಿ ಶುದ್ಧಪುರದ ವಿನಾಶವು ಬರುತ್ತದೆಂದು ಸಾರಿದನು. ಮತ್ತು ಯೆರೂಸಲೇಮುವು ಬಿದ್ದು ಹೋದಾಗ, ಮನಗುಂದಿದ ಜನರನ್ನು ಆದರಿಸಿ, ಸಮೀಪದಲ್ಲಿಯೂ ದೂರದಲ್ಲಿಯೂ ಇರುವ ರಕ್ಷಣ್ಯಕ್ಕೆ ಬೆರಳು ತೋರಿಸಿದನು.

ಪರಿಶಿಷ್ಟ. ಮೆಸ್ಸೀಯನ ಕಾಲದ ವಿಷಯವಾಗಿ ಅವನು ಪ್ರವಾದಿಸಿದ್ದು (೩೪, ೨೩.) ನಾನು ಅವರನ್ನು ಮೇಯಿಸಲಿಕ್ಕಾಗಿ ಒಬ್ಬನೇ ಕುರುಬನಾದ ನನ್ನ ಸೇವಕನಾದ ದಾವಿದನನ್ನು ಎಬ್ಬಿಸುವೆನು. ಈತನು ಅವರನ್ನು ಮೇಯಿಸಿ ಅವರ ಕುರುಬನಾಗಿರುವನು. ೩೬, ೨೬. ೨೭. ನಾನು ನಿಮ್ಮೊಳಗೆ ಹೊಸ ಹೃದಯವನ್ನೂ ಹೊಸ ಆತ್ಮವನ್ನೂ ಕೊಡುವೆನು. ಕಲ್ಲಿನ ಹೃದಯವನ್ನು ತೆಗದು ಮಾಂಸದ ಹೃದಯವನ್ನು ಕೊಡುವೆನು. ನಾನು ನಿಮ್ಮೊಳಗೆ ನನ್ನ ಆತ್ಮವನ್ನು ಕೊಟ್ಟು ನಿಮ್ಮನ್ನು ನನ್ನ ಕಟ್ಟಳೆಗಳಲ್ಲಿ ನಡಿಯುವಂಥಾ ಜನರಾಗ ಮಾಡುವೆನು. ೩೭ನೆಯಲ್ಲಿ ಪ್ರವಾದಿಯು ಒಣಗಿ ಹೋದ ಸತ್ತವರ ಎಲುಬುಗಳಿಂದ ತುಂಬಾಗಿರುವ ಬೈಲನ್ನು ದೇವರ ಉಶ್ವಾಸದಿಂದ ಆ ಎಲುಬುಗಳು ತಿರಿಗಿ ಜೀವಂತವಾಗುವದನ್ನು ಕುರಿತ ದರುಶನವಾಗಿ ಜನಾಂಗದ ರಕ್ಷಣ್ಯವನ್ನು ವರ್ಣಿಸುತ್ತಾನೆ. ೪೦—೪೮ನೇ ಸಂಧಿಯು ವರೆಗೆ ಹೊಸ ದೇವಾಲಯದ ವಿಷಯವಾಗಿಯೂ ಹೊಸ ಯೆರೂಸಲೇಮದ ವಿಷಯವಾಗಿಯೂ ಹೊಸತಾಗಿ ಆಗುವ ದೇಶವಿಭಾಗದ ವಿಷಯವಾಗಿಯೂ ಬರದಿಟ್ಟ ಪ್ರವಾದಿದರುಶನವು ಬಹಳ ಆಶ್ಚರ್ಯಕರವಾಗಿರುತ್ತದೆ.

೩) ಆದರೆ ಹೆಚ್ಚಾದವರು ಪರದೇಶದಲ್ಲಿ ಸಂತೋಷವಾಗಿರಲಿಕ್ಕೆ ಆರಂಭಿಸಿದರು. ಹ್ಯಾಗಂದರೆ ಬಹಿರಂಗದಲ್ಲಿ ಸೆರೆಯವರಿಗೆ ಬಹಳ ಸೌಖ್ಯವಿತ್ತು. ಹೀಗಿರುತ್ತಿರಲಾಗಿ ಕೆಲವರು ಹೊರಗಿನ ಸೌಖ್ಯದಲ್ಲಿ ತೃಪ್ತರಾಗಿ ಸ್ವದೇಶಕ್ಕೆ ತಿರಿಗಿ ಬರಬೇಕೆಂಬ ಇಚ್ಛೆಯನ್ನು ಮರತು ಬಿಟ್ಟರು. ಆದರೂ ಅವರಲ್ಲಿ ಒಳ್ಳೇಯವರು ಪಿತೃಗಳ ದೇಶಕ್ಕೂ ಶುದ್ಧ ಪಟ್ಣಕ್ಕೂ ಮನೋಹರವಾದ ಕರ್ತನ ಆರಾಧನೆಗಳಿಗೂ ಮನವೊಡ್ಡಿ ತಮ್ಮಲ್ಲಿರುವ ಇಚ್ಛೆಯನ್ನು ಕುಂದಿ ಹೋಗ ಗೊಡಿಸಲಿಲ್ಲಾ. ಇಂಥಾ ಮನೋಭಾವನೆಯನ್ನು ೧೩೭ನೇ ಕೀರ್ತನೆಯು (ಬಾಬೇಲಿನ ನದಿಗಳ ಬಳಿಯಲ್ಲಿ ಆಗ ಕೂತು ಕೊಂಡು ಚಿಯೋನನ್ನು ನೆನಸಿ ಕೊಳ್ಳುತ್ತಲೆ ಅತ್ತೆವು) ಬಹಳ ತ್ರಾಣದಿಂದಲೂ ಪ್ರಬಲವಾಗಿಯೂ ಉಚ್ಚರಿಸುತ್ತದೆ. ಹ್ಯಾಗೂ ವಾಸಾಂತ್ರದ ದಂಡಣೆಯು ಬಹಳ ಫಲ ಕೊಟ್ಟಿತು. ಇಷ್ಟು ವರೆಗೆ ಜಯಿಸ ಕೂಡದಂಥಾ ಅನ್ಯದೇವರುಗಳನ್ನು ಆರಾಧಿಸುವಂಥಾ ಮನಸ್ಸು ಪೂರ್ಣವಾಗಿ ಹೋಯಿತು. ಮತ್ತು ಪಿತೃಗಳ ನೇಮವನ್ನು ಎಡೆಬಿಡದೆ, ಅಲ್ಲಾಡದೆ, ಹಿಡಕೊಳ್ಳುವ ಮನಸ್ಸು ಉಂಟಾಯಿತು. ಇದರಲ್ಲಿ ವಿಶೇಷವಾಗಿ ಬಹಿರಂಗದಲ್ಲಿ ಮಾಡುವ ಕ್ರಿಯೆಗಳೂ ಸ್ವನೀತಿಯೂ ಪ್ರಬಲವಾದವೆಂಬದು ಸರಿ.



## § 93. ಪ್ರವಾದಿಯಾದ ದಾನಿಯೇಲನು

೧) ೧—೩ ಸಂ. ದಾನಿಯೇಲನು ಅವನ ಸ್ನೇಹಿತರಾದ ಸದ್ರಾಕ್ ಮೇಸಾಕ್ ಅಬೆದ್ನೇಗೊ ಎಂಬ ಈ ಮೂವ್ವರ ಸಂಗಡ ಬಾಬೇಲದಲ್ಲಿ ಮಾಗರ (ವಿದ್ವಾಂಸರು) ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದನು. ಅವನಿಗೆ ಬೆಲ್ಶಾಜರನೆಂಬ ಹೆಸರಿಟ್ಟರು. ಒಂದು ಸಾರಿ ನೆಬುಕದ್ನೇಜರನಿಗೆ ಸ್ವಪ್ನ ಬಿತ್ತು. ಸ್ವಪ್ನವನ್ನು ಮರತು ಬಿಟ್ಟು ಮೇಲೆ ಕೋಪಿಷ್ಠನಾದ ಅರಸನು ಮಾಗರು ಸ್ವಪ್ನವನ್ನಾಗಲಿ ಅದರ ಅಭಿಪ್ರಾಯವನ್ನಾಗಲಿ ಹೇಳಲಿಕ್ಕೆ ಅಶಕ್ತರಾಗಿದ್ದಾರೆಂದು ಅವರೆಲ್ಲರನ್ನು ಕೊಂದು ಹಾಕಲಿಕ್ಕೆ ನಿಶ್ಚೈಸುತ್ತಾನೆ. ದಾನಿಯೇಲನು ಸಮಯ ಕೇಳಿ ಕೊಂಡು ದೇವರಿಗೆ ಪ್ರಾರ್ಥನೆ ಮಾಡಿ ಅರಸನಿಗೆ ಸ್ವಪ್ನವನ್ನೂ ಅಭಿಪ್ರಾಯವನ್ನೂ ಹೇಳುತ್ತಾನೆ. ಅರಸನಿಗೆ ಒಂದು ದೊಡ್ಡ ಬಿಂಬವು ಕಂಡಿತು. ತಲೆ ಭಂಗಾರದ್ದು, ಎದೆ ಬೆಳ್ಳಿಯದು, ಹೊಟ್ಟೆ ತಾಂಬ್ರದ್ದು, ತೊಡೆಗಳು ಕಬ್ಬಿಣದ್ದು, ಪಾದಗಳು ಮಣ್ಣೂ ಕಬ್ಬಿಣವೂ ಕೂಡಿಸಿದ ಬೆರಿಕೆಯದು. ಒಂದು ಕಲ್ಲು ಕೈಯಿಂದಲ್ಲದೆ ಬಿಡಿಸಲ್ಪಟ್ಟಿತು. ಇದು ಆ ಬಿಂಬವನ್ನು ಪುಡಿಪುಡಿ ಮಾಡಿ ಭೂಮಿಯನ್ನೆಲ್ಲಾ ತುಂಬಿಸುವಷ್ಟು ದೊಡ್ಡ ಪರ್ವತವಾಯಿತು. ದಾನಿಯೇಲನು ಅರ್ಥ ಹೇಳಿದ ಪ್ರಕಾರ ಅದರಿಂದ ಒಂದರ ಮೇಲೊಂದು ಬರುವ ಪ್ರಕಾರವಾಗಿಯೂ ಅವುಗಳ ಗುಣಪ್ರಕಾರವಾಗಿಯೂ ನಾಲ್ಕು ಲೋಕರಾಜ್ಯಗಳು ಹೇಳಿಯವೆ—(ಅಸೂರ್ಯ ಬಬಿಲೋನ್ಯರದು ಒಂದು, ಮೇದ್ಯ ಪರ್ಸ್ಯರದು ಎರಡನೇದು, ಗ್ರೇಕ ಮಕೆದೋನ್ಯರದು ಮೂರನೇದು, ಪೂರ್ವ ಪಶ್ಚಿಮ ಭಾಗಗಳಾದ ರೋಮಾಯರದು ನಾಲ್ಕನೇದು, ಬಿಂಬವನ್ನು, ಪುಡಿಪುಡಿ ಮಾಡಿ ಲೋಕವನ್ನೆಲ್ಲಾ ತುಂಬಿಸುವ ಕಲ್ಲಿನಿಂದ ತಿಳಿಯ ಬೇಕಾದದ್ದು—ಕರ್ತನಾದ ದೇವರು ಎಂದೂ ಲಯವಾಗದ ರಾಜ್ಯವನ್ನು ಸ್ಥಾಪಿಸುವನು. ಅವನ ರಾಜ್ಯವು ಬೇರೆ ಯಾವ ಜನಾಂಗಕ್ಕೂ ಬಾರದು. ಅದು ಈ ರಾಜ್ಯಗಳನ್ನೆಲ್ಲಾ ಪುಡಿಪುಡಿ ಮಾಡಿ ನಿರ್ಮೂಲ ಮಾಡುವದು. ಆದರೆ ಅದು ನಿತ್ಯವಾಗಿರುವದು. ಆಗ್ಯೆ ದಾನಿಯೇಲನು ಮಾಗರ ಮುಖ್ಯಸ್ಥನೂ ಬಾಬೇಲ ದೇಶದ ಸುಭೆದಾರನೂ ಆದನು. ಸ್ವಲ್ಪ ಕಾಲದ ತರುವಾಯ ನೆಬುಕದ್ನೇಜರನು ಬೆಲ್ ದೈವದ ದೊಡ್ಡ ವಿಗ್ರಹವನ್ನು ಭಂಗಾರದಿಂದ ಮಾಡಿಸಿ ಪ್ರತಿಮನುಷ್ಯನು ಅದನ್ನು ಆರಾಧಿಸ ಬೇಕೆಂದು ಅಪ್ಪಣೆ ಕೊಟ್ಟನು. ದಾನಿಯೇಲನ ಮೂವ್ವರು ಸ್ನೇಹಿತರು ಅದನ್ನು ಹಾಗೆ ಮಾಡದಿರಲಾಗಿ ಅವರನ್ನು ಶಿಕ್ಷೆಗಾಗಿ ಬೆಂಕಿಯ ಭಟ್ಟಿಲ್ಲಿ ಹಾಕಿದರು. ಆದರೆ ಅರಸನು ಭಯ ಪಟ್ಟನು. ಆ ಮೂವ್ವರನ್ನು ಬೆಂಕಿಯಲ್ಲಿ ಸುರಕ್ಷಿತವಾಗಿ ಕಂಡನು, ಮತ್ತು ದೇವರುಗಳ ಮಗನ ಹಾಗೆಯೇ ಇರುವಂಥಾ ನಾಲ್ಕನೇಯವ

ನನ್ನು ಸಹ ನೋಡಿದನು. ಆದದರಿಂದ ಅವರ ದೇವರನ್ನು ಆರಾಧಿಸ ಬೇಕೆಂದು ಅಪ್ಪಣೆ ಕೊಟ್ಟನು.

೨) ಸಂ. ೪. ನೆಬುಕದ್ನೇಜರನಿಗೆ ಮತ್ತೊಂದು ಕನಸು ಬಿತ್ತು. ಅವನು ಹಾಲದಲ್ಲಿ ಫಲಭರಿತವಾದ ದೊಡ್ಡ ಮರವನ್ನು ಕಂಡನು, ಇದು ಒಬ್ಬ ದೂತನ ಅಪ್ಪಣೆಯ ಪ್ರಕಾರ ಕಡಿಯಲ್ಪಟ್ಟಿತು. ಮನುಷ್ಯಹೃದಯವನ್ನು ತೆಗದು ಪಶುಹೃದಯವನ್ನು ಅವನಿಗೆ ಕೊಟ್ಟರು. ಮತ್ತು ಈ ಪ್ರಕಾರವಾಗಿ ಸಂಕೋಲೆಗಳಲ್ಲಿ ಬಂಧಿತನಾಗಿ ಹುಲ್ಲಿನಲ್ಲಿ ನಡಿಯ ಬೇಕಾಯಿತು. ದಾನಿಯೇಲನು ಈ ಕನಸಿನ ಅಭಿಪ್ರಾಯ ಹೇಳಿದನು. “ನೀನೇ ಓ ಅರಸನೇ ಈ ಮರವಾಗಿರುತ್ತಿ ಮತ್ತು ಮನುಷ್ಯರ ಬಳಿಯಿಂದ ದೂರ ಮಾಡಲ್ಪಟ್ಟವನಾಗಿ ಹೊಲದ ಮೃಗಗಳ ಸಂಗಡ ಉಳಕೊಂಡು ಹುಲ್ಲು ತಿನ್ನುವಿ. ಆದರೆ ತರುವಾಯ ತಿರಿಗಿ ಬುದ್ಧಿ ಹೊಂದಿ ನಿನ್ನ ರಾಜ್ಯವನ್ನು ತಿರಿಗಿ ಪಡಕೊಳ್ಳುವಿ.” ಆ ಪ್ರಕಾರವೇ ಆಯಿತು. ಒಂದು ಸಾರಿ ಅರಸನು ತನ್ನನ್ನು ತಾನೇ ದೈವೀಕರಿಸುವ ಗರ್ವದಲ್ಲಿ ರಾಜದುರ್ಗದ ಶಿಖರದಿಂದ “ನನ್ನ ಮಹಿಮೆಯ ಘನತೆಗಾಗಿ ನನ್ನ ಮಹಾ ಬಲದಿಂದ ರಾಜಗೃಹಕ್ಕೋಸ್ಕರ ನಾನು ಕಟ್ಟಿದ ಮಹಾ ಬಾಬೇಲವು ಇದೇ” ಎಂಬ ಈ ವಿಪರೀತ ಮಾತುಗಳನ್ನು ಹೇಳಲು ನರವೃಕವೆಂಬ ಹುಚ್ಚುತಾಗಿತು. (ಆ ಹುಚ್ಚಿನಲ್ಲಿ ತಾನು ಕಾಡುಮೃಗವೆಂದು ನೆನಸಿದನು.) ಅವನು ಆಕಾಶದ ಹನಿಯಲ್ಲಿದ್ದು ಎತ್ತುಗಳ ಹಾಗೆ ಹುಲ್ಲು ತಿಂದನು. ಆ ಕಾಲವಾದ ಮೇಲೆ ಅವನು ತನ್ನ ಕಣ್ಣುಗಳನ್ನು ಆಕಾಶಕ್ಕೆ ಎತ್ತಿ ಕೊಂಡು ತಿರಿಗಿ ಬುದ್ಧಿ ಹೊಂದಿದನು. ಮತ್ತು ಅತ್ಯುನ್ನತನನ್ನು ಸ್ತುತಿಸಿ ತನ್ನ ಪ್ರಜೆಯವರೆಲ್ಲರೂ ಅವನನ್ನು ಆರಾಧಿಸ ಬೇಕೆಂದು ರಾಜಪತ್ರಿಕೆಯಿಂದ ಅಪ್ಪಣೆ ಕೊಟ್ಟನು.

೩) ಸಂ. ೫. ನೆಬುಕದ್ನೇಜರನ ಮಗನಾದ ಬೆಲ್ಶಾಜರನ (ಯೆವಿಲ್‌ಮೆರೊದಾಕನ) ಕಾಲದಲ್ಲಿ ದಾನಿಯೇಲನಿಗೆ ಅಷ್ಟು ಮಾನವಿರಲಿಲ್ಲ. ಒಂದು ಸಾರಿ ಅರಸನು ಒಂದು ಮಹಾ ಔತಣ ಮಾಡಿದಾಗ ಶುದ್ಧವಾದ ದೇವಾಲಯಪಾತ್ರೆಗಳನ್ನು ಅಶುದ್ಧ ಮಾಡಿ ಮತ್ತನಾದಾಗ ಕೋಣೆಯ ಗೋಡೆಯ ಹತ್ತರ ಒಂದು ಕೈ ಬಂದು ಗೋಡೆಯಲ್ಲಿ ಓದ ಕೂಡದ ಅಕ್ಷರಗಳನ್ನು ಬರಿಯಿತು. ರಾಜಮಾತೆಯು ದಾನಿಯೇಲನನ್ನು ನೆನಪು ಮಾಡಿದಳು. ಈತನು ಬರಹವನ್ನು ಓದಿದನು. “ಮೆನೇ ಮೆನೆ ತೆಕೆಲ್ ಉಫಾರ್ಸಿನ್„ ಹಾಗಂದರೆ “ಎಣಿಸಲ್ಪಟ್ಟಿತು ಎಣಿಸಲ್ಪಟ್ಟಿತು, ತೂಕಿಸಲ್ಪಟ್ಟಿತು, ವಿಭಾಗಿಸಲ್ಪಟ್ಟಿತು”. (ಇಲ್ಲವೇ ಪರ್ಸಿಸಲ್ಪಟ್ಟಿತು, ಅಂದರೆ ಪರ್ಸರದಾಯಿತು) ಮತ್ತು ಇದು ಮೇದ್ಯ ಪರ್ಸ್ಯ ಲೋಕರಾಜ್ಯದಿಂದ ಬೇಗ ನಾಶವಾಗುವದೆಂದೇ ಆಗಿರುತ್ತದೆ ಎಂದು ಹೇಳಿದನು. ಆಗ್ಯೆ ಜಯಭ್ರಷ್ಟನಾದ ಅರಸನು ಕೇಡು ಸಾರಿದ ಪ್ರವಾ

ದಿಗೆ ರಕ್ತಾಂಬರ ಕೊಡಿಸಿ ಅವನು ರಾಜ್ಯದಲ್ಲಿ ಮೂರನೇ ಧಾರೆ ಎಂದು ಸಾರಲಿಕ್ಕೆ ಅಪ್ಪಣೆ ಕೊಟ್ಟನು. (ಒಂದು ವೇಳೆ ಇದರಿಂದ ಕೇಡು ಬಾರದ ಹಾಗೆ ಮಾಡ ಬಹುದೆಂದು ನೆನಸಿದನೋ ಏನೋ) ಆದರೆ ಅದೇ ರಾತ್ರಿಯಲ್ಲಿ ಬೆಲ್ಶಾಜರನು ಕೊಂದು ಹಾಕಲ್ಪಟ್ಟನು. ಮತ್ತು ಮೇದ್ಯನಾದ ದರಿಯನು ರಾಜ್ಯವನ್ನು ತಕ್ಕೊಂಡನು.

೪) ಸಂ. ೬. ಮೇದ್ಯನಾದ ದರಿಯನು ತನ್ನ ರಾಜ್ಯದ ೩ ನೇ ಭಾಗದ ಮೇಲೆ ದಾನಿಯೇಲನನ್ನು ಸುಭೆದಾರನಾಗ ಮಾಡುತ್ತಾನೆ. ಅರಮನೆಯ ಸೇವಕರು ಹೊಟ್ಟೆಕಿಚ್ಚು ಪಟ್ಟು ವೃದ್ಧನಾಗಿ ಬಲಹೀನನಾದ ಅರಸನಿಂದ ಒಂದು ಅಪ್ಪಣೆಯನ್ನು ಮಾಡಿ ಕೊಂಡರು. ಅದು ಯಾವದಂದರೆ — ಯಾವನಾದರೂ ೩೦ ದಿವಸ ಪರ್ಯಂತರ ಅರಸನಿಂದ ಹೊರ್ತು ಒಬ್ಬ ದೇವರಿಂದಾಗಲಿ ಮನುಷ್ಯನಿಂದಾಗಲಿ ಏನೂ ಬೇಡಿ ಕೊಳ್ಳಲಾಗದು. ಆದರೆ ದಾನಿಯೇಲನು ತನ್ನ ದೇವರ ಹತ್ತರ ಬೇಡಿ ಕೊಳ್ಳುವದನ್ನು ಬಿಟ್ಟು ಬಿಡಲಿಲ್ಲ. ಮತ್ತು ದರಿಯನು ತಾನೇ ಕೊಟ್ಟಂಥಾ (ಅಲ್ಲ ಮಾಡ ಕೂಡದಂಥಾ) ಅಪ್ಪಣೆಯಿಂದ ಬಂಧಿತನಾಗಿ ದಾನಿಯೇಲನನ್ನು ಸಿಂಹಗಳ ಗವಿಯಲ್ಲಿ ಹಾಕಿಸುತ್ತಾನೆ. ದಾನಿಯೇಲನಿಗೆ ಏನೂ ಆಗಲಿಲ್ಲ. ಮತ್ತೆ ಅವನ ಶತ್ರುಗಳನ್ನು ಅದರಲ್ಲಿ ಹಾಕಿದಾಗ ಸಿಂಹಗಳು ಸುಲಿದು ಬಿಟ್ಟವು.

೫) ಸಂ. ೭ ನೇ ಮೊದಲಾದ ಸಂಧಿಗಳು. ದಾನಿಯೇಲನಿಗೆ ನಾಲ್ಕು ಲೋಕ ರಾಜ್ಯಗಳ ವಿಷಯವಾಗಿ ಮತ್ತೊಂದು ದರ್ಶನವಾಯಿತು. ನಾಲ್ಕು ದೊಡ್ಡ ಮೃಗಗಳು ಸಮುದ್ರದಿಂದ ಎದ್ದು ಬರುತ್ತವೆ. (ಸಮುದ್ರವು ತೆರೆಗಳ ಹಾಗೆ ಕಲ್ಲೋಲವಾಗುವ ಜನಾಂಗಗಳ ಸಮೂಹಗಳಿಗೆ ಗುರುತಾಗಿರುತ್ತದೆ.) ದಿವಸಗಳ ಹಿರಿಯನು ಅವರನ್ನು ನ್ಯಾಯತೀರಿಸುತ್ತಾನೆ. ಆ ಸಮಯದಲ್ಲಿ ಆಕಾಶದ ಮೇಘಗಳಲ್ಲಿ ಕೂತುಕೊಂಡು ಮನುಷ್ಯನ ಮಗನ ಹಾಗಿರುವವನೊಬ್ಬನು ದಿವಸಗಳ ಹಿರಿಯನ ಹತ್ತರ ಬಂದನು. ಅವನಿಗೆ ನಿತ್ಯರಾಜ್ಯವು ಕೊಡಲ್ಪಟ್ಟಿತು. — ಅಷ್ಟರೊಳಗೆ ಯೆರೆಮಿಯನ ೭೦ ವರುಷಗಳು ಕಳೆದು ಹೋದವು. ಆದದರಿಂದ ದಾನಿಯೇಲನು ಇದಕ್ಕಾಗಿ ಪ್ರಾರ್ಥನೆ ಮಾಡಿದನು. ಆಗ್ಗೆ ಗಬ್ರಿಯೇಲನೆಂಬ ದೂತನು ಅವನಿಗೆ ಪ್ರತ್ಯಕ್ಷವಾಗಿ (ಕೂರನು ಒಬ್ಬನೇ ಆಗಿ ಆಳಲಿಕ್ಕೆ ಆರಂಭಿಸಿದ ಮೊದಲನೇ ವರ್ಷದಲ್ಲಿ) ತಿರಿಗಿ ಹೋಗಲಿಕ್ಕೆ ಅಪ್ಪಣೆಯು ಪ್ರಾರ್ಥಿಸಲಿಕ್ಕೆ ಆರಂಭಿಸಿದಾಗಲೇ ಆಯಿತೆಂದೂ ಅದರ ಹೊರ್ತು ಯೆರೂಸಲೇಮವನ್ನು ತಿರಿಗಿ ಕಟ್ಟುವಂದಿನಿಂದ ಎಣಿಸಿದರೆ ೭೦ ವರ್ಷಸಪ್ತಕಗಳೊಳಗೆ ಮೆಸ್ಸೀಯನು ಬರುವನೆಂದೂ ಅತಿಕ್ರಮಕ್ಕೆ ಅಡ್ಡವಾಗುವದೆಂದೂ ಪಾಪವು ಮುದ್ರಿತವಾಗುವದೆಂದೂ ಅಕರ್ಮವು ವಿಮೋಚಿಸಲ್ಪಡುವದೆಂ

ದೂ ನಿತ್ಯನೀತಿಯು ತರಲ್ಪಡುವದೆಂದೂ ತರುವಾಯ ಕ್ರಿಸ್ತನು ನಿರ್ಮೂಲ ಮಾಡಲ್ಪಡುವನೆಂದೂ ಅರಸನ ಜನಾಂಗವು ಬಂದು ಪಟ್ಟಣವನ್ನೂ ಶುದ್ಧಸ್ಥಳವನ್ನೂ ವಿನಾಶ ಮಾಡುವದೆಂದೂ ಸಹಾ ಅವನಿಗೆ ಸಾರಿದನು. (೯, ೨೩—೨೭.) ಸ್ವಲ್ಪ ಕಾಲದ ಮೇಲೆ ಗಬ್ರಿಯೇಲನು ೨ನೇ ೩ನೇ ಲೋಕರಾಜ್ಯದ ಚರಿತ್ರವನ್ನು ಹೆಚ್ಚಾಗಿ ವಿವರಿಸಿ ಮುಖ್ಯವಾಗಿ ಪ್ರತಿಕ್ರಿಸ್ತನ ಮುಂಗುರ್ತಾಗಿದ್ದ ಎಫಿಫನನೆಂಬ ಅಂತಿಯೊಖನ ವಿಷಯವಾಗಿ ತಿಳಿಸುತ್ತಾನೆ.

ಪರಿಶಿಷ್ಟ. ಎಜೆಕಿಯೇಲ್. ೧೪, ೧೪. ೨೦; ೨೮, ೩. ದಾನಿಯೇಲನನ್ನು ನೀತಿಯೂ ಬುದ್ಧಿಯೂ ಉಳ್ಳ ನೋಹ ಹಿಯೋಬರ ಸಂಗಡ ನಿಲ್ಲಿಸುತ್ತಾನೆ. ಕ್ರಿಸ್ತನು ತಾನೇ ಅವನು ಪ್ರವಾದಿ ಎಂದು ಹೇಳುತ್ತಾನೆ. (ಮತ್ಥಾ. ೨೪, ೧೫.) ಅವನು ಅಪೇಕ್ಷೆಯ ಮನುಷ್ಯನಾಗಿ ಇದ್ದು ಹೆಸರ್ಗೊಂಡನು. (೧೦, ೧೧.) ದೇವರ ರಾಜ್ಯದ ಪ್ರಕಟಣೆಯನ್ನೂ ಜಯವನ್ನೂ ನೋಡುವದೇ ಅವನ ಅಪೇಕ್ಷೆಯಾಗಿತ್ತು.



## § 94. ತಿರಿಗಿ ಬಂದದ್ದು ದೇವಾಲಯ ಕಟ್ಟಿದ್ದು
## ಎಜ್ರ, ನೆಹೇಮಿಯ, ಎಸ್ತರ್

೧) ಎಜ್ರ. ೧—೬. ಯೆಶಾಯನಿಂದ ಕುರುಬನೂ ಕರ್ತನ ಅಭಿಷಿಕ್ತನೆಂದೂ ಕರೆಯಲ್ಪಡುವ ಕೋರೆಷನು (ಕೂರನು) ಆ ಪ್ರವಾದಿಯು ೧೪೪, ೨೮; ೪೫, ೧ಮೊದ. ಸಮ ನೋಡು. ಯೆರೆಮಿ. ೫೦, ೪೪. ಪ್ರವಾದಿಸಿದ ಪ್ರಕಾರ ಕರ್ತನ ಆತ್ಮದಿಂದ ಅದಕ್ಕೆ ಎಬ್ಬಿಸಲ್ಪಟ್ಟವನಾಗಿ ಬಬಿಲೋನದ ಮೇಲೆ ಅಧಿಕಾರವನ್ನು ಹೊಂದಿದ ಮೊದಲನೇ ವರ್ಷದಲ್ಲಿ (ಕ್ರಿ. ಮು. ೫೩೬) ತಿರಿಗಿ ಹೋಗ ಬಹುದೆಂದು ಯೆಹೂದ್ಯರಿಗೆ ಅಪ್ಪಣೆ ಕೊಡುತ್ತಾನೆ. ಯೋಯಾಕೀನನ ಮೊಮ್ಮಗನಾದ ಸೆರುಬಾಬೆಲನೆಂಬ ಅರಸನೂ ಯೋಷುವನೆಂಬ ಪ್ರಧಾನಯಾಜಕನೂ ನಡಿಸುವವರಾಗಿ ಶುಮಾರು ೫೦ ಸಾವಿರ ಯೆಹೂದ್ಯರು ೫೪೦೦ ದೇವಾಲಯದ ಪಾತ್ರೆಗಳನ್ನು ತಕ್ಕೊಂಡು ಯೆರೂಸಲೇಮ್ನಕ್ಕೆ ತಿರಿಗಿ ಬಂದು ದೇವಾಲಯವನ್ನು ಕಟ್ಟಲಿಕ್ಕೆ ಚನ್ನಾಗಿ ಆರಂಭ ಮಾಡಿದರು. ಸಮಾರ್ಯರು ಸಹಾಯ ಮಾಡಲಿಚ್ಛೈಸಿದರು. ಆದರೆ ಪಿತೃಗಳು ಮಾಡಿದ ಅನುಭವದಿಂದ ಬುದ್ಧಿಯುಳ್ಳವರಾಗಿ ತಿರಿಗಿ ಬಂದವರು ಬೇಡವೆಂಧೇಳಿದರು. ಅವರು ಅರಮನೆಯಲ್ಲಿ ಚಾಡಿ ಹೇಳಿ, ಇವರಿಗೆ ಮುಯ್ಯಿಗೆ ಮುಯ್ಯಿ ಕೊಟ್ಟರು.

ಕಂಬೂಸಿಯ ಕಾಲದಲ್ಲಿಯೇ ದೇವಾಲಯವನ್ನು ಕಟ್ಟಲಿಕ್ಕೆ ಅಡ್ಡಿಯಾಯಿತು. ಮು
ತ್ತು ಪ್ಸೈದಾಸ್ಮರ್ದೆಯು ಕಟ್ಟುವದೇ ಬೇಡವೆಂದು ಅಪ್ಪಣೆ ಕೊಟ್ಟನು. ದರಿಯ ಹಿ
ಸ್ತಸ್ಪಿಯ ಕಾಲದಲ್ಲಿ ಅರಸತನದಿಂದ ಅವರಿಗೆ ಅನುಗ್ಞೆಯೂ ಸಹಾಯವೂ ಆಯಿತು;
ಹೊಸ ವಾತ್ಸಲ್ಯದಿಂದ ಹಗ್ಗಾಯ, ಜಕರಿಯ ಎಂಬ ಪ್ರವಾದಿಗಳು ಆದರಿಸುತ್ತಾ
ಇದ್ದು, ದೇವಾಲಯವನ್ನು ಪೂರ್ಣ ಮಾಡಿ ಪ್ರತಿಷ್ಠೆ ಮಾಡಿದರು. (ಕ್ರಿ. ಮು. ೫೧೬)
ಈ ೨ನೇ ದೇವಾಲಯದಲ್ಲಿ ಸಾಕ್ಷಿಪೆಟ್ಟಿಗೆಯು ಇರಲಿಲ್ಲ. (ಒಂದು ವೇಳ್ಯ
ಅದು ವಿಗ್ರಹಾರಾಧಕರಾದ ಯೆಹೂದದ ಕಡೇ ಅರಸುಗಳ ಕಾಲದಲ್ಲಿ ಕಳದು ಹೋ
ಗಿರುವದು.) ಮತ್ತು ಅತಿಶುದ್ಧಸ್ಥಳವು ಬರೇದಾಗಿತ್ತು.

೨) ಎಜ್ರ. ೭ನೇ ಮೊದಲಾದ ಸಂಧಿಗಳು. (ಒಂದು ವೇಳ್ಯ ಮೊದಲನೇ ಅ
ರ್ಥಕ್ಷೆರ್ಕ್ಸೆ ಎಂಬ) ಅರ್ಥಶಷ್ಟನು ಆಳುವ ಸಮಯದಲ್ಲಿ ತಿರಿಗಿ ಯೆಹೂದ್ಯರು ಪ್ರ
ಧಾನಯಾಜಕ ಸಂತಾನದ ನ್ಯಾಯಶಾಸ್ತ್ರಿಯಾದ ಎಜ್ರನೆಂಬ ನಾಯಕನೊಡನೆ
ಯೆರೂಸಲೇಮಕ್ಕೆ ಬಂದರು. (ಕ್ರಿ. ಮು. ೪೫೮). ಈತನು ಜನರೆಲ್ಲರೂ ಮಾನ
ಸಾಂತರ ಪಡ ಬೇಕೆಂದು ಎಚ್ಚರಿಸಿ ಅನ್ಯಸ್ತ್ರೀಯರನ್ನು ಬಿಡ ಬೇಕೆಂದು ನೇಮಿಸಿ ಬಹು
ವಾತ್ಸಲ್ಯದಿಂದ ನೇಮವನ್ನು ಕಲಿಸಿ ಕೊಟ್ಟನು.

೩) ನೆಹೇಮಿಯ. ೧ನೇ ಮೊದಲಾದ ಸಂಧಿಗಳು. ಅದೇ ಅರಸನ ಪಾನದಾ
ಯಕನಾದ ನೆಹೇಮಿಯನು ೧೩ ವರ್ಷದ ತರುವಾಯ ಇಸ್ರಯೇಲಸಭೆಯು ಬಹ
ಳ ಹೀನ ಸ್ಥಿತಿಯಲ್ಲಿರುತ್ತದೆಂಬ ವರ್ತಮಾನವನ್ನು ಕೇಳಿ ಅರಸನಿಂದ ರಾಯಸ ತ
ಕ್ಕೊಂಡು ಯೆರೂಸಲೇಮಕ್ಕೆ ಬಂದನು. ಪಟ್ಟಣದ ಗೋಡೆಗಳನ್ನು ಕಟ್ಟಲಿಕ್ಕೆ ಚನ್ನಾ
ಗಿ ಆರಂಭ ಮಾಡಿದರು. ಆದರೆ ಕೋಪೋದ್ರೇಕರಾದ ಸಮಾರ್ಯರು ಸನ್ಬಲತನು
ಮುಖ್ಯನಾಗಿ ಬಲಾತ್ಕಾರದಿಂದ ಅಡ್ಡಿ ಮಾಡಿದರು. ನೆಹೇಮಿಯನು ಅರ್ಧ ಜನರ
ನ್ನು ಕಟ್ಟುವದಕ್ಕೂ ಅರ್ಧ ಜನರನ್ನು ಆಯುಧಗಳಿಂದ ಕಾಯಲಿಕ್ಕೂ ನೇಮಿಸಿದನು.
ಮತ್ತು ಎಜ್ರನ ಸಹಾಯವನ್ನು ತಕ್ಕೊಂಡು ಜನರನ್ನು ದೇವರಲ್ಲಿ ಭದ್ರ ಪಡಿಸಲಿಕ್ಕೆ
ಪ್ರಯತ್ನ ಮಾಡಿದನು. ಗೋಡೆಗಳನ್ನು ತೀರಿಸಿದ ಮೇಲೆ ಹತ್ತರಿಂದ ಒಂಭತ್ತರಷ್ಟು
ಜನರು ಮಿಕ್ಕಾದ ಪಟ್ಟಣಗಳಿಗೆ ಹೋದರು. ೧೨ ವರ್ಷ ಪರ್ಯಂತರ ಕಾರ್ಯವನ್ನು
ನಡಿಸಿದ ಮೇಲೆ ನೆಹೇಮಿಯನು ಪರ್ಸಿಯಕ್ಕೆ ತಿರಿಗಿ ಹೋದನು. ಆದರೆ ದರಿಯ
ನೋತನ ಕಾಲದಲ್ಲಿ ೨ನೇ ಸಾರಿ ಯೆರೂಸಲೇಮದಲ್ಲಿ ಸುಭೆದಾರನಾಗಿದ್ದನು. ತನ್ಮ
ಧ್ಯ ಯೆಹೂದ್ಯರಲ್ಲಿ ತಿರಿಗಿ ಪ್ರವೇಶವಾದ ದುರಾಚಾರಗಳನ್ನು ತ್ರಾಣದಿಂದ ಹಿಮ್ಮೆ
ಟ್ಟಿಸಿದನು. ಪ್ರಧಾನಯಾಜಕನ ಮಗನಾದ ಮನಸ್ಸೆಯು ಅನ್ಯಸ್ತ್ರೀಯನ್ನು ಬಿಡದಿ
ದ್ದಾಗ ಅವನನ್ನು ಸಹಾ ಓಡಿಸಿ ಬಿಟ್ಟನು. ಮನಸ್ಸೆಯ ಮಾವನಾದ ಸನ್ಬಲತನು

ಗಾರಿಜಮ್ ಪರ್ವತದಲ್ಲಿ ದೇವಾಲಯ ಕಟ್ಟಿದನು. ಮನಸ್ಸೆಯು ಮೊದಲನೇ ಪ್ರಧಾನಯಾಜಕನಾಗಿ ಇಷ್ಟು ವರೆಗೆ ಅರ್ಥವಾಗಿ ಅನ್ಯವಾಗಿದ್ದ ಸಮಾರ್ಯತನವನ್ನು ಪುನರೂಪಿಸಿದನು.

೪) ಎಸ್ತೆರ್ ಪುಸ್ತಕವು ಪರ್ಸಿಯರಲ್ಲಿದ್ದ ಕಾಲದಲ್ಲಿ ಇಸ್ರಯೇಲ್ಯರಿಗೆ ಏನಾಯಿತೆಂಬ ಕಥೆಯ ವಿಷಯವಾಗಿ ಹೇಳುತ್ತದೆ. (ಕ್ಸೆರ್ಕ್ಸೆ) ಅಹಷ್ವೇರೋಷನು ತನ್ನ ಹೆಂಡತಿಯಾದ ವಸ್ಥಿಯು ದೊಡ್ಡ ಔತಣದಲ್ಲಿ ಅರಸನ ಮುಂಪೆಯೂ ಅವನ ಶ್ರೀಮಂತರ ಮುಂದೆಯೂ ಬರಲಿಕ್ಕೆ ಒಪ್ಪದೆ ಇರುವದರಿಂದ ಅವಳನ್ನು ತ್ಯಜಿಸಿ ಬಿಟ್ಟನು. ತಾಯಿತಂದೆ ಇಲ್ಲದ ಬಡ ಯೆಹೂದ್ಯಳಾದ ಎಸ್ತರಳು ರಾಣಿಯಾದಳು. ಇವಳ ಚಿಕ್ಕಪ್ಪನಾದ ಮೊರ್ದಕಾಯಿಯು ಅರಸನ ಮೇಲೆ ದ್ರೋಹ ಆಲೋಚಿಸಿದಂಥವರನ್ನು ತೋರಿಸಿ ಕೊಟ್ಟದರಿಂದ ಅನುಗ್ರಹಕ್ಕೆ ಪಾತ್ರನಾದನು. ಆದರೆ ಅರಸನಿಗೆ ಪ್ರಿಯನಾದಂಥ ಅಮಲೇಕ್ಯನಾದ ಹಾಮಾನನಿಗೆ ಮೊಣಗಾಲೂರಲಿಕ್ಕೆ ಒಪ್ಪಿಕೊಳ್ಳಲಿಲ್ಲ. ಆದದರಿಂದ ಹಾಮಾನನು ರಾಜ್ಯದಲ್ಲಿರುವ ಯೆಹೂದ್ಯರೆಲ್ಲರನ್ನು ಚೀಟು ಹಾಕಿ ನಿಶ್ಚೈಸಿದ ದಿವಸದಲ್ಲಿ ಕೊಂದು ಹಾಕುವದಕ್ಕೆ ಅಪ್ಪಣೆ ಹೊಂದಿದನು. ಎಸ್ತರಳು ತನ್ನ ಚಿಕ್ಕಪ್ಪನ ಮಾತಿಗೆ ಕಿವಿಗೊಟ್ಟು ಅನುಜ್ಞೆಯಿಲ್ಲದೆ ಅರಸನ ಮುಂದೆ ಕಾಣಿಸಿ ಕೊಳ್ಳಲಿಕ್ಕೆ ಧೈರ್ಯ ಗೊಂಡಳು. ಅವಳು ಕೃಪೆಯನ್ನು ಹೊಂದಿದವಳಾಗಿ ಅರಸನೂ ಹಾಮಾನನೂ ತನ್ನ ಮನೆಯಲ್ಲಿ ಔತಣಕ್ಕೆ ಬರ ಬೇಕೆಂಬದಾಗಿ ಬೇಡಿಕೊಂಡಳು. ತನ್ಮಧ್ಯ ಅರಸನು ನಿದ್ರೆಯಿಲ್ಲದ ರಾತ್ರಿಯಲ್ಲಿ ರಾಜ್ಯದ ನಡವಡಿಕೆಗಳನ್ನು ಓದಿಸಲಾಗಿ ಮೊರ್ದಕಾಯಿಗೆ ಇನ್ನು ಪ್ರತಿಫಲ ಕೊಡಲಿಲ್ಲವೆಂಬದನ್ನು ನೆನಪು ಮಾಡಿ ಕೊಂಡನು. ಮತ್ತು ಹಾಮಾನನು ತನ್ನ ಅಂಗಳದಲ್ಲಿ ಯಾವನಿಗಾಗಿ ಪಾಶಕಂಚ ಮಾಡಿ ಇಟ್ಟನೋ ಆ ಶತ್ರುವಿಗೆ ತಾನೇ ಕಲ್ಪಿಸಿದ ಅತಿ ವಿಪರೀತವಾದ ಬಹುಮಾನವನ್ನು ಕೊಡ ಬೇಕಾಯಿತು. ಔತಣದ ಸಮಯದಲ್ಲಿ ಎಸ್ತರಳು ಅರಸನಿಗೆ ಹಾಮಾನನ ತಂತ್ರಗಳನ್ನು ತಿಳಿಸಿದಳು. ಹೀಗಾಗಿ ಹಾಮಾನನು ಮೊರ್ದಕಾಯಿಗೆ ಮಾಡಿಟ್ಟ ಪಾಶಕಂಚದಲ್ಲಿ ತಾನೇ ತೂಗಿಸಲ್ಪಟ್ಟನು.

ಪರ್ಸರ ಅರಸನು ಕೊಟ್ಟ ಅಪ್ಪಣೆಯನ್ನು ತಿರಿಗಿಸಲಿಕ್ಕೆ ಆಗದಿರುವಾಗ ಯೆಹೂದ್ಯರಿಗೆ ತಮ್ಮ ಶತ್ರುಗಳ ಮೇಲೆ ಕೋಪವನ್ನು ತಣ್ಣಗೆ ಮಾಡಿ ಕೊಳ್ಳಲಿಕ್ಕೆ ಅನುಜ್ಞೆಯು ಶಿಕ್ಕಿತು. ಈ ರಕ್ಷಣ್ಯದ ನೆನಪಿಗಾಗಿ ಪೂರಿಮ್ ಹಬ್ಬವನ್ನು ಪೂರಿಮ್ ಅಂದರೆ ಚೀಟುಗಳು ಸ್ಥಾಪಿಸಿದರು.



## § 95. ವಾಸಾಂತ್ರದ ಮೇಲಿನ ಪ್ರವಾದಿಗಳು

### ಹಗ್ಗಾಯ, ಜಕರಿಯ, ಮಲಕಿಯ

೧) ಹಗ್ಗಾಯಿಯು ಮನಸ್ಸು ಕೊಟ್ಟು ದೇವಾಲಯವನ್ನು ಕಟ್ಟಬೇಕೆಂದು ಬುದ್ಧಿ ಹೇಳಿದನು. ಸೊಲೊಮೋನನ ದೇವಾಲಯವನ್ನು ನೋಡಿದವರಾಗಿ ಹೊಸ ದೇವಾಲಯವು ಅಲ್ಪವಾಗಿರುತ್ತದೆಂದು ದುಃಖಪಟ್ಟು ಅಳುವಂಥ ಮುದುಕರನ್ನು ಆದರಿಸಿ ಈ ದೇವಾಲಯದಲ್ಲಿಯೇ ಮೆಸ್ಸೀಯನು ಪ್ರವೇಶ ಮಾಡುವನೆಂಬ ವಾಗ್ದತ್ತವನ್ನು ಕೊಟ್ಟನು.

ಪರಿಶಿಷ್ಟ. ಸಾಕ್ಷಿಗುಡಾರವನ್ನೂ ಮೊದಲನೇ ದೇವಾಲಯವನ್ನೂ ಪ್ರತಿಷ್ಠೆ ಮಾಡುವಾಗ್ಯೆ ಕರ್ತನ ಮಹಿಮೆಯು (ಮುಂಗುರ್ತಾಗಿ) ಮೇಘದಲ್ಲಿ ಒಳಗೆ ಬಂತು. ೨ನೇ ದೇವಾಲಯವನ್ನು ಪ್ರತಿಷ್ಠೆ ಮಾಡುವಾಗ್ಯೆ ಇದು ಆಗಲಿಲ್ಲ. ಆದರೆ ಅದಕ್ಕೆ ಬದಲಾಗಿ ಯಾವನಲ್ಲಿ ದೈವತ್ವದ ಸಮಸ್ತ ಸಂಪೂರ್ಣತೆಯು ಶರೀರವಾಗಿ ವಾಸ ಮಾಡುತ್ತದೋ ಆ ಮೂಲಗುರ್ತಾಗಿರುವ ಶೆಕಿನಾ ಎಂಬಂಥಾ ಸತ್ಯವಾಗಿಯೂ ನಿಜವಾಗಿಯೂ ಇರುವ ಕರ್ತನ ಮಹಿಮೆಯು, ಅಂದರೆ ಕ್ರಿಸ್ತನು ಈ ದೇವಾಲಯದಲ್ಲಿ ಪ್ರವೇಶಿಸುವನು. ಹಗ್ಗಾಯಿಯ ವಾಗ್ದತ್ತದ ಅಭಿಪ್ರಾಯವು ಅದೇ ೨, ೭—೧೦ ಮೊದಲನೇದಕ್ಕಿಂತ ಈ ಎರಡನೇ ಮನೆಯ ಮಹಿಮೆಯು ದೊಡ್ಡದಾಗಿರುವದು. ಯಾಕಂದರೆ ಇದರಲ್ಲಿ ಸಮಸ್ತ ಜನಾಂಗಗಳ ಆದರಣೆಯು ಬರುವದು.

೨) ಜಕರಿಯನು ಎಜೆಕಿಯೇಲನ ಹಾಗೆಯೇ ಪ್ರಕಟಣೆಯ ತರವಾದಂಥಾ ಕಡೇ ಕಾಲದ ದರುಶನಗಳನ್ನೂ ಯೆಶಾಯನ ಹಾಗೆ ಮೆಸ್ಸೀಯನ ಅಲ್ಪತನದ ವಿಷಯವಾಗಿಯೂ ಶ್ರಮದ ವಿಷಯವಾಗಿಯೂ ವರ್ಣನೆಗಳನ್ನು ಬರೆದಿಟ್ಟನು.

ಪರಿಶಿಷ್ಟ. ೬, ೧೨. ೧೩ ನೆಯಲ್ಲಿ ಹೇಳುವದು: ಇಗೋ ಸೇಮಾಖ್ (ಅಂದರೆ ಚಿಗುರು)ಎಂಬ ಮನುಷ್ಯನಿದ್ದಾನೆ. ಯಾಕಂದರೆ ಅವನು ತನ್ನ ಸ್ಥಳದೊಳಗಿಂದ ಚಿಗುರುವನು. ಮತ್ತು ಅವನು ಕರ್ತನ ದೇವಾಲಯವನ್ನು ಕಟ್ಟುವನು. ಅಹುದು, ಕರ್ತನ ದೇವಾಲಯವನ್ನು ಅವನು ಕಟ್ಟಿ, ಅಲಂಕಾರವನ್ನು ಧರಿಸಿ ಕೊಂಡು, ತನ್ನ ಸಿಂಹಾಸನದಲ್ಲಿ ಕೂತು ಕೊಂಡು, ಆಳುವನು. ಅವನೇ ತನ್ನ ಸಿಂಹಾಸನದಲ್ಲಿ ಯಾಜಕನಾಗಿರುವನು.—೮, ೨೨ ನೇ ವಚನದಲ್ಲಿ ಪ್ರವಾದಿಸುವದು ಮೆಸ್ಸೀಯನ ಕಾಲದಲ್ಲಿ ಬಹಳ ಜನಾಂಗಗಳೂ ಸಮೂಹಗಳೂ ಗುಂಪುಗಳಾಗಿ ಯೆರೂಸಲೇಮದಲ್ಲಿ ಸೈನ್ಯಗ

ಳ ಕರ್ತನನ್ನು ಹುಡುಕಲಿಕ್ಕೂ ಕರ್ತನ ಮುಂದೆ ಪ್ರಾರ್ಥಿಸಲಿಕ್ಕೂ ಬರುವರು.—೯, ೯ ನೇ ವಚನದಲ್ಲಿ ಮೆಸ್ಸೀಯನು ಸಮಾಧಾನದಲ್ಲಿಯೂ ಅಲ್ಪತ್ವದಲ್ಲಿಯೂ ಪ್ರವೇಶವನ್ನು ಮಾಡುವನೆಂಬದು ವರ್ಣಿಸಿ ಅದೆ. ಚಿಯೋನ ಮಗಳೇ ಬಹಳ ಸಂತೋಷ ಪಡು, ಯೆರೂಸಲೇಮದ ಮಗಳೇ ಆರ್ಭಟಿಸು! ಇಗೋ ನಿನ್ನ ಅರಸನು ನೀತಿವಂತನಾಗಿಯೂ ಸಹಾಯಕನಾಗಿಯೂ ಬಡವನಾಗಿಯೂ ಕತ್ತೆಯ ಮೇಲೆಯೂ ಕತ್ತೆಯ ಮರಿಯ ಮೇಲೆಯೂ ಕೂತುಕೊಂಡು ನಿನ್ನ ಹತ್ತರ ಬರುತ್ತಾನೆ.—೧೧, ೧೨—೧೪. ಕ್ರಿಸ್ತನನ್ನು ೩೦ ರೂಪಾಯಿಗೆ ಮಾರುವರೆಂದೂ ಹಣವನ್ನು ದೇವಾಲಯದಲ್ಲಿ ಹಾಕಿ, ಕುಂಬಾರನ ಹೊಲವನ್ನು ತಕ್ಕೊಳ್ಳುವರೆಂದೂ ಬರದದೆ.—ಮತ್ತೆ ೧೨, ೧೦ ನೇ ವಚನ. ದಾವಿದನ ಮನೆಯ ಮೇಲೆಯೂ ಯೆರೂಸಲೇಮದ ನಿವಾಸಿಗಳ ಮೇಲೆಯೂ ಕೃಪೆ ಪ್ರಾರ್ಥನೆಗಳ ಆತ್ಮವನ್ನು ಹೊಯ್ಯುವೆನು. ಯಾಕಂದರೆ ಅವರು ತಿವಿದಂಥಾ ನನ್ನನ್ನು ಇವರು ನೋಡುವರು.—೧೩, ೧ ನೇ ವಚನ. ಆ ಸಮಯದಲ್ಲಿ ದಾವಿದನ ಮನೆಯೂ ಯೆರೂಸಲೇಮಿನ ನಿವಾಸಿಗಳೂ ಪಾಪಕ್ಕೂ ಅಶುದ್ಧತ್ವಕ್ಕೂ ಹರಿದು ಬರುವ ಬುಗ್ಗೆಯುಳ್ಳವರಾಗಿರುವರು.—೧೩, ೭ ನೇ ವಚನ. ಖಡ್ಗವೇ! ಸೈನ್ಯಗಳ ಕರ್ತನು ಹೇಳುತ್ತಾನೆ. ನನ್ನ ಕುರುಬರಿಗೂ ನನಗೆ ಅತಿ ಸಮೀಪವಾಗಿರುವ ಪುರುಷನಿಗೂ ವಿರೋಧವಾಗಿ ಏಳು! ಕುರುಬನನ್ನು ಹೊಡಿ, ಮತ್ತು ಮಂದೆಯು ಚದರಿ ಹೋಗುವದು ಮತ್ತು ನನ್ನ ಕೈಯನ್ನು ಚಿಕ್ಕವರ ಕಡೆಗೆ ತಿರಿಗಿಸುವೆನು.

೩) ಮ ಲೆ ಯಾ ಖಿ, (ಮಲಕಿಯ) ಹಳೇ ಒಡಂಬಡಿಕೆಯ ಕಡೇ ಪ್ರವಾದಿಯು: ಅವನು ಪ್ರವಾದಿಯ ಉದ್ಯೋಗವನ್ನು ನೆಹೇಮಿಯನ ಕಾಲದಲ್ಲಿ ನಡಿಸಿದನು. ಇವನು ಮೆಸ್ಸೀಯನು ೨ ನೇ ದೇವಾಲಯದ ಕಾಲದಲ್ಲಿ ಬರುವನೆಂದೂ, ಅವನ ಅಗ್ರಗಾಮಿಯು ಅವನ ಮುಂದೆ ಪ್ರಕಟವಾಗುವನೆಂದು ಪ್ರವಾದಿಸಿದನು.

ಪ ರಿ ಶಿ ಷ್ಟ. ೩, ೧. ದೇವರು ವಾಗ್ದತ್ತ ಮಾಡಿದ್ದು ಇಗೋ ನಾನು ನನ್ನ ದೂತನನ್ನು ಕಳುಹಿಸುವೆನು, ಅವನು ನನ್ನ ಮುಂದೆ ಮಾರ್ಗ ಮಾಡುವನು, ಮತ್ತು ನೀವು ಹುಡುಕುವಂಥಾ ಕರ್ತನೂ ನೀವು ಅಪೇಕ್ಷಿಸುವಂಥಾ ಒಡಂಬಡಿಕೆಯ ದೂತನೂ, ತನ್ನ ದೇವಾಲಯಕ್ಕೆ ಬೇಗ ಬರುವನು.—೪, ೨ ನೇ ವಚನದಲ್ಲಿ ಆದರೆ ನನ್ನ ನಾಮಕ್ಕೆ ಹೆದರುವಂಥಾ ನಿಮಗೆ ನೀತಿಯ ಸೂರ್ಯನು ರೆಕ್ಕೆಗಳಲ್ಲಿ ರಕ್ಷಣ್ಯ ಉಂಟಾದವನಾಗಿ ಉದಯವಾಗುವನು. ೪, ೫. ೬. ವಚನ. ಆ ದೊಡ್ಡ ಭಯಂಕರವಾದಂಥಾ ಕರ್ತನ ದಿವಸವು ಬರುವ ಮೊದಲು ನಾನು ಪ್ರವಾದಿಯಾದ ಎಲೀಯನನ್ನು ಕಳು

ಹಿಸುವೆನು. ಅವನು, ತಂದೆಗಳ ಹೃದಯವನ್ನು ಮಕ್ಕಳ ಕಡೆಗೂ ಮಕ್ಕಳ ಹೃದಯವನ್ನು ತಂದೆಗಳ ಕಡೆಗೂ ತಿರುಗಿಸುವನು.



## § 96. ಯೋಬನ ಪುಸ್ತಕವು

ಪೀಠಿಕೆ. ಯೋಬನ ಪುಸ್ತಕವು ಬೋಧನೆಯ ಕಾವ್ಯವಾಗಿರುತ್ತದೆ. ದಿವ್ಯ ಪ್ರಕಾಶವನ್ನು ಹೊಂದಿದ ಗ್ರಂಥಕರ್ತನು ಇಯೋಬನೆಂಬ ಭಕ್ತಿಯುಳ್ಳ ಗೋಪಾಲ ರಾಜನಿಗೆ ಸಂಭವಿಸಿದ ಮಹಾ ಸಂಕಷ್ಟದ ಕಥೆಯನ್ನು ತಿಳಿದವನಾಗಿ ಸುಗುಣವಿದ್ದಲ್ಲಿ ಸಂಕಷ್ಟವೂ ದುರ್ಗುಣವಿದ್ದಲ್ಲಿ ಸೌಖ್ಯವೂ ಉಂಟಾಗುತ್ತದೆಂಬಂಥಾ ಈ ಆಶ್ಚರ್ಯವಾದ ಸಂಗತಿಯನ್ನು ವಿವರಿಸುವದಕ್ಕಾಗಿ ಈ ಕಥೆಯನ್ನು ಪ್ರಯೋಗಿಸುತ್ತಾನೆ. (ಯೋಬನೆಂಬವನು ಇದ್ದನೆಂಬದೂ, ಅವನ ಸಂಕಷ್ಟಗಳು ಸಂಭವಿಸಿದ್ದು ಸತ್ಯವೆಂದೂ, ಎಜೆಕಿಯೇಲನ ಪುಸ್ತಕದ ೧೪, ೧೪. ೨೦ ನೇ ವಚನಗಳಿಂದ ನಿಸ್ಸಂಶಯವಾಗಿ ಕಾಣುತ್ತದೆ. ಹ್ಯಾಗಂದರೆ—ಇಲ್ಲಿ ನೋಹ ದಾನಿಯೇಲರ ಸಂಗಡ ಯೋಬನು ಮಾನುಷ್ಯನೀತಿಗೆ ಮಾದ್ರಿಯಾಗಿರುತ್ತಾನೆಂಬ ಕೀರ್ತಿ ಹೊಂದಿರುತ್ತಾನೆ.)—ಈ ಪುಸ್ತಕದ ಗ್ರಂಥಕಾರನು ಯಾರೆಂದೂ, ಅದನ್ನು ಬರೆದ ಕಾಲ ಯಾವದೆಂದೂ ತಿಳಿಯುವದಿಲ್ಲ. ಈ ಪುಸ್ತಕಕ್ಕೆ ಮೂರು ಭಾಗಗಳುಂಟು. I ಪೀಠಿಕೆ. (೧, ೨ ನೇ ಸಂಧಿ.) II ಸಂಭಾಷಣೆ. (೩—೪೧ ನೇ ಸಂಧೀ ವರೆಗೆ) III ಸಮಾಪ್ತಿ. (೪೨ ನೇ ಸಂಧಿ.) ಪೀಠಿಕೆಯೂ ಸಮಾಪ್ತವೂ ಸಾಧಾರಣ ಭಾಷೆಯಿಂದ ಬರೆದಂಥಾದ್ದಾಗಿ ಆರಂಭವನ್ನೂ ಕಡೆಯನ್ನೂ ವರ್ಣಿಸುತ್ತವೆ. ಮುಖ್ಯ ಸಂಗತಿಯು ಹ್ಯಾಗೂ ಕಾವ್ಯಭಾಷೆಯಾಗಿ ಸಂಭಾಷಣೆಯಲ್ಲಿ ಕಾಣುತ್ತದೆ. ಇದರಲ್ಲಿ ಪ್ರಶ್ನೆಯೂ (ಸಾಕಾಗದಂಥ) ಮನುಷ್ಯರ ಜ್ಞಾನದಿಂದ ತೀರಿಸಲ್ಪಡ ಕೂಡದಾದ ಮೇಲೆ ದೇವರು ತಾನೇ ಮಧ್ಯದಲ್ಲಿ ಸೇರಿ, ಮಾತಾಡಿ, ಅದನ್ನು ತೀರಿಸುತ್ತಾನೆ.

೧) ೧, ೧—೨, ೧೦. ಎದೋಮ್ಯ ಪರ್ವತಗಳಿಗೆ ಉತ್ತರಪೂರ್ವದಲ್ಲಿ ಊಜ್ ಎಂಬ ದೇಶದಲ್ಲಿ ಗೋಪಾಲರಾಜನಾಗಿರುವಂಥಾ ಒಂದು ವೇಳೆ (ಅಬ್ರಹಾಮನಿಗೆ ಕೆಟೂರಳಲ್ಲಿ ಆದ ಸಂಗತಿಯವನಾಗಿರುವ) ಯೋಬನು ದೇವರಿಂದ ಅತಿಶಯವಾಗಿ ಆಶೀರ್ವದಿಸಲ್ಪಟ್ಟವನೂ ಮನುಷ್ಯರಲ್ಲಿ ದೊಡ್ಡ ಮಾನವುಳ್ಳವನೂ ಆಗಿದ್ದನು. ಆದರೆ ದೂರುಗಾರನಾದ (ಪ್ರಕಟಣೆ. ೧೨, ೧೦.) ಸಾತಾನನು (ಸೈತಾನನು) ದೇವರ ಮುಂದೆ ಅವನ ಭಕ್ತಿಯನ್ನು ಸಂಶಯಕರ ಮಾಡಲಿಕ್ಕೆ ನೋ

ಡುತ್ತಾನೆ. ಕರ್ತನು ಯೋಬನನ್ನು ಶೋಧಿಸಿ ಪರೀಕ್ಷಿತ ಮಾಡುವದಕ್ಕೂ ದೂರುಗಾರನು ವ್ಯವಹಾರವನ್ನು ಕಳಕೊಳ್ಳುವನೆಂಬದನ್ನು ದೂರುಗಾರನಿಗೆ ಸಿಕ್ಷ್ಯಯ ಮಾಡಲಿಕ್ಕೂ ಮನಸ್ಸು ಮಾಡಿ, ಯೋಬನ ಸುತರನ್ನೂ ಸುತೆಯರನ್ನೂ ಕೊಲ್ಲಲಿಕ್ಕೂ ಅವನಿಗಿದ್ದ ಆಸ್ತಿಯನ್ನೆಲ್ಲಾ ಹಾಳು ಮಾಡಲಿಕ್ಕೂ ಸೈತಾನನಿಗೆ ಬಿಡುತ್ತಾನೆ. ಈ ಪ್ರಕಾರವಾಗಿ ಒಂದರ ಮೇಲೊಂದು ಅಮಂಗಲ ವರ್ತಮಾನವು ಅವನಿಗೆ ಬರುತ್ತದೆ. ಆದರೆ ಯೋಬನು ಹೇಳಿದ್ದು: ಕರ್ತನು ಕೊಟ್ಟನು, ಕರ್ತನು ತಕ್ಕೊಂಡನು. ಕರ್ತನ ನಾಮವು ಸ್ತುತಿಸಲ್ಪಡಲಿ. ಕಡೆಯಲ್ಲಿ ಅವನ ಪ್ರಾಣವನ್ನಲ್ಲವಾದರೂ ಅವನ ಶರೀರವನ್ನು ಸಹಾ ಮುಟ್ಟಲಿಕ್ಕೆ ಸೈತಾನನಿಗೆ ಅನುಜ್ಞೆ ಸಿಕ್ಕಿತು (ಕುಷ್ಠರೋಗದಲ್ಲಿ ಮಹಾ ಕೆಟ್ಟದ್ದಾಗಿರುವ) ಭಯಂಕರವಾದ ಬಜ್ಜಿಕುಷ್ಠವು ಅವನಿಗೆ ಹತ್ತಿ, ಅವನ ಶರೀರವೆಲ್ಲಾ ನೆತ್ತಿಯಿಂದ ಅಂಗಾಲಿನ ಪರ್ಯಂತರಕ್ಕೂ ಕುರುಗಳಿಂದಲೂ ಹುಳ್ಳುಗಳಿಂದಲೂ ತುಂಬಿ ಹೋಯಿತು. ಅವನ ಹೆಂಡತಿ ಸಹಾ ಅವನ ಭಕ್ತಿಯನ್ನು ತುಚ್ಛೀಕರಿಸಿ, ದೇವರನ್ನು ಬಿಟ್ಟು ಬಿಡ ಬೇಕೆಂದು ಹೇಳುತ್ತಾಳೆ. ಆದರೆ ಅವನು ಹೇಳಿದ್ದು: ನಾವು ಕರ್ತನಿಂದ ಒಳ್ಳೇದನ್ನು ಹೊಂದಿದ ಮೇಲೆ ಕೆಟ್ಟದ್ದನ್ನು ಸಹಾ ಅಂಗೀಕರಿಸ ಬೇಡವೋ? ಮತ್ತು ಇದೆಲ್ಲಾದರಲ್ಲಿ ಯೋಬನು ಪಾಪ ಮಾಡಲಿಲ್ಲ.

೨) ೨, ೧೧ನೇ ವಚನದಿಂದ ೩೭ ಸಂಧೀ ವರೆಗೆ. ಮೂವರು ಸ್ನೇಹಿತರಾದ ಯೆಲಿಫಾಸ್ ಬಿಲ್ದಾದ್ ಜೋಫಾರ್ ಎಂಬವರು ಅವನನ್ನು ಆದರಿಸಲಿಕ್ಕೆ ಬಂದರು. ಆದರೆ ಅವನ ಸಂಕಟವನ್ನು ನೋಡಿದಾಗ ತಮ್ಮ ಬಾಯಿ ಮುಚ್ಚಿ ಕೊಂಡರು. ಏಳು ದಿವಸ ಪರ್ಯಂತರ ಕಷ್ಟದಿಂದ ಸುಮ್ಮಗಿದ್ದ ಮೇಲೆ ಯೋಬನು ತನ್ನ ಶಬ್ದವನ್ನೆತ್ತಿ ತಾನು ಹುಟ್ಟಿದ ದಿವಸವನ್ನು ಶಪಿಸಿದನು. ಇದರಿಂದ ಸ್ನೇಹಿತರಲ್ಲಿ ಪ್ರತೀಕಾರವಾದ ಮನಸ್ಸುಂಟಾಯಿತು. ಅವರು ದೇವರು ನೀತಿವಂತನೆಂದು ತೋರಿಸಲಿಕ್ಕಾಗಿ ಯೋಬನು ಅಂತರಂಗದ ಪಾಪಗಳಲ್ಲಿಯೂ ನೀಚವಾದ ಡಂಭದಲ್ಲಿಯೂ ಬಿದ್ದಿರ ಬೇಕೆಂದು ಹೇಳುತ್ತಾರೆ. ಅಂಥಾ ಅಪವಾದಗಳಿಗೆ ತಾನು ಯೋಗ್ಯನಲ್ಲವೆಂದು ಯೋಬನು ಚನ್ನಾಗಿ ತಿಳುಕೊಂಡಿದ್ದನು. ಮತ್ತು ಬುದ್ಧಿಹೀನವಾದಂಥಾ ಸ್ನೇಹಿತರ ಆಸಕ್ತಿಯಿಂದ ಚಂಚಲವಾಗಿ ಯೋಬನು ದೇವರ ಸಂಗಡ ವ್ಯವಹಾರ ಮಾಡಲಿಕ್ಕೆ ತೊಡಗಿದನು. ಆದರೂ ಕ್ಷಣ ಮಾತ್ರಕ್ಕೆ ಸರಿ. ಬಹಳ ಸರ್ತಿ ಸತ್ಯದ ಪ್ರಕಾಶವು ಅವನ ಹೃದಯದಲ್ಲಿ ಶೇರಲು, ಈ ಕಠಿಣವಾದ ಪ್ರಶ್ನೆಗೆ ಉತ್ತರ ಕೊಡಲಿಕ್ಕೆ ಸಮೀಪವಾಯಿತು. ಅವನು ತನಗಿರುವ ಭದ್ರವಾದ ನಂಬಿಕೆಯನ್ನು ಉಚ್ಚರಿಸುತ್ತಾನೆ. "ನನ್ನ ರಕ್ಷಕನು ಬದುಕುತ್ತಾನೆಂದು ಬಲ್ಲೆನು. ಮತ್ತು ಅವನು ಮತ್ತೆ ನ

ನ್ನನ್ನು ಭೂಮಿಯಿಂದ ಎಬ್ಬಿಸುವನು; ಮತ್ತು ಇದೇ ನನ್ನ ತೊಗಲು ನನ್ನನ್ನು ಮುಚ್ಚಿರುವದು, ಅವನನ್ನು ನಾನೇ ನೋಡಿ ಕೊಳ್ಳುವೆನು. ಮತ್ತು ನನ್ನ ಕಣ್ಣುಗಳೇ ಅವನನ್ನು ದೃಷ್ಟಿಸುವವು ಹೊರ್ತು, ಮತ್ತೊಬ್ಬನಲ್ಲ" (೧೯, ೨೫—೨೭.) ಸ್ನೇಹಿತರು ಕಡೆಯಲ್ಲಿ ಸುಮ್ಮಗಾಗುತ್ತಾರೆ. ಯೋಬನು ತನ್ನ ಮಾತನ್ನು ಕಡೆಯಲ್ಲಿ ಸ್ಥಾಪಿಸುತ್ತಾನೆ. — ನಾಲ್ಕನೆಯವನೊಬ್ಬನು ಯೆಲೀಹು ಎಂಬವನು ಆರಂಭ ಮಾಡುತ್ತಾನೆ. (೩೨ನೇ ಮೊದಲಾದ ಸಂಧಿಗಳು) ಈತನು ತರ್ಕ ಮಾಡುವಂಥವರ ಪ್ರಾಯಕ್ಕೆ ಮಾನ ಕೊಟ್ಟು ಸುಮ್ಮನೆ ಇದ್ದನು. ಆದರೆ ಈಗ ಯೌವನದ ಉತ್ವೇಗದಲ್ಲಿ ತನಗಿದ್ದ ಒಳ್ಳೇ ಜ್ಞಾನವನ್ನು ಮರೆ ಮಾಡಲಾರನು. ಮೂವರು ಸ್ನೇಹಿತರು ದೇವರಿಗೋಸ್ಕರ ಸಮವಾಗಿ ವಾದ ಮಾಡಲಿಲ್ಲವೆಂದೂ, ಯೋಬನ ಮೇಲೆ ಅನ್ಯಾಯವಾಗಿ ಅಪವಾದಗಳನ್ನು ಹಾಕಿದರೆಂದೂ ಅವರ ಮೇಲೆ ಕೋಪಿಸಿದನು. ಆದರೆ ಯೋಬನು ದೇವರ ಮುಂದೆ ತಾನು ಶುದ್ಧನೂ ನಿರಪರಾಧಿಯೂ ಎಂದು ಹೇಳಿದ್ದನ್ನು ದಂಡಿಸುತ್ತಾನೆ. ಮತ್ತು ಮನುಷ್ಯನು ದೇವರ ಮುಂದೆ ಎಂದೂ ನೀತಿವಂತನಾಗಿರ ಕೂಡದೆಂದೂ ಆದರೆ ದೇವರ ನೀತಿಯು ಎಲ್ಲಾ ವಿಷಯಗಳಲ್ಲಿಯೂ ಸ್ಥಿರವಾಗಿ ನಿಲ್ಲುವದೆಂದೂ, ಶ್ರಮೆ ಪಡುವ ಭಕ್ತನು ದಂಡನೆಯನ್ನೂ ಶೋಧನೆಯನ್ನೂ ತಾಳ್ಮೆಯಲ್ಲಿಯೂ ದೀನತ್ವದಲ್ಲಿಯೂ ಭರವಸದಲ್ಲಿಯೂ ಸಹಿಸಿ ಕೊಂಡರೆ ಅವನನ್ನು ಜ್ಞಾನವುಳ್ಳ ದೇವರು ನಿಶ್ಚಯವಾಗಿಯೂ ಮಹಿಮೆಯಾಗಿಯೂ ರಕ್ಷಿಸುವನೆಂದೂ ಅವನಿಗೆ ನಿಶ್ಚಯ ಮಾಡಲಿಕ್ಕೆ ಹುಡುಕುತ್ತಾನೆ. ಯೋಬನು ಮೌನವಾಗುತ್ತಾನೆ! ಹೀಗಾಗಿ ಮನುಷ್ಯಬುದ್ಧಿಯಿಂದಲೇ ಜೈಸಲ್ಪಟ್ಟನು.

೩) ೩೮ನೇ ಮೊದಲಾದ ಸಂಧಿಗಳು. ಯೆಲೀಹು ಮಾತಾಡಿ ಆದ ಮೇಲೆ ಕರ್ತನು ತಾನೇ ಮೇಘದಲ್ಲಿ ಪ್ರತ್ಯಕ್ಷವಾಗಿ ತನ್ನ ಹತ್ರ ವ್ಯವಹಾರ ಮಾಡಲಿಕ್ಕೆ ಇಚ್ಛೈಸಿದ ಯೋಬನ ತಗ್ಗಿಸುವಿಕೆಯನ್ನು ಪೂರ್ಣ ಮಾಡುತ್ತಾನೆ. ಕರ್ತನು ಹೇಳಿದ್ದು: ಪುರುಷನ ಹಾಗೆ ಸೊಂಟ ಕಟ್ಟಿಕೋ, ನಾನು ನಿನ್ನನ್ನು ಕೇಳುತ್ತೇನೆ, ನನ್ನನ್ನು ಬೋಧಿಸು! ದೇವರು ನಿರ್ಮಾಣ್ಯದಲ್ಲಿ ಇಟ್ಟ ಮಾರ್ಗಗಳ ವಿಷಯವಾಗಿಯೂ ಆಶ್ಚರ್ಯಗಳ ವಿಷಯವಾಗಿಯೂ ಆರಂಭವನ್ನು ಕುರಿತು ಮಾತ್ರವೇ ಕೇಳಿದರೂ ಮನುಷ್ಯನ ಬುದ್ಧಿಯು ನಾಚಿಕೆ ಪಡ ಬೇಕು. ಹಾಗಾದರೆ ಮನುಷ್ಯರ ವಿಷಯದಲ್ಲಿರುವ ಆಶ್ಚರ್ಯಕರವಾದಂಥಾ ದೇವರ ನೀತಿಕೃಪೆಗಳ ಮಾರ್ಗಗಳನ್ನು ನಿಶ್ಚಯಿಸಲಿಕ್ಕೆ ಯಾರು ಬಲ್ಲವರು? ಯೋಬನು ಮಾನಸಾಂತ್ರ ಪಟ್ಟು ತಾನು ಮಾತ್ರವೇ ತಪ್ಪುಗಾರನೆಂದು ಅರಿಕೆ ಮಾಡುತ್ತಾನೆ. ಕರ್ತನು ಬುದ್ಧಿ ಇಲ್ಲದ ಸ್ನೇಹಿತರನ್ನು ಜರದು ನಾಚಿಕೆ ಪಡಿಸುತ್ತಾನೆ. ಯೋಬನ ಮೇಲೆ ಅವರು ಹಾಕಿದ ಅಪವಾದವು ಸ

ಮವಲ್ಲವೆಂದೂ ಯಾೀಬನು ಆ ವಿಷಯದಲ್ಲಿ ನಿರಾಪರಾಧಿಯಾಗಿರುತ್ತಾನೆಂದೂ ಹೇಳುತ್ತಾನೆ. ಮತ್ತು ಯಾೀಬನು ಕಳಕಾಂಡದ್ದೆಲ್ಲಾ ಇಮ್ಮಡಿಯಾಗಿ ತಿರಿಗಿ ಕಾಡುತ್ತಾನೆ.

ಪರಿಶಿಷ್ಟ. ಯೋಬನ ಪುಸ್ತಕವು. ಸಾಧಾರಣವಾದ ದೇವರ ನೀತಿನಿರ್ಣಯವಲ್ಲ; ಅದು ಸಂಕಷ್ಟವೂ ಕೇಡೂ ಲೋಕದಲ್ಲಿ ಉಂಟೆಂದು (ಮತ್ತು ಅದು ದೈವಹೀನರು ಬಹಳ ಸರ್ತಿ ಸಾಖ್ಯದಲ್ಲಿರುತ್ತಿರಲು, ಭಕ್ತರಿಗೆ ವಿಶೇಷವಾಗಿ ತಾಗುತ್ತದೆ ಎಂಬದಾಗಿ) ದೇವರನ್ನು ನೀತಿನಿರ್ಣಯ ಪಡಿಸುವದಕ್ಕೆ ಹುಡುಕುವದಿಲ್ಲ. ಅದು ಅದಕ್ಕಾಗಿಯೇ ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಇರುವ ನಿರ್ಮಾಣ್ಯಗಳ ಮೇಲೆ ಹೊರಿಸಿ, ಮನುಷ್ಯನ ಜಾಣತನವು ಅದಕ್ಕೆ ಉತ್ತರ ಕೊಡಲಿಕ್ಕಿರುವಾಗ್ಯೆ, ಮನುಷ್ಯನ ಬುದ್ಧಿಯು ಬಹು ಸ್ವಲ್ಪದ್ದೆಂದು ತೋರಿಸಿ, ಈ ಪ್ರಶ್ನೆಯನ್ನೇ ತೆಗದು ಹಾಕುತ್ತದೆ. ಮೂವರು ಸ್ನೇಹಿತರು ದೇವರನ್ನು ನೀತಿನಿರ್ಣಯ ಪಡಿಸಲಿಚ್ಛೈಸಿದರು. ಆದರೆ ಈ ಕೆಲಸಕ್ಕಾಗಿ ಯಾರ ಮನಸ್ಸಿಗೂ ಸಮಾಧಾನವಾಗಲಿಲ್ಲ. ರೋಗವೂ ಮರಣವೂ ಕೇಡೂ ಪಾಪದಿಂದ ಲೋಕದಲ್ಲಿ ಬಂತು. ಮನುಷ್ಯರೆಲ್ಲರೂ ಪಾಪಿಗಳು, ಅವರಲ್ಲಿ ಅತ್ಯಂತ ನೀತಿವಂತನು ಸಹಾ ಭೂಮಿಯಲ್ಲಿ ಅತ್ಯಂತವಾಗಿ ಅವನಿಗೆ ಕೇಡು ಬಂದರೂ ಅದಕ್ಕಾಗಿ ದೂರಲಿಕ್ಕೆ ಕೂಡದು. ಯಾಕಂದರೆ ಇನ್ನೂ ಹೆಚ್ಚಾದ ಕೇಡು ಅವನಿಗೆ ಯೋಗ್ಯವಾಗಿರುತಿತ್ತು. ಯೋಬನ ಸ್ನೇಹಿತರು ಮಾಡಿದ ತಪ್ಪು ಯಾವದಂದರೆ—ಅವನಿಗೆ ಹೆಚ್ಚಾದ ಕೇಡು ಬಂದದರಿಂದ ಬೇರೆ ಮನಷ್ಯರಿಗಿಂತ ಅವನು ಹೆಚ್ಚಾದ ಪಾಪಿ ಎಂದು ನೆನಸಿದ್ದೇ—ಇದರಲ್ಲಿ ಅವರು ಮಾಡಿದ ಪಾಪವು ಯಾವದಂದರೆ—ಅವರು ಸಮಸ್ತ ಮನುಷ್ಯರ ಹಾಗೆಯೇ ಅದೇ ಶಾಪಕ್ಕೆ ಪಾತ್ರರಾಗಿ ಇದ್ದರೂ, ಯೋಬನಿಗೆ ಬಂದ ಕೇಡು ತಮ್ಮನ್ನು ಹಿಡುಕೊಳ್ಳಲಿಲ್ಲವೆಂದು, ಯೋಬನಿಗಿಂತ ತಾವು ಶುದ್ಧರಾಗಿದ್ಧೇವೆಂದು ನೆನಸಿದ್ದೇ—ಅವಿಶ್ವಾಸಕ್ಕೆ ಕೇಡೂ, ಶಿಕ್ಷೆಯೂ ಪಾಪವೂ ಆಗಿರುತ್ತದೆ. ಆದರೆ ವಿಶ್ವಾಸಕ್ಕೆ ಅದು ದಂಡನೆಯೂ ಆಶೀರ್ವಾವೂ ದೇವರ ಕೈಯಲ್ಲಿ ಶುದ್ಧ ಮಾಡುವದಕ್ಕೂ ಅಭಿವೃದ್ಧಿ ಪಡಿಸುವದಕ್ಕೂ ಬೇಕಾದ ಉಪಾಯವೂ ಆಗಿರುತ್ತದೆ.



## § 97. ಹಳೇ ಒಡಂಬಡಿಕೆಯ ನಿರ್ಣಯ

ಹಳೇ ಒಡಂಬಡಿಕೆಯ ಶುದ್ಧ ಪುಸ್ತಕಗಳ ಸಂಗ್ರಹವನ್ನು ಮೊದಲಾಗಿ ಮಾಡಿದವರು ಎಜ್ರನೂ ನೆಹೇಮಿಯನೂ ಎಂದು ಕಾಣುತ್ತದೆ. (ನೆಹೇಮಿ. ೮, ೧—೧೦.)

ಹಳೇ ಒಡಂಬಡಿಕೆಯ ಪ್ರವಾದನೆಯು ಮಲಕೀಯನಂದಿನಿಂದ ನಿಂತು ಹೋದದರಿಂದಲೂ ಯೆಹೂದ್ಯರ ಜೀವನ ವಿಧಿಯನ್ನು ದೇವರು ಇಷ್ಟು ವರೆಗೆ ನೇಮದಿಂದಲೂ ಪ್ರವಾದಿಗಳಿಂದಲೂ, ಪ್ರಕಟಿಸಿದ ಕ್ರಮದಿಂದ ನವೀಕರಿಸುವದರಿಂದಲೂ ಪ್ರಕಟಣೆಯ ಶುದ್ಧ ಶಾಸನಗಳನ್ನು ಕೂಡಿಸಿ, ನಂಬಲಿಕ್ಕೆ ಯೋಗ್ಯವಾದ ಸಂಗ್ರಹ ಮಾಡುವದು ಅತ್ಯವಶ್ಯವಾಯಿತು. ಆದರೂ ಶುದ್ಧ ಬರಹಗಳನ್ನು ಎಜ್ರ ನೆಹೇಮ್ಯರ ಕಾಲದಲ್ಲಿಯೇ ಕೂಡಿಸಿ, ಸಂಗ್ರಹವು ಇಲ್ಲಿ ತೀರಿತ್ತೆಂಬದು ಅದಕ್ಕೆ ಅನುಕೂಲವಾಗಿ ಬಹಳ ಹೇಳಲಿಕ್ಕೆ ಇದ್ದರೂ ಪೂರ್ಣವಾಗಿ ಸ್ಥಿರವಾಗಿರುತ್ತದೆ ಎಂದು ಹೇಳ ಕೂಡದು.

ಯೆಹೂದ್ಯರ ಸಂಪ್ರದಾಯದ ಪ್ರಕಾರ ಎಜ್ರನು ೧೨೦ ಮಂದಿಯುಳ್ಳ ದೊಡ್ಡದೆಂದು ಹೆಸರ್ಗೊಂಡ ಸಭೆಮನೆಯವರೊಡನೆ ಸಂಗ್ರಹವನ್ನು ಮಾಡಿ ತೀರಿಸಿದನಂತೆ.—ಯೇಸು ಸೀರಕನೆಂಬವನ ಪುಸ್ತಕದ (ಇದು ಅಪೊಕ್ರಿಫಾ ಎಂಬ ಪುಸ್ತಕಗಳಲ್ಲಿ ಒಂದು) ಮೊಮ್ಮಿ ಕೆಯಲ್ಲಿ ಸಂಗ್ರಹವು ಪೂರ್ಣವಾಗಿ ತೀರಿಸಿ ಇತ್ತೆಂದು ಕಾಣುತ್ತದೆ. ಮತ್ತು ಕ್ರಿಸ್ತನ ಸಮಯದಲ್ಲಿ ಅದು ಸ್ಥಿರವಾಗಿತ್ತೆಂಬದೂ ಕ್ರಿಸ್ತನೂ ಅಪೊಸ್ತಲರೂ ಅದನ್ನು ದೇವವಾಕ್ಯವೆಂದು ಅಂಗೀಕರಿಸಿ ಪ್ರಯೋಗಿಸಿದರೆಂಬದೂ ಪ್ರತ್ಯಕ್ಷವಾಗಿರುತ್ತದೆ. (ಸಮ ನೋಡು ಮತ್ತಾ. ೧, ೨೨. ೫, ೧೭. ೧೮. ೨೨, ೪೩. ಅಪೊ. ಕ್ರಿ. ೧, ೧೬. ೧೩, ೩೪. ೩೫. ೨೮, ೨೫; ರೋಮಾ. ೧, ೨; ೩, ೨; ಇಬ್ರಿ. ೧, ೧; ೧೦, ೧೫; ೨ ತಿಮೊ. ೩. ೧೫. ೧೬; ೧ ಪೇತ್ರ. ೧, ೧೧; ೨ ಪೇತ್ರ. ೧, ೨೧.)

ಪರಿಶಿಷ್ಟ. ನಿಶ್ಚಯಿಸಲ್ಪಟ್ಟ ಪರಿಶುದ್ಧ ಬರಹಗಳ ಸಂಗ್ರಹಕ್ಕೆ ನಿರ್ಣಯವೆಂದು ಹೆಸರುಂಟು, (ಗ್ರೀಕ ಭಾಷೆಯಲ್ಲಿ ಕಾನೋನ್) ಯಾಕಂದರೆ ಅದೇ ಮತಪ್ರಕಾರದ ವಿಶ್ವಾಸಕ್ಕೂ ಜೀವನಕ್ಕೂ ಸೂತ್ರವಾಗಿರುತ್ತದೆ. ಹಳೇ ಒಡಂಬಡಿಕೆಯಲ್ಲಿ ಇರುವಂಥಾದ್ದೇನಂದರೆ.

I ಹಳೇ ಒಡಂಬಡಿಕೆಯ ಅಸ್ತಿವಾರದ ಶಾಸನಗಳು. ಅಂದರೆ ಮೋಶೆಯ ೫ ಪುಸ್ತಕಗಳು. (ಪೆಂತೆತ್ಯೂಕ್ ಅಂದರೆ ಪಂಚಶಾಸ್ತ್ರ)

II ಹಳೇ ಒಡಂಬಡಿಕೆಯ ಇತಿಹಾಸದ ಶಾಸನಗಳು (ಯೋಶುವ, ನ್ಯಾಯಾಧಿಪತಿಗಳು, ರೂತ್, ಸಮುವೇಲ. ಅರಸುಗಳ ದಿನಚರ್ಯೆಗಳ ಎಜ್ರ ನೆಹೇಮಿಯ ಎಸ್ತೆರ್.)

III ಹಳೇ ಒಡಂಬಡಿಕೆಯ ಸಭೆಯಲ್ಲಿ ನಡೆದ ಭಕ್ತಿಜೀವನದ ಶಾಸನಗಳು. (ಯೋಬ್, ಕೀರ್ತನೆಗಳು, ಸಾಮತಿಗಳು, ಪ್ರಸಂಗಿ, ಸೊಲೊಮೋನನ ಗೀತ.)

IV ಹಳೇ ಒಡಂಬಡಿಕೆಯ ಪ್ರವಾದನೆಯ ಶಾಸನಗಳು. (ಯೆಶಾಯ, ಯೆರೆಮಿಯ, ಎಜೆಕಿಯೇಲ್, ದಾನಿಯೇಲ್—ಹೊಸೇಯ, ಯೋಯೆಲ್, ಆಮೋಸ್, ಒಬದಿಯ—ಯೋನ, ಮಿಕ, ನಾಹೂಮ್, ಹಬಕುಕ್—ಜಫನಿಯ, ಜಕರಿಯ, ಹಗ್ಗಾಯ, ಮಲಕೀಯ.)

ಹೆಬ್ರೀಯರ ಭಾಷೆಯಲ್ಲಿ ಬರದ ದೇವವಾಕ್ಯದಲ್ಲಿ ಮತ್ತೊಂದು ಕ್ರಮವುಂಟು—

I ನ್ಯಾಯ ಪ್ರಮಾಣವು. (ಥೋರ.)

II ಮೊದಲನೇ ಪ್ರವಾದಿಗಳು. (ಯೋಶುವ, ನ್ಯಾಯಾಧಿಪತಿಗಳು—ಸಮುವೇಲ, ಅರಸುಗಳ ಪುಸ್ತಕಗಳು.)

III ತರುವಾಯ ಬಂದ ಪ್ರವಾದಿಗಳು. (ದುಃಖ್ಖಾಲಾಪನೆ, ದಾನಿಯೇಲ್ ಹೊರ್ತು ಯೆಶಾಯನಿಂದ ಮಲಕೀಯ ಪರ್ಯಂತ್ರ.)

IV ಕೆತೂಬಿಮ್ (ಹಗಿಯೊಗ್ರಾಫಾ) ಅಂದರೆ ಶುದ್ಧ ಲೇಖನಗಳು (ಕೀರ್ತನೆಗಳು, ಸಾಮತಿಗಳು, ಯೋಬ್, ಮಹದ್ಗೀತ, ರೂತ, ಗೋಳಾಟಗಳು, ಪ್ರಸಂಗಿ, ಎಸ್ತೆರ್, ದಾನಿಯೇಲ್ ಎಜ್ರ, ನೆಹೇಮಿಯ, ದಿನಚರ್ಯಗಳು.)



## ೬ ಳ ನೇ ಕಾ ಲ

### ಹಳೇ ಒಡಂಬಡಿಕೆಯ ಪ್ರವಾದನೆಯು ಮೌನವಾದಂದಿನಿಂದ ಅದು ಹೊಸ ಒಡಂಬಡಿಕೆಯಲ್ಲಿ ಪೂರ್ಣವಾಗುವ ಪರ್ಯಂತರ

(ಶು ಮಾ ರು ೪ ೦ ೦ ವ ರ್ಷ ದ ಕಾ ಲ)

### § 98—100. ಈ ಕಾಲದ ಸ್ವಭಾವ

### § 98.

ಮಲಕೀಯನಿಂದ ಈತನು ಪ್ರವಾದಿಸಿದ ಸ್ನಾನಿಕ ಯೋಹಾನನ ಪರ್ಯಂತರಕ್ಕೂ ಪ್ರವಾದನೆಯು ನಾನೂರು ವರ್ಷಕ್ಕಿಂತ ಹೆಚ್ಚು ಮೌನವಾಗಿತ್ತು. ಆದರೆ

ಸಮವಾದ ಪ್ರವಾದಿಯ ಬರೋಣಕ್ಕೆ ಬಹಳ ಆಸಕ್ತಿಯಿಂದ ಎದುರು ನೋಡುತ್ತಾ ಇದ್ದರು. ಆಯಲ್ಪಟ್ಟ ಜನಾಂಗವು ಬೋಧನೆ ಶಿಕ್ಷೆಗಳು ಯೌವನ ಪ್ರಾಯವನ್ನು ದಾಟಿ ಒಳ್ಳೇ ಪುರುಷನಾಗಿ ಸ್ವತಂತ್ರವನ್ನು ಹೊಂದಿ ಇತ್ತು. ಈಗ ಅದು ದೇವರು ಪ್ರತ್ಯೇಕವಾಗಿ ಅದನ್ನು ನಡಿಸದೆ ಇರುವಾಗ್ಯೆ, ಏನು ಮಾಡುವದೆಂಬದೂ ಇಷ್ಟು ವರೆಗೆ ಹೊಂದಿದಂಥಾ ಅನುಭವವನ್ನೂ ತಿಳುವಿಕೆಯನ್ನೂ ಹ್ಯಾಗೆ ಪ್ರಯೋಗಿಸುವದೆಂಬದೂ ಕಾಣ ಬರ ಬೇಕಾಯಿತು. ಮೋಶೆಯ ನೇಮವೂ ಪ್ರವಾದಿಗಳ ಪ್ರವಾದನೆಗಳೂ ಅದಕ್ಕೆ ಮಾರ್ಗದಲ್ಲಿ ಬೆಳಕೂ ಕೈಗಳಲ್ಲಿ ಕೋಲೂ ಆಗಿರ ಬಹುದಾಗಿದ್ದವು, ಆಗಿರ ಬೇಕಾಗಿದ್ದವು. ಮ್ಲೇಂಛರ ಮೂಲಸೂತ್ರವು ಈ ಜನಾಂಗವನ್ನು ಪೂರ್ಣವಾಗಿ ನಿರ್ಮೂಲ ಮಾಡ ಬೇಕೆಂದಿರುವಾಗ ನೇಮವೂ ಪ್ರವಾದಿಗಳೂ ಯೆಹೂದ್ಯರಿಗೆ ಒಂದು ಕಟ್ಟದ ಹಾಗೆಯೂ (ನೀರಿನ ಪ್ರವಾಹ ಒಳಗೆ ಶೇರದ ಹಾಗೆ ಕಟ್ಟಿ ಕಟ್ಟುವದು.) ಬಲವಾದ ಪ್ರಾಕಾರದ ಹಾಗೆಯೂ ಇದ್ದವು. ಮತ್ತು ಈ ಯುಗದಲ್ಲಿ ಅವರು ಜಯಶಾಲಿಗಳಾಗಿ ನಿಂತ ಮೇಲೆ ಎಲ್ಲಾ ವಿಷಯಗಳಲ್ಲಿಯೂ ತಮ್ಮ ಉದ್ಯೋಗವನ್ನು ಪೂರ್ಣವಾಗಿ ತೀರಿಸುವ ಹಾಗೆ ರಾಜ್ಯದಲ್ಲಿಯೂ ಸ್ವತಂತ್ರವನ್ನು ಹೊಂದಿದರು. ಮತ್ತೊಂದು ಕಡೆಯಲ್ಲಿ ಇಸ್ರಯೇಲನು ಸುವಾರ್ತಿಸುವ ಕಾಲವು ಬಂದಿತ್ತು. ಮ್ಲೇಂಛರಿಗೆ ಇಸ್ರಯೇಲಿನ ವಿಶ್ವಾಸವನ್ನೂ ಇಸ್ರಯೇಲಿನ ಕೋರಿಕೆಯನ್ನೂ ತಿಳಿಸ ಬೇಕಾಗಿತ್ತು; ಮತ್ತು ಅವರಿಗೂ ಈ ಪ್ರಕಾರ ಕ್ರಿಸ್ತನಲ್ಲಿ ರಕ್ಷಣ್ಯಕ್ಕೆ ಮಾರ್ಗವಾಗ ಬೇಕಾಗಿತ್ತು. ಇಸ್ರಯೇಲನು ಈ ಕರಿಯುವಿಕೆಯನ್ನು ತಿಳಕೊಳ್ಳದೆ ಇದ್ದರೂ, ಚದರಿ ಜೀವಿಸುವ ಇಸ್ರಯೇಲ್ಯರಿಗೆ ಸಭೆಮನೆಗಳು ಇರುತ್ತಿರಲಾಗಿ ಇದರಿಂದ ಕರಿಯುವಿಕೆಯು ಸಂಪಾದ್ಯವಾಯಿತು. ಹ್ಯಾಗಂದರೆ ಇವುಗಳಲ್ಲಿ ನೇಮವನ್ನೂ ಪ್ರವಾದನೆಗಳನ್ನೂ ಓದಿ ವಿವರಿಸಿದರು. ಮತ್ತು ಅವುಗಳಿಗೆ ಬರಲಿಕ್ಕೆ ಮ್ಲೇಂಛರಿಗೂ ಅಪ್ಪಣೆ ಇತ್ತು.



## § 99.

ವಾಸಾಂತರದ ದಂಡಣೆಯು ಹ್ಯಾಗೂ ಸಫಲವಾಯಿತು. ಮ್ಲೇಂಛರ ಮರ್ಯಾದೆಗಳ ಮೇಲೆಯೂ ವಿಗ್ರಹಾರಾಧನೆಗಳ ಮೇಲೆಯೂ ಇದ್ದ ಹಳೇ ಮೋಹವು ಪೂರ್ಣವಾಗಿ ಹೋಗಿತ್ತು. ಅದು ಬಿಟ್ಟು ಅದಕ್ಕೆ ಪೂರ್ಣವಾಗಿ ಪ್ರತಿಕೂಲವಾದದ್ದುಂಟಾಗಿತ್ತು. ಆದರೆ ನಾಲ್ಕುಸಾವಿರ ವರ್ಷಗಳ ಹಿಂದೆ ವಾಗ್ದತ್ತವಾಗಿ ಸಿದ್ಧವಾದಂಥಾ ರಕ್ಷಣ್ಯವನ್ನು ಪೂರ್ಣವಾಗಿ ತೋರದು ಬಿಡಲಿಕ್ಕೂ ಪರಿಶುದ್ಧನನ್ನು ಕಾಂದು

ಹಾಕಲಿಕ್ಕೂ ಕಾರಣವಾದ ಬೇರೆ ಮನೋರೀತಿಗಳು ಈ ಜನಾಂಗದ ಲಕ್ಷಣದಲ್ಲಿ ಬೆಳದವು, ಯಾವವೆಂದರೆ: ಒಂದು ಕಡೆಯಲ್ಲಿ ದೇವಾಧಿಕಾರಕ್ಕೆ ಪ್ರತಿಕೂಲವಾದ ಪ್ರತ್ಯೇಕಿಸಲ್ಪಡುವಿಕೆಯು ಮೊರಟಾದ ಜನಾಂಗಗರ್ವವು ಮಾಂಸಭಾವದ ಭ್ರಾಂತವಾದ ಮೆಸ್ಸೀಯಾಶೆಗಳು ಹುಚ್ಚಾದ ಕ್ರಿಯೆಗಳ ನೀತಿಯೂ ಸ್ವನೀತಿಯೂ ಹಾಸ್ಯಕರವಾದ ನುಸಿಶೋಧನೆಯೂ (ಮತ್ತಾ. ೨೩, ೨೪) ಮತ್ತೊಂದು ಕಡೆಯಲ್ಲಿ ಪಿತೃಗಳಿಗೆ ಪ್ರಿಯವಾದ ವಾಗ್ದತ್ತಗಳಿಗೂ ಕೋರಿಕೆಗಳಿಗೂ ಅಪಹಾಸ್ಯ ಮಾಡುವಂಥಾ ಸದ್ದುಕಾಯಕರ ಅವಿಶ್ವಾಸವೂ ಈ ಎರಡು ತರದ ಮನೋರೀತಿಗಳು ಅವರಲ್ಲಿ ಬೆಳದವು. ಆದರೆ ಈ ಪ್ರಕಾರ ಹೆಚ್ಚಾದವರು ಮೆಲ್ಲಕ್ಕೆ ಕಡೇ ನಾಶನಕ್ಕಾಗಿ ಬೆಳಿಯುತ್ತಾಇರಲಾಗಿ, ಎಲ್ಲಾ ನಿಜವಾದ ಇಸ್ರಯೇಲ್ಯರು ತಮ್ಮ ದೃಷ್ಟಿಯನ್ನು ವಾಗ್ದತ್ತದ ಕಡೆಗೂ ತಮ್ಮ ಕೋರಿಕೆಗಳನ್ನು ಈಡೇರುವಿಕೆಯ ಕಡೆಗೂ ತಿರುಗಿಸಿ ಪ್ರತ್ಯಕ್ಷವಾದ ರಕ್ಷಕನಲ್ಲಿ ರಕ್ಷಣ್ಯವನ್ನೂ ಆನಂದವನ್ನೂ ಪಡಕೊಂಡರು.



## § 100.

ಈ ಕಾಲದ ಕಥೆಗೆ ಮುಖ್ಯಾಧಾರವು ಏನಂದರೆ ಯೆಹೂದ್ಯ ಕಥಾಕರ್ತನಾದ ಯೋಸೇಫನು ಕೆಲವು ಸಂಗತಿಗಳ ವಿಷಯವಾಗಿ ಅಪೊಕ್ರಿಫಾ ಪುಸ್ತಕಗಳೂ ಹಾಗೆಯೇ ಗ್ರೀಕ ರೋಮಾಯರಾದ ಮ್ಲೇಂಛ ಕಥಾಕರ್ತರು ಸಹಾ. ಪ್ರವಾದನೆಯ ವರವು ನಿಂತುಹೋದದರಿಂದ ಈ ಕಾಲದಲ್ಲಿ ಒಡಂಬಡಿಕೆಯ ಜನಾಂಗದಲ್ಲಿ ಉಂಟಾದ ಬರಹಗಳು ದೇವರ ವಾಕ್ಯವೆಂದು ಎಣಿಸಲ್ಪಡ ಕೂಡದು. ಆದದರಿಂದ ಅವುಗಳಿಗೆ ಅಪೊಕ್ರಿಫವೆಂದು ಹೆಸರು. ಹಾಗಂದರೆ ಅಡಗಿದ ಬರಹಗಳು ಯಾಕಂದರೆ ಇವುಗಳು ಪ್ರವಾದಿಗಳ ಬರಹಗಳ ಹಾಗೆಯೇ ತಪ್ಪು ಮಾಡದ ದಿವ್ಯ ಬೆಳಕಾಗಿ ಸಭೆಯ ದೀಪದಲ್ಲಿ ನಮ್ಮ ಜೀವನಮಾರ್ಗದಲ್ಲಿ ನಮಗೆ ಬೆಳಕು ಕೊಡಲಾರವು. ಆದರೆ ಅವುಗಳನ್ನು ಬರೆದವರು ಹಳೇ ಒಡಂಬಡಿಕೆಯಲ್ಲಿ ಭಕ್ತರಾಗಿಯೂ ಪ್ರಕಾಶ ಹೊಂದಿದವರಾಗಿಯೂ ಇದ್ದ ಜನರು. ಆದದರಿಂದ ಅವುಗಳು ತಪ್ಪಿಲ್ಲದವುಗಳಾಗಿಲ್ಲದಿದ್ದರೂ ಲುಥರನು ಹೇಳುವ ಪ್ರಕಾರ ಓದುವವರಿಗೆ ಕ್ಷೇಮಕರವಾಗಿಯೂ ಪ್ರಯೋಜನಕರವಾಗಿಯೂ ಇರುತ್ತವೆ. ಮತ್ತು ಕಥೆಗೆ ಆಧಾರವೆಂದೂ ಆ ಕಾಲದಲ್ಲಿ ಭಕ್ತರು ಹಾಗ್ಯೆ ಆಲೋಚಿಸಿದರೆಂಬದಕ್ಕೆ ಸಾಕ್ಷಿಗಳೆಂದೂ ಮಾನಕ್ಕೆ ಯೋಗ್ಯವಾಗಿರುತ್ತವೆ. ಈ ಪುಸ್ತಕಗಳು ಯಾವವಂದರೆ:

೧ನೇ ಯೂದಿಥ್ ಎಂಬ ಪುಸ್ತಕ. ಇದು ಒಬ್ಬ ಭಕ್ತಿಯುಳ್ಳ ಯೆಹೂದ್ಯಳಾದ ವಿಧವೆಯ ಕಥೆಯು.—ಈಕೆಯು ಬೆಥೂಲ್ಯವೆಂಬ ತನ್ನ ಜನ್ಮಪಟ್ಟಣಕ್ಕೆ ನೆಬುಕದ್ನೇಜರನ ಸೈನ್ಯಾಧಿಪತಿಯೆಂದು ಕರಿಯಲ್ಪಡುವ ಹೊಲೊಫೆರ್ನ್ನಾನು ಮುತ್ತಿಗೆ ಹಾಕಿದಾಗ ಅದನ್ನು ವೀರಧೈರ್ಯದಿಂದ ಬಿಡುಗಡೆ ಪಡಿಸಿದಳು.

೨ನೇ ಸೊಲೊಮೋನನ ಜ್ಞಾನವು. ಇದು ಸೊಲೊಮೋನನ ಗಾದೆಗಳ ಹಾಗೆಯೇ ಉಂಟು. ಗ್ರಂಥಕರ್ತನು ಯಾರೆಂದು ತಿಳಿಯುವದಿಲ್ಲ.

೩ನೇ ತೊಬಿತ್ ಎಂಬ ಪುಸ್ತಕ. ಇದು ಅಸೂರ್ಯ ವಾಸಾಂತ್ರದಲ್ಲಿದ್ದ ಒಬ್ಬ ಭಕ್ತಿಯುಳ್ಳ ಯೆಹೂದ್ಯನ ಕಥೆಯು.—ಈ ಕಥೆಯು ಮಕ್ಕಳನ್ನು ಭಕ್ತಿಯಲ್ಲಿ ಬೆಳಸಿದ್ದಾದರೆ ಎಂಥಾ ಆಶೀರ್ವಾದ ಉಂಟೆಂದು ತೋರಿಸುತ್ತದೆ.

೪ನೇ ಯೇಸು ಸೀರಕ್ ಎಂಬವನ ಪುಸ್ತಕ. ಇದು ಸೊಲೊಮೋನನ ಗಾದೆಗಳ ಹಾಗೆಯೇ ಚಂದವಾದ ಬುದ್ಧಿಯುಳ್ಳ ಗಾದೆಗಳುಳ್ಳದ್ದಾಗಿರುತ್ತದೆ.

೫ನೇ ಬಾರುಕನ ಪುಸ್ತಕವು ಬಬಿಲೋನ್ಯ ವಾಸಾಂತ್ರವನ್ನು ಕುರಿತು ಇಸ್ರಯೇಲ್ಯ ಜನಾಂಗಕ್ಕೆ ಬುದ್ಧಿಮಾತುಗಳನ್ನು ಹೇಳುತ್ತದೆ.

೬ನೇ ಮಕಬಯರ ೨ ಪುಸ್ತಕಗಳು ಕಥೆಯುಳ್ಳವುಗಳು (§ ೧೦೪.)

೭ನೇ ಎಸ್ತರ್ ಪುಸ್ತಕದ ಭಾಗಗಳು. ಇವು ನಿರ್ಣಯಕ್ಕೆ ಸೇರಿದ ಎಸ್ತರ್ ಪುಸ್ತಕಕ್ಕೆ ಪರಿಶಿಷ್ಟಗಳು.

೮ನೇ ಸುಸನ್ನಳ ಕಥೆಯು, ಬಾಬೇಲದ ಬೇಲ ಎಂಬದು ಬಾಬೇಲದ ಗಟಸರ್ಪವನ್ನು ಕುರಿತು, ಅಸಾರ್ಯನ ಪ್ರಾರ್ಥನೆ, ಅಗ್ನಿಕುಂಡದಲ್ಲಿ ಇದ್ದ ಮೂರು ಮಂದಿಯ ಗೀತ. ಇದೆಲ್ಲಾ ದಾನಿಯೇಲನ ಕಥೆಗೆ ಮತ್ತೆ ಕೂಡಿಸಿದ ವೃತ್ತಾಂತಗಳು.

೯ನೇ ಮನಸ್ಸೆಯ ಪ್ರಾರ್ಥನೆ. ಯೆಹೂದ್ಯರ ಕಥಾಕರ್ತನಾದ ಫ್ಲಾವ್ಯ ಯೋಸೇಫನು ಒಬ್ಬ ಯೆಹೂದ್ಯ ಯಾಜಕನ ಮಗನೂ ರೋಮಾಯರ ಯುದ್ಧದಲ್ಲಿ ಯೆಹೂದ್ಯರ ಸೇನಾನಾಯಕನೂ ಆಗಿದ್ದನು. (§ ೧೧೧). ಅವನು ಈ ಯುದ್ಧದ ಕಥೆಯನ್ನು ಯೆಹೂದ್ಯಪುರಾಣವೆಂಬ ಹೆಸರಿಟ್ಟು ಕೈಸರನಾದ ನೇರೊವಿನ ಕಾಲದ ಪರ್ಯಂತರಕ್ಕೂ ಯೆಹೂದ್ಯ ಜನಾಂಗದ ಕಥೆಯನ್ನು ಬರದನು.



## § 101—103. ಯೆಹೂದ್ಯರು ೩ ನೇ ಲೋಕರಾಜ್ಯದ ಕೈಕೆಳಗೆ

### § 101.

ದಾನಿಯೇಲನು (೮ ಸಂ.) ಭೂಮಿಯನ್ನು ಮುಟ್ಟದಷ್ಟು ವೇಗದಿಂದ ಓಡಿ ಬರುವಂಥಾ ಮೇಕೆಹೋತೆಂದು ದರ್ಶಿಸಿದ ದೊಡ್ಡ ಅಲೆಕ್ಸಂದರನು ತೂರಿಗೆ ಮುತ್ತಿಗೆ ಹಾಕಿರುತ್ತಿರಲಾಗಿ ಅವನ ವೇಗದ ಜಯಮಾರ್ಗದಲ್ಲಿ ಏಳು ತಿಂಗಳು ತಡವಾಯಿತು. ಈ ಮುತ್ತಿಗೆಯ ಸಮಯದಲ್ಲಿ ಅವನು ಸಮಾರ್ಯದಿಂದಲೂ ಯೂದೆಯದಿಂದಲೂ ತನಗೆ ಜನರೂ ಆಹಾರವೂ ಬೇಕೆಂದು ಕೇಳಿದನು. ಸಮಾರ್ಯದವರು ಒಪ್ಪಿಕೊಂಡರು. ಆದರೆ ಪ್ರಧಾನಯಾಜಕನಾದ ಯದ್ದುವನು ಪರ್ಸರಿಗೆ ನಂಬಿಗಸ್ತನಾಗಿರುತ್ತೇನೆ ಎಂದು ಮಾಡಿದ ಪ್ರಮಾಣವನ್ನು ಆಲೋಚಿಸಿ ಕೇಳಿದ ಸಹಾಯವನ್ನು ಕೊಡಲಾರೆನೆಂದು ಹೇಳಿದನು. ತೂರನ್ನು ಕೈವಶ ಮಾಡಿ ಕೊಂಡ ತರುವಾಯ ಅಲೆಕ್ಸಂದರನು (ಯೋಸೇಫನ ಕಥೆಯ ಪ್ರಕಾರ) ಮಹಾ ಕ್ರೋಧದಿಂದ ಯೆರೂಸಲೇಮಿಗಾಗಿ ಸೈನ್ಯವನ್ನು ನಡಿಸಿದನು. ಯೆಹೂದ್ಯರು ಉಪವಾಸ ಮಾಡಿ ಪ್ರಾರ್ಥನೆ ಮಾಡಿದರು. ಮತ್ತು ಪ್ರಧಾನಯಾಜಕನು ಪೂರ್ಣವಾಗಿ ಅಲಂಕಾರ ಮಾಡಿಕೊಂಡವನಾಗಿ ಬಿಳೇ ವಸ್ತ್ರ ಧರಿಸಿದ ಯಾಜಕರನ್ನೂ ಲೇವ್ಯರನ್ನೂ ಸಂಗಡ ಕರಕೊಂಡು ಉತ್ಸವವಾಗಿ ಜಯಶಾಲಿಗೆ ಎದುರಾಗಿ ಹೋದನು. ಅಲೆಕ್ಸಂದರನ ಕ್ರೋಧವು ನಿಂತುಹೋಗಿತ್ತು. ಅವನು ಪ್ರಧಾನಯಾಜಕನನ್ನು ಸ್ನೇಹದಿಂದ ವಂದಿಸಿ ಅವನಿಗೆ ಕೈಕೊಟ್ಟು ಪ್ರಧಾನಯಾಜಕನ ತುರಾಯಿಗಿರುವ ಭಂಗಾರದ ತಗಡಿನ ಮೇಲೆ ಇದ್ದ ಯೆಹೋವನ ನಾಮವನ್ನು ಆರಾಧಿಸಿದನು. ಯಾಕಂದರೆ ಮಕೆದೋನ್ಯದಲ್ಲಿಯೇ ಅವನಿಗೆ ಕನಸಿನಲ್ಲಿ ಒಬ್ಬ ಮನುಷ್ಯನು ಇದೇ ವಸ್ತ್ರಭೂಷಣದಲ್ಲಿ ಕಾಣಿಸಿ ಕೊಂಡು, ತನ್ನ ದೇವರು ಅವನಿಗೆ ಸಮಸ್ತ ಆಸ್ಯದಲ್ಲಿ ಅಧಿಕಾರವನ್ನು ಒಪ್ಪಿಸಿ ಕೊಟ್ಟಿದ್ದಾನೆಂದು ಸಾರಿದ್ದನಂತೆ. ಅಲೆಕ್ಸಂದರನು ಸಮಾಧಾನವಾಗಿ ಯೆರೂಸಲೇಮಿನಲ್ಲಿ ಪ್ರವೇಶಿಸಿ ದೇವಾಲಯದಲ್ಲಿ ಬಲಿಯರ್ಪಿಸಿ ತನ್ನ ವಿಷಯವಾಗಿ ಆದ ದಾನಿಯೇಲನ ಪ್ರವಾದನೆಗಳನ್ನು ಓದಿ ಯೆಹೂದ್ಯರಿಗೆ ಉಪಕಾರ ಮಾಡುತ್ತೇನೆಂದು ಹೇಳಿ, ಯೆರೂಸಲೇಮುದಿಂದ ಹೋದನು.

ಪರಿಶಿಷ್ಟ. ಅಲೆಕ್ಸಂದರನು ದೇವರ ರಾಜ್ಯವು ವಿಕಸಿತವಾಗುವದರಲ್ಲಿ ಬಹಳ ಪ್ರಾಮುಖ್ಯನಾಗಿರುತ್ತಾನೆ. ಅವನ ಪರಿಮುಖವಾಗಿಯೇ ಅಲೆಕ್ಸಂದ್ರಿಯವು ಸಮಸ್ತ ಲೋಕಕ್ಕೋಸ್ಕರ ವ್ಯಾಪಾರಕ್ಕೂ ವಿದ್ಯೆಗೂ ಮಧ್ಯಸ್ಥಾನವಾಯಿತು. ಇಲ್ಲಿ ಪೂರ್ವದೇಶವೂ ಪಶ್ಚಿಮ ದೇಶವೂ ಒಂದಕ್ಕೊಂದು ಕೈಕೊಟ್ಟವು. ಬೇರೆ ಬೇರೆ ಕಡೆಯಿಂ

ದ ಜನರು ಬಂದು ಅಲ್ಲಿ ನಿವಾಸ ಮಾಡುವದರಿಂದಲೂ ಬಹಳ ಚನ್ನಾಗಿ ನಡಿಯುವ ವ್ಯಾಪಾರದಿಂದಲೂ ಜನಾಂಗಗಳ ಮಧ್ಯದಲ್ಲಿ ಅಧಿಕವಾದ ನಡೆನಡತೆ ಉಂಟಾಯಿತು. ಗ್ರೇಕಭಾಷೆಯು ಲೋಕಭಾಷೆಯಾಯಿತು; ಹೀಗಾಗಿ ಅಬ್ರಹಾಮನ ಬೀಜದಲ್ಲಿ ಸಮಸ್ತ ಜನಾಂಗಗಳಿಗೋಸ್ಕರ ಸಿದ್ಧವಾದ ರಕ್ಷಣ್ಯವನ್ನು ಎಲ್ಲಾ ಭೂಮಂಡಲದಲ್ಲಿ ಬೇಗ ಪ್ರಸಿದ್ಧಿ ಮಾಡುವದಕ್ಕೆ ಬೇಕಾದ ಉಪಾಯಗಳನ್ನು ಉಂಟು ಮಾಡಿದವನು ಅಲೆಕ್ಸಂದರನೇ.



## § 102.

ಅಲೆಕ್ಸಂದರನು ಸತ್ತ ಮೇಲೆ (೩೨೩) ಪಲೆಸ್ತೀನವು ಲಾವೊಮೇದಾನನಿಗೆ ಆಯಿತು. ಆದರೆ ೩೨೦ನೇ ವರ್ಷದಲ್ಲಿಯೇ ಪ್ತಾಲೆಮಯ ಲಾಗಿ ಅದನ್ನು ಅವನಿಂದ ಕಸಕೊಂಡನು. ಪ್ರಧಾನಯಾಜಕನಾದ ಮೊದಲನೇ ಓನೀಯನು ಲಾವೊಮೇದಾನನಿಗೆ ನಂಬಿಗಸ್ತನಾಗಿರ ಬೇಕೆಂದಿದ್ದದರಿಂದ, ಪ್ತಾಲೆಮಯನು ಸಬ್ಬತ್ ದಿವಸದಲ್ಲಿ ಯೆರೂಸಲೇಮದ ಮೇಲೆ ಬಿದ್ದು ಏನೂ ತಡೆ ಇಲ್ಲದೆ ಅದನ್ನು ಕೈವಶ ಮಾಡಿ ಕೊಂಡನು. ಹ್ಯಾಗೂ ಅಧಿಕಾರದ ಬುದ್ಧಿಯಿಂದ ಅವನು ಯೆಹೂದ್ಯರನ್ನು ಬಹಳ ನಯತ್ವದಿಂದಲೂ ದಯದಿಂದಲೂ ನಡಿಸಿದನು. ಅವನು ಒಂದು ಲಕ್ಷ ಯೆಹೂದ್ಯರನ್ನು ಐಗುಪ್ತದಲ್ಲಿ ಮುಖ್ಯವಾಗಿ ಅಲೆಕ್ಸಂದ್ರಿಯದಲ್ಲಿ ನಿವಾಸಿಸ ಮಾಡಿ ಮಕೆದೋನ್ಯರಿಗೆ ಇದ್ದ ಸ್ವತಂತ್ರಗಳನ್ನು ಅವರಿಗೂ ಕೊಟ್ಟನು. ಅವರು ಬಹಳ ನಂಬಿಗಸ್ತರೆಂದು ತಿಳಿದು ವಿಶೇಷವಾಗಿ ಅವರನ್ನು ಕೋಟೆಗಳನ್ನು ಕಾಪಾಡಲಿಕ್ಕೆ ಇಟ್ಟನು. ೨೧೪ ನೇ ವರ್ಷದಲ್ಲಿ ಅಂತಿಗೊನನು ಪಲೆಸ್ತೀನವನ್ನು ಕಸಕೊಂಡನು. ಆದರೆ ೩೦೧ನೇ ವರ್ಷದಲ್ಲಿ ಇಪ್ಸದ ಹತ್ತರ ರಣದಲ್ಲಿ ಅವನು ಬಿದ್ದ ಮೇಲೆ ಅದು ತಿರಿಗಿ ಪ್ತಾಲೆಮಯರ ಕೈಕೆಳಗೆ ಬಂತು. ಅಂದಿನಿಂದ ನೂರು ವರ್ಷ ಪರ್ಯಂತರ ಅದು ಅವರಿಗೆ ಇತ್ತು. ಯೆಹೂದ್ಯರು ಈ ಕಾಲದಲ್ಲಿ ಸೌಖ್ಯದಲ್ಲಿಯೂ ಸಮಾಧಾನದಲ್ಲಿಯೂ ಬದುಕಿದರು. ಪ್ತಾಲೆಮಯರ ಅಧಿಕಾರದ ಕಡೇ ಕಾಲದಲ್ಲಿ ಮಾತ್ರವೇ ಅವರ ಸ್ಥಿತಿಯು ಸ್ವಲ್ಪ ದುಃಖಕರವಾಯಿತೆಂದು ಕಾಣುತ್ತದೆ.

ಪರಿಶಿಷ್ಟ. ಯೆರೂಸಲೇಮದಲ್ಲಿ ಶ್ರೇಷ್ಟ ಅಧಿಕಾರವು ಮಂತ್ರಿಸಭೆಗೆ ಇತ್ತು. (ಸೆನೇದ್ರಿಯ ಇಲ್ಲವೆ ಸಂನ್ಹೆದ್ರಿನ್) ಇದಕ್ಕೆ ೭೦ ಮಂದಿ ಇದ್ದರು. ಇವರು ಪಿತೃಗಳ ನೇಮದ ಪ್ರಕಾರ ನ್ಯಾಯ ವಿಚಾರಿಸಿದರು. ಅವರಿಗೆ ಮರಣಶಿಕ್ಷೆಯ ಅಧಿಕಾರವಿತ್ತು. ಎಲ್ಲಾ ಅರಸುಗಳು ಹೊಸತಾಗಿ ಸ್ಥಾಪಿಸಿದ ಸ್ಥಳಗಳಿಗೆ ಯೆಹೂದ್ಯರನ್ನು ಅವ

ರಿಗೆ ಉತ್ತಮವಾದ ಸ್ವತಂತ್ರಗಳನ್ನು ಕೊಟ್ಟು ತರಲಿಕ್ಕೆ ಪ್ರಯತ್ನ ಮಾಡುತ್ತಿರಲಾಗಿ, ಯೆಹೂದ್ಯರು ಎಲ್ಲಾ ಭೂಮಂಡಲದಲ್ಲಿ ಚದರಿದರು. ಎಲ್ಲಾ ಕಡೆಯಲ್ಲಿಯೂ ಅವರು ಸಭೆಮನೆಗಳನ್ನು ಕಟ್ಟಿದರು. ಇಲ್ಲಿ ಮ್ಲೇಂಛರು ಸಹಾ ಇಸ್ರಾಯೇಲ್ಯರ ವಿಶ್ವಾಸವನ್ನೂ ಕೋರಿಕೆಗಳನ್ನೂ ತಿಳುಕೊಳ್ಳಲಿಕ್ಕೆ ಶಕ್ತರಾದರು. ಗ್ರೀಕ ಭಾಷೆಯು ದಿಯಸ್ಪೊರದಲ್ಲಿ (ಅಂದರೆ ಚದರುವಿಕೆಯಲ್ಲಿ) ಜೀವಿಸುವಂಥ ಯೆಹೂದ್ಯರಿಗೆ (ಹೆಲೆನಿಸ್ತರಿಗೆ) ಬೇಗ ಜನ್ಮಭಾಷೆಯಾಯಿತು. ಇದು ಯೆಹೂದ್ಯ ಭಕ್ತಿಗೂ ಮ್ಲೇಂಛ ಭಕ್ತಿಗೂ ಮಧ್ಯದಲ್ಲಿ ಒಂದು ಸಂಕದ ಹಾಗೆ ಆಯಿತು. ಹೀಗಾಗಿ ಗ್ರೀಕಭಾಷೆಯಲ್ಲಿ ಹಳೇ ಒಡಂಬಡಿಕೆಯ ಭಾಷಾಂತರವು ಅವಶ್ಯವಾಯಿತು. ಇದನ್ನು ಪ್ತೊಲೆಮಯ ಫಿಲದೆಲ್ಫನು ತಾನು ಸ್ಥಾಪಿಸಿದ ದೊಡ್ಡ ಪುಸ್ತಕಸಂಗ್ರಹಕ್ಕಾಗಿ ಮಾಡಬೇಕೆಂದು ಅಪ್ಪಣೆ ಕೊಟ್ಟಿದ್ದನಂತೆ (ಇದಕ್ಕೆ ಹೆಸರು ಸೆಪ್ತುವಗಿಂತ ಅಂದರೆ ೭೦ ಮಂದಿ ಭಾಷಾಂತರಿಗಳು). ಈ ವಿಷಯದಲ್ಲಿ ಒಂದು ಕಟ್ಟುಕಥೆಯುಂಟು; ಅದರ ಪ್ರಕಾರ ಯೆರೂಸಲೇಮದಿಂದ ಕರಕೊಂಡು ಬಂದ ೭೨ ಮಂದಿ ಶಾಸ್ತ್ರಿಗಳು ಫಾರೋದ್ವೀಪದಲ್ಲಿ ಬೇರೆ ಬೇರೆ ಕೋಣೆಗಳಲ್ಲಿ ಕೂತುಕೊಂಡು ಭಾಷಾಂತರಗಳನ್ನು ಮಾಡಿದರೂ ಎಲ್ಲಾ ಭಾಷಾಂತರಗಳು ಪೂರ್ಣವಾಗಿ ಒಂದೇ ಪ್ರಕಾರವಾದವಂತೆ!—ಪ್ತೊಲೆಮಯ ಫಿಲೊಮೇತೊರನ (೧೮೦—೧೪೫) ಕಾಲದಲ್ಲಿ ಐಗುಪ್ತಕ್ಕೆ ವಾಸಾಂತರ ಮಾಡಿದ ಯಾಜಕನಾದ ಒನೀಯನು ಐಗುಪ್ತದಲ್ಲಿರುವ ಲೆಯೊಂತೊಪೊಲಿಯಲ್ಲಿ ಯೆರೂಸಲೇಮದಲ್ಲಿರುವದರ ಮಾದರಿಯಾಗಿ ಒಂದು ದೇವಾಲಯವನ್ನು ಸಹಾ ಆದರೂ ಸ್ವಲ್ಪ ಸಣ್ಣದಾಗಿ ಕಟ್ಟಿಸಿದನು. ಇದನ್ನು ರೋಮಾಯರು ವೆಸ್ಪಸಿಯಾನ ಕೈಸರನ ಕಾಲದಲ್ಲಿ ಹಾಳು ಮಾಡಿದರು.



## § 103.

ಸುರಿಯದ ಅರಸನಾದ ದೊಡ್ಡ ಅಂತಿಯಾಖನು ೨೦೩ನೇ ವರ್ಷದಲ್ಲಿ ಫಲೆಸ್ತೀನವನ್ನು ತನಗೆ ಎಳಕೊಂಡನು. ಮತ್ತು ಕೆಲವು ದಶವರ್ಷಗಳಲ್ಲಿ ಪ್ತೊಲೆಮಯರೂ ಸೆಲೈಕೀದರೂ ಅದಕ್ಕಾಗಿ ಒದ್ದಾಡಿ ಕೊಂಡ ತರುವಾಯ ಸೆಲೈಕೀದರೇ ಗೆದ್ದರು. ಅಂತಿಯಾಖನು ಸಹಾ ಯೆಹೂದ್ಯರಿಗೆ ದೊಡ್ಡ ಸ್ವತಂತ್ರಗಳನ್ನು ಬಿಟ್ಟು ಕೊಟ್ಟನು. ಅದೇ ಪ್ರಕಾರ ತಮ್ಮ ಮತ ಪ್ರಕಾರ ನಡಕೊಳ್ಳಲಿಕ್ಕೆ ಪೂರ್ಣ ಸ್ವತಂತ್ರವನ್ನು ಚದ್ರ ಮಾಡಿದನು.

ಆದರೂ ಅವನ ತರುವಾಯ ಪಟ್ಟವನ್ನೇರಿದ ಅವನ ಮಗನಾದ ಸೆಲ್ಯೈಕ ಫಿಲೊಪಾ ತೊರನು ಹಣ ಪಡಕೊಳ್ಳಲಿಕ್ಕಾಗಿ ಯೆರೂಸಲೇಮದ ದೇವಾಲಯವನ್ನು ಸುಲು ಕೊಂಡನು. ಇದಲ್ಲದೆ ತರುವಾಯ ಅರಸನಾದ ಅಂತಿಯೊಖ ಎಪಿಫನೆಯು ಯೆಹೂದ್ಯರು ಬಲಾತ್ಕಾರಕ್ಕಾಗಿ ಗ್ರೇಕ ಮರ್ಯಾದೆಗಳನ್ನೂ ಮತವನ್ನೂ ಅಂಗೀಕ ರಿಸುವ ಹಾಗೆ ಕೇಳದ ನಿಷ್ಠೂರತ್ವದಿಂದ ಎಲ್ಲಾ ತರದ ಹಿಂಸೆಗಳನ್ನು ಪ್ರಯೋಗಿಸಿ ದನು. ೧೬೯ನೇ ವರ್ಷದಲ್ಲಿ ಯೆರೂಸಲೇಮವನ್ನು ಜೈಸಿದನು. ಯೆಹೂದ್ಯರು ಬಿಡದೆ ಪ್ರತಿಕೂಲವಾಗಿ ನಿಂತಾಗ ಸುರಿಯರ ಬಲಾತ್ಕಾರವು ಅತಿ ಭಯಂಕರವಾಯಿ ತು. ಪಟ್ಟವನ್ನೂ ದೇವಾಲಯವನ್ನೂ ಸುಲುಕೊಂಡರು; ಪಟ್ಟದ ಗೋಡೆಗಳನ್ನು ಕೆಡವಿ ಹಾಕಿದರು. ದೇವಾಲಯವನ್ನು ಅಶುದ್ಧ ಮಾಡಿ, ಒಲಿಂಪದಯು ಫಿತರನಿಗೆ ಪ್ರತಿಷ್ಠೆ ಮಾಡಿದರು. ಶುದ್ಧ ಬರಹಗಳನ್ನು ಹರದು ಸುಟ್ಟು ಬಿಟ್ಟರು. ಇದಲ್ಲದೆ ಯೆಹೂದ್ಯರು ಪಿತೃಗಳ ಭಕ್ತಿಯನ್ನೂ ಮರ್ಯಾದೆಯನ್ನೂ ಅಲ್ಲಗಳಿಯುವ ಹಾಗೆ ಅವರನ್ನು ಬಲಾತ್ಕಾರ ಪಡಿಸುವದಕ್ಕಾಗಿ ಕೂಡುವಷ್ಟು ಹಿಂಸೆಗಳನ್ನು ಪ್ರಯೋಗಿಸಿ ದರು. ಆದರೂ ಇದು ಹ್ಯಾಗೂ ಅಷ್ಟು ನಡಿಯಲಿಲ್ಲ. ಪ್ರವಾದಿಯಾದ ದಾನಿಯೇ ಲನು (೧೧, ೩೧) ಪ್ರವಾದಿಸಿದ ಪ್ರಕಾರ ಪರಿಶುದ್ಧಸ್ಥಳದಲ್ಲಿ ಇರುವದೆಂಬ ಹಾ ಳು ಮಾಡುವ ಅಸಹ್ಯವು ಇದೇ— ಅದು ಮುಂದೆ ಬರುವ ಹಾಳು ಮಾಡುವ ಅಸ ಹ್ಯಕ್ಕೆ ಮುಂಗುರ್ತಾಗಿರುತ್ತದೆ. (ಮತ್ಥಾ. ೨೪, ೧೫.)



## § 104. ಮಕಬಯರು ಇಲ್ಲವೇ ಹಸ್ಮೊನಯರು

ಎಲ್ಲರಿಗೆ ಬಂದ ಈ ಸಂಕಷ್ಟದಲ್ಲಿ (ಯೆಹೂದ್ಯ ಪರ್ವತಗಳಲ್ಲಿ) ಮೋದಿನಿನ ಲ್ಲಿದ್ದ ಯಾಜಕನಾದ ಮತಥೀಯನಿಗೂ, ಅವನ ೫ ಮಕ್ಕಳಿಗೂ ಇದ್ದ ವಿಶ್ವಾಸ ವೂ ಧೈರ್ಯವೂ ರಕ್ಷಣ್ಯಕ್ಕೆ ಉಪಾಯವಾದವು. ಒಬ್ಬ ದುಷ್ಟ ಯೆಹೂದ್ಯನು ಅ ವನ ಕಣ್ಣಿನ ಮುಂದೆ ವಿಗ್ರಹಗಳಿಗೆ ಬಲಿಯರ್ಪಿಸಿದಾಗ ಮತಥೀಯನು ಅವನನ್ನು ಕೊಂದದ್ದೇ ಮೊದಲನೇ ಕಾರಣವಾಯಿತು. ಇವನ ಸುತ್ತಲೂ ಧೈರ್ಯ ಉಳ್ಳಂ ಥಾ ಏಕಮನಸ್ಸಿನವರಾದ ಅನೇಕರು ಕೂಡಿ ಬಂದರು. ಇವರು ರಣಾಂಗಣದಲ್ಲಿ ಕಾಳಗ ಮಾಡಲೊಲ್ಲದೆ ದೇಶದಲ್ಲೆಲ್ಲಾ ಓಡ್ಯಾಡಿ ಸುರಿಯರ ಕಡೆ ಸಿಪಾಯರಿಗೆ ಬಹಳ ನಷ್ಟ ಮಾಡಿದರು. ತಂದೆಯು ಸತ್ತ ಮೇಲೆ (೧೬೬) ಅವನ ಮಕ್ಕಳಲ್ಲಿ ಹಿರಿಯನಾದ ಯೂದ ಮಕಬಯನು ಯೌವನದ ಸಿಂಹದಂತೆ ಸಂತೋಷವೂ

ಧೈರ್ಯವೂ ಉಳ್ಳವನಾಗಿ ಮಹಾ ವೇಗದಿಂದ ಯುದ್ಧಗಳನ್ನು ಮಾಡಿ, ಸುರಿಯರನ್ನು ಹಿಮ್ಮೆಟ್ಟಿಸಿ ದೇವಾಲಯದಲ್ಲಿ ದೇವರ ಆರಾಧನೆಯನ್ನು ಪುನಃಸ್ಥಾಪಿಸಲಿಕ್ಕೆ ಶಕ್ತನಾದನು. (೧೬೫) ಇದರ ನೆನಪಿಗಾಗಿ ದೇವಾಲಯ ಪ್ರತಿಷ್ಠೆಯ ಹಬ್ಬವನ್ನು ಸ್ಥಾಪಿಸಿದನು. ಆದರೆ ತಿರಿಗಿ ಸಂಕಷ್ಟ ಬಂದಾಗ ರೋಮಾಯರ ಕಡೆಗೆ ತಿರಿಗಿ ಕೊಂಡು ಒಡಂಬಡಿಕೆಯಾಗ ಬೇಕೆಂದು ಬೇಡಿ ಕೊಂಡನು. ಆದರೆ ಇದರಿಂದ ಅವನಿಗೆ ನಿಜವಾದ ಸಹಾಯವಲ್ಲ ವಾಗ್ದತ್ತಗಳು ಮಾತ್ರವೇ ಸಿಕ್ಕಿದವು. ಆದರೆ ಅಂದಿನಿಂದ ದೇವರ ಆಶೀರ್ವಾದವು ಅವನಿಂದ ತೊಲಗಿ ಹೋಯಿತೆಂತ ಕಾಣುತ್ತದೆ. ಸುರಿಯರು ಅವನನ್ನು ಪೂರ್ಣವಾಗಿ ಅಪಜಯ ಪಡಿಸಿದರು. ಮತ್ತು ಅವನೇ ಬಿದ್ದನು. (೧೬೧)ಅವನ ಸ್ಥಾನದಲ್ಲಿ ಅವನ ಸಹೋದರನಾದ ಯೋನಥಾನನು ಬಂದನು. ಈತನನ್ನು ಸಹಾ ೧೪೩ನೇ ವರ್ಷದಲ್ಲಿ ಮೋಸದಿಂದ ಕೊಂದು ಹಾಕಿದರು. ಕಡೆಯಲ್ಲಿ ಮೂರನೇ ಸಹೋದರನಾದ ಸಿಮೋನನು ಆ ಕಾಲದಲ್ಲಿದ್ದ ಗಲಿಬಿಲಿಗಳಿಂದ ಆಧಾರ ಹೊಂದಿದವನಾಗಿ ಸುರಿಯರು ಇಷ್ಟು ವರೆಗೂ ಕಾಪಾಡಿಕೊಂಡಿದ್ದ ಯೆರೂಸಲೇಮಿನ ಚಿಯೋನದುರ್ಗವನ್ನು ಕೈವಶ ಮಾಡಿ ಕೊಳ್ಳಲಿಕ್ಕೂ (೧೪೧) ತನ್ನ ಜನಾಂಗಕ್ಕೆ ಸಮಾಧಾನವುಳ್ಳಂಥ ಸುರಿಯರು ಸಹಾ ಒಪ್ಪಿ ಕೊಳ್ಳಬೇಕಾದಂಥ, ಸ್ವತಂತ್ರವನ್ನು ಉಂಟು ಮಾಡಲಿಕ್ಕೂ ಶಕ್ತನಾದನು. ಯೆಹೂದ್ಯರು ಕೃತಜ್ಞತೆಯಿಂದ ದೇವರು ತಮಗೆ ಸಮವಾದ ಪ್ರವಾದಿಯನ್ನು ಕಳುಹಿಸುವ ಮಟ್ಟಿಗೂ ಎಂದು ಸಿಮೋನನ ಸಂತಾನದಲ್ಲಿ ಬಾಧ್ಯಸ್ಥಿಕೆಯಾಗಿ ಅರಸನಾಗಿರುವದನ್ನೂ ಪ್ರಧಾನಯಾಜಕನಾಗಿರುವದನ್ನೂ ಸ್ಥಾಪಿಸಿದರು. (೧೪೦) ಆದರೆ ಸಿಮೋನನನ್ನು ಸಹಾ ಸುರಿಯರು ಮೋಸದಿಂದ ಕೊಂದು ಹಾಕಿದರು. (೧೩೫) ಅವನನ್ನು ಹಿಂಬಾಲಿಸಿದಂಥ ಮಗನಾದ ಯೋಹಾನ ಹಿರ್ಕಾನನು ಸಮಾರ್ಯವನ್ನೂ ಗಲಿಲಾಯವನ್ನೂ ಜೈಸಿದನು. ಗರಿಜೀಮ್ ಗುಡ್ಡದಲ್ಲಿದ್ದ ದೇವಾಲಯವನ್ನು ಹಾಳು ಮಾಡಿದನು. ಮತ್ತೆ ಎದೋಮ್ಯರನ್ನು ತನ್ನ ನೊಗದ ಕೆಳಗೆ ತಂದು, ಪರಿಚ್ಛೇದನೆಯಿಂದ ಯೆಹೂದ್ಯರ ಸಂಗಡ ಒಂದೇ ಜನಾಂಗವಾಗಲಿಕ್ಕೆ ಅವರನ್ನು ಬಲಾತ್ಕಾರ ಪಡಿಸಿದನು. ಅವನ ಮಗನಾದ ಅರಿಸ್ತೊಬೂಲನು ೧೦೬ನೇ ವರ್ಷದಲ್ಲಿ ಅರಸನ ಹೆಸರನ್ನು ತಕ್ಕೊಂಡನು. ಈ ಕಾಲದಿಂದ ಮಕಬಯರ ಚರಿತ್ರದಲ್ಲಿ ಕರ್ಕರೆಯ ಮೋಸಗಳೂ ರಕ್ತ ಚೆಲ್ಲುವ ಗೃಹಚಿದ್ರಗಳೂ ಹೊರ್ತು ಮತ್ತೇನೂ ಕಾಣುವದಿಲ್ಲ.

ಪರಿಶಿಷ್ಟ. ಹಸ್ಮೊನಯರು ಎಂಬ ಹೆಸರು ಮತಥೀಯನ ಮುತ್ತಜ್ಜನಾದ ಹಸಮೊನಯ್ಯನೆಂಬವನಿಂದ ಬಂತಂತೆ. ಮಕಬಯರೆಂಬ ಹೆಸರು ಯೂದಾಮಕಬಿ

ಯಿಂದ ಉಂಟಾಯಿತು. ಈತನು ಯುದ್ಧಕಾರ್ಯಗಳಲ್ಲಿ ಮಹಾ ಧೈರ್ಯವನ್ನು
ತೋರಿಸಿ ಇರುವದರಿಂದ ಆ ಪ್ರತಿನಾಮವನ್ನು ಹೊಂದಿದನು. (ಮಕ್ಕಾಬ್ ಅಂದರೆ
ಸುತ್ತಿಗೆ) ಮತ್ತೊಂದು ಅರ್ಥವು ಅಷ್ಟು ನಿಜವಾಗಿ ಕಾಣುವದಿಲ್ಲ. ಆ ಪ್ರಕಾರ ಮ
ಕ್ಕಾಬಿ ಎಂಬ ಹೆಸರು ಮಕಬಯರ ಧ್ವಜಗಳಲ್ಲಿ ಮಾಡಿಟ್ಟ ವಾಕ್ಯದ ಮೊದಲನೇ
ಅಕ್ಷರಗಳಿಂದ ಉಂಟಾಯಿತಂತೆ. ಆ ವಾಕ್ಯವು ಯಾವದಂದರೆ— ಮೀಕಮೋಕ ಬಾ
ಯೆಲಿಮ್ ಯೆಹೋವಾ (ಹಾಗಂದರೆ ದೇವರುಗಳಲ್ಲಿ ನಿನ್ನ ಹಾಗೆ ಯಾರು ಯೆಹೋ
ವನೇ!) ೨ ಮೋಶೆ. ೧೫, ೧೧.



## § 105—107 ಶಾಸ್ತ್ರಿಗಳೂ ಫರಿಸಾಯರೂ ಸದ್ದುಕಾಯರೂ

### § 105. ಶಾಸ್ತ್ರಿಗಳು

ಪ್ರವಾದನೆಯು ಮೌನವಾದಂದಿನಿಂದ ಪ್ರವಾದನೆಯಿಂದ ಉಂಟಾದ ಶುದ್ಧ
ಬರಹಗಳ ಭಂಡಾರವನ್ನು ಹೆಚ್ಚು ಜಾಗ್ರತೆಯಿಂದ ಕಾಪಾಡಿ ಕೊಂಡರು. (ನೇಮ
ವೂ ಪ್ರವಾದಿಗಳೂ) ಮತ್ತು ಅವುಗಳನ್ನು ಭಕ್ತಿಯ ಪ್ರಕಾರವಾದ ಎಲ್ಲಾ ತಿಳುವಿ
ಕೆಗೂ ಜೀವನಕ್ಕೂ ಯೋಗ್ಯವಾಗಿ ನಿರ್ಣಯವೆಂದು ಎಣಿಸಿದರು. ಸ್ವಲ್ಪ ಕಾಲದಲ್ಲಿ
ಯೇ ಪರಿಶುದ್ಧ ಬರಹಗಳ ಅಭ್ಯಾಸವನ್ನೂ ಜನರಿಗೆ ಅವುಗಳ ಬೋಧನೆ ಕೊಡುವದ
ನ್ನೂ ತಮಗೆ ಮುಖ್ಯ ಉದ್ಯೋಗವಾಗಿ ಮಾಡಿ ಕೊಂಡ ಪ್ರತ್ಯೇಕ ಜನರಿದ್ದರು. ಇ
ವರಿಗೆ ಶಾಸ್ತ್ರಿಗಳೆಂಬ ಮಾನದ ಹೆಸರು ಬಂತು. ಮತ್ತೆ ರಬ್ಬಿ (ಯಜಮಾನನು)
ಎಂಬ ಬಹುಮಾನದ ಪ್ರತಿನಾಮವನ್ನು ಸಹಾ ಅವರು ತಕ್ಕೊಂಡರು. ಪರಿಶುದ್ಧ
ಬರಹವನ್ನು ಸಮವಾಗಿ ತಿಳುಕೊಳ್ಳಲಿಕ್ಕೂ, ನವೀಕರಿಸುವ ಅಭಿಲಾಷೆಯಿಂದ ಮಾ
ಡುವ ಅರ್ಥಕ್ಕೆ ದಾರಿ ಕಟ್ಟುವದಕ್ಕೂ, ಬೇಕಾಗಿ ಬಹು ಪ್ರಯತ್ನ ಮಾಡುತ್ತಿರಲಾಗಿ
ಸ್ವಲ್ಪ ಕಾಲದಲ್ಲಿಯೇ ಸ್ಥಿರವಾಗಿರುವಂಥಾ ಸಂಪ್ರದಾಯವಾದ ಅರ್ಥದ ರೀತಿಯು
ಉಂಟಾಯಿತು. ಇದನ್ನು ಎಜ್ರನೂ ಅವನಿಗಿಂತ ಮುಂಚೆ ಮೋಶೆ ಸಹಾ ಹಾಗೆ
ಯೇ ವಿವರಿಸಿದರೆಂದು ಹೇಳಿ ಕೊಂಡರು. ನೇಮದಲ್ಲಿ ಹೇಳಿರುವ ಭಕ್ತಿಯ ಆಚಾರ
ಗಳನ್ನು ಬಹಳ ಜಾಗ್ರತೆಯಿಂದ ಕೂಲಂಕುಷವಾಗಿ ಕೈಕೊಳ್ಳುವ ಹಾಗೆ ಬಹು ಭೀತಿ
ಯಿಂದ ನೋಡಿ ಕೊಳ್ಳುತ್ತಾ ಇರಲಾಗಿ ಅದು ಆಚಾರಗಳನ್ನು ಹೆಚ್ಚು ಹೆಚ್ಚಾಗಿ ಕಲಿ

ಣ ಮಾಡಲಿಕ್ಕೂ ವೃದ್ಧಿ ಮಾಡಲಿಕ್ಕೂ ಕಾರಣವಾಯಿತು. ಮೋಶೆಯ ನೇಮವು ಇಸ್ರಯೇಲನನ್ನು ಮ್ಲೇಂಛರ ಮತಗಳಿಂದಲೂ ಮರ್ಯಾದೆಗಳಿಂದಲೂ ಕಾಪಾಡಿ ರಕ್ಷಿಸುವಂಥ ಬೇಲಿಯಾಗಿರ ಬೇಕಾದದ್ದೆಂಬದು ಸರಿ. ಆದರೆ ದೇವರ ಕಟ್ಟಳೆಗಳ ಬೇಲಿಯನ್ನು ಸಂಪ್ರದಾಯದ ಕಟ್ಟಳೆಗಳ ಹೊಸ ಬೇಲಿಯಿಂದ ಕಾಪಾಡುವದು ಅವಶ್ಯವಾಗಿರುತ್ತದೆಂದು ಬೇಗ ನೆನಸಲಾರಂಭಿಸಿದರು. ಈ ಪ್ರಕಾರವಾಗಿ ಬಹಿರಂಗವಾಗಿಯೂ, ಆತ್ಮ ಕೊಲ್ಲುವಂಥಾದ್ದಾಗಿಯೂ, ಇರುವ ನೇಮದ ಕ್ರಿಯೆಗಳಲ್ಲಿ ಹೆಚ್ಚು ಹೆಚ್ಚಾಗಿ ಮುಣುಗಿ ಹೋದರು. ಶಾಸ್ತ್ರಿಗಳು ಬರದಿಟ್ಟ ದೇವರ ವಾಕ್ಯವನ್ನು ಕಾಪಾಡಿ ರಕ್ಷಿಸ ಬೇಕಾದದ್ದು ಹ್ಯಾಗೋ? ಹಾಗೆಯೇ ಅಷ್ಟೇ ವಾತ್ಸಲ್ಯದಿಂದ ಪಿತೃಗಳ ಸಂಪ್ರದಾಯಗಳನ್ನು ಸಹಾ ಕಾಪಾಡಿ ರಕ್ಷಿಸ ಬೇಕೆಂದು ಹೇಳಿ ಕೊಂಡು, ಪ್ರಯತ್ನ ಮಾಡಿದರು. ದೇವಾಲಯಕ್ಕೆ ದೂರವಾಗಿರುವದರಿಂದಲೂ, ಎಲ್ಲರಿಗೋಸ್ಕರ ಬೋಧನೆಯು ಬೇಕಾಗಿರುವದರಿಂದಲೂ, ಸುನಗೋಗಗಳು (ಸಭೆಮನೆಗಳು) ಅವಶ್ಯವಾದವು. ಇಲ್ಲಿ ಬಹಿರಂಗವಾಗಿ ಭಕ್ತಿಕಾರ್ಯಕ್ಕೋಸ್ಕರ ಕೂಡಿ ಬರುವದು, ಸಬ್ಬತ್ ದಿವಸಗಳಲ್ಲಿಯೂ, ಹಬ್ಬಗಳಲ್ಲಿಯೂ ಕೂಡಾ ಪ್ರಾರ್ಥನೆ ಮಾಡಲಿಕ್ಕೂ, ಶುದ್ಧ ಬರಹದಿಂದ ಕಟ್ಟಿ ಕೊಳ್ಳಲಿಕ್ಕೂ ಕೂಡಿ ಬಂದರು. ಶಾಸ್ತ್ರಿಗಳು ಶುದ್ಧ ಬರಹಗಳನ್ನು ಓದಿ ಹೇಳಿ, ವಿವರಿಸಿದರು. ದೇವಾಲಯದಲ್ಲಿ ಆಗುವ ಆರಾಧನೆಗೆ ಅದರಿಂದ ಏನೂ ಕಡಿಮೆಯಾಗಲಿಲ್ಲ; ಹ್ಯಾಗಂದರೆ ನೇಮದಲ್ಲಿ ಹೇಳಿರುವ ದೇವಾಲಯದ ಆಚಾರಗಳೆಲ್ಲಾ ದೇವಾಲಯದಲ್ಲಿ ಮಾತ್ರವೇ ನಡದವು.

## § 106. ಫರಿಸಾಯರು

ಈಗಲೇ ವಿವರಿಸಿದ ಸಂಪ್ರದಾಯದ ಮಾರ್ಗವನ್ನು ವಿಶೇಷವಾಗಿ ಹಿಡಿದವರು ಫರಿಸಾಯರು. ಇವರು ಭಕ್ತಿರಾಜ್ಯಾರ್ಥವುಳ್ಳ ಮತದವರು; ಅವರ ಆರಂಭವು ತಿಳಿಯುವದಿಲ್ಲ; ಅವರ ಹೆಸರು ಪ್ರತ್ಯೇಕಿಸಲ್ಪಟ್ಟವರು; ತಮ್ಮ ಪರಿಶುದ್ಧತ್ವದಿಂದ ಮತ್ತೆಲ್ಲರಿಗಿಂತ ವಿಶೇಷವಾಗಿರುವ ಭಕ್ತರು ಎಂದಾಗುತ್ತದೆ. ಹೆಚ್ಚು ಹೆಚ್ಚಾಗಿ ಲೌಕಿಕವಾಗುವ ಮಕಬಿಯ ಅರಸುಗಳ ಕೆಳಗೆ ಇವರು ಪ್ರತಿಕೂಲವಾಗಿ ನಿಂತದ್ದು, ಬಹಳ ವಿಶೇಷವಾಗಿತ್ತು. ಯಾಕಂದರೆ ಇವರು ಜನಾಂಗದಲ್ಲಿ ಹೆಚ್ಚಾದವರ ಮೇಲೆ ಅನುಮಾನವಿಲ್ಲದೆ, ಅಧಿಕಾರವುಳ್ಳವರಾಗಿದ್ದರು. ಇದಲ್ಲದೆ ಮಂತ್ರಿಸಭೆಯಲ್ಲಿಯೂ ಅವರು ಹೆಚ್ಚಾಗಿದ್ದರು. ಬಹಳ ಗಂಭೀರತ್ವದಿಂದಲೂ ಮುಖದಾಕ್ಷಿಣ್ಯವಿಲ್ಲದಂಥಾ,

ಬಹಳ ಸರ್ಶಿ ಸತ್ಫಲವಾದಂಥಾ, ಪ್ರಯತ್ನದಿಂದ ನೇಮಕ್ಕೂ ಪಿತೃಗಳ ಸ್ವತಂತ್ರಗಳಿಗೂ ಕಟ್ಟಳೆಗಳಿಗೂ ಕಾರತೆ ತರುವಂಥಾದ್ದೆಲ್ಲಾದಕ್ಕೆ ಪ್ರತಿಕೂಲವಾಗಿ ನಿಂತರು. ಆದರೆ ಇದನ್ನು ಮಾಡುವಾಗ್ಯೆ, ಅವರು ತಾವೇ ಹೆಚ್ಚುಹೆಚ್ಚಾಗಿ ಬಹಿರಂಗದ ಕ್ರಿಯಾನೀತಿಯಲ್ಲಿಯೂ, ಕಾರಿಕೆಯ ಪರಿಶುದ್ಧತ್ವದಲ್ಲಿಯೂ, ಡಂಚದಲ್ಲಿಯೂ, ಮುಖ್ಯವಾಗಿ ಕ್ರಿಸ್ತನ ಕಾಲದಲ್ಲಿ ಮುಣುಗಿದರು. ಆದರೂ ಈ ಕಾಲದಲ್ಲಿ ಸಹಾ ಅವರಲ್ಲಿ ಇನ್ನು ಭಕ್ತಿಯುಳ್ಳವರೂ ಒಳ್ಳೆಯವರೂ ಇದ್ದರು; ಮತ್ತು ಅನೇಕರು ಬುದ್ಧಿ ಇಲ್ಲದೆ ವಾತ್ಸಲ್ಯ ಪಡುವವರಾಗಿದ್ದರೂ ಅವರಲ್ಲಿ ನಿಜವಾದ ಸತ್ಯವಾತ್ಸಲ್ಯವಿತ್ತು.



## § 107. ಸದ್ದುಕಾಯರು

ಫರಿಸಾಯರಿಗೆ ಪ್ರತಿಕೂಲವಾಗಿದ್ದವರು ಸದ್ದುಕಾಯರು. ಇವರು ದೊಡ್ಡವರಿಗೂ ಐಶ್ವರ್ಯವಂತರಿಗೂ ಶೇರಿ ಕೊಂಡಿದ್ದರು. ತಮ್ಮ ಹೆಸರೂ ಮೂಲವೂ ಒಬ್ಬ ಶಾಸ್ತ್ರಿಯಾದ ಸದ್ದಾಕ್ ಎಂಬವನಿಂದ ಉಂಟಾಯಿತೆಂತ ಹೇಳಿ ಕೊಂಡರು. ಫರಿಸಾಯರು, ಬೋಧನೆಯಲ್ಲಿಯೂ, ಪಿತೃಗಳ ಸಂಪ್ರದಾಯಗಳ ಮೇಲೆಯೂ ಕಟ್ಟಳೆಗಳ ಮೇಲೆಯೂ, ಬಹಳ ಭಾರವಿಟ್ಟು ನಮಗಿಂತ ಹೆಚ್ಚಾಗಿರುವ ಆತ್ಮಗಳೂ, (ದೂತರೂ ಪಿಶಾಚಿಗಳೂ) ಅಮರತ್ವವೂ, ಉತ್ಥಾನವೂ ನ್ಯಾಯವಿಚಾರಣೆಯೂ ಪ್ರತಿಫಲವೂ ಉಂಟೆಂದು ಬರಹಗಳ ಪ್ರಕಾರ ಬೋಧಿಸಿದರಾದರೆ — ಸದ್ದುಕಾಯರು, ಎಲ್ಲಾ ಸಂಪ್ರದಾಯಗಳನ್ನು ತಿರಸ್ಕರಿಸಿ, ದೂತರೂ ಪಿಶಾಚಿಗಳೂ ಇರುವದೆಂಬದು ಆಗದೆಂದು ಖಂಡಿತವಾಗಿ ಹೇಳಿ, ಅಮರತ್ವ, ಉತ್ಥಾನ, ನಿತ್ಯವಾದ ಪ್ರತಿಫಲ ಇವುಗಳ ಬೋಧನೆಯನ್ನು ತರ್ಕಿಸಿದರು.

ಪರಿಶಿಷ್ಟ. ಈ ಕಾಲದ ಯೆಹೂದ್ಯರಲ್ಲಿ ಇದ್ದ ಮತ್ತೊಂದು ಮತದವರಾದ ಯೆಸ್ಸೇಯರ (ಎಸ್ಸೆನರ) ವಿಷಯದಲ್ಲಿ ದೇವರ ವಾಕ್ಯವು ಏನೂ ಹೇಳುವದಿಲ್ಲ. ಅವರ ಮೂಲವೂ, ಅವರ ಮೂಲ ಆಲೋಚನೆಗಳೂ ಏನೆಂದು ನಿಶ್ಚಯ ಹೇಳ ಕೂಡದು. ಅವರು ಒಂದು ವಿಧವಾಗಿ ಯೆಹೂದ್ಯರ ವೈರಾಗಿಗಳಾಗಿದ್ದರು; ಲೋಕಕ್ಕೆ ಹೊರಗಾಗಿ, ವಸ್ತುಗಳೆಲ್ಲಾ ಹುದುವಾಗಿ, ವಿವಾಹವನ್ನು ಬಿಟ್ಟು ಪ್ರಮಾಣವನ್ನು ಮಾಡದೆ, ಇಂಥಾ ಪ್ರಕಾರವಾಗಿ ಶುಮಾರು ಇದ್ದರು.



## § 108.—109. ಹೆರೋದ್ಯರು

### § 108.

ಒಳಗಿನಿಂದ ಹೊಟ್ಟೆಕಿಚ್ಚೂ, ವಿಚೇದವೂ, ಕೊಲೆಯೂ ಹ್ಯಾಗೋ, ಹಾಗೆಯೇ ಹೊರಗಿನಿಂದ ಮೋಸವೂ, ಸ್ನೇಹಘಾತಕವೂ ಹಸ್ಮಾನಯ್ಯರ ರಾಜಕುಲಕ್ಕೆ ಕೇಡಾದವು. ಅರಿಸ್ತೊಬೂಲನ ಮೊಮ್ಮಕ್ಕಳು ಹಿರ್ಕಾನನೂ, ಅರಿಸ್ತೊಬೂಲನೂ ಅಧಿಕಾರಕ್ಕಾಗಿ ಝಗಳ ಮಾಡಿದರು. ದಮಸ್ಕದಲ್ಲಿ ಇಬ್ಬರೂ ಪೊಂಪೇಯನ ಮುಂದೆ ಬಂದು ತಮ್ಮ ನ್ಯಾಯವನ್ನು ತೀರಿಸ ಬೇಕೆಂದು ಬೇಡಿ ಕೊಂಡರು. ಪೊಂಪೇಯನು ತಾನೇ ಯೆರೂಸಲೇಮಕ್ಕೆ ಬರುತ್ತೇನೆಂದು ಮಾತು ಕೊಟ್ಟನು. ಆದರೆ ಅರಿಸ್ತೊಬೂಲನು ಒಳ್ಳೇದೇನೂ ಬರಲಿಕ್ಕಿಲ್ಲವೆಂದು ನೆನಸಿ ಪ್ರತಿಯಾಗಿ ನಿಲ್ಲಲಿಕ್ಕೆ ಸಿದ್ಧ ಮಾಡಿ ಕೊಂಡನು. ಪೊಂಪೇಯನು ಯೆರೂಸಲೇಮವನ್ನು ಸಬ್ಬತ್ ದಿವಸದಲ್ಲಿ ಜೈಸಿ, ಅದರ ಗೋಡೆಗಳನ್ನು ಕೆಡವಿ ಹಾಕಿ, ದೇವಾಲಯದಲ್ಲಿ ಹೊಕ್ಕನು. ಆದರೂ ಯಾವದಕ್ಕೂ ಕೈಹಾಕಲಿಲ್ಲ. ಹಿರ್ಕಾನನನ್ನು ಮಾತ್ರ ಅರಸನಾಗಿಯೂ, ಪ್ರಧಾನಯಾಜಕನಾಗಿಯೂ ನೇಮಿಸಿದನು. ಅರಿಸ್ತೊಬೂಲನನ್ನು ಶೆರೆವೈದನು. ಇವನು, ಪೊಂಪೇಯನ ಜಯೋತ್ಸವವನ್ನು ಮಹಿಮೆ ಪಡಿಸ ಬೇಕಾಯಿತು. ಆದರೆ, ನಿರ್ಬಲಿಯಾದ ೨ ನೇ ಹಿ ರ್ಕಾ ನ ನು, ಬಹು ತಂತ್ರಗಾರನಾದ ಯೆದೊಮ್ಯನಾದ ಅಂತಿಪತೆರನಿಗೆ ದೇಶದ ಆಡಳತೆಯನ್ನು ಕೊಟ್ಟು ಬಿಟ್ಟನು. ಈತನನ್ನು ಕೈಸರನು, ಯುದೈಯದ ಪ್ರೊಕುರತೋರನಾಗ ಮಾಡಿ ಹಿರ್ಕಾನನಿಗೆ ಪ್ರಧಾನಯಾಜಕ ಉದ್ಯೋಗ ಮಾತ್ರ ಬಿಟ್ಟನು. ಈತನ ಸಹೋದರನ ಮಗನಾದ ಅಂತಿಗೋನನು, ಪರ್ಥರ ಸಹಾಯದಿಂದ ಯೆರೂಸಲೇಮವನ್ನು ಜೈಸಿ, ತನ್ನ ಚಿಕ್ಕಪ್ಪನ ಕಿವಿ ಕೊಯಿಸಿದನು. (ಆತನು ಪ್ರಧಾನಯಾಜಕ ಉದ್ಯೋಗಕ್ಕೆ ಅಯೋಗ್ಯನಾಗ ಬೇಕೆಂದು) ಅಂತಿಪತೆರನು ವಿಷದಿಂದ ಮೊದಲೇ ಸತ್ತು ಹೋಗಿದ್ದನು. ಆದರೆ ಅವನ ಮಗನಾದ ಹೆ ರೋ ದ ನು ತಪ್ಪಿಸಿ ಕೊಂಡು ರೋಮಕ್ಕೆ ಬಂದನು. ಇಲ್ಲಿ ವೃದ್ಧಸಭೆ (ಸೇನಾತವು) ೪೦ನೇ ವರ್ಷದಲ್ಲಿ ಅಂತೋನಿಯನೂ ಒಕ್ತಾವಿಯನೂ ಬೇಡಿ ಕೊಂಡ ಪ್ರಕಾರ ಹೆರೋದನನ್ನು ಯುದೈಯದ ಅರಸನಾಗ ನೇಮಿಸಿದರು. ಆದರೆ ಅಂತಿಗೋನನ ಹತ್ತರ ಯುದ್ಧವು ಬಹಳ ಕಷ್ಟವಾಗಿತ್ತು. ಎರಡು ವರ್ಷವಾದ ಮೇಲೆ ಯೆರೂಸಲೇಮವನ್ನು ಜೈಸಲಿಕ್ಕೆ ಆಯಿತು ಹೊರ್ತು, ಅದರ ಮೊದಲು ಆಗಲಿಲ್ಲ. ಅಂತಿಗೋನನಿಗೆ ರೋಮದಲ್ಲಿ ಮರಣಶಿಕ್ಷೆ ಕೊಟ್ಟರು. ಹಿರ್ಕಾನನ ಮೊಮ್ಮಗಳಾದ ಮರಿಯಮ್ನೆಯನ್ನು ಮದಿವೆ ಮಾಡಿ ಕೊಂಡದ್ದಾದರೆ, ತನ್ನ ಅಧಿಕಾರವು

ಜನರ ಕಣ್ಣಿನಲ್ಲಿ ನ್ಯಾಯಪ್ರಕಾರವಾದದ್ದೆಂತ ಆದೀತೆಂದು ಹೆರೋದನು ನೆನಸಿದನು.
ಅತಿ ಕ್ರೂರತ್ವದಿಂದ ಅವನು ತನ್ನ ಅಧಿಕಾರವನ್ನು ಚಿದ್ರ ಮಾಡಿದನು. ರಕ್ತಪ್ರಿಯನಾ
ಗಿರುವದರಿಂದ ಅವನಲ್ಲಿದ್ದ ಸಂಶಯವು ಮಕಬಯರನ್ನೆಲ್ಲಾ ನಿರ್ಮೂಲ ಮಾಡಲಿಕ್ಕೆ
ಅವನನ್ನು ಪ್ರೇರೇಪಿಸಿತು. ಮರಿಯಮ್ನೆಯ ತಂದೆಯನ್ನೂ ಅಜ್ಜನನ್ನೂ ಹತ ಮಾಡಿ
ಸಿದನು. ಅವಳ ಸಹೋದರನನ್ನು ಮೀಯುವಾಗ್ಯೆ ಮುಳುಗಿಸಿ ಕೊಂದನು. ಕಡೆ
ಯಲ್ಲಿ ಮರಿಯಮ್ನೆಯು ತಾನೇ ಮತ್ತು ಅವಳ ತಾಯಿ ಅಲಕ್ಸಂದರೆಯೂ ಕೊಂದು
ಹಾಕಲ್ಪಟ್ಟರು. ಮರಿಯಮ್ನೆಯಲ್ಲಿ ಹುಟ್ಟಿದ ತನ್ನ ಸ್ವಂತ ಮಕ್ಕಳು ಸಹಾ, ಅರಿ
ಸ್ತೊಬೂಲನೂ ಅಲೆಕ್ಸಂದರನೂ ಅವನ ಸಂಶಯಕ್ಕೆ ಒಳಗಾದರು. ಇವರನ್ನು ಸಹಾ
ಕೊಂದು ಹಾಕಿಸಿದನು. ಯುದೈಯದಲ್ಲಿ ಒಂದು ಸಾರಿ ಬರಗಾಲವು ಉಂಟಾದಾ
ಗ, ಸರ್ವತ್ರವು ಬಂದ ಸಂಕಷ್ಟವನ್ನು ಕಡಿಮೆ ಮಾಡುವದಕ್ಕೋಸ್ಕರ ಬಹಳ ಬುದ್ಧಿ
ಯಿಂದಲೂ ಪರಸ್ನೇಹದಿಂದಲೂ ಪ್ರಯತ್ನ ಮಾಡಿದನು. ಆದರೆ ಇದರಿಂದ ಸಹಾ
ಜನರ ಹಗೆಯನ್ನು ತನ್ನಿಂದ ತೊಲಗ ಮಾಡಲಿಕ್ಕೆ ಆಗಲಿಲ್ಲ. ಡಂಭ ಮಾಡುವದೂ
ಹೊಸತೇನಾದರೂ ಕಟ್ಟುವದೂ ಅವನಿಗೆ ಪ್ರಿಯವಾಗಿತ್ತು. ಈ ಅಪೇಕ್ಷೆಯನ್ನು ಪೂ
ರೈಸುವದಕ್ಕಾಗಿಯೂ ಮತ್ತು ಅದೇ ಸಮಯದಲ್ಲಿ ಜನಾಂಗವನ್ನು ಸ್ವಲ್ಪವಾದರೂ
ಮನಸ್ಕರಿಸುವದಕ್ಕೋಸ್ಕರವೂ ಬಹಳ ಬಹಳ ಹಣ ಖರ್ಚು ಮಾಡಿ, ದೇವಾಲಯವ
ನ್ನು ಹೊಸತಾಗಿ ಸುಂದರ ಮಾಡಲಿಕ್ಕೆ ಆರಂಭಿಸಿದನು. ಅವನ ಕಡೇ ವರ್ಷಗಳಲ್ಲಿ
ಲೋಕದ ರಕ್ಷಣ್ಯವು ಹುಟ್ಟಿತು. ಆದರೆ ಹೆರೋದನು ಈ ಸುದ್ದಿ ಕೇಳಿದಾಗ, ಬೆಥ್ಲ
ಹೇಮದಲ್ಲಿ ಅತ್ಯಸಹ್ಯವಾದ ಬಾಲಹತ್ಯವನ್ನು ಮಾಡಲಿಕ್ಕೆ ಮಾತ್ರವೇ ಬಲ್ಲವನಾದ
ನು. ಸ್ವಲ್ಪ ಕಾಲದ ತರುವಾಯ ಹೆರೋದನು ಜೀವಂತನಾಗಿರುವಾಗಲೇ ಶರೀರವು
ಕೊಳತು ಹೋಗಿ, ತನಗೂ ಸಮೀಪವಿದ್ದವರಿಗೂ ಅಸಹ್ಯವಾದವನಾಗಿ ಸತ್ತನು.



## § 109.

೧) ದೇಶವು ಅವನ ಮಕ್ಕಳಿಗೆ ಪಾಲಾಯಿತು; ಆ ಪ್ರಕಾರ ಅರ್ಖೆಲಾವನು
ಯತ್ನಾರ್ಖನೆಂಬ ಹೆಸರುಗೊಂಡು ಯುದೈಯವನ್ನೂ ಸಮಾರ್ಯವನ್ನೂ ಇದುಮೈ
ಯವನ್ನೂ ಹೆರೋದ ಅಂತಿಪನು ಚತುರಧಿಪತಿಯಾಗಿ (ತೆತ್ರಾರ್ಖ) ಗಲಿಲಾಯವ
ನ್ನೂ ಪೆರೈಯವನ್ನೂ, ಮತ್ತು ಫಿಲಿಪ್ಪನು ಅದೇ ಹೆಸರ್ಗೊಂಡು ಯೊರ್ದಾನದ
ಆಚೆ ಕಡೆಯಲ್ಲಿ ದೇಶದ ಉತ್ತರಪೂರ್ವವನ್ನೂ ಹೊಂದಿದನು. ಅರ್ಖೆಲಾವನು

ತಂದೆಯ ಹೆಜ್ಜೆಗಳಲ್ಲಿ ನಡಕೊಂಡನು. ಈತನು ತನ್ನ ಕ್ರೂರ ಬುದ್ಧಿಯನ್ನು ಆಳಿದ ಹತ್ತನೇ ವರ್ಷದ ಪರ್ಯಂತರ ನಡಿಸಿದನು. ಕಡೆಯಲ್ಲಿ ಅವನ ಪ್ರಜೆಯವರು ರೋಮದಲ್ಲಿ ಅವನ ಮೇಲೆ ಅಪರಾಧ ಹೊರಿಸಲಾಗಿ ಔಗುಸ್ತನು ಗಲ್ಲಿಯದ ವಿಯೆನ್ನಕ್ಕೆ ಗಡಿ ದಾಟಿಸಿದನು. ಅವನ ದೇಶವು ಸುರಿಯಕ್ಕೆ ಶೇರಿತು. ಮತ್ತು ಪ್ರತ್ಯೇಕವಾದ ಪ್ರಾಕುರತೋರರು ಕೈಸರಯ್ಯದಲ್ಲಿ (ಇದು ದೊಡ್ಡ ಹೆರೋದನು ಮಧ್ಯ ಸಮುದ್ರದ ತೀರದಲ್ಲಿ ಕಟ್ಟಿಸಿದ ಅಳವೆಯುಳ್ಳ ಪಟ್ಣವಾಗಿತ್ತು) ವಾಸ ಮಾಡುವವರಾಗಿ ಹಬ್ಬಗಳ ಸಮಯದಲ್ಲಿ ಮಾತ್ರವೇ ಯೆರೂಸಲೇಮಕ್ಕೆ ಬರುತ್ತಾ ಇರುವವರಾಗಿ ಆಳಿದರು. ಈ ಪ್ರಾಕುರತೋರರಲ್ಲಿ ೫ನೆಯವನು ಪಿಲಾತನು. ಸಹೋದರರಲ್ಲಿ ಅಧಿಕ ನೀತಿವಂತನಾಗಿರುವ ಫಿಲಿಪ್ಪನು ೩೩ನೇ ವರ್ಷದಲ್ಲಿ ಮಕ್ಕಳಿಲ್ಲದೆ ಸತ್ತನು. ಮತ್ತು ತಿಬೇರಿಯನು ಅವನ ಚತುರಾಧಿಪತ್ಯವನ್ನು ಸುರಿಯಕ್ಕೆ ಕೂಡಿಸಿದನು. ಸ್ನಾನಿಕನಾದ ಯೋಹಾನನನ್ನು ಕೊಂದು ಹಾಕಿದಂಥ ವ್ಯಭಿಚಾರಿಯಾದ ಹೆರೋದ ಅಂತಿಪನನ್ನು ೩೯ನೇ ವರ್ಷದಲ್ಲಿ ಕಲಿಗುಲನು ಗಲ್ಲಿಯಕ್ಕೆ ಗಡಿ ದಾಟಿಸಿದನು.

೨) ಆದರೆ ಹೆರೋದನ ಮನೆತನದಲ್ಲಿ ಮತ್ತೊಂದು ಗೆಲ್ಲು ಇತ್ತು. ಹೆರೋದನೆಂಬ ಮೊದಲನೇ ಅಗ್ರಿಪ್ಪನು. ಈತನು ಮರಣಶಿಕ್ಷೆ ಹೊಂದಿದ ಅರಿಸ್ತೊಬೂಲನ ಮಗನೂ ಹೆರೋದ ಮರಿಯಮ್ನೆಯ ಮೊಮ್ಮಗನೂ ಆಗಿದ್ದನು. ಇವನು (ತಿಬೇರಿಯನ ಮೇಲೆ) ಪಟ್ಟವೇರಿದ ಕಲಿಗುಲನ ಸಂಗಡ ಸ್ನೇಹವಾಗಿ ರೋಮದಲ್ಲಿದ್ದನು. ಮತ್ತು ಇವನು ಅಧಿಕಾರಕ್ಕೆ ಬಂದ ಕೂಡಲೇ (೩೭ ಕ್ರಿ. ಮೇಲೆ.) ತಿಬೇರಿಯನ ಕಾಲದಲ್ಲಿಯೇ ಸುರಿಯಕ್ಕೆ ಕೂಡಿಸಲ್ಪಟ್ಟಂಥಾ ಫಿಲಿಪ್ಪನ ಬಾಧ್ಯವನ್ನೂ ಅರಸನೆಂಬ ಹೆಸರನ್ನೂ ಅಗ್ರಿಪ್ಪಗೆ ಕೊಟ್ಟನು. ಅಂತಿಪನು ತನಗಾಗಿ ಸಹಾ ಅರಸನ ಹೆಸರನ್ನು ಬೇಡಿ ಕೊಳ್ಳಲಿಕ್ಕಾಗಿ ರೋಮಕ್ಕೆ ಹೋದನು. ಆದರೆ ಅದು ಹೋಗಿ ಅಗ್ರಿಪ್ಪನು ಮಧ್ಯದಲ್ಲಿ ಬಂದದರಿಂದ ಅವನ ಅಧಿಕಾರವು ಹೋಗಿ ಗಲ್ಲಿಯಕ್ಕೆ ಗಡಿ ದಾಟಿಸಲ್ಪಟ್ಟನು. (೩೯ ಕ್ರಿ. ಮೇಲೆ.) ಅವನ ದೇಶವು ಅಗ್ರಿಪ್ಪನಿಗೆ ಆಯಿತು. ಕಲಿಗುಲನು ಸತ್ತ ಮೇಲೆ ಅಗ್ರಿಪ್ಪನು ಕ್ಲೌದ್ಯನ ಹತ್ತರ ಸಹಾ ಬಹಳ ಸ್ನೇಹ ಮಾಡಿಕೊಂಡಿರಲಾಗಿ ಈತನು ಅವನಿಗೆ ಮೊದಲು ಅರ್ಖೆಲಾವನದಾಗಿದ್ದ ದೇಶವನ್ನು ಸಹಾ ಕೊಟ್ಟನು. ಹೀಗಾಗಿ (೪೧) ಅಗ್ರಿಪ್ಪನು ಪಲೆಸ್ತೀನವೆಲ್ಲಾದರ ಮೇಲೆ ಅಧಿಕಾರಿಯಾದನು. ಯೆಹೂದ್ಯರ ಪ್ರೀತಿಯನ್ನು ದುಡಿಯ ಬೇಕೆಂದು ಅವನು ಕ್ರಿಸ್ತರನ್ನು ಹಿಂಸಿಸಿದನು. ಯಾಕೋಬನಿಗೆ ಮರಣಶಿಕ್ಷೆ ಕೊಟ್ಟನು. (ಅಪೊ. ಕ್ರಿ. ೧೨.) ಪೇತ್ರನಿಗೆ ಸಹಾ ಹಾಗೆ ಮಾಡಲಿಕ್ಕೆ ಇದ್ದನು. ಆದರೆ ಒಂದು ಸಾರಿ ಉತ್ಸವಕಾಲದಲ್ಲಿ ಜನರು ಮ್ಲೇಂಛರ ರೀತಿಯಾಗಿ ಅವನನ್ನು ದೇವರೆಂದು ವಂದಿಸಿದಾಗ, ದೇವರಿಂ

ದ ಹೊಡಿಯಲ್ಪಟ್ಟು, ಮಹಾ ಕಷ್ಟದ ಮರಣದಿಂದ ಸತ್ತನು. (೪೪ ಕ್ರಿ. ಮೇಲೆ.) ಅವನ ಮಗನಾದ ೨ನೇ ಅಗ್ರಿಪ್ಪನು ೧೭ ವರ್ಷದವನಾಗಿ ಮಾತ್ರವೇ ಇದ್ದನು. ಆದದರಿಂದ ಕ್ಲೌದ್ಯನು ಪಲೆಸ್ತೀನವನ್ನೆಲ್ಲಾ ಸುರಿಯಕ್ಕೆ ಕೂಡಿಸಿದನು. ಮತ್ತು ಬಹಳ ವರ್ಷದ ಮೇಲೆ ೫೩ನೇಯಲ್ಲಿ ತಂದೆಗಿದ್ದ ದೇಶದ ಒಂದು ಭಾಗವನ್ನು ಉತ್ತರಪೂರ್ವದಲ್ಲಿ ಅರಸನ ಹೆಸರಿನ ಸಹಿತವಾಗಿ ಅವನಿಗೆ ಕೊಟ್ಟನು. (ಈತನ ಮುಂದೆ ಅಪೊಸ್ತಲನಾದ ಪೌಲನು ಉತ್ತರ ಕೊಟ್ಟದ್ದು. ಅಪೊ. ಕ್ರಿ. ೨೬) ಯೆಹೂದ್ಯಸಂಸ್ಥಾನವು ಹೋಗುವಾಗ್ಯೆ ಇವನ ಅಧಿಕಾರವು ನಿಂತಿತು. ಅವನು ೫೧ವರ್ಷವಾಳಿ ತ್ರಯಾನನ ಆಳುವಿಕೆಯ ೩ನೇ ವರ್ಷದಲ್ಲಿ ಸತ್ತನು.



## § 110—111. ರೋಮಿಯ ಪ್ರೊಕುರತೋರರು ಮತ್ತು ಯೆರೂಸಲೇಮದ ನಾಶವು

### § 110.

ಹೆರೋದನೆಂಬ ಮೊದಲನೇ ಅಗ್ರಿಪ್ಪನು (೪೪) ಸತ್ತ ಮೇಲೆ ಕೈಸರಯ್ಯದಲ್ಲಿ ರೋಮಿಯ ಪ್ರೊಕುರತೋರರು ದೇಶವನ್ನೆಲ್ಲಾ ನಡಿಸಿದರು. (೫೩ನೇ ವರ್ಷದಿಂದ ಮಾತ್ರವೇ ಉತ್ತರಪೂರ್ವದ ತಾಲೂಕುಗಳು ೨ನೇ ಅಗ್ರಿಪ್ಪನ ಕೈಕೆಳಗೆ ಬಂದಿದ್ದವು) ೪ನೇ ಪ್ರೊಕುರತೋರನು ಫೆಲಿಕ್ಸನಾಗಿದ್ದನು. ಈತನ ಮುಂದೆ ಪೌಲನನ್ನು ಬಂಧಿತನಾಗಿ ತಂದರು. ಅವನು ಬಹಳ ದ್ರವ್ಯಾಶೆಯುಳ್ಳವನೂ ಬಲಾತ್ಕಾರಿಯೂ ಆಗಿದ್ದನು. ಇವನನ್ನು ಶುಮಾರು ೬೦ನೇ ವರ್ಷದಲ್ಲಿ ಫೆಸ್ತನು ಹಿಂಬಾಲಿಸಿದನು. ಇವನ ಮೇಲೆ ಅಲ್ಬೀನನು, ಕಡೆಯಲ್ಲಿ ಗೆಸ್ಸಿಯ ಫ್ಲೋರನು ಬಂದನು. ಇವರು ಒಬ್ಬರಿಗಿಂತ ಒಬ್ಬರು ಹೆಚ್ಚು ದ್ರವ್ಯಾಶೆಯುಳ್ಳವರೂ ಬಲಾತ್ಕಾರಿಗಳೂ ಆಗಿದ್ದರು. ಗೆಸ್ಸಿಯನು ಯೆಹೂದ್ಯರನ್ನು ಕೋಟಕಾಯಿ ಎಬ್ಬಿಸಲಿಕ್ಕೆ ಪ್ರೇರೇಪಿಸುವದರಲ್ಲಿ ತಾನೇ ಬೇಕೆಂದು ಪ್ರಯತ್ನ ಮಾಡಿದನು. ಹೀಗಾಗಿ ಅಂಥಾ ಪ್ರಸಿದ್ಧವಾದ ಕೋಟಕಾಯಿಯವರಿಂದ ರೋಮದಲ್ಲಿ ತನ್ನ ಮೇಲೆ ಅಪರಾಧ ಹೊರಿಸಲ್ಪಟ್ಟರೆ, ಕೇಳುವವರಿರಲಿಕ್ಕಿಲ್ಲವೆಂದು ನೆನಸಿದನು. ಬಹು ಕಾಲದಿಂದ ನಡದಂಥ ರಕ್ತ ಸುರಿಸಿದಂಥ ಕಲಹವು ಕೈಸರಯ್ಯದಲ್ಲಿದ್ದ ಯೆಹೂದ್ಯರಿಗೂ ಗ್ರೇಕರಿಗೂ ಇತ್ತು. ೬೬ನೇ ವರ್ಷದಲ್ಲಿ ಕೈಸರನಾದ ನೇರೋವಿನ ಶೀರ್ಪಿನಿಂದ ಯೆಹೂದಿಯರು ರೋಮಿಯ ಪಟ್ಟಣಿಕರಾಗಿರು

ವ ಸ್ವತಂತ್ರವನ್ನು ಕಳಕೊಳ್ಳ ಬೇಕೆಂದು ನಿಶ್ಚಯವಾಯಿತು. ಇದಾದಾಗ ಮ್ಲೇಂಛ ರ ಗುಂಪುಗಳು ಯೆಹೂದ್ಯರನ್ನು ಪಟ್ಣದಿಂದ ಹೊರಗೆ ಓಡಿಸಿದದರಿಂದಲೂ ಗೆಸ್ಸಿಯ ನು ಅದೇ ಸಮಯದಲ್ಲಿ ಯೆರೂಸಲೇಮದಲ್ಲ ದಾಕ್ಷಿಣ್ಯವಿಲ್ಲದೆ ಸುಲ ಕೊಳ್ಳುತ್ತಾ, ಸುಟ್ಟು ಹಾಕುತ್ತಾ, ಹತ ಮಾಡುತ್ತಾ ಇದ್ದದರಿಂದಲೂ, ಕಡೆಯಲ್ಲಿ ಪ್ರಕಟವಾಗಿ ಕೊಟಕೊಯಿಯಾಯಿತು. ಮತ್ತು ಅರಸನಾದ ೨ನೇ ಅಗ್ರಿಪ್ಪನು ತಾನೇ ಯೆರೂಸಲೇ ಮಕ್ಕೆ ಬಂದು ಜನರ ಮನಸ್ಸು ಸಂತೈಸಲಿಕ್ಕೆ ಮಾಡಿದ ಪ್ರಯತ್ನಗಳು ನಿಷ್ಫಲವಾದವು.



## § 111.

ಸುರಿಯದ ಸುಬೆದಾರನಾದ ಕೆಸ್ತಿಯಗಲ್ಲನು ಕೊಟಕೊಯಿಯನ್ನೆಲ್ಲಾ ಒಂ ದೇ ಪೆಟ್ಟಿನಿಂದ ಮುರಿಯ ಬೇಕೆಂಶ ಮಾಡಿದನು. ಅವನು ಚನ್ನಾಗಿ ಯುದ್ಧಸನ್ನ ದ್ಧವಾದ ಸೈನ್ಯವನ್ನು ತಕ್ಕೊಂಡು ಯೆರೂಸಲೇಮದ ಮುಂದೆ ಬಂದನು. ಆದರೆ ಬ ಹಳ ಅಪಹಾಸ್ಯವಾಗಿ ಓಡಿ ಹೋಗ ಬೇಕಾಯಿತು. ಈಗ ನೇರೊನನು ವೆಸ್ಪಾಸಿಯಾ ನನನ್ನು ಕಳುಹಿಸಿದನು; ಇವನಿಗೆ ಯೆಹೂದ್ಯರು ಬಹಳ ಕಠಿಣವಾಗಿ ಪ್ರತಿಕೂಲವಾ ಗಿ ನಿಂತರೂ ಅವನು ಸ್ವಲ್ಪ ಕಡಿಮೆ ಎಲ್ಲಾ ದೇಶವನ್ನು ಜೈಸಿದನು. ಯೆರೂಸಲೇ ಮಕ್ಕೆ ಮುತ್ತಿಗೆ ಹಾಕ ಬೇಕೆಂದಿರುವಾಗ, ಅಷ್ಟರೊಳಗೆ ಅವನು ಕೈಸರನೆಂದು ಸಾರಿ ದರು. ಆದದರಿಂದ ಅವನು ರೋಮಕ್ಕೆ ಹೋದನು. ಅವನ ಮಗನಾದ ತೀತನು ಅವನ ಕೆಲಸವನ್ನು ಮುಂದೆ ನಡಿಸಿದನು. ತೀತನು ಯೆರೂಸಲೇಮವನ್ನು ಸುತ್ತಿ ಕೊಂಡಿರುವಾಗ ಪಸ್ಕಹಬ್ಬಕ್ಕಾಗಿ ಬಹಳ ಜನರು ಯೆರೂಸಲೇಮದಲ್ಲಿ ಕೂಡಿ ಕೊಂಡಿ ದ್ದರು. ತಾರತಮ್ಯವುಳ್ಳವರು ಒಪ್ಪಿಸಿ ಕೊಡುವದು ಒಳ್ಳೆದೆಂದು ಹೇಳಿದರು. ಆ ದರೆ ಆಸಕ್ತರು ಅವರನ್ನು ಕೊಂದು ಹಾಕಿದರು. ಆದರೆ ಇವರು ಸಹಾ ತಮ್ಮೊಳಗೆ ವಿ ಬೇದವಾಗಿ ಒಬ್ಬರನ್ನೊಬ್ಬರು ಹತ ಮಾಡಿ ಕೊಂಡರು. ಬರಗಾಲವೂ ವ್ಯಾಧಿಗಳೂ ಅತಿ ಬಯಂಕರವಾಗಿದ್ದವು. ಲಕ್ಷ ಲಕ್ಷ ಹೆಣಗಳನ್ನು ಪ್ರಾಕಾರದ ಮೇಲಿನಿಂದ ಹೊರ ಗೆ ಬಿಸಾಡಿದರು. ತಮ್ಮ ಕೈಯಲ್ಲಿ ಸಿಕ್ಕಿದವರನ್ನು ರೋಮಾಯರು ಹೊರಗೆ ಶಿಲುಬೆ ಗೆ ಹಾಕಿದರು. ತೀತನು ಹೊರಗಿನ ಪ್ರಾಕಾರವನ್ನು ಬಲದಿಂದ ತಕ್ಕೊಂಡಾಗ ಯೆ ಹೂದ್ಯರು ದೇವಾಲಯದಲ್ಲಿ ಬದ್ರ ಮಾಡಿ ಕೊಂಡರು. ಮತ್ತೊಂದು ಬಾಗದವರು ಅಜಿತವಾದ ದುರ್ಗವನ್ನು ಕಾಪಾಡಿ ಕೊಂಡರು. ತೀತನು ದೇವಾಲಯವನ್ನು ಇರ ಗೊಡಿಸಲಿಕ್ಕೆ ಬಹಳ ಬಹಳ ಅಪೇಕ್ಷಿಸಿ ಕಠಿಣವಾದ ಆಜ್ಞೆಯನ್ನು ಕೊಟ್ಟಿದ್ದರೂ ಒಬ್ಬ

ಸಿಪಾಯನು ಬೆಂಕಿ ಒಳಗೆ ಬಿಸಾಡಿದನು. ಮತ್ತೆ ಶೀತನು ನಾಂದಿಸಲಿಕ್ಕೆ ಕಾಟ್ಟ ಅ ಪ್ಪಣೆಯು ನಿರರ್ಥಕವಾಯಿತು. ಶುಮಾರು ೬೦೦ ವರ್ಷದ ಹಿಂದೆ ಮೊದಲನೇ ದೇವಾಲಯವು ನೆಬುಕನ್ನೇಜರನ ಕಾಲದಲ್ಲಿ ಯಾವ ದಿವಸ ಹಾಳು ಮಾಡಲ್ಪಟ್ಟಿ ತಾೀ ಅದೇ ದಿವಸದಲ್ಲಿ ಈ ಸಾರಿ ಸಹಾ ಈ ಸುಂದರವಾದ ದೇವಾಲಯವು ಸುಟ್ಟು ಹಾೀಯಿತು. ಕರ್ತನು ಪ್ರವಾದಿಸಿದ ಪ್ರಕಾರ (ಮತ್ತಾ. ೨೪, ೨.) ಕಲ್ಲುಕಲ್ಲಿನ ಮೇಲೆ ಬಿಡಲ್ಪಡಲಿಲ್ಲ. (ಕ್ರಿ. ಮೇಲೆ. ೭೦) ಮೇಲಿನ ಪಟ್ಟಣವನ್ನು ತಕ್ಕೊಳ್ಳ ಬೇಕಾದ ರೆ ಅದನ್ನು ಕಾಪಾಡುತ್ತಿದ್ದವರು ಹಶಿವೆಗಾಗಿ ಅದನ್ನು ಬಿಡುವ ಮಟ್ಟಿಗೂ ಕೆಲವು ಹಪ್ತೆಗಳು ಕಳದವು. ಪಟ್ಣವೆಲ್ಲಾ ಭೂಮಿಗೆ ಸಮಾನ ಮಾಡಲ್ಪಟ್ಟಿತು. ಹತ್ತು ಲಕ್ಷಕ್ಕೆ ಹೆಚ್ಚು ಯೆಹೂದ್ಯರು ಈ ಯುದ್ಧದಲ್ಲಿ ಸತ್ತರು. ಮತ್ತು ತಾಂಭತ್ತು ಸಾವಿರಕ್ಕೆ ಹೆಚ್ಚು ಶೆರೆಯವರನ್ನು ದಾಸರಾಗಿ ಮಾಡಿದರು. ಇಲ್ಲದಿದ್ದರೆ ಜಟ್ಟಿಗಳ ಆಟಕ್ಕೆ ನಿಶ್ಚಯಿಸಿ ದರು. ಶೀತನು ರಾೀಮದಲ್ಲಿ ಮಹಿಮೆಯುಳ್ಳ ಜಯಾೀತ್ಸವವನ್ನು ಮಾಡಿದನು. ಆಗ್ಗೆ ಸಮುಖದ ರಾಟ್ಟಿಗಳ ಮೇಜನ್ನೂ ದೀಪಸ್ತಂಭವನ್ನೂ ನೇಮಪುಸ್ತಕವನ್ನೂ ಅವನ ಮುಂದೆ ನಾೀಟಕ್ಕಾಗಿ ಹಾತ್ತು ಕಾಂಡು ನಡದರು.

ಪರಿಶಿಷ್ಟ. ರೋಮಿಯ ವೃದ್ಧಸಭೆಯು ಕೈಸರನಾದ ಶೀತನ ಮಹಿಮೆ ಗಾಗಿ ರೋಮದಲ್ಲಿ ಒಂದು ಜಯತೋರಣವನ್ನು ಮಾಡಿಸಿದರು. ಅದು ಇಂದಿನ ವ ರೆಗೂ ಇರುತ್ತದೆ. ದೇವಾಲಯದ ಪಾತ್ರಗಳನ್ನು ನೋಟಕ್ಕೆ ಹೊತ್ತು ಕೊಂಡು ಹೋ ದದ್ದು ಆ ತೋರಣದ ಒಂದು ಕಡೆಯಲ್ಲಿ ಚಿತ್ರವಾಗಿ ತೋರಿಸಿ ಅದೆ.

ಈ ಯುದ್ಧದ ನೆನಪಿಗೋಸ್ಕರ ಮುದ್ರೆ ಹಾಕಿಸಿದ ನಾಣ್ಯಗಳಲ್ಲಿ ಕೆಲವು ಇಂದಿ ನ ವರೆಗೂ ಇರುತ್ತವೆ. ಈ ನಾಣ್ಯದ ಒಂದು ಕಡೆಯಲ್ಲಿ ಲತೀನ ಭಾಷೆಯಲ್ಲಿ ಜೈ ಸಲ್ಪಟ್ಟ ಯೆಹೂದ್ಯವು ಎಂಬ ಅಕ್ಷರ ಸಹಿತವಾಗಿ ಬಂಧಿತಳಾದ ಯೆಹೂದ್ಯ ಕು ಮಾರ್ತಿಯು ಒಂದು ಖರ್ಜೂರ ಮರದ ಕೆಳಗೆ ನಿಂತಿರುವದು, ಆಚೆ ಕಡೆಯಲ್ಲಿ ರೋಮಿಯಲೆಗಿಯೋನುಗಳ ಧ್ವಜವು (ಹೆಣ್ಣು ಹಂದಿಯೂ ಅದರ ಸಂಗಡ ಮರಿಗಳೂ) ಉಂಟು. ಯೆರೂಸಲೇಮವು ಹಾಳಾದ ೬೦ವರ್ಷದ ಮೇಲೆ ಹದ್ರಿ ಯಾನನು ಪಟ್ಣವನ್ನು ತಿರಿಗಿ ಕಟ್ಟಿಸಿ ಭದ್ರ ಮಾಡಿಸಿದನು. ಅದಕ್ಕಿಟ್ಟ ಮ್ಲೇಂಛನಾ ಮವು ಏಲಿಯ ಕಪಿತೊಲೀನ, ಮತ್ತು ಯೆಹೂದ್ಯರು ಅದರ ಹತ್ತರ ಸಹಾ ಬರ ಬಾ ರದೆಂದೂ ಬಂದರೆ ಮರಣಶಿಕ್ಷೆಯಾಗುವದೆಂದೂ ಕಟ್ಟಳೆ ಆಯಿತು. ಈಗ ಅರಾಬ್ಯ ರು ಎಲ್‌ಕೋದ್ಸ (ಅಂದರೆ ಪರಿಶುದ್ಧ) ಎಂದು ಅದಕ್ಕೆ ಹೇಳುತ್ತಾರೆ.



## § 112. ಇಸ್ರಯೇಲ್ಯರ ಈಗಿನ ಸ್ಥಾನವು

೧) ಅಬ್ರಹಾಮನ ಬೀಜದಿಂದ ಭೂಮಿಯ ಸಮಸ್ತ ಜನಾಂಗಗಳ ಮೇಲೆ ಬರ ಬೇಕಾಗಿದ್ದ ರಕ್ಷಣ್ಯದ ದಿವ್ಯ ಯಾಲೋಚನೆಯೇ ಇಸ್ರಯೇಲ್ಯರ ಕಥೆಗೆ ಪ್ರಾಣವಾಗಿತ್ತು. ಇಸ್ರಯೇಲ್ಯರು ದಿವ್ಯ ಜೀವನದ ಈ ವಿಶ್ವಾಸದಿಂದ ತ್ರಾಣ ಹೊಂದಿದವರಾಗಿ, ನಡಕೊಂಡ ಮಟ್ಟಿಗೂ, ಯಾವ ಕಾಲಾಂತರಗಳು ಬಂದರೂ ಅವರ ಕಥೆಯಲ್ಲಿ ಜೀವದ ಚಾವವು ಇತ್ತು. ಆದರೆ ಈ ಬದುಕಿಸುವ ಶ್ವಾಸವು ಅವರಿಂದ ತೊಲಗಿ ಹೋದ ಕೂಡಲೇ ಅವರ ಕಥೆಯು ಶವವಾಯಿತು. ಮತ್ತು ಹೆಣ ಇದ್ದಲ್ಲಿ ಹದ್ದುಗಳು ಕೂಡಿ ಬರುತ್ತವೆ. (ಮತ್ತಾ. ೨೪, ೨೮.) ಇಸ್ರಯೇಲ್ಯರ ರಾಜಾರ್ಥ ವಿನಾಶವು, ಕಾಲವು ವಿಕಸಿತವಾಗುವಾಗ್ಯೆ ಅವಶ್ಯವಾಗಿ ಬರ ಬೇಕಾಯಿತು. ಅವರು ಕರಿಯುವಿಕೆಗೆ ಯೋಗ್ಯವಾದ ಪ್ರಕಾರವಾಗಿ ಬೆಳದದ್ದಾದರೆ, ಅವರು ತಮ್ಮ ಮಧ್ಯದಲ್ಲಿ ಉಂಟಾದ ರಕ್ಷಣ್ಯವನ್ನು ತಾವೇ ಅಂಗೀಕರಿಸಿದ್ದಾದರೆ, ರಾಜಾರ್ಥದ ಚಕ್ತಿಯ ರೂಪವು ಹೋಗ ಬಹುದಾಗಿತ್ತು; ಇಸ್ರಯೇಲ್ಯರಿಗೆ ಅದರಿಂದ ಏನೂ ನಷ್ಟ ಬರುತ್ತಿದ್ದಿಲ್ಲ; ಹ್ಯಾಗಂದರೆ ಕ್ರಿಸ್ತನಲ್ಲಿ ಅಂಗೀಕರಿಸಿದ ರಕ್ಷಣ್ಯವು ಅವರಿಗೆ ನವೀಕರಿಸಲಿಕ್ಕೂ ಮಹಿಮೆ ಪಡಿಸಲಿಕ್ಕೂ ಪುನರ್ಜೀವಿಸಲಿಕ್ಕೂ ಬೇಕಾದಂಥಾ ನಿರ್ಣಯವಾದ ತ್ರಾಣವನ್ನು ಕೊಡುತಿತ್ತು. ಹಳೇ ಇಸ್ರಯೇಲ ಜನಾಂಗವು ಹೊಸ ಇಸ್ರಯೇಲ ಜನಾಂಗವಾಗುತಿತ್ತು. ಆಚಾರ ದೇವಾರಾಧನೆಗಳ ಹಳೇ ದೇಹವು ಹೋಗಬೇಕಾಗಿತ್ತೆಂಬದು ಸರಿ. ಯಾಕಂದರೆ ಹೊಸ ಆತ್ಮವು ಹೊಸ ರೂಪವನ್ನು ಸಹಾ ಮಾಡಿ ಕೊಳ್ಳ ಬೇಕು. ಮತ್ತು ಹೊಸ ರಸಕ್ಕೆ ಹೊಸ ಬುದ್ದಲಿಗಳು ಬೇಕು. (ಮತ್ತಾ. ೯, ೧೭.) ಆದರೆ ಅದು ಹೊಸ ಆತ್ಮದ ಬಲದಿಂದ ಒಳಗಿನಿಂದ ಹಿಡಿದು, ನವೀಕರಿಸಿದ್ದೂ, ಯೌವನವನ್ನೂ ಹೊಸ ರೂಪವನ್ನೂ ಹೊಂದಿದ್ದೂ ಆಗುತಿತ್ತು. ಆದರೆ ಇಸ್ರಯೇಲ್ಯರು, ವರ್ಷ ಸಹಸ್ರಗಳಿಂದ ಸಿದ್ಧವಾಗುತ್ತಾ ನಿರೀಕ್ಷಿಸಲ್ಪಡುತ್ತಾ ಬಂದ ರಕ್ಷಣ್ಯವನ್ನು ತೊರದು ಬಿಟ್ಟದರಿಂದಲೂ ಸ್ವಂತ ಜೀವನದಲ್ಲಿ ಮೊಗ್ಗೆಯ ಹಾಗೆಯೂ ಹಣ್ಣಿನ ಹಾಗೆಯೂ ಇರುವಂಥಾ ಬದುಕಿಸುವಂಥಾ ಹೊಸತಾಗಿ ಪಡೆಯುವಂಥಾ ಕ್ರೈಸ್ತ ಆತ್ಮವನ್ನು ದೂರ ಹಾಕಿದದರಿಂದಲೂ, ಅವರು ತಮ್ಮನ್ನು ತಾವೇ ಹತ ಮಾಡಿದ ಹಾಗಾಯಿತು. ಹೀಗಾಗಿ ಜೀವವುಳ್ಳ ಪ್ರಾಣವಿರದಂಥಾ ಹಳೇ ದೇಹವು ಕೊಳತು ಹೋಗುವದು ಮಾತ್ರವೇ ಉಳದಿತ್ತು.

೨) ಇಸ್ರಯೇಲ್ಯರು ಪ್ರೇತದ ಹಾಗೆ ವರ್ಷಶತಗಳಲ್ಲೆಲ್ಲಾ ಪ್ರವಾದನೆಗಳ ವಾಗ್ದತ್ತಗಳೂ ಹೆದರಿಸೋಣಗಳೂ ಸತ್ಯವಾಗಿರುತ್ತವೆ ಎಂಬದಕ್ಕೆ ದೃಷ್ಟಾಂತವಾಗಿದ್ದು,

ಕ್ರೈಸ್ತ ಶಿಕ್ಷೆಯು ಸತ್ಯವಾಗಿರುತ್ತದೆಂಬದಕ್ಕೆ ಯುಗದ ಅಂತ್ಯದ ವರೆಗೂ ಸಾಕ್ಷಿಯಾಗಿರುತ್ತಾರೆ. ಪೂರ್ವದಲ್ಲಿ ಅವರ ಪ್ರವಾದಿಗಳಲ್ಲಿ ಒಬ್ಬನು ಸಾರಿದಂಥಾ ಕಾಲವು ಈಗ ಬಂದದೆ. ಇಸ್ರಯೇಲನ ಮಕ್ಕಳು ಬಹು ಕಾಲದ ಪರ್ಯಂತರಕ್ಕೂ ಅರಸನಿಲ್ಲದೆಯೂ ಶ್ರೀಮಂತನಿಲ್ಲದೆಯೂ ಬಲಿ ಇಲ್ಲದೆಯೂ ಸ್ತಂಭವಿಲ್ಲದೆಯೂ ಎಫೋದ್ ಇಲ್ಲದೆಯೂ ತೆರಾಫಿಮ್ (ಮೂರ್ತಿ) ಇಲ್ಲದೆಯೂ ಇರುವರು. (ಹೋಸೇಯ. ೩,೪.) (ಇದರ ಅಭಿಪ್ರಾಯವೇನಂದರೆ ಅವರು ಯೆಹೂದ್ಯರಾಗಿಯೂ ಇರಲಿಕ್ಕಿಲ್ಲ, ಮ್ಲೇಂಛರಾಗಿಯೂ ಇರಲಿಕ್ಕಿಲ್ಲ, ಅವರಿಗೆ ಸತ್ಯವಾದ ಶುದ್ಧಸ್ಥಳವೂ ಅಸತ್ಯವಾದ ಶುದ್ಧಸ್ಥಳವೂ ಇರಲಿಕ್ಕಿಲ್ಲ.) ಮ್ಲೇಂಛರ ಹುಳಿಹಿಟ್ಟು ಅವರು ಬಿಸಾಡಿದ್ದಾರೆ; ಆದರೆ ಇನ್ನು ಮುಂದೆ ನಿಜ ಯೆಹೂದ್ಯರಾಗಿಯೂ ಇರುವದಿಲ್ಲ. ಯಾಕಂದರೆ ದೇವಾಲಯ ಬಲಿ ಇಲ್ಲದೆಯೂ ಯಾಜಕದೇವಾಧಿಪತ್ಯವಿಲ್ಲದೆಯೂ ಯೆಹೂದ್ಯರಿರುವದು ಹ್ಯಾಗೆ? ಅವರು ದೇವರಿಗೋಸ್ಕರ ಆಸಕ್ತಿಯುಳ್ಳವರಾಗಿರುತ್ತಾರೆ; ಆದರೆ ತಿಳುವಿಕೆಯ ಪ್ರಕಾರವಲ್ಲ (ರೋಮಾ. ೧೦, ೨). ಅವರಿಗೆ ನೇಮವೂ ಪ್ರವಾದಿಗಳೂ ಉಂಟು; ಆದರೆ ನೇಮವು ಥಲ್ಮೂದಿನ ಸಂಪ್ರದಾಯಗಳಲ್ಲಿ ಸ್ತಬ್ಧವಾಗಿ ಹೋಗಿಯದೆ; ಮತ್ತು ವಾಗ್ದತ್ತಗಳು: ಕುರುಡರಾಗಿ ಕುರುಡರಿಗೆ ದಾರಿ ತೋರಿಸುವವರು ಕೊಟ್ಟ ಅರ್ಥವೆಲ್ಲಾ ಬರಿದು ಮಾಡುವ ವ್ಯಾಖ್ಯಾನಗಳಿಂದ ಕಾಣದೆ ಹೋಗಿದ್ದಾವೆ. (ಮತ್ತಾ. ೧೫, ೧೪.) ಯಾಕಂದರೆ ಮೋಶೆಯ ಮುಸುಕು ಅವರ ಕಣ್ಣುಗಳ ಮುಂದೆಯೂ ಹೃದಯದ ಮುಂದೆಯೂ ತೂಗುತ್ತದೆ. ಹೀಗಾಗಿ ಸುವಾರ್ತೆಯ ಶುಭ್ರ ಬೆಳಕನ್ನು ಹಳೇ ಒಡಂಬಡಿಕೆಯಲ್ಲಿ ನೋಡಲಾರರು. (೨ ಕೊರಿಂಥ. ೩, ೧೩—೧೬.) ಅವರು ಅಬ್ರಹಾಮನ ಬೀಜವೆಂದು ಹೇಳಿ ಕೊಳ್ಳುತ್ತಾರೆ; ಆದರೆ ಅವರು ಅಬ್ರಹಾಮನ ವಿಶ್ವಾಸದ ಮಕ್ಕಳಲ್ಲ. (ಗಲಾತ್ಯ. ೩, ೭; ಯೋಹಾ. ೮. ರೋಮಾ. ೪.) ಅವರು ತಾವು ತಮ್ಮ ಪಿತೃಗಳ ದೇವರನ್ನು ಆರಾಧಿಸುತ್ತೇವೆಂದು ನೆನಸುತ್ತಾರೆ ಸರಿ. ಆದರೆ ಅವರ ಪಿತೃಗಳ ದೇವರು, ಆತನೇ ಕ್ರಿಸ್ತನಲ್ಲಿ ಮನುಷ್ಯನಾದ ದೇವರಾಗಿರುತ್ತಾನೆ. ಅವನೇ ನಮ್ಮ ನೀತಿಯಾಗಿರುವ ಯೆಹೋವನಾಗಿರುತ್ತಾನೆ. (ಯೆರೆಮಿಯ. ೩೩ ೧೬.) ಮತ್ತು ಆತನನ್ನೇ ಅವರು ತ್ಯಜಿಸಿದ್ದಾರೆ. ಒಬ್ಬನಾಗಿರುವ ಅವರ ಪಿತೃಗಳ ದೇವರು ಕ್ರೈಸ್ತರ ತ್ರಯೇಕನಾದ ದೇವರಾಗಿ ಪ್ರಕಟವಾಗಿದ್ದಾನೆ. ಆದದರಿಂದ ಮರಕಟ್ಟಿ ಹೋದಂಥ ಬೇರೆ ಎಲ್ಲಾ ಹೀನೈಸುವ ಏಕದೈವ ಮತವು ಸುಳ್ಳಿನದೂ ಜೀವವಿಲ್ಲದ್ದೂ ಆಗಿರುತ್ತದೆ. — ಪೂರ್ವಕಾಲದಲ್ಲಿ ಅಂಥಾ ತರದಲ್ಲಿ ಒಂದೇಯಾಗಿರುವಂಥಾ ಈ ಜನಾಂಗವು, ಈ ಕಾಲದಲ್ಲಿ ಸಹಾ ಆಶ್ಚರ್ಯಕರವಾದದ್ದಾಗಿರುತ್ತದೆ. ಎಲ್ಲಾ ಭೂಮಂಡಲದಲ್ಲಿ ಚದರಿದವರಾಗಿದ್ದರೂ ಮಿಶ್ರವಾಗದೆ ಇರುತ್ತಾರೆ. ಹಿಂಸೆ, ಉಪದ್ರ, ಬಲಾತ್ಕಾರ ಪ

ಡುವವರಾಗಿದ್ದರೂ ಬಲಹೀನರಾಗದೆಯೂ ಕಡಿಮೆಯಾಗದೆಯೂ ಇರುತ್ತಾರೆ. ೧೮ ಶತವರ್ಷಗಳು ಅವರ ಮೇಲೆ ದಾಟಿ ಹೋದವು; ಆದರೆ ಅವರ ಒಳಗಿನ ಸ್ಥಿತಿಯಲ್ಲಿಯೂ ಹೊರಗಿನ ಸ್ಥಿತಿಯಲ್ಲಿಯೂ ಏನೂ ಬೇರೆ ಮಾಡ ಶಕ್ತವಾಗಲಿಲ್ಲ. ಸಮಸ್ತವನ್ನು ಜೈಸುವಂಥ ಕಾಲವು ಅವರಲ್ಲಿ ವಿಶೇಷವಾದದ್ದನ್ನು ಜೈಸ ಶಕ್ತವಾಗಲಿಲ್ಲ. ಸ್ವದೇಶವಿಲ್ಲದೆ ತಮ್ಮ ಜನಾಂಗಭಾವವನ್ನೂ, ದೇವಾಲಯದ ಆರಾಧನೆ ಇಲ್ಲದೆ ತಮ್ಮ ಭಕ್ತಿಯನ್ನೂ ಏನೊಂದು ಆಧಾರವಿಲ್ಲದೆ ತಮ್ಮ ಕೋರಿಕೆಗಳನ್ನೂ ಕಾಪಾಡಿ ಕೊಂಡಿದ್ದಾರೆ. ಅವರ ಮುಖರೂಪವನ್ನು ಸಹಾ ಬೇರೆ ಮಾಡಲಿಕ್ಕೆ ಅನ್ಯ ಪ್ರದೇಶಗಳಿಂದಲೂ ಆಗಲಿಲ್ಲ. ಇದೆಲ್ಲಾದರಿಂದಲೂ ಮತ್ತು ಇನ್ನು ಹೆಚ್ಚಾಗಿ ಹಳೇ ಒಡಂಬಡಿಕೆಯಲ್ಲಿಯೂ ಹೊಸ ಒಡಂಬಡಿಕೆಯಲ್ಲಿಯೂ ಇರುವ ಅತಿ ಖಂಡಿತವಾದ ವಾಗ್ದತ್ತಗಳಿಂದಲೂ ಈ ಸಂಗತಿಯಲ್ಲಿ ದೇವರ ಬೆರಳುಂಟೆಂದೂ, ಈ ಜನಾಂಗಕ್ಕೆ ಇನ್ನೊಂದೇನಾದರೂ ವಿಶೇಷವಾದದ್ದು ಕಾಡಲ್ಪಡುವದುಂಟೆಂದೂ ಕಾಣುತ್ತದೆ.

ಪರಿಶಿಷ್ಟ. ಈ ಸಂಗತಿಯ ವಿಷಯವಾಗಿ ನಿತ್ಯ ಯೆಹೂದ್ಯನನ್ನು ಕುರಿತಿರುವ ಬಹು ಆಶ್ಚರ್ಯವಾದ ಮಾತು ಆಲೋಚಿಸ ತಕ್ಕದ್ದು. ಈತನು ವರ್ಷಶತಗಳೆಲ್ಲಾ ಓಡ್ಯಾಡಿ ಕೊಂಡು ತಾನು ದ್ರೋಹಿಸಿದ ಕರ್ತನು ಬರುವ ಮಟ್ಟಿಗೂ ವಿಶ್ರಾಂತಿಯನ್ನು ಹೊಂದುವದಿಲ್ಲ. ಇಸ್ರಯೇಲ್ಯರೇ ಈ ನಿತ್ಯ ಯೆಹೂದ್ಯನು.



## § 113. ಇಸ್ರಯೇಲ್ಯರ ಭವಿಷ್ಯ

ಪ್ರವಾದಿಯಾದ ಎಜೆಕಿಯೇಲನು ಒಂದು ಸಾರಿ ಒಂದು ದರ್ಶನದಲ್ಲಿ (೩೭ಸಂ.) ಸತ್ತವರ ಎಲುವುಗಳಿಂದ ತುಂಬಿದ ಒಂದು ಬೈಲು ನೋಡಿದನು. ಮತ್ತು ಕರ್ತನು ಅವನಿಗೆ ಹೇಳಿದ್ದು: ಮನುಷ್ಯಪುತ್ರನೇ! ಈ ಎಲುಬುಗಳು ತಿರಿಗಿ ಜೀವಿಸ್ಯಾವೋ? ಮತ್ತು ಪ್ರವಾದಿಯು ಅಪ್ಪಣೆ ಹೊಂದಿದ ಪ್ರಕಾರ, ಪ್ರವಾದಿಸಿದನು. ಮತ್ತು ಇಗೋ ಆಗೈ ಒಂದು ಶಬ್ದವಾಯಿತು, ಅಲ್ಲಾಡಲಿಕ್ಕೆ ಆರಂಭವಾಯಿತು. ಎಲುವುಗಳು ತಿರಿಗಿ ಕೂಡಿ ಬಂದವು; ನರಗಳೂ ಮಾಂಸವೂ ಅವುಗಳ ಮೇಲೆ ಬಂತು; ಮತ್ತು ಶ್ವಾಸವು ಅವುಗಳಲ್ಲಿ ಬಂತು. ಮತ್ತು ಅವುಗಳು ತಿರಿಗಿ ಜೀವಿತವಾಗಿ ತಮ್ಮ ಕಾಲುಗಳ ಮೇಲೆ ನಿಂತವು ಇತ್ಯಾದಿ. ಮತ್ತು ಕರ್ತನು ಹೇಳಿದ್ದು: ಮನುಷ್ಯಪುತ್ರನೇ! ಈ ಎಲುಬುಗಳು ಎಲ್ಲಾ ಇಸ್ರಯೇಲನ ಮನೆಯಾಗಿರುತ್ತವೆ. —ಅದೇ ಪ್ರಕಾರ

ಹೊಸೇಯನು ಸಹಾ ವರ್ತಮಾನದಲ್ಲಿರುವ ಇಸ್ರಯೇಲ್ಯರ ಸ್ಥಿತಿಯನ್ನು ಪ್ರವಾದಿಸಿ ಆದ ತರುವಾಯ ಸಾರುವದೇನಂದರೆ: ೩ನೇ ಸಂಧಿ ೫ ವಚನ “ತರುವಾಯ ಇಸ್ರಯೇಲಿನ ಮಕ್ಕಳು ತಿರಿಗಿ ಕೊಂಡು, ತಮ್ಮ ದೇವರಾದ ಕರ್ತನನ್ನು ತಮ್ಮ ಅರಸನಾದ ದಾವಿದನನ್ನೂ ಹುಡುಕಿ, ಕರ್ತನನ್ನೂ ಆತನ ಕೃಪೆಯನ್ನೂ ಕಡೇ ಕಾಲದಲ್ಲಿ ಸನ್ಮಾನಿಸುವರು. ಅಪೊಸ್ತಲನಾದ ಪೌಲನು ಹೇಳುದೇನಂದರೆ: (ರೋಮಾ. ೧೧, ೨೫. ೨೬.) ನೀವು ಈ ಮರ್ಮವನ್ನು ಅರಿಯದಿರ ನನಗೆ ಮನಸ್ಸಿಲ್ಲ, ಏನಂದರೆ ಜನಾಂಗಗಳ ಪೂರ್ಣತೆಯು ಒಳಗೆ ಶೇರುವ ಮಟ್ಟಿಗೂ ಇಸ್ರಯೇಲನಿಗೆ ಪಾಲಾಗಿ ಕಾಠಿಣ್ಯವು ಆಯಿತು. ಮತ್ತು ಹೀಗೆ ಇಸ್ರಯೇಲೆಲ್ಲಾ ರಕ್ಷಿಸಲ್ಪಡುವದು. ಹಾಗಂದರೆ ಇಸ್ರಯೇಲ್ಯರು ಜನಾಂಗವಾಗಿ ಒಟ್ಟಿಗೆ ರಕ್ಷಣೆಯನ್ನು ಹ್ಯಾಗೆ ಬಿಸಾಡಿದರೋ (ಅನೇಕರು ಒಬ್ಬೊಬ್ಬರಾಗಿ ಅದನ್ನು ತೆಕ್ಕೊಂಡರೆಂಬದು ಇದರಿಂದ ಅಲ್ಲವೆಂದು ಹೇಳುವದಲ್ಲ.) ಹಾಗೆಯೇ ಒಂದು ಸಾರಿ ಇಸ್ರಯೇಲ್ಯರು ಜನಾಂಗವಾಗಿ ತಿರಿಗಿ ಕೊಳ್ಳುವರು. (ಇದರಿಂದ ಸಹಾ ಅನೇಕರು ಒಬ್ಬೊಬ್ಬರಾಗಿ ಅವಿಶ್ವಾಸದಲ್ಲಿ ಬಿದ್ದಿರ ಬಹುದು.) ಆದರೆ ಇದು ಸಹಾ ಆಗ ಬೇಕಾದರೆ ಮ್ಲೇಂಛರ ಪೂರ್ಣತೆಯು, (ಹಾಗಂದರೆ ಮ್ಲೇಂಛರೊಳಗಿಂದ ಕರಿಯಲ್ಪಟ್ಟು ಆಯಲ್ಪಟ್ಟವರೆಲ್ಲರೂ) ಒಳಗೆ ಶೇರಿರ ಬೇಕು.. ಯಾಕಂದರೆ ಈ ಪ್ರಕಾರ (ಮತ್ಥಾ. ೧೯, ೩೦.) ಮೊದಲಿನವರಾದ ಅನೇಕರು ಕಡೆಯವರಾಗಿಯೂ ಕಡೆಯವರು ಮೊದಲಿನವರಾಗಿಯೂ ಇರುವರು ಎಂಬ ನಮ್ಮ ರಕ್ಷಕನ ಮಾತು ಈಡೇರ ಬೇಕಾಗುತ್ತದೆ. ಮತ್ತು ಆ ಸಮಯದಲ್ಲಿ (ಮತ್ಥಾ. ೨೭, ೨೫.) ಅವನ ರಕ್ತವು ನಮ್ಮ ಮೇಲೆಯೂ ನಮ್ಮ ಮಕ್ಕಳ ಮೇಲೆಯೂ ಬರಲ ಎಂಬಂಥಾ, ಇಷ್ಟು ವರೆಗೆ ಭಾರವಾದ ಶಾಪವಾಗಿ ಅವರ ಮೇಲೆ ಬಿದ್ದಿರುವ ಈ ಮಾತು ಸಹಾ ತನ್ನಲ್ಲಿರುವ ಆಶೀರ್ವಾದವನ್ನು (ಯಾಕಂದರೆ ಕ್ರಿಸ್ತನ ರಕ್ತವು ಲೋಕವೆಲ್ಲಾದರ ಪಾಪಕ್ಕೋಸ್ಕರವೂ ಇಸ್ರಯೇಲ್ಯರ ಪಾಪಕ್ಕೋಸ್ಕರ ಸಹಾ ವಿಮೋಚನೆಯಾಗಿರುತ್ತದೆ) ಅವರ ಮೇಲೆ ಸುರಿಸುವದು. ತರುವಾಯ ಅವರು ಜಕರಿಯ. ೧೨, ೧೦ನೇ ಶ್ಲೋಕದಲ್ಲಿ ಸಾರಿದ ಪ್ರಕಾರ ತಾವು ತಿವಿದವನನ್ನು ದೃಷ್ಟಿಸುವರು; ಮತ್ತು ಯೋಸೇಫನ ಮುಂದೆ ಅವನ ಸಹೋದರರು ಹ್ಯಾಗೋ ಹಾಗೆಯೇ ಇವರು ಸಹಾ ದೇವರ ಮಗನಾಗಿಯೂ ದಾವಿದನ ಮಗನಾಗಿಯೂ ಇರುವವನ ಮುಂದೆ ತಮ್ಮನ್ನು ಬಾಗ್ಗಿಸಿ ಕೊಂಡು, ಆತನೇ ಕರ್ತನಾಗಿರುತ್ತಾನೆಂದು ಗ್ರಹಿಸಿ ತಂದೆಯಾದ ದೇವರ ಮಹಿಮೆಗಾಗಿ ಅರಿಕೆ ಮಾಡುವರು.

ಪರಿಶಿಷ್ಟ. ಇಸ್ರಯೇಲ್ಯರು ಆತ್ಮದ ಬಾಧ್ಯತೆಯಲ್ಲಿ ಶೇರುವಾಗಲೇ ಪ್ರವಾದಿಗಳಲ್ಲಿರುವ ಅನೇಕ ವಾಗ್ದತ್ತಗಳು ಸಾಕ್ಷಿಯಾಗಿ ಹೇಳುತ್ತವೆಂದು ತೋರುವ ಪ್ರಕಾರ

ದೇಹಪ್ರಕಾರದ ಬಾಧ್ಯತೆಯಲ್ಲಿ ಸಹಾ ಶೇರ್ಯಾರೋ? ಹಾಗಂದರೆ ತಮ್ಮ
ಪಿತೃಗಳ ದೇಶಕ್ಕೆ ತಿರಿಗಿ ಬಂದು ಎರಡನೇ ಸಾರಿ ಸ್ವತಂತ್ರವಾದ ಜನಾಂಗವಾದೀ
ತೋ ಎಂಬದು ಭವಿಷ್ಯದಲ್ಲಿ ಈಡೇರುವಾಗ, ನಿಶ್ಚಯವಾಗಿ ತಿಳಿಯ ಬಂದೀತು ಹೊ
ರ್ತು ಈಗ ಅಲ್ಲ. (ಉದಾಹರಣೆಗಾಗಿ ಸಮ ನೋಡು. ಯೆಶಾಯ. ೪೩, ೧. ಯೆರೆ
ಮಿಯ. ೩೨, ೩೭. ಎಜೆಕಿಯೇಲ್. ೩೪, ೧೧. ೩೬, ೨೪. ೩೭, ೧೨. ೩೯,
೨೫. ಈ ಮೊದಲಾದ ವಚನಗಳು.)

ಇವುಗಳಲ್ಲಿಯೂ ಬೇರೆ ಅನೇಕ ಸ್ಥಳಗಳಲ್ಲಿಯೂ, ಬಬಿಲೋನ ವಾಸಾಂತ್ರ
ದಿಂದ ಸ್ವದೇಶಕ್ಕೆ ತಿರಿಗಿ ಬರುವದನ್ನು ದೃಷ್ಟಿಸಲಾಗಿ ಅದು ಇದಕ್ಕಿಂತ ಬಹಳ
ದೊಡ್ಡದಾಗಿಯೂ ಮಹಿಮೆಯುಳ್ಳದ್ದಾಗಿಯೂ ಇರುವ ತಿರಿಗಿ ಬರೋಣಕ್ಕೆ ಆಧಾ
ರವಾಗಿರುತ್ತದೆ ಎಂದು ಕಾಣುತ್ತದೆ.



ಎರಡನೇ ಪರ್ವವು

ರಕ್ಷಣೆಯು ಉಂಟಾಗುವದೂ ಅಂಗೀಕಾರವಾಗುವದೂ ಸಂಪೂರ್ಣವಾಗುವದೂ

# ಮೊದಲನೇ ಒಳಭಾಗ

## ರಕ್ಷಕನಲ್ಲಿ ರಕ್ಷಣೆಯು ಪ್ರಕಟವಾದದ್ದು

### § 114. ಕಾಲಗಳ ಸಂಪೂರ್ಣತೆಯು

ಗಲಾತ್ಯ. ೪, ೪. ೫. ಕಾಲದ ಸಂಪೂರ್ಣತೆಯು ಬಂದಾಗ, ನಾವು ಪುತ್ರಸ್ವೀಕಾರ ಹೊಂದುವ ಹಾಗೆ, ನ್ಯಾಯಪ್ರಮಾಣಕ್ಕೊಳಗಾದವರನ್ನು ಕೊಂಡು ಕೊಳ್ಳುವದಕ್ಕೆ ದೇವರು ತನ್ನ ಮಗನನ್ನು ಸ್ತ್ರೀಯಿಂದ ಹುಟ್ಟಿದವನಾಗಿಯೂ ನ್ಯಾಯಪ್ರಮಾಣಕ್ಕೊಳಗಾದವನಾಗಿಯೂ ಕಳುಹಿಸಿದನು.

೧) ಯೆಹೂದ್ಯತನವೂ ಮ್ಲೇಂಛತನವೂ ತಮ್ಮ ತಮ್ಮ ಕೆಲಸಗಳನ್ನು ತೀರಿಸಿ ಇದ್ದವು. ಪ್ರತಿಕೂಲವಾಗಿಯೂ ಅನುಕೂಲವಾಗಿಯೂ ರಕ್ಷಣೆಯು ಪ್ರವರ್ತಿಸುತ್ತಾ ಬಂದು ಸಿದ್ಧವಾಗಿತ್ತು. ಲೋಕಕ್ಕೆ ಸ್ವಂತ ಬಲದಿಂದಲೂ ಬುದ್ಧಿಯಿಂದಲೂ ರಕ್ಷಣ್ಯವನ್ನು ಹೊಂದ ಕೂಡದೆಂಬದು ನಾಲ್ಕು ಸಾವಿರ ವರ್ಷದ ಅನುಭವದಿಂದ ತಿಳುವಿಕೆಗೆ ಬಂದಿತ್ತು. — ಯೆಹೂದ್ಯತನದಿಂದ ಕಾಣುವ ಪ್ರಕಾರ ನೇಮದ ಮಾರ್ಗದಲ್ಲಿಯೂ ಆಗಲಿಲ್ಲ, ಮ್ಲೇಂಛತನವು ತೋರಿಸುವ ಪ್ರಕಾರ ಲೌಕಿಕ ಸುಶಿಕ್ಷೆಯಿಂದಲೂ ಚಮತ್ಕಾರದಿಂದಲೂ ವಿದ್ಯೆಯಿಂದಲೂ ರಾಜಾರ್ಥದಿಂದಲೂ ಸಹಾ ಆಗಲಿಲ್ಲ. ಇಸ್ರಯೇಲ್ಯರಿಗೆ ಸೀನೈಯಿಂದ ಪ್ರಕಟವಾದ ನೇಮವು ಆಶೀರ್ವಾದವುಳ್ಳದ್ದಾಗಿತ್ತು. ಆದರೆ ಮನುಷ್ಯನ ಸ್ವಭಾವವು ಪೂರ್ಣವಾಗಿ ಕೆಟ್ಟು ಹೋಗಿರಲಾಗಿ, ಈ ಆಶೀರ್ವಾದವನ್ನು ಅಲ್ಲ, ಅದರ ಸಂಗಡಲಿದ್ದ ಶಾಪವನ್ನು ಮಾತ್ರವೇ ತೋರಿಸಿತು (ಗಲಾತ್ಯ. ೩, ೧೦). ಹೀಗೆಯೇ ನೇಮವು ಪಾಪದ ತಿಳುವಿಕೆಯನ್ನು ತಂತು. ಮತ್ತು ಎಲ್ಲಾ ನಿಜವಾದ ಇಸ್ರಯೇಲ್ಯರಿಗೆ ಕ್ರಿಸ್ತನಿಗಾಗಿ ಉಪಾಧ್ಯನಾಗಿತ್ತು. ಮ್ಲೇಂಛರಿಗೆ, ಯೆಹೂದ್ಯರಿಗೆ ಇದ್ದ ಹಾಗೆ, ಪ್ರತ್ಯೇಕವಾದ ದಿವ್ಯ ನೇಮವು ಇರಲಿಲ್ಲ. ಆದರೆ ಅವರ ಮನಸ್ಸಾಕ್ಷಿಯೂ ಒಂದಕ್ಕೊಂದು ತಪ್ಪು ಹೊರಿಸುತ್ತಾ ಇಲ್ಲವೆ ಪ್ರತ್ಯುತ್ತರ

ಕೊಡುತ್ತಾ ಇರುವ ಯೋಚನೆಗಳೂ ತಮ್ಮ ಹೃದಯಗಳಲ್ಲಿ ನ್ಯಾಯಪ್ರಮಾಣದ ಕ್ರಿಯೆಯು ಬರದಿರುತ್ತದೆ ಎಂಬದಕ್ಕೆ ಸಾಕ್ಷಿ ಕೊಟ್ಟವು (ರೋಮಾ. ೨, ೧೫). ಮತ್ತು ಈ ನೇಮವು ಬಹು ವಿಧವಾಗಿ ಮೋಸದ ಆಶೆಗಳ ಪ್ರಕಾರ ಕೆಟ್ಟು ಹೋಗಿದ್ದರೂ, (ಎಫೆ. ೪, ೨೨.) ಮನುಷ್ಯರು ಆತ್ಮದಲ್ಲಿ ಬಲವಿಲ್ಲದವರಾಗಿರುತ್ತಾರೆಂಬದನ್ನು ಅವರಿಗೆ ತೋರಿಸಲಿಕ್ಕೆ ಸಾಕಾಯಿತು. ಸುಂದರವಾಗಿಯೂ ಬಹಳ ಅಭಿಪ್ರಾಯಗಳುಳ್ಳವುಗಳಾಗಿಯೂ ಇದ್ದ ಇಸ್ರಯೇಲ್ಯರ ಆರಾಧನೆಗಳು ಮತ್ತೆ ವಿಕಸಿತವಾದ ಪ್ರವಾದನೆಯಿಂದ ನೆರಳಾಗಿರುತ್ತದೆಂದೂ, ಮುಂದೆ ಬರುವ ಒಳ್ಳೇದರ ಮುಂಗುರ್ತಾಗಿರುತ್ತದೆಂದೂ, ಭಕ್ತಿಯುಳ್ಳವರ ಮನೋಭಾವನೆಯಲ್ಲಿ ಕಾಣಿಸಿ ಕೊಂಡವು. ಮ್ಲೇಂಛರ ಆರಾಧನೆಯ ಮೊಗ್ಗೆಗಳು, ಸೃಷ್ಟಿಯಾರಾಧನೆ ಎಂಬ ಶೆಬೆಮನೆಯಲ್ಲಿ ಸ್ವಭಾವಕ್ಕೆ ವಿರೋಧವಾಗಿಯೂ ಅಕಾಲವಾಗಿಯೂ ವಿಕಸಿತವಾಗಿ ದೊಡ್ಡವುಗಳಾಗಲಾಗಿ, ಫಲಹೀನ ಬುಗ್ಗೆಗಳಾಗಿ ಕಂಡು ಬಂದವು. ಮತ್ತು ಒಳ್ಳೇ ಫಲಗಳನ್ನು ಧರಿಸದೆ ಬಿದ್ದು ಹೋದವು. ಹೀಗಾಗಿ ಕಿಕೆರೋನನ ಕಾಲದಲ್ಲಿಯೇ ಒಬ್ಬ ಯಾಜಕನು ಮತ್ತೊಬ್ಬನನ್ನು ನಗಾಡದೆ ನೋಡ ಕೂಡದೆಂದು ಹೇಳಿ ಕೊಂಡರು. ಮತ್ತು ಮನುಷ್ಯರ ವಿದ್ಯೆಯಿಂದ ಅನೇಕ ಮಹಿಮೆಯುಳ್ಳ ಮೊಗ್ಗೆಗಳು ಉಂಟಾದರೂ, ಮ್ಲೇಂಛರು ತಮ್ಮ ಗ್ಞಾನವು ಬರಿದಾಗಿರುತ್ತದೆಂದೂ ಮನುಷ್ಯತ್ವಕ್ಕೆ ನಿಜವಾಗಿ ಬೇಕಾದದ್ದನ್ನು ಕೊಟ್ಟು ತೃಪ್ತಿ ಪಡಿಸಲಿಕ್ಕೆ ತಾವು ಪೂರ್ಣವಾಗಿ ಬಲಹೀನರಾಗಿರುತ್ತೇವೆಂದೂ ತಿಳುಕೊಳ್ಳದೆ ಇರಲಿಕ್ಕೆ ಆಗಲಿಲ್ಲ. ಹೀಗಾಗಿ ರಕ್ಷಣೆಯು ಹ್ಯಾಗೆ ಎಲ್ಲಿ ಸಿಕ್ಕುವದೆಂಬದನ್ನು ತಿಳಿಯದೆ ಮೋಸದ ಮರ್ಮಗಳಲ್ಲಿಯೂ ಓಡ್ಯಾಡುವ ಜೋಗಿಗಳ ಹತ್ತರಲೂ, ಜೋತಿಷ್ಯಗಾರರ ಹತ್ತರಲೂ ಮೋಡಿಗಾರರ ಹತ್ತರಲೂ ತಮ್ಮಲ್ಲಿ ಹುಟ್ಟಿದ ಅಪೇಕ್ಷೆಗಳನ್ನು ತೃಪ್ತಿ ಪಡಿಸ ಬಹುದೆಂದು ನೆನಸಿ, ಪ್ರಯತ್ನ ಮಾಡಿದರು.

೨) ಆದರೆ ಈ ಪ್ರಕಾರ ಪ್ರತಿಕೂಲವಾಗಿ ಮಾತ್ರವಲ್ಲ (ಅಂದರೆ ಅಪೇಕ್ಷೆಯನ್ನೂ ತಮಗೆ ಏನು ಅವಶ್ಯವಾಗಿರುತ್ತದೆಂಬ ತಿಳುವಿಕೆಯನ್ನೂ ಹುಟ್ಟಿಸುವದರಿಂದ ಮಾತ್ರವಲ್ಲ). ಅನುಕೂಲವಾಗಿ ಸಹಾ ರಕ್ಷಣ್ಯಕ್ಕೆ ಮಾರ್ಗ ಮಾಡಿ ಇತ್ತು. ಯೆಹೂದ್ಯತನವೂ ಮ್ಲೇಂಛತನವೂ ರಕ್ಷಣ್ಯಕ್ಕೆ ವಾಹನವಾಗಲಿಕ್ಕೆ ನಿಶ್ಚಯವಾದ ನಿಜವಾದ ಫಲಗಳನ್ನು ಸಹಾ ಧರಿಸಿ ಇದ್ದವು. ಇಸ್ರಯೇಲ್ಯರ ನೇಮದಿಂದ ದೇವರು ಒಬ್ಬನಾಗಿಯೂ ಪರಿಶುದ್ಧನಾಗಿಯೂ ನೀತಿವಂತನಾಗಿಯೂ ಕೃಪೆಯುಳ್ಳವನಾಗಿಯೂ ಪರಲೋಕ ಭೂಲೋಕಗಳನ್ನು ನಿರ್ಮಿಸಿದವನಾಗಿಯೂ ಆಳುವವನಾಗಿಯೂ ಪ್ರಕೃತಿಗಿಂತ ಪೂರ್ಣವಾಗಿ ಬೇರೆಯಾಗಿಯೂ ಅದರ ಮೇಲೆ ಅಮಿತವಾಗಿ ಉನ್ನತನಾಗಿಯೂ ಇದ್ದರೂ ಅದರಲ್ಲಿ ಸರ್ವತ್ರನೂ ಸರ್ವತ್ರಾಣಿಯೂ ಆಗಿ, ಆಳುವವನೂ

ನಡಿಸುವವನೂ ಆಗಿರುತ್ತಾನೆಂಬ ಈ ಆಲೋಚನೆಯು ಶುದ್ಧವಾಗಿಯೂ ಸ್ಪಷ್ಟವಾಗಿಯೂ ವರ್ಣಿಸಿಯದೆ. ಇಸ್ರಾಯೇಲ್ಯರಿಗೆ ಆದ ವಾಗ್ದತ್ತಗಳು, ಮನುಷ್ಯಜಾತಿಯ ರಕ್ಷಣ್ಯದ ವಿಷಯವಾಗಿ ದೇವರು ಮಾಡಿದ ಆಲೋಚನೆಯನ್ನು ಪ್ರಕಟ ಮಾಡಿದ್ದವು. ಮತ್ತು ಅದನ್ನು ಪೂರ್ಣ ಮಾಡುವ ರೀತಿಯನ್ನೂ ಮಾರ್ಗವನ್ನೂ ಕಾಲವನ್ನೂ ಸ್ಥಳವನ್ನೂ ವರ್ಣಿಸಿ ಇದ್ದವು. ಇಸ್ರಾಯೇಲ್ಯರ ಆರಾಧನೆಯೇ ಈ ರಕ್ಷಣ್ಯಕ್ಕೆ ಕಣ್ಣುಗಳ ಮುಂದೆ ಮುಂಗುರ್ತಾಗಿತ್ತು. ಮತ್ತು ಇಸ್ರಾಯೇಲ್ಯರ ಕಥೆಯು ಅದರ ಅಂತ್ಯಕ್ಕೆ ಅಂದರೆ ದಾವಿದನಿಗೆ ಇದ್ದ ಭೂಮಿಯದಾಗಿಯೂ, ಕಾಲಕ್ಕಾಳಗಾದದ್ದಾಗಿಯೂ ಇರುವ ರಾಜ್ಯವು ಯಾಪನಲ್ಲಿ ನಿತ್ಯವಾಗಿಯೂ ಪರಲೋಕದ್ದಾಗಿಯೂ ಮಹಿಮೆ ಪಡತಕ್ಕದ್ದಾಗಿತ್ತೋ, ಆ ವಾಗ್ದತ್ತವಾದ ದಾವಿದನ ಮಗನ ಪ್ರಕಟಣೆಗೆ ಸಮೀಪ ಬಂದಿತ್ತು. ಆದರೆ ಮ್ಲೇಂಛತನವು ಸಹಾ ವಿಶೇಷವಾದ ಕಲ್ಲುಗಳನ್ನು ದೇವರ ರಾಜ್ಯದ ಕಟ್ಟುವಿಕೆಗೋಸ್ಕರ ತಂದಿತ್ತು. ಹಳೇ ಲೋಕದಿಂದ ಆಗುವಷ್ಟು ಎಲ್ಲಾ ಮ್ಲೇಂಛತನವು ಮನುಷ್ಯರ ಸುಶಿಕ್ಷೆಯಲ್ಲಿಯೂ ಜ್ಞಾನದಲ್ಲಿಯೂ ಪ್ರವೀಣತ್ವದಲ್ಲಿಯೂ ವಿದ್ಯೆಯಲ್ಲಿಯೂ ಮಾಡಿ ಇತ್ತು. ಮತ್ತು ಸುಟ್ಟು ಹೋಗದಂಥಾ ಮೊಗ್ಗೆಗಳನ್ನು, ಯೆಹೂದ್ಯರಿಂದ ಬಂದ ಹೊಸ ರಕ್ಷಣ್ಯಕ್ಕೆ ಪ್ರಯೋಜನಕ್ಕೆ ಬೀಳ ಮಾಡುವದಕ್ಕೆ ಸಿದ್ಧವಾಗಿತ್ತು.

ಪರಿಶಿಷ್ಟ. ಯೆಹೂದ್ಯತನವು (ಯೋಹಾ. ೪, ೨೨.) ಸಾರಾಂಶವನ್ನೂ ಆದರೆ ಮ್ಲೇಂಛತನವು (ವಿದ್ಯೆಯಲ್ಲಿಯೂ ಸುಶಿಕ್ಷೆಯಲ್ಲಿಯೂ) ರೂಪವನ್ನೂ ಕ್ರೈಸ್ತತ್ವಕ್ಕೆ ಲೋಕಭಕ್ತಿಯಾಗುವದಕ್ಕೋಸ್ಕರ ಕೊಟ್ಟವು. ಮ್ಲೇಂಛತನದಲ್ಲಿದ್ದ ಮನೋಹರವಾದ ಸುಶಿಕ್ಷೆಯ ಆಧಾರಗಳು, ಯೆಹೂದ್ಯತನದಲ್ಲಿ ಉಂಟಾದ ದಿವ್ಯ ಪ್ರಕಟಣೆಯ ಫಲಗಳಿಗೆ ಸೇರದೆ ಇದ್ದದ್ದಾದರೆ ಕ್ರೈಸ್ತತ್ವವು ಯೆಹೂದ್ಯತನದ ಬೇಲಿಯೊಳಗೆ ಪ್ರತ್ಯೇಕವಾಗಿ ನಿಲ್ಲುತಿತ್ತು. ಈ ಬೇಲಿಯನ್ನು ಮುರಿದು, ಆ ಸುಶಿಕ್ಷೆಯನ್ನು ರೂಪವಾಗಿ ತೆಕ್ಕೊಳ್ಳಲಾಗಿ, ಈ ರೂಪವು, ಯೆಹೂದ್ಯತನದಲ್ಲಿದ್ದ ಸಾರಾಂಶದಿಂದ ಮಹಿಮೆಯನ್ನೂ ಶುದ್ಧತ್ವವನ್ನೂ ಹೊಂದಿತು.

೩) ಇದಲ್ಲದೆ ಲೋಕವೆಲ್ಲಾ ಒಂದೇ ಸಂಸ್ಥಾನದ ಕೆಳಗೆ ಇತ್ತು. ಒಂದೇ ಭಾಷೆಯು ಎಲ್ಲಾ ಕಡೆಯಲ್ಲಿ ಪ್ರಬಲವಾಗಿತ್ತು. ಮತ್ತು ಎಲ್ಲಾ ಕಡೆಯಲ್ಲಿಯೂ ಲೋಕದಲ್ಲಿ ಸಮಾಧಾನವಿರಲಾಗಿ, ಅದರಿಂದ ಬಹಳ ಆಧಾರ ಹೊಂದಿದ ಅತಿಶಯವಾದ ವ್ಯಾಪಾರವೂ ಸಂಯೋಗವೂ, ಹೊಸ ಆಲೋಚನೆಗಳನ್ನು ಶೀಘ್ರವಾಗಿಯೂ ಸುಲಭವಾಗಿಯೂ ಪ್ರಸಿದ್ಧಿ ಮಾಡುವದರಲ್ಲಿ ಸಹಾಯವಾದವು. ಮತ್ತು ಇಸ್ರಾ

ಯೇಲ್ಯರು ಪಿತೃಗಳಿಗೆ ಆದ ವಾಗ್ದತ್ತಗಳು ಬೇಗ ಈಡೇರುವವೆಂದು ದೃಢವಾಗಿ ನಿರೀಕ್ಷಿಸಿ, ಸಂತೈಸಿ ಕಾಂಡ ಪ್ರಕಾರವೇ, ಮ್ಲೇಂಛರು ಸಹಾ ರಕ್ಷಣ್ಯವು ಸಮೀಪವಾಗಿರುತ್ತದೆಂದು ನಿರೀಕ್ಷಿಸಿದ್ದಲ್ಲದೆ ಒಬ್ಬ ದೊಡ್ಡ ಲೋಕರಾಜನು ಯೆಹೂದ್ಯದಿಂದ ಬರುವವನಾಗಿ ಚಂಗಾರದ ಯುಗವನ್ನು ಬರ ಮಾಡುವನೆಂದು ಖಂಡಿತವಾಗಿ ಕೋರಿದರು. ಈ ಕೋರಿಕೆಗೆ: ಮನುಷ್ಯಜಾತಿ ಎಲ್ಲಾ ಪೂರ್ವದಾರಭ್ಯ ಕೋರುತ್ತಾ ಬಂದದರ ನೆನಪೂ, ಯೆಹೂದ್ಯರ ಬೋಧನೆಗಳಿಂದಲೂ ಕೋರಿಕೆಗಳಿಂದಲೂ ಉಂಟಾದ ಫಲವೂ ಸಹಾ ಮುಖ್ಯವಾಗಿ ಕಾರಣವಾಯಿತು. ಹ್ಯಾಗಂದರೆ ಅನೇಕ ಮ್ಲೇಂಛರು ಯೆಹೂದ್ಯತನದಲ್ಲಿ ತಮ್ಮ ಕೋರಿಕೆಯ ಗುರಿಯು ಶಿಕ್ಕಿತೆಂದು ಅದರ ಮೇಲೆ ಹೆಚ್ಚು ಮನಸ್ಸು ಇಡಲಾಗಿ ಆ ಪ್ರಕಾರ ನೆನಸಿದ್ದು ಸಾಧಾರಣವಾಗಿರುತ್ತದೆ. ಹೀಗಾಗಿ ಎಲ್ಲಾ ಕಡೆಯಲ್ಲಿಯೂ ಇರುವಂಥ ಬಹಳ ಆಯಾಸದಿಂದ ಹಾರುವಂಥ ಸಂಕಷ್ಟಗಳನ್ನು ನಿವಾರಿಸಲಿಕ್ಕೆ ಶಕ್ತನಾಗಿದ್ದು, ನಿವಾರಿಸಲಿಕ್ಕಾಗಿಯೇ ಬಂದ ವೈದ್ಯನಿಗೆ ಎಲ್ಲಾ ಕಡೆಯಿಂದಲೂ ಮಾರ್ಗವು ಸಿದ್ಧವಾಯಿತು.

ಪರಿಶಿಷ್ಟ ೧. ಅನೇಕ ಮ್ಲೇಂಛರು, ಮತ್ತು ಮುಖ್ಯವಾಗಿ ಶ್ರೇಷ್ಠರಾದ ಹೆಂಗಸರೂ ಯೆಹೂದ ಭಕ್ತಿಯ ಮೇಲೆ ಬಹಳ ಮನಸ್ಸಿಡಲಾಗಿ, ಹಾಸ್ಯಗಾರರಿಗೆ ತಮ್ಮ ಪುಸ್ತಕಗಳಲ್ಲಿ ಅವರ ವಿಷಯವಾಗಿ ಅಪಹಾಸ್ಯ ಮಾಡಲಿಕ್ಕೆ ಬಹಳ ಕಾರಣವಾಯಿತು. ಯೆಹೂದ್ಯರು ಮತಶೇರಿದವರಲ್ಲಿ ೨ ತರ ಮಾಡಿದರು.

೧ನೇ ನೀತಿಯ ಮತಶೇರಿದವರು. ಇವರು ಪರಿಚ್ಛೇದನೆ ಮಾಡಿ ಕೊಂಡು, ನೇಮವನ್ನೆಲ್ಲಾ ಕೈಕೊಳ್ಳಲಿಕ್ಕೆ ಒಪ್ಪಿ ಕೊಂಡರು.

೨ನೇ ಬಾಗಲಿನ ಮತಶೇರಿದವರು (ಹಳೇ ಒಡಂಬಡಿಕೆಯಲ್ಲಿ ಪರದೇಶಸ್ಥರೆಂದು ಇಸ್ರಾಯೇಲ್ಯರ ಪಟ್ಟಣಗಳ ದ್ವಾರಗಳ ಒಳಗೆ ನಿವಾಸಿಸುವವರು. ಹೊಸ ಒಡಂಬಡಿಕೆಯಲ್ಲಿ ದೇವರಿಗೆ ಭಯ ಪಡುವವರೆಂದು) ಇವರು ಯೆಹೂದ್ಯತನಕ್ಕೆ ಸ್ವಲ್ಪ ಅನುಕೂಲವಾಗಿ ನೋಹನದೆಂಬ ೭ ಕಟ್ಟಳೆಗಳನ್ನು ಕೈಕೊಳ್ಳಲಿಕ್ಕೆ ಮಾತ್ರವೇ ಒಪ್ಪಿ ಕೊಂಡರು.

ಪರಿಶಿಷ್ಟ ೨. ಸುವಾರ್ತೆಗಳ ಕಥೆಗೆ ಆಧಾರಗಳೇನೆಂಬದನ್ನು § ೧೭೭ನೇಯಲ್ಲಿ ನೋಡು.



## § 115. ಆಗ ಬೇಕಾದ ವಿಮೋಚನೆಯ ಸ್ವಭಾವವು

೧) ವಿಮೋಚನೆಗೆ ೨ ಭಾಗಗಳು ಉಂಟು: ಒಂದು ಕಡೆಯಲ್ಲಿ (ಮೊದಲನೆ) ಆದಾಮನ ಪಾಪದಿಂದ ಲೋಕದಲ್ಲಿ ಬಂದಂಥ ಕೆಟ್ಟದ್ದೂ ಅದೈವಿಕವಾದದ್ದೂ, ಎಲ್ಲಾ ತೆಗದು ಹಾಕಲ್ಪಡ ಬೇಕಾಯಿತು; ಮತ್ತೊಂದು ಕಡೆಯಲ್ಲಿ ಆ ಪಾತಕದ ದೆಶೆಯಿಂದ ಮಾಡದೆ ಉಳಿದು ಹೋದ (ಆಗ ಬೇಕಾಗಿ ಆಗದೆ ಹೋದ) ಒಳ್ಳೇದು ಎಲ್ಲಾ ಪ್ರಕಟವಾಗ ಬೇಕಾಯಿತು. ಹಾಗಾದರೆ ಒಬ್ಬ ರಕ್ಷಕನ ಉದ್ಯೋಗವೂ ಸ್ಥಾನವೂ ಎರಡನೇ ಆದಾಮನದಾಗಿರ ಬೇಕು. (ರೋಮಾ. ೫, ೧೨—೨೧; ೧ ಕೊರಿಂಥ. ೧೫, ೨೧. ೨೨. ೪೫—೪೯.) ಪಾಪಕ್ಕೂ ಮರಣಕ್ಕೂ ನಡಿಸಿದ ಸುಳ್ಳಿನ ಅರಳುವಿಕೆಯು ತೆಗದು ಹಾಕಲ್ಪಟ್ಟು, ಅದರಿಂದ ಕೆಟ್ಟು ಹೋದಂಥಾದ್ದೆಲ್ಲಾ ಸಮ ಮಾಡಲ್ಪಡ ಬೇಕಾಯಿತು. ಮತ್ತು ಉಳಿದು ಹೋದಂಥಾ, ದೈವೇಚಿತ್ತವಾದಂಥಾ ನಿತ್ಯವಾಗಿಯೂ ಕೆಟ್ಟು ಹೋಗ ಕೂಡದಂಥಾದ್ದಾಗಿಯೂ ಇರುವ ಪರಿಶುದ್ಧತ್ವಕ್ಕೂ ಭಾಗ್ಯಕ್ಕೂ ನಡಿಸುವಂಥಾ ಅರಳುವಿಕೆಯು ತಿರಿಗಿ ಆರಂಭವಾಗಿ ಕಡೇ ಸಂಪೂರ್ಣತೆಗೆ ನಡಿಸಲ್ಪಡ ಬೇಕಾಯಿತು. ಮೊದಲನೇದು ಆಗ ಬೇಕಾದರೆ, ರಕ್ಷಕನು, ನಮಗೋಸ್ಕರ ಕಾರ್ಯಕರ್ತನಾಗಿ ನಮ್ಮ ಪಾಪಗಳ ಶಿಕ್ಷೆಯನ್ನು ತನ್ನ ಮೇಲೆ ತಕ್ಕೊಂಡು, ತನ್ನ ಮರಣ ಬಲಿಯಿಂದ ಅದನ್ನು ಮುಚ್ಚಿ ಅಳಿಸಿ ಬಿಡ ಬೇಕಾಯಿತು. ಎರಡನೇದು ಪೂರ್ಣ ಆಗ ಬೇಕಾದರೆ ನಮ್ಮ ಹಾಗೆಯೇ ಶೋಧಿಸಲ್ಪಟ್ಟವನಾಗಿ (ಇಬ್ರಿ. ೪, ೧೫.) ತನ್ನ ಜೀವನದಲ್ಲಿ ಮನುಷ್ಯತ್ವವನ್ನು ಪೂರ್ಣ ಸಂಪೂರ್ಣತ್ವದಲ್ಲಿ ವಿಕಸಿತ ಮಾಡಿ, ಪ್ರಕಟ ಮಾಡ ಬೇಕಾಯಿತು. ಮನುಷ್ಯತ್ವವನ್ನು ಮೊದಲು ತನ್ನಲ್ಲಿಯೇ ಮತ್ತು ನಮ್ಮಲ್ಲಿ ಸಹಾ, ನಾವು ಆತನ ಮರಣದ ಅನ್ಯೋನ್ಯದಲ್ಲಿಯೂ ಜೀವದ ಅನ್ಯೋನ್ಯದಲ್ಲಿಯೂ ಶೇರಿದ ತರುವಾಯ ನಮ್ಮ ತಲೆಯಾಗಿಯೂ (ಎಫೆ. ೧, ೨೨, ೪, ೧೫.) ನಾಯಕನಾಗಿಯೂ (ಮತ್ತಾ. ೨, ೬; ಇಬ್ರಿ. ೨, ೧೦.) ನಮ್ಮನ್ನು ತನ್ನ ಹಿಂದೆ ಎಳಕೊಂಡು, ತನ್ನ ಸಂಪೂರ್ಣತೆಗೆ ತರುವದಕ್ಕೋಸ್ಕರವೇ. (ಎಫೆ. ೨, ೫. ೬.)

ಪರಿಶಿಷ್ಟ. ಕ್ರಿಸ್ತನ ಮರಣದ ಅನ್ಯೋನ್ಯದಲ್ಲಿಯೂ ಜೀವದ ಅನ್ಯೋನ್ಯದಲ್ಲಿಯೂ ನೆಡಲ್ಪಡುವದು (ಸಮ ನೋಡು § ೧೫೧.) ಸ್ನಾನದಲ್ಲಿ ಪುನರ್ಜನನದಿಂದ ಆಗುತ್ತದೆ. (ರೋಮಾ. ೬, ೩—೧೧.) ಸಮ ನೋಡು § ೧೮೩. ಮೊದಲನೇ ಆದಾಮನ ಪಾಪವೂ ದೋಷವೂ ಅವನ ಸಂತತಿಯವರೆಲ್ಲರ ಮೇಲೆ ಹುಟ್ಟಿಸುವಿಕೆಯಿಂದಲೂ ಹು

ಟ್ಟುವಿಕೆಯಿಂದಲೂ ಹ್ಯಾಗೆ ಬಂತೋ ಅದೇ ಪ್ರಕಾರ ಎರಡನೇ ಆದಾಮನ ನೀತಿಯೂ ಪರಿಶುದ್ಧತ್ವವೂ ಎಲ್ಲಾ ಮನುಷ್ಯಜಾತಿಗೆ ಲಯವಾಗದ ಬೀಜದಿಂದಾಗುವ (೧ಪೇತ್ರ. ೧, ೨೩.) ಹುಟ್ಟಿಸುವಿಕೆಯಿಂದಲೂ ನೀರಿನಿಂದಲೂ ಆತ್ಮದಿಂದಲೂ (ಯೋಹಾ. ೩, ೫.) ಪುನರ್ಜನನದಿಂದಲೂ ಪ್ರಾಪ್ತಿಯಾಗ ಬೇಕಾಯಿತು. ನಾವು ಆದಾಮನಿಂದ ಮಾಂಸದಿಂದ ಮಾಂಸವಾಗಿ ಸ್ವಭಾವದ ಪ್ರಕಾರ ಹ್ಯಾಗೆ ಹುಟ್ಟಿದ್ದೇವೋ ಹಾಗೆಯೇ ಆದಾಮನ ಮಕ್ಕಳಾದ ನಾವು ದೇವರ ಮಕ್ಕಳಾಗುವ ಹಾಗೆಯೂ ಪಾಪಿಷ್ಟರಾದ ನಾವು ಪ್ರಿಯರೂ ಆಯಲ್ಪಟ್ಟವರೂ ಆಗುವ ಹಾಗೆಯೂ ಕ್ರಿಸ್ತನಿಂದ ಸ್ವಭಾವವನ್ನು ಮೀರಿ ಆತ್ಮದಿಂದ ಆತ್ಮವಾಗಿ (ಯೋಹಾ. ೩, ೬.) ಹುಟ್ಟ ಬೇಕು.

೨) ಈ ಎರಡು ಕೆಲಸಗಳನ್ನು ಸಾಧಿಸುವದಕ್ಕೋಸ್ಕರ ರಕ್ಷಕನು ಒಂದೇ ಮೂರ್ತಿಯಲ್ಲಿ ದೇವರೂ ಮನುಷ್ಯನೂ ಅಂದರೆ ದೇವಮನುಷ್ಯನಾಗಿರ ಬೇಕಾಯಿತು; ಮೊದಲಾಗಿ ನಿಜವಾದ ಮನುಷ್ಯನು, ಎಲ್ಲಾದರಲ್ಲಿಯೂ ನಮಗೆ ಸಮಾನನು, ಆದರೂ ಪಾಪವಿಲ್ಲದೆ, (ಫಿಲಿ. ೨, ೭. ಇಬ್ರಿ. ೨, ೧೭; ४, ೧೫.) ತನ್ನ ಉದ್ಯೋಗದಲ್ಲಿ ಅನುಕೂಲವಾದ ಭಾಗವನ್ನು ಮಾತ್ರವಲ್ಲ, ಪ್ರತಿಕೂಲವಾದ ಭಾಗವನ್ನು ಸಹಾ ಪೂರ್ಣ ಮಾಡುವದಕ್ಕೋಸ್ಕರವೇ. ಪ್ರತಿಕೂಲವಾದ ಉದ್ಯೋಗವನ್ನು ಪೂರ್ಣ ಮಾಡುವದಕ್ಕೋಸ್ಕರ ಆತನು ನಮಗಾಗಿ ಮರಣವನ್ನು ಅನುಭವಿಸುವ ಹಾಗೆ, ಮನುಷ್ಯನಾಗ ಬೇಕಾಯಿತು. (ಹೀಗೆ ಬರದಿರುತ್ತದೆ. ಇಬ್ರಿ. ೨, ೧೪. ೧೫.) ಹಾಗಾದರೆ ಮಕ್ಕಳು ರಕ್ತಮಾಂಸಗಳಲ್ಲಿ ಪಾಲುಗಾರರಾಗಿರುವದರಿಂದ ಅವನು ಸಹಾ ಅದೇ ಮೇರೆಗೆ ಅವುಗಳಲ್ಲಿ ಭಾಗಸ್ತನಾದನು. ಮರಣದಿಂದ (ಇದು ಮಾಂಸರಕ್ತವಿಲ್ಲದೆ ಅಸಾಧ್ಯ) ಮರಣದ ಅಧಿಕಾರವುಳ್ಳವನಾದ ಪಿಶಾಚನನ್ನು ಲಯ ಮಾಡಿ ಬದುಕುವ ಕಾಲವೆಲ್ಲಾ ಮರಣದ ಭಯದಿಂದ ದಾಸತ್ವಕ್ಕೊಳಗಾಗಿ ಇದ್ದವರನ್ನಷ್ಟು ಬಿಡಿಸುವ ಹಾಗೆಯೇ — ಅದೇ ಪ್ರಕಾರ ತಾನು ಮಾಡ ಬೇಕಾಗಿ ತೀರಿಸಲಿಕ್ಕಿದ್ದ ಅನುಕೂಲವಾದ ಭಾಗದ ಕೆಲಸಕ್ಕೋಸ್ಕರ ಸಹಾ ತನ್ನಲ್ಲಿಯೂ ಮತ್ತೆ (ಆತನಿಗೆ ನಮ್ಮ ಸಂಗಡಲಿರುವ ಸಂಬಂಧದಿಂದ) ನಮ್ಮಲ್ಲಿಯೂ ಮನುಷ್ಯಭಾವವನ್ನು ಸಂಪೂರ್ಣತ್ವಕ್ಕೆ ತರುವ ಹಾಗೆ ನಿಜ ಮನುಷ್ಯನು ಆಗ ಬೇಕಾಯಿತು. ಆದರೆ ಅದೇ ಪ್ರಕಾರ ಒಂದು ಕಡೆಯಲ್ಲಿ (ಪಾಪವನ್ನು ತೆಗದು ಹಾಕುವ ವಿಷಯವಾಗಿ) ಮನುಷ್ಯನಾಗಿ ಸಹಿಸಿ ಸತ್ತದರ ಪುಣ್ಯಫಲವು, ದೈವಸ್ವಭಾವದ ಸಂಗಡ ಮನುಷ್ಯಸ್ವಭಾವವು ಒಂದೇಯಾಗುವದರಿಂದ ಅಮಿತವಾಗಿ ಬೆಲೆಯುಳ್ಳದ್ದೂ ನಿತ್ಯತ್ರಾಣವುಳ್ಳದ್ದೂ ಆಗುವ ಹಾಗೆಯೂ ಈ ಪ್ರಕಾರ ಎಲ್ಲಾ ಮನುಷ್ಯಸಂತತಿಯ ಅಮಿತವಾದ ಪಾಪ

ದ ಸಾಲಕ್ಕೆ ಸಮ ಭಾರವಾಗುವ ಹಾಗೆಯೂ, ಆದರೆ ಮತ್ತೊಂದು ಕಡೆಯಲ್ಲಿ (ನಿತ್ಯ ಜೀವವನ್ನು ಉಂಟು ಮಾಡುವ ಪುಣ್ಯದ ವಿಷಯವಾಗಿ) ಹೊಸ್ತಾಗಿ ಉಂಟು ಮಾಡಿದ ಜೀವದ ಮಾರ್ಗವನ್ನು ಹಿಡಿದು ತೀರಿಸಿ ಅತಿ ಶ್ರೇಷ್ಠವಾದ ಸಂಪೂರ್ಣತೆಗೆ ತರಲಿಕ್ಕೋಸ್ಕರ ಆತನ ಮನುಷ್ಯಸ್ವಭಾವವು ದಿವ್ಯವಾದ ಜೀವಪೂರಣದಿಂದ ಬಲಗೊಂಡು ತಕ್ಕದ್ದಾಗುವ ಹಾಗೆಯೂ ನಿಜವಾದ ದೇವರು ಸಹಾ ಆಗಿರ ಬೇಕಾಯಿತು.



## § 116. ರಕ್ಷಕನ ಮೂರ್ತಿಯು

ಯೋಹಾ. ೧, ೧. ೧೪. ವಾಕ್ಯವು ಮಾಂಸವಾಯಿತು. ಕೃಪೆಯಿಂದಲೂ ಸತ್ಯದಿಂದಲೂ ತುಂಬಾಗಿ ನಮ್ಮಲ್ಲಿ ವಾಸ ಮಾಡಿತು. ಮತ್ತು ತಂದೆಯಿಂದ ಒಬ್ಬನೇ ಹುಟ್ಟಿದವನ ಮಹಿಮೆಯ ಹಾಗೆ ಅವನ ಮಹಿಮೆಯನ್ನು ನೋಡಿದೆವು. ಫಿಲಿ. ೨, ೬. ೭ನೇ ವಚನಗಳು. ಅವನು ದೇವರ ರೂಪದಲ್ಲಿದ್ದು ದೇವರಿಗೆ ಸಮಾನವಾಗಿರುವದು ಕೊಳ್ಳೆ ಎಂದು ಎಣಿಸದೆ ತನ್ನನ್ನು ಬರಿದು ಮಾಡಿ ಕೊಂಡು ದಾಸನ ರೂಪ ತಕ್ಕೊಂಡು ಮನುಷ್ಯರ ಹೋಲಿಕೆಯಾದವನಾಗಿ, ಆಕಾರದಲ್ಲಿ ಮನುಷ್ಯನಾಗಿ ಕಾಣಲ್ಪಟ್ಟು, ತನ್ನನ್ನು ತಗ್ಗಿಸಿ ಕೊಂಡನು.

ಈ ರಕ್ಷಣ್ಯವನ್ನು ಉಂಟು ಮಾಡುವದಕ್ಕಾಗಿ ಕಾಲದ ಸಂಪೂರ್ಣತೆಯಲ್ಲಿ ದೇವರ ಮಗನೂ ಮನುಷ್ಯನ ಮಗನೂ ಆದ ಕ್ರಿಸ್ತನು ಕಾಣಿಸಿ ಕೊಂಡನು. ಈತನಲ್ಲಿ ಲೋಕವನ್ನು ನಿರ್ಮಿಸುವಂಥಾ ವಾಕ್ಯದ ನಿತ್ಯವಾದ ಮತ್ತು ನಿಜವಾದ ದೈವತ್ವವು ದಾವಿದನಾದ ಯೇಸುವಿನ ನಿಜಮನುಷ್ಯತ್ವದ ಸಂಗಡ ಒಂದು ಮೂರ್ತಿಯಾಗುವ ಹಾಗೆ ಕೂಡಿ ಕೊಂಡಿತು. ನಿತ್ಯವಾಗಿಯೂ ಅನಿರ್ಮಿತವಾಗಿಯೂ ಇರುವ ದೇವವಾಕ್ಯವು ಮಾಂಸವಾಗಿ ನಮ್ಮಲ್ಲಿ ಉಳಕೊಂಡಿತು. ಲೋಕದ ನಿರ್ಮಾಣಿಕನೂ ಕರ್ತನೂ ಆಗಿರುವಾತನು ಮಹಿಮೆಯ ಸಿಂಹಾಸನವನ್ನು ಬಿಟ್ಟು, ದಾಸತ್ವದ ರೂಪದಲ್ಲಿ ನಮ್ಮ ಬಡ ಭೂಮಿಯ ಮೇಲೆ ಕಾಣಿಸಿ ಕೊಂಡನು. ದೇವರ ಮಗನು ತನ್ನ ದಿವ್ಯ ಧಾರೆತನವನ್ನು ಬರಿದು ಮಾಡಿ ಕೊಂಡು ಮತ್ತೊಬ್ಬ ಮನುಷ್ಯನ ಹಾಗೆ ಆಕಾರದಲ್ಲಿ ಮನುಷ್ಯನಾಗಿ ಕಾಣಲ್ಪಟ್ಟನು. ಅವನು ತನ್ನ ದಿವ್ಯ ಕಾಂತಿಯನ್ನು ಮನುಷ್ಯಸ್ವಭಾವ ಎಂಬ ಮೊಬ್ಬಿನ ಮುಚ್ಚಳದೊಳಗೆ ಅಡಗಿಸಿ ಇಟ್ಟನು. ದೈವತ್ವದ ಬಾಧ್ಯತೆಯನ್ನು ಆತನು ಬರಿದು ಮಾಡಿ ಕೊಂಡನೆಂಬದಾಗಿ ಅಲ್ಲಾ, ಅಟಕವಿಲ್ಲದೆ ಅದ

ನ್ನು ಪ್ರಯೋಗಿಸುವದನ್ನು ಮಾತ್ರವೇ ಬಿಟ್ಟು ಬಿಟ್ಟನು. ದೈವತ್ವವನ್ನೇ ಅಲ್ಲಾ, ಅ
ದರ ಆಕಾರವನ್ನು ಮಾತ್ರವೇ (ಫಿಲಿ. ೨, ೬. ಶ್ಲೋಕ ಅಂದರೆ ನಿತ್ಯವಾದಂಥಾ ಪ
ರಾತ್ಪರವಾದಂಥಾ ಇರುವಿಕೆಯ ರೂಪವನ್ನು) ತೆಗದು ಬಿಟ್ಟನು. ಮನುಷ್ಯನಾದ
ಯೇಸುವಿನಲ್ಲಿ ದೈವತ್ವದ ಸಮಸ್ತ ಸಂಪೂರ್ಣತೆಯು ಶರೀರವಾಗಿ ವಾಸ ಮಾಡಿ
ತು (ಕೊಲೊ. ೨, ೯). ಆದರೆ ವಿಶ್ವಾಸದ ಕಣ್ಣು ಮಾತ್ರವೇ ಕೃಪೆಯಿಂದಲೂ ಸ
ತ್ಯದಿಂದಲೂ ತುಂಬಾಗಿ ತಂದೆಯಿಂದ ಒಬ್ಬನೇ ಹುಟ್ಟಿದವನ ಮಹಿಮೆಯ ಹಾಗೆ
ಅವನ ಮಹಿಮೆಯನ್ನು ನೋಡ ಶಕ್ತವಾಯಿತು (ಯೋಹಾ. ೧, ೧೪).

ಪರಿಶಿಷ್ಟ. ಆತನ ದಿವ್ಯ ಸ್ವಭಾವವನ್ನು ಹೇಳುವಂಥ ೨ ಮಾತುಗಳು ಉಂ
ಟು: ದೇವರ ಮಗನು, (ಇದರಿಂದ ಆತನು ಸ್ವಭಾವದಲ್ಲಿ ಸಂಪೂರ್ಣವಾಗಿ ತಂದೆ
ಗೆ ಸಮಾನನಾಗಿರುತ್ತಾನೆಂಬದು ಹೇಳಿಯದೆ) ಮತ್ತು ದೇವರ ವಾಕ್ಯವು, ಗ್ರೀಕ
ಭಾಷೆಯಲ್ಲಿ ಲೊಗೊಸ್ ಯೋಹಾ. ೧. ೧ ಮೊದಲಾದ ಶ್ಲೋಕಗಳು (ಇದರಿಂದ ಆತ
ನು ತಂದೆಯ ಸ್ವಯಂಪ್ರಕಟಣೆ ಎಂಬದು ಹೇಳಿಯದೆ.) ಆದರೆ ಮನುಷ್ಯನ ಮ
ಗನು ಎಂಬ ಹೆಸರಿನಿಂದ ಮನುಷ್ಯರು ಏನು ಆಗ ಬೇಕಾಗಿತ್ತೋ ಅದೆಲ್ಲಾ ನಿಜವಾ
ಗಿಯೂ ಸಂಪೂರ್ಣವಾಗಿಯೂ ಯಾವನಲ್ಲಿ ಪ್ರತ್ಯಕ್ಷವಾಯಿತೋ, ಆ ಸತ್ಯವಾದಂಥಾ
ಮುಂಗುರ್ತಾಗಿರುವಂಥಾ ಮನುಷ್ಯನಾಗಿಯೂ, ಹೊಸ ಪರಿಶುದ್ಧ ಮಾಡಲ್ಪಟ್ಟ ಮನು
ಷ್ಯಸಂತತಿಯನ್ನು ಆರಂಭ ಮಾಡಿದ ೨ ನೇ ಆದಾಮನಾಗಿಯೂ ಇರುತ್ತಾನೆಂಬದು
ಪ್ರತ್ಯಕ್ಷವಾಗುತ್ತದೆ. ಅವನು ದೇವಮನುಷ್ಯನಾಗಿದ್ದನೆಂಬದಕ್ಕೆ, ಅಂದರೆ ದೈವಸ್ವ
ಭಾವವೂ ಮನುಷ್ಯಸ್ವಭಾವವೂ ಸತ್ಯವಾಗಿಯೂ ಯಾವಾಗಲೂ ಒಂದೇಯಾಯಿ
ತು ಎಂಬದಕ್ಕೆ ಕ್ರಿಸ್ತನೆಂಬ ಹೆಸರು (ಅಂದರೆ ಅಭಿಷಿಕ್ತನು, ಮೆಸ್ಸೀಯ) ಸಾಕ್ಷಿ
ಯಾಗಿರುತ್ತದೆ. ಹ್ಯಾಗೂ ಈ ಹೆಸರು ಮೊದಲಾಗಿ ಆತನು ಅರಸನೂ ಪ್ರವಾದಿಯೂ
ಯಾಜಕನೂ ಆಗಿರುತ್ತಾನೆಂಬ ಈ ಮುಮ್ಮಡಿಯಾದ ದೇವಾಧಿಕಾರದ ಉದ್ಯೋಗ
ಕ್ಕೆ ಬರುತ್ತದೆ. ಇದನ್ನು ಕಡೆಯಲ್ಲಿ ಸಂಪೂರ್ಣವಾಗಿ ನಡಿಸಲಿಕ್ಕೆ ದೇವಮನುಷ್ಯ
ನು ಮಾತ್ರವೇ ಯೋಗ್ಯನು.



## § 117. ಅಗ್ರಗಾಮಿಯು

ಯೆಶಾಯ. ೪೦, ೩. ಅರಣ್ಯದಲ್ಲಿ ಪ್ರಸಂಗಿಯ ಧ್ವನಿಯು ಉಂಟು; ಕರ್ತನಿ
ಗೆ ಮಾರ್ಗವನ್ನು ಸಿದ್ಧ ಮಾಡಿರಿ. ಬೈಲಿನಲ್ಲಿ ನಮ್ಮ ದೇವರಿಗೆ ಸಮ ದಾರಿ ಮಾಡಿರಿ.

ಮಲಕಿಯ. ೩, ೧. ಇಗೋ ನಾನು ನನ್ನ ದೂತನನ್ನು ಕಳುಹಿಸುವೆನು ಇತ್ಯಾದಿ. § ೮೫, ೩.

೧) ಯಾಜಕಕುಲದವನಾದಂಥಾ (ಜಕರಿಯ ಯೆಲೀಸಬೇಥರ ಮಗನಾದಂಥಾ) ಸ್ನಾನಿಕನಾದ ಯೋಹಾನನನ್ನು ಕುರಿತು ಕರ್ತನ ದೂತನು ಮೊದಲೇ ಸಾರಿ ಹೇಳಿ ಅವನು ನಜೀರಾಯನಾಗ ಬೇಕೆಂದು ನಿಶ್ಚೈಸಿದನು. (§ ೪೩.) ತಂದೆಯು ಅವಿಶ್ವಾಸಿಯಾಗಲಾಗಿ ಮೂಕನಾಗ ಬೇಕಾಯಿತು. ಆದರೆ ವಾಗ್ದತ್ತವಾದ ಮಗನಿಗೆ ಪರಿಚ್ಛೇದನೆಯಾದಾಗ, ಬಾಷೆಯನ್ನು ತಿರಿಗಿ ಹೊಂದಲು ಅವನು ಪರಿಶುದ್ಧಾತ್ಮದಿಂದ ತುಂಬಿದವನಾಗಿ ಉನ್ನತದಿಂದಾಗುವ ಉದಯವನ್ನು ಕುರಿತೂ, ಈತನಿಗೆ ಮಗುವು ಹಾದಿಗಳನ್ನು ಸಿದ್ಧ ಮಾಡುವದೆಂಬದನ್ನು ಕುರಿತೂ ಪ್ರವಾದಿಸಿದನು. (ಲೂಕ. ೧.) ಯೋಹಾನನು ಪ್ರಾಯಸ್ಥನಾದಾಗ ಎಲೀಯನ ಆತ್ಮದಲ್ಲಿಯೂ ಬಲದಲ್ಲಿಯೂ (ಲೂಕ. ೧, ೧೭.) ಪ್ರವಾದಿಯಾಗಿ ಎದ್ದು, ಪ್ರಸಂಗಿಸಿದ್ದೇನಂದರೆ — ಮಾನಸಾಂತ್ರ ಪಡಿರಿ, ಯಾಕಂದರೆ ಪರಲೋಕರಾಜ್ಯವು ಸಮೀಪವಾಗೆದೆ (ಮತ್ಥಾ. ೩, ೨). ಯಾರ್ಯಾರು ತಮ್ಮ ಪಾಪಗಳನ್ನು ಅರಿಕೆ ಮಾಡಿದರೋ, ಅವರ ಮಾನಸಾಂತ್ರಕ್ಕೆ ಸಾಕ್ಷಿಯಾಗಿ ಮುದ್ರೆ ಹಾಕುವದಕ್ಕೋಸ್ಕರ ಅವರನ್ನು ನೀರಿನಲ್ಲಿ ಮುಣುಗಿಸಿ, ಸಾರಿದ್ದೇನಂದರೆ ನಾನು ನೀರಿನಿಂದ ಮಾನಸಾಂತ್ರಕ್ಕೋಸ್ಕರ ನಿಮಗೆ ಸ್ನಾನ ಕೊಡುತ್ತೇನೆ, ಆದರೆ ನನ್ನ ಹಿಂದೆ ಬರುವವನು ನನಗಿಂತ ಬಲಿಷ್ಠನು, ಅವನ ಕೆರಗಳನ್ನು ಹೊರ ನಾನು ಯೋಗ್ಯನಲ್ಲ. ಅವನು ಪರಿಶುದ್ಧಾತ್ಮದಿಂದಲೂ ಬೆಂಕಿಯಿಂದಲೂ ಸ್ನಾನ ಕೊಡುವನು (ಮತ್ತಾ. ೩, ೧೧.); ಮತ್ತು ನೀವು ಅರಿಯದವನು ನಿಮ್ಮ ಮಧ್ಯದಲ್ಲಿ ನಿಂತಿದ್ದಾನೆ; ಅವನು ನನ್ನ ಹಿಂದೆ ಬಂದು, ನನಗೆ ಮುಂದಿನವನಾದನು. ಮತ್ತು ಅವನು ಬೆಳಿಯ ಬೇಕು; ನಾನು ಕಡಿಮೆಯಾಗ ಬೇಕು (ಯೋಹಾ. ವ ೧, ೨೯ ಮೊದಲಾದ ಶ್ಲೋಕಗಳು). ಯೇಸುವು ತನ್ನ ಹತ್ತರ ಬರುವದನ್ನು ಅವನು ನೋಡಿ ಹೇಳಿದ್ದೇನಂದರೆ: ಇಗೋ ಲೋಕದ ಪಾಪವನ್ನು ಹೊತ್ತು ಕೊಂಡು ಹೋಗುವ ದೇವರ ಕುರಿಮರಿಯು (ಶ್ಲೋ. ೩೦).

ಪರಿಶಿಷ್ಟ. ಯೋಹಾನನ ಸ್ನಾನವನ್ನೂ ಕ್ರೈಸ್ತ ಸ್ನಾನವನ್ನೂ ಒಂದೇ ಮಾಡಲಾಗದು! (§ ೧೮೩.) ಅದು ಸಾಕ್ಷಿಗುರ್ತಾಗಿತ್ತು. ಆದರೆ ಇದು (ಅಂದರೆ ಕ್ರೈಸ್ತಸ್ನಾನ) ಪ್ರಸಾದವು (§ ೨೮೨).

ಮೊದಲನೇದು ಯೋಹಾನನು ತಾನೇ ಹೇಳುವ ಪ್ರಕಾರ ನೀರಿನಿಂದ ಮಾನಸಾಂತ್ರಕ್ಕಾಗಿರುವ ಸ್ನಾನವು. ಆದರೆ ಇದು ರಕ್ಷಣ್ಯವನ್ನು ಪೂರ್ಣ ಸ್ವೀಕೃತ ಮಾ

ಡುವದಕ್ಕಾಗಿ ನೀರಿನಿಂದಲೂ ಮತ್ತು ಪರಿಶುದ್ಧಾತ್ಮದಿಂದ ಸಹಾ ಆಗುವ ಸ್ನಾನವು. (ಯೇಸುವಿನ ಶಿಷ್ಯರಿಗೆ ಬೆಂಕಿಯಿಂದಲೂ ಪರಿಶುದ್ಧಾತ್ಮದಿಂದಲೂ ಆಯಿತು. § ೧೫೬, ೨). ಅದು ಬರುವವನಿಗಾಗಿ ಆದ ಸ್ನಾನವು. ಇದು ಬಂದ ಮೆಸ್ಸೀಯನಿಗಾಗಿ (ಅಪೊ. ಕ್ರಿ. ೧೯, ೪.)ಯೋಹಾನನ ಉದ್ಯೋಗವು ರಕ್ಷಣ್ಯವನ್ನು ತಾನೇ ಕೊಡುವಂಥಾದ್ದಾಗಿ ಇರದೆ, ಮನುಷ್ಯರ ಮನಸ್ಸನ್ನು ರಕ್ಷಣ್ಯಕ್ಕೋಸ್ಕರ ಮಾನಸಾಂತ್ರದ ಪ್ರಸಂಗದಿಂದಲೂ ಅದಕ್ಕೆ ಸಾಕ್ಷಿಗುರ್ತಾಗಿರುವ ಜಲಸ್ನಾನದಿಂದಲೂ ಸಿದ್ಧ ಮಾಡುವಂಥಾದ್ದು ಮಾತ್ರವೇ ಆಗಿತ್ತು. ಇದಲ್ಲದೆ ರಕ್ಷಣ್ಯವು ಇನ್ನು ಸ್ಥಾಪಿಸಿ ಇರಲಿಲ್ಲ; ಮತ್ತು ರಕ್ಷಣ್ಯದ ಸ್ವೀಕರಣೆಯನ್ನು ಮಾಡುವ ಉದ್ಯೋಗವು ಯಾರದೋ ಆ ಪರಿಶುದ್ಧಾತ್ಮವು (§ ೧೫೫. ೧೭೯.) ಇನ್ನು ಹೊಯಿದು ಇರಲಿಲ್ಲ; ಅದೇ ಕಾರಣದಿಂದ ಯೆಫೆಸ್ಯದಲ್ಲಿ ಇದ್ದ ಯೋಹಾನನ ಶಿಷ್ಯರು (ಅಪೊ. ಕ್ರಿ. ೧೯. ೩. ೫. ವಚ. ಸಹ ನೋಡು § ೧೭೯.) ಯೋಹಾನನ ಸ್ನಾನವನ್ನು ಮೊದಲೇ ಹೊಂದಿದವರಾಗಿದ್ದರೂ, ಇನ್ನೂ ಕ್ರೈಸ್ತಸ್ನಾನವನ್ನು ಹೊಂದ ಬೇಕಾಗಿತ್ತು.

೨) ಜನಕ್ಕೆ ಮಾತ್ರವಲ್ಲ, ಚತುರಧಿಪತಿಯಾದ ಹೆರೋದ ಅಂತಿಪನಿಗೆ ಸಹಾ ಯೋಹಾನನು ಮಾನಸಾಂತ್ರವನ್ನು ಪ್ರಸಂಗಿಸಿದನು. ಅವನು ವ್ಯಭಿಚಾರೆಯಾದ ಸಹೋದರನ ಹೆಂಡತಿಯನ್ನು ಮದಿವೆ ಮಾಡಿ ಕೊಂಡಿದ್ದನು. ಆದದರಿಂದ ಯೋಹಾನನು ಅವನ ಮುಂದೆ ಹೋಗಿ ಹೇಳಿದ್ದು: ನೀನು ನಿನ್ನ ಸಹೋದರನ ಹೆಂಡತಿಯನ್ನು ಇಟ್ಟು ಕೊಂಡದ್ದು ನ್ಯಾಯವಲ್ಲ. ಆಗೈ ಹೆರೋದನು ಅವನನ್ನು ಹಿಡಿಸಿ, (ಆ ಸಮಯದಲ್ಲಿ ಚತುರಧಿಪತಿಯ ಸ್ಥಾನವಾಗಿರುವ) ಪೆರೇಯದ ಮಖೈರ ಎಂಬ ಕೋಟೆಯಲ್ಲಿ ಹಾಕಿಸಿದನು. ಆದರೂ ಅವನ ಜೀವವನ್ನು ಮುಟ್ಟಲಿಕ್ಕೆ ಭಯ ಪಟ್ಟನು. ಒಂದೊಂದು ಸಾರಿ ಅವನು ಹೇಳುವದನ್ನು ಕೇಳಿದನು ಸಹಾ; ಒಂದೊಂದು ವಿಷಯದಲ್ಲಿ ಅವನಿಗೆ ಕಿವಿ ಕೊಟ್ಟನು ಸಹಾ; (ಮಾರ್ಕ. ೬, ೨೦.) ಇಲ್ಲಿ ಈ ಕತ್ತಲೆಯಾದ ಬಂದಿಖಾನೆಯಲ್ಲಿ ಬೇರೆ ಸಮಯದಲ್ಲಿ ಪ್ರಕಾಶವುಳ್ಳಂಥಾ ಯೋಹಾನನ ವಿಶ್ವಾಸದೃಷ್ಟಿಯು, ಶೋಧನೆಯ ಘಳಿಗೆಯಲ್ಲಿ ಒಂದು ಸಾರಿ ಸಂಶಯ ಪಡಲಾಗಿ, ಅವನು ತನ್ನ ಶಿಷ್ಯರಲ್ಲಿ ಇಬ್ಬರನ್ನು ಯೇಸುವಿನ ಹತ್ತರ—ಬರುವವನು ನೀನೋ ಬೇರೊಬ್ಬನನ್ನು ಎದುರು ನೋಡಬೇಕೋ ಎಂಬ ಪ್ರಶ್ನೆಯನ್ನು ಕೇಳಲಿಕ್ಕೆ ಕಳುಹಿಸಿದನು. ಯೇಸುವು ತನ್ನ ಅದ್ಭುತಗಳಿಗೆ ಬೆರಳು ತೋರಿಸಿದನು. ಆದರೆ ಸ್ನಾನಿಕನ ವಿಷಯವಾಗಿ ಸಹಾ ಹಳೇ ಒಡಂಬಡಿಕೆಯ ಪ್ರವಾದಿಗಳೆಲ್ಲರಲ್ಲಿ ಈತನೇ ದೊಡ್ಡವನೆಂದು ಸಾಕ್ಷಿ ಕೊಟ್ಟನು. ಆದರೆ ಅದೇ ಸಮಯದಲ್ಲಿ ಪರಲೋಕರಾಜ್ಯದ

ಲ್ಲಿ ಚಿಕ್ಕವನು ಅವನಿಗಿಂತ ದೊಡ್ಡವನಾಗಿರುತ್ತಾನೆಂದು ಸಹಾ ಹೇಳಿದನು (ಮತ್ತಾ. ೧೧, ೧೧). ಕಡೆಯಲ್ಲಿ ಯೋಹಾನನ ತಲೆಯು ಹ್ಯಾಗೂ ಮಾರೆಕಾರರ ಕೈಯಲ್ಲಿ ಬಿತ್ತು. ಹ್ಯಾಗಂದರೆ — ಹೆರೋದನ ಜನ್ಮದಿನದಲ್ಲಿ ಹೆರೋದಿಯಳ ಮಗಳು ಅವನ ಮುಂದೆ ನಾಟ್ಯವಾಡಿ, ಅವನಿಗೆ ಬಹಳ ಸಂತೋಷ ಪಡಿಸಲು, ಅವನು ಏನು ಬೇಡಿದರೂ ಕೊಡುತ್ತೇನೆಂದು ಪ್ರಮಾಣ ಮಾಡಿ ಹೇಳಿದಾಗ, ರಾಜಪುತ್ರಿಯು ತಾಯಿಯ ಬುದ್ಧಿಯ ಪ್ರಕಾರ ಸ್ನಾನಿಕನಾದ ಯೋಹಾನನ ತಲೆಯನ್ನು ತಬಕಿನಲ್ಲಿ ತನಗೆ ತಂದು ಕೊಡ ಬೇಕೆಂದು ಬೇಡಿ ಕೊಂಡಳು. ಮತ್ತು ಹೆರೋದನು ದುಖ್ಖಾಕ್ರಾಂತನಾಗಿದ್ದರೂ ಆಣೆಗೋಸ್ಕರವೂ ಸಂಗಡ ಕೂತವರಿಗೋಸ್ಕರವೂ ಅವಳನ್ನು ಉದಾಸೀನ ಮಾಡ ಮನಸ್ಸಾಗಿರದೆ ಅವನ ತಲೆಯನ್ನು ಬಂದಿಖಾನೆಯಲ್ಲಿ ಕೊಯಿಸಿದನು (ಮಾರ್ಕ. ೬, ೨೮).



## § 118. ಕ್ರಿಸ್ತನ ವಂಶಾವಳಿಯು

ಮತ್ತಾಯ. ೧, ೧೧—೭; ಲೂಕ. ೩, ೨೩—೩೮. ಕ್ರಿಸ್ತನ ವಂಶಾವಳಿಗೆ ಸಮಾನವಾದದ್ದು ಮತ್ತೊಂದು ಇಲ್ಲ. ಹಾಗಂದರೆ ಅದು ಪೂರ್ಣವಾಗಿ ನಾಲ್ಕು ಸಾವಿರ ವರ್ಷ ಪರ್ಯಂತ್ರ ಹೋಗುತ್ತದೆ. ಇದರ ಪ್ರಯೋಜನವು ಏನಂದರೆ — (ಯಾರೊಳಗಿಂದ ರಕ್ಷಣ್ಯವು ಬರ ಬೇಕಾಗಿತ್ತೋ, ಆ) ಇಸ್ರಯೇಲನ ಕುಲಪತಿಗೂ ಕ್ರಿಸ್ತನಿಗೂ ಇರುವ ಸಂಬಂಧವೂ ಅದೇ ಪ್ರಕಾರ (ಯಾರಿಗೆ ಅವನು ರಕ್ಷಕನಾಗಿರ ಬೇಕಾಗಿತ್ತೋ ಆ) ಮನುಷ್ಯಕುಲವೆಲ್ಲಾದರ ಕುಲಪತಿಗೂ, ಆತನಿಗೂ ಇರುವ ಸಂಬಂಧವೂ ಯಾವದಾಗಿತ್ತೆಂಬದನ್ನೂ ಯಾವದಾಗಿರ ಬೇಕಾಗಿತ್ತೆಂಬದನ್ನೂ ತೋರಿಸುವಂಥಾದ್ದೇ. ಕ್ರಿಸ್ತನು ಇಸ್ರಯೇಲ್ಯರ ಕಥೆಗೂ, ಮನುಷ್ಯರೆಲ್ಲರ ಕಥೆಗೂ, ಫಲದೋಪಾದಿಯಲ್ಲಿ ಇದ್ದಾನೆ. ಆದದರಿಂದ ಫಲಕ್ಕೂ ಮೂಲಕ್ಕೂ ಬೇರಿಗೂ ಇರುವ ಮುಖ್ಯ ಸಂಬಂಧವನ್ನು ತೋರಿಸ ಬೇಕಾಯಿತು. ಎರಡು ವಂಶಾವಳಿಗಳು ಒಂದಕ್ಕೊಂದು ಆಧಾರ ಕೊಟ್ಟು ಪೂರ್ಣ ಮಾಡುತ್ತವೆ.

ಮತ್ತಾಯನು ಯೆಹೂದ್ಯರಿಗೋಸ್ಕರ ಬರಿಯುವವನಾಗಿ, ವಂಶಾವಳಿಯನ್ನು ಅಬ್ರಹಾಮನ ಪರ್ಯಂತ್ರ ಮಾತ್ರವೇ ಬರದನು. ಅವನಿಗೆ — ರಕ್ಷಕನು, ಹಳೇ ಒಡಂಬಡಿಕೆಯ ವಾಗ್ದತ್ತದ ಕುಲಕ್ಕೆ ಬಾಧ್ಯಸ್ಥಿಗೆಯ ಸಂಬಂಧವುಳ್ಳವನೆಂದು, ತೋರಿಸುವದು ಸಾಕು.

ಲೂಕನು: ಮ್ಲೇಂಛರಿಗೋಸ್ಕರ ಬರಿಯುವವನಾಗಿ ಕ್ರಿಸ್ತನು ಅವರ ಮಾಂಸವೂ ರಕ್ತವೂ ಆಗಿರುತ್ತಾನೆಂಬದನ್ನು ತೋರಿಸ ಬೇಕಾದದರಿಂದ, ಎಲ್ಲಾ ಜನಾಂಗಗಳ ಒಬ್ಬನೇ ಕುಲಪತಿಯಾದ ಆದಾಮ ಪರ್ಯಂತರಕ್ಕೂ ಹೋಗ ಬೇಕಾಯಿತು.

ಮತ್ತಾಯನು ಮರಿಯಳಿಗೆ ಗಂಡನೂ ಕ್ರಿಸ್ತನಿಗೆ ಸಾಕಣಿ ತಂದೆಯೂ ಸ್ವೀಕರಿಸಿದ ತಂದೆಯೂ ಆಗಿರುವ ಯೋಸೇಫನ ವಂಶಾವಳಿಯನ್ನು ಬರೆದಿಟ್ಟನು.

ಆದರೆ ಲೂಕನು ಯೇಸುವನ್ನು ಹೆತ್ತ ತಾಯಿಯಾದ ಮರೀಯಳ ವಂಶಾವಳಿಯನ್ನು ಬರೆದಿಟ್ಟನು.

ಪರಿಶಿಷ್ಟ. ಯೋಸೇಫನೂ ಮರೀಯಳೂ ಇಬ್ಬರೂ ಜೆರುಬಾಬೆಲದಿಂದ ಬಂದ ಕುಲದವರಾಗಿದ್ದರು. ಆದರೆ ಮತ್ಥಾಯನ ಪ್ರಕಾರ ಜೆರುಬಾಬೆಲನು ಸೊಲೊಮೋನನ ವಂಶದವನೂ, ಲೂಕನ ಪ್ರಕಾರ ದಾವಿದನ ಮತ್ತೊಬ್ಬ ಮಗನಾದ ನಾಥಾನನ (ಜಕರಿಯ. ೧೨, ೧೨.) ವಂಶದವನೂ ಎಂದು ಹೇಳಲಿಕ್ಕೆ ಏನು ಕಾರಣವೆಂದು ಕೇಳಿದ್ದಾದರೆ, ಆ ಸಮಯದಲ್ಲಿ ಇದ್ದ ನಡೆನಡತೆಗಳ ಪ್ರಕಾರ ದೇವರನ ವಿವಾಹ (ಅಂದರೆ ಯೆಕೊನ್ಯನಾಗಲಿ ನೇರಿಯನಾಗಲಿ ಸತ್ತ ಸಹೋದರನ ಹೆಂಡತಿಯನ್ನು ಮದಿವೆ ಮಾಡಿ ಕೊಂಡು, ಇದು) ಆಯಿತು ಎಂತ ನೆನಸ ಬೇಕು. (ಸಮ ನೋಡು § ೬೦.) ಲೂಕನು ಶರೀರಪ್ರಕಾರದ ಪಿತೃಗಳನ್ನೂ, ಮತ್ಥಾಯನು ಪುತ್ರಸ್ವೀಕಾರ ಮಾಡಿದ ಪಿತೃಗಳನ್ನೂ ವಿವರಿಸುತ್ತಾನೆ. ಯಾವ ಕಾರಣದಿಂದ ಮತ್ಥಾಯನು ಯೋಸೇಫನ ವಂಶಾವಳಿಯನ್ನು ಬರೆದನೋ, ಅದೇ ಶರೀರಪ್ರಕಾರದ ವಂಶಾವಳಿಯನ್ನು ಬಿಟ್ಟು, ದೈವ ಅಧಿಕಾರದಲ್ಲಿ ಸ್ಥಾಪಿಸಲ್ಪಟ್ಟದನ್ನು ಮಾತ್ರವೇ ತಿಳಿದು, ಇದನ್ನು ವಿವರಿಸಲಿಕ್ಕೆ ಕಾರಣವಾಯಿತು. ಯೇಸುವನ್ನು ಹಳೇ ಒಡಂಬಡಿಕೆಯಲ್ಲಿ ವಾಗ್ದತ್ತವಾದ ಮೆಸ್ಸೀಯನಾಗಿ ತೋರಿಸುವದೇ ಅವನ ಮುಖ್ಯ ಆಲೋಚನೆಯಾಗಿತ್ತು. ಈ ಆಲೋಚನೆಯನ್ನು ಹಿಡಕೊಂಡರೆ, ಯೇಸುವು ದಾವಿದರಾಜ್ಯಕ್ಕೆ ನ್ಯಾಯಪ್ರಕಾರ ಬಾಧ್ಯಸ್ಥನಾಗಿದ್ದಾನೆಂದೂ, ಅದನ್ನು ಇನ್ನು ನಡಿಯ ಮಾಡುವವನಾಗಿದ್ದಾನೆಂದೂ, ಕಾಣ ಬರ ಮಾಡ ಬೇಕಾಯಿತು. (ಇದನ್ನು ೨ ಸಮು. ೭ನೇ ಸಂಧಿಯಲ್ಲಿರುವ ಅಸ್ಥಿವಾರದ ಪ್ರವಾದನೆಯು ಅವಶ್ಯ ಮಾಡಿತು. ಸಮ ನೋಡು § ೬೭, ೧.) ಹೀಗಾಗಿ ಮತ್ಥಾಯನು ಯೇಸುವಿಗೂ, ದಾವಿದನ ಮನತನದಲ್ಲಿ ಸೊಲೊಮೋನನ ಮಂತಾನಕ್ಕೂ, ಇರುವ ಬಾಧ್ಯಸ್ಥಿಕೆಯ ಸಂಬಂಧವನ್ನು ತೋರಿಸ ಬೇಕಾಯಿತು. ಯೋಸೇಫನು ಈ ಮನೆಯ ಮಂತಾನದವನಾಗಿದ್ದನು. ದಾವಿದನ ಸಿಂಹಾಸನಕ್ಕೆ ದೈವಾಧಿಕಾರದ ಪ್ರಕಾರವಾಗಿದ್ದ ಅವನಿಗಿದ್ದ ಬಾಧ್ಯತೆಯು, ದೇವರು ಸಂಭವಿಸ ಮಾಡಿದ ಪ್ರಕಾರ ಯೋಸೇಫನು

ಮರೀಯಳನ್ನು ಮದಿವೆ ಮಾಡಿ ಕೊಂಡಿರಲಾಗಿ, ಅವಳಲ್ಲಿ ಹುಟ್ಟಿ, ಇವನಿಂದ ಸ್ವೀಕರಿಸಲ್ಪಟ್ಟ ದಿವ್ಯ ಮಗನಿಗೆ ಶಿಕ್ಕಿತು. ಇದಲ್ಲದೆ ಕ್ರಿಸ್ತನ ಸಾಕಣೆ ತಂದೆಯು ಸತ್ಯವಾಗಿ ದಾವಿದನ ಮಗನಾಗಿರುವದು ಅವಶ್ಯವಾಗಿತ್ತು. ಶಿಕ್ಷಾಭ್ಯಾಸವು ಎಷ್ಟು ವಿಶೇಷವಾಗಿರುತ್ತದೆಂಬದನ್ನು ಚನ್ನಾಗಿ ಆಲೋಚಿಸಿದ್ದಾದರೆ, ಮರೀಯಳ ಗಂಡನೂ, ಕ್ರಿಸ್ತನಿಗೆ ಶಿಕ್ಷಾಭ್ಯಾಸ ಕೊಟ್ಟವನೂ ಯಾರೆಂಬದು ಸರ್ವಥಾ ಅಲ್ಪವಾದದ್ದಲ್ಲ. (ಸಮ ನೋಡು. § ೧೨೩.)

ಆದರೆ ಲೂಕನು ಮ್ಲೇಂಛ ಕ್ರೈಸ್ತಸ್ಥಾನದಲ್ಲಿ ನಿಂತಿರಲಾಗಿ, ದೈವಾಧಿಕಾರದ ಪ್ರಕಾರ ನ್ಯಾಯವಾದ ಕ್ರಿಸ್ತನ ಬಾಧ್ಯಸ್ಥಿಗೆಯನ್ನು ಸ್ಥಾಪಿಸಲಿಕ್ಕೆ ಅವನಿಗೆ ಕಾರಣ ಇರಲಿಲ್ಲ. ಯೇಸುವು ಶರೀರದ ಪ್ರಕಾರ ದಾವಿದನ ಸಂತಾನದವನೆಂಬದನ್ನು ತೋರಿಸುವದು ಲೂಕನಿಗೆ ಹೆಚ್ಚಾದದ್ದಾಗಿತ್ತು. ಮೇಲೆ ಹೇಳಿದ ಪ್ರಕಾರ ಎರಡು ವಂಶಾವಳಿಗಳನ್ನು ಒಟ್ಟಿಗೆ ವಿಚಾರಿಸುವದಾದರೆ ಕೆಳಗೆ ಬರುವ ಪ್ರಕಾರ ಇರಬೇಕೆಂದು ಕಾಣುವದು.






## § 119. ಕನ್ನಿಕೆ ಮರೀಯಳು

೧) ದಾವಿದನ ರಾಜಮಂತಾನದ ಸಧರ್ಮಿಯಾದ ಮರೀಯಳೆಂಬ ಕನ್ನಿಕೆ ಇದ್ದಳು. ಈಕೆಯು ಲೋಕದ ಮುಂದೆ ಬಡವಳೂ ಅಲ್ಪಳೂ ಆಗಿದ್ದಳು. ಆದರೆ ಕರ್ತನ ಮುಂದೆ ಅಮೂಲ್ಯವಾಗಿಯೂ ಆಯಿದು ಕೊಳ್ಳಲ್ಪಟ್ಟವಳಾಗಿಯೂ ಶಿಶುಪ್ರಾಯದ ದೀನತ್ವದಲ್ಲಿ ಸಂಪನ್ನಳಾಗಿಯೂ ಪ್ರೀತಿಯಲ್ಲಿ ಮೃದುವಾಗಿಯೂ ವಿಶ್ವಾಸದಲ್ಲಿ ತನ್ನನ್ನು ಪೂರ್ಣವಾಗಿ ದೇವರಿಗೆ ಒಪ್ಪಿಸಿ ಕೊಟ್ಟವಳಾಗಿಯೂ ಇದ್ದಳು. ಈ ಸ್ತ್ರೀಯು ರಕ್ಷಕನ ತಾಯಿಯಾಗಲಿಕ್ಕೆ ಆಯಲ್ಪಟ್ಟವಳಾಗಿದ್ದಳು. (ಸಮ ನೋಡು § ೧೨೩.) ಇವಳಲ್ಲಿ ಸ್ತ್ರೀತನವು ಮನೋಹರವಾಗಿ ಸಫಲವಾಯಿತು. ಇವಳಲ್ಲಿ ಸ್ತ್ರೀಯ ಶ್ರೇಷ್ಠ ಪ್ರಯೋಜನವು ಸಾಧ್ಯವಾಯಿತು. ಆದದರಿಂದಲೇ ಅವಳಲ್ಲಿ ಸ್ತ್ರೀಸಂತತಿ ಯೆಲ್ಲಾ ಆಶೀರ್ವದಿಸಲ್ಪಟ್ಟಿತು. ಇವಳು ೨ನೇ ಆದಾಮನ ತಾಯಿಯಾಗಿರಲಾಗಿ ಈ ಆದಾಮನಲ್ಲಿ ಮನುಷ್ಯಸಂತತಿಯ ಹೊಸ ಬೆಳಿಯುವಿಕೆಯು ಆರಂಭವಾದದರಿಂದ ಮೊದಲನೇ ಸ್ತ್ರೀಯ ಪ್ರತಿರೂಪವಾದವಳಾಗಿ ಹೆಚ್ಚು ಅರ್ಥದಲ್ಲಿ ಎಲ್ಲಾ ಜೀವದ ತಾಯಿ ಆದಳು. ಅವಳ ಪಿತೃಗಳ ದೊಡ್ಡ ಪಂಕ್ತಿಯಲ್ಲಿಯೇ ಕರ್ತನು ಅವಳನ್ನು ಆಯಿದು ಕೊಂಡಿದ್ದನು. ಅವಳಿಗಾಗಿಯೇ ಅಬ್ರಹಾಮನು ಕರಿಯಲ್ಪಟ್ಟನು; ದಾವಿದನು ಅಭಿಷೇಕಿಸಲ್ಪಟ್ಟನು ಎಂದು ಇತ್ಯಾದಿ ಹೇಳ ಬೇಕು. ಹ್ಯಾಗಂದರೆ ಯಾರ ಗರ್ಭದಲ್ಲಿ ದೇವರು ತಾನೇ ಮನುಷ್ಯಸ್ವಭಾವವನ್ನೂ ಮನುಷ್ಯರೂಪವನ್ನೂ ತೆಕ್ಕೊಳ್ಳ ಬಹುದಾಗಿತ್ತೋ ಆ ಸ್ತ್ರೀಯು ಹಡಿಯೋಣಗಳ ಉದ್ದ ಪಂಕ್ತಿಯ ಗುರಿಯಾಗಿದ್ದಳು. ಈ ಪಂಕ್ತಿಯು ಸಹಾ ಮನುಷ್ಯರ ಪಾಪಸ್ಥಿತಿಯ ಸರ್ವತ್ರವಾದ ಶಾಪದಲ್ಲಿ ಒಟ್ಟಿಗೆ ಶಿಕ್ಕಿ ಕೊಂಡದ್ದಾಗಿದ್ದರೂ, (ಕೀರ್ತನೆ. ೫೧, ೫.) ದಿವ್ಯ ಸುಯೋಚನೆಯ ಆಶೀರ್ವಾದಬಲದಿಂದ ಆದರಿಸಲ್ಪಟ್ಟು, ಭಂಗಾರದ ಸಂಕೋಲೆಯ ಹಾಗೆ ಬಳೆಯಿಂದ ಬಳೆಗೆ ಕ್ರೈಸ್ತತ್ವವನ್ನು ಸಿದ್ಧ ಮಾಡುವಂಥಾದ್ದಾಗಿ ಕಡೇ ವರೆಗೂ ಪ್ರವರ್ತಿಸುತ್ತಾ ಬಂತು. ಮರೀಯಳು ಈ ಸಂಕೋಲೆಯ ಕಡೇ ಬಳೆಯಾಗಿದ್ದಳು. ಇದರಲ್ಲಿ ಬರೇ ಮಾನುಷ್ಯವಾದ ಹುಟ್ಟಿಸುವಿಕೆಯು ನಿಂತು ಹೋಯಿತು. ಮತ್ತು ಪೂರ್ಣವಾಗಿ ದಿವ್ಯವಾದಂಥಾ ಹಳೇ ಒಡಂಬಡಿಕೆಯಲ್ಲಿ ಶಿದ್ಧವಾಗುತ್ತಾ ಬಂದಿರುವದನ್ನೆಲ್ಲಾ ತೀರಿಸುವಂಥಾ ಹುಟ್ಟಿಸೋಣಕ್ಕೆ ಎಡೆಬಿಡ ಬೇಕಾಯಿತು.

ಪರಿಶಿಷ್ಟ. ಮರೀಯಳ ಶುದ್ಧ ಕರಿಯುವಿಕೆಯಲ್ಲಿ ಅವಳ ಕುಲವೆಲ್ಲಾ ಸನ್ಮಾನಿಸಲ್ಪಟ್ಟಿತು. ಹ್ಯಾಗಂದರೆ ಅವಳು ತನ್ನ ಕುಲಕ್ಕೆ ಪ್ರತಿನಿಧಿಯಾಗಿ ಇದ್ದಳು. ಮೊ

ದಲಿನೇ ಸ್ತ್ರೀಯಿಂದ ಎಲ್ಲಾ ಸ್ತ್ರೀ ಕುಲದ ಮೇಲೆ ಬಂದ ನಾಚಿಕೆಯೂ ಶಾಪವೂ ಅವಳಲ್ಲಿ ನಿರ್ಮೂಲವಾಯಿತು. ಮತ್ತು ಸ್ತ್ರೀಯು ಪಾಪವು ಕೆಳಗೆ ಹಾಕಿದ ಗುಂಡಿಯಿಂದ ತಿರಿಗಿ ಮೇಲೆ ಬಂದಳು. ಅಂದಿನಿಂದ ಇಷ್ಟು ವರೆಗೆ ಬಹು ತರವಾಗಿ ಬಿತ್ತಿಯಕ್ಕೂ ತುಚ್ಛೀಕಾರಕ್ಕೂ ವಶವಾದ ಈ ಕುಲವು ಪೂರ್ಣವಾಗಿ ಬೇರೊಂದು ಮತ್ತು ಉನ್ನತವಾದ ಸ್ಥಾನವನ್ನು ಹೊಂದಿತು. (ಸಮ ನೋಡು § ೧೨೬, ೧.) ದೂತನು ದೈನ್ಯವಾಗಿಯೂ ಶಾಂತವಾಗಿಯೂ ಇರುವಂಥ ಕರ್ತನ ದಾಸಿಗೆ ಮಾಡಿದ ಆ ಆಶ್ಚರ್ಯಕರವಾದ ವಂದನೆಯು ಸ್ತ್ರೀಕುಲದ ಚರಿತ್ರದಲ್ಲಿ ಬೇರೊಂದು ಆಗಮಿಕ್ಕೆ ಆರಂಭ ಮಾಡಿತು. ಅದು ಈ ವಿಷಯದಲ್ಲಿ ಸಹಾ ಲೋಕಚರಿತ್ರದಲ್ಲಿ ವಿಶೇಷವಾದ ವಂದನೆಯಾಗಿರುತ್ತದೆ.

೨) ಲೂಕ. ೧, ೨೬. ಮೊದಲಾದ ಶ್ಲೋಕಗಳು. ಯೋಹಾನನನ್ನು ಕುರಿತು ಸಾರಿದ ಆರನೇ ತಿಂಗಳಲ್ಲಿ ದೂತನಾದ ಗಬ್ರಿಯೇಲನು ಕನ್ನಿಕೆಯಾದ ಮರೀಯಳ ಮುಂದೆ ಪ್ರತ್ಯಕ್ಷವಾಗಿ ಕೃಪೆ ಹೊಂದಿದವಳೇ ಶುಭವಾಗಲಿ! ಕರ್ತನು ನಿನ್ನ ಸಂಗಡ ಇದ್ದಾನೆ; ಹೆಂಗಸರಲ್ಲಿ ನೀನು ಆಶೀರ್ವದಿಸಲ್ಪಟ್ಟವಳು ಎಂದು ವಂದಿಸಿ, ಅವಳಿಗೆ ಹೇಳಿದ್ದೇನಂದರೆ — ಪರಿಶುದ್ಧಾತ್ಮವು ನಿನ್ನ ಮೇಲೆ ಬರುವದು, ಮತ್ತು ಮಹೋನ್ನತನ ಬಲವು ನಿನ್ನ ಮೇಲೆ ನೆರಳಾಗಿರುವದು. ಆದದರಿಂದ ಹುಟ್ಟುವ ಪರಿಶುದ್ಧವಾದದ್ದು ದೇವರ ಮಗನೆಂದು ಕರಿಯಲ್ಪಡುವದು. ಆದರೆ ಮರೀಯಳು ಹೇಳುವದು “ಇಗೋ ನಾನು ಕರ್ತನ ದಾಸಿಯು, ನಿನ್ನ ಮಾತಿನ ಮೇರೆಗೆ ನನಗಾಗಲಿ”. ಮತ್ತು ಸ್ವಲ್ಪ ಕಾಲದ ಮೇಲೆ ಮರೀಯಳು ನೆಂಟಳಾದ ಯೆಲಿಸಬೇಥಳನ್ನು ನೋಡಲಿಕ್ಕೆ ಬಂದಾಗ, ಈಕೆಯು ಅವಳಿಗೆ ಹೇಳಿದ್ದೇನಂದರೆ: ನೀನು ಸ್ತ್ರೀಯರಲ್ಲಿ ಆಶೀರ್ವದಿಸಲ್ಪಟ್ಟವಳು ಮತ್ತು ನಿನ್ನ ಗರ್ಭದ ಫಲವು ಆಶೀರ್ವದಿಸಲ್ಪಟ್ಟದ್ದು; ಇದಲ್ಲದೆ ನನ್ನ ಕರ್ತನ ತಾಯಿಯು ನನ್ನ ಬಳಿಗೆ ಬರುವದು ಹ್ಯಾಗೆ ಉಂಟಾಯಿತು. ಯಾಕಂದರೆ ಇಗೋ ನಿನ್ನ ವಂದನೆಯ ಶಬ್ದವು ನನ್ನ ಕಿವಿಗಳಿಗೆ ಬಂದಾಗ, ಕೂಸು ನನ್ನ ಗರ್ಭದಲ್ಲಿ ಉಲ್ಲಾಸದಿಂದ ಹಾರ್ಯಾಡಿತು. ಆಗೈ ಮರೀಯಳ ಹೃದಯವು ಕೃತಜ್ಞತೆಯಿಂದಲೂ, ಸ್ತೋತ್ರದಿಂದಲೂ ತುಂಬಿದ್ದಾಗಿ ಅವಳು ತನಗೆ ಮಹಾ ಕೃತ್ಯಗಳನ್ನು ಮಾಡಿದ ಕರ್ತನನ್ನು ಸ್ತುತಿಸಿದಳು. ಯಾಕಂದರೆ (ಹೀಗೆ ಅವಳು ಹೇಳಿದ್ದು:) ತನ್ನ ದಾಸಿಯ ದೀನತ್ವದ ಮೇಲೆ ಆತನು ದೃಷ್ಟಿ ಇಟ್ಟಿದ್ದಾನೆ. ಇದಕ್ಕೋಸ್ಕರ ಇಗೋ ಇಂದಿನಿಂದ ಸಕಲ ತಲಾಂತರಗಳು ನನ್ನನ್ನು ಭಾಗ್ಯವಂತಳೆಂದು ಹೇಳುವವು.



## § 120. ಯೇಸುವಿನ ಜನನವು

ಯೆಶಾಯ. ೭, ೧೪. ವ ಇಗೋ ಕನ್ನಿಕೆಯು. (ಸಮ ನೋಡು § ೮೭, ೧.) ಮಿಕ. ೫ ೨. ಮತ್ತು ನೀನು ಬೆಥ್ಲೆಹೇಮ ಎಫ್ರಾತಾ (ಸಮ ನೋಡು § ೮೭, ೩.)

ಮತ್ತಾ. ೧, ೧೮—೨೫. ಲೂಕ. ೨, ೧—೨೦. ನಜರೇಥಿನವನಾದ ಯೋಸೇಫನು ಕನಸಿನಲ್ಲಿ ಈ ಸಂಗತಿಗಳ ವಿಷಯವಾಗಿ ದೂತನಿಂದ ಕೇಳಿ, ತನಗೆ ನೇಮಕವಾದ ಮದಲಗಿತ್ತಿ ಮರೀಯಳನ್ನು ತನ್ನ ಬಳಿಗೆ ಕರಕೊಂಡು ಬರುತ್ತಾನೆ. ಮತ್ತು ಕೈಸರನಾದ ಔಗುಸ್ತನು ಅದೇ ಸಮಯದಲ್ಲಿ ಜಗತ್ತೆಲ್ಲಾ ಲೆಖ್ಖ ಬರಸಿ ಕೊಳ್ಳ ಬೇಕೆಂದು ಆಜ್ಞಾಪಿಸಲಾಗಿ, ಅವನು ಸಹಾ ದಾವಿದ್ಯನಾಗಿರಲಾಗಿ ಅವಳೊಡನೆ ಕುಲಸ್ಥಳವಾದ ಬೆಥ್ಲೆಹೇಮಕ್ಕೆ ಹೋಗ ಬೇಕಾಯಿತು. ಅಲ್ಲಿ ಮರೀಯಳು ಹೆತ್ತು ತನ್ನ ಚೊಚ್ಚಲ ಮಗನನ್ನು ಬಟ್ಟೆಯಲ್ಲಿ ಸುತ್ತಿ ಛತ್ರದಲ್ಲಿ ತಮಗೆ ಸ್ಥಳವಿಲ್ಲದ ಕಾರಣ ಗೋದಲಿಯಲ್ಲಿ ಮಲಗಿಸಿದಳು. ಯೆರೂಸಲೇಮದ ಶಾಸ್ತ್ರಿಗಳಿಗಲ್ಲ, ಹೊಲದಲ್ಲಿದ್ದ ಕುರುಬರಿಗೆ ಮೊದಲಾಗಿ ಈ ಸಂತೋಷವಾರ್ತೆಯು ತಿಳಿಸಲ್ಪಟ್ಟಿತು. ಕರ್ತನ ಮಹಿಮೆಯು ಅವರ ಸುತ್ತ ಪ್ರಕಾಶಿಸಿತು. ಮತ್ತು ಕರ್ತನ ದೂತನು ಅವರಿಗೆ ಹೇಳಿದ್ದು — ಜನರಿಗೆಲ್ಲಾ ಉಂಟಾಗುವ ಮಹಾ ಸಂತೋಷವನ್ನು ನಿಮಗೆ ಪ್ರಸಂಗಿಸುತ್ತೇನೆ. ಹೇನಂದರೆ — ಈ ಹೊತ್ತು ಕರ್ತನಾದ ಕ್ರಿಸ್ತನೆಂಬ ರಕ್ಷಕನು ದಾವಿದನ ಪಟ್ಟಣದಲ್ಲಿ ಹುಟ್ಟಿದ್ದಾನೆ. ಕೂಡಲೇ ಪರಲೋಕದ ಸೈನ್ಯದ ಸಮೂಹವು ದೂತನ ಕೂಡಾ ಇತ್ತು. ಅವರು ದೇವರನ್ನು ಹೊಗಳಿ ಹೇಳಿದ್ದೇನಂದರೆ: ಮಹೋನ್ನತವಾದವುಗಳಲ್ಲಿ ದೇವರಿಗೆ ಮಹಿಮೆಯೂ ಭೂಮಿಯ ಮೇಲೆ ಸಮಾಧಾನವೂ ಮನುಷ್ಯರಲ್ಲಿ ದಯವೂ. ದೂತರು ಅವರನ್ನು ಬಿಟ್ಟು ಪರಲೋಕಕ್ಕೆ ಹೋದ ಮೇಲೆ ಕುರುಬರು ಅಲ್ಲಿಗೆ ಹೋಗಿ ಕೂಸನ್ನು ಕಂಡು, ಈ ಕೂಸಿನ ವಿಷಯವಾಗಿ ತಮಗೆ ಹೇಳಿದ ಮಾತನ್ನು ಪ್ರಕಟ ಮಾಡಿದರು. ಮರೀಯಳು ಈ ಮಾತುಗಳನ್ನೆಲ್ಲಾ ತನ್ನ ಹೃದಯದಲ್ಲಿ ಆಲೋಚಿಸಿ ಇಟ್ಟು ಕೊಂಡಳು. ಕುರುಬರು ತಮಗೆ ಹೇಳಲ್ಪಟ್ಟ ಹಾಗೆ ತಾವು ಕೇಳಿ ನೋಡಿ ಎಲ್ಲವುಗಳಿಗೋಸ್ಕರ ದೇವರನ್ನು ಮಹಿಮೆ ಪಡಿಸಿ ಹೊಗಳಿದರು.

ಪರಿಶಿಷ್ಟ ೧. "ಪರಿಶುದ್ಧಾತ್ಮದಿಂದ ಗರ್ಭಸ್ತನಾದವನು ಮರೀಯಳೆಂಬ ಕನ್ನಿಕೆಯಿಂದ ಹುಟ್ಟಿದವನು." ಅಪೊಸ್ತಲಿಯ ವಿಶ್ವಾಸ ಪ್ರಮಾಣದ ಈ ಮಾತುಗಳಿಂದ ದೇವರು ಮನುಷ್ಯನಾದದರ ಎರಡು ಭಾಗಗಳು ಹೇಳಿಯವೆ. ೧. ಮೊದಲನೇದರಿಂದ ಮನುಷ್ಯಸಂತತಿಯೊಡನೆ ಸಹೋದ್ಭವ ಪಾಪದ ಸಂಬಂಧವು ಅಲ್ಲಗಳಿಯಲ್ಪಡುತ್ತವೆ.

೨ನೇದರಿಂದ ಸ್ವಭಾವ ಆಕಾರಗಳ ಏಕತ್ವವು ಸಾಧಿಸಲ್ಪಡುತ್ತದೆ. ಕ್ರಿಸ್ತನು ಒಂದು ಕಡೆಯಲ್ಲಿ ಲೋಕವನ್ನು ಪಾಪಕ್ಕೆ ಬಿಡುಗಡೆ ಮಾಡಲಿಕ್ಕಾಗಿ ಪಾಪವಿಲ್ಲದವನಾಗಿರ ಬೇಕಾಯಿತು. ಹಾಗಾದರೆ ಅವನು ನಮ್ಮೆಲ್ಲರ ಹಾಗೆ ತಂದೆ ತಾಯಿಗಳಿಂದ ಹುಟ್ಟಿದರೆ ಆಗುತ್ತಿದ್ದಿಲ್ಲ. ಯಾಕಂದರೆ ಹಾಗೆ ಆದದ್ದಾದರೆ ಮನುಷ್ಯಸಂತತಿಯ ಸಹೋದ್ಭವ ಪಾಪಭಾವವು ಅವನಲ್ಲಿಯೂ ಬರುತಿತ್ತು. ಅವನ ಮನುಷ್ಯಭಾವವು ಮೊದಲು ಕೇಳದಂಥಾ ಆಶ್ಚರ್ಯಕರವಾದ ರೀತಿಯಲ್ಲಿ ಸರ್ವತ್ರಾಣದಿಂದ ಉಂಟಾಗ ಬೇಕಾಯಿತು.

ಆದರೆ ಮತ್ತೊಂದು ಕಡೆಯಲ್ಲಿ ಅವನು ಎಲ್ಲಾ ಮನುಷ್ಯಸಂತತಿಯ ಸಂಗಡ ನಿಜವಾದಂಥಾ ಅವಶ್ಯವಾದ ಸಂಬಂಧವುಳ್ಳವನಾಗಿರ ಬೇಕಾಯಿತು; ಅವನು ಎಲ್ಲಾದರಲ್ಲಿ ಪಾಪ ಮಾತ್ರ ಹೊರ್ತು ನಮ್ಮ ಹಾಗೆಯೇ ಆಗ ಬೇಕಾಯಿತು; ನಮ್ಮ ಹಾಗೆಯೇ ಬದುಕೋಣದರ ಕಾರಣಗಳಿಗೆ ಕೆಳಗಾಗ ಬೇಕಾಯಿತು. ಆದದರಿಂದ ನಮ್ಮ ಹಾಗೆಯೇ ಸ್ತ್ರೀಯಿಂದ ಹುಟ್ಟ ಬೇಕಾಯಿತು. ಆದದರಿಂದ ಅವನ ಮನುಷ್ಯಸ್ವಭಾವವು ತಾನೇ ಪಾಪವಿಲ್ಲದ್ದಾಗಿದ್ದರೂ ಪಾಪದಿಂದ ಬಂದದ್ದನ್ನೆಲ್ಲಾ ಅಂದರೆ ನಮ್ಮ ಸ್ವಭಾವದ ಎಲ್ಲಾ ಸಹಾಯಹೀನತ್ವವನ್ನೂ ಬಲಹೀನತ್ವವನ್ನೂ ಎಲ್ಲಾ ಕೊರತೆಗಳನ್ನೂ ಕಷ್ಟಗಳನ್ನೂ ತನ್ನ ಮೇಲೆ ತಕ್ಕೊಂಡಿತು. ಪೌಲನು ರೋಮಾ. ೮, ೩ರಲ್ಲಿ ಹೇಳುವ ಪ್ರಕಾರ ಪಾಪಮಾಂಸದ ಹೋಲಿಕೆಯಾಗಿ ಅವನು ಕಾಣಿಸಿಕೊಂಡನು. ಮನುಷ್ಯಸಂತತಿಯನ್ನು ವಿಮೋಚಿಸ ಬೇಕಾದರೆ, (ಹಾಗಂದರೆ ಬೆಳೆಯುತ್ತಾ ಬಂದ ಸುಳ್ಳು ಮಾರ್ಗವನ್ನು ತೆಗದು, ಸತ್ಯಮಾರ್ಗವನ್ನು ಸ್ಥಾಪಿಸ ಬೇಕಾದರೆ) ಸುಳ್ಳು ಮಾರ್ಗವು ಎಲ್ಲಿ ಪರ್ಯಂತರ ಬಂದು ಮುಟ್ಟಿತೋ ಅಲ್ಲಿಯೇ ಅವನು ಸಹಾ ಬಂದು ನಿಲ್ಲ ಬೇಕಾಯಿತು. ಅತಿ ಭಕ್ತಿಯುಳ್ಳವಳಾಗಿಯೂ ಶಿಶುಪ್ರಾಯವಾಗಿ ವಿಶ್ವಾಸಿಸುವವಳಾಗಿಯೂ (ಇದ್ದರೂ ಹ್ಯಾಗೂ,) ಪಾಪಿಯಾದ ಸ್ತ್ರೀಯಿಂದ ಹುಟ್ಟಿದರೂ ಕ್ರಿಸ್ತನು ಎಲ್ಲಾ ಮನುಷ್ಯರಲ್ಲಿ ಇರುವ ಸಹೋದ್ಭವ ಪಾಪಕ್ಕೆ ಎಷ್ಟು ಮಾತ್ರವು ಒಳಗಾಗಲಿಲ್ಲ. ಹ್ಯಾಗೆ ಒಳ್ಳೇ ಇಪ್ಪೇ ಮರದ ಗೆಲ್ಲು ಕಾಡುಇಪ್ಪೆಯ ಮರದಲ್ಲಿ ಒಳನೆಡಲ್ಪಟ್ಟರೂ ಅದರಿಂದ ಕೆಟ್ಟ ಗುಣಗಳನ್ನು ತೆಕ್ಕೊಳ್ಳುವದಿಲ್ಲವೋ ಹಾಗೆಯೇ ಇಲ್ಲಿ ಸಹಾ ಆಯಿತು.

ಪರಿಶಿಷ್ಟ ೨. ಕ್ರಿಸ್ತನು ಹುಟ್ಟಿದ ವರ್ಷದ ವಿಷಯವಾಗಿ ವಿದ್ವಾಂಸರು ಏಕಮತ್ಯವಾಗಿ ಇರುವದಿಲ್ಲ. ನಮಗೆ ಈಗ ಇರುವ ಶಕಾಬ್ದವು (ದಿಯೊನೂಸ್ಯಶಕ, ಯಾಕಂದರೆ ದಿಯೊನೂಸ್ಯನೆಂಬ ೬ನೇ ಶತವರ್ಷದ ಬೈರಾಗಿಯೂ ನಿಶ್ಚೈಸಿದಂಥಾದ್ದು,) ತಪ್ಪು ಎಂಬದನ್ನು ಎಲ್ಲರೂ ನಂಬುತ್ತಾರೆ; ಹ್ಯಾಗಂದರೆ ದೊಡ್ಡ ಹೆರೋದನು ಕ್ರಿಸ್ತನು ಹುಟ್ಟಿದ ಮೇಲೆ ಸ್ವಲ್ಪ ಕಾಲವಾದರೂ ಬದುಕಿರ ಬೇಕು. ಆದರೆ ನಮ್ಮ ಶಕಾಬ್ದದ

ಆರಂಭದ ಮೊದಲೇ ಸತ್ತಿರ ಬೇಕೆಂಬದು ಸಹಾ ನಿಶ್ಚಯ. ಆದರೆ ಕ್ರಿಸ್ತನ ಜನನವು ಆದದ್ದು ಎರಡೋ ನಾಲ್ಕೋ ಏಳು ವರುಷದ ಮೊದಲೋ ಎಂಬದು ಮಾತ್ರ ಇನ್ನೂ ನಿಶ್ಚಯವಿಲ್ಲ.



## § 121. ಯೇಸುವಿನ ಪರಿಚ್ಛೇದನೆಯೂ ದೇವದರ್ಶನವೂ

೧) ಲೂಕ. ೨, ೨೧. ಎಂಟನೇ ದಿವಸದಲ್ಲಿ ನೇಮದ ಪ್ರಕಾರ ಬಾಲಕಕ್ಕೆ ಪರಿಚ್ಛೇದನೆ ಆಯಿತು. ಮತ್ತು ಯೇಸುವೆಂಬ ಹೆಸರು ಇಡಲ್ಪಟ್ಟಿತು. (ಯೇಸು ಅಂದರೆ ರಕ್ಷಕನು) ಈ ಹೆಸರನ್ನು ದೂತನು ಮೊದಲು ಮರೀಯಳಿಗೂ (ಲೂಕ. ೧, ३೧.) ಮತ್ತೆ ಸ್ವಪ್ನದಲ್ಲಿ ಯಾೀಸೇಫನಿಗೆ ಸಹಾ (ಮತ್ಥಾ. ೧, ೨೧.) ಮುಂದಾಗಿ ತಿಳಿಸಿದ್ದನು.

ಪರಿಶಿಷ್ಟ. ಕ್ರಿಸ್ತನು ಸ್ತ್ರೀಯಿಂದ ಹುಟ್ಟಿರಲಾಗಿ ಸಮಸ್ತ ಮನುಷ್ಯರಿಗೆ ಸ್ವಭಾವಿಕವಾದ ಬದುಕೋಣದರ ಕಾರಣಗಳಲ್ಲಿಯೂ ಸ್ಥಿತಿಗಳಲ್ಲಿಯೂ ಸೇರಿ, ಸಮಸ್ತ ಮನುಷ್ಯರಿಗೆ ಸ್ವಭಾವಿಕವಾದ ಬದುಕೋಣದರ ನೇಮಗಳಿಗೆ ಹ್ಯಾಗೆ ಒಳಗಾಗ ಬೇಕಾಯಿತೋ ಅದೇ ಪ್ರಕಾರ ಪರಿಚ್ಛೇದನೆಯಿಂದ ಪ್ರತ್ಯೇಕವಾದ ಯೆಹೂದ್ಯಸ್ಥಿತಿಗಳಲ್ಲಿ ಸೇರಿ, ಪ್ರತ್ಯೇಕವಾದ ಯೆಹೂದ್ಯ ನೇಮಗಳಿಗೆ (ಗಲಾ. ೪, ೪.) ಬೇರೊಬ್ಬ ಇಸ್ರಯೇಲ್ಯನ ಹಾಗೆಯೇ ಒಳಗಾಗ ಬೇಕಾಯಿತು. ಕ್ರಿಸ್ತನು ಅಬ್ರಹಾಮನ ಬೀಜವಾದದ್ದು ಅಕಸ್ಮಾತಾಗಿಯೂ ಸಾಧಾರಣವಾಗಿಯೂ ಇರುವದಿಲ್ಲ; ಅದು ರಕ್ಷಣ್ಯದ ಆಲೋಚನೆಗೆ ಅವಶ್ಯವಾಗಿತ್ತು. ೨ಸಾವಿರ ವರ್ಷ ಪರ್ಯಂತರ ರಕ್ಷಣ್ಯವು ಸಿದ್ಧವಾದದ್ದಲ್ಲಿಯೇ ರಕ್ಷಕನು ಅಲ್ಲಿಂದ ಕೆಲಸವನ್ನು ಮುಂದೆ ನಡಿಸಿ ಅಂತ್ಯ ಮಾಡುವದಕ್ಕೋಸ್ಕರವೂ ನೇಮ ವಾಗ್ದತ್ತಗಳನ್ನು ಸಂಪೂರ್ಣ ಮಾಡುವದಕ್ಕೋಸ್ಕರವೂ ಒಳಗೆ ಸೇರ ಬೇಕಾಯಿತು.

೨) ಲೂಕ. ೨, ೨೨ ಮೊದಲಾದ ಶ್ಲೋಕಗಳು. ಅದೇ ಕಾರಣದಿಂದಲೇ ಅವನು ಯೆಹೂದ್ಯರಲ್ಲಿದ್ದ ಶುದ್ಧೀಕರಣದ ದಿವಸಗಳು ಪೂರ್ಣವಾದ ಮೇಲೆ (३ ಮೋಶೆ. ೧೨, ೨. ಮೊದಲಾದವುಗಳು) ೪೦ ನೇ ದಿವಸದಲ್ಲಿ ಚೊಚ್ಚಲ ಮಗುವಿಗೆ ನಿಶ್ಚಯಿಸಿದ ಬಲಿಯಾಡನೆ ದೇವಾಲಯದಲ್ಲಿ ಒಪ್ಪಿಸಲ್ಪಟ್ಟನು. ಆಗಾ ಆತ್ಮದ ಪ್ರೇರೇಪಣೆಯಿಂದ ದೇವಾಲಯದಲ್ಲಿ ಸಿಮೆಯಾನನೆಂಬ ಒಬ್ಬ ಮನುಷ್ಯನಿದ್ದ

ನು. ಇವನು ಇಸ್ರಯೇಲನ ಆದರಣೆಯನ್ನು ಎದುರು ನೋಡುತ್ತಾ ಇದ್ದನು. ಕರ್ತನ ಕ್ರಿಸ್ತನನ್ನು ನೋಡುವದಕ್ಕಿಂತ ಮುಂಚೆ ಮರಣವನ್ನು ನೋಡುವದಿಲ್ಲವೆಂದು ಪರಿಶುದ್ಧಾತ್ಮದಿಂದ ಅವನಿಗೆ ದೈವೋತ್ತರ ಉಂಟಾಗಿತ್ತು. ಅವನು ಕೂಸನ್ನು ತನ್ನ ಕೈಗಳಲ್ಲಿ ತಕ್ಕೊಂಡು, ದೇವರಿಗೆ ಸ್ತೋತ್ರ ಮಾಡಿ ಹೇಳಿದ್ದೇನಂದರೆ — ಪ್ರಭುವೇ ಈಗ ನಿನ್ನ ವಾಕ್ಯದ ಪ್ರಕಾರ ನಿನ್ನ ದಾಸನನ್ನು ಸಮಾಧಾನವಾಗಿ ಕಳುಹಿಸಿ ಬಿಡುತ್ತಿ, ಯಾಕಂದರೆ ನಿನ್ನ ರಕ್ಷಣೆಯನ್ನು ನನ್ನ ಕಣ್ಣುಗಳು ಕಂಡವೆ; ಮತ್ತು ಮರೀಯಳಿಗೆ ಹೇಳಿದ್ದೇನಂದರೆ — ಇಗೋ ಇವನು ಇಸ್ರಯೇಲ್ಯರಲ್ಲಿ ಅನೇಕರ ಬೀಳುವಿಕೆಗೂ ಏಳುವಿಕೆಗೂ ಎದುರು ಮಾತಾಡಲ್ಪಡುವ ಗುರ್ತಾಗಿಯೂ ಇಡಲ್ಪಟ್ಟಿದ್ದಾನೆ. ಮತ್ತು ನಿನ್ನ ಜೀವವನ್ನು ಖಡ್ಗವು ತಿವಿದು ಹೋಗುವದು; ಹೀಗೆ ಅನೇಕ ಹೃದಯಗಳ ಆಲೋಚನೆಗಳು ಪ್ರತ್ಯಕ್ಷವಾಗುವವು. — ಅದೇ ಪ್ರಕಾರ ಬಹಳ ದಿವಸ ಗತಿಸಿದ ವಿಧವೆಯಾದಂಥಾ ಹನ್ನಾ ಎಂಬ ಪ್ರವಾದಿನಿಯು ದೇವಾಲಯದಲ್ಲಿದ್ದಳು. ಇವಳು ಕರ್ತನಿಗೆ ಸ್ತೋತ್ರ ಮಾಡಿ, ಯೆರೂಸಲೇಮಿನಲ್ಲಿ ವಿಮೋಚನೆಯನ್ನು ಎದುರು ನೋಡುವವರೆಲ್ಲರಿಗೆ ಅವನನ್ನು ಕುರಿತು ಹೇಳಿದಳು.

ಪರಿಶಿಷ್ಟ. ಸಿಮೆಯೋನನೂ, ಹನ್ನಳೂ, ಅದೇ ಪ್ರಕಾರ ಮತ್ತೆ ಸುವಾರ್ತೆಯ ಕಥೆಯಲ್ಲಿ ಕಾಣ ಬರುವ ಬೇರೆ ಅನೇಕರೂ (§ ೧೨೫, ೧೨೬.) ನಿಜವಾದ ಇಸ್ರಯೇಲತನದ ಶುದ್ಧ ಬೀಜವಾಗಿದ್ದರು. ಅದು ಈ ಕಾಲದಲ್ಲಿ ಇನ್ನೂ ಇತ್ತು; ಇವರು ಮಾಂಸಭಾವದ ಮೆಸ್ಸೀಯ ನಿರೀಕ್ಷಣೆಯ ಹೊಸ ಬಾಲನಿಗೂ, ಹುಚ್ಚುತನದ ಸ್ವನೀತಿಯ ಹೊಸ ಬಾಲನಿಗೂ (§ ೮೮.) ತಮ್ಮ ಮೊಣಕಾಲನ್ನು ಬೊಗ್ಗಿಸದಂಥಾ ಈ ಕಾಲದ ಏಳು ಸಾವಿರಕ್ಕೆ ಸೇರಿದವರು (§ ೭೮, ೨).



## § 122. ಮೂಡಣ ಕಡೆಯಿಂದ ಬಂದ ಜ್ಞಾನಿಗಳು ಮತ್ತು ಐಗುಪ್ತಕ್ಕೆ ಓಡಿ ಹೋದದ್ದು

೧) ಮತ್ತಾ. ೨, ೧—೧೨. ಹೊಲದಲ್ಲಿದ್ದ ಕುರುಬರಿಗೆ (ಯೆಹೂದ್ಯರೊಳಗಣ ಪ್ರಥಮ ಫಲಕ್ಕೆಂಬ ಹಾಗೆ,) ಸ್ತೋತ್ರ ಮಾಡುವಂಥಾ ದೂತರ ಸಮೂಹವು ಗೋದಲಿಯಲ್ಲಿದ್ದ ಮಗುವಿನ ಬಳಿಗೆ, ಹ್ಯಾಗೆ ಮಾರ್ಗ ತೋರಿಸಿದರೋ, ಅದೇ ಪ್ರಕಾರ ಮೂಡಣ ಕಡೆಯವರಾದ ಜ್ಞಾನಿಗಳಿಗೆ (ಮ್ಲೇಂಛರೊಳಗಿನ ಪ್ರಥಮ ಫಲಕ್ಕೆಂ

ಬ ಹಾಗೆ) ಅವರು ಸ್ವದೇಶದಲ್ಲಿ ಕಂಡ ಅವನ ನಕ್ಷತ್ರವು ತೋರಿಸಿತು. ಯೆಹೂದ್ಯ ದಿಂದ ಲೋಕಕ್ಕೆ ಅರಸನು ಬರುವನೆಂಬದು ಎಲ್ಲಾ ಕಡೆಯಲ್ಲಿಯೂ ಪ್ರಖ್ಯಾತಿಯಾ ಗಿರಲಾಗಿ, ಇದನ್ನು ಒಂದು ವೇಳೆ ತಿಳುಕೊಂಡವರಾಗಿಯೂ, ಅದೇ ಪ್ರಕಾರ ಆಯ ಲ್ಪಟ್ಟ ಜನಾಂಗದ ಕೆಲವು ಖಂಡಿತವಾದ ಪ್ರವಾದನೆಗಳನ್ನು (ದಾನಿಯೇಲನು ಗ್ನಾನಿ ಗಳ ಮುಖ್ಯಸ್ಥನಾಗಿದ್ದನಲ್ಲ) ಅರಿತವರಾಗಿಯೂ, ಆಕಾಶದಲ್ಲಿ ಪ್ರತ್ಯಕ್ಷವಾದ ಆಶ್ಚರ್ಯ ಕ್ಕೆ ಪ್ರತಿಯಾಗಿ ಭೂಮಿಯಲ್ಲಿ ಸಹಾ ಅದಕ್ಕೆ ಪ್ರತಿಯಾದದ್ದು ಆಗಿರ ಬೇಕೆಂದು ಬು ದ್ಧಿಯಿಂದ ತಮ್ಮೊಳಗೆ ನಿಶ್ಚಯ ಮಾಡಿ ಕೊಂಡು ಈ ಜ್ಞಾನಿಗಳು ಯೆರೂಸಲೇಮಿಕ್ಕೆ ಬಂದು, ಯೆಹೂದ್ಯರಿಗೆ ಅರಸನಾಗಿ ಹುಟ್ಟಿದವನೆಲ್ಲಿದ್ದಾನೆ? ಯಾಕಂದರೆ ಮೂಡ ಣದಲ್ಲಿ ಅವನ ನಕ್ಷತ್ರವನ್ನು ನೋಡಿ ಅವನ್ನ ನಮಸ್ಕರಿಸ ಬಂದೆವು ಅಂದರು. ಇ ದನ್ನು ಕೇಳಿ ಅರಸನಾದ ಹೆರೋದನು ಯೆರೂಸಲೇಮು ಸಹಿತವಾಗಿ ಎಲ್ಲರೂ ಕಳ ವಳ ಪಟ್ಟರು. ಮತ್ತೆ ಪ್ರಧಾನಯಾಜಕರನ್ನೂ ಶಾಸ್ತ್ರಿಗಳನ್ನೂ ಕೂಡಾ ಕರಿಸಿ ಕೇಳಿ ದ್ದಲ್ಲಿ ಕ್ರಿಸ್ತನು ಬೆಥ್ಲೆಹೇಮದಲ್ಲಿ ಹುಟ್ಟ ಬೇಕೆಂಬದನ್ನು ಅರಸನಿಗೆ ತಿಳಿಸಿದರು. ಅ ಲ್ಲಿಗೆ ಜ್ಞಾನಿಗಳು ಹೋಗಿ, ಕೂಸಿಗೆ ಅಡ್ಡ ಬಿದ್ದು, ಅದಕ್ಕೆ ನಮಸ್ಕರಿಸಿ, ತಮ್ಮ ಬೊ ಕ್ಕಸಗಳನ್ನು ಬಿಚ್ಚಿ, ಅದಕ್ಕೆ ಚಿನ್ನವನ್ನೂ ಧೂಪವನ್ನೂ ಬೋಳವನ್ನೂ ಕಾಣಿಕೆಗಳಾಗಿ ಅರ್ಪಿಸಿದರು. ಹೆರೋದನು ಅವರು ಮಗುವನ್ನು ಕಂಡದೆಲ್ಲೆಂಬದನ್ನು ತನಗೆ ತಿಳಿಸ ಬೇಕೆಂದು ಬಹಳವಾಗಿ ಹೇಳಿದ್ದನು; ಅದರ ಹೊರ್ತು ತಾನು ಸಹಾ ಬಂದು ಅದಕ್ಕೆ ನಮಸ್ಕರಿಸುವ ಹಾಗೆ, ತನಗೆ ಹೇಳ ಬೇಕೆಂದು, ಬಹಳ ಮೋಸದ ಮಾತುಗಳನ್ನಾ ಡಿ ಇದ್ದನು. ಆದರೆ ಬೇರೆ ಮಾರ್ಗವಾಗಿ ತಮ್ಮ ದೇಶಕ್ಕೆ ಹೋಗ ಬೇಕೆಂದು ಸ್ವಪ್ನ ದಲ್ಲಿ ದೇವರು ಅವರಿಗೆ ಅಪ್ಪಣೆ ಕೊಟ್ಟನು.

ಪರಿಶಿಷ್ಟ. ಜ್ಞಾನಿಗಳು ಮೂವರಾಗಿದ್ದರೆಂದೂ, ಅವರು ಅರಸುಗಳಾಗಿದ್ದರೆಂ ದೂ, ಹೇಳುವ ಪಾರಂಪರ್ಯವಾದ ಸುದ್ದಿಯು ಸತ್ಯವೆಂದು ಕಾಣುವದಿಲ್ಲ.

ಜ್ಞಾನಿಗಳ ನಕ್ಷತ್ರವು ಯಾವದೆಂತ ಕೇಳಿದ್ದಾದರೆ, ಜ್ಯೋತಿಷ್ಯಶಾಸ್ತ್ರದ ಪ್ರ ಕಾರ ಗಣಿತ ಮಾಡಿದಂಥಾ ಖಿಪ್ಲರ್ ಎಂಬವನ ಪ್ರಕಾರವೂ, ಈ ಆಲೋಚನೆಗೆ ಒಪ್ಪಿ ಕೊಳ್ಳುವ ಅನೇಕ ಹೊಸ ವಿದ್ವಾಂಸರ ಪ್ರಕಾರವೂ, ರೋಮುವನ್ನು ಕಟ್ಟಿದ ೭೪೭ನೇ ವರ್ಷದಲ್ಲಿ ಮೀನರಾಶಿಯಲ್ಲಿ (ಗುರುಗಸ್ಸೈಶ್ಚರ) ಗುರುಶನಿಗಳೆಂಬ ಗ್ರಹಗಳ ಸಂಯೋಗದಿಂದಲೂ ೭೪೮ನೇ ವರ್ಷದಲ್ಲಿ ಅದಕ್ಕೆ ಮಂಗಳನು ಕೂಡುವದರಿಂದ ಲೂ ಉಂಟಾಯಿತೆಂದು ನೆನಸ ಬಹುದು. ಆದರೆ ಮತ್ತೊಬ್ಬರು ಈ ಆಲೋಚನೆ ಗೂ ಮತ್ತಾ. ೨, ೯ನೇ ವಚನದಲ್ಲಿ ಅರ್ಥಕ್ಕೂ ಸರಿ ಬೀಳದೆಂದು ನೆನಸಿ, ಮನುಷ್ಯನ

ಮಗನು ೨ನೇ ಸಾರಿ ಬರುವಾಗ್ಯೆ ಆಕಾಶದಲ್ಲಿ ಕಾಣುವ ಅವನ ಗುರ್ತಿಗೆ ಸರಿ ಮಾಡಿ, (ಮತ್ಥಾ. ೨೪, ೩೦.) ಅಂಥಾದ್ದೇನಾದರೂ ಹೊಸತಾದದ್ದು ಆಕಾಶದಲ್ಲಿ ಕಂಡಿರ ಬೇಕೆಂದು ನಂಬುತ್ತಾರೆ. ಹ್ಯಾಗೂ ಈ ನಕ್ಷತ್ರವು ಜೋತಿಷಗಾರರಿಗೆ ಮಾತ್ರವೇ ವಿಶೇಷವಾಗಿತ್ತೆಂದು ಕಾಣುತ್ತದೆ. ಯಾಕಂದರೆ ಯೆರೂಸಲೇಮಿನ ನಿವಾಸಿಗಳು ನಕ್ಷತ್ರವನ್ನು ತಾವೇ ನೋಡಿದ್ದಾದರೆ ಗ್ನಾನಿಗಳ ಮಾತಿನಿಂದ ಅವರು ಆ ಪ್ರಕಾರ ವಿಸ್ಮಿತರಾಗುತ್ತಿದ್ದಿಲ್ಲ.

೨) ಮತ್ಥಾ. ೨, ೧೩—೨೩. ಹೆರೋದನು ತಾನು ಜ್ಞಾನಿಗಳಿಂದ ಮೋಸಪಟ್ಟೆನೆಂದು ತಿಳಿದು, ಜಾಗ್ರತೆಯಾಗಿರಲಿಕ್ಕಾಗಿ ಬೆಥ್ಲೆಹೇಮದ ೨ ವರ್ಷದ ಕೆಳಗಣ ಕೂಸುಗಳನ್ನೆಲ್ಲಾ ಕೊಲ್ಲಿಸಿದನು. ಆದರೆ ಯೋಸೇಫನು ದೂತನಿಂದ ಸ್ವಪ್ನದಲ್ಲಿ ಹೆದರಿಸಲ್ಪಟ್ಟವನಾಗಿ ಮೊದಲೇ ಕೂಸನ್ನೂ ಅದರ ತಾಯಿಯನ್ನೂ ಕರಕೊಂಡು ಐಗುಪ್ತಕ್ಕೆ ಓಡಿ ಹೋಗಿದ್ದನು. (ಈ ಸಮಯದಲ್ಲಿ ಗ್ನಾನಿಗಳು ಕೊಟ್ಟ ಬೆಲೆಯುಳ್ಳ ದಾನಗಳು ಅವನಿಗೆ ಬಹಳ ಉಪಯೋಗಕ್ಕೆ ಬಿದ್ದಿರುವವು.) ಅಲ್ಲಿಂದ ದಿವ್ಯ ಅಪ್ಪಣೆಯನ್ನು ಅನುಸರಿಸಿ ಹೆರೋದನು ಸತ್ತ ಮೇಲೆ ತಿರಿಗಿ ಬಂದು ಅಂದಿನಿಂದ ನಜರೇಥಿನಲ್ಲಿ ಉಳುಕೊಂಡನು. ಅಲ್ಲಿ ಬಡಿಗೆಯವನಾಗಿ ತನ್ನ ಕೈಕೆಲಸದಿಂದ ಬದುಕಿದನು.



## § 123. ಕ್ರಿಸ್ತನ ಯೌವನ

ಲೂಕ. ೨, ೪೦—೫೨. ಯೇಸುವಿನ ಯೌವನಕಾಲವೆಲ್ಲಾದರೊಳಗಿಂದ ಒಂದೇ ಒಂದು ಕಥೆಯು ನಮಗೆ ಗೊತ್ತುಂಟು. ಯಾವದಂದರೆ — ಅವನು ೧೨ ವರ್ಷ ದಾಟಿದ ಹುಡುಗನಾಗಿ ತಾಯಿತಂದೆಗಳ ಸಂಗಡ ಯೆರೂಸಲೇಮುಕ್ಕೆ ಹಬ್ಬಕ್ಕೋಸ್ಕರ ಹೋದದ್ದು. ಅಲ್ಲಿ ಇದ್ದಾಗ ದೇವಾಲಯದಲ್ಲಿ ಚಾತುರ್ಯದಿಂದ ಪ್ರಶ್ನೆಗಳನ್ನು ಮಾಡಲು, ಶಾಸ್ತ್ರಿಗಳು ವಿಸ್ಮಯ ಪಟ್ಟರು! ಮತ್ತೆ ಅವನ ತಾಯಿ ಮನೋವ್ಯಥೆಯಲ್ಲಿ ಅವನನ್ನು ಹುಡುಕಿ, ಮೂರನೇ ದಿವಸ ದೇವಾಲಯದಲ್ಲಿ ಕಂಡು, ಕೇಳಿದಾಗ ಅವನು ಇವಳಿಗೆ ಹೇಳಿದ್ದೇನಂದರೆ: “ನೀವು ನನ್ನನ್ನು ಹುಡುಕಿದ್ದೇನು? ನಾನು ನನ್ನ ತಂದೆಯದರಲ್ಲಿರ ಬೇಕೆಂದು ನಿಮಗೆ ತಿಳಿಯಲಿಲ್ಲವೋ?” ಈ ಮಾತಿನಲ್ಲಿ ತಾನು ಯಾರೆಂಬದನ್ನೂ ತನ್ನ ಉದ್ಯೋಗವು ಯಾವದೆಂಬದನ್ನೂ ಶುಭ್ರವಾಗಿ ತಿಳಿದಿದ್ದನೆಂಬದು ಕಾಣುತ್ತದೆ. ಮನುಷ್ಯಸ್ವಭಾವದ ತಿಳುವಿಕೆಯೂ ನಮ್ಮ ಪ್ರ

ಯೋಜನವೂ ಏನೆಂಬ ತಿಳುವಿಕೆಯೂ ಹ್ಯಾಗೆ ನಮ್ಮೆಲ್ಲರಲ್ಲಿ ಮೆಲ್ಲಕ್ಕೆ ವಿಕಸಿಸುತ್ತದೋ? ಹಾಗೆಯೇ ಎಲ್ಲಾದರಲ್ಲಿ ನಮ್ಮ ಹಾಗೆ ಆದ ಕ್ರಿಸ್ತನಲ್ಲಿ ಸಹಾ. ಮತ್ತು ಇದು ಹ್ಯಾಗೋ ಹಾಗೆಯೇ ನಿಸ್ಸಂದೇಹವಾಗಿ—(ವಿಕಸಿತವಾಗ ಕೂಡದಂಥಾ ದಿವ್ಯಭಾವವು ತಾನೇ ಅಲ್ಲ, ಆದರೂ)—ಅವನಲ್ಲಿದ್ದ ದಿವ್ಯಭಾವದ ಸ್ವಂತ ತಿಳುವಿಕೆಯೂ ಮೆಸ್ಸೀಯನಾಗ ಬೇಕೆಂಬ ತನ್ನ ಪ್ರಯೋಜನದ ತಿಳುವಿಕೆಯೂ ಮೇಲೆ ಹೇಳಿದದರೊಡನೆ ಮೆಲ್ಲಕ್ಕೆ ವಿಕಸಿಸಿ ಇರುವದು. ಆದರೆ ಹ್ಯಾಗೂ ಕ್ರಿಸ್ತನು ಯೌವನಕಾಲದಲ್ಲಿ ಶಾಂತ ವಿಧೇಯತ್ವದಲ್ಲಿಯೂ, ಬರಹಗಳನ್ನು ಓದಿ ಶೋಧಿಸುವದರಲ್ಲಿಯೂ ಇದ್ದನೆಂದು ನಿಶ್ಚಯವಾಗಿ ನೆನಸ ಬೇಕು. ಹಾಗೆಯೇ ಬರಹವು ಸಹಾ ಹೇಳುವದೇನಂದರೆ—ಯೇಸು ಜ್ಞಾನದಲ್ಲಿಯೂ ಸೀಳದಲ್ಲಿಯೂ ದೇವರ ಮತ್ತು ಮನುಷ್ಯರ ಕೃಪೆಯಲ್ಲಿಯೂ ಹೆಚ್ಚಿದನು.

ಪರಿಶಿಷ್ಟ. ಯೋಸೇಫನೂ ಮರೀಯಳೂ ರಾಜಸಂತಾನದ ಕಡೇ ಚಿಗುರುಗಳಾಗಿಯೂ, ಶರೀರಪ್ರಕಾರ ಮಾತ್ರವಲ್ಲ, ಆತ್ಮಿಕ ಪ್ರಕಾರವಾಗಿ ಸಹಾ ನಿಜ ದಾವಿದ್ಯರಾಗಿಯೂ ಇದ್ದರು. ಇವರೇ ಈ ಪರಿಶುದ್ಧ ಕೂಸಿನ ಹತ್ತರ ಇರುವವರು; ಅದಕ್ಕೆ ವಿದ್ಯಾಭ್ಯಾಸ ಹೇಳುವವರು. ವಿದ್ಯಾಭ್ಯಾಸ ಕಲಿಸುವದಂದರೆ ಆತ್ಮಿಕವಾಗಿ ಹುಟ್ಟಿಸುವದು. ಮತ್ತು ಹುಟ್ಟಿಸುವದು ಅಂದರೆ ತನ್ನ ಸ್ವಭಾವವನ್ನು ಮತ್ತೊಬ್ಬನಿಗೆ ಶಿಕ್ಕ ಮಾಡುವದು. ಆಯಲ್ಪಟ್ಟಂಥಾ ಇವರಿಬ್ಬರ ಮನಸ್ಸಿನಲ್ಲಿಯೂ ಆಲೋಚನೆಯಲ್ಲಿಯೂ ಏನೇನು ಪರಿಶುದ್ಧವಾದದ್ದೂ ದೈವಿಕವಾದದ್ದೂ ಇತ್ತೋ? ಅದು ಸಂಪೂರ್ಣವಾದ ಪರಿಶುದ್ಧತ್ವದ ಮೊಳಿಕೆಗಳನ್ನೆಲ್ಲಾ ಧರಿಸಿದಂಥಾ ಶಿಶುವಿನ ಮನಸ್ಸಿಗೆ ಅದನ್ನು ವಿಕಸಿತ ಮಾಡುವಂಥಾದ್ದೂ ಅದಕ್ಕೆ ಸಹಾಯ ಮಾಡುವಂಥಾದ್ದೂ ಆಯಿತು. ಆದರೆ ಮನುಷ್ಯಭಾವವಾಗಿ ಅಶುದ್ಧವಾದದ್ದೂ ಪಾಪವಾದದ್ದೂ ಅವರಲ್ಲಿ ಏನಿತ್ತೋ? ಅದು ಅವನ ಪರಿಶುದ್ಧ ಮನಸ್ಸನ್ನು ಮುಟ್ಟಲಿಲ್ಲ. ಹ್ಯಾಗಂದರೆ ಇಲ್ಲಿ ಅದಕ್ಕೆ ಏನೊಂದೂ ಸಂಬಂಧವಾದದ್ದು ಶಿಕ್ಕಲಿಲ್ಲ. ಮತ್ತೆ ಅದೇ ಸಮಯದಲ್ಲಿ ಮನುಷ್ಯನ ಪ್ರಕಾರ ವಿಕಸಿತವಾಗುವಂಥಾದ್ದನ್ನು ಸಹಾ ಪೂರ್ಣವಾಗಿ ಒಳಗಿದ್ದ ದೈವತ್ವದ ಸಂಪೂರ್ಣತೆಯು ಆಧರಿಸಿತು. ಮತ್ತು ಪರಿಶುದ್ಧಾತ್ಮವು ಅದಕ್ಕೋಸ್ಕರ ಜಾಗ್ರತೆಯಾಗಿತ್ತು (ಲೂಕ. ೧, ೩೫). ಸಾಕಿದವರಾದ ಇಬ್ಬರಲ್ಲಿಯೂ ದೇವಾಧಿಕಾರಕ್ಕೆ ಅನುಸಾರವಾದ ಸಮವಾದ ಮನಸ್ಸೂ ಹಳೇ ಒಡಂಬಡಿಕೆಯ ಅತ್ಯುತ್ತಮ ಕಾಲಗಳಲ್ಲಿ ಮಾತ್ರವೇ ಕಾಣ ಬರುವಂಥಾ ಭಕ್ತಿಯೂ ಇತ್ತು. ಇದು ಇದರಲ್ಲಿಯೂ ಬೇರೆ ಬೇರೆ ತರವಾಗಿತ್ತು. ಒಬ್ಬರ ಕೊರತೆಯನ್ನು ಮತ್ತೊಬ್ಬರು ಸಮ ಮಾಡುವ ಹಾಗೆ ಆಗಿ

ಶ್ತು. ಯೋಸೇಫನು ಕಠಿಣವಾದ ನೇಮವನ್ನು ಅನುಸರಿಸುವವನೂ, ವೇಗದಿಂದ ಏನಾದರೂ ನಿಶ್ಚಯಿಸಿ ಕೊಳ್ಳುವವನೂ, ಎಲ್ಲಾ ಕೆಲಸಕ್ಕೂ ಸಿದ್ಧವಾಗಿರುವವನೂ (ಮತ್ಥಾ. ೧, ೧೯. ೨೪. ೨, ೨೧—೨೩.) ಆಗಿದ್ದನು. ಅವನ ಮೇಲೆ ಪ್ರಪಂಚದ ಸಂಕಷ್ಟಗಳ ಭಾರವು ಬಿದ್ದಿತ್ತು; (ಮತ್ಥಾ. ೧೩, ೫೫ ವಚನ.) ಜೀವನದಲ್ಲಿ ಏನು ಕಠಿಣವಾಗಿರುತ್ತದೋ ಅದೆಲ್ಲಾ ಅವನ ಸ್ವಭಾವಗುಣಗಳಲ್ಲಿ ಪ್ರತ್ಯಕ್ಷವಾಯಿತು. ಇಂಥವನಾಗಿದ್ದು ಯೇಸುವನ್ನು ಸಾಕುವಾಗ್ಯೆ ಈ ಪರಿಶುದ್ಧ ಶಿಷ್ಯನಲ್ಲಿ ಹಳೇ ಒಡಂಬಡಿಕೆಯ ನೀತಿಗೂ (ಇದನ್ನು ಅವನು ಪೂರ್ಣವಾಗಿ ಈಡೇರಿಸಲಿಕ್ಕೆ ಬಂದವನಲ್ಲ. ಮತ್ಥಾ. ೩, ೧೫. ಗಲ. ೪, ೪. ೫.) ಅದು ಇದು ಇಲ್ಲದವನಾಗಿದ್ದರೂ ಸೇವೆ ಮಾಡಲಿಕ್ಕೂ ತಾಳುವದಕ್ಕೂ (ಇದೇ ಅವನ ಜೀವನದ ಮುಖ್ಯ ಉದ್ಯೋಗವಾಗಿತ್ತಲ್ಲಾ. ಮತ್ಥಾ. ೨೦, ೨೮.) ಯೋಗ್ಯವಾದ ಮನಸ್ಸನ್ನು ಬೆಳಸಿದನು. ಆದರೆ ಮರೀಯಳು ಶಿಶುಪ್ರಾಯವಾಗಿ ದೈನ್ಯಳೂ (ಲೂಕ. ೧, ೩೮. ಯೋಹಾ. ೨, ೩. ೪.) ಬಹು ದೊಡ್ಡ ವಿಶ್ವಾಸಿಯೂ ಚನ್ನಾಗಿ ಆಲೋಚಿಸುವವಳೂ, (ಲೂಕ. ೨, ೫೧.) ಪ್ರೀತಿಭರಿತವಾದ ಮಮತೆಯುಳ್ಳವಳೂ (ಲೂಕ. ೨. ೪೮.) ಆಗಿದ್ದು, ತನಗಾದ ದೊಡ್ಡ ಕರೆಯುವಿಕೆಯನ್ನು ದೈನ್ಯ ಮನಸ್ಸಿನಲ್ಲಿಯೇ ತಿಳುಕೊಂಡು, ತನ್ನ ದೇವರಲ್ಲಿ ಸಂತೋಷ ಪಡುವವಳಾಗಿ (ಲೂಕ. ೧, ೪೬.) ದೇವರಿಂದ ಹುಟ್ಟಿದ ತನ್ನ ಮಗುವಿನ ಪ್ರಾಣದಲ್ಲಿ ಇಂಥಾ ಮನೋಹರವಾದ ಗುಣಗಳು ಸಹಾ ಬೆಳಿಸುವದಕ್ಕೆ ಕಾರಣವಾದವು. ಆದರೆ ಮತ್ತೊಂದು ಕಡೆಯಲ್ಲಿ ಈ ಪರಿಶುದ್ಧ ಶಿಷ್ಯನಿಂದ ಸ್ಫುಟ ಮಾಡುವಂಥಾ ಶುದ್ಧೀಕರಿಸುವಂಥಾ ತ್ರಾಣವು ಸಾಕುವವರಲ್ಲಿ ಉಂಟಾಗಿರ ಬೇಕು. ಇದರಿಂದ ಅವರು ದಾವಿದನಿಗೂ ತಮಗೂ ಮಗನಾಗಿಯೂ ಕರ್ತನಾಗಿಯೂ (ಮತ್ಥಾ. ೨೨, ೪೨.) ಇರುವವನ ರಾಜ್ಯದಲ್ಲಿ ಪ್ರವೇಶಿಸಲಿಕ್ಕೆ ಯೋಗ್ಯರಾದರು. ಇದು ಸುವಾರ್ತೆಯ ಚರಿತ್ರದಲ್ಲಿ ಕೆಲವು ಸಾರಿ ಕಂಡು ಬರುತ್ತದೆ. (ಲೂಕ. ೨, ೪೯—೫೧. ಯೋಹಾ. ೨, ೪. ೫. ಮತ್ಥಾ. ೧೨, ೪೬—೫೦ ವರೆಗೆ) ಹ್ಯಾಗಂದರೆ ಕಲಿಸುವವರು ಕಲಿಯುತ್ತಾರೆಂಬ ವಾಕ್ಯವು ಸಾಧಾರಣವಾಗಿ ಸಾಕುವಾಗ್ಯೆ ಸತ್ಯವಾಗಿದ್ದ ಮೇಲೆ ಅದರ ಹಾಗೆ ಬೇರೊಂದು ಇರದಂಥಾ ಪ್ರಕಾರವಾಗಿ ಸಾಕಿ ಕಲಿಸುವಲ್ಲಿ ಪೂರ್ಣವಾಗಿ ಸತ್ಯವಾಗಿರ ಬೇಕು.



## § 124. ಯೇಸುವಿನ ಸ್ನಾನ ಶೋಧನೆಗಳು

೧) ಮತ್ತಾ. ೩, ೧೩ ಮೊದಲಾದ ಶ್ಲೋಕಗಳು. ಯೋಹಾನನು ಯೊರ್ದಾನದಲ್ಲಿ ಸ್ನಾನ ಕೊಡುತ್ತಾ ಇರುವಾಗ್ಯೆ ಯೇಸು ಸಹಾ (ಶುಮಾರು ೩೦ ವರ್ಷದವನಾಗಿ ಲೂಕ. ೩. ೨೩.) ಅವನ ಹತ್ತರ ಸ್ನಾನ ತಕ್ಕೊಳ್ಳುವದಕ್ಕೋಸ್ಕರ ಬಂದನು. ಆದರೆ ಯೋಹಾನನು ಅವನನ್ನು ತಡೆ ಮಾಡಿ ನಿನ್ನಿಂದ ಸ್ನಾನ ಹೊಂದುವದು ನನಗೆ ಅಗತ್ಯವಿರುತ್ತದೆ ಎಂದು ಹೇಳಿದನು. ಆದರೂ ಯೇಸುವು ಈಗ ಬಿಡು, ಯಾಕಂದರೆ ಹೀಗೆ ಸಮಸ್ತ ನೀತಿಯನ್ನು ಪೂರೈಸುವದು ನಮಗೆ ಯೋಗ್ಯವಾಗೆದೆ ಎಂಬ ಉತ್ತರವನ್ನು ಕೊಟ್ಟಾಗ ಅವನು ಹೆಚ್ಚು ಅಡ್ಡಿ ಮಾಡಲಿಲ್ಲ. ಮತ್ತು ಈ ಪರಿಶುದ್ಧನು ಸ್ನಾನ ಹೊಂದಿದ ಕೂಡಲೇ ಪರಲೋಕಗಳು ಅವನಿಗೆ ತೆರಿಯಲ್ಪಟ್ಟವು. ದೇವರ ಆತ್ಮವು ಪಾರಿವಾಳದ ಹಾಗೆ ಅವನ ಮೇಲೆ ಇಳಿದು ಬಂತು. ಮತ್ತು ಪರಲೋಕಗಳೊಳಗಿಂದ ಇವನೇ ನನ್ನ ಪ್ರಿಯ ಮಗನು ಇವನಲ್ಲಿ ಆನಂದ ಪಡುತ್ತೇನೆ ಎಂಬ ಶಬ್ದ ಉಂಟಾಯಿತು.

ಪರಿಶಿಷ್ಟ. ತನ್ನಷ್ಟಕ್ಕೆ ಆಲೋಚಿಸಿದ್ದಾದರೆ ಕ್ರಿಸ್ತನು ಪಾಪವಿಲ್ಲದವನೂ ಸಾಲವಿಲ್ಲದವನೂ ಆಗಿದ್ದದರಿಂದ ಅವನಿಗೆ ಮಾನಸಾಂತರವು ಅವಶ್ಯವಿರಲಿಲ್ಲ. ಆದ್ದರಿಂದ ಯೋಹಾನನು ತಡ ಮಾಡಿದಕ್ಕೆ ಸಮವಾದ ಆಲೋಚನೆಯು ಆಧಾರವಾಗಿತ್ತು. ಆದರೆ ಯೇಸುವು ಒಬ್ಬನಾಗಿ ತನಗೋಸ್ಕರ ಮಾತ್ರವೇ ಇರುವಂಥವನೆಂದು ಯೋಚಿಸಿಸಂಥಾದ್ದು ಸಮವಾಗಿರಲಿಲ್ಲ. ಸ್ತ್ರೀಯಿಂದ ಹುಟ್ಟಿದವನಾಗಿ ಯೇಸುವು ಸಾಲದ ಭಾರ ಹೊರುವ ಮನುಷ್ಯಸಂತತಿಯ ಸಂಗಡ ಒಡಜೀವಿಸುವ ಐಕ್ಯದಲ್ಲಿ ಶೇರಿದ್ದನು. ಅವನು ಮನುಷ್ಯಸಂತತಿ ಎಂಬ ಶರೀರದಲ್ಲಿ ಒಂದು ಅಂಗವಾಗಿದ್ದನು. ಮತ್ತು ಇದರಿಂದಲೇ ಶರೀರದ ಭಾರವು ಅವನಿಗೆ ಸಹಾ ಭಾರವಾಯಿತು. ಆದರೆ ಅವನು ಬರೇ ಅಂಗವಾಗುವದಕ್ಕಿಂತ ಹೆಚ್ಚಾಗಿರ ಬೇಕಾಯಿತು. ಅಂಗವು ತಲೆಯಾಗ ಬೇಕಾಯಿತು. (§ ೧೧೫, ೧.) ಮತ್ತು ಇದು ಆಗ ಬೇಕಾದರೆ ಎಲ್ಲಾ ಶರೀರದ ಎಲ್ಲಾ ಭಾರವನ್ನು ತನ್ನ ಮೇಲೆ ತಕ್ಕೊಂಡು ಅದನ್ನು ಕಡೇ ವರಿಗೂ ಯುದ್ಧ ಮಾಡಿ ತಾಳಿ ಕೊಳ್ಳುವವನಾಗಿ ಪರಾಕ್ರಮಿಸ ಬೇಕಾಯಿತು. ಸಮಸ್ತ ನೀತಿಯನ್ನು ಪೂರೈಸುವದು ಅವನಿಗೆ ಯೋಗ್ಯವಾಗಿತ್ತು. ಪಾಪವನ್ನು ನಿರ್ಮೂಲ ಮಾಡುವದರಲ್ಲಿ ಎರಡು ಉಂಟು, ೧ ಮಾನಸಾಂತರ ಮತ್ತು ೨ ದಂಡಣೆ. ಮನಸ್ಸಿನಲ್ಲಿ ಪಾಪಕ್ಕಾಗಿ ಪಶ್ಚಾತ್ತಾಪ ಪಡುವದು; ಮತ್ತು ಶಿಕ್ಷೆ ತಾಳಿ ಕೊಂಡು, ಅದನ್ನು ಸಲ್ಲಿಸುವದು. ಹಾಗಾದರೆ ಮನೋಭಾವ ಮತ್ತು ಕ್ರಿಯೆ. ಸಿದ್ಧ ಮನಸ್ಸು ಮತ್ತು ಪೂರೈಸುವಿಕೆ. ಇಲ್ಲಿ

ಕ್ರಿಸ್ತನು ಪಶ್ಚಾತ್ತಾಪ ಪಡುವವನಾಗಿ ಕಾಣಿಸಿ ಕೊಳ್ಳುತ್ತಾನೆ. ಆದರೆ ಶಿಲುಬೆಯಲ್ಲಿ ಮನುಷ್ಯರ ಕಾರ್ಯವನ್ನು ತನ್ನದಾಗ ಮಾಡಿ, ಅದಕ್ಕೋಸ್ಕರ ಶಿಕ್ಷೆ ತಾಳುವವನಾಗಿ ಕಾಣಿಸಿ ಕೊಳ್ಳುತ್ತಾನೆ. ಸ್ನಾನವೂ ಮರಣವೂ ಅವನ ವಿಮೋಚನಾಕಾರ್ಯದ ಆರಂಭವೂ ಅಂತ್ಯವೂ ಆಗಿರುತ್ತದೆ. ಮಾನಸಾಂತರಕ್ಕಾದ ಜಲಸ್ನಾನವನ್ನು ತೆಕ್ಕೊಂಡದರಿಂದಲೇ ತಾನು ಮನುಷ್ಯಸಂತತಿಯ ಭಾರವನ್ನು ತನ್ನದೆಂದೆಣಿಸಲಿಕ್ಕೂ ಸಿದ್ಧ ಮನಸುಳ್ಳವನಾಗಿದ್ದೇನೆಂದು ಹೇಳಿದ ಹಾಗಾಯಿತು. ಶಿಕ್ಷೆಗಾದ ರಕ್ತಸ್ನಾನದಿಂದ (ಅಂದರೆ ಮರಣದಿಂದ) ಈ ಸಿದ್ಧ ಮನಸ್ಸು ಎಲ್ಲಾ ಸಂಪೂರ್ತಿ ಮಾಡುವ ಕ್ರಿಯೆಯಾಯಿತು. ಮಾನಸಾಂತರಸ್ನಾನವು ವಿಮೋಚನಾಮರಣಕ್ಕಾದ ಸಂಸ್ಕಾರವಾಗಿತ್ತು. ಹಾಗಾದರೆ ಸ್ನಾನ ತೆಕ್ಕೊಂಡದ್ದೇ ಅವನ ಮನುಷ್ಯಭಾವದಿಂದ ಕಾರ್ಯವಾಗಿಯೂ ಒಳ್ಳೇ ಪ್ರಾಯದಲ್ಲಿ ಸ್ವೇಚ್ಛಾನುಸಾರವಾಗಿ ನಿಶ್ಚಯ ಮಾಡಿ ಕೊಳ್ಳುವದರಿಂದಲೂ ತನ್ನ ಉದ್ಯೋಗವು ಯಾವದೆಂಬದನ್ನು ಸ್ಪಷ್ಟವಾಗಿ ತಿಳುಕೊಳ್ಳುವದರಿಂದಲೂ ಉಂಟಾದಂಥಾ ಮೆಸ್ಸೀಯನ ಉದ್ಯೋಗದ ಸ್ವೀಕಾರವಾಗಿತ್ತೆಂದು ಹೇಳ ಬೇಕು. ಮತ್ತು ಮೆಸ್ಸೀಯನಿಗೆ ತಕ್ಕ ಸಂಸ್ಕಾರವೂ ಪರಿಶುದ್ಧಾತ್ಮದಿಂದಾದ ಅಭಿಷೇಕವೂ ಸ್ನಾನದ ಸಂಗಡಲೇ ಆಗಲಿಕ್ಕೆ ಕಾರಣವಾಯಿತು. ಮತ್ತು ಇದರಿಂದ ಅವನು ಕರ್ತನ ಕ್ರಿಸ್ತನು (ಅಭಿಷಿಕ್ತನು) ಆಗಿದ್ದಾನೆಂಬದಕ್ಕೆ ಮುದ್ರೆಯಾಯಿತು.

೨) ಮತ್ತಾ. ೪, ೧—೧೧. (ಲೂಕ. ೪, ೧ನೇ ಮೊದಲಾದ ಶ್ಲೋಕಗಳು.) ಆದರೆ ಯೇಸು ಮೆಸ್ಸೀಯನಾಗಿ ಸರ್ವರ ಮುಂದೆ ಕಾಣಿಸಿ ಕೊಳ್ಳುವ ಮೊದಲು ಸೈತಾನನಿಂದ ಶೋಧಿಸಲ್ಪಡುವ ಹಾಗೆ ಆತ್ಮದಿಂದ ಅರಣ್ಯಕ್ಕೆ ಒಯ್ಯಲ್ಪಟ್ಟನು. ೪೦ ದಿವಸ ಉಪವಾಸವಾಗಿದ್ದ ತರುವಾಯ ಹಸಿದನು. ಶೋಧಕನು ಇದನ್ನು ಶೋಧಿಸುವದಕ್ಕೆ ಉಪಯೋಗಿಸಿ ಅವನಿಗೆ ಮೂರು ಶೋಧನೆಯ ಮಾತುಗಳನ್ನು ಹೇಳಿದನು. ೧, ಈ ಕಲ್ಲುಗಳು ರೊಟ್ಟಿಗಳಾಗುವ ಹಾಗೆ ಹೇಳು. ೨, ನೀನು ದೇವರ ಮಗನಾದರೆ ಕೆಳಗೆ ಬೀಳು. ೩, ನೀನು ಅಡ್ಡ ಬಿದ್ದು ನನಗೆ ನಮಸ್ಕರಿಸಿದರೆ ಇವುಗಳನ್ನೆಲ್ಲಾ ನಿನಗೆ ಕೊಡುತ್ತೇನೆ. ಆದರೆ ರಕ್ಷಕನು ದೇವರ ವಾಕ್ಯವಾಗಿರುವ ಆತ್ಮದ ಖಡ್ಗದಿಂದ ಅವನನ್ನು ಹಿಮ್ಮೆಟ್ಟಿಸಿದನು. (ಎಫೆ. ೬, ೧೭.) ಮನುಷ್ಯನು ರೊಟ್ಟಿಯಿಂದ ಮಾತ್ರ ಬದುಕುವದಿಲ್ಲ. ೨, ನಿನ್ನ ದೇವರಾದ ಕರ್ತನನ್ನು ಶೋಧಿಸ ಬೇಡ. ೩, ಸೈತಾನನೇ ಹೋಗು, ಯಾಕಂದರೆ ನಿನ್ನ ದೇವರಾದ ಕರ್ತನಿಗೆ ನಮಸ್ಕರಿಸಿ ಅವನನ್ನು ಮಾತ್ರ ಆರಾಧಿಸ ಬೇಕೆಂದು ಬರದದೆ. ಮತ್ತು ಪಿಶಾಚನು ಅವನನ್ನು ಬಿಟ್ಟು ಹೋಗಲು, ದೂತರು ಬಂದು ಅವನಿಗೆ ಸೇವೆ ಮಾಡಿದರು.

ಪರಿಶಿಷ್ಟ. ಎರಡನೇ ಆದಾಮನಿಗೆ ಆದ ಈ ಶೋಧನೆಯು ಮೊದಲಿನೆಯವನದಕ್ಕೆ ಸಮವಾಗಿರುತ್ತದೆ. ಮೊದಲನೇ ಆದಾಮನಿಗೆ ಪಿಶಾಚನಿಂದಾದ ಶೋಧನೆಯು ಅವಶ್ಯವೂ ಅಗತ್ಯವೂ ಆಗಿತ್ತು. ಆದರೆ ಮೊದಲನೇ ಆದಾಮನು ಈ ಶೋಧನೆಯಲ್ಲಿ ನಿಲ್ಲದೆ ಹೋದ ಕಾರಣ ೨ ನೇ ಆದಾಮನು ನವೀನವಾಗಿ ಅದಕ್ಕೆ ಒಳಗಾಗ ಬೇಕಾಯಿತು. ಶೋಧನೆಯ ಮೂರು ಸಂಗತಿಗಳಿಗೆ ಮುಖ್ಯವಾದದ್ದೇನಂದರೆ—ದೇವರ ರಾಜ್ಯವನ್ನು ಲೌಕಿಕರಾಜ್ಯ ಮಾಡುವಂಥಾ ಕೊರತೆ ಪಡದೆ ಸೇವಿಸದೆ ತಾಳದೆ ಪ್ರಪಂಚದ ಭೋಗವನ್ನೂ ಪ್ರಾಣವನ್ನೂ ಮಹಿಮೆಯನ್ನೂ ಇಚ್ಛೈಸುವಂಥಾ ಮಾಂಸಭಾವವಾಗಿಯೂ ಯೆಹೂದ್ಯವಾಗಿಯೂ ಇರುವ ಮೆಸ್ಸೀಯಾಲೋಚನೆಗೆ ರಕ್ಷಕನನ್ನು ಗೆದ್ದು ಕೊಳ್ಳ ಬೇಕೆಂಬದೇ. ರಕ್ಷಕನು ಶೋಧಿಸಲ್ಪಡುವದು ಸಾಧ್ಯವಾದದ್ದು ಹ್ಯಾಗಂದರೆ—ಆತನು ನಮ್ಮ ಹಾಗೆಯೇ ಸತ್ಯವಾಗಿ ಮನುಷ್ಯನಾದದರಿಂದಲೇ ಅವನ ಶುದ್ಧ ಮನುಷ್ಯತ್ವವು ಶೋಧಿಸಲ್ಪಟ್ಟಿತು. ಇದರಲ್ಲಿ ಬೀಳುವಿಕೆಯು ಸಹಾ ಸಾಧ್ಯವಾಗಿತ್ತೆಂಬದಾಯಿತು. ಆದರೆ ಅತ್ತಕಡೆಯಲ್ಲಿ ಅದು ದೈವತ್ವದೊಡನೆ ಒಂದೇ ಸ್ವಭಾವವಾಗಿರಲಾಗಿ ಜಯವು ಸಹಾ ಅವಶ್ಯವಾಗಿತ್ತೆಂಬದಾಯಿತು.



## § 125. ಯೇಸುವಿನ ಶಿಷ್ಯರು

೧) ಮತ್ತಾ. ೧೦, ೨—೪. (ಲೂಕ. ೬, ೧೩ ಮೊದಲಾದ ಶ್ಲೋಕಗಳು) ಯೇಸುವಿನ ಹನ್ನೆರಡು ಶಿಷ್ಯರು ಇವರೇ—೧, ಸೀಮೋನ್ ಪೇತ್ರನು. ಇವನು ಬೆತ್ಸೈದದ ಮೀನುಗಾರನಾದ ಯಾನನ ಮಗನು. ೨, ಅವನ ಸಹೋದರನಾದ ಅಂದ್ರೆಯನು. ೩, ಯೋಹಾನನು. ಇವನು ಗಲಿಲಾಯದಲ್ಲಿ ಮೀನುಗಾರನಾಗಿದ್ದ ಜೆಬೆದಾಯನ ಮತ್ತು ಸಾಲೋಮೆಯ ಮಗನು. ೪, ಅವನ ಸಹೋದರನಾದ ಯಾಕೋಬನು. (ಇವನು ಹಿರೇ ಯಾಕೋಬನು) ೫, ಫಿಲಿಪ್ಪನು. ೬, ಬರ್ಥಲೋಮಾಯನು (ಅಥವಾ ನಥನಯೇಲನು?). ೭, ಜವಳನೆಂಬ ತೋಮನು. ೮, ಮತ್ತಾಯ ಇಲ್ಲವೇ ಲೇವಿ. ೯, ಯಾಕೋಬನು. (ಕಿರೇ ಯಾಕೋಬನು.) ಇವನು ಅಲ್ಫಾಯ (ಇಲ್ಲವೆ ಕ್ಲೊಫ) ನ ಮತ್ತು ಯೇಸುವಿನ ತಾಯಿಯ ಸಹೋದರಿಯಾದ ಮರೀಯಳ ಮಗನು. ಆದದರಿಂದ ಕರ್ತನ ಸಹೋದರನೆಂದು ಹೇಳಿದರು. ೧೦, ಯಾಕೋಬನ ಯೂದನು (ಅಂದರೆ ಯಾಕೋಬನ ಮಗನು? ಇಲ್ಲವೇ ಸಹೋದರನು? ಒಂದು ವೇಳೆ ಮೇಲಿನವನ ಸಹೋದರನು. ಇವನಿಗೆ ತದ್ದಾಯ ಇಲ್ಲವೆ ಲೆಬ್ಬಾಯ

ಎಂಬ ಪ್ರತಿನಾಮ ಇತ್ತು. ೧೧, ಜೆಲೋತನೆಂಬ ಸೀಮೋನನು ಮತ್ತು ೧೨, ಇ ಸ್ಕರಿಯೋತನೆಂಬ ಯೂದನು (ಅಂದರೆ ಕರಿಯೋಥಿನವನು).

೨) ಯೋಹಾನನೂ ಅಂದ್ರೆಯನೂ ಇಷ್ಟು ವರೆಗೆ ಸ್ನಾನಿಕನಾದ ಯೋಹಾನನ ಶಿಷ್ಯರಾಗಿದ್ದು, ಮೊದಲನೆಯವರಾಗಿ ರಕ್ಷಕನನ್ನು ಶೇರಿ ಕೊಂಡರು. ಅಂದ್ರೆಯನು ತನ್ನ ಸಹೋದರನಾದ ಸೀಮೋನನಿಗೆ: ಮೆಸ್ಸೀಯನು ನಮಗೆ ಶಿಕ್ಕಿದನು ಎಂದು ಹೇಳಿ ಅವನನ್ನು ಯೇಸುವಿನ ಬಳಿಗೆ ಕರ ಕೊಂಡು ಬಂದನು. ಕರ್ತನು ತಾನೇ ಕರದ ಫಿಲಿಪ್ಪನು ನಥನಯೇಲನಿಗೆ (ಇವನೇ ಬರ್ಥಲೋಮಾಯನಾಗಿರುವನು) ಹೇಳಿದ್ದು: ಯಾವನ ವಿಷಯ ನ್ಯಾಯಪ್ರಮಾಣದಲ್ಲಿ ಮೋಶೆಯೂ ಪ್ರವಾದಿಗಳೂ ಬರದರೋ? ಆ ನಜರೇಥಿನವನಾದ ಯೋಸೇಫನ ಮಗನಾದ ಯೇಸು ನಮಗೆ ಶಿಕ್ಕಿದನು. ಶಾಸ್ತ್ರಜ್ಞನಾದ ನಥನಯೇಲನು ನಜರೇಥಿನಿಂದ ಒಳ್ಳೇದೇನಾದರೂ ಆಗ ಬಹುದೋ ಎಂದು ಸಂಶಯ ಪಡುತ್ತಾನೆ. ಆದರೆ ಫಿಲಿಪ್ಪನಿಗೆ ನಿಶ್ಚಯ ಉಂಟು. ಮತ್ತು ಹೇಳುತ್ತಾನೆ. ಬಂದು ನೋಡು! ಕರ್ತನು ನಥನಯೇಲನ ವಿಷಯವಾಗಿ ಇಗೋ ನಿಜವಾದ ಇಸ್ರಯೇಲನು! ಅವನಲ್ಲಿ ಕಪಟವಿಲ್ಲ ಎಂಬ ಸಾಕ್ಷಿ ಕೊಡುತ್ತಾನೆ. ಮತ್ತು ಅಂಜೂರದ ಮರದ ಕೆಳಗೆ ಸಂಚವಿಸಿದನ್ನು ಕರ್ತನು ಹೇಳಿದಾಗ ನಥನಯೇಲನು ರಬ್ಬಿಯೇ ನೀನು ದೇವರ ಮಗನು, ನೀನು ಇಸ್ರಯೇಲನ ಅರಸನು ಎಂದು ಹೇಳುತ್ತಾನೆ. ಮತ್ತು ಕರ್ತನು ಸಹಾ ಅವನು ಇವುಗಳಿಗಿಂತ ದೊಡ್ಡವುಗಳನ್ನು ನೋಡ ಬಹುದೆಂಬ ವಾಗ್ದತ್ತ ಕೊಡುತ್ತಾನೆ. (ಯೋಹಾ. ೧, ೩೬—೫೧ ವರೆಗೆ)

ಯೋಹಾನ ಯಾಕೋಬರೂ, ಅಂದ್ರೆಯ ಪೇತ್ರರೂ ಗಲಿಲಾಯ ಸಮುದ್ರದ ಮೀನುಗಾರರಾಗಿದ್ದರು; ಮತ್ತೆ ಮುಂಗುರ್ತಿನ ಹಾಗೆ ಇರುವ ವಿದ್ಯಮಾನಗಳಲ್ಲಿ ಅವರನ್ನು ಕ್ರಿಸ್ತನು ಖಂಡಿತವಾಗಿ ಕರದಾಗ, ಅವರಿಗೆ — ನಿಮ್ಮನ್ನು ಮನುಷ್ಯರನ್ನು ಹಿಡಿಯುವವರಾಗ ಮಾಡುವೆನೆಂಬ ವಾಗ್ದತ್ತ ಕೊಟ್ಟನು. (ಮತ್ತಾ. ೪, ೧೮.)

ಮತ್ಥಾಯನನ್ನು ಸುಂಕಕ್ಕೆ ಕೂತಿರುವಾಗ್ಯೆ ಕರದನು (ಮತ್ತಾ. ೯, ೯.)

೩) ಯೋಹಾನನೂ ಯಾಕೋಬನೂ ಪೇತ್ರನೂ ರಕ್ಷಕನಿಗೆ ಅತಿ ಸಮೀಪದವರಾಗಿದ್ದರು. ಹನ್ನೆರಡು ಮಂದಿ ಸ್ವಲ್ಪ ದೂರದಲ್ಲಿ. ೭೦ ಮಂದಿ ಶಿಷ್ಯರು ಇನ್ನೂ ದೂರ (ಲೂಕ. ೧೦.). ಹನ್ನೆರಡು, ಎಪ್ಪತ್ತು ಎಂಬ ಸಂಖ್ಯೆಗಳು ವಿಶೇಷವಾಗಿದ್ದವು. ೧ನೇದರಿಂದ ಇಸ್ರಯೇಲನ ೧೨ ಗೋತ್ರಗಳನ್ನೂ, (ಸಮ ನೋಡು! ಮತ್ತಾ. ೧೯, ೨೮.) ೨ನೇದರಿಂದ ಭೂಮಿಯ ೭೦ ಜನಾಂಗಗಳನ್ನೂ (ಇಲ್ಲವೆ ಮೋಶೆಯ ಆತ್ಮವು ಇಡಲ್ಪಟ್ಟ ೭೦ ಮಂದಿ ಹಿರಿಯರನ್ನೂ ೪ ಮೋಶೆ. ೧೧.) ನೆನಪು

ಮಾಡಿ ಕೊಳ್ಳ ಬೇಕು. ೧೨ ಮಂದಿ ಎಲ್ಲಾ ಬಿಟ್ಟು ಯೇಸುವನ್ನು ಹಿಂಬಾಲಿಸಿದರು. ೭೦ ಮಂದಿ ತಮ್ಮ ಲೌಕಿಕ ಉದ್ಯೋಗದಲ್ಲಿ ಉಳುಕೊಂಡರು. ೧೨ ಮಂದಿಯನ್ನು ಕ್ರಿಸ್ತನು (ಆರಂಭ ಮಾಡುವವರಾಗಿ) ಪ್ರಸಂಗಿಸಲಿಕ್ಕೂ ರೋಗಗಳನ್ನು ವಾಶಿ ಮಾಡಲಿಕ್ಕೂ ಇಸ್ರಯೇಲಿನ ಗೋತ್ರಗಳಿಗೆ ಕಳುಹಿಸಿದನು. (ಲೂಕ. ೯.) ಮತ್ತೊಂದು ಸಾರಿ ಅದೇ ಕೆಲಸಕ್ಕೆ ೭೦ ಶಿಷ್ಯರನ್ನು ಸಹಾ ಇಬ್ಬರಿಬ್ಬರಾಗಿ ಕಳುಹಿಸಿದನು. ಅವರಿಗೆ ಹೇಳಿದ್ದು: "ಬೆಳೆ ಬಹಳ; ಆದರೆ ಕೆಲಸದವರು ಸ್ವಲ್ಪ. ಹೀಗಿರುವದರಿಂದ ಬೆಳೆಯ ಯಜಮಾನನಿಗೆ ಅವನು ತನ್ನ ಬೆಳೆಗೆ ಕೆಲಸದವರನ್ನು ಕಳುಹಿಸ ಬೇಕೆಂದು ಬೇಡಿ ಕೊಳ್ಳಿರಿ. (ಲೂಕ. ೧೦.)

ಪರಿಶಿಷ್ಟ. ಸೀಮೋನನು ರಕ್ಷಕನಿಗೂ ಅವನ ಕೆಲಸಕ್ಕೂ ತನ್ನನ್ನು ಪೂರ್ಣವಾಗಿಯೂ ಖಂಡಿತವಾಗಿಯೂ ಆಸಕ್ತಿಯಾಗಿಯೂ ಒಪ್ಪಿಸಿ ಕೊಡುವದರಲ್ಲಿ ಪ್ರಖ್ಯಾತಿ ಹೊಂದಿದವನಾಗಿರಲಾಗಿ, ರಕ್ಷಕನಿಂದ ಪೇತ್ರನು ಇಲ್ಲವೆ ಕೇಫನು (ಅಂದರೆ ಬಂಡೆ) ಎಂಬ ಮಾನದ ನಾಮವನ್ನು ಹೊಂದಿದನು. ಒಂದು ಸಾರಿ ಕರ್ತನು (§ ೧೪೯, ೧.) ಆದರೆ ನೀವು ನಾನು ಯಾರೆಂದು ಹೇಳುತ್ತೀರಿ? ಎಂದು ಶಿಷ್ಯರ ಹತ್ತರ ಕೇಳಿದಾಗ, ಸೀಮೋನನು ವೇಗದಿಂದಲೂ ಖಂಡಿತವಾಗಿಯೂ ಉತ್ತರ ಕೊಟ್ಟದ್ದೇನಂದರೆ: ನೀನು ಜೀವವುಳ್ಳ ದೇವರ ಮಗನಾದ ಕ್ರಿಸ್ತನು! ಅದಕ್ಕೆ ಯೇಸು ಪ್ರತ್ಯುತ್ತರವಾಗಿ ಹೇಳಿದ್ದು: ಯೋನನ ಮಗನಾದ ಸೀಮೋನನೇ, ನೀನು ಭಾಗ್ಯವಂತನು; ಯಾಕಂದರೆ (ಇದು) ರಕ್ತ ಮಾಂಸವಲ್ಲ, ಪರಲೋಕಗಳಲ್ಲಿರುವ ನನ್ನ ತಂದೆಯು ನಿನಗೆ ಪ್ರಕಟ ಮಾಡಿದ್ಧಾನೆ. ಮತ್ತು ನಾನು ನಿನಗೆ ಹೇಳುತ್ತೇನೆ, ನೀನು ಪೇತ್ರನು ಮತ್ತು ಈ ಬಂಡೆಯ ಮೇಲೆ ನನ್ನ ಸಭೆಯನ್ನು ಕಟ್ಟುವೆನು; ಪಾತಾಳದ ದ್ವಾರಗಳು ಅದನ್ನು ಜೈಸಲಾರವು; ಮತ್ತು ಪರಲೋಕರಾಜ್ಯದ ಬೀಗದ ಕೈಗಳನ್ನು ನಿನಗೆ ಕೊಡುವೆನು. ನೀನು ಭೂಮಿಯ ಮೇಲೆ ಕಟ್ಟುವಂಥಾದ್ದು ಪರಲೋಕಗಳಲ್ಲಿ ಕಟ್ಟಲ್ಪಟ್ಟಿರುವದು; ಮತ್ತು ಭೂಮಿಯ ಮೇಲೆ ಬಿಚ್ಚುವಂಥಾದ್ದು ಪರಲೋಕಗಳಲ್ಲಿ ಬಿಚ್ಚಲ್ಪಟ್ಟಿರುವದು. (ಮತ್ಥಾ. ೧೬, ೧೩—೧೯.) ಹ್ಯಾಗೂ ಮತ್ಥಾ. ೧೮, ೧೮. ಸಹ ನೋಡು! ಅಲ್ಲಿ ಈ ಅಧಿಕಾರವು ಎಲ್ಲಾ ಶಿಷ್ಯರಿಗೆ ಕೊಡಲ್ಪಡುತ್ತದೆ. ಅತಿ ಶ್ರೇಷ್ಟವಾದ ಮಮತೆಯಿಂದಲೂ ಮೃದುವಾದ ಪ್ರೀತಿಯಿಂದಲೂ ಯೋಹಾನನು ತನ್ನ ದಿವ್ಯ ಯಜಮಾನನನ್ನು ಸುತ್ತಿ ಕೊಂಡಿದ್ದನು. ಆದದರಿಂದ ಅವನು ಕರ್ತನು ಪ್ರೀತಿ ಮಾಡಿದ ಶಿಷ್ಯನು ಆದರೆ ಅವನ ಮನಸ್ಸಿನ ಮೃದುತ್ವವು ಲಘುತ್ವವಾಗಿರಲಿಲ್ಲ; ಇದು ಅವನ ವಾತ್ಸಲ್ಯದ ಸಂತಾಪದಿಂದ ಕಂಡು ಬರುತ್ತದೆ. ಹ್ಯಾಗಂದರೆ ಅವನು ಒಂದು ಸಾರಿ ಕ್ರಿಸ್ತನಿಗೆ ಬಿಡಾರ

ಕೊಡದಂಥಾ ಸಮಾರ್ಯದ ಒಂದು ಊರಿನ ಮೇಲೆ ಎಲೀಯನ ಹಾಗೆ ಬೆಂಕಿಯನ್ನು ಸುರಿಸ ಬೇಕೆಂದು ತನ್ನ ಸಹೋದರನಾದ ಯಾಕೋಬನೊಡನೆ ಆಲೋಚನೆ ಮಾಡಿದನು. ಆದರೆ ಕರ್ತನು ಅವರಿಗೆ ಹೇಳಿದ್ದು: ನೀವು ಎಂಥಾ ಆತ್ಮದವರಾಗಿದ್ದೀರಿ ಎಂದು ಅರಿಯಿರಾ? (ಲೂಕ. ೯, ೫೧—೫೫ ಸಮ ನೋಡು § ೮೦, ೨.) ಅದು ಕ್ರಿಸ್ತನು ಅವರಿಬ್ಬರಿಗಿಟ್ಟ ಮಾನನಾಮವಾದ ಬೊಅನರ್ಗೆಸ್ ಎಂಬದರಿಂದಲೂ ಕಾಣುತ್ತದೆ. (ಹಾಗಂದರೆ ಗುಡುಗಿನ ಮಕ್ಕಳು. ಮಾರ್ಕ. ೩, ೧೭) ಅದರ ಹೊರ್ತು ಯೋಹಾನನು ಬರದ ಕಾಗದಗಳಲ್ಲಿಯೂ ಪ್ರಕಟಣೆಯಲ್ಲಿಯೂ ಎಲ್ಲಾ ಪಾಪವಾದದ್ದನ್ನು ಶಿಕ್ಷಿಸುವಂಥಾ ಮುಖದಾಕ್ಷಿಣ್ಯ ನೋಡದೆ ಚುರುಕಾಗಿರುವಂಥಾ ಗಂಭೀರತ್ವದಿಂದಲೂ ಕಾಣುತ್ತದೆ.

ಪೇತ್ರನೂ ಯೋಹಾನನೂ ಯಾಕೋಬನೂ ವಿಶೇಷವಾಗಲಿಕ್ಕೆ ಆದ ಕಾರಣವು ಒಂದು ವೇಳ್ಯೆ ಅವರು ದೇವರ ರಾಜ್ಯದಲ್ಲಿ ೩ ಮುಖ್ಯವಾದ ಮಾರ್ಗಗಳ ಮೂಲ್ಯಸ್ತರೂ ಅವುಗಳನ್ನು ಆರಂಭಿಸಿದವರೂ ಆದದ್ದೇ ಆಗಿದ್ದೀತು.



## § 126. ಮುಂದೆ ಬರುವಂಥಾದ್ದು

೧) ಕರ್ತನ ಶಿಷ್ಯರಾದ ಕೆಲವು ಸ್ತ್ರೀಯರ ಹೆಸರುಗಳು ಸಹಾ ಉಂಟು. ೧, ಮರೀಯ. ಚಿಕ್ಕ ಯಾಕೋಬನ ತಾಯಿ; ಯೇಸುವಿನ ತಾಯಿಯ ಸಹೋದರಿ; (ಯೋಹಾ. ೧೯, ೨೫.) ೨, ಮರಿಯ ಮಗ್ದಲದವಳು. ಇವಳೊಳಗಿಂದ ಕರ್ತನು (ಮಾರ್ಕ. ೧೬, ೯) ಏಳು ದೆವ್ವಗಳನ್ನು ಹೊರಡಿಸಿದ್ದನು. (ಸಂಪ್ರದಾಯದ ಪ್ರಕಾರ ಫರಿಸಾಯನ ಮನೆಯಲ್ಲಿ ಯೇಸುವನ್ನು ಅಭಿಷೇಕಿಸಿದ ಆ ಪಾಪಿಣಿಯು ಇವಳೇ! ಅವಳ ವಿಷಯವಾಗಿ ಯೇಸು ಹೇಳಿದ್ದು: "ಬಹಳವಾಗಿರುವ ಅವಳ ಪಾಪಗಳು ಮನ್ನಿಸಲ್ಪಟ್ಟವೆ ಯಾಕಂದರೆ ಅವಳು ಬಹಳ ಪ್ರೀತಿ ಮಾಡಿದ್ದಾಳೆ." (ಲೂಕ. ೭, ೩೬—೫೦) ೩, ಬೆಥಾನ್ಯದವಳಾದ ಮರೀಯಳು. ಇವಳು ಯೇಸುವಿನ ಕಾಲುಗಳ ಹತ್ತರ ಕೂತು ಕೊಂಡು ಒಂದವಶ್ಯವಾದದ್ದನ್ನು ಕಲಿಯಲಿಚ್ಫೈಸಿದಳು. ೪, ಮಾರ್ಥಳು (ಲೂಕ. ೧೦, ೩೮) ಇವಳು ಮೇಲಿನವಳ ಸಹೋದರಿ. ಯೇಸು ಮನೆಗೆ ಬಂದಾಗ ಬಹಳ ಕೆಲಸದಲ್ಲಿ ಬಿದ್ದಿದ್ದವಳು. ಇವರ ಸಹೋದರನಾದ ಲಾಜರನನ್ನು ಕ್ರಿಸ್ತನು ಮರಣದಿಂದ ಎಬ್ಬಿಸಿದನು. ೫, ಸಾಲೋಮೆ. ಯೋಹಾನ ಯಾಕೋಬರ ತಾಯಿಯಾಗಿದ್ದಳೆಂತ ಕಾಣುತ್ತದೆ; (ಸಮ ನೋಡು ಮಾರ್ಕ. ೧೫, ೪೦. ೧೬,

೧ನೇ ಶ್ಲೋಕಕ್ಕೆ ಮತ್ತಾ. ೨೭, ೫೬.) ೬, ಯೋಹನ್ನಾ ಇವಳು ಹೆರೋದನ ಉಗ್ರಾಣದವನಾದ ಖೂಜನ ಹೆಂಡತಿ. ೭, ಸುಸನ್ನಳೂ ಬೇರೆ ಅನೇಕರೂ. ಇವರು ತಮಗುಂಟಾದವುಗಳಿಂದ ಅವನಿಗೆ ಸೇವೆ ಮಾಡುತ್ತಾ ಇದ್ದರು. (ಲೂಕ. ೮, ೩.)

ಪರಿಶಿಷ್ಟ. ಹಳೇ ಒಡಂಬಡಿಕೆಯಲ್ಲಿ ಸಹಾ ಸ್ತ್ರೀಗೆ ದೇವರ ಸಭೆಯಲ್ಲಿ ಸ್ವತಂತ್ರದ ಸ್ಥಾನವು ಇರಲಿಲ್ಲ. ದೇವರ ರಾಜ್ಯವನ್ನು ವಿಕಸಿತ ಮಾಡುವದರಲ್ಲಿ ಸ್ವಬುದ್ಧಿಯಿಂದ ಯಾವದಕ್ಕಾದರೂ ಕೈ ಹಾಕಲಿಕ್ಕೆ ಅಧಿಕಾರವು ಇರಲಿಲ್ಲ. ಯಾಕಂದರೆ ಮೊದಲನೇ ಸಾರಿ ಸ್ತ್ರೀಯು ಕೈ ಹಾಕಿದಾಗಲೇ ವಿಕಸಿತವಾಗ ಬೇಕಾದದ್ದು ಕೆಳಗೆ ಮೇಲಾಗಿ ಹೋಯಿತು. ಹೀಗಾಗಿ ಸ್ತ್ರೀಗೆ ಆರಂಭದಲ್ಲಿದ್ದ (ಪುರುಷನಿಗೆ ಸಮಾನಳಾಗಿರುವ) ಸ್ಥಾನವು ಹೋಯಿತು. ೨ನೇ ಆದಾಮನಿಂದುಂಟಾದ ಹೊಸ ಚರಿತ್ರದಲ್ಲಿ ಎರಡು ಕುಲದವರಿಗೂ ದೇವರ ರಾಜ್ಯದಲ್ಲಿರುವ ಸಂಬಂಧಕ್ಕೆ ಪ್ರಾಮುಖ್ಯ ಸೂತ್ರವು ಇದೇ—ಗಂಡೂ ಇಲ್ಲ ಹೆಣ್ಣೂ ಇಲ್ಲ; ಯಾಕಂದರೆ ನೀವೆಲ್ಲರೂ ಕ್ರಿಸ್ತ ಯೇಸುವಿನಲ್ಲಿ ಒಬ್ಬನೇ ಆಗಿದ್ದೀರಿ (ಗಲ. ೩, ೨೮ನೇ ವಚನ.) ಕಾಲಗಳ ಸಂಪೂರ್ತಿಯಲ್ಲಿ ಸ್ತ್ರೀಗೆ ದೇವರು ಮನುಷ್ಯನಾಗುವಂಥಾದನ್ನು ಸಾಧ್ಯ ಮಾಡುವಂಥಾ ಅಮಿತವಾಗಿ ಉನ್ನತವಾದಂಥಾ ಸೌಭಾಗ್ಯದ ಕರೆಯುವಿಕೆಯು ಶಿಕ್ಕಲು, ಆಗ್ಯೆ ಒಂದೇ ಪೆಟ್ಟಿಗೆ ಸಭೆಯ ಕಡೆಗೆ ಸ್ತ್ರೀಯ ಸ್ಥಾನವು ಪೂರ್ಣವಾಗಿ ಬೇರೆ ಆಯಿತು. (ಹೀಗಾಗಿ ಜೀವನದ ವಿಷಯವಾಗಿ ಸಹಾ) ಅಂದಿನಿಂದ ಸ್ತ್ರೀಕುಲವು ಸಹಾ ತನಗೆ ಅಂಥಾ ಕುಲಕ್ಕೆಂದೇ ಕೊಡಲ್ಪಟ್ಟ ದಾನಗಳನ್ನೂ ಬಲಗಳನ್ನೂ, ದೇವರ ರಾಜ್ಯವನ್ನು ವಿಸ್ತರಿಸುವದಕ್ಕೋಸ್ಕರ ಸ್ವತಂತ್ರವಾಗಿ ಪ್ರಯೋಗಿಸಲಿಕ್ಕೆ ಆರಂಭ ಮಾಡಿತು. ಹ್ಯಾಗೆ ಸ್ತ್ರೀಯು ಲೋಕದ ರಕ್ಷಕನನ್ನು ತನ್ನ ಉದರದಲ್ಲಿ ಧರಿಸಿ, ಹೆತ್ತು ಮೊಲೆ ಕೊಟ್ಟಳೋ? ಹಾಗೆಯೇ ತಿರಿಗಿ ಸ್ತ್ರೀಯರೇ ಮೃದುವಾಗಿರುವಂಥಾ ಮನಸ್ಸು ಕೊಟ್ಟು ಮಾಡುವಂಥಾ ಪ್ರೀತಿಯಿಂದ ಅವನನ್ನು ಅವನು ತನ್ನ ಉದ್ಯೋಗದ ಕೆಲಸವನ್ನು ಮಾಡುವಾಗ್ಯೆ ಸೇವಿಸಿದವರೂ ತಮಗುಂಟಾದವುಗಳಿಂದ ಅವನಿಗೆ ಕೊಟ್ಟವರೂ ಆಗಿರುತ್ತಾರೆ. ಪುರುಷರು ಸ್ಥಿರವಿಲ್ಲದೆಯೂ ಹೇಡಿಗಳಾಗಿಯೂ ಓಡಿ ಹೋಗುವಾಗ್ಯೆ ಸ್ತ್ರೀಯರು ವಿಶ್ವಾಸದಲ್ಲಿಯೂ ಪ್ರೀತಿಯಲ್ಲಿಯೂ ಆಶ್ಚರ್ಯಕರವಾದ ತ್ರಾಣವುಳ್ಳವರಾಗಿ ನಿಂತು ಕೊಳ್ಳುತ್ತಾರೆ. ಅವನು ಸಂಕಷ್ಟವಾಗಿಯೂ ಕಷ್ಟವಾಗಿಯೂ ಅವಮಾನಕರವಾಗಿಯೂ ಇರುವ ಮರಣವನ್ನು ಅನೀತಿವಂತನ ಹಾಗೆ ಸಾಯುವ ಪರ್ಯಂತರಕ್ಕೂ ಅವನ ಕ್ರೂಜೆಯ ಬಳಿಯಿಂದ ತೊಲಗಲೊಲ್ಲರು. ಇವರು (ಸ್ತ್ರೀಯರು) ಆತನು

ಭೂಮಿಯಲ್ಲಿ ಸಂಚಾರ ಮಾಡಿದಾಗ ಅವನಿಗೆ ಸೇವೆ ಮಾಡಿದ ಹಾಗೆ ಮತ್ತೆ ಸಹಾ ಅವನು ಪರಲೋಕಕ್ಕೆ ಏರಿ ಹೋದ ಮೇಲೆ (ಅವನ ವಾಕ್ಯವನ್ನು ಮಾರ್ಕ. ೯, ೩೭. ಮತ್ಥಾ. ೨೫, ೪೦ ವಚನ ನೆನಪು ಮಾಡಿ ಕೊಂಡು) ಬಡವರಲ್ಲಿಯೂ ರೋಗಿಗಳಲ್ಲಿಯೂ ಚಿಕ್ಕವರಲ್ಲಿಯೂ ಬಲಹೀನರಲ್ಲಿಯೂ ಅವನಿಗೆ ಉಣ್ಣ ಕೊಟ್ಟವರೂ ಕುಡಿಯ ಕೊಟ್ಟವರೂ ಉಡಕೊಟ್ಟವರೂ ಅವನನ್ನು ಸೇರಿಸಿ ಕೊಂಡು ಪರಾಮ್ಕರಿಸಿದವರೂ ಹಿರಿಗಿ ಸ್ತ್ರೀಯರೇ. ಬಲಹೀನರಾದ ಸ್ತ್ರೀಯರು ಎಷ್ಟೇ ಕನ್ನಿಕೆಯರೂ ಅವನ ಸಾಕ್ಷಿಗೋಸ್ಕರ ಸಂತೋಷವಾಗಿ ಅತ್ಯಂತ ವ್ಯಥೆಯುಳ್ಳ ಸಾಕ್ಷಿಮರಣವನ್ನು ಪಟ್ಟರು. ಗಂಡಂದಿರನ್ನು ಹೆಂಡರು ಸುವಾರ್ತೆಗೆ ಗೆದ್ದರು. (೧ಕೊರಿ. ೭, ೧೪. ೧೬. ೧ ಪೇತ್ರ. ೩, ೧.೨.) ಯುದ್ಧದಲ್ಲಿ ಶತ್ರುಗಳ ಕೈಯಲ್ಲಿ ಬಿದ್ದ ಕನ್ನಿಕೆಯರು ರಕ್ಷಣ್ಯವಾರ್ತೆಯ ಬೀಜವನ್ನು ಯುದ್ಧಸ್ಥರಾದ ಕಾಡುಪಾಳ್ಯಗಾರರ ಮನೆತನಗಳಲ್ಲಿ ತಂದರು. ರಾಜಕುಲದ ಕನ್ನಿಕೆಯರು ಅತ್ಯುತ್ತಮವಾದ ಆಭರಣವೆಂಬ ಹಾಗೆ ಸುವಾರ್ತೆಯನ್ನು ತಮ್ಮ ಗಂಡಂದಿರ ಮನೆಗಳಿಗೆ ತಂದು, ಮ್ಲೇಂಛ ಅರಸುಗಳೂ ಮ್ಲೇಂಛ ಜನಾಂಗಗಳೂ ಕ್ರೈಸ್ತರಾಗುವದಕ್ಕೆ ಕಾರಣವಾದರು. ಕ್ರೈಸ್ತ ಪಾದ್ರಿಯವರ ಹೆಂಡರು ತಮ್ಮ ಗಂಡಂದಿರಿಗೆ ಸಹಾಯ ಮಾಡಿ, ಬಹಳ ಆಶೀರ್ವಾದಗಳನ್ನು ಉಂಟು ಮಾಡುತ್ತಾರೆ.

೨) ಮಂತ್ರಿಸಭೆಯಲ್ಲಿದ್ದ ನಿಕೊದೇಮನೂ ಅರಿಮತ್ಥೈಯದ ಯೋಸೇಫನೂ ರಹಸ್ಯವಾಗಿ ಯೇಸುವಿನ ಶಿಷ್ಯರಾಗಿದ್ದರೆಂದು ಹೇಳಿಯದೆ. ನಿಕೊದೇಮನು ಯೆಹೂದ್ಯರಿಗೆ ಭಯ ಪಟ್ಟು ರಾತ್ರಿಕಾಲದಲ್ಲಿ ಮಾತ್ರವೇ ಯೇಸುವಿನ ಬಳಿಗೆ ಬರಲಿಕ್ಕೆ ಧೈರ್ಯ ಗೊಂಡನು. ಇವನು ಯೇಸುವಿನಿಂದ ನೀರಿನಿಂದಲೂ ಆತ್ಮದಿಂದಲೂ ಪುನರ್ಜನನವು ಅವಶ್ಯವಾಗಿದೆ ಎಂಬದರ ವಿಷಯವಾಗಿ ಬೋಧನೆ ತಕ್ಕೊಂಡನು (ಯೋಹಾ. ೩. ಸಂಧಿ). ಆದರೂ ಅನ್ಯಾಯವಾಗಿ ಯೇಸುವಿನ ಮೇಲೆ ಅಪರಾಧವನ್ನು ಹಾಕುವಾಗ್ಯೆ ಒಂದು ಸಾರಿ ಮಂತ್ರಿಸಭೆಯಲ್ಲಿ ಸಹಾ ಮಾತಾಡಲಿಕ್ಕೆ ಧೈರ್ಯಗೊಂಡನು (ಯೋಹಾ. ೭, ೫೦). ಹ್ಯಾಗೂ ಶಿಲುಬೆಗೆ ಹಾಕಲ್ಪಟ್ಟವನ ದೇಹವನ್ನು ಹೂಳಿಡುವದಕ್ಕೋಸ್ಕರ ಅರಿಮತ್ಥೈಯದ ಯೋಸೇಫನಿಗೆ ಕೂಡಿ ಕೊಂಡವನಾಗಿ ಯೇಸುವಿನ ಮರಣಾದನಂತರ ಪ್ರಕಟವಾಗಿ ತಾನು ಆತನ ಶಿಷ್ಯನೆಂಬದನ್ನು ತೋರಿಸಿದನು.

೩) ಮೇಲೆ ಹೇಳಿದ ಶಿಷ್ಯರ ಹೊರ್ತು ಮತ್ತಾಬ್ಬರನ್ನು ಸಹಾ ತನ್ನನ್ನು ಹಿಂಬಾಲಿಸಲಿಕ್ಕೆ ಕರದನು. ಅಥವಾ ಅವರು ತಾವೇ ಹಿಂಬಾಲಿಸುತ್ತೇವೆಂದು ಹೇಳಿದರು. ಆದರೆ ತಮ್ಮನ್ನು ತಾವೇ ಅಲ್ಲಗಳಿಯ ಬೇಕೆಂಬ ಮಾತನ್ನು ಮಾಡಲಿಕ್ಕೆ ಅವರಿ

ಗೆ ಮನಸ್ಸು ಇರಲಿಲ್ಲ. ಒಬ್ಬನಿಗೆ ಯೇಸುವು — ನರಿಗಳಿಗೆ ಕುಣಿಗಳೂ ಆಕಾಶದ ಪ ಕ್ಷಿಗಳಿಗೆ ಗೂಡುಗಳೂ ಉಂಟು; ಆದರೆ ಮನುಷ್ಯನ ಮಗನಿಗೆ ತಲೆ ಇಡ ಸ್ಥಳವಿಲ್ಲ ವೆಂದು ಹೇಳಿದಾಗ, ಅವನು ಚಿಯ ಪಟ್ಟು ಹೋದನು. ಮತ್ತೊಬ್ಬನು ತಾನು ಮೊ ದಲು ಹೋಗಿ ತನ್ನ ತಂದೆಯನ್ನು ಹೂಳಿಡುವ ಹಾಗೆ ಅಪ್ಪಣೆ ಕೊಡ ಬೇಕೆಂದು ಬೇ ಡಿ ಕೊಂಡಾಗ ಯೇಸುವು "ಸತ್ತವರೇ ತಮ್ಮ ಸತ್ತವರನ್ನು ಹೂಳಿಡಲಿ; ಆದರೆ ನೀ ನು ಹೋಗಿ ದೇವರ ರಾಜ್ಯವನ್ನು ಸಾರು" ಎಂದು ಅವನಿಗೆ ಉತ್ತರ ಕೊಟ್ಟನು. ಇ ನ್ನೊಬ್ಬನು ಮೊದಲು ತನ್ನ ಮನೆಯವರಿಂದ ಅಪ್ಪಣೆ ತಕ್ಕೊಳ್ಳಲಿಕ್ಕೆ ಅಪ್ಪಣೆ ಕೊಡ ಬೇಕೆಂದಂದಾಗ ಯೇಸುವು "ತನ್ನ ಕೈಯನ್ನು ನೇಗಲಿಗೆ ಹಾಕಿ ಹಿಂದಕ್ಕೆ ನೋಡುವ ವನ್ಯಾವನಾದರೂ ದೇವರ ರಾಜ್ಯಕ್ಕೆ ತಕ್ಕವನಲ್ಲ" ಅಂದನು (ಲೂಕ. ೯, ೫೭— ೬೨). ಆ ಐಶ್ವರ್ಯವಂತ ಯೌವನಸ್ಥನು ನನಗಿನ್ನು ಏನು ಕಡಿಮೆ ಎಂದು ಕೇಳಿದಾ ಗ ಕರ್ತನು — ನೀನು ಸಂಪೂರ್ಣನಾಗ ಬೇಕಾದರೆ ಹೋಗಿ ನಿನಗಿರುವವುಗಳನ್ನು ಮಾ ರಿ ಬಡವರಿಗೆ ಕೊಡು! ಮತ್ತು ಬಂದು ನನ್ನನ್ನು ಹಿಂಬಾಲಿಸು ಎಂದು ಉತ್ತರ ಕೊ ಡಲು ಯೌವನಸ್ಥನು ದುಃಖ ಪಟ್ಟು ಹೋದನು. ಯಾಕಂದರೆ ಅವನಿಗೆ ಬಹಳ ಆ ಸ್ತಿ ಇತ್ತು (ಮತ್ಥಾ. ೧೯, ೧೬ ಮೊದಲಾದ ಶ್ಲೋಕಗಳು).



## § 127. ಕ್ರಿಸ್ತನ ಪ್ರವಾದಿಕಾರ್ಯ

ಲೂಕ. ೪, ೧೬—೨೧. ಪ್ರವಾದಿಯಾದ ಯೆಶಾಯನ ಪುಸ್ತಕವು ಅವನಿಗೆ ಕೊ ಡಲ್ಪಟ್ಟಾಗ ಪುಸ್ತಕವನ್ನು ತೆರದು (ಯೆಶಾಯ. ೬೧, ೧. ೨ ವಚನ.) ಕರ್ತನ ಆತ್ಮವು ನನ್ನ ಮೇಲೆ ಅದೆ, ಯಾಕಂದರೆ ಬಡವರಿಗೆ ಸುವಾರ್ತೆ ಪ್ರಸಂಗಿಸುವದಕ್ಕೆ ನನ್ನನ್ನು ಅ ಭಿಷೇಕಿಸಿ ಇದ್ದಾನೆ. ನಲಗಿದ ಹೃದಯವುಳ್ಳವರನ್ನು ಗುಣ ಮಾಡುವದಕ್ಕೂ, ಸೆರೆ ಯವರಿಗೆ ಬಿಡುಗಡೆಯನ್ನೂ ಕುರುಡರಿಗೆ ದೃಷ್ಟಿಯನ್ನೂ ಸಾರುವದಕ್ಕೂ, ಜಜ್ಜಲ್ಪ ಟ್ಟವರನ್ನು ಬಿಡುಗಡೆಯಾಗಿ ಕಳುಹಿಸುವದಕ್ಕೂ ಕರ್ತನ ಹಿತವಾದ ಸಂವತ್ಸರವನ್ನು ಸಾರುವದಕ್ಕೂ ನನ್ನನ್ನು ಕಳುಹಿಸಿದ್ದಾನೆ, ಎಂದು ಬರದಿರುವ ಸ್ಥಳವನ್ನು ಕಂಡುಕೊಂ ಡನು. ಮತ್ತು ಅವನು ಅವರಿಗೆ ಹೇಳಿದ್ದು — ಈ ಹೊತ್ತು ಈ ಬರಹವು ನಿಮ್ಮ ಕಿವಿ ಗಳಲ್ಲಿ ಈಡೇರಿತು.

೧) ಪ್ರವಾದಿಯಾಗಿ ಕ್ರಿಸ್ತನು—ಹಳೇ ಒಡಂಬಡಿಕೆಯ ನೇಮವೂ ಪ್ರವಾದಿಗ ಳೂ ಸಿದ್ಧ ಮಾಡುವಂಥಾದ್ದಾಗಿ ಮಾತ್ರವೇ, ಆದದರಿಂದ ಅಪೂರ್ಣವಾಗಿಯೇ ಬೋಧಿ

ಸ ಶಕ್ತವಾದಂಥಾ ನಮ್ಮ ರಕ್ಷಣ್ಯದ ವಿಷಯದಲ್ಲಿ, ದೇವರ ಪೂರ್ಣ ಸುಯೋಚನೆಯನ್ನೂ ಕೃಪೆಯ ಚಿತ್ತವನ್ನೂ ತಿಳಿಸುವದೂ ಸಾರುವದೂ ಅವಶ್ಯವಾಗಿತ್ತು. ಅವನು ಸಾಕ್ಷಿ ಕೊಟ್ಟು ಹೇಳಿದ್ದು: “ನ್ಯಾಯಪ್ರಮಾಣವನ್ನಾದರೂ ಪ್ರವಾದಿಗಳನ್ನಾದರೂ ತೆಗದು ಹಾಕಲಿಕ್ಕೆ ಬಂದೆನೆಂದು ನೆನಸ ಬೇಡಿರಿ; ತೆಗದು ಹಾಕುವದಕ್ಕಲ್ಲಾ ಪೂರೈಸುವದಕ್ಕೆ ಬಂದಿದ್ದೇನೆ. ನಿಶ್ಚಯವಾಗಿ ನಿಮಗೆ ಹೇಳುತ್ತೇನೆ ಆಕಾಶವೂ ಭೂಮಿಯೂ ಗತಿಸಿ ಹೋಗುವ ಪರ್ಯಂತರ ನ್ಯಾಯಪ್ರಮಾಣದಲ್ಲಿಂದ ಒಂದು ಸೊನ್ನೆಯಾದರೂ ಗುಡುಸಾದರೂ ಅವುಗಳೆಲ್ಲಾ ಆಗುವ ಮಟ್ಟಿಗೂ ಗತಿಸಿ ಹೋಗದು.” (ಮತ್ಥಾ. ೫, ೧೭. ೧೮.) ಈ ಮಾತು ನೇಮವನ್ನು ಹ್ಯಾಗೋ ಹಾಗೆಯೇ ಪ್ರವಾದನೆಯನ್ನು ಕುರಿತೂ, ನೀತಿನ್ಯಾಯವನ್ನು ಹ್ಯಾಗೋ ಹಾಗೆಯೇ ನಿಷ್ಠೆನ್ಯಾಯವನ್ನು ಕುರಿತೂ, ಸತ್ಯವಾಗಿರುತ್ತದೆ; ಹ್ಯಾಗಂದರೆ ಅದೆಲ್ಲಾ ಅವಯವವುಳ್ಳ ಬಿಡಿಸ ಕೂಡದ ಒಂದೇ ಸಂಗತಿಯಾಗಿತ್ತು. ಇದರ ಸಾರವು ಹ್ಯಾಗೂ ತನಗೋಸ್ಕರ ಮಾತ್ರವೇ ಇದ್ದಂಥಾ ನೀತಿನ್ಯಾಯವೆಂಬದು (ದಶವಾಕ್ಯ ಇತ್ಯಾದಿ) ನಿಶ್ಚಯ. ಆದರೆ ನಿಷ್ಠಾನ್ಯಾಯವೂ (ಎಲ್ಲಾ ಆಚಾರಗಳು) ವಾಗ್ದತ್ತವೂ ತಮಗೋಸ್ಕರವಲ್ಲ, ಯಾವದಕ್ಕೆ ಬೆರಳು ತೋರಿಸಿದವೋ ಅದಕ್ಕೋಸ್ಕರ ಇದ್ದವು. ಆದಕಾರಣ ಇವುಗಳ ಸಂಪೂರ್ತಿಯು ನೀತಿನ್ಯಾಯದ ಸಂಪೂರ್ತಿಗಿಂತ ಬೇರೇನಾದರೂ ಉಂಟು ಮಾಡ ಬೇಕೆಂಬದು ಆಗುತ್ತದೆ. ನೀತಿನೇಮವು ಅದರ ಸಂಪೂರ್ತಿಯಿಂದ ಎಲ್ಲಾ ಯುಗಗಳಲ್ಲಿಯೂ ಮೀರಲಾಗದಂಥಾದ್ದೆಂದು ಸ್ಥಾಪಿಸಲ್ಪಡ ಬೇಕಾಯಿತು. ಆದರೆ ಅವುಗಳು ತಮ್ಮ ಸಂಪೂರ್ತಿಯಿಂದ ನಿಬಂಧನೆಯ ಬಲವನ್ನು ಕಳಕೊಳ್ಳ ಬೇಕಾಯಿತು.

ಪರಿಶಿಷ್ಟ. ಕ್ರಿಸ್ತನು ನೇಮವನ್ನೂ ಪ್ರವಾದನೆಯನ್ನೂ ಸಂಪೂರ್ತಿ ಮಾಡಿದ್ದು, ವಾಕ್ಯದಿಂದಲೂ ಕ್ರಿಯೆಯಿಂದಲೂ ಆಯಿತು. ಇದರಲ್ಲಿಯೇ ಅಂದರೆ ಬೋಧನೆಯೂ ಕ್ರಿಯೆಯೂ ನಿಜವಾಗಿ ಕೂಡಾ ಇರುವದರಲ್ಲಿಯೇ ಅವನ ಪ್ರವಾದಿಕಾರ್ಯಕ್ಕೂ ಮೋಶೆ ಇತ್ಯಾದಿ ಪ್ರವಾದಿಗಳ ಪ್ರವಾದಿಕಾರ್ಯಕ್ಕೂ ಇರುವ ಹೆಚ್ಚು ಕಡಿಮೆ ಕಾಣುತ್ತದೆ. ಫರಿಸಾಯರು ಪ್ರಾಮುಖ್ಯವಾದ ಅಭಿಪ್ರಾಯವನ್ನು ಬರಿದು ಮಾಡಿ ಓರೆ ಮಾಡಿದ ನೀತಿನ್ಯಾಯವನ್ನು, ಅವನು ಅದರ ಸಂಪೂರ್ಣತೆಯನ್ನೂ ಅಗಾಧವನ್ನೂ ಪ್ರಕಟ ಮಾಡಿ, ಮನೋಭಾವನೆಯು ಒಳಗಿನ ಕಾರಣವಾಗಿರುತ್ತದೆ ಎಂಬ ಬೋಧನೆಯಿಂದಲೂ ಅದೇ ಪ್ರಕಾರ ಮನುಷ್ಯಸಂತತಿಯ ಮೂಲಗುತ್ತೂ (ರೋಮಾ. ೫, ೧೮. ೧೯. ಗಲ. ೪, ೪. ೫. ವಚನ.) ಮುಂಗುತ್ತೂ (೧ ಪೇತ್ರ. ೨, ೨೧.) ಆಗಿ ಎಲ್ಲಾ ವಿಧಿಗಳನ್ನು ಸಂಪೂರ್ಣವಾಗಿ ಪೂರೈಸಿದಂಥಾ ಜೀವನದಿಂದ

ಲೂ ಈಡೇರಿಸಿದನು. ನಿಷ್ಟಾನ್ಯಾಯವನ್ನೂ ಅದಕ್ಕೆ ಸಂಬಂಧವಾಗಿರುವ ಪ್ರವಾದನೆಯ ವಾಗ್ದತ್ತವನ್ನೂ ಅವನು ವಾಕ್ಯದಿಂದಲೂ ಬೋಧನೆಯಿಂದಲೂ ಈಡೇರಿಸಿದನು. ಹ್ಯಾಗಂದರೆ ಅವುಗಳನ್ನು ಅಗಾಧವಾಗಿಯೂ ಸಂಪೂರ್ಣವಾಗಿಯೂ ತಿಳಿಸಿದನು. (ದೃಷ್ಟಾಂತ ಲೂಕ. ೨೪, ೨೭) ಅಥವಾ ತಿಳಿಸ ಮಾಡಿದನು (ಯೋಹಾ. ೧೬, ೧೩). ಹಾಗೆಯೇ ಜೀವನದಿಂದಲೂ ಕ್ರಿಯೆಯಿಂದಲೂ ಈಡೇರಿಸಿದನು. ಹ್ಯಾಗಂದರೆ ಒಂದು ಗುರ್ತಾಗಿ ಮುಂದಿಟ್ಟದ್ದನ್ನೂ, ಮತ್ತೊಂದು ಪ್ರವಾದಿಸಿದ್ದನ್ನೂ ತನ್ನ ಮೂರ್ತಿಯಲ್ಲಿ ನಿಜವಾಗಿಯೂ ಸತ್ಯವಾಗಿಯೂ ಮುಂದಿಟ್ಟನು. ನಿಷ್ಟಾನ್ಯಾಯವು ನೆರಳೂ ಮುಂಗುರ್ತೂ ಆಗಿತ್ತು. ಆದರೆ ಕ್ರೈಸ್ತತ್ವವು ಕಾರ್ಯಗಳ ಸ್ವರೂಪವನ್ನೇ ತಂತು. ಆದದರಿಂದ ಮುಂಗುರ್ತಿನ ಅಧಿಕಾರವೂ ತ್ರಾಣವೂ ಹೋಗುವದಾಯಿತು. ಹಾಗಾದರೆ ಅದು ತೆಗದು ಹಾಕಲ್ಪಟ್ಟಿತು. ಆದರೆ ಇದು ಸಂಪೂರ್ತಿಯಾಗುವದರಿಂದ ಆಯಿತು. ಅದೇ ಪ್ರಕಾರ ಫಲ ಬಂದ ಮೇಲೆ ಮೊಗ್ಗೆಯು ತೆಗದು ಹಾಕಲ್ಪಡುತ್ತದೆ. ಆದರೆ ಫಲವು ಮೊಗ್ಗೆಗೆ ಪ್ರತಿಕೂಲವಾಗಿರುವದಿಲ್ಲ. ಹ್ಯಾಗಂದರೆ ಅದು ಇದಕ್ಕೆ ಸ್ವಾಭಾವಿಕವಾದ ಈಡೇರುವಿಕೆಯೂ ಸಂಪೂರ್ತಿಯೂ ಆಗಿರುತ್ತದೆ.

೨) "ನಾನೇ ಸತ್ಯವು" ಎಂದು ಕ್ರಿಸ್ತನು (ಯೋಹಾ. ೧೪, ೬ ವಚನ.) ಹೇಳುತ್ತಾನೆ. ಮತ್ತು ಅಪೋಸ್ತಲನು ಹೇಳುವದು (ಕೊಲೊ. ೨, ೩) ಕ್ರಿಸ್ತನಲ್ಲೇ ಜ್ಞಾನ ತಿಳುವಿಕೆಗಳ ನಿಕ್ಷೇಪಗಳೆಲ್ಲಾ ಅಡಗಿರುತ್ತವೆ. ಅವನೇ ಸತ್ಯಕ್ಕೆ ನಿತ್ಯ ಅನಿರ್ಮಿತ ಸೂರ್ಯನು. ಮತ್ತು ಸತ್ಯದ ಕಿರಣಗಳೆಲ್ಲಾ ಹಳೇ ಒಡಂಬಡಿಕೆಯಲ್ಲಿಯೂ ಹೊಸ ಒಡಂಬಡಿಕೆಯಲ್ಲಿಯೂ ಕ್ರೈಸ್ತತನದಲ್ಲಿ ಹ್ಯಾಗೋ ಹಾಗೆಯೇ ಮ್ಲೇಂಛತನದಲ್ಲಿ ಸಹಾ ಅವನಿಂದಲೇ ಹೊರಟವು. ಮತ್ತು ಅವನೇ ಪ್ರಕಾಶಕ್ಕೂ ಎಲ್ಲಾ ಸತ್ಯಕ್ಕೂ ಇನ್ನೂ ನಿತ್ಯವಾದ ಬುಗ್ಗೆಯಾಗಿರುತ್ತಾನೆ. ಆದರೆ ಭೂಮಿಯಲ್ಲಿ ಅವನು ಕೊಟ್ಟ ಬೋಧನೆಯನ್ನು ಕುರಿತಾದರೋ? ಅದು ರಕ್ಷಣೆಯ ಯೋಚನೆಯನ್ನೆಲ್ಲಾ ತಿಳಿಸುವಂಥಾದ್ದೂ ಅವಶ್ಯವಾದ ಶಕ್ತಿಯ ತಿಳುವಿಕೆಗೆ ಸಾಕಾದದ್ದೂ ಆಗಿರಲಿಲ್ಲ. ಈ ಕೊರತೆಗೆ ಕಾರಣವು ಕ್ರಿಸ್ತನ ತಿಳುವಿಕೆಯು ಅಪೂರ್ಣವಾಗಿದ್ದದ್ದಲ್ಲ, ಅವನು ಬೋಧಿಸಬೇಕಾದಂಥಾ ಶಿಷ್ಯರು ಗ್ರಹಿಸಲಿಕ್ಕೆ ಅಶಕ್ತರಾಗಿದ್ದದ್ದೇ. ಅವನು ತಾನೇ ತನ್ನ ಶಿಷ್ಯರಿಗೆ (ಯೋಹಾ. ೧೬, ೧೨. ೧೩.) "ನಿಮಗೆ ಹೇಳುವದಕ್ಕೆ ಇನ್ನೂ ಬಹಳ ನನಗುಂಟು. ಆದರೆ ಈಗ ಸಹಿಸಲಾರಿರಿ" ಎಂದು ಹೇಳುತ್ತಾನಷ್ಟೇ. ಆದರೂ ಅವರಿಗೂ ನಮಗೂ ಅದು ಪೂರ್ಣವಾಗಿ ನಷ್ಟವಾಗ ಬೇಕಂತಲ್ಲಾ. ಹ್ಯಾಗಂದರೆ ಅವನು ಕೂಡಲೇ ಹೇಳುವದೇನಂದರೆ: "ಆದರೆ ಅವನು, ಆ ಸತ್ಯದ ಆತ್ಮವು ಬಂದಾಗ

ನಿಮ್ಮನ್ನು ಎಲ್ಲಾ ಸತ್ಯದಲ್ಲಿ ಶೇರಿಸುವನು.„ ಮತ್ತು ಕ್ರಿಸ್ತನ ಆತ್ಮವು ಅಪೊಸ್ತಲರಿಗೆ ಏನು ಬೋಧಿಸಿತೋ ಅದನ್ನು ಅವರು ವಾಕ್ಯದಿಂದಲೂ ಬರಹದಿಂದಲೂ ಸತ್ಯವಾಗಿಯೂ ಮಿಶ್ರ ಮಾಡದೆಯೂ ಅಂದಿನವರಿಗೂ ಮುಂದಿನವರಿಗೂ ಸಾರಿದ್ದಾರೆ. ಆದರೆ ಆ ಸಮಯದಲ್ಲಿ ಅವರು ಎಲ್ಲಾ ಸಹಿಸಲಾರದವರಾಗಿದ್ದರು. ಪ್ರಾಮುಖ್ಯವಾದದ್ದನ್ನೆಂತೂ ಇನ್ನು ಕಡಿಮೆ ಸಹಿಸದವರಾಗಿದ್ದರು; ಯಾಕಂದರೆ ಆತ್ಮದ ಪ್ರಕಾಶವು ಅವರಿಗಿನ್ನೂ ಇರಲಿಲ್ಲ; ಆದರೆ ಆತ್ಮವು ವಿಮೋಚನೆಯ ಕಾರ್ಯವು ಸಂಪೂರ್ತಿಯಾಗುವ ಮೊದಲೇ ಹೊಯ್ಯಲ್ಪಡಲಾಗಲಿಲ್ಲಾ (ಯೋಹಾ. ೧೬, ೭) ಆದರೆ ಅಪೊಸ್ತಲರು ಕ್ರಿಸ್ತನ ಆತ್ಮದಿಂದ ಎಲ್ಲಾ ಸತ್ಯದೊಳಗೆ ನಡಿಸಲ್ಪಟ್ಟವರಾಗಿಯೂ, ಕ್ರಿಸ್ತನು ಹೇಳಿದ್ದರೂ ಆಗ್ಯೆ ತಿಳಿಯದಂಥಾದ್ದನ್ನೆಲ್ಲಾ ನೆನಪು ಮಾಡಲ್ಪಟ್ಟವರಾಗಿಯೂ, (ಯೋಹಾ. ೧೪, ೨೬ ವಚನ.) ಮತ್ತೆ ಏನೇನು ಬೋಧಿಸಿದರೋ ಅದು ಕ್ರಿಸ್ತನ ಸ್ವಂತ ವಾಕ್ಯಗಳ ಪ್ರಕಾರವೇ ಅದೇ ಅರ್ಥದಲ್ಲಿ ಕ್ರಿಸ್ತನ ಬೋಧನೆಯಾಗಿರುತ್ತದೆ. ಅವನೇ ಹೇಳುವದು "ಯಾಕಂದರೆ ಅವನು (ಆತ್ಮನು) ನನ್ನನ್ನು ಮಹಿಮೆ ಪಡಿಸುವನು; ಯಾಕಂದರೆ ನನ್ನದರಲ್ಲಿ ತೆಗದು ನಿಮಗೆ ತಿಳಿಸುವನು„ ಮತ್ತು "ನಿಮ್ಮನ್ನು ಕೇಳುವವನು ನನ್ನನ್ನು ಕೇಳುತ್ತಾನೆ" (ಲೂಕ. ೧೦, ೧೬.)

ಪರಿಶಿಷ್ಟ. ಕ್ರಿಸ್ತನ ಸ್ವಂತ ಬೋಧನೆಯು ಸಾಕಾಗದೆ ಇರಲಿಕ್ಕೆ ಅವನ ಶಿಷ್ಯರ ಗ್ರಹಿಕೆಯ ಬಲವು ಹ್ಯಾಗೆ ಕಾರಣವಾಯಿತೋ ಹಾಗೆಯೇ ಯೇಸುವಿನ ಸ್ಥಾನಕ್ಕೆ ಸಹಾ ಯೋಗ್ಯವಾಗಿತ್ತು. ಕ್ರಿಸ್ತನಿಗೆ ಬೋಧನೆಯುದ್ಯೋಗವು ಮಾತ್ರ ಇದ್ದದ್ದಲ್ಲ; ಅದು ಮುಖ್ಯ ಕಾರ್ಯ ಸಹಾ ಆಗಿರಲಿಲ್ಲ. ಹ್ಯಾಗಂದರೆ ಅವನು ಏನು ಬೋಧಿಸ ಬೇಕಾಗಿತ್ತೋ, ಅದನ್ನು ಮತ್ತೊಬ್ಬರ ಪರಿಮುಖವಾಗಿ ಮಾಡ ಬಹುದಾಗಿತ್ತು; ಮತ್ತು ಅದಕ್ಕೋಸ್ಕರ ಅವನು ಅಪೊಸ್ತಲರನ್ನು ಎಲ್ಲಾ ಲೋಕಕ್ಕೆ ಕಳುಹಿಸಿದನಲ್ಲಾ! ಆದರೆ ಯಾವದಕ್ಕೋಸ್ಕರ ಅವನು ಲೋಕಕ್ಕೆ ಬಂದಿದ್ದನೋ, ಮತ್ತು ಯಾವದನ್ನು ಅವನು ಮಾತ್ರವೇ ದೇವಮನುಷ್ಯನಾಗಿ ಮಾಡಲಿಕ್ಕೆ ಶಕ್ತನಾದನೋ ಆ ಮುಖ್ಯ ಕಾರ್ಯವು ಯಾವದಾಗಿತ್ತಂದರೆ— ತನ್ನ ವಿಧೇಯತ್ವದಿಂದಲೂ ತಾಳ್ಮೆಯಿಂದಲೂ ಮರಣದಿಂದಲೂ ಉತ್ಥಾನದಿಂದಲೂ ಲೋಕವನ್ನು ವಿಮೋಚನೆ ಮಾಡಿ ನವೀಕರಿಸುವದೇ.



## § 128. ಕ್ರಿಸ್ತನ ನೇಮಪ್ರಸಂಗ

ಮತ್ತಾ. ೫—೭. ಕ್ರಿಸ್ತನು ವಿಸ್ತಾರವಾಗಿ ಮಾಡಿದ ಪ್ರಸಂಗಗಳಲ್ಲಿ ಪರ್ವತಪ್ರಸಂಗವು ಹೆಚ್ಚಾಗಿ ವಿಸ್ತಾರವಾದದ್ದಾಗಿಯೂ ವಿಶೇಷವಾದದ್ದಾಗಿಯೂ ಇತ್ತು. ಕ್ರಿಸ್ತನು ಬೋಧನೆಯ ಉದ್ಯೋಗದಲ್ಲಿ ಸೇರಿದ ಸ್ವಲ್ಪ ಕಾಲದೊಳಗೆಯೇ ಈಗ ಚನ್ನಾಗಿ ನಿಶ್ಚಯ ಮಾಡ ಕೂಡದಂಥಾ ಪರ್ವತದಿಂದ ತನ್ನ ಸುತ್ತಲೂ ಕೂಡಿಕೊಂಡ ಜನರಿಗೆ ಆ ಪ್ರಸಂಗ ಮಾಡಿದನು. ಈ ಪ್ರಸಂಗದಲ್ಲೆಲ್ಲಾ ದೇವರ ರಾಜ್ಯದ ವಿಷಯವಾಗಿ ಮಾಂಸಭಾವದ ಯೆಹೂದ್ಯಗ್ರಹಿಕೆಗೆ ಪ್ರತಿಕೂಲವಾದ ಕ್ರೈಸ್ತಗ್ರಹಿಕೆಯು ಕಾಣುತ್ತದೆ. ಬಹು ಶ್ರೇಷ್ಠವಾದ ಮಾತುಗಳಿಂದ ರಕ್ಷಕನು ದೇವರ ರಾಜ್ಯದ ಮಕ್ಕಳ ಗುಣವನ್ನು ವರ್ಣಿಸುತ್ತಾನೆ (ಮತ್ತಾ. ೫, ೩—೧೨). ಇದರಲ್ಲಿ ಮೂಲಾಧಾರದ ಮಾತು. ಆತ್ಮದಲ್ಲಿ ದೀನರಾಗಿರುವದೇ. ಅವನು: ಶಿಷ್ಯರು ಭೂಮಿಯ ಉಪ್ಪಾಗಿರ ಬೇಕೆಂದೂ, ಲೋಕದ ಬೆಳಕಾಗಿರ ಬೇಕೆಂದೂ ಅವರಿಗೆ ನೇಮಿಸುತ್ತಾನೆ (ಮತ್ತಾ. ೫, ೧೩. ೧೬). ಈ ಪ್ರಸ್ತಾಪವನ್ನು ಮಾಡಿದ ಮೇಲೆ ತಾನೇ ನೇಮವನ್ನೂ ಪ್ರವಾದನೆಯನ್ನೂ ಪೂರೈಸುವವನೆಂಬದನ್ನು ತೋರಿಸುತ್ತಾನೆ (ಮತ್ತಾ. ೫, ೧೭—೧೯. ಸಮ ನೋಡು! § ೧೨೭, ೧). ತರುವಾಯ ಬಹಿರಂಗದ ಕ್ರಿಯೆ ಮಾತ್ರವೇ ದೊಡ್ಡದೆಂದು, ಫರಿಸಾಯರು ಮಾಡುವ ನೇಮದ ಅಭಿಪ್ರಾಯಕ್ಕೆ ಒಳಗಿರುವ ಹೃದಯದ ಸ್ಥಿತಿಯು ಎಲ್ಲಾದರ ಮುಖ್ಯ ಕಾರಣವೆಂಬದನ್ನು ಪ್ರತೀಕಾರವಾಗಿ ಇಡುತ್ತಾನೆ (ಕೊಲ್ಲುವದು ೫, ೨೧—೨೬; ವ್ಯಭಿಚಾರ ಮತ್ತು ತ್ಯಾಗ ೫, ೨೭—೩೨; ಪ್ರಮಾಣ ೫, ೩೩—೩೭; ಪ್ರತಿಫಲ ೫, ೩೮—೪೨; ಶತ್ರುಪ್ರೀತಿ ೫, ೪೩—೪೮ ವರೆಗೆ). ಕ್ರಿಯಾನೀತಿಯುಳ್ಳ ಫರಿಸಾಯರ ಭಕ್ತಿಯು ಎಂಥಾದ್ದಾಗಿರುತ್ತದೆಂದು ನಿಶ್ಚಯಿಸುತ್ತಾನೆ. (ದಾನ ಮತ್ತಾ. ೬, ೧—೪ ಪ್ರಾರ್ಥನೆ ೬, ೫—೧೫ ಉಪವಾಸ ೬, ೧೬—೧೮) ಭೂಮಿಯ ಮೇಲೆ ದ್ರವ್ಯಗಳನ್ನು ಇಟ್ಟುಕೊಳ್ಳಲಾಗದೆಂದು (೬, ೧೯—೨೧) ಮ್ಲೇಂಛಚಿಂತೆಗಳನ್ನು ಬಿಡ ಬೇಕೆಂದು (೬, ೨೭—೩೪) ಪ್ರೀತಿ ಇಲ್ಲದೆ ನ್ಯಾಯತೀರಿಸ ಬಾರದೆಂದು (೭, ೧—೫ ವರೆಗೆ) ಹೇಳುತ್ತಾನೆ. ಪರಿಶುದ್ಧವಾದದರ ವಿಷಯವಾಗಿ ತಾರತಮ್ಯ ಮಾಡ ಬೇಕೆಂದು (೭, ೬ ವಚನ) ಬೇಡಿ ಕೊಳ್ಳುವವರಿಗೆ ಸಿಕ್ಕುವದಾದ್ದರಿಂದ ಮಕ್ಕಳಂತೆ ದೇವರಿಗೆ ಬೇಡಿಕೊಳ್ಳ ಬೇಕೆಂದು (೭, ೭—೧೧) ಮತ್ತೊಬ್ಬರು ನಮಗೆ ಮಾಡ ಬೇಕೆಂಬದನ್ನು ನಾವು ಅವರಿಗೆ ಮಾಡುವದೇ ನೇಮವೂ ಪ್ರವಾದಿಗಳೆಂದೂ (೭, ೧೨) ತಿಳಿಸುತ್ತಾನೆ. ಇಕ್ಕಟ್ಟಿನ ಬಾಗಲಿಸಿಂದ ಪ್ರವೇಶಿಸ ಬೇಕೆಂದು ಪ್ರೀತಿಯಿಂದ ಕರಿಯುತ್ತಾನೆ

(೭, ೧೩. ೧೪). ಸುಳ್ಳುಬೋಧನೆಗೂ ಫಲವಿಲ್ಲದ ವಿಶ್ವಾಸಕ್ಕೂ ಎಚ್ಚರಿಕೆಯಾಗಿರ ಬೇಕೆಂದು ಬುದ್ಧಿ ಹೇಳುತ್ತಾನೆ (೭, ೧೫—೨೩). ಕಡೆಯಲ್ಲಿ ತನ್ನ ವಾಕ್ಯವನ್ನು ಹೀಗೆ ಕೇಳುವವರನ್ನು ಮರಳಿನ ಮೇಲೆ ಮನೆ ಕಟ್ಟುವ ಹುಚ್ಚನಿಗೂ, ಸಮವಾಗಿ ಕೇಳಿ ಅದನ್ನು ಮಾಡುವವರನ್ನು ಬಂಡೆಯ ಮೇಲೆ ಮನೆ ಕಟ್ಟುವ ಬುದ್ಧಿವಂತನಿಗೂ ಸಮಾನ ಮಾಡುತ್ತಾನೆ (೭, ೨೪—೨೭).

ಪರಿಶಿಷ್ಟ. ಪ್ರಮಾಣದ ವಿಷಯವಾಗಿಯೂ ಪ್ರತಿಫಲದ ವಿಷಯವಾಗಿಯೂ (ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು) ಹೇಳಿದ ಮಾತುಗಳು ಕಷ್ಟ; ರಕ್ಷಕನು ಪ್ರಮಾಣವನ್ನು ಮಾಡಲೇ ಬಾರದೆಂದು ಹೇಳುತ್ತಾನೆಂಬ ಹಾಗೆ ಕಾಣುತ್ತದೆ; ಆದರೂ ಅವನು ತಾನೇ ಮಂತ್ರಿಸಭೆಯ ಮುಂದೆ ಪ್ರಮಾಣ ಮಾಡಿದನು (ಮತ್ಥಾ. ೨೬, ೬೩). ಅದೇ ಪ್ರಕಾರ ಪ್ರತಿಫಲವನ್ನು ಕೊಡುವ ನ್ಯಾಯವನ್ನು ತೆಗದು ಹಾಕುತ್ತಾನೆಂಬ ಹಾಗೆ ಕಾಣುತ್ತದೆ. ಆದರೂ ಅವನಿಗೆ ಕೆನ್ನೆಯ ಮೇಲೆ ಬಡಿದವನಿಗೆ ಮತ್ತೊಂದನ್ನು ಸಹಾ ಕೊಡಲಿಲ್ಲ; ಮತ್ತು ಹೇಳಿದ್ದೇನಂದರೆ: ಯಾಕೆ ನನ್ನನ್ನು ಹೊಡಿಯುತ್ತಿ (ಯೋಹಾ. ೧೮, ೨೩ನೇ ಮೊದಲಾದ ವಚನಗಳು). ಪ್ರಮಾಣದ ವಿಷಯವಾಗಿ ಕೇಳಿದ್ದಾದರೆ (ಮತ್ಥಾ. ೫, ೩೩—೩೭ವರೆಗೆ) ಇದನ್ನು ಮೀರುವದಕ್ಕೆ ಅವಿಶ್ವಾಸಿಗಳು ಸಹಾ ಅಂಜಿ ಹೆದರುತ್ತಾರೆ ಎಂಬದು ಸರಿ. ಆದರೆ ಸಂಸ್ಥಾನವು ಹೃದಯಜ್ಞವಾಗಿ ಇರದೆ ಇರಲಾಗಿ ಸತ್ಯವನ್ನು ಆಗುವಷ್ಟು ಪಡಕೊಳ್ಳುವ ಹಾಗೆ ಪ್ರಮಾಣವನ್ನು ಮಾಡಿಸ ಬೇಕಾಗುತ್ತದೆ. ಮತ್ತು ಕ್ರೈಸ್ತನು ಸಹಾ ಅದಕ್ಕೆ ಅಸಮ್ಮತನಾಗಲಾಗದು. ಆದರೆ ಬರೇ ಹೌದು ಎಂಬದು ಸಹಾ ಅವನಿಗೆ ಕ್ರಮ ಪ್ರಕಾರ ಮಾಡುವ ಪ್ರಮಾಣದ ಹಾಗೆ ಶುದ್ಧವಾಗಿರ ಬೇಕು. ಇದಲ್ಲದೆ ಬರೇ ಹೌದು ಎಲ್ಲಿ ಸಾಕಾಗಿರುತ್ತದೋ ಅಲ್ಲಿ ಪ್ರಮಾಣವನ್ನು ಮಾಡಲೇ ಆಗದು. ಪ್ರಮಾಣ ಮಾಡುವವನು ಪ್ರಮಾಣವಿಲ್ಲದೆ ಶುದ್ಧ ಸತ್ಯವನ್ನು ಹೇಳದೆ ಇರುವದಾದರೆ, ಅಂಥವನು ಪ್ರಮಾಣ ಮಾಡುವದಾದರೆ ಕ್ರಿಸ್ತನ ನೇಮವನ್ನು ಮೀರುತ್ತಾನೆ ಎಲ್ಲಾ ನ್ಯಾಯಕ್ಕೆ ನೆಲಗಟ್ಟಾಗಿರುವ ಪ್ರತಿಫಲನ್ಯಾಯವು (ಮತ್ಥಾ. ೫, ೩೮—೪೨ವರೆಗೆ) ಅದೇ ಪ್ರಕಾರವಾಗಿರುತ್ತದೆ. ಇದನ್ನು ತೆಗದು ಹಾಕಿದ್ದಾದರೆ, ಎಲ್ಲಾ ಕ್ರಮವೂ ಶಿಕ್ಷೆಯೂ ಹೋಗುವದು. ಆದರೂ ಇದರ ವಿಷಯವಾದ ಕ್ರಿಸ್ತನ ಮಾತುಗಳಿಗೆ ಕ್ರೈಸ್ತನ ಮೇಲೆ ಪೂರ್ಣ ಅಧಿಕಾರ ಉಂಟು. ಹ್ಯಾಗಂದರೆ ನಿಷೇಧಿಸುವಂಥಾದ್ದನ್ನು ಬಹಿರಂಗದಲ್ಲಿ ಮಾಡದೆ (ಹೃದಯದಲ್ಲಿ) ಒಂದು ಕಟ್ಟಳೆಯನ್ನು ಮೀರಲಿಕ್ಕೆ ಹ್ಯಾಗೆ ಆಗುತ್ತದೋ ಅದೇ ಪ್ರಕಾರ ಮತ್ತೊಂದೇನಾದರೂ ಸಾಕಾದ ಕಾರಣವಿದ್ದರೆ ವಿಧಿಸುವಂಥಾದ್ದನ್ನು ಬಹಿರಂಗದಲ್ಲಿ ಮಾಡದೆ ಸಹಾ (ಹೃದಯವನ್ನು ನೋಡುವಂಥಾ) ದೇವರ ಮುಂ

ದೆ ಆ ಕಟ್ಟಳೆಗಳನ್ನು ಮಾಡಲಿಕ್ಕೂ ಆಗುತ್ತದೆ. ರಾಜ್ಯದ ಕ್ರಮಗಳಿಗೋಸ್ಕರವೂ ಶಿಕ್ಷೆಗೋಸ್ಕರವೂ ಅನೇಕ ಸಾರಿ ಅಂಥಾ ಕಟ್ಟಳೆಗಳನ್ನು ಬಹಿರಂಗವಾಗಿ ಪೂರೈಸಲಿಕ್ಕೆ ಆಗದೆ ಹೋದೀತು. ಎಲ್ಲಾ ನಿಷೇಧಗಳ ಹಾಗೆಯೇ ಎಲ್ಲಾ ವಿಧಿಗಳು ಸಹಾ ಬಹಿರಂಗವಾದ ಕ್ರಿಯೆಯನ್ನು ಕುರಿತು ಅಷ್ಟು ಅಲ್ಲ; ಹೆಚ್ಚಾಗಿ ಕ್ರಿಯೆಯನ್ನು ಹೊರಡಿಸುವಂಥಾ ಮನೋಭಾವವನ್ನು ಕುರಿತು ನಿಶ್ಚೈಸುತ್ತವೆ. ಆದರೆ ಈ ವಿಷಯದಲ್ಲಿ ಬಹಳ ಸಮೀಪವಾಗಿರುವ ಸ್ವಂತ ಮೋಸಕ್ಕೆ ಬಹಳ ಜಾಗ್ರತೆಯಾಗಿರ ಬೇಕು.



## § 129. ಕ್ರಿಸ್ತನು ಸುವಾರ್ತೆಯನ್ನು ಕುರಿತು ಮಾಡಿದ ಪ್ರಸಂಗ ತನ್ನ ಸ್ವಂತ ವಿಷಯವಾಗಿ ಕೊಟ್ಟ ಸಾಕ್ಷಿ

ಪೀಠಿಕೆ. ಕ್ರಿಸ್ತನು ತನ್ನ ಸ್ವಂತ ವಿಷಯವಾಗಿ ಕೊಟ್ಟ ಸಾಕ್ಷಿಯು ಎಂಥಾ ತರದ್ದಾಗಿತ್ತೆಂಬ ವಿಷಯದಲ್ಲಿ ಆಲೋಚಿಸುವಾಗ, ಒಂದಕ್ಕೊಂದು ಪೂರ್ಣವಾಗಿ ವಿರೋಧವಾಗಿ ಇರುವ ಹಾಗೆ ಕಾಣುವ ಎರಡು ಮಾತುಗಳು ಉಂಟು. ಒಂದು ಸಾರಿ ಅವನು ಹೇಳುವದೇನಂದರೆ: ನಾನು ನನ್ನನ್ನು ಕುರಿತು ಸಾಕ್ಷಿ ಕೊಟ್ಟರೂ ನನ್ನ ಸಾಕ್ಷಿ ನಿಜವೇ. "ಯಾಕಂದರೆ ಎಲ್ಲಿಂದ ಬಂದೆನೋ ಎಲ್ಲಿಗೆ ಹೋಗುತ್ತೇನೋ ಬಲ್ಲೆನು" (ಯೋಹಾ. ೮, ೧೪); ಆದರೆ ಮತ್ತೊಂದು ಸಾರಿ ಅವನು ಹೇಳುವದು: "ನಾನು ನನ್ನನ್ನು ಕುರಿತು ಸಾಕ್ಷಿ ಕೊಟ್ಟರೆ ನನ್ನ ಸಾಕ್ಷಿ ನಿಜವಲ್ಲ, ನನ್ನನ್ನು ಕುರಿತು ಸಾಕ್ಷಿ ಕೊಡುವವನು ಬೇರೊಬ್ಬನಿದ್ದಾನೆ. ತೀರಿಸುವದಕ್ಕೆ ತಂದೆಯು ನನಗೆ ಕೊಟ್ಟ ಕ್ರಿಯೆಗಳು, ನಾನು ನಡಿಸುವ ಕ್ರಿಯೆಗಳೇ ತಂದೆಯು ನನ್ನನ್ನು ಕಳುಹಿಸಿದನೆಂಬದಕ್ಕೆ ಸಾಕ್ಷಿ ಕೊಡುತ್ತವೆ" (ಯೋಹಾ. ೫, ೩೧. ೩೨. ೩೬). ಈ ಎರಡು ಮಾತುಗಳು ಮತ್ತೊಂದು ಮೂರನೇ ಮಾತಿನಲ್ಲಿ ಐಕ್ಯವಾಗುತ್ತವೆ. "ನಾನು ತಂದೆಯಲ್ಲಿದ್ದೇನೆ ತಂದೆ ನನ್ನಲ್ಲಿ ಇದ್ದಾನೆ ಎಂದು ನನ್ನನ್ನು (ನನ್ನ ಸ್ವಂತ ಸಾಕ್ಷಿಯನ್ನು) ನಂಬಿರಿ. ಇಲ್ಲದಿದ್ದರೆ ಕ್ರಿಯೆಗಳಿಗೋಸ್ಕರವೇ ನನ್ನನ್ನು ನಂಬಿರಿ. (ನನ್ನ ತಂದೆಯ ಸಾಕ್ಷಿಗೋಸ್ಕರ, ಯೋಹಾ. ೧೪, ೧೧ ವಚನ.) ಹ್ಯಾಗಂದರೆ ಮನುಷ್ಯನು ತನ್ನ ಸ್ವಂತ ವಿಷಯವಾಗಿ ತಾನೇ ಕೊಡುವ ಸಾಕ್ಷಿಯು ಉಚ್ಚರಿಸುವ ಮನುಷ್ಯನು ಹ್ಯಾಗೆ ಇದ್ದಾನೋ ಆ ಪ್ರಕಾರವಾಗಿ ಭರವಸವಿಡಲಿಕ್ಕೆ ಪೂರ್ಣ ಯೋಗ್ಯವಾಗಿರ ಬಹುದು, ಇಲ್ಲವೇ ಪೂರ್ಣ ಅಯೋಗ್ಯವಾಗಿರ ಬಹುದು. ಅವನ ಶಿಷ್ಯರು ಮತ್ತೊಬ್ಬರು ಸಹಾ ಯೇಸುವಿನ

ನುಡಿನಡೆಗಳಲ್ಲಿ ಎಲ್ಲಾದರಲ್ಲಿ ಕಂಡು ಬಂದ ಸತ್ಯತ್ವ ಪರಿಶುದ್ಧತ್ವಗಳಿಗೆ ತಮ್ಮ ಕಣ್ಣುಗಳನ್ನೂ ಹೃದಯವನ್ನೂ ಮುಚ್ಚದೆ ಇದ್ದರಾದರೆ, ಅಂಥವರಿಗೆ ಅವನು ತನ್ನ ವಿಷಯವಾಗಿ ಕೊಟ್ಟ ಸಾಕ್ಷಿಯು ಅತಿ ಭದ್ರವಾದದ್ದೂ ಭರವಸಕ್ಕೆ ಪೂರ್ಣ ಯೋಗ್ಯವಾದದ್ದೂ ಆಗಿತ್ತು. ಆದದರಿಂದ ಇವರು ತಾನು ಹೇಳಿದ ಮಾತಿಗೋಸ್ಕರವೇ ನಂಬಬೇಕೆಂದು ಅಪೇಕ್ಷಿಸಿದನು. ಆದರೆ ಅಪರಾಧ ಉಳ್ಳವರಾಗಿ ಆಗಲಿ ಇಲ್ಲದವರಾಗಿ ಆಗಲಿ, ಅವನ ನಡೆನುಡಿ ಎಲ್ಲಾದರಲ್ಲಿ ಅಂಥಾ ಪರಿಶುದ್ಧತ್ವವನ್ನು ಯಾರ್ಯಾರು ಕಾಣದೆ ಇದ್ದಾರೋ ಅಂಥವರಿಗೆ ಅವನ ಸ್ವಂತ ಸಾಕ್ಷಿಯು ಸಾಕಾದ ಆಧಾರವಾಗಿರಲಿಲ್ಲ. ಇವರಿಗೆ ತಾನು ಪೂರ್ಣವಾದ ನಂಬಿಗೆಗೆ ಯೋಗ್ಯನಾಗಿರುತ್ತೇನೆಂದು ಬೇರೆ ಪ್ರಕಾರ ತೋರಿಸ ಬೇಕಾಯಿತು. ಆದದರಿಂದ ಇವರಿಗೆ ತನ್ನ ಕ್ರಿಯೆಗಳ ಸಾಕ್ಷಿ ಕೊಟ್ಟನು.

ಕ್ರಿಸ್ತನ ಮೂರ್ತಿಯು ಎಲ್ಲಾ ಸುವಾರ್ತೆಯ ಸಾರಾಂಶಕ್ಕೂ ತಿಳುವಿಕೆಗೂ ಪ್ರಾಮುಖ್ಯವಾಗಿರುತ್ತದೆ. ಹ್ಯಾಗಂದರೆ ವಿಮೋಚನೆಯ ಕೆಲಸವೆಲ್ಲಾ ಅವನ ಮೂರ್ತಿಯ ದೈವತ್ವದಿಂದ ಅಲ್ಲದೆ ಆಗ ಕೂಡದು. ಮನುಷ್ಯಸಂತತಿಯನ್ನು ವಿಮೋಚಿಸಿ ನವೀಕರಿಸುವಂಥಾ ಕೆಲಸವನ್ನು ದೇವಮನುಷ್ಯನಾಗಿ ಮಾತ್ರವೇ ತೀರಿಸಲಿಕ್ಕೆ ಶಕ್ತನಾಗಿದ್ದನು. ಮತ್ತು ಮನುಷ್ಯನಾದ ದೇವರ ಮಗನಾಗಿದ್ದಾನೆಂಬ ವಿಶ್ವಾಸದಿಂದ ಮಾತ್ರವೇ ನಾವು ನಿತ್ಯಜೀವವನ್ನು ಹೊಂದ ಬಹುದು. ಆದದರಿಂದ ರಕ್ಷಕನು ತನ್ನ ಮೂರ್ತಿಯು ಎಂಥಾದ್ದೆಂಬದನ್ನು ಮೊದಲಾಗಿ ತಿಳಿಸ ಬೇಕಾಯಿತು. ಹ್ಯಾಗಂದರೆ ಅವನು ಮುಖ್ಯವಾಗಿ ಮ ನು ಷ್ಯ ನ ಮ ಗ ನು ಎಂಬ ಅವನಿಗೆ ಪ್ರಿಯವಾದ ಹೆಸರಿನಿಂದ ತನ್ನ ಮನುಷ್ಯಸ್ವಭಾವದ ನಿಜತ್ವವನ್ನು ಆದರೆ ಅದೇ ಸಮಯದಲ್ಲಿ ಪಾಪರಹಿತತ್ವವನ್ನು ಸಹಾ ಬಹಳ ಸಾರಿ ನಿಸ್ಸಂಶಯವಾಗಿ ಸ್ಥಾಪಿಸಲಿಕ್ಕೆ ಪ್ರಯತ್ನ ಮಾಡಿದ ಹಾಗೆಯೇ ಸ್ಪಷ್ಟವಾಗಿಯೂ ಖಂಡಿತವಾಗಿಯೂ ತಾನು ನಿಜವಾಗಿ ದಿವ್ಯ ಸ್ವಭಾವದವನೂ ತಂದೆಗೆ ಪೂರ್ಣವಾಗಿ ಸಮಾನ ಸ್ವಭಾವದವನೂ ಎಂಬದನ್ನು ಸಹಾ ಹೇಳಿದನು “ನಿಮ್ಮಲ್ಲಿ ಯಾವನು ನನ್ನಲ್ಲಿ ಪಾಪವನ್ನು ತೋರಿಸುತ್ತಾನೆ” ಎಂದು ಯೆಹೂದ್ಯರಿಗೆ ಹೇಳಿದನು (ಯೋಹಾ. ೮, ೪೬). ಅದೇ ಪ್ರಕಾರ ತನಗೆ ದಿವ್ಯ ಸ್ವಭಾವವೂ ದಿವ್ಯ ಗುಣಗಳೂ ಉಂಟೆಂದೂ ದಿವ್ಯ ಆರಾಧನೆಯು ಆಗ ಬೇಕೆಂದೂ ಬಹು ಧೈರ್ಯದಿಂದ ಹೇಳುತ್ತಾನೆ. ತಾನು ದೇವರ ಒಬ್ಬನೇ ಮಗನೆಂದು ಹೇಳಿ ಕೊಂಡನು. ಮತ್ತು ಅವನು ದೇವರು ಸ್ವಂತ ತಂದೆ ಎಂದು ಹೇಳಿ ತನ್ನನ್ನು ದೇವರಿಗೆ ಸಮಾನ ಮಾಡಿದ ಕಾರಣ ಯೆಹೂದ್ಯರು ಅವನನ್ನು ಕಲ್ಲೆಸೆಯ ಬೇಕೆಂದಿದ್ದರು (ಯೋಹಾ. ೫, ೧೮ ವಚನ. ಸಂ. ೧೦, ೩೩ ವಚನ). ಅವನು ಹೇಳಿದ್ದು, ನಾ

ನೂ ತಂದೆಯೂ ಒಂದೇ (ಯೋಹಾ. ೧೦, ೩೦). "ನನ್ನನ್ನು ನೋಡಿದವನು ತಂದೆಯನ್ನು ನೋಡಿದ್ದಾನೆ" (ಯೋಹಾ. ೧೪, ೯ ವಚನ). "ತಂದೆಯು ತನ್ನಲ್ಲಿ ಹ್ಯಾಗೆ ಜೀವವುಂಟಾದವನಾಗಿದ್ದಾನೋ? ಹಾಗೆಯೇ ಮಗನಿಗೆ ತನ್ನಲ್ಲಿ ಜೀವವುಂಟಾದವನಾಗಿರ ಕೊಟ್ಟಿದ್ದಾನೆ" (ಯೋಹಾ. ೫, ೨೬). "ಎಲ್ಲರೂ ತಂದೆಯನ್ನು ಸನ್ಮಾನಿಸುವ ಪ್ರಕಾರವೇ ಮಗನನ್ನು ಸನ್ಮಾನಿಸುವ ಹಾಗೆ ನ್ಯಾಯತೀರ್ವಿಕೆಯನ್ನೆಲ್ಲಾ ಮಗನಿಗೆ ಕೊಟ್ಟಿದ್ದಾನೆ" (೫, ೨೨. ೨೩). ಅಬ್ರಹಾಮನು ಇರುವದಕ್ಕಿಂತ ಮುಂಚೆ ನಾನು ಇದ್ದೇನೆ (ಯೋಹಾ. ೮, ೫೮ ವಚನ). ಅವನು ಪ್ರಧಾನಯಾಜಕ ಪ್ರಾರ್ಥನೆಯಲ್ಲಿ "ಲೋಕವಿರುವದಕ್ಕಿಂತ ಮುಂಚೆ ತಂದೆಯ ಬಳಿಯಲ್ಲಿ ತನಗಿದ್ದ ಮಹಿಮೆಯನ್ನು ಕುರಿತು ಮಾತಾಡುತ್ತಾನೆ (ಯೋಹಾ. ೧೭, ೫). ಸಾಯುವ ಸ್ವಲ್ಪ ಮೊದಲು ಕಡೆಯಲ್ಲಿ ತಾನು ದಿವ್ಯ ಮೆಸ್ಸೀಯನಾಗಿದ್ದೇನೆಂಬದನ್ನು ಪ್ರಧಾನಯಾಜಕನ ಮುಂದೆ ಪ್ರಮಾಣ ಮಾಡಿ ಹೇಳಿದನು (ಮತ್ತಾ. ೨೬, ೬೩. ೬೪). ಮತ್ತು ತಾನು ಎತ್ತಲ್ಪಡುವದನ್ನು ಆಲೋಚಿಸಿ ಅವನು ಹೇಳಿದ್ದು: "ಇಬ್ಬರಾದರೂ ಮೂವರಾದರೂ ನನ್ನ ಹೆಸರಿನಲ್ಲಿ ಎಲ್ಲಿ ಕೂಡಿ ಇದ್ದಾರೋ ಅಲ್ಲಿ ಅವರ ಮಧ್ಯದಲ್ಲಿ ಇದ್ದೇನೆ" (ಮತ್ತಾ. ೧೮, ೨೦). "ನಾನು ಯುಗದ ಅಂತ್ಯದ ವರೆಗೂ ಎಲ್ಲಾ ದಿವಸಗಳಲ್ಲಿ ನಿಮ್ಮ ಸಂಗಡ ಇದ್ದೇನೆ" (ಮತ್ತಾ. ೨೮, ೨೦). "ಪರಲೋಕದಲ್ಲಿಯೂ ಭೂಮಿಯಲ್ಲಿಯೂ ಸಮಸ್ತ ಅಧಿಕಾರವು ನನಗೆ ಕೊಡಲ್ಪಟ್ಟದೆ" (ಮತ್ತಾ. ೨೮, ೧೮ ವಚನ) ಇತ್ಯಾದಿ.



## § 130. ಮುಂದೆ ಬರುವಂಥಾದ್ದು — ವಿಮೋಚನೆಯ ವಿಷಯ

ಪೀಠಿಕೆ. ತಾನು ತೀರಿಸಲಿಕ್ಕಿದ್ದ ರಕ್ಷಣ್ಯದ ಮರ್ಮವನ್ನು ಕುರಿತು ಕ್ರಿಸ್ತನು ಸಂಪೂರ್ಣವಾಗಿಯೂ ಕೂಲಂಕುಷವಾಗಿಯೂ ಇರುವ ಬೋಧನೆಯನ್ನು ಕೊಡಲಿಲ್ಲ. ಸೂಚನೆಗಳನ್ನೂ ವಾಕ್ಯಗಳನ್ನೂ ಮಾತ್ರವೇ ಹೇಳಿದನು. ಇವುಗಳು ಗಾದೆಗಳ ಹಾಗೆಯೂ ಸಾಮ್ಯಗಳಾಗಿಯೂ ಇದ್ದು, ಅವುಗಳ ಪೂರ್ಣ ಅಭಿಪ್ರಾಯವು ಚನ್ನಾಗಿ ತಿಳಿಯದೇ ಹೋದರೂ, ಕೇಳುವವರ ನೆನಪಿಗೆ ಖಚಿತವಾಗಿ ಆಲೋಚನೆಗಳನ್ನು ಹುಟ್ಟಿಸಿದವು. ಯಾಕಂದರೆ ಈ ವಿಷಯದಲ್ಲಿ ಆತನು ಏನು ಹೇಳ ಬೇಕಾಗಿತ್ತೋ ಅದು ಶಿಷ್ಯರು ಗ್ರಹಿಸ ಕೂಡದಂಥಾದ್ದಾಗಿ ಇತ್ತು. ಇದಲ್ಲದೆ ಕಾಲಾನುಭಾಗವಾಗಿ ಸ್ವಲ್ಪ ಸ್ವಲ್ಪ ಈ ವಿಷಯವಾಗಿ ಹೇಳಿದ್ದು ಸಹಾ ಅವನ ಕಾರ್ಯವು ಸಂಪೂ

ಕ್ರಿಯಾದ ಮೇಲೆ ಅವರಿಗೆ ತಿಳಿಯ ಬಂತು. ಆದದರಿಂದ ರಕ್ಷಕನು ಶಿಷ್ಯರ ಹೃದಯಗಳಲ್ಲಿ ಜೀವವುಳ್ಳವುಗಳಾಗಿಯೂ ಹೆಚ್ಚು ಹುಟ್ಟಿಸುವವುಗಳಾಗಿಯೂ ಇರುವಂಥಾ ವಾಕ್ಯದ ಬೀಜಗಳನ್ನು ಬಿತ್ತಿ, ಅವುಗಳು ಪರಿಶುದ್ಧಾತ್ಮದ ಸಹಾಯದಿಂದ ತಕ್ಕ ಕಾಲದಲ್ಲಿ ರಕ್ಷಿಸುವಂಥಾ ತಿಳುವಿಕೆ ಬೋಧನೆಗಳ ಫಲವನ್ನು ತರುವವೆಂದು ಇದರಲ್ಲಿಯೇ ತೃಪ್ತನಾಗ ಬೇಕಾಯಿತು.

೧) ಎಲ್ಲಾ ತನ್ನೊಳಗೆ ಇರುವಂಥಾ ಅತಿ ಪ್ರಾಮುಖ್ಯವಾದ ಮಾತು ಅವನ ಉದ್ಯೋಗಕಾರ್ಯಗಳನ್ನು ಕುರಿತು ಮೊದಲು ಹೇಳಿದ್ದೇಯಾಗಿರುತ್ತದೆ (ಮತ್ತಾ. ೫, ೧೭, ೧೮). ಈ ವಾಕ್ಯದಲ್ಲಿ ಅವನು ತಾನೇ ನೇಮಪ್ರವಾದಿಗಳನ್ನು ಪೂರೈಸುವವನಾಗಿದ್ದೇನೆಂಬದನ್ನು ತೋರಿಸುತ್ತಾನೆ. ಅದರ ಹೊರ್ತು ಸಂಕ್ಷೇಪವಾಗಿ ಹೇಳ ಬೇಕೆಂದಿದ್ದಾಗ "ತನ್ನಲ್ಲಿ ವಿಶ್ವಾಸವಿಡುವವರೆಲ್ಲರೂ ನಾಶವಾಗದೆ ನಿತ್ಯಜೀವವನ್ನು ಹೊಂದುವ ಬಗ್ಗೆ" (ಯೋಹಾ. ೩, ೧೬ ವಚನ.) ತಾನು ಲೋಕದಲ್ಲಿ ಬಂದದ್ದೆಂದು ಹೇಳಿದನು. ತನ್ನ ಕೆಲಸವು ವೈದ್ಯನ ಕೆಲಸವೆಂದು ಹೇಳಿ ಆತನು ಹೇಳಿದ್ದು: "ಸ್ವಸ್ಥವಾಗಿರುವವರಿಗಲ್ಲ, ಅಸೌಖ್ಯವಾಗಿರುವವರಿಗೆ ವೈದ್ಯನು ಬೇಕು. ನೀತಿವಂತರನ್ನಲ್ಲ ಪಾಪಿಷ್ಟರನ್ನು ಮಾನಸಾಂತರಕ್ಕೆ ಕರೆಯ ಬಂದಿದ್ದೇನೆ" (ಲೂಕ. ೫, ೩೧. ೩೨). ತನ್ನ ಕೆಲಸವು ಒಬ್ಬ ಕುರುಬನದಾಗಿರುತ್ತದೆ ಎಂದು ಸಹಾ ಹೇಳಿದನು. "ನಾನು ಒಳ್ಳೇ ಕುರುಬನಾಗಿದ್ದೇನೆ, ಒಳ್ಳೇ ಕುರುಬನು ಕುರಿಗಳಿಗೋಸ್ಕರ ತನ್ನ ಜೀವವನ್ನು ಕೊಡುತ್ತಾನೆ" (ಯೋಹಾ. ೧೦, ೧೧ ವಚನ). ಅವನು ತಾನೇ ಮಾರ್ಗವೂ ಸತ್ಯವೂ ಜೀವವೂ (ಯೋಹಾ. ೧೪, ೬) ಲೋಕದ ಬೆಳಕೂ (ಯೋಹಾ. ೮, ೧೨) ಜೀವದ ರೊಟ್ಟಿಯೂ (ಯೋಹಾ. ೬,) ಆಗಿರುತ್ತೇನೆಂದು ತಿಳಿಸಿದನು. ತಾನು ಸಹಿಸುವದೂ ಸಾಯುವದೂ ಉತ್ಥಾನವಾಗುವದೂ ಅವಶ್ಯವಾಗಿರುತ್ತದೆಂದು ಮುಖ್ಯವಾಗಿ ಪ್ರಕಟ ಮಾಡಿದನು (ಮಾರ್ಕ. ೮, ೩೧. ಸಹ ನೋಡು ಯೋಹಾ. ೩, ೧೪. ಅರಣ್ಯದಲ್ಲಿ ಸರ್ಪವು ಎತ್ತಲ್ಪಟ್ಟದ್ದು § ೪೬. ಮತ್ತು ಮತ್ಥಾ. ೧೨, ೪೦ ವಚನ, ಪ್ರವಾದಿಯಾದ ಯೋನಸ ಗುರ್ತು §೮೬, ೫). ತಾನು ಹೊಂದುವ ಮರಣವು ಲೋಕದ ಪಾಪಗಳಿಗೋಸ್ಕರ ಸಹಿಸುವಂಥಾ ಮತ್ತೊಬ್ಬರ ಸ್ಥಾನದಲ್ಲಿ ಪಡ ಕೊಳ್ಳುವಂಥಾ ಬಲಿಮರಣವೆಂದು ಹೇಳಿದನು (ಮತ್ಥಾ. ೨೦, ೨೮ ವಚನ). "ಮನುಷ್ಯನ ಮಗನು ಸೇವಿಸಲ್ಪಡುವದಕ್ಕೋಸ್ಕರವಲ್ಲ, ಸೇವೆ ಮಾಡುವದಕ್ಕೂ ತನ್ನ ಪ್ರಾಣವನ್ನು ಅನೇಕರಿಗೋಸ್ಕರ ವಿಮೋಚನೇ ಬಲಿಯಾಗಿ ಕೊಡುವದಕ್ಕೂ ಬಂದನು". ಮತ್ತೊಂದು ಕಡೆಯಲ್ಲಿ (ಮತ್ಥಾ. ೨೬, ೨೮.) ಅವನು

ಹೇಳುವದು "ಇದು ಅನೇಕರಿಗೋಸ್ಕರ ಪಾಪಪರಿಹಾರಕ್ಕಾಗಿ ಹೊಯ್ಯಲ್ಪಡುವ ಹೊಸ ಒಡಂಬಡಿಕೆಯ ರಕ್ತವಾದ ನನ್ನ ರಕ್ತವಾಗಿದೆ" ಮತ್ತು ಯೋಹಾ. ೬, ೫೧ ವಚನದಲ್ಲಿ ಅವನು ಲೋಕದ ಜೀವಕ್ಕೋಸ್ಕರ ತನ್ನ ಮಾಂಸವನ್ನು ಕೊಡುತ್ತೇನೆಂದು ಹೇಳುತ್ತಾನೆ (ಸಮ ನೋಡು. ಯೋಹಾ. ೧೦, ೧೫ ವಚನ).

ಪರಿಶಿಷ್ಟ. ಶಿಷ್ಯರು ಕ್ರಿಸ್ತನು ಸತ್ತವರೊಳಗಿಂದ ಎದ್ದ ಮೇಲೆಯೇ ಸಮವಾಗಿ ತಿಳಿದಂಥಾ "ಈ ಮಂದಿರವನ್ನು ಕೆಡವಿ ಬಿಡಿರಿ, ಮೂರು ದಿವಸಗಳಲ್ಲಿ ಅದನ್ನು ಎಬ್ಬಿಸುವೆನು ಎಂದು ಯೋಹಾ. ೨, ೧೯ ವಚನದಲ್ಲಿ ಹೇಳಿದ ಮಾತಿನಲ್ಲಿ ಅವನು ತನ್ನ ಮರಣವನ್ನೂ ಉತ್ಥಾನವನ್ನೂ ಮಾತ್ರವೇ ಸಾರಿದ್ದಾಗಿರುವದಿಲ್ಲ. ಅದೇ ಸಮಯದಲ್ಲಿ ಕಲ್ಲಿನ ಆಲಯಕ್ಕೂ ತನ್ನ ಶರೀರದ ಆಲಯಕ್ಕೂ ಇರುವ ನಿಜವಾದ ಸಂಬಂಧವನ್ನು ಸಹಾ ತೋರಿಸಿ ಕೊಟ್ಟನು. ಹ್ಯಾಗಂದರೆ (ಸಾಕ್ಷಿ ಗುಡಾರದಲ್ಲಿಯೂ ದೇವಾಲಯದಲ್ಲಿಯೂ ಗುರುತಾಗಿ ನಿವಾಸಿಸಿದ್ದಂಥಾ) ದೈವತ್ವದ ಎಲ್ಲಾ ಸಂಪೂರ್ಣತೆಯು ನಿಜವಾಗಿ ನಿವಾಸಿಸಿದ್ದಂಥಾ ಅವನ ಶರೀರವು ಮುರಿಯಲ್ಪಟ್ಟಾಗ, ದೇವಾಲಯಕ್ಕೂ ಅದರ ಆರಾಧನೆಗೂ ಇದ್ದ ಅಭಿಪ್ರಾಯವೆಲ್ಲಾ ಹೋಯಿತು. ಮತ್ತು ಅದು ಪ್ರತ್ಯಕ್ಷವಾಗಿ ಇನ್ನೂ ೪೦ ವರ್ಷ ಪರ್ಯಂತರ ಇದ್ದರೂ, ಒಳಭಾವದ ಪ್ರಕಾರ ಮುರಿಯಲ್ಪಟ್ಟದ್ದಾಗಿತ್ತು. ಹ್ಯಾಗಂದರೆ ಕ್ರಿಸ್ತನ ಬಲಿಮರಣದಿಂದ ನಿತ್ಯವಾದ ಬಲಿಯು ತರಲ್ಪಟ್ಟದ್ದಾಗಿರಲಾಗಿ ಮುಂಗುರ್ತಾಗಿದ್ದ ಬಲಿಯು ತೆಗದು ಹಾಕಲ್ಪಟ್ಟದ್ದಾಯಿತು. ಮತ್ತು ತನ್ನ ಶರೀರದ ಆಲಯವನ್ನು ಮೂರನೇ ದಿವಸದಲ್ಲಿ ಉತ್ಥಾನದಿಂದ ನವೀಕರಿಸಿದ್ದಾಗಿಯೂ ಮಹಿಮೆಯುಳ್ಳದ್ದಾಗಿಯೂ ತಿರಿಗಿ ತಕ್ಕೊಂಡಾಗ ಇದರಿಂದಲೇ ಹೊಸತಾಗಿಯೂ ಮಹಿಮೆಯುಳ್ಳದ್ದಾಗಿಯೂ ಇರುವ ದೇವಾಲಯವನ್ನು ಕಟ್ಟಿದ ಹಾಗಾಯಿತು. ಇದರಲ್ಲಿ ಸತ್ಯವಾಗಿ ಆರಾಧಿಸುವವರು ತಂದೆಯನ್ನು ಆತ್ಮದಿಂದಲೂ ಸತ್ಯದಿಂದಲೂ ಆರಾಧಿಸುತ್ತಾರೆ (ಯೋಹಾ. ೪, ೨೩). ಮತ್ತು ಇದರಲ್ಲಿ ಕೃಪೆಯ ಸಿಂಹಾಸನದ ಬಳಿಗೆ ಬರುವದಕ್ಕೆ ಎಲ್ಲರಿಗೂ ಅಪ್ಪಣೆಯುಂಟು (ಇಬ್ರಿಯರ ೪, ೧೬ ವಚನ).

೨) ಕರ್ತನು ತಾನು ಸ್ಥಾಪಿಸಿದ ರಕ್ಷಣ್ಯದಲ್ಲಿ ಪಾಲುಗಾರರಾಗ ಬೇಕೆಂದು ಅಪೇಕ್ಷಿಸುವವರೆಲ್ಲರ ಹತ್ತರ ಯಾವಾಗಲೂ ಕೇಳುವಂಥಾದ್ದೇನಂದರೆ — ಮಾನಸಾಂತರವೂ ವಿಶ್ವಾಸವೂ (ಮತ್ತಾ. ೪, ೧೭. ಮಾರ್ಕ. ೧, ೧೫) ಇದರ ಹೊರ್ತು ಪೂರ್ಣವಾಗಿ ತಮ್ಮನ್ನೂ ಲೋಕವನ್ನೂ ಅಲ್ಲಗಳಿಯ ಬೇಕೆಂಬದೂ, ಕ್ರಿಸ್ತನ ಕೆಲಸಕ್ಕೆ ತಮ್ಮನ್ನು ಪೂರ್ಣವಾಗಿ ಒಪ್ಪಿಸಿ ಕೊಡ ಬೇಕೆಂಬದೂ (ಮತ್ತಾ. ೧೦, ೩೭.

೩೮ ವಚನ) ನಾವು ಅವನ ಸಂಗಡ ನಿಜವಾದ ಜೀವನೈಕ್ಯದಲ್ಲಿ ಅಂದರೆ ಅವನ ಜೀವದಲ್ಲಿಯೇ ಶೇರಿ ಬೆಳಿಯ ಬೇಕೆಂಬದಾಗಿ ಬೋಧಿಸಿದನು (ಯೋಹಾ. ೧೫, ೫ ವಚನ "ನಾನು ದ್ರಾಕ್ಷೇ ಬಳ್ಳಿ, ನೀವು ಕುಡಿಗಳು, ಒಬ್ಬನು ನನ್ನಲ್ಲಿಯೂ ನಾನು ಅವನಲ್ಲಿಯೂ ನೆಲೆಯಾಗಿದ್ದರೆ ಅವನು ಬಹಳ ಫಲ ಫಲಿಸುತ್ತಾನೆ, ಯಾಕಂದರೆ ನಾನಿಲ್ಲದೆ ಏನೂ ಮಾಡಲಾರಿರಿ"). ಅವನ ಜೀವದ ಐಕ್ಯದಲ್ಲಿ ಪ್ರವೇಶಿಸಿ ಅದರಲ್ಲಿ ನೆಲೆಯಾಗಿದ್ದು ರಕ್ಷಿಸಲ್ಪಡುವದಕ್ಕೆ ಅವನು ಹೇಳುವ ಉಪಾಯ ಯಾವದಂದರೆ: ನೀರಿನಿಂದಲೂ ಆತ್ಮದಿಂದಲೂ ಆಗುವ ಪುನರ್ಜನ್ಮ (ಯೋಹಾ. ೩, ೩—೬ ಸಮ ನೋಡು § ೧೮೩) ಮತ್ತು ಅವನ ಮಾಂಸರಕ್ತಗಳ ಆಹಾರವು (ಯೋಹಾ. ೬, ೫೩—೫೫ನೇ ವರೆಗೆ "ನೀವು ಮನುಷ್ಯನ ಮಗನ ಮಾಂಸವನ್ನು ಉಣ್ಣದೆ ಅವನ ರಕ್ತವನ್ನು ಕುಡಿಯದೆ ಹೋದರೆ ನಿಮ್ಮೊಳಗೆ ಜೀವವಿಲ್ಲದವರಾಗಿದ್ಧೀರಿ. ನನ್ನ ಮಾಂಸವನ್ನು ತಿಂದು ನನ್ನ ರಕ್ತವನ್ನು ಕುಡಿಯುವವನಿಗೆ ನಿತ್ಯ ಜೀವ ಉಂಟು, ಮತ್ತು ನಾನು ಅವನನ್ನು ಕಡೇ ದಿನದಲ್ಲಿ ಎಬ್ಬಿಸುವೆನು. ಯಾಕಂದರೆ ನನ್ನ ಮಾಂಸವು ನಿಜವಾಗಿ ಆಹಾರವಾಗಿದೆ, ನನ್ನ ರಕ್ತವು ನಿಜವಾಗಿ ಪಾನವಾಗಿದೆ"). ಸಮ ನೋಡು § ೧೮೪.



## § 131. ಅವನ ರಾಜ್ಯದ ವಿಷಯ

ಪೀಠಿಕೆ. ತನ್ನ ರಾಜ್ಯದ ಸ್ಥಿತಿ ಬೆಳಿಯುವಿಕೆಗಳನ್ನು ಕುರಿತು ಕೊಟ್ಟ ಬೋಧನೆಗಳಲ್ಲಿ ರಕ್ಷಕನು ಹೆಚ್ಚಾಗಿ ಸಾಮ್ಯರೂಪವನ್ನು ಪ್ರಯೋಗಿಸಿದನು. ಯಾಕಂದರೆ ಭೂಮಿಯಲ್ಲಿ ದೇವರ ರಾಜ್ಯದ ಬೆಳಿಯುವಿಕೆಯು ಜೀವವುಳ್ಳದ್ದೆಲ್ಲಾ ಭೂಮಿಯಲ್ಲಿ ಬೆಳಿಯುವಂಥಾ ಕ್ರಮಗಳ ಪ್ರಕಾರವೇ ಹೆಚ್ಚಾಗಿ ನಡಿಯುವದಾದ್ದರಿಂದ ಈ ಬೋಧನೆಗೆ ಅಂಥಾ ರೂಪವು ತಕ್ಕದ್ದಾಯಿತು. ದೇವರ ರಾಜ್ಯದಲ್ಲಿ ಗುಪ್ತವಾಗಿ ನಡಿಯುವಂಥಾದ್ದನ್ನು ತಿಳುಕೊಳ್ಳುವದಕ್ಕೋಸ್ಕರ ಯಾರಿಗೆ ಮನಸ್ಸೂ ಗ್ರಹಿಕೆಯೂ ಇತ್ತೋ ಅಂಥವನಿಗೆ ಬರೇ ಬೋಧನೆಯಿಂದ ಕೂಡದೆ ಇದ್ದಂಥಾ ಅಗಾಧವಾಗಿಯೂ ಜೀವವುಳ್ಳದ್ದಾಗಿಯೂ ಇರುವ ಮರ್ಮಗಳ ಜ್ಞಾನವನ್ನು ಸಾಮ್ಯವು ಹುಟ್ಟಿಸಿತು. ಆದರೆ ಇದೇ ಬೋಧನೆಯ ರೂಪವು ಅಪವಿತ್ರವಾಗಿಯೂ ಗ್ರಹಿಕೆ ಇಲ್ಲದ್ದಾಗಿಯೂ ಇರುವ ಮನಸ್ಸಿಗೆ ಈ ಮರ್ಮಗಳನ್ನು ಇನ್ನು ಹೆಚ್ಚಾಗಿ ಬಚ್ಚಿಟ್ಟ ಹಾಗೆ ಆಯಿತು. ಆದದರಿಂದ ಸಾಮ್ಯಗಳಾಗಿ ಯಾಕೆ ಮಾತಾಡುತ್ತೀ ಎಂದು ಶಿಷ್ಯರು ಕೇಳಿದಾಗ, ಕ್ರಿಸ್ತನು ಉತ್ತರ ಕೊಟ್ಟದ್ದು: "ದೇವರ ರಾಜ್ಯದ ಮರ್ಮವನ್ನು ತಿಳಿಯ ನಿಮಗೆ ಕೊಡಲ್ಪ

ಟ್ಟಿದೆ, ಆದರೆ ಆ ಹೊರಗಿನವರಿಗೆ ಅವರು ಕಾಣಲೇ ಕಂಡು ನೋಡದ ಹಾಗೆ ಇತ್ಯಾದಿ ಎಲ್ಲಾ ಸಾಮ್ಯಗಳಲ್ಲಿ ಆಗುತ್ತದೆ" (ಮಾರ್ಕ. ೪, ೧೧ ಮೊದಲಾದ ವಚನಗಳು). ಹಾಗಾದರೆ ರಕ್ಷಕನು ತಾನೇ ತನ್ನ ಆಜ್ಞೆಗೆ ಸರಿಯಾಗಿ ನಡಕೊಳ್ಳುತ್ತಾನೆ. "ಪರಿಶುದ್ಧವಾದದ್ದನ್ನು ನಾಯಿಗಳಿಗೆ ಕೊಡ ಬೇಡಿರಿ; ನಿಮ್ಮ ಮುತ್ತುಗಳನ್ನು ಹಂದಿಗಳ ಮುಂದೆ ಹಾಕ ಬೇಡಿರಿ; ತಮ್ಮ ಕಾಲುಗಳಿಂದ ಅವುಗಳನ್ನು ತುಳಿದು ತಿರಿಗಿ ಕೊಂಡು ನಿಮ್ಮನ್ನು ಹರಿದು ಬಿಟ್ಟಾವು (ಮತ್ಥಾ. ೭, ೬).

೧) ದೇವರ ರಾಜ್ಯದ ಬೆಳಿಯುವಿಕೆಯನ್ನು ಕುರಿತು ಸಂಕ್ಷೇಪದಲ್ಲಿ ಪರಲೋಕ ರಾಜ್ಯದ ವಿಷಯವಾದ ೭ ಸಾಮ್ಯಗಳು ಮುಖ್ಯವಾಗಿ ಮಾತಾಡುತ್ತವೆ (ಮತ್ಥಾ. ೧೩, ಸಂ.) ನಾಲ್ಕು ತರದ ಹೊಲದಲ್ಲಿ ಬಿತ್ತಿದ ಬೀಜದ ಮೊದಲನೇ ಸಾಮ್ಯವು ಕರ್ತನು ತಾನೇ ಟೀಕಿಸುವ ಪ್ರಕಾರ, ಸುವಾರ್ತೆಯ ವಾಕ್ಯವು ಮನುಷ್ಯರನ್ನು ಪರಲೋಕರಾಜ್ಯಕ್ಕೋಸ್ಕರ ಹುಟ್ಟಿಸಿ ಪುನರ್ಜನ್ಮ ಉಂಟು ಮಾಡುವ ಸತ್ವವೆಂದೂ, ಮನುಷ್ಯರ ಹೃದಯಗಳು ಹೊಸತಾದಂಥಾ ದೇವರಿಂದ ಹುಟ್ಟಿದಂಥಾ ನಿರ್ಮಾಣ್ಯವಾಗಿರುವ ಬೀಜ ಬಿತ್ತಲ್ಪಟ್ಟ ಭೂಮಿಯಾಗಿರುತ್ತದೆಂದೂ ಹೇಳುತ್ತದೆ. ಮತ್ತು ಈ ಭೂಮಿಯು ಎಷ್ಟು ತರವಾಗಿ ಉಂಟೋ ಅಷ್ಟು ತರವಾಗಿ ಫಲ ಸಹಾ ಉಂಟಾಗುತ್ತದೆಂಬದನ್ನು ತೋರಿಸುತ್ತದೆ.

೨ ನೇದು ಗೋಧಿಯ ಮಧ್ಯದಲ್ಲಿ ಬಿತ್ತಿದ ಊದರೆ. ಇದನ್ನು ಸಹಾ ಕರ್ತನು ತಾನೇ ಟೀಕಿಸುತ್ತಾನೆ. ಇದರಲ್ಲಿ ದೇವರ ರಾಜ್ಯಕ್ಕೂ ಕೇಡಿನ ರಾಜ್ಯಕ್ಕೂ ಸಂಬಂಧ ಯಾವದೆಂದು ಹೇಳಿಯದೆ. ಮತ್ತು ಇದು ನಾಶನಕ್ಕೋಸ್ಕರವೂ ನ್ಯಾಯತೀರ್ವಿಕೆಗೋಸ್ಕರವೂ ಬೆಳಿಯುವದಕ್ಕಾಗಿ ಎಲ್ಲಾ ಪೂರ್ಣವಾಗಿ ಅದರ ಸಂಗಡಲೂ ಅದರ ಮಧ್ಯದಲ್ಲಿಯೂ ವಿಕಸಿತವಾಗ ಬೇಕೆಂಬದು ಬೋಧಿಸಿ ಅದೆ.

೩ ನೇದು ಸಾಸಿವೆಕಾಳು. ಇದರಿಂದ ಪರಲೋಕರಾಜ್ಯವು ಆರಂಭದಲ್ಲಿ ಅತಿ ಅಲ್ಪವಾಗಿದ್ದರೂ ಮತ್ತೆ ಎಲ್ಲಾ ಆವರಿಸಿ ಕೊಳ್ಳುವಂಥಾ ದೊಡ್ಡಸ್ಥಿಕೆಯನ್ನು ಹೊಂದುತ್ತದೆ ಎಂಬದು ಕಾಣುತ್ತದೆ.

೪ ನೇದು ಹುಳಿಹಿಟ್ಟು. ಇದು ಸಹಾ ಪರಲೋಕರಾಜ್ಯವು ಆರಂಭದಲ್ಲಿ ಅತಿ ಅಲ್ಪವಾಗಿರುತ್ತದೆ ಎಂಬದನ್ನು ತೋರಿಸುತ್ತದೆ. ಆದರೆ ಇನ್ನು ಹೆಚ್ಚಾಗಿ ಅವರ ಒಳಬೆಳಿಯುವಿಕೆಯನ್ನು, ಮನುಷ್ಯಸಂತತಿಯಲ್ಲೆಲ್ಲಾ ಶೇರಿ ಒಳಗೆ ಹೊಸ ರೂಪ ಮಾಡುವಂಥಾ (ಮನುಷ್ಯಸಂತತಿಯನ್ನು ತನ್ನ ಸ್ವಭಾವಕ್ಕೆ ಸಮ ಮಾಡುವಂಥಾ) ದೇವರ ಬಲವನ್ನು ಹೊಗಳುತ್ತದೆ. ಹೊಲದಲ್ಲಿ ಬಚ್ಚಿಟ್ಟ ದ್ರವ್ಯದ ಖನೀ

ಸಾಮ್ಯದಲ್ಲಿಯೂ, ಬಹು ಬೆಲೆಯುಳ್ಳ ಮುತ್ತಿನ ಅರನೇ ಸಾಮ್ಯದಲ್ಲಿಯೂ, ದೇವರ ರಾಜ್ಯವು ಎಲ್ಲಾದಕ್ಕಿಂತಲೂ ಬೆಲೆಯುಳ್ಳದ್ದಾಗಿದ್ದರೂ, ಬಚ್ಚಿಟ್ಟಂಥಾ ಲೋಕಕ್ಕೆ ಕಾಣದಂಥಾ ನಿಧಿಯಾಗಿರುತ್ತದೆಂದೂ, ಅದನ್ನು ಪಡಕೊಳ್ಳಲಿಕ್ಕಾಗಿ ಎಲ್ಲಾ ಅರ್ಪಿಸುವದೂ ತನ್ನನ್ನು ತಾನೇ ಅಲ್ಲಗಳೆಯುವದೂ ಯೋಗ್ಯವಾಗಿರುತ್ತದೆಂದೂ ಈ ಪ್ರಕಾರ ಮಾತ್ರವೇ ಅದನ್ನು ಹೊಂದ ಬಹುದೆಂದೂ ಕಾಣುತ್ತದೆ. ೭ನೇದು ಮೀನಿನ ಬಲೆ: ಇದು ೨ನೇದಕ್ಕೆ ಸಂಬಂಧವುಳ್ಳದ್ದಾಗಿ ರಾಜ್ಯದ ಮಕ್ಕಳು ಕೂಡಿಸಲ್ಪಟ್ಟು ಶುದ್ಧವಾಗುವದಕ್ಕೆ ಸ್ಥಳವಾಗಿರುವ ಸಭೆಯಲ್ಲಿ ಸಹಾ ಕತ್ತಲೆಯ ಮಕ್ಕಳೂ ಕಡೇ ನ್ಯಾಯತೀರ್ವಿಕೆಯೂ ಅವರನ್ನು ಬೇರೆ ಮಾಡಿ, ನಿತ್ಯನಾಶನಕ್ಕೆ ಒಪ್ಪಿಸಿ ಕೊಡುವ ಮಟ್ಟಿಗೂ ಒಟ್ಟಾಗಿರುತ್ತಾರೆಂಬದನ್ನು ತೋರಿಸುತ್ತದೆ.

೨) ಈ ಕಾಲದ ಯೆಹೂದ್ಯರಲ್ಲಿ ಪ್ರಬಲವಾದ ಮತವಾಗಿರುವಂಥ ಕಠಿಣ ಮಾಡುವ ಸ್ವನೀತಿಯ ಮಾಂಸಚಿಾವದ ಫರಿಸಾಯತನಕ್ಕೂ ತನ್ನ ರಾಜ್ಯಕ್ಕೂ ಇದ್ದ ಸಂಬಂಧವನ್ನು ರಕ್ಷಕನು ಬಹಳ ಕಡೆಯಿಂದ ತೋರಿಸುತ್ತಾನೆ. ಪ್ರಕಟವಾಗಿಯೂ ಖಂಡಿತವಾಗಿಯೂ ಅವನು ಬೋಧಿಸಿದ್ದೇನಂದರೆ: "ದೇವರ ರಾಜ್ಯವು ನಿಂಮಿಂದ ತೆಗಿಯಲ್ಪಟ್ಟು ಅದರ ಫಲಗಳನ್ನು ಫಲಿಸುವ ಜನಾಂಗಕ್ಕೆ ಕೊಡಲ್ಪಡುವದು" (ಮತ್ಥಾ. ೨೧, ೪೩) ಇದಲ್ಲದೆ ಮೊದಲನೆಯವರು ಕಡೆಯವರಾಗುವರೆಂದೂ ಕಡೆಯವರು ಮೊದಲಿನವರಾಗುವರೆಂದೂ ಅವರಿಗೆ ಸಾಕ್ಷಿ ಕೊಟ್ಟನು (ಮತ್ಥಾ. ೧೯, ೩೦. ಸಂ. ೨೦, ೧೬). ಬಾಧ್ಯವೂ ವಾಗ್ದತ್ತವೂ ಇರುವಂಥಾ ಯೆಹೂದ್ಯರು ತಮ್ಮ ಮಧ್ಯದಲ್ಲಿ, ಉಂಟಾದ ರಕ್ಷಣ್ಯಕ್ಕೆ (ರಕ್ಷಣೆಯು ಯೆಹೂದ್ಯರಿಂದುಂಟಾಗಿದೆ ಯೋಹಾ. ೪, ೨೨ ವಚನ) ಹೆಚ್ಚೆಚ್ಚು ವಿರೋಧವಾಗಿ ನಿಂತು, ಕಠಿಣ ಮಾಡಲ್ಪಟ್ಟು ಅದಕ್ಕೋಸ್ಕರ ತ್ಯಜಿಸಲ್ಪಟ್ಟದ್ದೂ ಅಥವಾ ಹೆಚ್ಚಾಗಿ ಬಿದ್ದು ದೇವರಿಂದ ಹೆಚ್ಚು ದೂರ ಹೋಗಿದ್ದರೂ ಈಗ ಹೃದಯಪೂರ್ವಕವಾದ ಮಾನಸಾಂತರದಿಂದ ಶರಿಗೆ ಕೊಂಡು ಬಹು ಆತುರರಾಗಿ ರಕ್ಷಣ್ಯವನ್ನು ಹುಡುಕುವಂಥಾ ಮ್ಲೇಂಛರಿಗೆ ದೇವರ ರಾಜ್ಯದಲ್ಲಿ ಯೆಹೂದ್ಯರು ಪ್ರವೇಶವನ್ನು ಮೊದಲು ಬಿಡ ಬೇಕಾದದ್ದು ಲೋಕಚರಿತ್ರದ ವಿಶೇಷ ಕಾರ್ಯವಾಗಿರುತ್ತದೆ ಎಂಬದು (ಸಮ ನೋಡು § ೧೧೩) ಕರ್ತನು ಮಾತಾಡಿದ ಅನೇಕ ಮಾತುಗಳಲ್ಲಿಯೂ ಸಾಮ್ಯಗಳಲ್ಲಿಯೂ ಅತ್ಯಂತ ನಿಶ್ಚಯವಾಗಿ ಕಂಡು ಬರುತ್ತದೆ. ಹಾಗೆ ಒಬ್ಬ ಮನೆಯ ಯಜಮಾನನು ನೆಟ್ಟು, ಚನ್ನಾಗಿ ಭದ್ರ ಮಾಡಿ ಮತ್ತು ಸಿದ್ಧ ಮಾಡಿ ಒಕ್ಕಲಿಗರಿಗೆ ಒಪ್ಪಿಸಿದ ದ್ರಾಕ್ಷೇ ತೋಟದ ಸಾಮ್ಯವು ಇಸ್ರಯೇಲ್ಯರ ಆಯುಕ್ತಿಯನ್ನೂ ಅವರು ಮಾರ್ಗ ತಪ್ಪಿದ್ದನ್ನೂ ಹೊರಗೆ ಹಾಕಲ್ಪಟ್ಟದ್ದನ್ನೂ ವಿಶೇಷವಾದ ಬಣ್ಣಗಳಿಂದ ವರ್ಣಿಸುತ್ತದೆ (ಮತ್ಥಾ. ೨೧, ೩೩ ವಚನ). ಅದೇ ಪ್ರಕಾರ ಕ್ರಿಸ್ತನು

ಫಲಗಳನ್ನು ಹುಡುಕಿದಾಗ ಬರೇ ಎಲೆಗಳನ್ನು ನೋಡಿ ಶಪಿಸಿದಂಥಾ ಅಂಜೂರ ಮರದ ಕಥೆಯು ಕಾರ್ಯರೂಪವಾಗಿ ಚನ್ನಾಗಿ ಖಚಿತ ಮಾಡಲಿಕ್ಕೆ ಯೋಗ್ಯವಾದಂಥಾ ಯೆಹೂದ್ಯ ಜನಾಂಗವನ್ನು ಕುರಿತಾಗಿರುವಂಥಾ ಸಾಮ್ಯವಾಗಿರುತ್ತದೆ. ಹ್ಯಾಗಂದರೆ ಇದು ಸಹಾ ವಿಶ್ವಾಸದ ಫಲಗಳಿಗೆ ಬದಲಾಗಿ ಬಹಿರಂಗದ ಸ್ವನೀತಿ, ಕ್ರಿಯಾನೀತಿಗಳ ಎಲೆಗಳನ್ನು ಮಾತ್ರವೇ ಧರಿಸಿತು (ಮತ್ತಾ. ೨೧, ೨೦ ಇತ್ಯಾದಿ).

೩) ದೇವರ ರಾಜ್ಯದಲ್ಲಿ ಮ್ಲೇಂಛರು ಅಂಗೀಕರಿಸಲ್ಪಡುತ್ತಾರೆಂಬದು ಕಳದುಹೋದ ಮಗನ ಸಾಮ್ಯದಲ್ಲಿ ಸಹಾ ಕಾಣುತ್ತದೆ. (ಲೂಕ. ೧೫, ೧೧ ಸಮ ನೋಡು § ೧೩, ೧) ಈ ಸಾಮ್ಯವನ್ನು ಓದುವಾಗ್ಯೆ ಅದರ ಅಭಿಪ್ರಾಯವು ಇದು ಮಾತ್ರವೆಂದು ಹೇಳಲಿಕ್ಕೆ ಕೂಡದೆ ಇದ್ದಾಗ್ಯೂ ಈ ಅಭಿಪ್ರಾಯ ಸಹಾ ವಿಶೇಷವಾಗಿ ಆಗುತ್ತದೆಂದು ಹೇಳ ಬೇಕು. ಅದೇ ಪ್ರಕಾರ ಒಬ್ಬ ತಂದೆಯು ದ್ರಾಕ್ಷೇ ತೋಟದಲ್ಲಿ ಕೆಲಸ ಮಾಡಲಿಕ್ಕಾಗಿ ಕಳುಹಿಸಿದ ಇಬ್ಬರು ಮಕ್ಕಳ ಸಾಮ್ಯದಲ್ಲಿಯೂ ಈ ಸಂಗತಿಯು ಕಾಣುತ್ತದೆ (ಮತ್ತಾ. ೨೧, ೨೮ ಮೊದಲಾದ ವಚನಗಳು). ಹಾಗೆಯೇ ಅರಸನ ಮಗನ ಮದಿವೆಗೆ ಕರಿಯಲ್ಪಟ್ಟವರ ಸಾಮ್ಯವೂ (ಮತ್ತಾ. ೨೨, ೧) ಅದಕ್ಕೆ ಸಂಬಂಧವಾದ ದೊಡ್ಡ ರಾತ್ರಿಭೋಜನದ ಸಾಮ್ಯವೂ (ಲೂಕ. ೧೪, ೧೬.) ಇಸ್ರಯೇಲ್ಯರು ತಮಗೆ ಮೊದಲಾಗಿ ಕಾಡಲಿಕ್ಕೆ ನಿಶ್ಚಯಿಸಿದ ರಕ್ಷಣ್ಯವನ್ನು ತ್ಯಜಿಸಲಾಗಿ ತಾವೇ ತ್ಯಜಿಸಲ್ಪಟ್ಟರೆಂಬುವದನ್ನು ಕಾಣಿಸುತ್ತದೆ. ಆದರೆ ದಿವಸದ ಬೇರೆ ಬೇರೆ ಸಮಯಗಳಲ್ಲಿ ಕೆಲಸದವರನ್ನು ತನ್ನ ತೋಟಕ್ಕೆ ನಿಶ್ಚಯಿಸಲಿಕ್ಕೋಸ್ಕರ ಹೊರಗೆ ಹೋಗಿ ಮೊದಲಿನವರಿಗೆ ಕೊಡುವಷ್ಟೇ ಸಂಬಳವನ್ನು ಕಡೆಯವರಿಗೆ ಸಹಾ ಕೊಟ್ಟ ಮನೇಯಜಮಾನನ ಸಾಮ್ಯವು (ಮತ್ತಾ. ೨೦, ೧ ಮೊದಲಾದ ವಚನಗಳು.) ಮತ್ತೆ ಕರಿಯಲ್ಪಟ್ಟ ಮ್ಲೇಂಛ ಜನಾಂಗಗಳು ಕ್ರಿಸ್ತನ ರಾಜ್ಯದಲ್ಲಿ ಮೊದಲು ಕರಿಯಲ್ಪಟ್ಟ ಒಡಂಬಡಿಕೆಯ ಜನಾಂಗಕ್ಕಿಂತ ಕಡಿಮೆಯವರಾಗಲಿಕ್ಕಿಲ್ಲವೆಂಬದನ್ನು ಕಲಿಸುತ್ತದೆ. ಆದರೆ ಒಂದು ಮರಿಯ ಬಾರದು. ಏನಂದರೆ — ಈ ಸಾಮ್ಯಗಳು ಜನಾಂಗಗಳನ್ನೂ ಕಾಲಗಳನ್ನೂ ಕುರಿತು ಒಟ್ಟಿಗೆ ಮಾತಾಡುವದಲ್ಲದೆ ಎಲ್ಲಾ ಕಾಲಗಳಲ್ಲಿ ಇರುವ ಒಬ್ಬೊಬ್ಬ ಮನುಷ್ಯನನ್ನೂ ಕುರಿತು ಸಹಾ ಮಾತಾಡುತ್ತಾವೆಂದು ಹೇಳ ಬೇಕು. ಯಾಕಂದರೆ ಮನುಷ್ಯಸಂತತಿ ಎಲ್ಲಾ ಬೆಳದು ವಿಕಸಿತವಾಗುವದು ಹ್ಯಾಗೆ ನಡಿಯುತ್ತದೋ ಅದೇ ಪ್ರಕಾರ ಒಬ್ಬೊಬ್ಬ ಮನುಷ್ಯನು ಬೆಳದು ವಿಕಸಿತವಾಗುತ್ತಾನೆಂಬದು ನಿಶ್ಚಯ.



## § 132. ಸಂಕ್ಷೇಪವಾಗಿ ಕ್ರಿಸ್ತನ ಅದ್ಭುತಬಲದ ವಿಷಯವು

೧) ಮೊದಲನೇ ಮನುಷ್ಯನಿಗೂ ಅವನ ಸಂತತಿಗೂ ಭೂಮಿಯ ಪ್ರಕೃತಿ ಎಲ್ಲಾದರ ಮೇಲೆ ಅಧಿಕಾರವು ನಿಶ್ಚಯಿಸಲ್ಪಟ್ಟಿತ್ತು (೧ ಮೋಶೆ. ೧, ೨೬—೨೮ ವರೆಗೆ). ಇದು ಪಾಪದಿಂದ ಕಳದು ಹೋಗಿತ್ತು. ಮತ್ತು ಹೀಗಾಗಿ ಪ್ರಕೃತಿಗೂ ಆತ್ಮಕ್ಕೂ ಇದ್ದಂಥಾ ಯೋಗ್ಯವಾದ ತಾರತಮ್ಯವು ಕೆಟ್ಟು ಹೋಗಿತ್ತು. ಮೊದಲನೆಯವನ ಸ್ಥಾನದಲ್ಲಿ ಸೇರಿದ ೨ನೇ ಆದಾಮನು ಕಳದು ಹೋದ ಅಧಿಕಾರವನ್ನು ತಿರಿಗಿ ಹೊಂದ ಬೇಕಾಯಿತು. ಇದು ಸಹಾ ಹೆಚ್ಚಾದ ಅಧಿಕಾರವಾಗಿರ ಬೇಕಾಯಿತು. ಹ್ಯಾಗಂದರೆ ಮೊದಲನೇ ಮನುಷ್ಯನ ಹಾಗೆ ಎಲ್ಲಾ ಶಾಂತವಾಗಿಯೂ ಕೆಟ್ಟು ಹೋಗದೆಯೂ ಸಮವಾಗಿ ಬೆಳೆಯುವಂಥಾದ್ದನ್ನು ನಡಿಸುವಂಥಾದ್ದಲ್ಲಾ. ಒಂದೇ ಸಮಯದಲ್ಲಿ ಈಗ ಇರುವಂಥಾ ಶತ್ರುತ್ವದ ಅದೈವಿಕವಾದ ಬಲಗಳನ್ನೂ ಸ್ಥಿತಿಗಳನ್ನೂ ಜೈಸಿ ಎಲ್ಲಾ ಸಮತ್ವದಲ್ಲಿ ತಂದು, ಚನ್ನಾಗಿ ಬೆಳೆಯುವ ಹಾಗೆ ಮಾಡುವದು ಅವಶ್ಯವಾಯಿತು. ಮನುಷ್ಯನ ಸ್ವಭಾವವು ಈಗಿರುವ ರೂಪದಲ್ಲಿ ಬಲವೂ ಸಹಾಯವೂ ಇಲ್ಲದ್ದಾಗಿ ಎರಡನ್ನೂ ಮಾಡಲಿಕ್ಕೆ ಶಕ್ತವಾಗಿರಲಿಲ್ಲ. ಮತ್ತು ಕ್ರಿಸ್ತನ ಮನುಷ್ಯಸ್ವಭಾವವು ನಮ್ಮದಕ್ಕೆ ಈ ವಿಷಯದಲ್ಲಿ ಸಮಾನವಾಗಿರಲಾಗಿ (§ ೧೨೦) ಅವನು ಅದಕ್ಕೆ ಇರದಂಥಾ ಆಳುವ ಅಧಿಕಾರವನ್ನು ಮನುಷ್ಯಪರವಾದಂಥಾ ಬಲಗಳಿಂದ ಹೊಂದ ಬೇಕಾಯಿತು. ಮತ್ತು ಆತನು ಅವನ ಮನುಷ್ಯಸ್ವಭಾವದಲ್ಲಿ ದೈವತ್ವದ ಸಂಪೂರ್ತಿ ಎಲ್ಲಾ ಶರೀರವಾಗಿ ವಾಸ ಮಾಡಿರುವದರಿಂದ ಅದನ್ನು ಹೊಂದಿದನು. ಲೋಕನಿರ್ಮಾಣಿಕವಾದ ವಾಕ್ಯದ ಮತ್ತು ೨ನೇ ಆದಾಮನ ಅಹಂಭಾವದ ಐಕ್ಯದಲ್ಲಿ (ಅಂದರೆ ಮನುಷ್ಯನಾದ ಯೇಸುವಿನಲ್ಲಿ) ಮನುಷ್ಯನಿಗೆ ಕಳದು ಹೋದ ಆಳುವಿಕೆಯ ಅಧಿಕಾರವು ತಿರಿಗಿ ಉಂಟಾಯಿತು ಮಾತ್ರವಲ್ಲ; ಅದು ಸರ್ವೋನ್ನತವಾದಂಥಾ ಸಮಸ್ತ ಅಟಕಗಳನ್ನು ಜೈಸುವಂಥಾ ಸಮಸ್ತ ಗಲಿಬಿಲಿಯನ್ನು ತೆಗದು ನವೀಕರಿಸುವಂಥಾ ಬಲವಾಯಿತು. ಮತ್ತು ಇದೇ ಕ್ರಿಸ್ತನಿಗೆ ಇದ್ದ ಅದ್ಭುತಗಳನ್ನು ಮಾಡುವ ಅಧಿಕಾರವು. ಮನುಷ್ಯನು ನಿಶ್ಚಯಿಸಲ್ಪಟ್ಟ ಪ್ರಕಾರ ಪ್ರಕೃತಿಯ ಮೇಲೆ ಮೊದಲನೇ ಮನುಷ್ಯನಿಗೆ ಇದ್ದ ಆತ್ಮದ ಅಧಿಕಾರವು ಅದ್ಭುತಗಳನ್ನು ಮಾಡುವ ಬಲವೆಂದು ಕಾಣುತ್ತಿದ್ದಿಲ್ಲ. ಯಾಕಂದರೆ ಅಂಥಾದ್ದು ಸ್ವಭಾವಿಕವಾಗಿಯೂ ಅನುದಿನದ್ದಾಗಿಯೂ ಸಾಧಾರಣವಾದದ್ದಾಗಿಯೂ ಇರುತಿತ್ತು. ಆದರೆ ಕ್ರಿಸ್ತನಲ್ಲಿ ಹಾಗಲ್ಲ. ಇವನಲ್ಲಿ ಅದು ಅದ್ಭುತಗಳನ್ನು ಮಾಡುವಂಥಾ ಬಲವಾಗಿಯೇ ತೋರ

ಬೇಕಾಯಿತು. ಯಾಕಂದರೆ ಮನುಷ್ಯನ ಬಲಹೀನತ್ವವು ಈಗ ಸ್ವಭಾವಿಕವಾಗಿತ್ತು. ಆದರೆ ಆಳುವಿಕೆಯ ಬಲವು ಸ್ವಭಾವಪರವಾಗಿತ್ತು.

ಪರಿಶಿಷ್ಟ ೧. ಕ್ರಿಸ್ತನಲ್ಲಿ ಕ್ರಿಯೆಯ ಅದ್ಭುತಗಳು ಹ್ಯಾಗೋ, ಹಾಗೆಯೇ ತಿಳುವಿಕೆಯ ಅದ್ಭುತಗಳು ಸಹಾ ಒಂದೇ ಬುಗ್ಗೆಯಿಂದ ಉಂಟಾದವು. ಭವಿಷ್ಯದ ವಿಷಯದಲ್ಲಿಯೂ ದೂರದಲ್ಲಿಯೂ ಮನುಷ್ಯರ ಹೃದಯಗಳಲ್ಲಿಯೂ ಶೇರುವಂಥ ತಪ್ಪದ ಸ್ಪಷ್ಟವಾದ ಶುಭ್ರವಾದ ದೃಢವಾಗಿರುವ ಅವನ ನೋಟವು ಅಂಥಾದ್ದಾಗಿತ್ತು. ಯೋಹಾನನು ೨, ೨೫ವಚನದಲ್ಲಿ ಹೇಳುವ ಪ್ರಕಾರ ಅವನಿಗೆ ಮನುಷ್ಯನ ವಿಷಯ ಯಾವನಾದರೂ ಸಾಕ್ಷಿ ಕೊಡುವ ಅವಶ್ಯ ಇರಲಿಲ್ಲ. ಯಾಕಂದರೆ ಅವನು ಮನುಷ್ಯನೊಳಗೆ ಇರುವದನ್ನು ಅರಿತನು.

ಪರಿಶಿಷ್ಟ ೨. ಕ್ರಿಸ್ತನ ಮುಂಚೆ ಇದ್ದ ಪ್ರವಾದಿಗಳೂ ಆತನ ಮೇಲೆ ಇದ್ದ ಅಪೊಸ್ತಲರೂ ಸಹಾ ಅದ್ಭುತಗಳನ್ನು ಮಾಡಿದ್ದಾರೆ. ಒಂದೊಂದು ಸಾರಿ ಕ್ರಿಸ್ತನು ಮಾಡಿದವುಗಳನ್ನೇ ಇಲ್ಲವೇ ಅವುಗಳಿಗೆ ಸಮಾನವಾದದ್ದನ್ನು; ಆದರೆ ವ್ಯತ್ಯಾಸವು ಯಾವದಂದರೆ—ಅವರಿಗೆ ಅದ್ಭುತಗಳ ಬಲವು ಅನ್ಯವಾದದ್ದಾಗಿ ಕೊಡಲ್ಪಟ್ಟಿತ್ತು. ಆದದರಿಂದ ಸ್ವಲ್ಪ ಸಮಯಕ್ಕೆ ಕಳದು ಹೋಗುವಂಥಾದ್ದಾಗಿ ಕಂಡು ಬಂತು. ಆದರೆ ಕ್ರಿಸ್ತನಲ್ಲಿ ಹಾಗಲ್ಲ, ಇವನಲ್ಲಿ ಸ್ವಂತ ಸ್ವಭಾವದಿಂದ ಉಂಟಾದದ್ದಾಗಿತ್ತು. ಮತ್ತು ಯಾವಾಗಲೂ ಎಡೆ ಬಿಡದೆ ಇತ್ತು. ಯಾಕಂದರೆ ಬಬ್ಬನಲ್ಲಿಯೇ ಶಾಶ್ವತವಾಗಿ ಉಂಟಾದ ದಿವ್ಯ ಮನುಷ್ಯಸ್ವಭಾವಗಳ ಐಕ್ಯತ್ವದಿಂದ ಅದು ಉಂಟಾಯಿತು.

ಪರಿಶಿಷ್ಟ ೩. ಕ್ರಿಸ್ತನು ತಾನು ಎಲ್ಲಾ ತಿಳಿದಿರುವದಿಲ್ಲವೆಂದು ತಾನೇ ಹೇಳುವ ಹಾಗೆಯೇ (ಮಾರ್ಕ. ೧೩, ೩೨ ವಚನ) ಕ್ರಿಯೆಯ ವಿಷಯದಲ್ಲಿ ಅಂಥಾ ವಾಕ್ಯವು ನಮಗೆ ಇಲ್ಲದಿದ್ದರೂ ಎಲ್ಲಾ ಮಾಡಲಿಕ್ಕೂ ಶಕ್ತನಾಗಿರಲಿಲ್ಲವೆಂದು ಹೇಳ ಬೇಕಾಗುತ್ತದೆ. ಆದರೆ ಎರಡು ಅವನ ದೀನತ್ವದ ಸ್ಥಿತಿಯ ವಿಷಯವಾಗಿ (ಮನುಷ್ಯನಾಗಿ ಭೂಮಿಯಲ್ಲಿ ಇದ್ದ ಕಾಲದ ವಿಷಯವಾಗಿ) ಮಾತ್ರವೇ ಹೇಳ ಬಹುದು. ಈ ಸಮಯದಲ್ಲಿ ದೈವತ್ವದ ಸಂಪೂರ್ತಿಯೆಲ್ಲಾ ಅವನಲ್ಲಿ ವಾಸ ಮಾಡಿತ್ತೆಂಬದು ಸರಿ. ಆದರೆ ದೇವರ ರೂಪವನ್ನು (ಅಂದರೆ ನಿತ್ಯವಾದಂಥಾ ನಿರ್ವಾಣ್ಯಾಪರವಾದಂಥಾ ಇರುವಿಕೆಯ ರೂಪವನ್ನು ಫಿಲಿಪ್ಪರ. ೨, ೬. ೭ನೇ ವಚನ) ಬರಿದು ಮಾಡಿ ಕೊಂಡು ಮನುಷ್ಯಸ್ವಭಾವಕ್ಕೆ ಒಳಗಾಗಿದ್ದನು. ಹ್ಯಾಗಂದರೆ—(ಮೊದಲನೇ ಆದಾಮನ) ಮನುಷ್ಯತ್ವದಿಂದ ಯಾವ ಪ್ರಕಾರ ಪಾಪವೂ ಕೇಡೂ ಉಂಟಾಗಿದ್ದವೋ ಅದೇ ಪ್ರಕಾರ ಬಿಡುಗಡೆಯೂ ರಕ್ಷಣ್ಯವೂ (೨ನೇ ಆದಾಮನ) ಮನುಷ್ಯಸ್ವಭಾವದಿಂದ ಉಂ

ಟಾಗ ಬೇಕಾಯಿತು. ಆದರೆ ಇದಕ್ಕೆ ಬೇಕಾದ ಯೋಗ್ಯತೆಯು ಅದು ದೈವತ್ವದ ಸಂಪೂರ್ತಿಯೊಡನೆ ಒಂದೇ ಮೂರ್ತಿಯಾಗಿ ಕೂಡಿ ಕೊಂಡು ಸನ್ನದ್ಧವಾಗಿರುವದ ರಿಂದಲೇ ಉಂಟಾಗ ಬೇಕಾಯಿತು. ಹಾಗಾದರೆ ಕ್ರಿಸ್ತನ ದೈವತ್ವವು ತನ್ನ ಮನುಷ್ಯ ತ್ವಕ್ಕೆ ಉಪಯೋಗಕ್ಕೆ ಬೀಳುವಾಗ್ಯೆ ಅದು ಬಿಡುಗಡೆ ನವೀಕರಣಗಳ ಕೆಲಸಕ್ಕೆ ಬೇ ಕಾಗಿದ್ದಷ್ಟು ಪರ್ಯಂತರಕ್ಕೂ ಮಾತ್ರವೇ ಉಪಯೋಗಕ್ಕೆ ಬಿತ್ತು. ಇದಕ್ಕೆ ಮಿಕ್ಕಿ ದ್ದು ಏನಿತ್ತೋ ಅದಕ್ಕೆ ಕ್ರಿಸ್ತನು ದೇವಪುತ್ರನಾಗಿ ಅಧಿಕಾರವುಳ್ಳವನಾಗಿದ್ದನು. ಆ ದರೆ ಅವನು ಮನುಷ್ಯಪುತ್ರನಾಗಿ ತನ್ನ ಕೆಲಸವು ಸಂಪೂರ್ತಿಯಾಗುವ ಪರ್ಯಂತರ ಕ್ಕೂ ಆ ಅಧಿಕಾರದ ಪ್ರಯೋಜನವನ್ನು ಬರಿದು ಮಾಡಿ ಕೊಂಡನು.

೨) ಒಂದಾಂದಾಗಿ ಕಾಣುವಂಥಾ ಹಳೇ ಒಡಂಬಡಿಕೆಯ ಪ್ರವಾದಿಗಳ ಅದ್ಭು ತಗಳು ಅವರು ದೇವರಿಂದ ಕಳುಹಿಸಲ್ಪಟ್ಟರೆಂಬುವದಕ್ಕೆ ಹ್ಯಾಗೆ ಸಾಕ್ಷಿಯಾದ ವೋ ಹಾಗೆಯೇ ಯೇಸು ಸಹಾ ಸ್ಥಿರವಾಗಿ ಯಾವಾಗಲೂ ಇರುವ ಅದ್ಭುತಬ ಲದಿಂದ ಅಂದರೆ ಆಶ್ಚರ್ಯಕರವಾದ ಅವನ ಪ್ರತ್ಯಕ್ಷತೆ ಎಲ್ಲಾದರಿಂದ ಅವನು ಮೆಸ್ಸೀ ಯನೂ ದೇವಪುತ್ರನೂ ಆಗಿರುತ್ತಾನೆಂಬದು ಸ್ಥಾಪಿಸಲ್ಪಟ್ಟಿತು (ಯೋಹಾನನ ಸಾಕ್ಷಿಗಿಂತ ದೊಡ್ಡ ಸಾಕ್ಷಿ ನನಗುಂಟು, ಹ್ಯಾಗಂದರೆ — ತೀರಿಸುವದಕ್ಕೆ ತಂದೆಯು ನನಗೆ ಕೊಟ್ಟ ಕ್ರಿಯೆಗಳು ನಾನು ನಡಿಸುವ ಕ್ರಿಯೆಗಳೇ ತಂದೆಯು ನನ್ನನ್ನು ಕಳುಹಿಸಿದನೆಂ ಬದಕ್ಕೆ ನನ್ನನ್ನು ಕುರಿತು ಸಾಕ್ಷಿ ಕೊಡುತ್ತವೆ. ಯೋಹಾ. ೫, ೩೬ ಸಮ ನೋಡು ೧೦, ೩೭ — ೩೮. ೧೬, ೧೧. ೧೨ನೇ ಇತ್ಯಾದಿ). ಆದರೆ ಅದ್ಭುತಗಳ ಪ್ರಯೋಜನವು ಅದು ಮಾತ್ರವೇ ಆಗಿರಲಿಲ್ಲಾ; ಅದು ಮುಖ್ಯವಾಗಿ ಸಹಾ ಇರಲಿಲ್ಲಾ. ಹಾಗಂದ ರೆ — ಕ್ರಿಸ್ತನು ತಾನು ಮೆಸ್ಸೀಯನೆಂಬದನ್ನು ಜನರು ನಂಬ ಬೇಕೆಂಬದಕ್ಕೋಸ್ಕರ ಮಾತ್ರ ವೇ ಅದ್ಭುತಗಳನ್ನು ಮಾಡಿದ್ದಾಗಿರುವದಿಲ್ಲಾ; ಅದ್ಭುತಗಳು ಅವನ ಮೆಸ್ಸೀಯ ಕಾ ರ್ಯಕ್ಕೆಯೇ ಪುನಃಸ್ಥಾಪಿಸಿ ಬಿಡುಗಡೆ ಪಡಿಸುವಂಥಾ ಕೆಲಸಕ್ಕೆಯೇ ಬೇಕಾಗಿದ್ದವು. ಪಾಪದಿಂದ ಕಷ್ಟವೂ ರೋಗವೂ ಮರಣವೂ ಮನುಷ್ಯಸಂತತಿಯ ಜೀವದಲ್ಲಿಯೂ ನಾನಾ ತರದ ಗಲಿಬಿಲಿಯು ಪ್ರಕೃತಿಯ ಜೀವದಲ್ಲಿಯೂ ಶೇರಿಯದೆ. ಆದದರಿಂದ ಪಾಪದ ಫಲಗಳನ್ನೆಲ್ಲಾ ತೆಗದು ಹಾಕುವದೂ ಪ್ರಕೃತಿಗೂ ಆತ್ಮಕ್ಕೂ ಇರುವ ಯೋ ಗ್ಯ ಸಂಬಂಧವನ್ನು ಪುನಃಸ್ಥಾಪಿಸುವದೂ ಅವನ ಉದ್ಯೋಗವಾಗಿತ್ತು. ಇದು ತೀ ರಾ ಸಂಪೂರ್ಣವಾಗಿ ಈ ಯುಗದ ಅಂತ್ಯದಲ್ಲೇ ಆಗುವದು. ಆಗ್ಯೆ ಕ್ರಿಸ್ತನು ಮ ನುಷ್ಯತ್ವದಲ್ಲಿ ನೆಟ್ಟ ಹೊಸ ಜೀವವು ಪೂರ್ಣವಾಗಿ ಅವರಲ್ಲಿ ಶೇರಿ, ಹೊಸ ರೂಪ ವನ್ನು ಉಂಟು ಮಾಡಿರುವದು. ಆದರೆ ಈ ಸಂಪೂರ್ಣ ಬಿಡುಗಡೆಯ ಆರಂಭವೂ

ಅದರ ಮುಂಗುರ್ತೂ ಮುಂಗಡವೂ ಆ ಸಮಯದಲ್ಲಿಯೇ ಪ್ರತ್ಯಕ್ಷವಾಗ ಬಹುದಾಗಿತ್ತು, ಪ್ರತ್ಯಕ್ಷವಾಗ ಬೇಕಾಗಿತ್ತು.

ಪರಿಶಿಷ್ಟ ೧. ಕ್ರಿಸ್ತನ ಅದ್ಭುತಗಳು ಅವನನ್ನು ಜನರು ನಂಬುವದಕ್ಕೋಸ್ಕರ ಮಾತ್ರವೇ ಇರದೆ, ಬೇರೊಂದು ವಿಶೇಷವಾದ ಪ್ರಯೋಜನವುಳ್ಳದ್ದಾಗಿದ್ದವೆಂಬದಕ್ಕೆ ಆ ಸಮಯದವರು ಕೇಳದೆ ಇದ್ದದ್ದನ್ನೂ ಆಶ್ಚರ್ಯಕರವಾದದ್ದನ್ನೂ ಅಪರೂಪವಾದದ್ದನ್ನೂ ನೋಡ ಬೇಕೆಂದಿದ್ದ ಮಾಂಸಭಾವವಾಗಿ ಅದ್ಭುತಗಳನ್ನು ಹುಡುಕಿದಾಗ, ಅವನು ಮಾಡದೆ ಇದ್ದದ್ದು ಸಾಕ್ಷಿಯಾಗಿರುತ್ತದೆ (ಮತ್ಥಾ. ೧೨, ೩೮ ವಚನ. ೧೬, ಸಂ. ೧—೪. ಲೂಕ. ೨೩, ೮ ವಚನ ಇತ್ಯಾದಿ) ಅದೇ ಪ್ರಕಾರ ಅವನ ಅದ್ಭುತಗಳು ಬರೇ ಆಶ್ಚರ್ಯಗಳಾಗಿ ಪ್ರಯೋಜನವಿಲ್ಲದವುಗಳಲ್ಲ. ಯಾವಾಗಲೂ ಸ್ನೇಹದ ಸಹಾಯ ಮಾಡುವ ರಕ್ಷಿಸುವ ಬಿಡುಗಡೆ ಪಡಿಸುವ ಕೆಲಸಗಳಾಗಿದ್ದವು ಎಂಬದೂ ಕಡೆಯಲ್ಲಿ ವಿಶ್ವಾಸವನ್ನು ಕಾಣದೆ ಇರುವಲ್ಲಿಯೂ ಬಹಿರಂಗದ ಶರೀರದ ಸಹಾಯವನ್ನು ಮಾತ್ರವೇ ಹೊರ್ತು ಅದಕ್ಕೆ ಸಂಬಂಧವಾದ ಆತ್ಮದ ಸಹಾಯವನ್ನು ಹುಡುಕದೇ ಅಪೇಕ್ಷಿಸದೇ ಇದ್ದಲ್ಲಿಯೂ ಅವನು ಅದ್ಭುತಗಳನ್ನು ಮಾಡಲಿಕ್ಕೆ ಇಷ್ಟೈಸಲಿಲ್ಲಾ, ಮಾಡಲಿಕ್ಕೆ ಕೂಡಲಿಲ್ಲಾ ಎಂಬದು ಮೇಲೆ ಹೇಳಿದಕ್ಕೆ ಸಾಕ್ಷಿಯಾಗಿರುತ್ತದೆ (ಮತ್ಥಾ. ೧೩, ೫೮. ಮಾರ್ಕ. ೬, ೫ ವಚನ).

ಪರಿಶಿಷ್ಟ ೨. ಕ್ರಿಸ್ತನು ಬಹಳ ಸರ್ತಿ ಮುಖ್ಯವಾಗಿ ರೋಗಗಳನ್ನು ಆಶ್ಚರ್ಯಕರವಾಗಿ ವಾಸಿ ಮಾಡಿದಾಗ, ಅದನ್ನು ಕುರಿತು ಯಾರಿಗೂ ಹೇಳ ಬಾರದೆಂದೂ (ಉದಾಹರಣೆ ಮತ್ಥಾ. ೯, ೩೦. ೧೨, ೧೬. ಸಂಧಿ ೧೬, ೨೦. ಮಾರ್ಕ. ೧, ೪೪. ೩, ೧೨ ವಚನ ಇತ್ಯಾದಿ) ಬೇರೆ ಸಮಯದಲ್ಲಿ ತಾನು ಮಾಡಿದ್ದನ್ನು ಸಾರ ಬೇಕೆಂದು ಹೇಳಿದ್ದೂ (ಉದಾಹರಣೆ ಮಾರ್ಕ. ೫, ೧೯ ವಚನ) ಆಶ್ಚರ್ಯವಾಗಿ ಕಾಣುತ್ತದೆ. ಆದರೆ ಇದಕ್ಕೆ ಕಾರಣವು ಒಂದೊಂದು ಸಾರಿ ಜನಾಂಗವೂ ಒಂದೊಂದು ಸಾರಿ ವಾಸಿಯಾದವರೂ ತಾವೇ ಆಗಿದ್ದರು. ವಾಸಿಯಾದವರ ಸ್ವಭಾವಗುಣವನ್ನೂ ಹೃದಯಸ್ಥಿತಿಯನ್ನೂ ಚನ್ನಾಗಿ ದೃಷ್ಟಿಸಿ ತಿಳಿದು ಒಬ್ಬೊಬ್ಬನಿಗೆ ಆತ್ಮದಲ್ಲಿ ಬೆಳಿಯುವದಕ್ಕೆ ಒಳ್ಳೇದಾಗಿದ್ದದ್ದನ್ನೂ ಅಪ್ಪಣೆ ಕೊಟ್ಟನು. ಒಬ್ಬನಿಗೆ ಚಂಚಲ ಮನಸ್ಸಿನವನಾಗಿರದೆ ತನ್ನೊಳಗೆ ತಾನೇ ನೋಡಿ ರಕ್ಷಣ್ಯದ ಬೀಜವನ್ನು ಸಮಾಧಾನದಲ್ಲಿ ಬೆಳಿಸ ಬೇಕೆಂಬದಕ್ಕಾಗಿ ಮೌನವಾಗಿರಲಿಕ್ಕೆ ಅಪ್ಪಣೆ ಕೊಟ್ಟನು. ಮತ್ತೊಬ್ಬನಿಗೆ ತಾನು ಹೊಂದಿದ ಕೃಪೆಯನ್ನೂ ಯೋಗ್ಯವಾದ ಕೃತಜ್ಞತೆಯನ್ನೂ ಮರತು ಬಿಡದ ಹಾಗೆ ಇವುಗಳ ವಿಷಯವಾಗಿ ಮಾತಾಡ ಬೇಕೆಂದು ಅಪ್ಪಣೆ ಕೊಟ್ಟನು. ಮಾತಾಡ ಬೇ

ಚ ಎಂತ ಹೇಳಲಿಕ್ಕೆ ಜನರ ಮನಸ್ಸು ಸೊಟ್ಟಗೆಯಾಗಿದ್ದದ್ದೇ ಮುಖ್ಯ ಕಾರಣವಾಗಿತ್ತು. ಯೇಸುವು ತನ್ನ ಸಮಯವು ಬರುವ ಮೊದಲೇ ವ್ಯರ್ಥವಾದ ಅದ್ಭುತಗಳನ್ನು ಹುಡುಕುವಂಥಾ ಮಾಂಸಭಾವವಾಗಿ ಮೆಸ್ಸೀಯನ ವಿಷಯವಾಗಿ ನಿರೀಕ್ಷಿಸುವಂಥಾ ಯೆಹೂದ್ಯರ ಮನಸ್ಸಿಗೆ ಸಹಾಯ ಮಾಡಲಿಕ್ಕೂ ತನಗೂ ತನ್ನ ಜೀವಕ್ಕೂ ವಿರೋಧವಾಗಿ ಖಂಡಿತವಾದದ್ದೇನಾದರೂ ಮಾಡಲಿಕ್ಕೆ ತನ್ನ ಶತ್ರುಗಳಿಗೆ ಕಾರಣ ಕೊಡಲಿಕ್ಕೂ ಯೇಸುವಿಗೆ ಮನಸ್ಸಿರಲಿಲ್ಲ.



## § 133. ಕ್ರಿಸ್ತನಿಗೆ ಪ್ರಕೃತಿಯ ಮೇಲಿದ್ದ ಅದ್ಭುತಬಲವು

ಕ್ರಿಸ್ತನು ಭೂಮಿಯ ಪ್ರಕೃತಿಯ ಮೇಲೆ ಅರಸನ ಹಾಗೆ ಆಳಿದನೆಂಬದನ್ನು ತೋರಿಸುವಂಥಾ ಅದ್ಭುತಗಳನ್ನು ಮೊದಲು ಆರಂಭ ಮಾಡುತ್ತೇವೆ; ಯಾಕಂದರೆ ಅವನು ಮೊದಲನೇ ಸಾರಿ ಮಾಡಿದ ಅದ್ಭುತವು ಯಾವದಂದರೆ — ಗಲಿಲಾಯದ ಕಾನದಲ್ಲಿ ಮದಿವೆಗೆ ನೀರು ದ್ರಾಕ್ಷೆರಸವಾಗ ಮಾಡಿದ್ದು (ಯೋಹಾ. ೨ನೇ ಸಂ.) ಈ ಅದ್ಭುತವು ನಿರ್ಮಿಸುವಂಥಾ (ಹಾಗಂದರೆ: ಇಲ್ಲದೆ ಇರುವದನ್ನು ಇರಲಿಕ್ಕೆ ಕರಿಯುವಂಥಾ) ಬಲದಿಂದ ಉಂಟಾಗಿರಲಿಲ್ಲ. ಅದು ಆಗ ಇದ್ದಂಥಾ ಪ್ರಕೃತಿಗೆ ಸ್ವಾಭಾವಿಕವಾದ ಬಲಗಳ ಮೇಲೆ ಯೇಸುವಿಗೆ ಇದ್ದ ಪೂರ್ಣ ಅಧಿಕಾರದಿಂದಲೇ ಆಯಿತು. ನೀರು ದ್ರಾಕ್ಷೆರಸವಾಗ ಮಾಡುವ ಬಲವು ಪ್ರಕೃತಿಯಲ್ಲಿಯೇ ಉಂಟು. ಆದರೆ ಅದು ದ್ರಾಕ್ಷೆಬಳ್ಳಿಯ ಸಹಾಯದಿಂದಲೇ ಸಾಧಾರಣವಾಗಿ ಮಾಡಬೇಕು, ಆದರೆ ಎಲ್ಲಾ ಪ್ರಕೃತಿಯ ಬಲದ ಹಾಗೆಯೇ ಇದು ಸಹಾ ರಕ್ಷಕನಿಗೆ ಅಧೀನವಾಗಿತ್ತು. ಹಾಗಾದರೆ ಅವನು ಬೇರೆ ಸಮಯದಲ್ಲಿ ದ್ರಾಕ್ಷೆಯ ಬಳ್ಳಿಯ ಸಹಾಯವು ಅವಶ್ಯವಾಗಿರುವಂಥಾ ಪ್ರಕೃತಿಯ ಬಲವನ್ನು ಈ ಸಾರಿ ಅವನು ಅದರ ಹೊರ್ತು ಈ ಬಲವನ್ನು ನೀರಿನ ಮೇಲೆ ಪ್ರಯೋಗಿಸಿದ್ದೇ ಅದ್ಭುತವಾಗಿತ್ತು. ಅದೇ ಪ್ರಕಾರ ೫ ಸಾವಿರ ಮಂದಿಯನ್ನು ಕೆಲವು ರೊಟ್ಟಿಗಳಿಂದಲೂ ಕೆಲವು ಮೀನುಗಳಿಂದಲೂ ಸಂತೃಪ್ತಿ ಪಡಿಸಿದ ಅದ್ಭುತವು ಇದೇ ತರದ್ದಾಗಿರುತ್ತದೆ (ಮತ್ತಾ. ೧೪, ೧೩. ಸಮನೋಡು ೧೫, ೩೨). ಆದರೆ ರಕ್ಷಕನ ಅದ್ಭುತಬಲವು ಇಲ್ಲಿ ಹೆಚ್ಚಾಗಿ ಪ್ರಕಟವಾಯಿತು. ಹಾಗೆಯೇ ಗಲಿಲಾಯ ಸಮುದ್ರದ ಮೇಲೆ ನಡದ ಅದ್ಭುತ ಸಹಾ (ಮತ್ತಾ. ೮, ೨೩. ಮೊದಲಾದ ವಚನಗಳು ಮಾರ್ಕ. ೪, ೩೬. ಲೂಕ. ೮, ೨೨ ಇತ್ಯಾದಿ) ಇಲ್ಲಿ ಕರ್ತನು ಪ್ರಕೃತಿಯ ಮೇಲೆ ತನಗಿದ್ದ ಅಧಿಕಾರವನ್ನು ತಿಳಿದವನಾಗಿ ಮೊದಲು ಮಲಗಿದ್ದನು.

ಆದರೆ ಮತ್ತೆ ಶಿಷ್ಯರು ಮಹಾ ಚಯದಲ್ಲಿ (ಕರ್ತನೇ ನಮ್ಮನ್ನು ರಕ್ಷಿಸು! ನಾಶವಾಗುತ್ತೇವೆ ಎಂದು) ಕೂಗಿ ಅವನನ್ನು ಎಬ್ಬಿಸಿದಾಗ ಅವನು ಉಬ್ಬಿಕೊಂಡ ಸಮುದ್ರವನ್ನು ಹೆದರಿಸಿ ಸುಮ್ಮನೆ ಇರು! ನಿಶ್ಶಬ್ದವಾಗು ಎಂದು ಹೇಳಿದನು. ಮತ್ತು ಕಂಪವು ಆ ಕ್ಷಣದಲ್ಲಿ ನಿಂತು ಹೋದಾಗ ಅಲ್ಲಿದ್ದವರು ಹೇಳಿದ್ದು: ಇವನು ಎಂಥವನು ಯಾಕಂದರೆ ಘಾಳಿಗಳೂ ಸಮುದ್ರವೂ ಅವನಿಗೆ ವಿಧೇಯವಾಗಿವೆ. ಮತ್ತೊಂದು ಸಾರಿ ಸಮುದ್ರದಲ್ಲಿ ಘಾಳಿ ಬಹಳವಾಗಿ ಹಡಗವು ಕಷ್ಟದಲ್ಲಿರುವಾಗ (ಮತ್ತಾ. ೧೪, ೨೨) ಶಿಷ್ಯರ ಹತ್ತರ ಸಮುದ್ರದ ಮೇಲೆ ನಡ ಕೊಂಡು ಬಂದು ತನಗಿದ್ದ ಆಳುವಿಕೆಯ ಅಧಿಕಾರವನ್ನು ಕ್ರಿಸ್ತನು ಪ್ರಕಟ ಮಾಡಿದನು. ಅದರ ಹೊರ್ತು ಪೇತ್ರನಿಗೆ ಸಹಾ ಅದೇ ಆಶ್ಚರ್ಯಕರವಾದ ಬಲವನ್ನು (ಹಾಗೂ ಅವನು ವಿಶ್ವಾಸಿಸಿದ್ದ ಮಟ್ಟಿಗೂ ಮಾತ್ರವೇ) ಕೊಟ್ಟನು. ಮತ್ತು ಕರ್ತನು ಹಡಗವೇರಿ ಕಂಪವು ಶಾಂತವಾದಾಗ ಹಡಗದಲ್ಲಿದ್ದ ಜನರು ಅವನ ಮುಂದೆ ಬಿದ್ದು, ನೀನು ನಿಜವಾಗಿ ದೇವರ ಮಗನಾಗಿದ್ದೀ ಅಂದರು.

ಪರಿಶಿಷ್ಟ. ಕಾನದಲ್ಲಿ ಮಾಡಿದ ಅದ್ಭುತವು ಮೊದಲಾಗಿ ಅವನ ಮಹಿಮೆಯನ್ನು ಪ್ರಕಟ ಮಾಡಲಿಕ್ಕೂ, ಆದರೆ ಅದೇ ಸಮಯದಲ್ಲಿ ಸ್ನಾನಿಕನಾದ ಯೋಹಾನನಲ್ಲಿ ಕಂಡು ಬಂದಂಥಾ ಮತ್ತು ಕಂಡು ಬರ ಬೇಕಾದಂಥಾ ನೇಮದ ಕಠಿಣತ್ವಕ್ಕೆ ಪ್ರತಿಕೂಲವಾದ ಮನುಷ್ಯನ ಮಕ್ಕಳಲ್ಲಿ ಅತಿ ಮಮತೆಯುಳ್ಳವನ ಮಮತೆಯನ್ನೂ ದಯೆಯನ್ನೂ ಪ್ರಕಟ ಮಾಡಲಿಕ್ಕೂ ಉಪಾಯ ಮಾಡಿತು (ಮತ್ತಾ. ೧೧, ೧೮. ೧೯). ಯೇಸುವು ಮರೀಯಳಿಗೆ ಅಮ್ಮಾ ಅನ್ನದೆ ಸ್ತ್ರೀಯೇ ಅಂದದ್ದು ಮುಂಚಿನ ಸಂಬಂಧವು ಬೇರೆ ಆಯಿತೆಂಬದನ್ನು ಅವಳಿಗೆ ತೋರಿಸುವಂಥಾದ್ದಾಗಿತ್ತು (ಸಮ ನೋಡು ಮತ್ತಾ. ೧೨, ೪೬—೪೯). ಯೇಸುವು ಮೇಲಿನಿಂದ ಮೆಸ್ಸೀಯನಾಗಿ ಅಭಿಷೇಕಿಸಲ್ಪಟ್ಟು ತನ್ನ ಉದ್ಯೋಗವನ್ನು ಆರಂಭ ಮಾಡುತ್ತಲೇ ತಾಯಿಯ ಸಂಬಂಧವು ಬೇರೆಯಾಯಿತು. ಅಂದಿನಿಂದ ಮನುಷ್ಯರಾದ ತಾಯಿತಂದೆಗಳ ಕೆಳಗೆ ಇರ ಬೇಕಾದ ಮಗನಾಗಿರಲಿಲ್ಲ; ಅವನು ಸಮಸ್ತ ಮನುಷ್ಯರಿಗೂ ಮತ್ತು ಮರೀಯಳಿಗೆ ಸಹಾ ರಕ್ಷಕನಾಗಿದ್ದನು. ಆದದರಿಂದ ಮರೀಯಳು ಸಹಾ ಆರಾಧಿಸುವವಳಾಗಿ ಅವನ ಮುಂದೆ ಮೊಣಕಾಲೂರುವದು ಯೋಗ್ಯವಾಗಿತ್ತು. ಜನರನ್ನು ಆಶ್ಚರ್ಯವಾಗಿ (ತೃಪ್ತಿ) ಪಡಿಸಿದ್ದು ಮತ್ತೊಂದು ಸಾರಿ ಸಹಾ ಆಯಿತು (ಮತ್ತಾ. ೧೫, ೩೨ ಇತ್ಯಾದಿ). ಎರಡು ಸಾರಿ ತೃಪ್ತಿ ಪಡಿಸಿದರ ವಿಶೇಷವಾದ ಹೆಚ್ಚು ಕಡಿಮೆ ಮತ್ತಾ. ೧೬, ೯—೧೧ ವರೆಗೆ ಕಾಣುತ್ತದೆ.



## § 134. ಕ್ರಿಸ್ತನು ರೋಗ ಪರಿಹರಿಸಿದ್ದು

ಪೀಠಿಕೆ. ಆತ್ಮವಾಗಿ ಮನುಷ್ಯನು ಪ್ರಕೃತಿಗೆ ಹೆಚ್ಚಾದವನು. ಶರೀರದ ಪ್ರಕಾರ ಪ್ರಕೃತಿಗೆ ಶೇರಿದವನಾಗಿರುತ್ತಾನೆ. ಮನುಷ್ಯನ ಆತ್ಮಕ್ಕೆ ಅಷ್ಟು ಸಮೀಪವಾಗಿರದಂಥಾ ಮೃಗಗಳೆಂಬ ಪ್ರಕೃತಿಯ ಮೇಲೆ ಪೂರ್ಣ ಅಧಿಕಾರವು ಇದ್ದದ್ದಾದರೆ, ನಿಶ್ಚಯವಾಗಿ ಅವನಿಗೆ ಸಂಬಂಧವಾಗಿರುವ ಸ್ವಂತ ಶರೀರವೆಂಬ ಪ್ರಕೃತಿಯ ಮೇಲೆ ಅದೇ ಪ್ರಕಾರ ಅಧಿಕಾರ ಇರ ಬೇಕು. ಅಲ್ಲಿ ಹ್ಯಾಗೋ ಅದೇ ಪ್ರಕಾರ ಇಲ್ಲಿ ಸಹಾ ಪಾಪವು ಕೆಳಗೆ ಮೇಲೆ ಮಾಡುವಂಥಾದ್ದಾಗಿಯೂ ನಾಶ ಮಾಡುವಂಥಾದ್ದಾಗಿಯೂ ಒಳಗೆ ಶೇರಿತು. ಅದು ಮನುಷ್ಯನ ಜೀವನದ ಒಳಗಿನ ಏಕತ್ವವನ್ನು ಹರಿದು ಹಾಕಿ, ಶರೀರ ಜೀವ ಆತ್ಮಗಳ ಯೋಗ್ಯ ಸಂಬಂಧವನ್ನು ಕೆಳಗೆ ಮೇಲೆ ಮಾಡಿ, ಮನುಷ್ಯನ ಶರೀರದಲ್ಲಿ ಏಕತ್ವವನ್ನು ತೆಗದು ಹಾಕಿ, ಭೇದವನ್ನೂ ರೋಗವನ್ನೂ ಮರಣವನ್ನೂ ತಂತು. ಪಾಪದಿಂದ ಉಂಟಾದದ್ದೆಲ್ಲಾ ಹ್ಯಾಗೋ ಅದೇ ಪ್ರಕಾರ ಇದು ಸಹಾ ರಕ್ಷಣ್ಯದಿಂದ ಪೂರ್ಣವಾಗಿ ಜೈಸಲ್ಪಟ್ಟು ತೆಗದು ಹಾಕಲ್ಪಡ ಬೇಕು. ಈ ರಕ್ಷಣ್ಯದ ಆರಂಭವೂ ಮುಂಗುರ್ತುಗಳೂ ಮುಂಗಡವೂ ಕ್ರಿಸ್ತನು ರೋಗಗಳನ್ನು ವಾಸಿ ಮಾಡಿದ್ದರಲ್ಲಿಯೂ ಸತ್ತವರನ್ನು ಎಬ್ಬಿಸಿದ್ದರಲ್ಲಿಯೂ ಉಂಟು. ಅವನು ಮತ್ತೆ ಮರಣದ ಬಲವನ್ನು ಯಾವ ಬಲದಿಂದ ನಾಶ ಮಾಡಿದನೋ ಅದರಿಂದಲೇ ಆ ಸಮಯದಲ್ಲಿ ಸಹಾ ರೋಗವನ್ನೂ ಮರಣವನ್ನೂ ಜೈಸ ಶಕ್ತನಾಗಿದ್ದನು.

೧) ರಕ್ಷಕನು ರೋಗಗಳನ್ನು ವಾಸಿ ಮಾಡ ಬೇಕಾದರೆ ಒಂದು ಪೂರ್ಣವಾಗಿ ಅವಶ್ಯವಾಯಿತು. ಯಾವದಂದರೆ — ರೋಗಿಯ ವಿಶ್ವಾಸವು; ಅಥವಾ ಒಂದೊಂದು ಸಾರಿ ಅವನ ಕಡೆಯವರ ವಿಶ್ವಾಸವು. ಶರೀರಕ್ಕೆ ಕ್ಷೇಮವಾಗುವದು ಆತ್ಮದ ಕ್ಷೇಮಕ್ಕೆ ಆಧಾರ ಕೊಡುವಂಥಾದ್ದು ಮಾತ್ರವೇ ಆಗಿತ್ತು. ಅದದರಿಂದ ಕ್ರಿಸ್ತನು ವಿಶ್ವಾಸಕ್ಕೂ ಕ್ಷೇಮಕರವಾದದ್ದಕ್ಕೂ ಇರುವ ಸಂಬಂಧವನ್ನು ಸ್ವಲ್ಪ ಕಡಿಮೆ ಬಿಡದೆ ತೋರಿಸುತ್ತಾನೆ. "ನನ್ನ ಮಗನೇ! ನನ್ನ ಮಗಳೇ ನಿನ್ನ ವಿಶ್ವಾಸವು ನಿನ್ನನ್ನು ರಕ್ಷಿಸಿತು" ಕ್ರಿಸ್ತನ ಪಕ್ಷದಲ್ಲಿ ಹ್ಯಾಗಾಯಿತಂದರೆ: ಅವನೊಳಗಿಂದ ಹೋಗಿ, ರೋಗಿಯಲ್ಲಿ ಶೇರಿದ ಬಲದಿಂದ ಕ್ಷೇಮವು ಉಂಟಾಯಿತು. (ಲೂಕ. ೬, ೧೯. ಸಂ. ೮, ೪೬ ಇತ್ಯಾದಿ.) ಈ ಬಲವನ್ನು ರಕ್ಷಕನು ರೋಗಿಯಲ್ಲಿ ಯತ್ನೈಸ ಮಾಡಿದ್ದು ಹ್ಯಾಗಂದರೆ — ಒಂದೇ ಭೂಮಿಯ ವಸ್ತುವಿನ ಪ್ರಯೋಗದಿಂದ ಇಲ್ಲವೇ ತಾನೇ ಮುಟ್ಟುವದರಿಂದ (ಹೆಚ್ಚಾಗಿ ಕೈ ಇಡುವದರಿಂದ ಮಾರ್ಕ. ೬, ೫.) ಇಲ್ಲವೇ ಮುಟ್ಟದೆ ಸಹಾ ರಕ್ಷಕನು ಒಂದು ಸಾರಿ ಹೀಗೆ ಮತ್ತೊಂದು ಸಾರಿ ಹಾಗೆ ಕ್ಷೇಮ ಕೊಟ್ಟದ್ದಕ್ಕೆ ಕಾರಣವು

ರೋಗಗಳ ತರವು ಬೇರೆಯಾಗಿದ್ದದ್ದು ಅಲ್ಲ; ಸಹಾಯ ಹೊಂದಿದವರ ಆಯಾ ಆತ್ಮದ ಸ್ಥಿತಿಗಳೇ ಕಾರಣವಾಗಿದ್ದವು.

೨) ಕ್ರಿಸ್ತನು ಅಮಿತವಾದ ರೋಗಿಗಳಿಗೆ ಕ್ಷೇಮ ಕೊಟ್ಟಿದ್ದರೂ ಸುವಾರ್ತಿಕರು ಬಹಳ ಸ್ವಲ್ಪ ಮಂದಿಯ ವಿಷಯವಾಗಿ ಮಾತ್ರವೇ ಬರದು ಇಟ್ಟಿದ್ದಾರೆ. ಇವರಲ್ಲಿ ಸಹಾ ವಿಶೇಷವಾದ ಕ್ಷೇಮದ ವಿಷಯವಾಗಿ ಮಾತ್ರವೇ ಇಲ್ಲಿ ಹೇಳಲಿಕ್ಕೆ ಆಗುವದು. ಹಾಗೆಯೇ ಅತಿ ಆಶ್ಚರ್ಯಕರವಾದದ್ದು ಯಾವದಂದರೆ — ಹುಟ್ಟು ಕುರುಡನನ್ನು ವಾಸಿಮಾಡಿದ್ದು (ಯೋಹಾ. ೯, ೧ ಇತ್ಯಾದಿ) ರೋಗಕ್ಕೂ ಪಾಪಕ್ಕೂ ಇರುವ ಸಂಬಂಧವನ್ನು ಈ ಸಮಯದಲ್ಲಿ ವಿವರಿಸಿದದರಿಂದಲೂ, ವಾಸಿ ಮಾಡಿದ ರೀತಿಯಿಂದಲೂ (ಮಣ್ಣಿಗೆ ಎಂಜಲು ಕೂಡಿಸಿದ್ದು) ಆಶ್ಚರ್ಯಕರವಾಗಿರುತ್ತದೆ. ಹಾಗೆಯೇ ತರುವಾಯ ಫರಿಸಾಯರು ವಾಸಿಯಾದವನ ಸಂಗಡಲೂ ಅವನ ಹೆತ್ತವರ ಸಂಗಡಲೂ ನಡಿಸಿದ ಮಾತು ಕಥೆಗಳಿಂದ ಸಹಾ ಈ ಅದ್ಭುತವು ವಿಶೇಷವಾಯಿತು. ಇದರ ಪ್ರಕಾರವೇ (ಎಂಜಲು ಹಚ್ಚಿ ಕೈ ಇಡಲಾಗಿ) ಮತ್ತೊಬ್ಬ ಕುರುಡನೂ (ಮಾರ್ಕ. ೮, ೨೨ ಇತ್ಯಾದಿ) ಕಿವುಡನೂ (ಮಾರ್ಕ. ೭, ೩೩) ವಾಸಿಯಾದರು. ಅವನ ವಸ್ತ್ರವನ್ನು ಮುಟ್ಟುವದರಿಂದಲೇ ಒಬ್ಬ ರಕ್ತಕುಸುಮದ ಸ್ತ್ರೀಯು ವಾಸಿಯಾದಳು. ಇವಳ ಬಲವಾದ ವಿಶ್ವಾಸವು ರಮ್ಯವಾಗಿ ವಿಕಸಿತವಾಯಿತು (ಲೂಕ. ೮, ೪೩). ತಾನೇ ಮುಟ್ಟದೆ ದೂರದಲ್ಲಿಯೇ ಕ್ರಿಸ್ತನ ಕ್ಷೇಮಕರ ಬಲವು ಗಲಿಲಾಯದ ಕಪೆರ್ನೌಮದಲ್ಲಿ ಇದ್ದ ರೋಮಾಯ ಶತಾಧಿಪತಿಯ ಮರಣಸಂಕಟದಲ್ಲಿದ್ದ ದಾಸನಲ್ಲಿ ಯತ್ನೈಸಿತು (ಲೂಕ. ೭, ೧). ಆ ಸಮಯದಲ್ಲಿ ಆ ಶತಾಧಿಪತಿಯ ಬಲವಾಗಿಯೂ ದೈನ್ಯವಾಗಿಯೂ ಇರುವ ವಿಶ್ವಾಸಕ್ಕೆ (“ಕರ್ತನೇ ಬೇಸರಗೊಳ ಬೇಡ, ಯಾಕಂದರೆ ನೀನು ನನ್ನ ಮಾಳಿಗೆಯ ಕೆಳಗೆ ಪ್ರವೇಶಿಸುವ ಹಾಗೆ ನಾನು ಯೋಗ್ಯನಲ್ಲ. ಆದರೆ ನೀನು ಮಾತನ್ನು ಹೇಳಿದರೆ ನನ್ನ ಸೇವಕನು ಗುಣವಾಗುವನು.” ಸಮ ನೋಡು. ಶ್ಲೋಕ ೮.) ಕರ್ತನು ಮಹಿಮೆಯುಳ್ಳ ಸಾಕ್ಷಿ ಕೊಟ್ಟನು. “ಇಸ್ರಯೇಲಿನಲ್ಲಿಯೂ ನಾನು ಇಷ್ಟು ದೊಡ್ಡ ವಿಶ್ವಾಸವನ್ನು ಕಾಣಲಿಲ್ಲವೆಂದು ನಿಮಗೆ ಹೇಳುತ್ತೇನೆ.” (ಹೆರೋದನ ಸೇವಕನಾಗಿದ್ದ) ಕಪೆರ್ನೌಮದ ಪ್ರಧಾನಿಯ ಮಗನನ್ನು ವಾಸಿ ಮಾಡಿದ ಕಥೆಯು ಕ್ಷೇಮ ಕೊಡುವ ರೀತಿಯಾಗಿ ಮೇಲಿನದಕ್ಕೆ ಸಂಬಂಧವಾದದ್ದು, ಆದರೆ ಪ್ರಧಾನಿಯ ಬಲಹೀನವಾದ ವಿಶ್ವಾಸಕ್ಕಾಗಿಯೂ ಕರ್ತನು ಅವನನ್ನು ಗದರಿಸಿದ್ದಕ್ಕಾಗಿಯೂ ಪ್ರತಿಕೂಲವಾದದ್ದೂ ಸಹಾ ಆಗಿರುತ್ತದೆ (ಯೋಹಾ. ೪, ೪೭).



## § 135. ಸತ್ತವರನ್ನು ಎಬ್ಬಿಸಿದ್ದು

೧) ಯೇಸುವಿನ ಅದ್ಭುತಗಳಲ್ಲಿ ಮೂರು ಮಂದಿ ಸತ್ತವರನ್ನು ಎಬ್ಬಿಸಿದ್ದು ಸಹಾ ಹೇಳಿಯದೆ. ಕಪೆರ್ನೌಮದ ಸಭೆಮನೆಯ ಯಜಮಾನನಾದ ಯಾಯಿರನೆಂಬವನು ರಕ್ಷಕನು ೧೨ ವರ್ಷದ ಮಗಳು ಸಾಯಲಿಕ್ಕೆ ಸಮೀಪವಾಗಿದ್ದಾಳೆಂದೂ ತನ್ನ ಮನೆಗೆ ಬರ ಬೇಕೆಂದೂ ಬೇಡಿ ಕೊಂಡನು. ಮಾರ್ಗದಲ್ಲಿ ಯೇಸುವು ರಕ್ತಕುಸುಮದ ಸ್ತ್ರೀಯ ಸಂಗತಿಗಾಗಿ ತಡ ಮಾಡಿದಾಗ ಹುಡುಗಿಯ ತಂದೆಗೆ ಹುಡುಗಿಯು ಸತ್ತು ಹೋದಳೆಂದು ವರ್ತಮಾನ ಬಂತು. ಕ್ರಿಸ್ತನು ಅವಳ ಮರಣವು ನಿದ್ರೆಯಾಗಿರುತ್ತದೆ ಎಂದು ಈ ಆಶ್ಚರ್ಯಕರವಾದ ಮಾತು ಹೇಳಿದನು (ಹ್ಯಾಗಂದರೆ ಅವನು ಸತ್ತವರನ್ನು ಎಬ್ಬಿಸುವವನಾಗಿರಲಾಗಿ ಅವನಿಗೆ ಈ ಮರಣವು ಬರೇ ನಿದ್ರೆಯಾಗಿತ್ತು). ಮತ್ತೆ ಅಲ್ಲಿ ಹೋಗಿ ಹುಡುಗಿಯನ್ನು ತಿರಿಗಿ ಜೀವಕ್ಕೆ ಕರಿಯುತ್ತಾನೆ ("ತಲಿಥಾ ಕೂಮಿ" ಅಂದರೆ ಹುಡುಗಿಯೇ ಏಳು) (ಮಾರ್ಕ. ೫, ೨೧ ಇತ್ಯಾದಿ). ನಾಯಿನದಲ್ಲಿ ಒಬ್ಬ ವಿಧವೆಯ ಒಬ್ಬನೇ ಮಗನು ಸತ್ತು, ಅವನ ಶವವನ್ನು ಬಾಗಲಿನಿಂದ ಹೊರಗೆ ತರುವಾಗಲೇ ಕರ್ತನು ಪಟ್ಣಕ್ಕೆ ಬಂದನು. ಅವನು ಬಡ ವಿಧವೆಯ ಮೇಲೆ ಅಂತಃಕರಣ ಪಟ್ಟು ಅವಳಿಗೆ ಹೇಳಿದ್ದು: "ಅಳ ಬೇಡ". ಮತ್ತು ಸತ್ತವನಿಗೆ "ಯೌವನಸ್ಥನೇ ಏಳು ಎಂದು ನಿನಗೆ ಹೇಳುತ್ತೇನೆ" (ಲೂಕ. ೭, ೧೧—೧೭).

೨) ಯೋಹಾ. ೧೧, ೧. ಈ ತರದ ಅದ್ಭುತಗಳಲ್ಲಿ ಕಡೇದಾಗಿಯೂ ಅತಿ ಮಹಿಮೆಯುಳ್ಳದ್ದಾಗಿಯೂ ಇರುವಂಥಾದ್ದು ಯಾವದಂದರೆ: ಬೆಥಾನ್ಯದ ಮರೀಯ ಮಾರ್ಥರ ಸಹೋದರನಾದ ಲಾಜರನನ್ನು ಎಬ್ಬಿಸಿದ್ದು. ಇದು ಮಹಾ ಆಶ್ಚರ್ಯಕರವಾದ ಅದ್ಭುತವಾಗಿತ್ತು. ಯಾಕಂದರೆ ಲಾಜರನು ಸತ್ತು ನಾಲ್ಕು ದಿವಸವಾಗಿತ್ತು, ಅದು ಅತಿ ವಿಶೇಷವಾದದ್ದು ಸಹಾ ಆಗಿತ್ತು. ಹ್ಯಾಗಂದರೆ ಅಲ್ಲಿದ್ದವರಲ್ಲಿ ಮೃದುಮನಸ್ಸಿನವರಿಗೆ ರಕ್ಷಣ್ಯಕಾರ್ಯದ ಮುಖ್ಯ ಕಾರ್ಯವು ಯಾವದೆಂಬದು ಕಾಣ ಬಂತು. ಅದು ಅತಿ ಶ್ರೇಷ್ಟವಾದದ್ದು ಸಹಾ ಆಗಿತ್ತು. ಯಾಕಂದರೆ ಬಹಳ ಜನರು ಇದಕ್ಕೋಸ್ಕರ ವಿಸ್ಮಯ ಪಡಲಾಗಿ ಅವನ ಶತ್ರುಗಳು ಅವನನ್ನು ಹ್ಯಾಗಾದರೂ ಇಲ್ಲವಾಗ ಮಾಡ ಬೇಕೆಂದು ಆಲೋಚನೆ ಮಾಡಲಿಕ್ಕೆ ಮುಖ್ಯ ಕಾರಣವಾಯಿತು. ಸಹೋದರಿಗಳು ಅವನ ಬಳಿಗೆ ಹೇಳಿ ಕಳುಹಿಸಿದ್ದು: ಕರ್ತನೇ ಇಗೋ ನೀನು ಸ್ನೇಹಿಸುವವನು ಅಸ್ವಸ್ಥವಾಗಿದ್ದಾನೆ. ಆಗಲಿಕ್ಕಿರುವಂಥಾದ್ದು ಏನೆಂಬದನ್ನು ಚೆನ್ನಾಗಿ ತಿಳಿದವನಾಗಿ ಅವನು ಉತ್ತರ ಕೊಟ್ಟದ್ದು: ಈ ರೋಗವು ಮರಣಕ್ಕಲ್ಲ, ದೇ

ವರ ಮಗನು ಅದರ ಮೂಲವಾಗಿ ಮಹಿಮೆ ಪಡುವ ಹಾಗೆ ದೇವರ ಮಹಿಮೆ ಗೋಸ್ಕರವೇ ಅದೆ. ಮುಂದೆ ಬರುವಂಥಾದ್ದು ತನ್ನ ಶಕ್ತಿಯಲ್ಲಿರುವದರಿಂದ ಅಲಕ್ಷ್ಯ ಮಾಡುವವನ ಹಾಗೆ ಇದ್ದ ಸ್ಥಳದಲ್ಲಿಯೇ ಇನ್ನೆರಡು ದಿವಸ ಇರುತ್ತಾನೆ. ಮತ್ತೆ ತನ್ನ ಶಿಷ್ಯರಿಗೆ ಹೇಳಿದ್ದು: ಯೆಹೂದ್ಯಕ್ಕೆ ತಿರಿಗಿ ಹೋಗುವಾ. ನಮ್ಮ ಸ್ನೇಹಿತನಾದ ಲಾಜರನು ನಿದ್ದೆ ಹೋಗಿದ್ದಾನೆ. ಆದರೆ ಅವನನ್ನು ನಿದ್ದೆಯಿಂದ ಎಬ್ಬಿಸ ಹೋಗು ತ್ತೇನೆ. ಆದರೆ ಅವರು ಶರೀರದ ನಿದ್ರೇ ವಿಷಯವಾಗಿ ಎಂದು ನೆನಸಿದ ಕಾರಣ ಅವ ರಿಗೆ ಸ್ಪಷ್ಟವಾಗಿ ಹೇಳಿದ್ದು: ಲಾಜರನು ಸತ್ತಿದ್ದಾನೆ. ಮತ್ತು ನಾನು ಅಲ್ಲಿ ಇರದ ಕಾರಣ ನಿಮಗೋಸ್ಕರ ನೀವು ವಿಶ್ವಾಸಿಸುವ ಹಾಗೆ ಸಂತೋಷ ಪಡುತ್ತೇನೆ. ಮಾ ರ್ಥಳು ಅವನಿಗೆ ಎದುರಾಗಿ ಹೋಗುತ್ತಾಳೆ. ಕರ್ತನು ಮೊದಲೇ ಬರಲಿಲ್ಲವೆಂದು ದುಃಖಿತಳಾಗಿದ್ದರೂ, ಇನ್ನು ಕೋರಿಕೆಯೂ ವಿಶ್ವಾಸವೂ ಉಳ್ಳವಳಾಗಿದ್ದಾಳೆ. ಮ ತ್ತು ಯೇಸು ಅವಳಿಗೆ ಹೇಳಿದ್ದು: ನಾನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ. ನನ್ನಲ್ಲಿ ವಿಶ್ವಾಸವಿಡುವವನು ಸತ್ತರೂ ಬದುಕುವನು ಮತ್ತು ಬದುಕಿ ನನ್ನಲ್ಲಿ ವಿ ಶ್ವಾಸವಿಡುವವನು ಎಂದೆಂದಿಗೂ ಸಾಯುವದಿಲ್ಲ. ತರುವಾಯ ಸಮಾಧಿಯ ಹ ತ್ತರ ಹೋಗಿ ಲಾಜರನೇ ಹೊರಗೆ ಬಾ ಎಂದು ಸತ್ತವರನ್ನು ಎಬ್ಬಿಸುವವನು ಕರಿಯು ತ್ತಲೇ ಮರಣವು ತನ್ನ ಕೊಳ್ಳೆಯನ್ನು ತಿರಿಗಿ ಕೊಡ ಬೇಕಾಯಿತು. ಇದಾದ ಮೇಲೆ ತಾನೇ ಮರಣವನ್ನು ಅನುಭವಿಸಲಿಕ್ಕೂ ಮರಣದಿಂದ ಜೀವದಲ್ಲಿ ಶೇರಲಿಕ್ಕೂ ನಾ ನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ ಎಂದು ಹೇಳಿದ ವಾಕ್ಯವು ಅತಿ ಮ ಹಿಮೆಯುಳ್ಳಂಥಾ ಎಲ್ಲಾ ತೀರಿಸುವಂಥಾ ಸಂಪೂರ್ಣತೆಯನ್ನು ಹೊಂದುವ ಹಾಗೆ ಯೆರೂಸಲೇಮಕ್ಕೆ ಹೋಗುತ್ತಾನೆ.



## § 136. ದೆವ್ವ ಹಿಡಿದವರನ್ನು ವಾಸಿ ಮಾಡಿದ್ದು

೧) ಭಯಂಕರವಾಗಿಯೂ ಯೇಸುವಿನ ಕಾಲದಲ್ಲಿ ವಿಶೇಷವಾಗಿ ಕಾಣುವಂಥಾ ದ್ದಾಗಿಯೂ ಇರುವ ಒಂದು ರೋಗದ ರೂಪವು ಇತ್ತು. ಅದು ಯಾವದಂದರೆ — ದೆವ್ವ ಹಿಡಿಯುವದು. ಇದರ ಕಾರಣವು ಯಾವದಂದರೆ — ಆಗಿನ ಜನರು ನಂಬುವ ಪ್ರಕಾರ ಮಾತ್ರವಲ್ಲ, ಕ್ರಿಸ್ತನು ತಾನೇ ಆಲೋಚಿಸಿದ ಪ್ರಕಾರವಾಗಿಯೂ ಹೇಳಿದ ಪ್ರಕಾರವಾ ಗಿಯೂ ಒಂದು ದುರಾತ್ಮವು (ದೆವ್ವ) ಮನುಷ್ಯನ ಅಹಂಭಾವವನ್ನು ತ್ರಾಣವಿಲ್ಲದಾ ಗ ಮಾಡಿ, ಮನುಷ್ಯನ ಶರೀರ ಜೀವಗಳನ್ನು ಕೈವಶ ಮಾಡಿ ಕೊಂಡು ಹಾಳು ಮಾ

ಡುವಂಥಾ ಅಸ್ವಭಾವಿಕವಾದ ಕೆಲಸಗಳಿಗೆ ಪ್ರಯೋಗಿಸುವಂಥಾದ್ದೇ ಆಗಿತ್ತು. ಪಿಶಾಚಿಯ ಕೆಲಸಗಳನ್ನೆಲ್ಲಾ ಲಯ ಮಾಡುವದಕ್ಕೋಸ್ಕರ (೧ ಯೋಹಾ. ೩, ೮) ಬಂದ ಕ್ರಿಸ್ತನ ಉದ್ಯೋಗದ ಪ್ರಕಾರ ಅಂಧಕಾರದ ಬಲದ ಭಯಂಕರವಾದ ಈ ಕೆಲಸಗಳಿಗೆ ಕ್ರಿಸ್ತನು ಜಯ ಹೊಂದುವವನಾಗಿ ಪ್ರತಿಯಾಗಿ ನಿಲ್ಲುವದು ಅವಶ್ಯವಾಯಿತು.

ಪರಿಶಿಷ್ಟ. ಇಂಥಾ ಸ್ಥಿತಿಗಳನ್ನು ತಿಳಕೊಳ್ಳುವದಕ್ಕೆ ಕೆಲವು ಆಲೋಚನೆಗಳು ಯೋಗ್ಯವಾಗಿರುವವು. ಮೊದಲಿನೇ ಮನುಷ್ಯನು (ಅವನಲ್ಲಿಯೂ ಅವನ ಸಂಗಡಲೂ ಎಲ್ಲಾ ಸಂತತಿ ಸಹಾ) ದೇವರು ನಿಶ್ಚಯಿಸಿದ್ದಕ್ಕೆ ನಿಶ್ಚಯ ಮಾಡಿ ಕೊಂಡದ್ದಾದರೆ ಎಲ್ಲಾ ಶರೀರದ ಪ್ರಾಣದ ಆತ್ಮದ ಕೆಲಸಗಳು ಮಧ್ಯದಲ್ಲಿ ಹೆಚ್ಚು ಕಡಿಮೆ ಬಾರದೆ ಹೆಚ್ಚು ಕಡಿಮೆ ಬರ ಕೂಡದಂಥಾ ಸಮತ್ವದಲ್ಲಿಯೂ ಏಕತ್ವದಲ್ಲಿಯೂ ನಡಿಯಲಾಗಿ ಮನುಷ್ಯನ ಜೀವವು ಸಮವಾಗಿ ವಿಕಸಿತವಾಗುತ್ತಿತ್ತು. ಮನುಷ್ಯನ ಸ್ವಭಾವವೆಲ್ಲಾ ತನ್ನಲ್ಲಿ ಮುಚ್ಚಿ ಕೊಂಡಿರುವಂಥಾ ದೇವರಿಂದ ಮುಚ್ಚಲ್ಪಟ್ಟಂಥಾ ಏಕತ್ವವಾಗುತಿತ್ತು. ಇದರಲ್ಲಿ ಶತ್ರುಬಲವು ಹೊರಗಿನಿಂದ ಒಳಗೆ ಸೇರಲಿಕ್ಕೆ ಆಗುತ್ತಿದ್ದಿಲ್ಲ. ಆದರೆ ಪಾಪದಿಂದ ಅವನ ಸ್ವಭಾವದ ಸಮಭಾರವೂ ಏಕತ್ವವೂ ಕೆಟ್ಟು ಹೋಯಿತು. ಆದರೆ ಹ್ಯಾಗೆ? ಮೊದಲು ಆತ್ಮವು ತನ್ನ ಯೋಗ್ಯಸ್ಥಾನಕ್ಕೆ ತಪ್ಪಿತು. ಮತ್ತು ಆತ್ಮವು ಮನುಷ್ಯಸ್ವಭಾವಕ್ಕೆ ಮಧ್ಯಸ್ಥಾನವಾಗಿಯೂ ಐಕ್ಯಸ್ಥಾನವಾಗಿಯೂ ಇರಲಾಗಿ, ಕೇಡು ಶರೀರ ಪ್ರಾಣಗಳ ಸ್ಥಳಕ್ಕೂ ಸೇರಿತು. ಇಲ್ಲಿ ಅದು ರೋಗವೆಂದು ಕಾಣ ಬಂದು, ಶರೀರದ ಮರಣದಲ್ಲಿ ಕಡೆ ಹೊಂದಿತು. ಹಾಗಾದರೆ ಪಾಪದಿಂದ ಶರೀರಪ್ರಾಣಗಳಿಗೂ ಪ್ರಾಣ ಆತ್ಮಗಳಿಗೂ ಇರುವ ಬಂಧವು ಹರದು ಹೋಯಿತು. ಹೀಗಾಗಿ ಮನುಷ್ಯನ ಅವಯವತ್ವ ಎಲ್ಲಾ ತರದ ಶತ್ರುಕಾರ್ಯಗಳಿಗೆ ತೆರಿಯಲ್ಪಟ್ಟಿತು. ಪ್ರಕೃತಿಯ ಕೆಡಿಸುವ ತ್ರಾಣಗಳು (ಮಹಾ ರೋಗಗಳು ವಿಷಗಳು ಇತ್ಯಾದಿ) ಮನುಷ್ಯನ ಅವಯವತ್ವದಲ್ಲಿ ಸೇರಿ, ಅದನ್ನು ಇಷ್ಟಕ್ಕೆ ವಿರೋಧವಾಗಿಯೂ ಅಸ್ವಾಭಾವಿಕವಾಗಿಯೂ ಕೆಡಿಸುವಂಥಾದ್ದಾಗಿಯೂ ಇರುವ ಕಾರ್ಯಗಳಿಗೆ ಪ್ರಯೋಗಿಸಲಿಕ್ಕೆ ಆಗುತ್ತದೆಯಾದರೆ, ಅಹಂಭಾವವುಳ್ಳ ಅಂಧಕಾರದ ಬಲಗಳು ಅದೇ ತರವಾಗಿ ಮನುಷ್ಯನ ಅವಯವತ್ವವನ್ನು ಕೈವಶ ಮಾಡಿ ಕೊಳ್ಳಲಿಕ್ಕೆ ಯಾಕೆ ಆಗದು? ಅವುಗಳಿಗೆ ತ್ರಾಣಗಳು ಹ್ಯಾಗೋ ಹಾಗೆ ಇವುಗಳಿಗೆ ಸಹಾ ಪ್ರತ್ಯೇಕವಾದ ಮನುಷ್ಯನ ಸ್ಥಿತಿಯು ಬೇಕಾದೀತು. ಆದರೆ ತಾನೇ ಪ್ರತ್ಯೇಕವಾಗಿ ಮಾಡಿದ ಪಾಪದಿಂದ ಅದು ಉಂಟಾಯಿತೋ ಇಲ್ಲವೆ, ಎಷ್ಟು ಪರ್ಯಂತರ ಅದು ಫಲವಾಗಿರುತ್ತದೆ ಎಂಬದನ್ನು ಮನುಷ್ಯನು ನಿಶ್ಚಯಿಸಲಿಕ್ಕೆ ಆಗಲಿಕ್ಕಿಲ್ಲ. ದೆವ್ವ ಹಿಡಿಯುವಂಥಾ

ರೋಗವು ಯೇಸುವಿನ ಕಾಲಕ್ಕೆ ವಿಶೇಷವಾಗಿತ್ತೋ? ಇಲ್ಲವೆ ಮತ್ತೆಯೂ ಈಗ ನಮ್ಮ ಕಾಲಗಳಲ್ಲಿ ಸಹಾ ಕಂಡು ಬರುತ್ತದೋ? ಎಂಬ ಪ್ರಶ್ನೆಗೆ ಕ್ರೈಸ್ತ ವಿಶ್ವಾಸದಲ್ಲಿ ನಡಿಸುವ ವೈದ್ಯವಿದ್ಯೆಯು ಉತ್ತರ ಕೊಡ ಬೇಕು. ಕ್ರಿಸ್ತನ ಕಾಲದಲ್ಲಿ ಮಾತ್ರವೇ ವಿಶೇಷವಾಗಿತ್ತೆಂದು ಹೇಳುವದಾದರೆ, ಅಂಧಕಾರದ ಬಲವನ್ನು ಕ್ರಿಸ್ತನು ಬಂದು ವಿಮೋಚನೆಯ ಕಾರ್ಯದಿಂದ ಮುರಿದು ಹಾಕುವಾಗಲೇ ಅದು ಬಹಳ ಪ್ರಬಲವಾಯಿತೆಂಬದನ್ನು ಹೇಳಲಿಕ್ಕೆ ಕಾರಣ ಉಂಟು. ಆದರೆ ೨ ನೇದು ಸಹಾ ಉಂಟೆಂಬದನ್ನು ವಿದ್ಯೆಯು ನಿಶ್ಚಯಿಸುವದಾದರೆ, ಪೂರ್ವಕಾಲದಲ್ಲಿ ಆಗುವದಕ್ಕಿಂತ ಈಗಿನ ಕಾಲದಲ್ಲಿ ಕ್ರೈಸ್ತರ ಮಧ್ಯದಲ್ಲಿ ಅಂಥಾದ್ದು ಅಪರೂಪವಾಗಲಿಕ್ಕೆ ಈ ವಿಷಯದಲ್ಲಿ ಸಹಾ ಆಶೀರ್ವಾದ ತರುವ ಕ್ರೈಸ್ತ ಭಕ್ತಿಯೇ ಕಾರಣವಾಗಿರ ಬೇಕು. ಮತ್ತು ಇದು ಮುಂದಿನ ಕಾಲದಲ್ಲಿ ಅಂಧಕಾರದ ಬಲವು ನಮ್ಮಲ್ಲಿ ಏನೂ ನಡಿಸ ಕೂಡದ ಹಾಗೆ ಪೂರ್ಣವಾಗಿ ತೆಗದು ಹಾಕಲ್ಪಡುವದಕ್ಕೆ ಮುಂಗಡವಾಗಿರುತ್ತದೆ.

೨) ದೆವ್ವ ಹಿಡಿದವರನ್ನು ವಾಸಿ ಮಾಡಿದ್ದರಲ್ಲಿ ಆಶ್ಚರ್ಯಕರವಾದದ್ದು ಯಾವದಂದರೆ — ಒಂದು ಸಾರಿ ಯೇಸುವು ಕಪೆರ್ನೌಮದ ಸಭೆಮನೆಯಲ್ಲಿ ಸಬ್ಬತ್ ದಿವಸದಲ್ಲಿ, ಶಾಸ್ತ್ರಿಗಳ ಹಾಗಲ್ಲ ಅಧಿಕಾರ ಉಂಟಾದವನ ಹಾಗೆಯೇ ಬೋಧಿಸುತ್ತಾ ಇದ್ದಾಗ, ದೆವ್ವ ಹಿಡಿದವನೊಬ್ಬನು ಮುಂದೆ ಬಂದು, "ನಜರೇಥಿನವನಾದ ಯೇಸುವೇ ಬಿಡು, ನಮಗೂ ನಿನಗೂ ಏನು! ನಮ್ಮನ್ನು ನಾಶನ ಮಾಡ ಬಂದಿಯೋ ನೀನ್ಯಾರೆಂದು ಬಲ್ಲೆನು ದೇವರ ಪರಿಶುದ್ಧನೇ" ಎಂಬಧಾಗಿ ಘಟ್ಟಿಯಾಗಿ ಕೂಗಿದನು. ಈ ಪ್ರಕಾರ ಅಂಧಕಾರದ ಬಲವು ತಾನೇ ಪರಿಶುದ್ಧನ ಸಮೀಪತ್ವದಿಂದ ಬಲಗುಂದಿದಾಗಿ ಅವನಿಗೆ ಸಾಕ್ಷಿ ಕೊಡ ಬೇಕಾಯಿತು. ಆದರೆ ಕರ್ತನು ಅಂಥಾ ಸಾಕ್ಷಿಯನ್ನು ತಿರಸ್ಕರಿಸುತ್ತಾನೆ. ಆದದರಿಂದ ಅಶುದ್ಧ ಆತ್ಮಕ್ಕೆ ಗದರಿಸಿ ಹೇಳಿದ್ದು: "ಮೌನವಾಗಿದ್ದು ಅವನೊಳಗಿಂದ ಹೊರಡು"; ಆಗ್ಯೆ ಅಶುದ್ಧ ಆತ್ಮವು ಆ ರೋಗಿಯನ್ನು ಒದ್ದಾಡಿಸಿ ಅವನೊಳಗಿಂದ ಹೊರಟು ಅವನಿಗೆ ಕೇಡು ಮಾಡಲಿಲ್ಲ (ಮಾರ್ಕ. ೧, ೨೧). ಮತ್ತೊಂದು ಇನ್ನೂ ಆಶ್ಚರ್ಯಕರವಾದ ಕಾರ್ಯವು ಪೆರೈಯದಲ್ಲಿ (ಗೆರ್ಗಸೇನರ) ಗದರೇನರ ಪ್ರದೇಶದಲ್ಲಿ ಆಯಿತು (ಮಾರ್ಕ. ೫, ೧ ಇತ್ಯಾದಿ). ಯೇಸುವು ಹಡಗದಿಂದ ಗಲಿಲಾಯ ಸಮುದ್ರದ ತೀರಕ್ಕೆ ಇಳಿದಾಗ ದೆವ್ವ ಹಿಡಿದವನೊಬ್ಬನು ಅವನನ್ನು ನೋಡಿದನು. ಅವನು ಭಯಂಕರವಾಗಿ ಬೊಬ್ಬೆ ಹಾಕುವವನಾಗಿ ಸಂಕೋಲೆಗಳನ್ನೂ ಬಂಧಗಳನ್ನೂ ಹರದು ಬಿಟ್ಟು ಬತ್ತಲೆಯಾಗಿ ಮನುಷ್ಯರಿಗೆ ಭಯಪಟ್ಟು ಅಲ್ಲಿರುವ ಸಮಾಧಿಗಳಲ್ಲಿ ಉಳುಕೊಂಡಿದ್ದನು. ಇಲ್ಲಿ ಸಹಾ ರಕ್ಷಕನ ಸಮೀ

ಪತ್ವವೇ ಯತ್ನೈಸುತ್ತದೆ. ಹೀಗೆ ಅದು ಆ ಬಡ ಮನುಷ್ಯನಲ್ಲಿ ಸ್ವಂತ ಅಹಂಭಾವಕ್ಕೂ ಅನ್ಯ ಅಹಂಭಾವಕ್ಕೂ ಇರುವ ಆಶ್ಚರ್ಯಕರವಾದ ಭಯಂಕರವಾದ ವಿರೋಧವನ್ನು ಉದ್ರೇಕ ಮಾಡುತ್ತದೆ. ಅವನು ಯೇಸುವಿನ ಹತ್ತರ ಓಡಿ ಬಂದು ಅವನ ಮುಂದೆ ಆರಾಧಿಸುತ್ತಾ ಬಿದ್ದು, ಘಟ್ಟಿಯಾಗಿ ಕೂಗಿ ಹೇಳಿದ್ದೇನಂದರೆ — “ಮಹೋನ್ನತನಾದ ದೇವರ ಮಗನಾದ ಯೇಸುವೇ ನನಗೂ ನಿನಗೂ ಏನು ನನ್ನನ್ನು ಪೀಡಿಸ ಬೇಡೆಂದು ನಿನಗೆ ದೇವರ ಆಣೆ ಇಡುತ್ತೇನೆ”; ಈ ರೋಗಿಯಲ್ಲಿ ಉಂಟಾದ ದುರವಸ್ಥೆಯನ್ನು ವಾಸಿ ಮಾಡಲಿಕ್ಕೆ ವಿಶೇಷವಾದಂಥಾ ಪ್ರತ್ಯೇಕ ಜಾಗ್ರತೆ ಬೇಕಾಯಿತು. ಆದದರಿಂದ ನಿನ್ನ ಹೆಸರೇನು ಎಂದು ರಕ್ಷಕನು ಕೇಳಿದನೆಂದೂ ಪರ್ವತದ ಇಳಿಜಾರಿನಲ್ಲಿ ಮೇಯುವಂಥಾ ಹಂದಿಗಳ ಮಂದೆಯೊಳಗೆ ಹೋಗಲಿಕ್ಕೆ ದೆವ್ವಗಳಿಗೆ (ಅವುಗಳು ಬಹಳ ಇದ್ದವು.) ಅನುಜ್ಞೆ ಕೊಟ್ಟನೆಂದೂ ಕಾಣುತ್ತದೆ. ಹಂದಿಗಳು ತಮ್ಮಲ್ಲಿ ಅನ್ಯ ಬಲವನ್ನು ಸಹಿಸ ಬೇಕಾದ ಕೂಡಲೇ ಆ ಮಂದೆ ಎಲ್ಲಾ ಇಳಿಜಾರಿನಿಂದ ಸಮುದ್ರಕ್ಕೆ ಓಡಿ ಅದರಲ್ಲಿ ಮುಣುಗಿ ಹೋಯಿತು. ಮಂದೆಯ ಯಜಮಾನರು ಪ್ರಪಂಚದಲ್ಲಿ ಆದ ನಷ್ಟದಿಂದ ಪರಲೋಕದಲ್ಲಿ ಒಂದು ಲಾಭವನ್ನು ಪಡಕೊಳ್ಳುವದನ್ನು ಬಿಟ್ಟು, ಕ್ರಿಸ್ತನು ತಮ್ಮ ಪ್ರಾಂತ್ಯಗಳನ್ನು ಬಿಟ್ಟು ಹೋಗ ಬೇಕೆಂದು ಬೇಡಿ ಕೊಂಡರು. ಮತ್ತೊಂದು ಸಾರಿ ಕರ್ತನು ಮೂವರು ಶಿಷ್ಯರೊಡನೆ ರೂಪಾಂತರದ ಪರ್ವತದಲ್ಲಿದ್ದಾಗ (§ ೧೩೯, ೨) ದೆವ್ವ ಹಿಡಿದದರಿಂದ ಭಯಂಕರವಾದ ಶ್ರಮೆಗಳನ್ನು ಪಡುವ ಹುಡುಗನನ್ನು ಅವನ ತಂದೆಯು ಪರ್ವತದ ಬುಡದಲ್ಲಿ ಹಿಂದುಳಿದ ಶಿಷ್ಯರ ಹತ್ತರ ತಂದಿದ್ದನು. ಅವರು ಆ ಬಡವನನ್ನು ವಾಸಿ ಮಾಡಲಿಕ್ಕೆ ಪ್ರಯತ್ನ ಮಾಡಿದ್ದೆಲ್ಲಾ ವೃರ್ಥವಾಯಿತು. ಯೇಸು ಪರ್ವತದಿಂದ ಬಂದಾಗ ತಂದೆಯ ಅವಿಶ್ವಾಸಕ್ಕಾಗಿಯೂ ಮಿಕ್ಕಾದವರೆಲ್ಲರ ಅವಿಶ್ವಾಸಕ್ಕಾಗಿಯೂ ಗದರಿಸಿ ಹುಡುಗನನ್ನು ತನ್ನ ಹತ್ತರ ತರಲಿಕ್ಕೆ ಅಪ್ಪಣೆ ಕೊಟ್ಟನು. ಅಶುದ್ಧ ಆತ್ಮವು ಅವನನ್ನು ನೋಡುತ್ತಲೇ ತಿರಿಗಿ ಮೊದಲಿನ ಹಾಗೆಯೇ ಭಯಂಕರವಾಗಿ ಉಪದ್ರಗಳನ್ನು ಮಾಡಲಿಕ್ಕೆ ಆರಂಭ ಮಾಡಿತು. ಮತ್ತು ತಂದೆಯು “ನೀನೇನಾದರೂ ಮಾಡ ಕೂಡುವದಾದರೆ ನಮ್ಮ ಮೇಲೆ ಅಂತಃಕರಣವಿಟ್ಟು ನಮಗೆ ಸಹಾಯ ಮಾಡು” ಎಂದು ಅರ್ಧ ವಿಶ್ವಾಸದಲ್ಲಿ ಬೇಡಿ ಕೊಂಡಾಗ ಕ್ರಿಸ್ತನು ಉತ್ತರ ಕೊಟ್ಟು: “ನೀನು ವಿಶ್ವಾಸಿಸ ಕೂಡುವದಾದರೆ ವಿಶ್ವಾಸಿಸುವವನಿಂದ ಎಲ್ಲಾ ಕೂಡುವದು” ಎಂದು ಹೇಳುತ್ತಾನೆ. ಆಗ್ಯೆ ತಂದೆಯಲ್ಲಿ ವಿಶ್ವಾಸವು ಅತ್ಯವಶ್ಯವಾಗಿರುತ್ತದೆಂಬ ಮನಸ್ಸೂ ಅದನ್ನು ಹೊಂದ ಬೇಕೆಂಬ ಮಹಾ ಅಭಿಲಾಷೆಯೂ ಹುಟ್ಟುತ್ತದೆ. ಮತ್ತು ಕಣ್ಣೀರಿನಿಂದ ಅವನು ಹೇಳಿದ್ದು: “ಕರ್ತನೇ ವಿಶ್ವಾಸಿಸುತ್ತೇನೆ, ನನ್ನ ಅವಿಶ್ವಾಸಕ್ಕೆ ಸಹಾಯ ಮಾಡು”

ಆಗ್ಯೆ ಕರ್ತನು ಅವನಿಂದ ಹೊರಡ ಬೇಕೆಂದು ಆತ್ಮಕ್ಕೆ ಆಜ್ಞಾಪಿಸಿದನು. ಮತ್ತೆ ಶಿಷ್ಯರು "ನಾವು ಯಾತಕ್ಕೆ ಅದನ್ನು ಹೊರಡಿಸಲಾರದೆ ಇದ್ದೆವು?" ಎಂದು ಕೇಳಿದಾಗ ಅವನು ಅವರಿಗೆ ಹೇಳಿದ್ದು: "ನಿಮ್ಮ ಅವಿಶ್ವಾಸದಿಂದಲೇ. ಈ ಜಾತಿಯದು ಪ್ರಾರ್ಥನೆ ಉಪವಾಸಗಳಿಂದಲೇ ಹೊರ್ತು ಹೊರಡುವದಿಲ್ಲ."



## § 137. ರಕ್ಷಕನ ಕೆಲಸಗಳ ವಿಸ್ತಾರ

೧) ರಕ್ಷಕನು ಬೇಕಾಗಿ ತನ್ನ ಕೆಲಸಗಳನ್ನು ಒಡಂಬಡಿಕೆಯ ಜನಾಂಗದಲ್ಲಿ ಮಾತ್ರವೇ ಮಾಡಿದನು. ಅವನೇ ಒಂದು ಸಾರಿ ಹೇಳಿದ್ದು "ಇಸ್ರಯೇಲ ಮನೆಯ ತಪ್ಪಿ ಹೋದ ಕುರಿಗಳಿಗೆ ಹೊರ್ತು ನಾನು ಕಳುಹಿಸಲ್ಪಡಲಿಲ್ಲ" (ಮತ್ತಾ. ೧೫, ೨೪ ವಚನ) ತನ್ನ ಶಿಷ್ಯರಿಗೆ ಸಹಾ, (ದಿವಾರೋಹಣದ ಮೊದಲಿನ ಕಾಲಕ್ಕೋಸ್ಕರ) ಅದೇ ನಿಬಂಧನೆ ಮಾಡಿದನು. "ಜನಾಂಗಗಳ ಮಾರ್ಗದಲ್ಲಿ ಹೋಗ ಬೇಡಿರಿ, ಸಮಾರ್ಯರ ಪಟ್ಣದಲ್ಲಿ ಪ್ರವೇಶಿಸ ಬೇಡಿರಿ, ಅವರನ್ನು ಬಿಟ್ಟು ಇಸ್ರಯೇಲ ಮನೆಯ ತಪ್ಪಿ ಹೋದ ಕುರಿಗಳ ಬಳಿಗೆ ಹೋಗಿರಿ" (ಮತ್ತಾ. ೧೦, ೫. ೬). ಆ ಸಮಯದಲ್ಲಿ ಅವನು ನಡಿಸಿದ ಕೆಲಸಗಳು ಸಿದ್ಧ ಮಾಡುವಂಥಾದ್ದು ಮಾತ್ರವೇ ಆಗಿತ್ತು. ಆದ ಕಾರಣ ರಕ್ಷಣ್ಯಕ್ಕೋಸ್ಕರ ಹಳೇ ಒಡಂಬಡಿಕೆಯಲ್ಲಿ ಸಿದ್ಧ ಮಾಡಿದ ಪ್ರಕಾರವೇ ಅದೇ ಆಧಾರವಾಗಿ ಅವನ ಪ್ರಯತ್ನವು ಅಬ್ರಹಾಮನ ಬೀಜದಲ್ಲಿ ಮಾತ್ರವೇ ನಡಿಯ ಬೇಕಾಯಿತು. ಆದರೆ ಪ್ರಕಟವಾಗಿಯೂ ಸ್ಪಷ್ಟವಾಗಿಯೂ ಈ ನಿಬಂಧನೆಯು ಬಿದ್ದು ಹೋಗುವದೆಂದು ತಿರಿಗಿ ತಿರಿಗಿ ಹೇಳಿದನು. ಇದಲ್ಲದೆ ಈ ಹಟ್ಟಿಗೆ ಶೇರದ ಬೇರೆ ಕುರಿಗಳು ನನಗುಂಟು; ಅವುಗಳನ್ನು ಸಹಾ ನಾನು ತರ ಬೇಕು, ನನ್ನ ಶಬ್ದವನ್ನು ಕೇಳುವವು ಆಗಲು ಒಂದೇ ಮಂದೆಯೂ ಒಬ್ಬನೇ ಕುರುಬನೂ ಆಗುವದು (ಯೋಹಾ. ೧೦, ೧೬). ಅದರ ಹೊರ್ತು ಮ್ಲೇಂಛರು ಕಠಿಣ ಮಾಡಿ ಕೊಳ್ಳುವ ಒಡಂಬಡಿಕೆಯ ಜನಾಂಗಕ್ಕಿಂತ ಮೊದಲೇ ದೇವರ ರಾಜ್ಯದಲ್ಲಿ ಶೇರುವರೆಂಬದನ್ನು ಖಂಡಿತವಾಗಿ ಬೋಧಿಸಿದನು. ಆ ಪ್ರಕಾರ ದಿವಾರೋಹಣದ ಸ್ವಲ್ಪ ಮೊದಲು ಶಿಷ್ಯರ ಪ್ರಯತ್ನವು ಎಲ್ಲಾ ಲೋಕದ ಸಮಸ್ತ ಜನಾಂಗಗಳಲ್ಲಿಯೂ ನಡಿಯ ಬೇಕೆಂಬದನ್ನು ಪ್ರತ್ಯೇಕವಾಗಿ ಹೇಳಿದನು (ಮಾರ್ಕ. ೧೬, ೧೫ ವಚನ. ಮತ್ತಾ. ೨೮, ೧೯. ಸಮ ನೋಡು. ಅಪೊ. ಕ್ರಿ. ೯, ೧೫ ವಚನ).

೨) ಅಪರೂಪವಾಗಿಯೂ ಒಂದಾಂದು ಸಾರಿಯಾಗಿಯೂ ಇಸ್ರಯೇಲ್ಯರನ್ನು ಸಾಚಿಕೆ ಪಡಿಸುವಂಥಾ ಬಲವುಳ್ಳ ವಿಶ್ವಾಸವು ಅವನಿಗೆ ಈ ನಿಬಂಧನೆಗಳನ್ನು ದಾಟು ವದು ಅವಶ್ಯ ಮಾಡಿದಾಗ (ಈ ವಿಷಯದಲ್ಲಿ ಹಳೇ ಒಡಂಬಡಿಕೆಯಲ್ಲಿ ಸಹಾ ಉ ದಾಹರಣೆಗಳುಂಟು, ಸಮ ನೋಡು ನಯೆಮಾನನ ಮತ್ತು ನಿನವೆಯವರ ಕಥೆ.) ಮ್ಲೇಂಛರಲ್ಲಿಯೂ ಸಮಾರ್ಯರಲ್ಲಿಯೂ ಅವನು ಸಹಾಯ ಮಾಡಿದ್ದೂ ಬೋಧಿ ಸಿದ್ದೂ ಉಂಟು. ಹಾಗೆ ಕಪೆರ್ನೌಮದ ಶತಾಧಿಪತಿಗೆ (ಸಮ ನೋಡು §೧೩೪, ೨) ಸೂರೋಪೊಯಿನಿಕ್ಯದ ಸ್ತ್ರೀಗೆ (ಮತ್ತಾ. ೧೫, ೨೨) ಇವಳು "ಮಕ್ಕಳ ರೊಟ್ಟಿಯ ನ್ನು ತಕ್ಕೊಂಡು ನಾಯಿಗಳಿಗೆ ಹಾಕುವದು ಒಳ್ಳೇದಲ್ಲ" ಎಂದು ಕರ್ತನು ತೋರಿಕೆ ಗೆ ಕಠಿಣವಾಗಿಯೂ ಮನನೋಯಿಸುವಂಥಾದ್ದಾಗಿಯೂ ಮಾತಾಡಿದಾಗ, ಹಿಂದೆ ಹೋಗದೆ (ಕರ್ತನ ಆಲೋಚನೆಗೆ ಸರಿಯಾಗಿ) ಅಂಥಾ ಮಾತಿನಿಂದ ವಿಶ್ವಾಸಚರಿತ ವಾಗಿಯೂ ಮನಸ್ಸು ಕರಗಿಸುವ ದೈನ್ಯವುಳ್ಳವಳಾಗಿಯೂ ಬೇಡಿ ಕೊಂಡದ್ದೇನಂದರೆ: "ಹೌದು ಕರ್ತನೇ ಆದರೂ ತಮ್ಮ ಯಜಮಾನರ ಮೇಜಿನಿಂದ ಬೀಳುವ ತುಂಡುಗ ಳನ್ನು ನಾಯಿಗಳು ತಿನ್ನುತ್ತವೆ." — ಅದೇ ಪ್ರಕಾರ ಯೋಹಾ. ೪. ಸುಖಾರದ (ಶಿ ಖೇಮದ) ಸಮೀಪವಿರುವ ಯಾಕೋಬನ ಬಾವಿಯ ಹತ್ತಿರ ಜೀವದ ನೀರನ್ನು ಕುರಿ ತೂ ಸತ್ಯವಾದ ಆರಾಧಕರು ತಂದೆಯನ್ನು ಆತ್ಮದಲ್ಲಿಯೂ ಆರಾಧಿಸುವ ಕಾಲವನ್ನು ಕುರಿತೂ ಸಮಾರ್ಯಳನ್ನೂ ಬೋಧಿಸಿ ಆದೇ ಪಟ್ಣದ ಸಮಾರ್ಯರ ಸಂಗಡ ೨ ದಿ ವಸ ಉಳಕೊಂಡನು. ಅವರಲ್ಲಿ ಅನೇಕರು ಅವನಲ್ಲಿ ವಿಶ್ವಾಸವಿಟ್ಟು ಆ ಸ್ತ್ರೀಗೆ ಹೇಳಿದ್ದು: ಇನ್ನು ನಾವು ನಿನ್ನ ಮಾತಿಗೋಸ್ಕರ ವಿಶ್ವಾಸಿಸುವವರಲ್ಲ, ಯಾಕಂದರೆ ನಮಗೆ ನಾವೇ ಕೇಳಿ ಇವನೇ ನಿಜವಾಗಿ ಲೋಕದ ರಕ್ಷಕನಾದ ಕ್ರಿಸ್ತನೆಂದು ಬಲ್ಲೆ ವು. ಕ್ರಿಸ್ತನು ವಾಸಿ ಮಾಡಿದ ಹತ್ತು ಕುಷ್ಠರೋಗಿಗಳಲ್ಲಿಯೂ (ಲೂಕ. ೧೭, ೧೨ ಇತ್ಯಾದಿ) ತಿರಿಗಿ ಕೊಂಡು ಅವನಿಗೆ ಕೃತಜ್ಞನಾಗಿ ದೇವರನ್ನು ಸ್ತುತಿಸಿದವನು ಒ ಬ್ಬನೇಯಾಗಿದ್ದನು. ಮತ್ತು ಈತನು ಸಮಾರ್ಯನು (ಸಮ ನೋಡು ಕರುಣೆವುಳ್ಳ ಸಮಾರ್ಯನ ಕಥೆ. ಲೂಕ. ೧೦, ೩೦ ಇತ್ಯಾದಿ).



## § 138. ಕ್ರಿಸ್ತನ ಪ್ರಯತ್ನದ ಫಲವು

೧) ರಕ್ಷಕನ ಬಲವಾದ ಬೋಧನೆಯೂ ಅವನ ಅದ್ಭುತಗಳೂ ಗುರ್ತುಗಳೂ ಹೆ ಚ್ಚಾದ ಜನರಲ್ಲಿ ಬಹಳ ವಿಸ್ಮಯವನ್ನು ಬೇಗ ಹುಟ್ಟಿಸಿದವು. ಅವನಲ್ಲಿ ಹೆಚ್ಚಾದ ಬ

ಲವು ಪ್ರಬಲವಾಗಿರುತ್ತದೆ ಎಂಬದನ್ನು ಅವರು ಬೇಗ ತಿಳುಕೊಂಡರು. ಅವರು ಅವನ ಬೋಧನೆಗೋಸ್ಕರ ಆಶ್ಚರ್ಯ ಪಟ್ಟರು, ವಿಸ್ಮಯವಾದರು. ಅವರು ತಾವೇ ವಿಶ್ವಾಸದಲ್ಲಿಯೂ ಜೀವದಲ್ಲಿಯೂ ಮಾಂಸಭಾವದ ಬಹಿರಂಗದ ಮನಸ್ಸಿನವರಾಗಿರಲಾಗಿ, ಅವನ ಅಗಾಧವಾದ ವಾಕ್ಯಗಳ ತಾತ್ಪರ್ಯವನ್ನು ಗ್ರಹಿಸದೆ ವಿಶೇಷವಾಗಿ ಬೇರೇನಾದರೂ ಅರ್ಥ ಮಾಡಿ ಕೊಂಡರೂ ಅವನು ಶಾಸ್ತ್ರಿಗಳ ಹಾಗಲ್ಲ ಅಧಿಕಾರ ಉಳ್ಳವನ ಹಾಗೆ ಬೋಧಿಸುತ್ತಾನೆಂದು ಅವನಿಗೆ ಸಾಕ್ಷಿ ಕೊಟ್ಟರು (ಮಾರ್ಕ. ೧, ೨೨ ವಚನ). ಅವರು ಕೇಳಿದ್ದು: "ಅವನಿಗೆ ಈ ಜ್ಞಾನವೂ ಈ ಬಲವಾದ ಕ್ರಿಯೆಗಳೂ ಎಲ್ಲಿಂದ ಆದವು (ಮತ್ತಾ. ೧೩, ೫೪.), ಇದೇನು! ಈ ಹೊಸ ಬೋಧನೆ ಏನು! ಅವನು ಅಶುದ್ಧಾತ್ಮಗಳಿಗೂ ಅಧಿಕಾರವಾಗಿ ಅಪ್ಪಣೆ ಕೊಡುತ್ತಾನೆ. ಅವು ಅವನಿಗೆ ವಿಧೇಯವಾಗಿವೆ (ಮಾರ್ಕ. ೧, ೨೭). ಈ ಮನುಷ್ಯನ ಹಾಗೆ ಎಂದಾದರೂ ಯಾವ ಮನುಷ್ಯನಾದರೂ ಮಾತಾಡಲಿಲ್ಲ. ಇವನು ನಿಜವಾಗಿ ಪ್ರವಾದಿಯಾಗಿದ್ದಾನೆ. ಇವನೇ ಕ್ರಿಸ್ತನು" (ಯೋಹಾ. ೭, ೪೬. ೪೦. ೪೧ ವಚನಗಳು). ಅವರು ಬಹಳ ಭಯ ಪಟ್ಟರು. ದೇವರನ್ನು ಸ್ತುತಿಸಿದರು. ಅನೇಕರು ಅವನು ಮಾಡಿದ ಲಕ್ಷಣಗಳನ್ನು ನೋಡಿ ಅವನಲ್ಲಿ ನಂಬಿದರು. ಸ್ವಸ್ಥವಿಲ್ಲದವರು, ಕುಂಟರು, ಕುರುಡರು, ದೆವ್ವ ಹಿಡಿದವರು, ಚಂದ್ರರೋಗಿಗಳು ಮೊದಲಾದವರನ್ನು ಅವನು ವಾಸಿ ಮಾಡುವ ಹಾಗೆ ಎಲ್ಲಾ ಕಡೆಯಿಂದಲೂ ಅವನ ಹತ್ತಿರ ತಂದರು. ಜನರ ದೊಡ್ಡ ಗುಂಪುಗಳು ಅದ್ಭುತಗಳನ್ನು ನೋಡ ಬೇಕೆಂಬ ವ್ಯರ್ಥವಾದ ಅಪೇಕ್ಷೆಯಿಂದ ನಡಿಸಲ್ಪಟ್ಟು ಅವನ ಹತ್ತಿರ ಬಂದರು. ಮತ್ತು ಬಹಳ ಸರ್ತಿ ಅವರ ಇರಿಕಿಸುವಿಕೆಗೆ ತಪ್ಪಿಸಿ ಕೊಳ್ಳುವದು ಸಹಾ ಅವನಿಗೆ ಕಷ್ಟವಾಯಿತು. ರಕ್ಷಕನು ಬಹಳ ಜಾಗ್ರತೆಯಿಂದಲೂ ಆಲೋಚನೆಯಿಂದಲೂ ತಪ್ಪಿಸಿ ಕೊಳ್ಳದೆ ಇದ್ದನಾದರೆ ಕಾಲದ ಮೊದಲೇ ಅವರು ಅವನನ್ನು ಮೆಸ್ಸೀಯರಾಜನೆಂದು ಯಾವಾಗ್ಯೆ ಕರಿಯುತ್ತಿದ್ದರೋ (ಉದಾಹರಣೆ ಯೋಹಾ. ೬, ೧೫ ವಚನ).

೨) ಮತ್ತೊಂದು ಕಡೆಯಲ್ಲಿ ಅವನು ಚಂಚಲ ಮನಸ್ಸಿನ ಮಾಂಸಭಾವದ ಈ ಜನರಲ್ಲಿ ಬಹಳ ಬೇಸರು ಕಠಿಣವಾದ ಪ್ರತಿಕಕ್ಷಿ ಹಿಂಸೆ ಸಹಾ ಎಬ್ಬಿಸಿದನು. ಅವನು ಅವರ ಸೊಟ್ಟಗಾದ ಅವಿಶ್ವಾಸದ ಮನೋಭಾವವನ್ನು ಶಿಕ್ಷಿಸಿ, ದೇವರ ರಾಜ್ಯದಲ್ಲಿ ಪ್ರವೇಶಿಸ ಕೂಡದಂಥಾ ಅವರ ಅಯೋಗ್ಯತೆಯನ್ನು ತೋರಿಸಿದದರಿಂದ ಅವರ ಮನಸ್ಸಿನ ಪ್ರಕಾರ ಅದ್ಭುತಗಳನ್ನು ಮಾಡದೆ, ಮೆಸ್ಸೀಯರಾಜ್ಯದ ಸುಳ್ಳುಕೋರಿಕೆಗಳ ಪ್ರಕಾರ ನಡಿಯದೆ ಇದ್ದದರಿಂದಲೂ ಅವನಲ್ಲಿ ಆತಂಕ ಪಟ್ಟರು. ದಂಭದ ಕ್ರಿಯಾನೀತಿಯನ್ನು ಪೂರೈಸದೆ ಇದ್ದದರಿಂದ ಅವನು ಹೊಟ್ಟೆಬಾಕನೂ ಮದ್ಯಪಾನಿ

ಯೂ ಎಂದೂ, ಮಾನಸಾಂತರ ಪಡುವ ಪಾಪಿಗಳಿಗೆ ಸ್ನೇಹ ತೋರಿಸಿ ತನ್ನನ್ನು ತ ಗ್ಗಿಸಿ ಕೊಂಡದರಿಂದ ಅವನು ಸುಂಕದವರಿಗೂ ಪಾಪಿಗಳಿಗೂ ಸ್ನೇಹಿತನಾಗಿರುತ್ತಾನೆಂ ದೂ ಅವನನ್ನು ದೂರಿದರು (ಮತ್ತಾ. ೧೧, ೧೯ ವಚನ). ಅವನು ಸಬ್ಬತ್ ದಿ ವಸದಲ್ಲಿ ವಾಸಿ ಮಾಡಿದರಿಂದ ಅವನನ್ನು ಹಿಂಸಿಸಿ ಕೊಂದು ಹಾಕಲಿಕ್ಕೆ ಹುಡುಕಿದ ರು (ಯೋಹಾ. ೫, ೧೬). ಅವನು ದೇವರ ಮಗನೆಂದು ಹೇಳಿ ಕೊಂಡದರಿಂದ ಅವನನ್ನು ಕಲ್ಲೆಸೆಯಲಿಕ್ಕೆ ಇಚ್ಛೈಸಿದರು (ಯೋಹಾ. ೧೦, ೩೧). ಅಬ್ರಹಾಮನಿಂ ದ ಶರೀರದ ಪ್ರಕಾರ ಹುಟ್ಟಿದವರೆಂದು ಅವರಲ್ಲಿ ವ್ಯರ್ಥವಾಗಿ ಅವರಿಟ್ಟ ಚರವಸವ ನ್ನು ಅವನು ಸ್ವೀಕರಿಸದೆ ಇದ್ದದರಿಂದ ಅವರು ಹೇಳಿದ್ದು: "ನೀನು ಸಮಾರ್ಯನಾಗಿದ್ದೀ" ನಿನಗೆ ದೆವ್ವ ಉಂಟೆಂದು ನಾವು ಹೇಳುವದು ಸರಿಯಲ್ಲವೋ? (ಯೋಹಾ. ೮, ೪೮). ಅವನು ನಜರೇಥದ ಸಭೆಮನೆಯಲ್ಲಿ ಅವರ ಅವಿಶ್ವಾಸವನ್ನು ಪ್ರಕಟ ಮಾಡಿದಾಗ, ಅವರು ಕೋಪದಿಂದ ತುಂಬಿದವರಾಗಿ ಗುಡ್ಡಕ್ಕೆ ತಕ್ಕೊಂಡು ಹೋಗಿ ಅವನನ್ನು ಕೆಳಗೆ ದೊಬ್ಬಿ ಹಾಕ ಬೇಕೆಂದಿದ್ದರು. ಆದರೆ ಅವನು ಅವರ ಮಧ್ಯದಲ್ಲಿಂದ ಹಾದು ಹೊ ರಟು ಹೋದನು (ಲೂಕ. ೪, ೩೦).

೩) ಗಲಿಲಾಯದಲ್ಲಿ ಅವನು ಹೆಚ್ಚಾಗಿ ಉಳುಕೊಳ್ಳುವನು. ಇಲ್ಲಿ ಅವನಿ ಗೆ ಬಹು ಸ್ವಲ್ಪ ಮಾನ ಕೊಟ್ಟರು. ಆದ ಕಾರಣ ಅವನೇ ಸಾಕ್ಷಿ ಕೊಟ್ಟು ಹೇಳಿದ್ದು: ತನ್ನ ದೇಶದಲ್ಲಿಯೂ ತನ್ನ ಮನೆಯಲ್ಲಿಯೂ ಹೊರ್ತು ಪ್ರವಾದಿಯು ಮಾನಹೀ ನನಲ್ಲವೆಂದು ಅವರಿಗೆ ಹೇಳಿ, ಅವರ ಅವಿಶ್ವಾಸದ ನಿಮಿತ್ತ ಅಲ್ಲಿ ಬಹಳ ಬಲವಾದ ಕ್ರಿಯೆಗಳನ್ನು ಮಾಡಲಿಲ್ಲ (ಮತ್ತಾ. ೧೩, ೫೭). ಮತ್ತು ಅವನು ತನ್ನ ಬಲವಾ ದ ಕ್ರಿಯಗಳು ಹೆಚ್ಚಾಗಿ ನಡದ ಪಟ್ಣಗಳನ್ನು ಅವು ಮಾನಸಾಂತ್ರ ಪಡದ ಕಾರಣ ಗ ದರಿಸಲಾರಂಭಿದನು. "ಕೊರಜೀನೇ ನಿನಗೆ ಅಯ್ಯೋ! ಬೆತ್ಸಾಯಿದಾ ನಿನಗೆ ಅಯ್ಯೋ! ಯಾಕಂದರೆ ನಿಮ್ಮಲ್ಲಿ ನಡದ ಬಲವಾದ ಕ್ರಿಯೆಗಳು ತೂರಿನಲ್ಲಿಯೂ ಸಿದೋನಿನಲ್ಲಿ ಯೂ ನಡದಿದ್ದರೆ ಅವರು ಪೂರ್ವದಲ್ಲಿ ಗೋಣಿಯಲ್ಲಿಯೂ ಬೂದಿಯಲ್ಲಿಯೂ ಮಾನಸಾಂತರ ಪಡುತ್ತಿದ್ದರು. ಇದಲ್ಲದೆ ನಿಮಗೆ ಹೇಳುತ್ತೇನೆ — ತೂರಿಗೂ ಸಿದೋ ನಿಗೂ ನ್ಯಾಯತೀರ್ವಿಕೆಯ ದಿವಸದಲ್ಲಿ ನಿಮಗಿಂತ ತಾಳ ತಕ್ಕದ್ದಾಗಿರುವದು. ಮತ್ತು ಆಕಾಶದ ಮಟ್ಟಿಗೂ ಎತ್ತಲ್ಪಟ್ಟ ಕಪೆರ್ನೌಮೇ ನೀನು ಪಾತಾಳದ ಮಟ್ಟಿಗೂ ಕೆಡ ಲ್ಪಡುವಿ. ಯಾಕಂದರೆ ನಿನ್ನಲ್ಲಿ ನಡದ ಬಲವಾದ ಕ್ರಿಯೆಗಳು ಸೊದೋಮಿನಲ್ಲಿ ನಡದಿದ್ದರೆ ಅದು ಇಂದಿನ ವರೆಗೂ ಇರುತಿತ್ತು" (ಮತ್ತಾ. ೧೧, ೨೦ — ೨೪ ವರೆಗೆ). ಅವನ ಸ್ವಂತ ಸಹೋದರರು ಸಹಾ (ಆರಂಭದಲ್ಲಿ) ಅವನಲ್ಲಿ ನಂಬಲಿಲ್ಲಾ (ಯೋ ಹಾ. ೭, ೫ ವಚನ); ಯೂದ್ಯೆಯದಲ್ಲಿಯೂ ಅವನಿಗೆ ಒಳ್ಳೇದಾಗಲಿಲ್ಲ. ಹ್ಯಾಗಂ

ದರೆ ಅಲ್ಲಿ ಅವರು ಅವನನ್ನು ಕಾಲ್ಲ ಹುಡುಕಿದರು (ಯೋಹಾ ೭, ೧ ವಚನ). ಅವನು ತನಗೆ ಬಿಡಾರ ಸಿದ್ಧ ಮಾಡುವದಕ್ಕೆ ತನ್ನ ಶಿಷ್ಯರನ್ನು ಸಮಾರ್ಯದವರ ಒಂದು ಗ್ರಾಮಕ್ಕೆ ಕಳುಹಿಸಿದಾಗ ಅವರು ಸಹಾ ಅವನು ಹಬ್ಬಕ್ಕಾಗಿ ಯೆರೂಸಲೇಮಕ್ಕೆ ಹೋಗುವವನಾಗಿದ್ದದರಿಂದ ಅವನನ್ನು ಅಂಗೀಕರಿಸಲಿಲ್ಲ. ಆದ ಕಾರಣ ಯೋಹಾನನೂ ಯಾಕೋಬನೂ ಬಹಳ ವಾತ್ಸಲ್ಯದಿಂದ ಆಕಾಶದಿಂದ ಬೆಂಕಿಯನ್ನು ಸುರಿಸಲಿಚ್ಛೈಸಿದರು (ಲೂಕ. ೯, ೫೧).

೪) ಅವನ ಮುಖ್ಯ ವಿರೋಧಿಗಳು ಫರಿಸಾಯರಾಗಿದ್ದರು. ಮತ್ತು ಅವರ ವಿಶೇಷವಾದ ಪ್ರಯತ್ನದಿಂದಲೇ ಜನರಲ್ಲಿ ಅವನ ಮೇಲೆ ಉಪೇಕ್ಷೆ ಹುಟ್ಟಿದ್ದು ಅವನ ಅದ್ಭುತಗಳನ್ನು ಅಲ್ಲಗಳಿಯಲಿಕ್ಕೆ ಆಗಲಿಲ್ಲ. ಆದರೆ ಅವುಗಳು ದೆವ್ವದಿಂದ ಬರುತ್ತವೆ ಎಂದು ಹೇಳಿದರು. ಅವರು ಹೇಳಿದ್ದು: "ಇವನು ದೆವ್ವಗಳ ಅಧಿಕಾರಿಯಾದ ಬೆಲ್ಜೆಬೂಲನಿಂದಲೇ ಹೊರ್ತು ದೆವ್ವಗಳನ್ನು ಹೊರಡಿಸುವದಿಲ್ಲ". ಕ್ರಿಸ್ತನು ಈ ಆಲೋಚನೆಯ ಹುಚ್ಚುತನವನ್ನು ತೋರಿಸಿ, ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಕ್ಷಮಿಸಲ್ಪಡ ಕೂಡದಂಥಾ ಪರಿಶುದ್ಧಾತ್ಮಕ್ಕೆ ವಿರೋಧವಾಗಿರುವಂಥಾ ಪಾಪವನ್ನು ಕುರಿತು ಅವರನ್ನು ಗದರಿಸಿದರೂ, ವ್ಯರ್ಥವಾಯಿತು (ಮತ್ತಾ. ೧೨, ೨೪). ಅವರು ಅವನನ್ನು ಹಿಡಿಯಲಿಕ್ಕೆ ಸೇವಕರನ್ನು ಕಳುಹಿಸಿದರು. ಮತ್ತು ಇವರು ಅವನ ವಾಕ್ಯದ ಮಹತ್ವಕ್ಕೆ ವಿಸ್ಮಯ ಪಟ್ಟು ಏನೊಂದೂ ಮಾಡದೆ ತಿರಿಗಿ ಬಂದಾಗ, ಅವರನ್ನು ಫರಿಸಾಯರು ದೂರಿ ಹೇಳಿದ್ದು, ನೀವು ಸಹಾ ಮೋಸ ಹೋದಿರೋ ಅಧಿಪತಿಗಳಲ್ಲಿಯೂ ಫರಿಸಾಯರಲ್ಲಿಯೂ ಯಾವನಾದರೂ ಅವನಲ್ಲಿ ವಿಶ್ವಾಸಿಸಿದ್ದಾನೋ ಆದರೆ ನ್ಯಾಯಪ್ರಮಾಣವನ್ನು ಅರಿಯದ ಈ ಸಮೂಹವು ಶಾಪಗ್ರಸ್ಥರೇ! ಮತ್ತು ನಿಕೊದೇಮನು ಈ ಸಮಯದಲ್ಲಿ ತನ್ನ ಬೋಧಕನ ಪಕ್ಷವನ್ನು ತೆಕ್ಕೊಂಡಾಗ ಅವರು ಹೇಳಿದ್ದು: ನೀನು ಸಹಾ ಗಲಿಲಾಯದವನೋ? ಗಲಿಲಾಯದಿಂದ ಪ್ರವಾದಿಯು ಏಳುವದಿಲ್ಲ (ಯೋಹಾ. ೭, ೪೫ ಮೊದಲಾದ ವಚನಗಳು). ಯಾರಾದರೂ ಅವನು ಮೆಸ್ಸೀಯನೆಂದು ಅರಿಕೆ ಮಾಡಿದರೆ, ಅವನನ್ನು ಸಭೆಯಿಂದ ಹೊರಗೆ ಹಾಕ ಬೇಕೆಂದು ತಮ್ಮೊಳಗೆ ನಿಷ್ಕರ್ಷೆ ಮಾಡಿ ಕೊಂಡರು (ಯೋಹಾ. ೯, ೨೨). ಮತ್ತು ಬಹಳ ಸರ್ತಿ ಯೇಸುವಿಗಾಗಿ ಬಹಳ ಆತುರತ್ವದಲ್ಲಿ ಸ್ತೋತ್ರ ಮಾಡುತ್ತಾ ಇರುವ ಸಮೂಹಕ್ಕೆ ಭಯ ಪಟ್ಟದರಿಂದಲೇ ಅವನ ಮೇಲೆ ಬಲಾತ್ಕಾರ ನಡಿಸಲಿಕ್ಕೆ ಹಿಂಜಾರಿದರು. ಆದರೆ ಸದ್ದುಕಾಯರು ತಾವು ಮಹಾ ಜ್ಞಾನಿಗಳೆಂದು ಗರ್ವದಲ್ಲಿಯೂ ಅವಿಶ್ವಾಸದಲ್ಲಿಯೂ ಯೇಸುವಿನ ಗೊಡವೆ ಇಲ್ಲದವರಾಗಿದ್ದರು. ಕಡೆ

ಯಲ್ಲಿ ಮಾತ್ರವೇ ಅವನ ಮೇಲೆ ತಮ್ಮ ಬುದ್ಧಿಚಮತ್ಕಾರವನ್ನು ತೋರಿಸಲಿಕ್ಕೆ ಅವನ ಹತ್ತರ ಬಂದರು (§೧೪೨, ೪).

ಪರಿಶಿಷ್ಟ. ಪರಿಶುದ್ಧಾತ್ಮಕ್ಕೆ ವಿರೋಧವಾದ ಪಾಪವು ಇದೊಂದೇ ಇಹದಲ್ಲ್ಯಾಗಲಿ ಪರದಲ್ಲ್ಯಾಗಲಿ ಕ್ಷಮಿಸಲ್ಪಡ ಕೂಡದಂಥಾದ್ದು ಆಗಿರುವದರಿಂದಲೂ ಆದರೆ ಮನುಷ್ಯರೆಲ್ಲರೂ ರಕ್ಷಿಸಲ್ಪಡ ಬೇಕೆಂಬದು ದೇವರ ಚಿತ್ತವಾಗಿರುವದರಿಂದಲೂ (ಯೆಜೆಕಿಯೆಲ್. ೩೩, ೧೧. ೨ನೇ ಪೇತ್ರ. ೩, ೯. ೧ನೇ ತಿಮೊ. ೨, ೪.) ಅದು ಕ್ರಿಸ್ತನಲ್ಲಿ ಮನುಷ್ಯನಿಗೆ ಪ್ರತ್ಯಕ್ಷವಾದ ದೇವರ ಕೃಪೆಗೆ ವಿರೋಧವಾಗಿ ಬೇಕಾಗಿ ಮಾಡಿ ಕೊಳ್ಳುವಂಥಾ ಕಠಿಣತ್ವದ ಪಾಪವಾಗಿರ ಬೇಕು. ಅದು ಪರಿಶುದ್ಧಾತ್ಮಕ್ಕೆ ವಿರೋಧವಾದ ಪಾಪವೆಂದು ಹೇಳಲ್ಪಡುತ್ತದೆ. ಯಾಕಂದರೆ ಕೃಪೆಯ ದಾನವೂ ಸ್ವೀಕಾರವೂ ಪರಿಶುದ್ಧಾತ್ಮದಿಂದಲೇ ಆಗುತ್ತದೆ. ಫರಿಸಾಯರು ಈ ಪಾಪಕ್ಕೆ ನಡಿಸುವಂಥಾ ಮಾರ್ಗದಲ್ಲಿಯಾದರೂ ಇದ್ದರು. ಹ್ಯಾಗಂದರೆ ಅವರು ಯೇಸುವಿನ ಅದ್ಭುತಗಳು ದೆವ್ವದಿಂದ ಬರುತ್ತದೆಂದು ಹೇಳಲಾಗಿ ಈ ಅದ್ಭುತಗಳು ದಿವ್ಯವಾಗಿರುತ್ತದೆಂದು ನಿಸ್ಸಂಶಯವಾಗಿ ಸಾಕ್ಷಿ ಕೊಟ್ಟ ದೇವರ ಆತ್ಮದ ಸಾಕ್ಷಿಗೆ ವಿರೋಧವಾಗಿ ಅವರು ಅದನ್ನು ತಿಳಿದು ದ್ರೋಹಿಗಳಾಗಿ ತಮ್ಮನ್ನು ಕಠಿಣ ಮಾಡಿ ಕೊಳ್ಳುವವರಾದರು.



## § 139. ಕ್ರಿಸ್ತನ ರೂಪಾಂತರವು

೧) ಮತ್ತಾ. ೧೬, ೧೩. (ಮಾರ್ಕ. ೮. ಸಂ. ಲೂಕ. ೯ ಸಂ.) ರಕ್ಷಕನು ಮರಣದಿಂದಲೂ ಉತ್ಥಾನದಿಂದಲೂ ತನ್ನ ಕೆಲಸವನ್ನು ಸಂಪೂರ್ಣ ಮಾಡುವ ಕಾಲವು ಎಷ್ಟಕ್ಕೆ ಸಮೀಪಿಸಿತೋ ಅಷ್ಟಕ್ಕೆ ಹೆಚ್ಚಾಗಿ ಅವನ ಶುದ್ಧ ಪ್ರಾಣವು ಅತಿ ಪರಿಶುದ್ಧ ಪ್ರೀತಿಯ ಈ ಆಲೋಚನೆಗಳಲ್ಲಿಯೇ ಇತ್ತು. ಮೊದಲು ಭೂಮಿಯಲ್ಲಿ ತಾನು ನಡಿಸುವಂಥಾ ಕೆಲಸದ ಗುರಿಯ ಕಡೆಗೆ ಒಂದೊಂದು ಸೌಜ್ಞೆಯಿಂದ ಶಿಷ್ಯರಿಗೆ ಬೆರಳು ತೋರಿಸಿ, ಇದ್ದನು. ಆದರೆ ಈಗ ಗಲಿಲಾಯದಲ್ಲಿ ಅವನು ಕಡೇ ಸಾರಿ ಉಳಕೊಂಡಿದ್ದಾಗ ಅವನು ಅವರಿಗೆ ಸ್ಪಷ್ಟವಾಗಿಯೂ ಖಂಡಿತವಾಗಿಯೂ, ತಾನು ಯೆರೂಸಲೇಮಿಗೆ ಹೋಗಿ ಬಹಳ ಶ್ರಮ ಪಟ್ಟು ಕೊಲ್ಲಲ್ಪಟ್ಟು ೩ನೇ ದಿವಸದಲ್ಲಿ ಏಳ ಬೇಕೆಂದು ತಿಳಿಸಿದನು. ಆಗ್ಯೆ ಕರ್ತನಿಗೆ ಒಂದು ಹೊಸ ಶೋಧನೆ ಬಂತು; ಒಂದು ವೇಳೆ ಅವನ ಉದ್ಯೋಗದ ಆರಂಭದಲ್ಲಿ ಬಂದದಕ್ಕಿಂತ ಬಲವಾದದ್ದು.

ಯಾಕಂದರೆ ಇದು ಪ್ರಿಯನಾದ ಶಿಷ್ಯನ ಬಾಯಿಂದ ಹೊರಟಿತು. ಮತ್ತು ತಾರಿ
ಕೆಗೆ ಅತ್ಯಂತ ಪ್ರೀತಿಯ ಮಾತು ಎಂಬ ಹಾಗೆ ಇತ್ತು. ಹ್ಯಾಗಂದರೆ – ಪೇತ್ರನು
(ಸ್ವಲ್ಪ ಮೊದಲು "ನೀನು ಜೀವವುಳ್ಳ ದೇವರ ಮಗನಾದ ಕ್ರಿಸ್ತನು" ಎಂದು ಬ
ಹಳ ವಿಶ್ವಾಸದಲ್ಲಿ ಅರಿಕೆ ಮಾಡಿದವನೂ ಅದಕ್ಕೋಸ್ಕರ ಕರ್ತನಿಂದ ಭಾಗ್ಯವಂತನೆಂ
ದನ್ನಿಸಿ ಕೊಂಡವನೂ ಬಂಡೆ ಎಂದು ಹೆಸರ್ಗೊಂಡವನೂ ಇವನೇ) ಅವನನ್ನು ಒಂ
ದು ಕಡೆಗೆ ತಕ್ಕೊಂಡು ಹೋಗಿ ಹೇಳಿದ್ದು "ಕರ್ತನೇ ನಿನ್ನನ್ನು ಕರುಣಿಸು! ಇದು ನಿ
ನಗಾಗ ಬಾರದು." ಆದರೆ ರಕ್ಷಕನು ಮಾಂಸಭಾವದ ಪ್ರೀತಿಯ ಈ ಮಾತಿನಲ್ಲಿ
ಸೈತಾನನ ಪ್ರೇರೇಪಣೆಯನ್ನು ಕಂಡು ಪೇತ್ರನಿಗೆ ಹೇಳಿದ್ದು "ಸೈತಾನನೇ ನನ್ನ ಹಿಂ
ದೆ ಹೋಗು, ನನಗೆ ಆತಂಕವಾಗಿದ್ದೀ; ಯಾಕಂದರೆ ನೀನು ದೇವರವುಗಳನ್ನಲ್ಲ ಮ
ನುಷ್ಯರವುಗಳನ್ನೇ ಚಿಂತಿಸುತ್ತೀ."

೨) (ಮತ್ತಾ. ೧೭, ೧. ಮಾರ್ಕ. ೯. ಲೂಕ. ೯.) ಆರು ದಿವಸಗಳಾದ
ಮೇಲೆ ಯೇಸು ಪೇತ್ರನನ್ನೂ ಯಾಕೋಬನನ್ನೂ ಯೋಹಾನನನ್ನೂ ತಕ್ಕೊಂಡು ವಿ
ಕಾಂತವಾಗಿ ಎತ್ತರವಾದ ಬೆಟ್ಟಕ್ಕೆ (ಸಂಪ್ರದಾಯದ ಪ್ರಕಾರ ತಾಬೋರ್ ಬೆಟ್ಟಕ್ಕೆ)
ಕರಕೊಂಡು ಪ್ರಾರ್ಥನೆ ಮಾಡುವದಕ್ಕೋಸ್ಕರ ಹೋದನು. ಶಿಷ್ಯರು ಅಷ್ಟರೊಳಗೆ
ಮಲಗಿದರು. ಮತ್ತು ಎಚ್ಚತ್ತಾಗ ಯೇಸುವು ರೂಪಾಂತರವಾಗಿದ್ದನು. ಅವನ
ಮುಖವು ಸೂರ್ಯನ ಹಾಗೆ ಪ್ರಕಾಶಿಸಿತು; ಅವನ ವಸ್ತ್ರಗಳು ಬೆಳಕಿನ ಹಾಗೆ ಬಿಳು
ಪಾದವು. ಮತ್ತು ಮೋಶೆಯೂ ಎಲೀಯನೂ ಅವನ ಸಂಗಡಲಿದ್ದರು. ಇವರು
ಬೇಗ ಬರುವ ಅವನ ಮರಣದ ವಿಷಯವಾಗಿ ಅವನ ಸಂಗಡ ಮಾತಾಡಿದರು. ಪೇ
ತ್ರನು ಈ ದಿವ್ಯ ನೋಟದ ಭಾಗ್ಯದಲ್ಲಿ ನಿಮಗ್ನನಾಗಿ ಹೇಳಿದ್ದು: ಅಯ್ಯಾ ನಾವು
ಇಲ್ಲಿ ಇರುವದು ಒಳ್ಳೇದು; ನಿನಗೆ ಮನಸ್ಸಿದ್ದರೆ ಇಲ್ಲಿ ೩ ಪರ್ನಶಾಲೆಗಳನ್ನು ಕಟ್ಟು
ವ. ನಿನಗೆ ಒಂದು, ಮೋಶೆಗೆ ಒಂದು, ಎಲೀಯನಿಗೆ ಒಂದು; ಅವನು ಇನ್ನೂ
ಮಾತಾಡುತ್ತಿರುವಾಗ ಬೆಳಕಾಗಿರುವ ಮೇಘವು ಅವರ ಮೇಲೆ ನೆರಳಾಗಿತ್ತು. ಮ
ತ್ತು ಮೇಘದೊಳಗಿಂದ ಶಬ್ದವುಂಟಾಯಿತು. "ಇವನೇ ನನ್ನ ಪ್ರಿಯ ಮಗನು, ಇವ
ನಲ್ಲಿ ಆನಂದ ಪಡುತ್ತೇನೆ, ಇವನನ್ನು ಕೇಳಿರಿ" ಶಿಷ್ಯರು ಇದನ್ನು ಕೇಳಿ ಪ್ರಾರ್ಥನೆ
ಮಾಡುತ್ತಾ ಮೋರೆ ಕೆಳಗಾಗಿ ಬಿದ್ದರು. ಮತ್ತು ಯೇಸು ಅವರನ್ನು ಎಬ್ಬಿಸಿದಾಗ
ದರ್ಶನವು ಕಾಣದೆ ಹೋಗಿತ್ತು. ಯೇಸುವು ಅವರಿಗೆ ಉತ್ಥಾನದ ಪರ್ಯಂತರಕ್ಕೂ
ಇದರ ವಿಷಯವಾಗಿ ಯಾರಿಗೂ ಹೇಳ ಬಾರದೆಂದು ಅಪ್ಪಣೆ ಕೊಟ್ಟನು. ಇದಕ್ಕೆ
ಹತ್ತಿ, ಮಲಖಿಯಾ. ೪, ೫ ವಚನ (§ ೯೫, ೩) ಪ್ರವಾದನೆಯು ಈಡೇರುವ ವಿ
ಷಯದಲ್ಲಿ ಸಂಭಾಷಣೆ ಉಂಟಾಯಿತು. ಇದರಲ್ಲಿ ಯೇಸುವು ಅವರಿಗೆ ಬೋಧಿಸಿ:

ಎಲೀಯನು ಮೊದಲು ಬಂದು ಎಲ್ಲವುಗಳನ್ನು ತಿರಿಗಿ ಸ್ಥಾಪಿಸುವನು ಹೌದು, (ನ್ಯಾಯತೀರ್ವಿಕೆಗೆ ೨ನೇ ಸಾರಿ ಪ್ರತ್ಯಕ್ಷವಾಗುವಾಗ) ಎಂದೂ, ಆದರೆ ದೀನತ್ವದಲ್ಲಿ ಮೊದಲನೇ ಸಾರಿ ಪ್ರತ್ಯಕ್ಷವಾದಾಗ ಒಬ್ಬ ಎಲೀಯನು ಸ್ನಾನಿಕನಾದ ಯೋಹಾನನಲ್ಲಿ ಪ್ರತ್ಯಕ್ಷವಾದನೆಂದೂ ಹೇಳಿದನು.

ಪರಿಶಿಷ್ಟ. ರಕ್ಷಕನ ಉದ್ಯೋಗ ಜೀವದಲ್ಲಿ ಸ್ನಾನವಾದಾಗ ಮೊದಲನೇ ಭಾಗವು ಹ್ಯಾಗೆ ಆರಂಭವಾಯಿತೋ ಹಾಗೆಯೇ ರೂಪಾಂತ್ರವಾದದ್ದು ಮೊದಲುಗೊಂಡು ೨ನೇ ಭಾಗ ಆರಂಭವಾಯಿತು. ಎರಡು ಸಾರಿಯೂ ಪುತ್ರತ್ವದ ಮತ್ತು ಆನಂದದ ಒಂದೇ ಸಾಕ್ಷಿಯನ್ನು ಮೇಲಿನಿಂದ ಹೊಂದಿದನು. ಸ್ನಾನ ಹೊಂದಿದಾಗ "ಎಲ್ಲಾ ನೀತಿಯನ್ನು ಪೂರೈಸುತ್ತೇನೆಂದು" ತನ್ನ ಸಂಕಲ್ಪವನ್ನು ತಿಳಿಸಿದನು. ರೂಪಾಂತರವಾದಾಗ ಮೋಶೆ ಎಲೀಯರ ಸಂಗಡ ಶ್ರಮಮರಣಗಳ ವಿಷಯವಾಗಿ ಮಾತಾಡಿದನು. ಸ್ನಾನದಿಂದ ಇಂದಿನ ವರೆಗೂ ಮುಖ್ಯವಾಗಿ ಯತ್ನೈಸುವ ವಿಧೇಯತ್ವವನ್ನು ತೋರಿಸಿ ಇದ್ದನು. ಇನ್ನು ಮುಂದೆ ಹೆಚ್ಚಾಗಿ ತಾಳಿಕೊಳ್ಳುವ ವಿಧೇಯತ್ವದಲ್ಲಿ ಪರೀಕ್ಷಿತನಾಗ ಬೇಕಾಯಿತು. ಇಲ್ಲಿ ಆದದ್ದು ಅವನ ಉದ್ಯೋಗದ ಆರಂಭಕ್ಕೆ ಹ್ಯಾಗೆ ಬೆರಳು ತೋರಿಸುತ್ತದೋ, ಹಾಗೆಯೇ ಮುಂದ ಕಡೆಯಲ್ಲಿ ಸಂಪೂರ್ತಿಗೆ ಅಂದರೆ ಉತ್ಥಾನಕ್ಕೆ ತೋರಿಸುತ್ತದೆ. ಉತ್ಥಾನದಲ್ಲಿ ಸಂಪೂರ್ತಿಯಾದ ಭೂಸಂಬಂಧವಾದ ಮನುಷ್ಯಭಾವವು ಮಹಿಮೆ ಹೊಂದುವಂಥಾದ್ದಕ್ಕೆ ಇಲ್ಲಿ ಮಾರ್ಗವಾಯಿತು. ಶ್ರಮ ಪಟ್ಟ ಮೇಲೆ ಮರಣವನ್ನೂ ಕೊಳೆಯನ್ನೂ ಜೈಸಿದಂಥ ಬಲವು ಆರಂಭದಿಂದಲೇ ಅವನಲ್ಲಿ ಇತ್ತು. ಆದರೆ ಈಗ ಅದು ಮುಂದಿನ ಪೂರ್ಣವಾದ ನೆಲೆಯಾಗಿರುವ ಮಹಿಮೆಗೆ ಮುಂಗುತೋರ್ ಮುಂಗಡವೂ ಎಂಬ ಹಾಗೆ ಮೊದಲಾಗಿ ಮೊಬ್ಬಾದ ಮಾಂಸಕವಚವನ್ನು ಭೇದಿಸಿ ಕಂಡು ಬಂತು. ಹಳೇ ಒಡಂಬಡಿಕೆಯ ಪಿತೃಗಳೂ ನೇಮವನ್ನೂ ಪ್ರವಾದನೆಯನ್ನೂ ರೂಪಿಸುವವರೂ ಆಗಿದ್ದ ಮೋಶೆ ಮತ್ತು ಎಲೀಯನೂ ಎಲ್ಲಾ ಹಳೇ ಒಡಂಬಡಿಕೆಯ ರಕ್ಷಣೆಯ ಉಪಾಯಗಳು ಬೇಗ ಈಡೇರುವವೆಂಬ ಸಂತೋಷ ವರ್ತಮಾನವನ್ನು ಇಲ್ಲಿ ಪಡಕೊಂಡರು. ಮತ್ತು ಕ್ರೈಸ್ತಸಭೆಯ ಪಿತೃಗಳೂ ಬೇರೆ ಬೇರೆ ಕ್ರೈಸ್ತ ಮನೋರೀತಿಗಳನ್ನು ರೂಪಿಸುವವರೂ ಆಗಿರುವ ಯೇಸುವಿನ ಮೂರು ಮಂದಿ ಶಿಷ್ಯರು (§ ೧೨೫, ೩) ಹಳೇ ಹೊಸ ಒಡಂಬಡಿಕೆಗಳ ಏಕತ್ವವನ್ನೂ ಭೂದಿವಗಳ ದೇವರಾಜ್ಯದ ಸಂಬಂಧವನ್ನೂ ತಿಳುಕೊಳ್ಳ ಬೇಕಾಯಿತು. ಮಹಿಮೆ ಪಟ್ಟದ್ದು ಅಪೂರ್ಣವಾದದ್ದೂ ಸಂಪೂರ್ತಿಯಾದ ಮೇಲೆ ತಿಳಿಯಲಾಗುವಂಥಾದ್ದೂ ಆಗಿದ್ದದರಿಂದ ಕ್ರಿಸ್ತನು ತನ್ನ

ಉತ್ಥಾನದ ಮೊದಲು ಅದರ ವಿಷಯವಾಗಿ ಮಾತಾಡ ಬಾರದೆಂದು ಅಪ್ಪಣೆ ಕೊಟ್ಟನು.

## § 140. ಬೆಥಾನ್ಯದಲ್ಲಿ ಆದ ಅಭಿಷೇಕವು

ಯೋಹಾ. ೧೨, ೧ ಇತ್ಯಾದಿ. (ಮತ್ತಾ. ೨೬. ಸಂ. ಮಾರ್ಕ. ೧೪. ಸಂ.)— ಮೂರನೇ ಸಾರಿ (ಅದೇ ಕಡೇ ಸಾರಿ) ಬೋಧಕನ ಕೆಲಸದ ಕಾಲದಲ್ಲಿ ಕ್ರಿಸ್ತನು ಪಸ್ಕಹಬ್ಬಕ್ಕೆ ಯೆರೂಸಲೇಮಕ್ಕೆ ಹೋದನು. ಹಬ್ಬಕ್ಕೆ ಮುಂಚೆ ೬ ದಿವಸ ಇದ್ದಾಗ, ಅವನು (ಯೆರೂಸಲೇಮಿನಿಂದ ಅರ್ಧ ಹರದಾರಿ ದೂರವಾಗಿರುವ) ಬೆಥಾನ್ಯಕ್ಕೆ ಬಂದನು. ಅಲ್ಲಿ ಕುಷ್ಠರೋಗಿಯಾಗಿದ್ದ ಸಿಮೋನನ ಮನೆಯಲ್ಲಿ ಅವನಿಗೆ ಔತಣವಾಯಿತು. ಮಾರ್ಥಳು ಈ ಮನೆಯಲ್ಲಿ ಸಂಬಂಧ ಉಳ್ಳವಳಾಗಿ ಈ ಪ್ರಿಯ ಬೋಧಕನಿಗೆ ಊಟದ ಸಮಯದಲ್ಲಿ ಸೇವೆ ಮಾಡಿದಳು. ಮತ್ತು ಎಬ್ಬಿಸಲ್ಪಟ್ಟ ಲಾಜರನು ಸಹಾ ಊಟಕ್ಕೆ ಬಂದವರಲ್ಲಿ ಒಬ್ಬನಾಗಿದ್ದನು. ಆಗ್ಯೆ ಮರೀಯಳು ಕರ್ತನು ತನಗೆ ಬೇಗ ಬರುವ ಮರಣದ ವಿಷಯವಾಗಿ ತಿರಿಗಿ ತಿರಿಗಿ ಮಾತಾಡಿದ ಮಾತುಗಳನ್ನು ಅರಿಯದವಳಾಗಿರದೆ, ಮುಂದೆ ಬರುವದನ್ನು ಊಹಿಸುವ ಪ್ರೀತಿಯಿಂದ ಅಮೂಲ್ಯವಾದ ಜಟಮಾಂಸಿ ತೈಲದಿಂದ ತುಂಬಿದ ಕುಪ್ಪಿಯನ್ನು ತಕ್ಕೊಂಡು ರಕ್ಷಕನ ತಲೆಯ ಮೇಲೆ ಹೊಯಿದು, ಅವನ ಪಾದಗಳಿಗೆ ಸಹಾ ಹಚ್ಚಿ ತನ್ನ ಕೂದಲಿಂದ ಒರಸಿದಳು. ಆಗ್ಯೆ ಇಸ್ಕರಿಯೋತಿನವನಾದ ಯೂದನು ಇಷ್ಟು ಬೆಲೆಯುಳ್ಳದ್ದನ್ನು ಪ್ರಯೋಜನವಿಲ್ಲದೆ ಖರ್ಚು ಮಾಡದೆ ಬಡವರಿಗೆ ಅದರ ಹಣವನ್ನು ಕೊಡ ಬಹುದಾಗಿತ್ತೆಂಬದಾಗಿ ಗುಣುಗುಟ್ಟಿದನು. ಮತ್ತು (ಎಲ್ಲರಿಗೋಸ್ಕರ ಹಣದ ಚೀಲವು ಇದ್ದವನಾದ) ಯೂದನಿಗೆ ಕಳ್ಳತನದ ಅಭಿಲಾಷೆಯು ಈ ಮಾತನ್ನು ಮನಸ್ಸಿನಲ್ಲಿ ಹುಟ್ಟಿಸಿತ್ತೆಂಬದನ್ನು ನೆನಸದೆ, ಮಿಕ್ಕಾದ ಶಿಷ್ಯರು ಸಹಾ ತಿಳಿಯದೇ ಇದೇ ಮಾತನ್ನು ಹೇಳಿದರು. ಆದರೆ ಕರ್ತನು ಮರೀಯಳು ಬಹು ಮಮತೆಯುಳ್ಳದ್ದಾಗಿಯೂ ಬುದ್ಧಿಯುಳ್ಳದ್ದಾಗಿಯೂ ಇರುವ ಪ್ರೀತಿಯಲ್ಲಿ ಮಾಡಿದ ಕೆಲಸವನ್ನು ಆದರಿಸಿ ಹೇಳಿದ್ದೇನಂದರೆ "ಅವಳನ್ನು ಬಿಡಿ, ನನ್ನನ್ನು ಹೂಣಿಡುವ ದಿವಸಕ್ಕಾಗಿ ಇದನ್ನು ಇಟ್ಟು ಕೊಂಡಿದ್ದಾಳೆ. ದರಿದ್ರರು ಯಾವಾಗ್ಲೂ ನಿಮ್ಮ ಸಂಗಡ ಇದ್ದಾರೆ ಆದರೆ ನಾನು ಯಾವಾಗ್ಲೂ ಇರುವದಿಲ್ಲ. ಮತ್ತು ನಾನು ನಿಮಗೆ ಹೇಳುತ್ತೇನೆ. ಈ ಸುವಾರ್ತೆಯು ಸಮಸ್ತ ಲೋಕದೊಳಗೆ ಎಲ್ಲಿ ಪ್ರಸಂಗಿಸಲ್ಪಡುವದೋ, ಅಲ್ಲಿ ಇವಳು ಮಾಡಿದ್ದು ಸಹಾ ಇವಳು ನೆನಸಲ್ಪ

ಷುವಹಾಗೆ ಹೇಳಲ್ಪಡುವದು". (ಆದರೆ ಯೂದನು ಹೋಗಿ ಪ್ರಧಾನಯಾಜಕರಿಗೆ ಹೇಳಿದ್ದು: ನಾನು ಅವನನ್ನು ನಿಮಗೆ ಒಪ್ಪಿಸಿದರೆ ನನಗೆ ಏನು ಕೊಡುತ್ತೀರಿ? ಅವರು ಅವನಿಗೆ ೩೦ ರೂಪಾಯಿ ಕೊಡುತ್ತೇವೆಂದು ಹೇಳಿದರು.) ಇದೇ ಒಬ್ಬ ದಾಸನ ಕ್ರಯವಾಗಿತ್ತು (೨ ಮೋಶೆ. ೨೧, ೩೨). ಆದರೆ ತಾವು ಇದರಿಂದ ತಮ್ಮ ಸ್ವಂತ ಚಿತ್ತಕ್ಕೆ ವಿರೋಧವಾಗಿ ಯೇಸು ಕ್ರಿಸ್ತನ ವಿಷಯವಾಗಿ ಇದ್ದ ಬರಹವನ್ನು ಈಡೇರಿಸುತ್ತೇವೆಂದು ನೆನಸಲಿಲ್ಲ (ಜಕರಿಯ. ೧೧, ೧೨—೧೪). ಆದರೆ ಯೂದನು ಅಂದಿನಿಂದ ಅವನನ್ನು ಒಪ್ಪಿಸಿ ಕೊಡುವದಕ್ಕೆ ಒಳ್ಳೇ ಸಮಯವನ್ನು ಹುಡುಕಿದನು.

ಪರಿಶಿಷ್ಟ. ಈ ಸಂಗತಿಯಿಂದ ಮಮತೆಯುಳ್ಳ ಮರೀಯಳ ಪ್ರೀತಿಗೆ ಪ್ರತಿಕೂಲವಾಗಿ ಯೂದನು ಹೀನವಾದ ಮನೋಭಿಲಾಷೆಯಲ್ಲಿ ಇದ್ದದ್ದು ಆಲೋಚಿಸಿದರೆ ಅದನ್ನು ಸಮವಾಗಿ ತಿಳುಕೊಳ್ಳ ಬಹುದು. ಮರೀಯಳಿಗೆ ತನ್ನ ಕರ್ತನನ್ನು ಸನ್ಮಾನಿಸುವದಾದರೆ, ಅತಿ ಬೆಲೆಯುಳ್ಳದ್ದು ಸಹಾ ಅಷ್ಟು ಬೆಲೆಯುಳ್ಳದ್ದಲ್ಲ, ಯೂದನಿಗೆ ಹಣದ ಅಭಿಲಾಷೆಯನ್ನು ಪೂರೈಸುವದಾದರೆ, ಅತಿ ದುಷ್ಟವಾದದ್ದು ಸಹಾ ಅಷ್ಟು ದುಷ್ಟವಲ್ಲ. ಮರೀಯಳು ಭೋಳೆತನದಲ್ಲಿ ಪ್ರೀತಿಯುಳ್ಳ ತನ್ನ ಹೃದಯದ ಆಲೋಚನೆಯನ್ನು ಹಿಂಬಾಲಿಸುತ್ತಾಳೆ. ಅವಳು ಮಾಡಿದ್ದು ಯೋಗ್ಯವಾಗಿತ್ತು. ತಾನು ಮಾಡಿದರ ವಿಶೇಷವಾದ ಅಭಿಪ್ರಾಯವನ್ನು ತಾನೇ ತಿಳಿಯಲಿಲ್ಲ, ಆದರೆ ಊಹಿಸಿ ಇರ ಬಹುದು. ಯೂದನು ತನ್ನ ಹೃದಯದಲ್ಲಿದ್ದ ಸೈತಾನನ ಆಲೋಚನೆಯನ್ನು ಹಿಂಬಾಲಿಸುತ್ತಾನೆ. ಅವನು ಸಹಾ ಇಚ್ಛೈಸದೆ ಊಹಿಸದೆ ಸಮವಾದದ್ದನ್ನು ಮಾಡುತ್ತಾನೆ. ಆದರೆ ಮರೀಯಳು ಮಾಡಿದ್ದು ಎಲ್ಲಾ ವರ್ಷಶತಗಳಲ್ಲಿಯೂ ಶುಭಕಾರ್ಯವೆಂದು ಹೇಳುತ್ತಾರೆ. ಆದರೆ ಯೂದನ ಕೆಲಸವು ಒಂದೊಂದು ಕರುಣೆಯುಳ್ಳ ಹೃದಯದಲ್ಲಿ ಭಯವನ್ನೂ ವಿಸ್ಮಯವನ್ನೂ ಹುಟ್ಟಿಸುತ್ತದೆ.



## § 141. ಯೆರೂಸಲೇಮದಲ್ಲಿ ಮಾಡಿದ ಮೆಸ್ಸೀಯನ ಪ್ರವೇಶ

೧) ಮತ್ತಾ. ೨೧, ೧ ಇತ್ಯಾದಿ. (ಮಾರ್ಕ. ೧೧. ಲೂಕ. ೧೯. ಯೋಹಾ. ೧೨. ಸಂ.) ಮರು ದಿವಸ (ಆದಿತ್ಯವಾರ) ಯೇಸುವು ಯೆರೂಸಲೇಮದಲ್ಲಿ ಪ್ರವೇಶಿಸಲಿಕ್ಕೆ ಸಿದ್ಧ ಮಾಡುತ್ತಾನೆ. ಜಕರಿಯ. ೯, ೯ನೆಯಲ್ಲಿ (§೯೫, ೨) ಹೇಳಿದ ಪ್ರವಾದನೆಯು ತನ್ನ ವಿಷಯವಾಗಿ ಹೇಳಿಯದೆ ಎಂದು ಈ ಪ್ರಕಾರ ಬಂಡಿತವಾಗಿಯೂ ಪ್ರಕ

ಟವಾಗಿಯೂ ಎಲ್ಲಾ ಲೋಕದ ಮುಂದೆ ತಾನು ಮೆಸ್ಸೀಯನಾಗಿರುತ್ತೇನೆಂದು ತಿಳಿಸುವವನಾಗಿ ಕತ್ತೆಯ ಮರಿಯ ಮೇಲೆ ಕೂತುಕೊಂಡು ಶುದ್ಧ ಪಟ್ಟಕ್ಕೆ ಹೋಗುತ್ತಾನೆ. ಅವನು ಸಮೀಪವಾದನೆಂಬ ಸುದ್ಧಿಯನ್ನು ಕೇಳುತ್ತಲೇ ಹಬ್ಬಕ್ಕೋಸ್ಕರ ಬಹಳವಾಗಿ ಕೂಡಿ ಬಂದ ಜನವೆಲ್ಲಾ ಖರ್ಜೂರದ ಕೊಂಬೆಗಳನ್ನು ತಕ್ಕೊಂಡು ಅವನಿಗೆದುರಾಗಿ ಹೋದರು. ಅವರು ತಮ್ಮ ವಸ್ತ್ರಗಳನ್ನು ದಾರಿಯಲ್ಲಿ ಹಾಸಿ ಆರ್ಭಟಿಸಿ ಕೂಗಿದ್ದೇನಂದರೆ: "ಹೋಸನ್ನಾ! (ಅಂದರೆ ಕರ್ತನೇ ಸಹಾಯ ಮಾಡು! ಇಲ್ಲವೆ ಕರ್ತನೇ ರಕ್ಷಣ್ಯವನ್ನು ಕಾಡು! ಸಮ ನೋಡು. ಕೀರ್ತ. ೧೧೮, ೨೫ನೇ ಮೊದಲಾದ ವಚನಗಳು). ಕರ್ತನ ಹೆಸರಿನಲ್ಲಿ ಬರುವ ಅರಸನು ಆಶೀರ್ವದಿಸಲ್ಪಟ್ಟವನೇ! ಅತ್ಯುನ್ನತವಾದವುಗಳಲ್ಲಿ ಹೋಸನ್ನಾ!" ಆದರೆ ಫರಿಸಾಯರು ತಮ್ಮೊಳಗೆ ಹೇಳಿ ಕೊಂಡದ್ದೇನಂದರೆ — ನೀವು ಏನೂ ಮಾಡ ಕೂಡದೆಂದು ನೋಡುತ್ತೀರಿ, ಜನವೆಲ್ಲಾ ಅವನ ಹಿಂದೆ ಹೋಗುತ್ತದೆ. ಮತ್ತು ಅವರಲ್ಲಿ ಕೆಲಬರು ಜನರನ್ನು ಗದರಿಸ ಬೇಕೆಂದು ಕರ್ತನಿಗೆ ಹೇಳಿದಾಗ ಅವನು ಉತ್ತರ ಕೊಟ್ಟದ್ದು: ನಿಮಗೆ ಹೇಳುತ್ತೇನೆ — "ಇವರು ಸುಮ್ಮನಿದ್ದರೆ ಕಲ್ಲುಗಳು ಕೂಗುವವು". ತರುವಾಯ ಅವನು ಸಮೀಪಿಸಿದಾಗ ದುಃಖದಿಂದ ಪಟ್ಟವನ್ನು ನೋಡಿ ಜನವೆಲ್ಲಾ ಜಯಧ್ವನಿ ಮಾಡುವಾಗ್ಯೆ ಅವನು ಅತ್ತು ಹೇಳಿದ್ದೇನಂದರೆ: "ಈ ನಿನ್ನ ದಿವಸದಲ್ಲಾದರೂ ನಿನ್ನ ಸಮಾಧಾನಕ್ಕೆ ಬೇಕಾದವುಗಳನ್ನು ತಿಳಿದಿದ್ದರೆ ಒಳ್ಳೇದಾಗಿರುತಿತ್ತು! ಆದರೆ ಈಗ ಅವು ನಿನ್ನ ಕಣ್ಣುಗಳಿಗೆ ಮರೆಯಾಗಿವೆ" ಯಾಕಂದರೆ ಅವರು ಮಾನಸಾಂತರ ಪಡದೆ ಇರುವದರಿಂದ ಅವರ ಮೇಲೆ ಬರಲಿಕ್ಕಿದ್ದ ಎಲ್ಲಾ ದುಃಖವನ್ನೂ ವಿನಾಶವನ್ನೂ ಅವನು ಆತ್ಮದಲ್ಲಿ ಕಂಡನು.

ಪರಿಶಿಷ್ಟ ೧. ಇಷ್ಟು ವರೆಗೆ ತಾನು ಮೆಸ್ಸೀಯ ಅರಸನೆಂಬದಾಗಿ ಜನರಿಂದ ಹೇಳಿಸಿ ಕೊಳ್ಳುವದಕ್ಕೆ ಬೇಕಾಗಿ ತಪ್ಪಿಸಿ ಕೊಂಡನು (ಯೋಹಾ. ೬, ೧೫). ಈಗ ಸಹಾ ಅದಕ್ಕೆ ತಪ್ಪಿಸಿ ಕೊಳ್ಳ ಬಹುದಿತ್ತು; ಆದರೆ ಈಗ ಅವನ ಸಮಯ ಬಂದದೆ, ಮತ್ತು ಅವನು ತಾನೇ (ಲಾಜರನನ್ನು ಎಬ್ಬಿಸುವದರಿಂದ ಉದ್ರೇಕವಾದ) ಜನರ ವಿಪರೀತ ವಾತ್ಸಲ್ಯಕ್ಕೆ ಅನುಕೂಲವಾಗುತ್ತಾನೆ. ಆದರೆ ಈಗ ಇಲ್ಲಿ ಸಹಾ ದೈನ್ಯದಲ್ಲಿಯೂ ಬಡತನದಲ್ಲಿಯೂ ಪ್ರವೇಶ ಮಾಡಿ, ತನ್ನ ರಾಜ್ಯಕ್ಕೂ ಈ ಲೋಕದ ರಾಜ್ಯಗಳಿಗೂ ಇರುವ ಪ್ರತಿಕೂಲತ್ವವನ್ನು ಕಾಣ ಮಾಡುತ್ತಾನೆ. ಮೆಸ್ಸೀಯನಿಗೆ ಯೋಗ್ಯವಾದ ರಾಜ್ಯಾಧಿಕಾರವು ಅವನಿಗೆ ಉಂಟೆಂಬದು ಪೂರ್ಣವಾಗಿ ಸಾಧಿಸಲ್ಪಡ ಬೇಕಾಯಿತು. (ಮತ್ತು ಜನರು ಸುಮ್ಮನೆ ಇದ್ದದ್ದಾದರೆ ಕಲ್ಲುಗಳು ಹೊಸನ್ನಾ ಎಂದು ಕೂಗ ಬೇಕಾಗುತಿತ್ತು.) ಆದರೆ ಈ ಪ್ರಕಾರದ ಸಾಧನೆಯೇ ಅವನ ಕಡೇ ಅತ್ಯಂತ

ಕಠಿಣವಾದ ಶ್ರಮೆಗಳಿಗೆ ದ್ವಾರವಾಗ ಬೇಕಾಯಿತು. ಈ ಹೊಸನ್ನಾ ಎಂಬದಕ್ಕೂ, ಫರಿಸಾಯರ ಹಗೆಯಿಂದ ಉಂಟಾದ "ಕ್ರೂಜಿಸು ಕ್ರೂಜಿಸು" ಎಂಬದಕ್ಕೂ ಬಹಿರಂಗದ ಸಂಬಂಧವು ಹ್ಯಾಗೆ ಉಂಟೋ ಹಾಗೆಯೇ ಅಂತರಂಗದ ಸಂಬಂಧ ಸಹಾ ಉಂಟು. ಇದು ದೇವರ ಸುಯೋಚನೆಯಿಂದ ಉಂಟಾಯಿತು. ಯಾಕಂದರೆ ಆತನು ಎಲ್ಲಾ ಲೋಕದ ಮೇಲೆ ಅಧಿಕಾರವನ್ನು ಪಡಕೊಳ್ಳುವಂಥಾ ಸಿಂಹಾಸನವು ಕ್ರೂಜೆಯಾಗಿತ್ತು.

ಪರಿಶಿಷ್ಟ ೨. ನಿಶ್ಚಯವಾಗಿ ಯೇಸುವು ಯೆರೂಸಲೇಮದಲ್ಲಿ ನಿಸ್ಸಾನ್ ತಿಂಗಳಿನ ೧೦ನೇ ದಿವಸದಲ್ಲಿಯೇ ಬೇಕೆಂದು ಕಾಣಿಸಿ ಕೊಂಡನು. ಆ ದಿವಸದಲ್ಲಿ ಪಸ್ಕಕುರಿ ಆರಿಸಿ ಕೊಳ್ಳುವದು ಆದದರಿಂದ ಕರ್ತನು ಬೇಕಾಗಿ ಅಲ್ಲಿಗೆ ೧೦ನೆಯಲ್ಲಿ ಹೋದದ್ದು. (೧೪ನೇಯಲ್ಲಿ ಪಸ್ಕ) ಈ ದಿವಸದಲ್ಲಿ ಹಳೇ ಒಡಂಬಡಿಕೆಯ ಪಸ್ಕದ ಕುರಿಯು (೨ ಮೋಶೆ. ೧೨, ೨ ವಚನ) ಪೂರ್ವದಲ್ಲಿ ಪ್ರತ್ಯೇಕಿಸಲ್ಪಡ ಬೇಕಾಯಿತು. ಆದರೂ ಅವನು ತಾನೇ ಯೋಗ್ಯವಾದಂಥಾ ನಿತ್ಯ ಸಮರ್ಪಕವಾದಂಥಾ ಪಸ್ಕವಾಗ ಬೇಕೆಂಬದನ್ನು ಅವನೇ ಹೊರ್ತು ಯಾರೂ ತಿಳಿಯಲಿಲ್ಲ.

೨) ಮಾರ್ಕ. ೧೧, ೧೨ ವಚನ. (ಮತ್ತಾ. ೨೧. ಸಂ. ಲೂಕ. ೧೯ ಸಂಧಿ.) ಕರ್ತನು ಮಾರನೇ ದಿವಸ (ಸೋಮವಾರ) ತಿರಿಗಿ ಪಟ್ಣದೊಳಗೆ ಬಂದಾಗ (ಸಾಯಂಕಾಲ ಅವನು ಈ ಸಮಯದಲ್ಲಿ ವಿಶೇಷವಾಗಿ ಬೆಥಾನ್ಯಕ್ಕೆ ಶಾಂತವಾದ ಸ್ನೇಹಿತರ ಮನೆಗೆ ಹೋಗುವನು) ಯೆಹೂದ್ಯರ ಮುಂಗುರ್ತಾಗಿ ವಿಶೇಷವಾದಂಥಾ ಎಲೆ ತುಂಬ ಇದ್ದರೂ ಫಲವಿಲ್ಲದ ಅಂಜೂರ ಗಿಡಕ್ಕೆ ಶಾಪವನ್ನು ಕೊಟ್ಟನು (§ ೧೩೧, ೨). ಮತ್ತೆ ದೇವಾಲಯಕ್ಕೆ ಹೋಗಿ ಬೋಧಕೋದ್ಯೋಗದ ಆರಂಭದಲ್ಲಿ ಒಂದು ಸಾರಿ ಮಾಡಿದ ಹಾಗೆಯೇ (ಯೋಹಾ. ೨, ೧೩ ಇತ್ಯಾದಿ) ಈಗ ಸಹಾ ಮೆಸ್ಸೀಯ ಪ್ರವಾದಿಯ ಅಧಿಕಾರದ ಬಲದಿಂದ (ಪ್ಲೇಂಥರ ಅಂಗಳದಲ್ಲಿ ಕೂತುಕೊಂಡಂಥ) ಪಶುಗಳನ್ನು ಮಾರುವವರೂ ಚಿನಿವಾರರೂ ತಿರಿಗಿ ಆರಂಭಿಸಿದಂಥಾ ಅನ್ಯಾಯವನ್ನು ತೆಗದು ಹಾಕುತ್ತಾನೆ; ಚಿಕ್ಕ ಮಕ್ಕಳು ಸಹಾ ದಾವಿದನ ಮಗನಿಗೆ ಹೋಸನ್ನಾ ಎಂದು ಹೇಳಿದರು. ಮತ್ತು ಫರಿಸಾಯರು ಇದಕ್ಕೋಸ್ಕರ ಕೋಪಗೊಂಡಾಗ ಯೇಸು ಅವರಿಗೆ ಪ್ರತ್ಯುತ್ತರ ಕೊಟ್ಟದ್ದು "ಬಾಲಕರ ಮತ್ತು ಮೊಲೆಕೂಸುಗಳ ಬಾಯೊಳಗಿಂದ ಹೊಗಳಿಕೆಯನ್ನು ಸಿದ್ಧ ಮಾಡಿ ಕೊಂಡನೆಂಬದನ್ನು (ಕೀರ್ತ. ೮, ೨) ನೀವು ಎಂದಾದರೂ ಓದಲಿಲ್ಲವೋ" (ಮತ್ತಾ. ೨೧, ೧೬ ಇತ್ಯಾದಿ).



## § 142. ಯೇಸುವಿನ ಶತ್ರುಗಳ ಆಲೋಚನೆಗಳು

೧) ಮತ್ಥಾ. ೨೧ ಸಂಧಿ. ಲಾಜರನನ್ನು ಎಬ್ಬಿಸಿದಾಗಲೇ ಮಂತ್ರಿಸಭೆಯು ಯೇಸುವನ್ನು ಇಲ್ಲವಾಗ ಮಾಡ ಬೇಕೆಂದು ನಿಶ್ಚಯ ಮಾಡಿ ಇದ್ದರು. ಅವರು ಹೇಳಿದ್ದು "ನಾವು ಅವನನ್ನು ಹೀಗೆ ಬಿಟ್ಟರೆ ಎಲ್ಲರೂ ಅವನಲ್ಲಿ ವಿಶ್ವಾಸವಿಡುವರು. ಮತ್ತು ರೋಮಾಯರು ಬಂದು ನಮ್ಮ ಸ್ಥಳವನ್ನೂ ಜನಾಂಗವನ್ನೂ ತೆಗದು ಹಾಕುವರು." ಮತ್ತು ಕಾಯಫನು ಆ ವರ್ಷದ ಪ್ರಧಾನಯಾಜಕನಾಗಿ ಉತ್ತರ ಹೇಳಿದ್ದೇನಂದರೆ — ನಿಮಗೇನೂ ತಿಳಿಯುವದಿಲ್ಲ, ಜನಾಂಗವೆಲ್ಲಾ ನಾಶವಾಗದ ಹಾಗೆ ಒಬ್ಬ ಮನುಷ್ಯನು ಪ್ರಜೆಗೋಸ್ಕರ ಸಾಯುವದು ನಮಗೆ ಒಳ್ಳೇದೆಂದು ಆಲೋಚಿಸುವದಿಲ್ಲ. ಈ ವಾಕ್ಯದಲ್ಲಿ ಸೈತಾನನ ಯೋಚನೆಯೂ ದೇವರ ಯೋಚನೆಯೂ ಅತ್ಯಾಶ್ಚರ್ಯವಾಗಿ ಒಟ್ಟು ಕೂಡಿ ಕೊಂಡವು. ಆದರೆ ಹೀಗೆ ದೇವರ ಕೃಪೆಯು ಮೊದಲೇ ನಿಶ್ಚಯಿಸಿದ್ದು ಆಯಿತು. ಮತ್ತು ಅದರಲ್ಲಿ ಪ್ರಧಾನಯಾಜಕನ ಮೋಸವೂ ಕೆಟ್ಟತನವೂ ಕಾಣ ಬಂದರೂ ಅದೇ ಸಮಯದಲ್ಲಿ ಅವನು ತಾನೇ ತಿಳಿಯದೆ ಊಹಿಸದೆ ಸಹಾ ಇದ್ದರೂ ಪ್ರಧಾನಯಾಜಕೋದ್ಯೋಗಕ್ಕೆ ಇರುವ ಪ್ರವಾದನೆಯ ವರವು ಕಡೇ ಸಾರಿಗೆ ಪ್ರತ್ಯಕ್ಷವಾಯಿತು (ಯೋಹಾ. ೧೧, ೪೬—೫೩).

೨) ಮತ್ಥಾ. ೨೧, ೨೩ ನೇ ಮೊದಲಾದ ವಚನಗಳು. ಕಡೇ ದಿವಸಗಳಲ್ಲಿ ಸಂಭವಿಸಿದಂಥಾ ಸಂಗತಿಗಳು ಮಂತ್ರಿಸಭೆಯ ಈ ಆಲೋಚನೆಯನ್ನು ಪೂರ್ಣವಾಗಿ ಹಣ್ಣು ಮಾಡಿದವು. ಯೇಸುವು ಮರು ದಿವಸ (ಮಂಗಳವಾರ) ದೇವಾಲಯದಲ್ಲಿ ಬೋಧಿಸುತ್ತಾ ಇರುವಾಗ್ಯೆ ಪ್ರಧಾನಯಾಜಕರೂ ಹಿರಿಯರೂ ಅವನ ಪ್ರವಾದಿಯ ಪ್ರಯತ್ನಕ್ಕೆ ಆಧಾರ ತೋರಿಸ ಬೇಕೆಂದು ಹೇಳಿದರು. ಇದು ಸ್ನಾನಿಕನಾದ ಯೋಹಾನನನ್ನು ಕಳುಹಿಸಿದರಲ್ಲಿ ಸಾಧಿಸಿ ಇರುವದರಿಂದ ಕರ್ತನು ಈ ಸಾರಿ ಯೋಹಾನನ ಸ್ನಾನವು ಪರಲೋಕದಿಂದಲೋ ಮನುಷ್ಯರಿಂದಲೋ ಎಂಬ ಪ್ರತಿ ಪ್ರಶ್ನೆ ಮಾಡಿದನು. ಆದರೆ ಯೋಹಾನನು ಪ್ರವಾದಿ ಎಂದು ಅವನನ್ನು ಸನ್ಮಾನಿಸುವಂಥಾ ಅಲ್ಲಿದ್ದ ಜನರಿಗೋಸ್ಕರ ಮನುಷ್ಯರಿಂದೆಂದು ಹೇಳಲಿಕ್ಕೆ ಹೆದರಿ "ನಮಗೆ ತಿಳಿಯದು" ಎಂದು ಉತ್ತರ ಕೊಟ್ಟಾಗ, ರಕ್ಷಕನು ಪ್ರತ್ಯುತ್ತರ ಕೊಟ್ಟದ್ದು ಯಾವ ಅಧಿಕಾರದಿಂದ ಇದನ್ನು ಮಾಡುತ್ತೇನೆಂದು ನಾನು ಸಹಾ ನಿಮಗೆ ಹೇಳುವದಿಲ್ಲ! ಮತ್ತು ತನ್ನ ಶತ್ರುಗಳಿಗೆ ಅವರು ದೇವರ ರಾಜ್ಯದಿಂದ ಹೊರಗಾಗುವ ಸ್ಥಿತಿಯಲ್ಲಿ ಇರುತ್ತಾರೆಂಬದನ್ನು ಅವರ ತಿಳುವಿಕೆಗೆ ತರಲಿಕ್ಕಾಗಿ ದ್ರಾಕ್ಷೇ ತೋಟಕ್ಕೆ ಕಳುಹಿಸಲ್ಪಟ್ಟ ಇಬ್ಬರು ಮಕ್ಕಳ ಸಾಮ್ಯವನ್ನೂ, ಯಜಮಾನನ ಸೇವಕರನ್ನೂ, ಕಡೆಯಲ್ಲಿ ಮಗನನ್ನೂ

ಕೊಂದು ಹಾಕಿದ ದ್ರಾಕ್ಷೆ ತೋಟದವರದನ್ನೂ ಅರಸನ ಮಗನ ಮದುವೆಯದನ್ನೂ ಅವರಿಗೆ ಹೇಳಿದನು (ಸಮ ನೋಡು § ೧೩೧, ೨).

೩) ಮತ್ತಾ. ೨೨, ೧೫ನೇ ಮೊದಲಾದ ವಚನಗಳು. ತರುವಾಯ ಫರಿಸಾಯರು ತಿರಿಗಿ ಆಲೋಚನೆ ಮಾಡಿದರು! ಆ ಪ್ರಕಾರ ಅವರು (ಸದ್ದುಕಾಯರ ಮತ್ತು ರೋಮಾಯರ ಮನಸ್ಸಿನವರಾದ) ಹೆರೋದನ ಸೇವಕರ ಸಂಗಡ ಕೂಡಿ ಕೊಂಡು, ಅವನಿಗೆ "ಕೈಸರನಿಗೆ ತೆರಿಗೆ ಕೊಡುವದು ಸಮವೋ ಸಮವಲ್ಲವೋ" ಎಂಬ ಪ್ರಶ್ನೆಯನ್ನು ಮಾಡಿದರು. ಇದಕ್ಕೆ ಉತ್ತರ ಕೊಡುವದರಿಂದ ಜನರ ಹಗೆಯನ್ನಾಗಲಿ ರೋಮಾಯ ಸಂಸ್ಥಾನದವರ ನ್ಯಾಯ ಪ್ರಕಾರದ ಶಿಕ್ಷೆಯನ್ನಾಗಲಿ ಅವನು ಪಡೆಯ ಬೇಕಾದೀತೆಂದು ನೆನಸಿದರು. ಆದರೆ ಕರ್ತನು ಅವರ ತಂತ್ರಗಳನ್ನು ನೋಡಿ ಅವರು ದೇವರದನ್ನು ದೇವರಿಗೆ ಕೊಡದೆ ಇರುವದರಿಂದ ದುಡಿದ ದಂಡಣೆಗಾಗಿ ಕೈಸರನಿಗೆ ಕೈಸರನದನ್ನು ಕೊಡ ಬೇಕೆಂಬದಕ್ಕೆ ನಾಣ್ಯದ ಮೇಲೆ ಇರುವ ಕೈಸರನ ರೂಪವು ಸಾಕ್ಷಿಯಾಗಿರುತ್ತದೆಂದು ಅವರಿಗೆ ತಿಳಿಸುತ್ತಾನೆ. ಕ್ರಿಸ್ತನ ಉತ್ತರದಲ್ಲಿ ಇದ್ದ ಸತ್ಯದ ಬಲವೂ ಅದರಿಂದ ಎಬ್ಬಿಸಲ್ಪಟ್ಟ ಪಾಪದ ತಿಳುವಿಕೆಯೂ ಅವರು ಇಟ್ಟ ಪಾಶವನ್ನು ಹರಿಯಲಾಗಿ ಅವರು ನಾಚಿಕೆ ಪಟ್ಟು ಅಲ್ಲಿಂದ ಹೋದರು.

೪) ಮತ್ತಾ. ೨೨, ೩೩ ಇತ್ಯಾದಿ. ಅದೇ ದಿವಸದಲ್ಲಿಯೇ ಸದ್ದುಕಾಯರು ಸಹಾ ಕರ್ತನ ಹತ್ತರ ಬಂದು ಒಂದು ವೇಳ್ಯ ಬಹಳ ಸರ್ತಿ ಜಯಪ್ರದವಾಗಿ ಪ್ರಯೋಗಿಸಿದಂಥಾ ಒಬ್ಬ ಸ್ತ್ರೀಯ ೭ ಮಂದಿ ಗಂಡಂದ್ಯರ ಕಥೆಯನ್ನೂ ಉತ್ಥಾನದಲ್ಲಿ ಅವಳು ಯಾರಿಗೆ ಆಗ ಬೇಕೆಂಬದನ್ನು ನಿಶ್ಚಯಿಸುವ ಪ್ರಯಾಸವನ್ನೂ ಅವನಿಗೆ ತೋರಿಸಿ, ತಮ್ಮ ಚಾತುರ್ಯವನ್ನು ಪರೀಕ್ಷಿಸಲಿಚ್ಛೈಸಿದರು. ಆದರೆ ರಕ್ಷಕನು ಅಶುದ್ಧವಾದ ಅವರ ಚಾತುರ್ಯವನ್ನು ಒಳ್ಳೇ ಬೋಧನೆಯಿಂದ ಜೈಸಿದನು. ಹ್ಯಾಗಂದರೆ — ಉತ್ಥಾನದವರು ಮದಿವೆ ಮಾಡಿ ಕೊಳ್ಳುವದೂ ಇಲ್ಲ, ಮದಿವೆಯಾಗುವದೂ ಇಲ್ಲವೆಂದೂ ಪರಲೋಕದಲ್ಲಿರುವ ದೇವದೂತರ ಹಾಗೆಯೇ ಆಗುವರೆಂದೂ ಹೇಳಿ, ಅಬ್ರಹಾಮ ಇಸಾಕ ಯಾಕೋಬರ ದೇವರು ಎಂಬ ಹೆಸರಿನಲ್ಲಿಯೇ ಅವರ ಅವಿಶ್ವಾಸಕ್ಕೆ ವಿರೋಧವಾಗಿ ಸಾಕ್ಷಿ ಉಂಟೆಂಬದನ್ನು ಅವರಿಗೆ ತೋರಿಸುತ್ತಾನೆ. ತರುವಾಯ ರಕ್ಷಕನು ಸ್ವಲ್ಪ ಒಳ್ಳೇಯವನಾಗಿದ್ದ ಫರಿಸಾಯನನ್ನು ಶ್ರೇಷ್ಟವಾದ ಕಟ್ಟಳೆಯ ವಿಷಯವಾಗಿ ಬೋಧಿಸಿ, ಬರಹವನ್ನು ತಮ್ಮ ಯಜಮಾನತ್ವದ ಕೆಳಗೆ ತರಲಿಕ್ಕೆ ಇಚ್ಛೈಸುವ ಸಮಾನಸ್ಥಾನದವರಿಗೆ: "ನಿಮಗೆ ಕ್ರಿಸ್ತನನ್ನು ಕುರಿತು ಹ್ಯಾಗೆ ತೋಚುತ್ತದೆ? ಯಾರ ಮಗನಾಗಿದ್ದಾನೆ ಎಂಬ ಪ್ರಶ್ನೆ ಮಾಡಿದನು." ಅವರು ದಾವಿದನ ಮಗನು ಎಂದು ಸಿದ್ಧವಾಗಿ ಉತ್ತರ ಕೊಡುತ್ತಾರೆ. ಆದರೆ ದಾವಿದನ ಮಗನು ದಾವಿ

ದನ ಕರ್ತನೆಂದು ಕರಿಯಲ್ಪಡುವದು (ಕೀರ್ತ. ೧೧೮, ೧ ವಚನ) ಹ್ಯಾಗೆ? ಎಂಬ ಈ ಪರಿಶುದ್ಧವಾದ ಒಗಟು ಬಿಡಿಸಲಿಕ್ಕೆ ಶಕ್ತರಾಗಿರಲಿಲ್ಲ. ಮತ್ತು ಅಂದಿನಿಂದ ಯಾರೂ ಇನ್ನೂ ಅವನನ್ನು ಕೇಳುವದಕ್ಕೆ ಧೈರ್ಯ ಪಡಲಿಲ್ಲ.



## § 143. ಯೆರೂಸಲೇಮವಿನಾಶ, ಲೋಕಾಂತ್ಯಗಳ ವಿಷಯವಾಗಿ ಕ್ರಿಸ್ತನ ಪ್ರವಾದನೆಯು

೧) ಮತ್ತಾ. ೨೩—೨೫ ವರೆಗೆ. ಈಗ ಕರ್ತನು ಸಹಾ ಜನರ ಮುಂದೆಯೂ ಶಿಷ್ಯರ ಮುಂದೆಯೂ ಫರಿಸಾಯರ ಡಂಭಕ್ಕೂ ಕ್ರಿಯಾನೀತಿಗೂ ವಿರೋಧವಾಗಿ ಅತಿ ತ್ರಾಣವುಳ್ಳದ್ದಾಗಿಯೂ ಏನೂ ದಾಕ್ಷಿಣ್ಯವಿಲ್ಲದ್ದಾಗಿಯೂ ಸಾಕ್ಷಿ ಕೊಡುತ್ತಾನೆ. ೮ ಅಯ್ಯೋ! ಹೇಳಿ, ದೇವರಿಂದ ದೂರ ಹೋದ ಅವರ ಹೃದಯಗಳಲ್ಲಿ ಅಡಗಿರುವ ಸೈತಾನನ ಅಗಾಧಗಳನ್ನು ಪ್ರಕಟ ಮಾಡಿದ ತರುವಾಯ ಇಂಥಾ ಮನಸ್ಸಿನಿಂದ ಶುದ್ಧ ಪಟ್ಟಣದ ಮೇಲೆಯೂ ದೇವಾಲಯದ ಮೇಲೆಯೂ ಪೂರ್ಣ ಹಾಳು ಮಾಡುವ ದಿವ್ಯ ನ್ಯಾಯಶಿಕ್ಷೆಯು ಅಗತ್ಯವಾಗಿ ಉಂಟಾಗ ಬೇಕೆಂದು ಸಾರಿದನು. ಪರಿಶುದ್ಧ ದುಖ್ಖದಿಂದ ತುಂಬಿದವನಾಗಿ ರಕ್ಷಕನು ಆ ಗಡಗಿಸುವ ವಾಕ್ಯವನ್ನು ಹೇಳಿದನು. “ಯೆರೂಸಲೇಮೇ ಯೆರೂಸಲೇಮೇ ಪ್ರವಾದಿಗಳನ್ನು ಕೊಲ್ಲುವವಳೇ ತನ್ನ ಬಳಿಗೆ ಕಳುಹಿಸಲ್ಪಟ್ಟವರನ್ನು ಕಲ್ಲೆಸಿಯುವವಳೇ ಕೋಳಿಯು ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಹೊದಗಿಸುವ ಪ್ರಕಾರ ನಿನ್ನ ಮಕ್ಕಳನ್ನು ಹೊದಗಿಸ ಎಷ್ಟು ಸಾರಿ ಮನಸ್ಸಾಗಿದ್ದೆನು. ಆದರೆ ಒಲ್ಲದೆ ಇದ್ದಿರಿ. ಇಗೋ ನಿಮ್ಮ ಮನೆಯು ನಿಮಗೆ ಹಾಳಾಗಿ ಬಿಡಲ್ಪಡುವದು” (ಮತ್ತಾ. ೨೩, ೩೭. ೩೮). ಮತ್ತು ಇದಾದ ಕೂಡಲೇ ಕರ್ತನು ದೇವಾಲಯಕ್ಕೆ ಬರಲಾಗಿ ಶಿಷ್ಯರು ತಮ್ಮ ಯಜಮಾನನ ದೃಷ್ಟಿಯನ್ನೂ ಮಾತುಗಳನ್ನೂ ದೇವಗೃಹದ ಮೇಲೆ ತಿರಿಗಿಸಲಿಕ್ಕೆ ಪ್ರಯತ್ನ ಮಾಡಿದರು. ಆಗ್ಯೆ ಅವನು ಹೇಳಿದ್ದು: “ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ಕೆಡವಿ ಹಾಕಲ್ಪಡದ ಕಲ್ಲು ಕಲ್ಲಿನ ಮೇಲೆ ಇಲ್ಲಿ ಬಿಡಲ್ಪಡುವದಿಲ್ಲ.” ತರುವಾಯ ಅವರು ಇಪ್ಪೇ ಗುಡ್ಡಕ್ಕೆ ಬಂದಾಗ ದೇವಾಲಯವೂ ಶುದ್ಧ ಪಟ್ಟಣವೂ ಪೂರ್ಣ ಶೋಭೆಯಲ್ಲಿ ಅವರ ಕಣ್ಣಿಗೆ ಕಾಣಿಸಿಕೊಳ್ಳಲು (ಸಮ ನೋಡು § ೭೭) ಶಿಷ್ಯರು ಕೇಳಿದ್ದು: ಇವು ಯಾವಾಗ ಆಗುವವು; ನಿನ್ನ ಬರುವಿಕೆಗೂ ಯುಗದ ಅಂತ್ಯಕ್ಕೂ ಗುರುತೇನು ನಮಗೆ ಹೇಳು? ಆಗ್ಯೆ

ಕರ್ತನು ಐಶ್ವರ್ಯವಾದ ಪ್ರವಾದಿಚಿತ್ರದಿಂದ ದೇವರ ರಾಜ್ಯವು ಕಡೇ ಕಾಲದಲ್ಲಿ ಹ್ಯಾಗೆ ವಿಕಸಿತವಾಗುವದೆಂಬದನ್ನು ಅವರಿಗೆ ತಿಳಿಸಿದನು (ಮತ್ಥಾ. ೨೪. ಸಂ).

ಪರಿಶಿಷ್ಟ. ಭವಿಷ್ಯಕಾಲದಲ್ಲಿ ಹೋಗುವ ಪ್ರವಾದನೆಯ ನೋಟವು ಹಿಂದೆ ಮುಂಚೆಯಾಗಿ ಎಲ್ಲಾ ಒಂದೇ ಸಾರಿ ನೋಡುವದರಿಂದ ಪ್ರಕೃತದಲ್ಲಿ ಒಂದಕ್ಕೊಂದು ಬಹಳ ದೂರವಾಗಿರುವ ದೊಡ್ಡ ವಸ್ತುಗಳು ಕಣ್ಣಿಗೆ ಒಂದಕ್ಕೊಂದು ಸಮೀಪವಾಗಿಯೂ ಒಂದರಲ್ಲೊಂದು ಇರುವ ಹಾಗೆಯೂ ಕಂಡು ಬಗುವ ಪ್ರಕಾರವೇ ರಕ್ಷಕನು ಸಹಾ (ಅವನು ಭೂಮಿಗೆ ಬಂದಾಗ ದಿವ್ಯ ಮಹಿಮೆಯನ್ನು ಬರಿದು ಮಾಡಿ ಕೊಳ್ಳಲಾಗಿ ಅವನ ಪ್ರವಾದನೆಯು ಮಾನುಷಪ್ರವಾದಿಯ ನೋಟಕ್ಕೆ ಇರುವ ಕ್ರಮಗಳಿಗೆ ಒಳಗಾಗಿದ್ದದರಿಂದ, (ಮಾರ್ಕ. ೧೩, ೩೨) ಮತ್ತೆ ಒಂದರ ಮೇಲೆ ಒಂದು ಈಡೇರಿದ ಮೇಲೆ ಕಾಣ ಬರ ಕೂಡದಂಥಾ ಕಾಲಗಳು ಯಾವದು ಮೊದಲು ಯಾವದು ಮತ್ತೆ ಎಂಬದನ್ನು ವಿಚಾರಿಸದೆ, ಭವಿಷ್ಯವನ್ನು ಒಂದೇ ಒಂದು ಚಿತ್ರವಾಗಿ ಕಂಡನು. ಈ ಚಿತ್ರಕ್ಕೆ ಮುಂದಗಡೆಯಲ್ಲಿ ಕಾಣುವಂಥಾದ್ದು ಎರಡು, ಒಡಂಬಡಿಕೆಯ ಜನಾಂಗದ ಮೇಲೆಯೂ ಶುದ್ಧ ಪಟ್ಟಣದ ಮೇಲೆಯೂ ಬರುವ ಕಡೇ ನ್ಯಾಯಶಿಕ್ಷೆ. ಮತ್ತು ಎಲ್ಲಾ ಲೋಕದ ಮೇಲೆ ಬರುವ ಕಡೇ ನ್ಯಾಯಶಿಕ್ಷೆ. ಮೊದಲನೇದು ೨ನೇದಕ್ಕೆ ಹ್ಯಾಗೆ ಮುಂಗುರ್ತಾಗಿರುತ್ತದೋ ಹಾಗೆ ಒಂದರ ವರ್ಣನೆಯು ಮತ್ತೊಂದರ ವರ್ಣನೆಗೆ ಆಧಾರ. ಈ ಪ್ರವಾದನೆಯು ನ್ಯಾಯಶಿಕ್ಷೆಗೆ ಮೊದಲು ಬರುವಂಥಾದ್ದೇನೆಂದು ಪ್ರಥಮತಾ ವಿವರಿಸುತ್ತದೆ. ಮತ್ತೆ ನ್ಯಾಯಶಿಕ್ಷೆಯನ್ನೇ, ಮುಖ್ಯವಾಗಿ ಅದರ ಸಂಗಡ ಉಂಟಾಗುವ ಉತ್ಪಾತಗಳನ್ನು (ಅಂದರೆ ದೊಡ್ಡ ಕಂಟಕ, ಭೂಕಂಪ, ದೊಡ್ಡ ಯುದ್ಧ ಇತ್ಯಾದಿ) ವರ್ಣಿಸುತ್ತದೆ. ಯೆರೂಸಲೇಮದ ಮತ್ತು ದೇವಾಲಯದ ವಿನಾಶವು, ಪರಿಶುದ್ಧಸ್ಥಳದಲ್ಲಿ ನಿಲ್ಲುವ ಹಾಳು ಮಾಡುವ ಅಸಹ್ಯವು ಈ ಕಾಲದಲ್ಲಿ ಉಂಟಾಗುವ ಮೊದಲು ಕೇಳದಂಥಾ ಕಷ್ಟ ಉಪದ್ರಗಳು ಕಡೇ ನ್ಯಾಯಶಿಕ್ಷೆಯ ಸಂಗಡ ಉಂಟಾಗುವ ಕಡೇ ಉತ್ಪಾತದ ಮುಂಗುರ್ತಾಗಿ ಕಾಣುತ್ತದೆ. ಕಡೆಯಲ್ಲಿ ಈ ನ್ಯಾಯಶಿಕ್ಷೆಯ ಕಾಲವನ್ನು ನಿಶ್ಚಯಿಸಲಾಗುವದಿಲ್ಲವೆಂದು ಸಾರಿದ ಮೇಲೆ ಯೇಸುವು ಜಲಪ್ರಳಯದ ನ್ಯಾಯಶಿಕ್ಷೆಯನ್ನು ನೆನಪಿಗೆ ತರುತ್ತಾನೆ (§ ೮, ೧.). ಮತ್ತು ಜಾಗರವಾಗಿ ಯಾವಾಗಲೂ ಸಿದ್ಧವಾಗಿರ ಬೇಕೆಂದು ಬುದ್ಧಿ ಹೇಳುತ್ತಾನೆ. "ಯಾಕಂದರೆ ಮನುಷ್ಯನ ಮಗನು ನೀವು ನೆನಸದ ಘಳಿಗೆಯಲ್ಲಿ ಬರುತ್ತಾನೆ".

೨) ಮತ್ಥಾ. ೨೫, ೧ ಇತ್ಯಾದಿ. ಈ ಪ್ರವಾದನೆಗೆ ಕೂಡುವಂಥಾದ್ದು ಏನಂದರೆ — ವಿವೇಕಿಗಳಾದ ೫ ಕನ್ಯಾಸ್ತ್ರೀಯರ ಮತ್ತು ಹುಚ್ಚರಾದ ೫ ಕನ್ಯಾಸ್ತ್ರೀಯರ

ಸಾಮ್ಯವೂ ಒಪ್ಪಿಸಿ ಕೊಟ್ಟ ತಲಾಂತರಗಳ ಸಾಮ್ಯವೂ ಕುರಿಗಳನ್ನೂ ಮೇಕೆಗಳನ್ನೂ
ಬೇರೆ ಬೇರೆ ಮಾಡುವ ಸಾಮ್ಯವೂ ಇವುಗಳೇ. ಇವುಗಳಲ್ಲಿ ಕಡೇ ನ್ಯಾಯಶಿಕ್ಷೆಯು
ಬೇರೆ ಬೇರೆ ಮಾಡೋಣವಾಗಿ ಅಂದರೆ ಪ್ರೀತಿಯಲ್ಲಿ ಯತ್ನೈಸುವಂಥ ವಿಶ್ವಾಸವನ್ನು
ಜೀವದ ಯುದ್ಧಶೋಧನೆಗಳಲ್ಲಿ ಕಾಪಾಡಿ ಕೊಳ್ಳುವವರನ್ನೂ ಉಗುರು ಬೆಚ್ಚಗೆ ಇ
ರುವದರಿಂದಲೂ ಆಲಸ್ಯದಿಂದಲೂ ಬಿಡದೆ ಅವಿಶ್ವಾಸದಲ್ಲಿರುವದರಿಂದಲೂ ಕಾದ
ಲ್ಪಡುವ ರಕ್ಷಣ್ಯವನ್ನು ಅಲಕ್ಷ್ಯ ಮಾಡಿದದರಿಂದ ವಿಶ್ವಾಸ ಪ್ರೀತಿಗಳ ಫಲಗಳನ್ನು ಧ
ರಿಸದೆ ಇರುವವರನ್ನು ಕಡೇ ಸಾರಿ ಎಲ್ಲಾ ತೀರಿಸುವಂಥ ನಿಶ್ಚಂಚಲವಾದ ಬೇರೆ ಬೇ
ರೆ ಮಾಡೋಣವಾಗಿ ಕಂಡು ಬರುತ್ತದೆ (ಸಮ ನೋಡು § ೧೯೪, ೨). ಇದಾದ
ಮೇಲೆ ಯೇಸುವು ಕಡೇ ೨ ದಿವಸಗಳನ್ನು ನಿರಾತಂಕವಾಗಿ ತನ್ನ ಶಿಷ್ಯರ ಸಂಗಡ
ಕಳಿಯುವದಕ್ಕೋಸ್ಕರ ಯೆರೂಸಲೇಮದಿಂದ ತಿರಿಗಿ ಹೋದನು. ಅಷ್ಟರಲ್ಲಿ ಯೇಸು
ವಿನ ಶತ್ರುಗಳು ಯೇಸುವನ್ನು ತಂತ್ರದಿಂದ ಹಿಡಿದು ಕೊಂದು ಹಾಕುವದು ಹ್ಯಾಗೆಂ
ದು ಆಲೋಚನೆ ಮಾಡುವದಕ್ಕಾಗಿ ಪ್ರಧಾನಯಾಜಕನ ಮಠದಲ್ಲಿ ತಿರಿಗಿ ಕೂಡಿ ಬಂ
ದರು. ಆದರೆ ಅವರು ಹೇಳಿದ್ದು: “ಜನರಲ್ಲಿ ಗುಲ್ಲು ಆಗದ ಹಾಗೆ ಹಬ್ಬದಲ್ಲಿ
ಬೇಡ”.

ಪರಿಶಿಷ್ಟ. ತಮ್ಮ ಆಲೋಚನೆಯನ್ನು ಹಬ್ಬದ ಸಮಯವು ತೀರಿದ ಮೇಲೆ
ಪೂರ್ಣ ಮಾಡ ಬೇಕೆಂದು ಯೇಸುವಿನ ಶತ್ರುಗಳು ಬಹಳವಾಗಿ ಅಪೇಕ್ಷಿಸಿದರೂ
ನಿರೀಕ್ಷಿಸದಂಥಾ ವೇಗದಿಂದ ವಿಕಸಿತವಾದ ವಿದ್ಯಮಾನಗಳೂ ಅವರ ಬುದ್ಧಿಗಿಂತ
ಹೆಚ್ಚು ತ್ರಾಣವುಳ್ಳ ದ್ವೇಷದ ಸಂತಾಪವೂ ಆಲೋಚನೆಯನ್ನು ಆಗಲೇ ಮಾಡಲಿ
ಕ್ಕೆ ಅವರನ್ನು ಬಲಾತ್ಕಾರ ಪಡಿಸಿದವು. ಈ ಪ್ರಕಾರ ತಮ್ಮ ಸ್ವಂತ ಚಿತ್ತಕ್ಕೆ ವಿರೋ
ಧವಾಗಿ ಅವರು ದೇವರ ಯೋಚನೆಗೆ ದಾಸರಾದರು. ಯಾಕಂದರೆ ಯೇಸುವು ನಿಜ
ವಾದ ನಿತ್ಯವಾದ ಪಸ್ಕಬಲಿಯಾಗಿರುತ್ತಾನೆಂಬದನ್ನು ತೋರಿಸುವದಕ್ಕಾಗಿ ಪಸ್ಕಹಬ್ಬ
ದ ದಿವಸದಲ್ಲಿಯೇ ಸಾಯ ಬೇಕಾಗಿತ್ತು. ಸಮ ನೋಡು! § ೧೪೪, ೩.



## § 144. ಪಸ್ಕಭೋಜನವೂ ಯೇಸುವಿನ ಕಡೇ ಬೋಧನೆಗಳೂ

೧) ಮತ್ತಾಯ. ೨೬, ೧೭ ಇತ್ಯಾದಿ. ಮಾರ್ಕ. ೧೪. ಲೂಕ. ೨೨.
ಯೋಹಾ. ೧೩. ಹುಳಿ ಇಲ್ಲದ ರೊಟ್ಟಿಗಳ ಮೊದಲನೇ ದಿವಸದಲ್ಲಿ (ನಿಸ್ಸಾನ್

ತಿಂಗಳ ೧೪ನೇ ದಿವಸ ಈ ಸಾರಿ ಬ್ರಹಸ್ಪತಿವಾರ) ಪಸ್ಕದ ಊಟಕ್ಕೆ ಸಿದ್ಧ ಮಾಡುವದಕ್ಕೋಸ್ಕರ ಕರ್ತನು ಪೇತ್ರನನ್ನೂ ಯೋಹಾನನನ್ನೂ ಕಳುಹಿಸಿದನು. ಊಟದ ತಾಸಿಗೆ ಬಂದು ಕರ್ತನು ೧೨ ಶಿಷ್ಯರ ಸಂಗಡ ಊಟಕ್ಕೆ ಕೂತುಕೊಳ್ಳ ಬೇಕಾದರೆ ಮೊದಲಾಗಿ ಯೆಹೂದ್ಯರ ಮರ್ಯಾದೆಯ ಪ್ರಕಾರ ಊಟಕ್ಕೆ ಬಂದವರ ಪಾದಗಳನ್ನು ತೊಳೆಯ ಬೇಕಾಯಿತು. ಆದರೆ ಶಿಷ್ಯರಲ್ಲಿ ಒಬ್ಬನಾದರೂ ದೈನ್ಯದಲ್ಲಿ ಈ ಹೀನ ಕೆಲಸವನ್ನು ತಾನು ಮಾಡ ಬೇಕೆಂದು ನೆನಸಲಿಲ್ಲ. ಆಗ್ಯೆ ರಕ್ಷಕನು ತಾನೇ ಎದ್ದು, ಶಿಷ್ಯರನ್ನು ನಾಚಿಕೆ ಪಡಿಸಲಿಕ್ಕಾಗಿಯೂ ದೈನ್ಯವಾಗಿರ ಬೇಕೆಂಬದನ್ನು ತೋರಿಸಲಿಕ್ಕಾಗಿಯೂ ಅವರ ಪಾದಗಳನ್ನು ತೊಳೆದನು. ಪೇತ್ರನ ಹತ್ತರ ಬಂದಾಗ ಇವನು ಬಹಳ ನಾಚಿಕೆ ಪಟ್ಟು ಅದನ್ನು ಆಗ ಗೊಡಿಸಲೊಲ್ಲನು. ಕರ್ತನು ಈ (ಮುಂಗುರ್ತಾಗಿರುವ) ಕೆಲಸದ ಪೂರ್ಣ ಅಭಿಪ್ರಾಯವನ್ನು ತಿಳುಕೊಳ್ಳಲಿಕ್ಕೆ ಅಶಕ್ತನಾಗಿರುತ್ತಾನೆಂದು ಅವನಿಗೆ ಹೇಳಿ ಕಡೆಯಲ್ಲಿ ತಿಳಿಸಿದ್ದು “ನಾನು ನಿನ್ನನ್ನು ತೊಳೆಯದಿದ್ದರೆ, ನನ್ನ ಸಂಗಡ ನಿನಗೆ ಪಾಲಿಲ್ಲ;” ಅದಕ್ಕೆ ಪೇತ್ರನು ಉತ್ತರ ಕೊಟ್ಟದ್ದು: “ಕರ್ತನೇ ನನ್ನ ಕಾಲುಗಳನ್ನು ಮಾತ್ರವಲ್ಲ ನನ್ನ ಕೈಗಳನ್ನೂ ತಲೆಯನ್ನೂ ತೊಳೆ.” ಯೇಸು ಹೇಳಿದ್ದು “ಮಿಂದವನಿಗೆ ಕಾಲುಗಳನ್ನು ಹೊರ್ತು ತೊಳೆಯುವದಕ್ಕೆ ಅವಶ್ಯವಿಲ್ಲಾ, ಸಂಪೂರ್ಣವಾಗಿ ಶುದ್ಧವಾಗಿದ್ದಾನೆ. ಮತ್ತು ನೀವು ಶುದ್ಧರಾಗಿದ್ದೀರಿ. ಆದರೆ ಎಲ್ಲರು ಅಲ್ಲ.

ಪರಿಶಿಷ್ಟ. ಕ್ರಿಸ್ತನು ಕಾಲು ತೊಳೆದದ್ದನ್ನು ಯೋಹಾನನ ಸ್ನಾನಕ್ಕೆ ಸಂಬಂಧವುಳ್ಳದ್ದಾಗ ಮಾಡುತ್ತಾನೆ; ಅದರಿಂದ ಶಿಷ್ಯರು ದೇವರ ರಾಜ್ಯಕ್ಕೆ ಮೊದಲನೇ ಸಂಸ್ಕಾರವನ್ನು ಹೊಂದಿ ಕ್ರಿಸ್ತನಲ್ಲಿ ಪಾಲು ಪಡಕೊಂಡಿದ್ದರು, ಅದರಿಂದ ಮನುಷ್ಯನೆಲ್ಲಾ (ಮುಂಗುರ್ತಾಗಿ) ಶುದ್ಧ ಮಾಡಲ್ಪಟ್ಟಿದ್ದನು. ಆದರೆ ಲೋಕದಲ್ಲಿ ಅವರು ಅನುದಿನ ಸಂಚಾರ ಮಾಡುತ್ತಾ (ಇಡೀ ಶರೀರವನ್ನಲ್ಲ ಪಾದಗಳನ್ನು ಮಾತ್ರವೇ) ಅಶುದ್ಧ ಮಾಡಿಕೊಂಡದರಿಂದ ಅವರು ಇನ್ನು ಮುಂದೆ ಸಹಾ ಕ್ರಿಸ್ತನಲ್ಲಿ ಪಾಲಿದ್ದವರಾಗಲಿಕ್ಕೂ ಅವನ ಅನ್ಯೋನ್ಯದ ಭೋಜನಕ್ಕೆ ಸಿದ್ಧವಾಗಲಿಕ್ಕೂ ಶಕ್ತರಾಗುವ ಹಾಗೆ ಈ ಅಶುದ್ಧತ್ವದಿಂದ ತಿರಿಗಿ ಶುದ್ಧವಾಗ ಬೇಕಾಯಿತು. ಇದೇ ಪಾದಗಳನ್ನು ತೊಳೆದದರ ಮುಂಗುರ್ತಾಗಿರುವ ಅಭಿಪ್ರಾಯವು. ಯೋಹಾನನ ಸ್ನಾನವೂ ಪಸ್ಕಭೋಜನದ ಮೊದಲು ಪಾದಗಳನ್ನು ತೊಳೆಯುವದೂ ಕ್ರೈಸ್ತ ಸ್ನಾನಕ್ಕೂ ರಾತ್ರಿಭೋಜನವನ್ನು ತಕ್ಕೊಳ್ಳುವ ಮೊದಲು ಪಾಪಪರಿಹಾರವಾಗುವದಕ್ಕೂ ಅಭಿಮುಖವಾಗಿರುತ್ತವೆ. ಅಲ್ಲಿ ಮುಂಗುರ್ತಾಗಿ ತೋರಿಸಿ ಇರುವಂಥಾದ್ದು ಇಲ್ಲಿ ನಿಜವಾಗಿ ಕೊಡಲ್ಪಡುತ್ತದೆ.

೨) ಮತ್ತಾ. ೨೬, ೨೧ ಇತ್ಯಾದಿ. ಮಾರ್ಕ. ೧೪ ಸಂ. ಲೂಕ. ೨೨. ಯೋಹಾ. ೧೩. — ತರುವಾಯ ಪಸ್ಕಕುರಿಯನ್ನು ತಂದರು; ಪಸ್ಕವು ಆರಂಭವಾಯಿತು. ರಕ್ಷಕನು ಹೇಳಿದ್ದು: "ನಾನು ಶ್ರಮೆ ಪಡುವದಕ್ಕಿಂತ ಮುಂಚೆ ಈ ಪಸ್ಕವನ್ನು ನಿಮ್ಮ ಸಂಗಡ ಉಣ್ಣುವದಕ್ಕೆ ಬಹಳವಾಗಿ ಅಪೇಕ್ಷಿಸಿದ್ದೇನೆ. ಯಾಕಂದರೆ ನಿಮಗೆ ಹೇಳುತ್ತೇನೆ, ಅದು ದೇವರ ರಾಜ್ಯದಲ್ಲಿ ಸಂಪೂರ್ಣವಾಗುವ ಪರ್ಯಂತರ ನಾನು ಇನ್ನೂ ಅದನ್ನು ಉಣ್ಣುವದಿಲ್ಲ. ಮತ್ತು ಹಬ್ಬದ ಮರ್ಯಾದೆಯ ಪ್ರಕಾರ ಮೊದಲನೇ ಕುಡಿಕೆಯನ್ನು ಹಂಚಿ ಕೊಡುವಾಗ, (ಲೂಕ. ೨೨, ೧೭.) ಅವನು ಹೇಳಿದ್ದು "ನಿಶ್ಚಯವಾಗಿ ನಿಮಗೆ ಹೇಳುತ್ತೇನೆ: ನಾನು ದೇವರ ರಾಜ್ಯದಲ್ಲಿ ಅದನ್ನು ಹೊಸದಾಗಿ ಕುಡಿಯುವ ಆ ದಿನದ ವರಿಗೂ ದ್ರಾಕ್ಷೆಯ ಫಲದಲ್ಲಿ ಇನ್ನು ಕುಡಿಯೆನು" ಅವರು ಪಸ್ಕಭೋಜನವನ್ನು ಮಾಡುತ್ತಾ ಇರುವಾಗ್ಯೆ ಯೇಸು ಹೇಳಿದ್ದು: "ನಿಶ್ಚಯವಾಗಿ ನಿಶ್ಚಯವಾಗಿ ನಿಮಗೆ ಹೇಳುತ್ತೇನೆ, ನಿಮ್ಮಲ್ಲಿ ಒಬ್ಬನು ನನ್ನನ್ನು ಒಪ್ಪಿಸಿ ಕೊಡುವನು". ಮತ್ತು ತಾನು ಯಾರ ವಿಷಯವಾಗಿ ಮಾತಾಡಿದ್ದೆಂಬದನ್ನು ರೊಟ್ಟೀ ತುಂಡು ಕೊಡುವದರಿಂದ ತನ್ನ ಎದೆಯಲ್ಲಿ ಬಿದ್ದಿರುವ ಶಿಷ್ಯನಿಗೆ ತೋರಿಸಿದ ಮೇಲೆ, ಅವನು ಯೂದನಿಗೆ ಹೇಳಿದ್ದು: "ನೀನು ಮಾಡುವದನ್ನು ಬೇಗ ಮಾಡು." ಈಗ ಯೂದನು ಕಡೇ ಸಾರಿಗೆ ನಿಶ್ಚೈಸಿ ಕೊಳ್ಳ ಬೇಕಾಯಿತು. ಆದರೆ ತುಂಡು ತಕ್ಕೊಂಡ ಮೇಲೆ ಸೈತಾನನು ಅವನೊಳಗೆ ಹೊಕ್ಕನು. ಅವನು ಕೂಡಲೇ ಹೊರಟನು. "ಆಗ" ಅವನಲ್ಲಿಯೂ ಅವನ ಸುತ್ತಲೂ "ರಾತ್ರಿಯಾಗಿತ್ತು".

ಪರಿಶಿಷ್ಟ. ಮತ್ಥಾಯನು ಒಪ್ಪಿಸಿ ಕೊಡುವವನನ್ನು ತೋರಿಸಿ ಕೊಟ್ಟದ್ದನ್ನು ಪರಿಶುದ್ಧ ರಾತ್ರಿಭೋಜನದ ಸ್ಥಾಪನೆಯ ಸಂಗತಿಗಿಂತ ಮೊದಲು ಹೇಳುತ್ತಾನೆ. ಆದರೆ ಲೂಕನು ಅದಾದ ತರುವಾಯ ಹೇಳುತ್ತಾನೆ. ಹಾಗಾದರೆ ಯೂದನು ರಾತ್ರಿಭೋಜನ ಸ್ಥಾಪಿಸುವಾಗ್ಯೆ ಅಲ್ಲಿದ್ದನೋ ಇಲ್ಲವೆ ಮೊದಲೇ ಹೋಗಿದ್ದನೋ ಎಂಬ ವಿಷಯದಲ್ಲಿ ಸಂದೇಹವಿರ ಬಹುದು. ಆದರೆ ಲೂಕನ ೨೨, ೨೦ ವಚನದ ಪ್ರಕಾರ ರಾತ್ರಿಭೋಜನ ಸ್ಥಾಪನೆಯು ಪಸ್ಕಬೋಜನದ ಮೇಲೆಯೂ ಒಪ್ಪಿಸಿ ಕೊಡುವವನನ್ನು ತೋರಿಸಿ ಕೊಟ್ಟದ್ದು. ಹ್ಯಾಗಾದರೂ ಪಸ್ಕಭೋಜನ ಆಗುವ ಸಮಯದಲ್ಲಿಯೂ (ಮತ್ಥಾ. ೨೬, ೨೩. ಯೋಹಾ. ೧೩, ೨೬). ಸಂಭವಿಸಿ ಇರುವದರಿಂದಲೂ ಯೂದನು ತುಂಡು ತಕ್ಕೊಂಡ ಕೂಡಲೇ ಹೋಗಿ ಬಿಟ್ಟಿರುವದರಿಂದಲೂ (ಯೋಹಾ. ೧೩, ೩೦ ವಚನ) ಯೂದನು ರಾತ್ರಿಭೋಜನದ ಸ್ಥಾಪನೆಯ ಸಮಯದಲ್ಲಿ ಅಲ್ಲಿ ಇರಲಿಲ್ಲವೆಂಬ ಆಲೋಚನೆಯನ್ನು ಅಂಗೀಕರಿಸ ಬೇಕೆಂದು ಕಾಣುತ್ತದೆ.

೩) ಮತ್ತಾ. ೨೬, ೨೬—೨೯. (ಮಾರ್ಕ. ೧೪; ಲೂಕ. ೨೨. ೧ ಕೊರಿಂಥ್ಯರ ೧೧. ಸಂ.). ಒಪ್ಪಿಸಿ ಕೊಡುವವನು ಮಂಡಲಿಯನ್ನು ಬಿಟ್ಟು ಹೋಗಿದ್ದಾನೆ ಮಾತ್ರವೇ ಅಷ್ಟರೊಳಗೆ ರಕ್ಷಕನ ಪ್ರೀತಿಯು ಬಹು ಗಂಭೀರವಾದ ವಾಕ್ಯಗಳಿಂದ ಪ್ರತ್ಯಕ್ಷವಾಗುತ್ತದೆ. “ಈಗ ಮನುಷ್ಯನ ಮಗನು ಮಹಿಮೆ ಪಟ್ಟಿದ್ದಾನೆ, ಮತ್ತು ದೇವರು ಅವನಲ್ಲಿ ಮಹಿಮೆ ಪಟ್ಟಿದ್ದಾನೆ. ಮಕ್ಕಳೇ ಇನ್ನು ಸ್ವಲ್ಪ ಕಾಲ ನಿಮ್ಮ ಸಂಗಡ ಇದ್ದೇನೆ, ಒಬ್ಬರನ್ನೊಬ್ಬರು ಪ್ರೀತಿ ಮಾಡ ಬೇಕೆಂಬ ಹೊಸ ಆಜ್ಞೆಯನ್ನು ನಿಮಗೆ ಕೊಡುತ್ತೇನೆ, ನಾನು ನಿಮ್ಮನ್ನು ಪ್ರೀತಿ ಮಾಡಿದ ಹಾಗೆ ನೀವು ಒಬ್ಬರನ್ನೊಬ್ಬರು ಪ್ರೀತಿ ಮಾಡ ಬೇಕು, ಒಬ್ಬರಲ್ಲೊಬ್ಬರು ಪ್ರೀತಿ ಇದ್ದರೆ ಇದರಲ್ಲಿ ನೀವು ನನ್ನ ಶಿಷ್ಯರಾಗಿದ್ದೀರೆಂದು ಎಲ್ಲರೂ ತಿಳಕೊಳ್ಳುವರು.” ಅಷ್ಟರಲ್ಲಿ ಪಸ್ಕಭೋಜನವು ತಾನೇ ಮುಗಿದಿತ್ತು. ಆಗ್ಯೆ ಯೇಸುವು ತಿರಿಗಿ ರೊಟ್ಟಿಯನ್ನು ತಕ್ಕೊಂಡು ಸ್ತೋತ್ರ ಮಾಡಿ ಮುರಿದು ಶಿಷ್ಯರಿಗೆ ಕೊಟ್ಟು; “ತಕ್ಕೊಳ್ಳಿರಿ, ತಿನ್ನಿರಿ—ಇದೇ ನಿಮಗೋಸ್ಕರ ಮುರಿಯಲ್ಪಡುವ ನನ್ನ ಶರೀರವಾಗಿದೆ, ಇದನ್ನು ನನ್ನನ್ನು ನೆನಸುವದಕ್ಕೋಸ್ಕರ ಮಾಡಿರಿ” ಅಂದನು.

ಅದೇ ಪ್ರಕಾರ ಕುಡಿಕೆಯನ್ನು ತಕ್ಕೊಂಡು ಹೇಳಿದ್ದು: “ಈ ಕುಡಿಕೆಯು ನಿಮಗೋಸ್ಕರ ಚೆಲ್ಲಲ್ಪಡುವ ನನ್ನ ರಕ್ತದಲ್ಲಿರುವ ಹೊಸ ಒಡಂಬಡಿಕೆಯಾಗಿದೆ. ಇದನ್ನು ನೀವು ಕುಡಿಯುವಷ್ಟು ಸಾರಿ ನನ್ನ ನೆನಪಿಗೋಸ್ಕರ ಮಾಡಿರಿ”.

ಪರಿಶಿಷ್ಟ. ಪರಿಶುದ್ಧ ರಾತ್ರಿಭೋಜನದಲ್ಲಿ ಹಳೇ ಒಡಂಬಡಿಕೆಯ ಪಸ್ಕಭೋಜನದ ಮುಂಗುರ್ತಾಗಿರುವ ಯೋಚನೆಯು ಸಂಪೂರ್ತಿಯಾಯಿತು. ಕ್ರಿಸ್ತನು ಸಮವಾಗಿರುವ ಮೂಲಗುರ್ತಾದ ಕುರಿಮರಿಯಾಗಿರುತ್ತಾನೆ (೧ ಕೊರಿಂಥ. ೫, ೭. ಯೋಹಾ. ೧೯, ೩೬). ಯಾಕಂದರೆ ಅವನಲ್ಲಿ ವಿಶ್ವಾಸವಿಡುವವರಾದ ನಾವೂ ಎಲ್ಲರೂ ವಿನಾಶದಿಂದ ಜೋಕೆಯಾಗುವ ಹಾಗೆಯೂ ಪಾಪದ ದಾಸತ್ವದಿಂದ ರಕ್ಷಿಸಲ್ಪಡುವ ಹಾಗೆಯೂ ಅವನು ತನ್ನನ್ನೇ ನಮಗೋಸ್ಕರ ಮರಣಕ್ಕೆ ಕೊಟ್ಟು ಬಿಟ್ಟನು. ಹಾಗಾದರೆ ಅವನು ನಮಗೋಸ್ಕರ ಮರಣಕ್ಕೆ ಅರ್ಪಿಸಿದಂಥಾ ಉತ್ಥಾನದಿಂದ ತಿರಿಗಿ ಅನುಜೀವಿಸಿ ಮಹಿಮೆ ಪಟ್ಟಂಥಾ ದಿವಾರೋಹಣದ ಮೂಲವಾಗಿ ದಿವ್ಯಬಲ ಮಹಿಮೆಗಳ ಪೂರ್ಣತೆಯಿಂದ ಸನ್ನದ್ಧರಾದಂಥಾ ತನ್ನ ಮಾಂಸ ರಕ್ತಗಳಿಂದ ನಮಗೆ ಭೋಜನ ಕೊಡುತ್ತಾನೆ (ಯೋಹಾ. ೫). ರಾತ್ರಿಭೋಜನವು ಅತ್ಯಂತವಾಗಿಯೂ ಪೂರ್ಣ ನಿಜವಾಗಿಯೂ ಇರುವ ಜೀವದನ್ಯೋನ್ಯತ್ವವನ್ನು ಹೊಸ ಒಡಂಬಡಿಕೆಯ

ವಿಶ್ವಾಸಿಗಳಿಗೆ ರಕ್ಷಕನ ಸಂಗಡ ಯಾವಾಗಲೂ ಉಂಟು ಮಾಡುತ್ತದೆ ಎಂಬದು § ೧೪೪ ನೆಯಲ್ಲಿ ತೋರಿಸಲ್ಪಡುವದು. ಇಲ್ಲಿ ಈಗ ಸ್ಥಾಪನೆಯ ಭೋಜನದ ವಿಷಯವಾಗಿ ಮಾತ್ರವೇ ಆಲೋಚಿಸ ಬೇಕು. ಈ ಭೋಜನದ ಮುಖ್ಯ ಅಭಿಪ್ರಾಯವು ಪ್ರಸಾದದ ಸ್ಥಾಪನೆಯು ಸಹಾ ಆಗಿತ್ತು. ಆದರೂ ಈ ಸ್ಥಾಪನೆಯ ಭೋಜನವು ತನ್ನಷ್ಟಕ್ಕೆ ಬರಿದಾಗಿಯೂ ಭವಿಷ್ಯಕ್ಕೆ ಮಾತ್ರವೇ ಅಭಿಪ್ರಾಯವುಳ್ಳದ್ದಾಗಿಯೂ ಇರುವ ಬರೇ ರೂಪವಾಗಿರಲಿಲ್ಲ; ಅದು ನಿಶ್ಚಯವಾಗಿ ಶಿಷ್ಯರಿಗೆ ಕರ್ತನ ಸಂಗಡ ಜೀವದನ್ಯೋನ್ಯವನ್ನು ಉಂಟು ಮಾಡಿತು. ಯಾಕಂದರೆ ಮರಣದಲ್ಲಿ ಸಂಪೂರ್ಣವಾದ ಕ್ರಿಸ್ತನ ಶ್ರಮವೂ ಉತ್ಥಾನದಲ್ಲಿ ಸಂಪೂರ್ಣವಾದ ಅವನ ಶರೀರದ ಮಹಿಮೆ ಪಡೋಣವೂ ಆಗಲೇ ಆರಂಭವಾಗಿಯೂ ಉಂಟಾಗಿಯೂ ಇತ್ತು. ಮಹಿಮೆ ಪಟ್ಟ ಶರೀರವು ಆಗಲೇ ಅವನಲ್ಲಿ ಇತ್ತು. ಆದರೆ ಪಾಪವುಳ್ಳ ಮಾಂಸದ ಆಕಾರದಿಂದ ಇನ್ನು ಮುಚ್ಚಿದ್ದಾಗಿತ್ತು. ಮಹಿಮೆ ಪಟ್ಟ ಪರ್ವತದಲ್ಲಿ ಮೊಬ್ಬಾದ ಮುಚ್ಚಳಿವನ್ನು ಅವನು ಹ್ಯಾಗೆ ಒಡದನೋ ಅದೇ ಪ್ರಕಾರ ಅವನು ಈಗ ಸಹಾ ರೊಟ್ಟಿ ದ್ರಾಕ್ಷೆರಸಗಳಿಗೆ ನಿಜವಾದ ಸಂಬಂಧವುಳ್ಳವನಾಗಲಿಕ್ಕೆ ಶಕ್ತನಾಗಿದ್ದನು.

೪) ಯೋಹಾ. ೧೪.—೧೭ ವರೆಗೆ. ಈ ಶುದ್ಧ ಕ್ರಿಯೆ ಆದ ಮೇಲೆ ಯೇಸುವು ಶಿಷ್ಯರಿಗೆ ಕಡೇ ಬೋಧನೆಗಳನ್ನು ಕೊಟ್ಟನು. ಇವುಗಳನ್ನು ಯಜಮಾನನ ಎದೆಯಲ್ಲಿ ಬಿದ್ದಿದ್ದ ಶಿಷ್ಯನಾದ (ಯೋಹಾನನು) ಬರದಿಟ್ಟನು. ಅವುಗಳು ರಕ್ಷಕನು ಎಲ್ಲಾ ಕಾಲಗಳಲ್ಲಿ ಬದುಕುವ ತನ್ನ ಶಿಷ್ಯರಿಗೆ ಕೊಡುವ ಮರಣಶಾಸನದ ಹಾಗೆ ಉಂಟು. ಇದರಲ್ಲಿ ಮನುಷ್ಯನ ಮಗನು ಮಾತ್ರವೇ ಹೃದಯದಲ್ಲಿ ಧರಿಸಿದ ಅತ್ಯಂತ ಪ್ರೀತಿಯ ಮಿತಿ ಮೀರುವ ಸಂಪೂರ್ಣತೆಯು ಮನುಷ್ಯನ ತುಟಿಗಳಿಂದ ಮೊದಲು ಯಾವಾಗಲೂ ಬಾರದಂಥಾ ಮಾತುಗಳ ಸುಂದರತ್ವದಲ್ಲಿಯೂ ಮನೋಹರತ್ವದಲ್ಲಿಯೂ ಕಂಡು ಬರುತ್ತದೆ. ಅವನು ತನ್ನವರಿಗೋಸ್ಕರ ನಿವಾಸಗಳನ್ನು ಸಿದ್ಧ ಮಾಡಲಕ್ಕಾಗಿ ತಾನು ತಂದೆಯ ಹತ್ತರ ಹೋಗುತ್ತೇನೆಂಬದನ್ನೂ (೧೪. ಸಂಧಿ) ಅವನಿಗೂ ತನಗೂ ತನ್ನವರಿಗೂ ಇರುವ ಅತ್ಯಂತವಾದ ಜೀವದನ್ಯೋನ್ಯವನ್ನೂ ("ನಾನು ದ್ರಾಕ್ಷೆಬಳ್ಳಿ, ನೀವು ಕುಡಿಗಳು") ಯೋಹಾ. ೧೫. ಅವರನ್ನೂ ಎಲ್ಲಾ ಸತ್ಯದಲ್ಲಿ ನಡಿಸುವಂಥಾ ಆದರಿಕನನ್ನು ಕಳುಹಿಸುವದನ್ನೂ (ಸಂಧಿ ೧೬) ಕುರಿತು ಮಾತಾಡಿ ಪ್ರಧಾನಯಾಜಕನ ಪ್ರಾರ್ಥನೆ ಮಾಡಿ ತೀರಿಸುತ್ತಾನೆ (ಯೋಹಾ. ೧೭ ಸಂ.). ಇದರಲ್ಲಿ ತಂದೆಯ ಎದೆಯಲ್ಲಿ ತನಗೆ ಆದಿಯಿಂದ ಇದ್ದ ಮಹಿಮೆ ಎಲ್ಲಾದರಲ್ಲಿ ಪೂರ್ಣ ಪಾಲನ್ನು ತನ್ನವರಿಗೆ ವಾಗ್ದತ್ತ ಮಾಡುತ್ತಾನೆ.



## § 145. ಗೆತ್ಸೇಮನೆಯಲ್ಲಿ ಅವನಲ್ಲಿ ಉಂಟಾದ ಮರಣಸಂಕಟ ಮತ್ತು ಅವನನ್ನು ಹಿಡಿದದ್ದು

೧) ಮತ್ತಾ. ೨೬, ೩೦—೩೫. (ಮಾರ್ಕ. ೧೪. ಲೂಕ. ೨೨). ಭೋಜನವಾದ ತರುವಾಯ ಕ್ರಿಸ್ತನು ಶಿಷ್ಯರ ಸಂಗಡ ಗೆತ್ಸೇಮನೇ (ಅಂದರೆ ಎಣ್ಣೆಯಗಾಣ) ಎಂಬಲ್ಲಿಗೆ ಹೋದನು. ಇದು ಇಪ್ಪೆಯ ಗುಡ್ಡದಲ್ಲಿತ್ತು. ಮತ್ತು ಸ್ನೇಹಿತರ ಸ್ಥಳವಾಗಿತ್ತು. ಅದು ಕರ್ತನಿಗೆ ಹಿತಕರವಾದ ಸ್ಥಳವಾಗಿತ್ತೆಂದು ಯೂದಸಿಗೆ ಸಹಾ ತಿಳಿದಿತ್ತು. ಅಷ್ಟು ಹತ್ತರ ಇರುವ ಶ್ರಮಗಳ ವಿಷಯವಾದ ಆಲೋಚನೆಗಳಿಂದ ತುಂಬಿದವನಾಗಿ ಶಿಷ್ಯರಿಗೆ ಅವರೆಲ್ಲರು ಆ ರಾತ್ರಿಯಲ್ಲಿ ಅವನಲ್ಲಿ ಆತಂಕ ಪಡುವರೆಂಬದನ್ನು ತಿಳಿಸಿದನು. ಉತ್ವೇಗದ ಪೇತ್ರನು ತನ್ನ ಪ್ರೀತಿವಿಶ್ವಾಸಗಳನ್ನು ತಿಳಿದವನಾಗಿ, ಆದರೆ ತನ್ನ ಸ್ವಂತ ಬಲಹೀನತ್ವವನ್ನು ಒಳ್ಳೇ ಅನುಭವದಿಂದ ತಿಳಿಯದವನಾಗಿ ಬೇಗ ಉತ್ತರ ಕೊಟ್ಟು ಹೇಳಿದ್ದು: “ಎಲ್ಲರೂ ನಿನ್ನಲ್ಲಿ ಆತಂಕ ಪಟ್ಟರೂ ನಾನು ಎಂದೂ ಆತಂಕ ಪಡೆನು” ಮತ್ತು ಕರ್ತನು ಅವನಿಗೆ: “ಈ ರಾತ್ರಿಯಲ್ಲಿ ಕೋಳಿ ಎರಡು ಸಾರಿ ಕೂಗುವದಕ್ಕಿಂತ ಮುಂಚೆ ನೀನು ನನ್ನನ್ನು ಮೂರು ಸಾರಿ ಅಲ್ಲಗಳೆಯುವಿ.” ಎಂದು ಖಂಡಿತವಾಗಿ ತಿಳಿಸಿದಾಗ, ಅವನು ಸ್ವಂತ ಭರವಸದಲ್ಲಿ ದೃಢವಾಗಿದ್ದು ಹೇಳಿದ್ದು: “ನಿನ್ನ ಸಂಗಡ ಸಾಯ ಬೇಕಾದರೂ ಸಿನ್ನನ್ನು ಬಿಟ್ಟು ಹೋಗೆನು.” ಅದೇ ಪ್ರಕಾರ ಎಲ್ಲಾ ಶಿಷ್ಯರು ಹೇಳಿದರು.

೨) ಮತ್ತಾ. ೨೬, ೩೬—೪೬. ಗೆತ್ಸೇಮನೆಯ ತೋಟದಲ್ಲಿ ಅವನು ಪೇತ್ರನನ್ನೂ ಯೋಹಾನನನ್ನೂ ಯಾಕೋಬನನ್ನೂ ತನ್ನ ಹತ್ತರ ಕರದು, ಅವರ ಮುಂದೆ ನಡುಗಿ, ವ್ಯಸನ ಪಡಲಾರಂಭಿಸಿ ಹೇಳಿದ್ದೇನಂದರೆ: “ನನ್ನ ಪ್ರಾಣವು ಮರಣದ ಮಟ್ಟಿಗೂ ದುಃಖಾಕ್ರಾಂತವಾಗಿದೆ; ಇಲ್ಲಿ ಇದ್ದು ನನ್ನ ಸಂಗಡ ಎಚ್ಚರವಾಗಿರಿ” ಮತ್ತೆ ಸ್ವಲ್ಪ ದೂರ ಹೋಗಿ ಮೋರೆ ಕೆಳಗಾಗಿ ಬಿದ್ದು, ಅವನು ಪ್ರಾರ್ಥನೆ ಮಾಡಿ ಹೇಳಿದ್ದೇನಂದರೆ: ನನ್ನ ತಂದೆಯೇ ಸಾಧ್ಯವಾದರೆ ಈ ಕುಡಿಕೆಯು ನನ್ನನ್ನು ಬಿಟ್ಟು ಹೋಗಲಿ ಆದಾಗ್ಯೂ ನನ್ನ ಚಿತ್ತದ ಪ್ರಕಾರವಲ್ಲ, ನಿನ್ನ ಚಿತ್ತದ ಪ್ರಕಾರವಾಗಲಿ ಮತ್ತೆ ಶಿಷ್ಯರ ಬಳಿಗೆ ಬಂದು, ಅವರು ನಿದ್ದೆ ಮಾಡುವದನ್ನು ಕಂಡು, ಪೇತ್ರನಿಗೆ: “ಹಾಗಾದರೆ ಒಂದು ಘಳಿಗೆಯಾದರೂ ನನ್ನ ಸಂಗಡ ಎಚ್ಚರವಾಗಿರಲಾರಿರೋ ಶೋಧನೆಯಲ್ಲಿ ಶೇರದ ಹಾಗೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ. ಆತ್ಮವು ಸಿದ್ಧವಾಗಿದೆ; ಆದರೆ ಮಾಂಸವು ಬಲಹೀನವಾಗಿದೆ” (ಅಂದನು); ತಿರಿಗಿ ಹೋಗಿ ೨ನೇ ಸಾರಿ “ನನ್ನ ತಂದೆಯೇ ನಾನು ಅದನ್ನು ಕುಡಿದ ಹೊರತು ಈ ಕುಡಿಕೆಯು ನನ್ನನ್ನು ಬಿಟ್ಟು ಹೋಗ ಕೂ

ಪಡದಾದರೆ ನಿನ್ನ ಚಿತ್ತವು ಆಗಲಿ!" ಎಂದು ಪ್ರಾರ್ಥಿಸಿದನು. ತಿರಿಗಿ ಬಂದಾಗ ಅವರು ತಿರಿಗಿ ನಿದ್ರೆ ಮಾಡುವದನ್ನು ಕಂಡನು. ಆಗ್ಯೆ ಹೋಗಿ ೩ನೇ ಸಾರಿ ಅದೇ ಮಾತು ಹೇಳಿ ಪ್ರಾರ್ಥಿಸಿದನು. ಮತ್ತು ಅವನು ಮರಣದ ಸಂಗಡ ಹೋರಾಟದಲ್ಲಿದ್ದು ಇನ್ನು ಚುರುಕಾಗಿ ಪ್ರಾರ್ಥಿಸಿದನು. ಇದಲ್ಲದೆ ಅವನ ಬೆವರು ಭೂಮಿಗೆ ಬೀಳುವ ರಕ್ತದ ಬಿಂದುಗಳ ಹಾಗಾಯಿತು. ಆದರೆ ಪರಲೋಕದಿಂದ ಬಂದ ಒಬ್ಬ ದೂತನು ಅವನಿಗೆ ಕಾಣಿಸಿ ಕೊಂಡು ಅವನಿಗೆ ಬಲ ಪಡಿಸಿದನು. ಇದಾದ ಮೇಲೆ ಅವನು ತಿರಿಗಿ ಶಿಷ್ಯರ ಹತ್ತರ ಬಂದು ಹೇಳಿದ್ದು: "ಇನ್ನು ನಿದ್ದೆ ಮಾಡಿ ವಿಶ್ರಮಿಸಿ ಕೊಳ್ಳಿರಿ! ಇಗೋ ಘಳಿಗೆ ಸಮೀಪವಾಯಿತು, ಮನುಷ್ಯನ ಮಗನು ಪಾಪಿಗಳ ಕೈಯಿಗೆ ಒಪ್ಪಿಸಲ್ಪಡುತ್ತಾನೆ, ಏಳಿರಿ! ಹೋಗುವಾ! ಇಗೋ ನನ್ನನ್ನು ಒಪ್ಪಿಸಿ ಕೊಡುವವನು ಸಮೀಪವಾಗಿದ್ದಾನೆ".

ಪರಿಶಿಷ್ಟ. ಕ್ರಿಸ್ತನು ಎಲ್ಲಾದರಲ್ಲಿಯೂ ನಮ್ಮ ಹಾಗೆಯೇ ಆಗಿ ಸಕಲ ವಿಷಯಗಳಲ್ಲಿ ಪಾಪವೇ ಹೊರ್ತು ನಮ್ಮ ಹಾಗೆಯೇ ಶೋಧಿಸಲ್ಪಡ ಬೇಕಾಯಿತು (ಹೆಬ್ರಿ. ೪, ೧೫). ಭೂಸಂಬಂಧವಾದ ಅಭಿಲಾಷೆ ಮಹಿಮೆಗಳ ಎಲ್ಲಾ ಮೋಸದ ಸಂಪೂರ್ತಿಯು ಹ್ಯಾಗೋ ಹಾಗೆಯೇ ಮನುಷ್ಯರ ಕಷ್ಟಗಳ ಭಾರವೆಲ್ಲಾ ಸಹಾ ಶೋಧಿಸುವಂಥಾದ್ದಾಗಿ ಅವನಿಗೆ ಎದುರಾಗ ಬೇಕಾಯಿತು. ರಕ್ಷಕನ ಶುದ್ಧ ಮನುಷ್ಯತ್ವವು ಸ್ವಂತ ಆಧಾರವುಳ್ಳದ್ದಾಗಿ ಯುದ್ಧ ಮಾಡ ಬೇಕಾದದ್ದಾದರೆ ಮಾತ್ರವೇ ಅವನಿಗೆ ಶೋಧನೆ ಬರ ಬಹುದಾಗಿಯೂ ಜಯವು ಹೀಗೆ ಮಾತ್ರವೇ ವಿಶೇಷವಾದದ್ದಾಗಿಯೂ ಹ್ಯಾಗೆ ಇರುತ್ತದೋ ಹಾಗೆಯೇ ಪ್ರಾಣಸಂಕಟದ ಆಧಾರವು ದೇವರಿಂದ ಬಿಡಲ್ಪಟ್ಟ ಸ್ಥಿತಿಯೇ ಆಗಿತ್ತು (ಮತ್ತಾ. ೨೭, ೪೬.). ಅಂಧಕಾರದ ಪ್ರಭುವಿಗೆ ತನ್ನ ಬಲವನ್ನು ದೇವರ ಪರಿಶುದ್ಧನ ಮೇಲೆ ತೋರಿಸಲಿಕ್ಕೆ ಅನುಜ್ಞೆಯುಳ್ಳ ಸಮಯವು ಬಂದಿತ್ತು. ಸೈತಾನನು ಅಲ್ಲಿ ರಕ್ಷಕನಿಗೆ ಲೋಕದ ಎಲ್ಲಾ ರಾಜ್ಯಗಳನ್ನೂ ಮಹಿಮೆಯನ್ನೂ ಹ್ಯಾಗೆ ತೋರಿಸಿದನೋ ಹಾಗೆಯೇ ಅವನು ತನ್ನ ಕೆಲಸವನ್ನು ಪೂರೈಸುವದಕ್ಕಾಗಿ ತಾಳ ಬೇಕಾದ ಶ್ರಮಗಳ ಪೂರ್ಣ ಭಯಂಕರತ್ವವನ್ನು ತೋರಿಸಿದನು. ಆದರೆ ಅಲ್ಲಿ ಹ್ಯಾಗೋ ಹಾಗೆಯೇ ಇಲ್ಲಿ ಸಹಾ ದಿವ್ಯ ಚಿತ್ತಕ್ಕೆ ಪ್ರತಿಕಕ್ಷೆ ಮಾಡದ ವಿಧೇಯತ್ವವೇ ಜಯದ ಧ್ವಜವಾಗಿರುತ್ತದೆ. ಮತ್ತು ಅಲ್ಲಿ ಹ್ಯಾಗೋ ಹಾಗೆ ಇಲ್ಲಿ ಸಹಾ ಕಠಿಣವಾದ ಯುದ್ಧವು ತೀರಿದ ಮೇಲೆ ಪರಲೋಕದಿಂದ ದೂತರು ಬಂದು, ಅವನನ್ನು ಬಲ ಪಡಿಸುತ್ತಾರೆ. ಈ ಸಂಗತಿಯಲ್ಲಿ ಎರಡು ಆಶ್ಚರ್ಯಕರವಾದದ್ದು: ಬರಲಿಕ್ಕಿರುವ ಶ್ರಮಕ್ಕಾಗಿ ರಕ್ಷಕನು ನಡುಗಿ ಭಯಭ್ರಾಂತನಾದದ್ದೂ ಕಡೇ ಶ್ರಮವು

ಪೂರ್ಣವಾಗಿ ಅವಶ್ಯವಿರುತ್ತದೆಂಬ ವಿಷಯದಲ್ಲಿ ಪೂರ್ಣ ನಿಶ್ಚಯವಿಲ್ಲದೆ ಇದ್ದದ್ದೂ ಇದೇ. ಇದು ಅವನು ಇಷ್ಟು ವರೆಗೆ ಮುಂದಿನ ಶ್ರಮದ ವಿಷಯವಾಗಿ ಮಾತಾಡುವಾಗ್ಯೆ ಅವನಿಗಿದ್ದ ಶಾಂತಿ ಭದ್ರತ್ವಗಳಿಗೂ ಕೆಲವು ತಾಸುಗಳ ಮೊದಲು ಕ್ರೂಜೆಯ ಮರಣವು ಪೂರ್ಣವಾಗಿ ಅವಶ್ಯವಾಗಿರುತ್ತದೆಂದು ಅವನಿಗಿದ್ದ ಶುದ್ಧ ಜ್ಞಾನಕ್ಕೂ ಪ್ರತೀಕಾರವಾಗಿರುತ್ತದೆಂಬ ಹಾಗೆ ಕಾಣುತ್ತದೆ. ಆದರೂ ತನ್ನ ಮೇಲೆ ತಕ್ಕೊಂಡ ಕೆಲಸವನ್ನು ಪೂರ್ಣ ಮಾಡಲಿಕ್ಕೆ ಬೇಕಾದದ್ದನ್ನೆಲ್ಲಾ ಅತಿ ಕಠಿಣವಾದದ್ದನ್ನು ಸಹಾ ಸಹಿಸಲಿಕ್ಕೆ ಮೊದಲಿನ ಹಾಗೆಯೇ ಈಗ ಸಹಾ ಖಂಡಿತ ಮನಸ್ಸುಳ್ಳವನಾಗಿರುತ್ತಾನೆ. ಆದರೆ ಅವನು ಬೇಡಿಕೊಳ್ಳುವದೇನಂದರೆ: "ನಾನು ಇಷ್ಟು ವರೆಗೆ ತಾಳಿಕೊಂಡದ್ದು ನಿತ್ಯ ನೀತಿಗೆ ಸಾಕಾಗಲಿಕ್ಕೂ ಎಲ್ಲಾ ಲೋಕದ ಪಾಪಗಳನ್ನು ವಿಮೋಚಿಸಲಿಕ್ಕೂ ತಕ್ಕದ್ದಾಗಿರುತ್ತದೆಂದು ನೆನಸ ಬಹುದಾಗಿದ್ದರೆ ಈ ಕಡೇ ಶ್ರಮದ ಕುಡಿಕೆಯನ್ನು ನನ್ನಿಂದ ತೆಗಿ" ಆದರೆ ಉತ್ತರವು ಹಾಗಾಗದೆಂದು ಆದಾಗ, ಅವನು ಕೂಡಲೇ ಸಿದ್ಧವಾಗಿರುತ್ತಾನೆ; ಅವನ ಚಿತ್ತವು ಅಲ್ಲ, ತಿಳುವಿಕೆ ಮಾತ್ರವೇ ಕುಂದಿತ್ತು: ಪ್ರಶ್ನೆಯು ಸಂಶಯದಿಂದ ಅಲ್ಲ, ಅನಿಶ್ಚಯದಿಂದ ಉಂಟಾಯಿತು. ಮತ್ತು ಈ ಅನಿಶ್ಚಯತ್ವಕ್ಕೆ ಅವನಲ್ಲಿದ್ದ ದಿವ್ಯ ತಿಳುವಿಕೆಯ ಸಂಪೂರ್ಣತೆಯು ಕ್ಷಣ ಮಾತ್ರಕ್ಕೆ ಕುಂದಿ ಹೋದದ್ದೇ ಕಾರಣವಾಯಿತು. ಆದರೆ ರಕ್ಷಕನು ನಡುಗಿ ಭಯಭ್ರಾಂತನಾದದ್ದಕ್ಕೆ ಹೇಳ ತಕ್ಕದ್ದೇನಂದರೆ—ದುಖ್ಖ ಪಡುವದೂ ಕಣ್ಣೀರಿಡುವದೂ ಪಾಪವಾದದ್ದಲ್ಲವೆಂದೂ ಬರೇ ಮನುಷ್ಯಸ್ವಭಾವದ್ದಾಗಿರುತ್ತದೆಂದೂ ಆಲೋಚಿಸ ತಕ್ಕದ್ದು; ಮತ್ತು ದುಖ್ಖ ಪಡ ಬಾರದೆಂಬ ಯೋಗಿಗಳ ನ್ಯಾಯವು ಮನುಷ್ಯಸ್ವಭಾವವನ್ನೂ ಸನ್ಮಾನಿಸುವದನ್ನೂ ಬಿಟ್ಟು ಅವಮಾನ ಪಡಿಸುವಂಥಾ ಸುಳ್ಳು ಕೋರಿಕೆಗೆ ಮಾಡುವಂಥಾದ್ದಾಗಿರುತ್ತದೆ. ಅವನು ಸಲ್ಲಿಸ ಬೇಕಾಗಿದ್ದ ಸಮಸ್ತ ಮನುಷ್ಯಸಂತತಿಯ ಅಮಿತವಾಗಿಯೂ ಭಯಂಕರವಾಗಿಯೂ ಇರುವ ಪಾಪಭಾರವು ಪರಿಶುದ್ಧವಾಗಿಯೂ ದಿವ್ಯ ಸಹಾಯ ಇಲ್ಲದ್ದಾಗಿಯೂ ಇರುವ ಅವನ ಹೃದಯದ ಮೇಲೆ ಜಜ್ಜಿ ಬಿಡುತ್ತದೋ ಎಂಬ ಹಾಗೆ ಬಿದ್ದಿತ್ತು. ಅವನು ಎದುರಾಗಿ ಹೋದ ಭಯಂಕರವಾದ ಮರಣದ ಭಯಗಳೆಲ್ಲಾ ಶುದ್ಧವಾಗಿಯೂ ನಿರ್ಮಲವಾಗಿಯೂ ಮೃದುವಾಗಿಯೂ ಇರುವ ನಮ್ಮ ಮನಸ್ಸಿನಲ್ಲಿ ಹುಟ್ಟಿಸುವದಕ್ಕಿಂತ ಅಮಿತವಾಗಿ ಹೆಚ್ಚಾದ ನಡುಗುವಿಕೆಯನ್ನೂ ಭಯಭ್ರಾಂತಿಯನ್ನೂ ಅವನ ಮನಸ್ಸಿನಲ್ಲಿ ಹುಟ್ಟಿಸಿದವು. ಯಾಕಂದರೆ ನಮಗೆ ಮರಣವು ಸ್ವಾಭಾವಿಕವಾಯಿತು. ಆದರೆ ಅವನಿಗೆ ಪೂರ್ಣವಾಗಿ ಅಸ್ವಾಭಾವಿಕವಾಗಿತ್ತು. ಆದರೆ ಕ್ರೈಸ್ತ ಮರಣಸಾಕ್ಷಿಗಳು ಬಹಳ ಹಿಂಸೆಯುಳ್ಳ ಮರಣಕ್ಕೆ ಎದುರಾಗಿ ನಿರ್ಮಲವಾದ ಸಂತೋಷದಲ್ಲಿ ಹೋದರೆಂಬದನ್ನು ನಮಗೆ ಹೇಳುವದಾದರೆ ಈ ಸಂತೋಷವು ಕಠಿಣವಾದ ಕ್ರಿಸ್ತನ ಕಾಳಗ

ದಿಂದ ಹುಟ್ಟಿದ ಫಲವಾಗಿರುತ್ತದೆಂಬದನ್ನು ಮರತ ಹಾಗೆ ಆಗುತ್ತದೆ. ಮತ್ತೊಬ್ಬರು, ಕೆಟ್ಟ ಪಾಪಿಷ್ಟರು ಸಹಾ ಅತಿ ಭಯಂಕರವಾದ ಮರಣಶಿಕ್ಷೆಗೆ ಸ್ವಲ್ಪವಾದರೂ ಭಯವಿಲ್ಲದವರಾಗಿ ಎದುರು ಹೋದರೆಂಬದನ್ನು ಹೇಳುವದಾದರೆ, ಅದಕ್ಕೆ ಉತ್ತರವು ಯಾವದಂದರೆ—ಅಂಧಕಾರದ ಬಲವು ತನ್ನವರಿಗೆ ಕೊಡುವಂಥಾ ಸ್ವಲ್ಪ ಸಮಯಕ್ಕೆ ಇರುವಂಥಾ ಸುಳ್ಳಿನ ಜಯವು ನಮಗೆ ಬೇಕೆಂದು ಅಭಿಲಾಷೆ ಮಾಡಲಿಕ್ಕೆ ಸ್ವಲ್ಪವಾದರೂ ಕಾರಣವಿಲ್ಲ. ಯಾಕಂದರೆ ಅದರ ಅಂತ್ಯವು ಗೋಳಾಟವೂ ಹಲ್ಲು ಕಡಿಯುವದೂ ಆಗಿರುತ್ತದೆ.

೩) ಮತ್ತಾ. ೨೬, ೪೭—೫೬. (ಮಾರ್ಕ. ೧೪. ಲೂಕ. ೨೨ ಯೋಹಾ. ೧೮). ಮತ್ತು ಅವನು ಇನ್ನು ಮಾತಾಡುತ್ತಿರುವಾಗ ಮಂತ್ರಿಸಭೆಯು ಕಳುಹಿಸಿದಂಥಾ ಸಮೂಹವು ಖಡ್ಗಗಳನ್ನೂ ಡೊಣ್ಣೆಗಳನ್ನು ತಕ್ಕೊಂಡು, ದ್ರೋಹಿಯಿಂದ ನಡಿಸಲ್ಪಟ್ಟದ್ದಾಗಿ ಬಂತು. ಯೇಸುವು ಶಾಂತವಾಗಿಯೂ ನಿಧಾನವಾಗಿಯೂ ನೀವು ಯಾರನ್ನು ಹುಡುಕುತ್ತೀರಿ? ನಾನೇ ಎಂದು ಅವರಿಗೆ ಎದುರುಗೊಂಡನು. ಅವನ ಪರಿಶುದ್ಧತ್ವದ ಬಲದಿಂದ ಜೈಸಲ್ಪಟ್ಟವರಾಗಿ ಆ ಹೀನರಾದ ಸೇವಕರು ಮೂರು ಸಾರಿ ಹಿಂಜಾರಿದರು. ಆದರೆ ಒಪ್ಪಿಸಿ ಕೊಟ್ಟವನು ಮೊದಲು ತಮ್ಮೊಳಗೆ ನಿಶ್ಚೈಸಿದ ಪ್ರಕಾರ ವಂದನೆ ಮುದ್ದುಗಳ ಸೌಜ್ಞೆಯನ್ನು ಕೊಡುವದಕ್ಕಾಗಿ ಯಜಮಾನನ ಹತ್ತರ ಬರಲಿಕ್ಕೆ ಧೈರ್ಯ ಪಡುತ್ತಾನೆ, ಆಗಲೇ ಸೇವಕರು ಸಹಾ ಹತ್ತರ ಬಂದು ಆತನನ್ನು ಹಿಡಿಯಲಿಕ್ಕೆ ಧೈರ್ಯ ಪಟ್ಟರು. ಉತ್ತೇಗವೂ ಸಂತಾಪವೂ ಉಳ್ಳ ಪೇತ್ರನು ಇನ್ನು ಮುರಿಯದ ಚಾವದಲ್ಲಿ ಮೊದಲಾಗಿ ಸ್ವತಾ ಸಹಾಯ ಮಾಡಿಕೊಳ್ಳಲಿಕ್ಕೆ ಆಲೋಚಿಸಿದದರಿಂದ ಖಡ್ಗಕ್ಕೆ ಕೈ ಹಾಕಿ ಪ್ರಧಾನಯಾಜಕನ ಸೇವಕನಾದ ಮಲ್ಕನೆಂಬವನ ಕಿವಿ ಕಡಿದು ಬಿಟ್ಟನು. ಆದರೆ ಕರ್ತನು ಘಾಯ ಪಟ್ಟವನ ಕಿವಿಯನ್ನು ಮುಟ್ಟಿ, ವಾಸಿ ಮಾಡಿ, ಪೇತ್ರನನ್ನು ಶಿಕ್ಷಿಸುವದಕ್ಕೆ ಹೇಳಿದ್ದೇನಂದರೆ: “ನಿನ್ನ ಖಡ್ಗವನ್ನು ಅದರ ಸ್ಥಳಕ್ಕೆ ತಿರಿಗಿ ಹಾಕು, ಯಾಕಂದರೆ ಖಡ್ಗವನ್ನು ಹಿಡಿದವರೆಲ್ಲರು ಖಡ್ಗದಿಂದ ನಾಶವಾಗುವರು; ನಾನು ಈಗಲೇ ನನಗೆ ೧೨ ಗಣಗಳಿಗಿಂತ ಹೆಚ್ಚಾದ ದೂತರನ್ನು ಕಳುಹಿಸುವ ಹಾಗೆ ನನ್ನ ತಂದೆಯನ್ನು ಬೇಡಿಕೊಳ್ಳಲಾರೆನೆಂದು ನೆನಸುತ್ತೀಯೋ? ಹಾಗಾದರೆ ಹೀಗಾಗ ಬೇಕೆಂಬ ಬರಹಗಳು ಹ್ಯಾಗೆ ಈಡೇರುವವು?” ಮತ್ತು ಸೇವಕರು ಶಿಷ್ಯರನ್ನು ಸಹಾ ಹಿಡಿಯಲಿಕ್ಕೆ ಸಿದ್ಧವಾಗಲು ಅವರೆಲ್ಲರು ಓಡಿ ಹೋದರು. ಮತ್ತು ಒಬ್ಬ ಯೌವನಸ್ಥನು ಒಂದು ವೇಳೆ ಆಕಸ್ಮಾತ್ತಾಗಿ ಅಲ್ಲಿಗೆ ಬಂದವನಾಗಿ (ಈ ಸಂಗತಿಯನ್ನು ಹೇಳುವ

ಮಾರ್ಕನು ತಾನೇ ಒಂದು ವೇಳೆ ಸಂಧಿ ೧೪, ೫೧) ತನ್ನ ನಾರುಮಡಿಯನ್ನು ಹಿಡಿದವರ ಕೈಯಲ್ಲಿ ಬಿಟ್ಟು ಬತ್ತಲೆಯಾಗಿ ಓಡಿ ಬಿಟ್ಟನು.



## § 146. ಕ್ರಿಸ್ತನು ಮಂತ್ರಿಸಭೆಯ ಮುಂದೆ ಮತ್ತು ಪೇತ್ರನೂ ಯೂದನೂ

೧) ಮತ್ತಾ. ೨೬, ೫೭ ಇತ್ಯಾದಿ. ಮಾರ್ಕ. ೧೪, ೫೩ ಇತ್ಯಾದಿ. ಲೂಕ. ೨೨, ೫೪ ಇತ್ಯಾದಿ. ಯೋಹಾ. ೧೮, ೧೨ ಮೊದಲಾದ ಶ್ಲೋಕಗಳು. ಕಾವಲಿಯವರು ಯೇಸುವನ್ನು ಕಟ್ಟಿದ ಮೇಲೆ ಅವನನ್ನು ಮೊದಲು ಅನ್ನನ ಬಳಿಗೆ ತಕ್ಕೊಂಡು ಹೋದರು. ಇವನು ಮೊದಲು ಪ್ರಧಾನಯಾಜಕನಾಗಿಯೂ ಈಗಿನ ಪ್ರಧಾನಯಾಜಕನಾದ ಕಾಯಫನ ಮಾವನಾಗಿಯೂ ಇದ್ದದರಿಂದ ಅವನಿಗೆ ಬಹಳ ಮಾನ ಕೊಟ್ಟರು. ಒಂದು ವೇಳೆ ಕ್ರಿಸ್ತನನ್ನು ಹಿಡಿಯುವ ವಿಷಯದಲ್ಲಿ ಬಹಳ ಅಪೇಕ್ಷೆ ಮಾಡಿದವನಾಗಿರಲಿಕ್ಕೆ ಸಾಕು. ಅಲ್ಲಿಂದ ಯೇಸುವನ್ನು ಕಾಯಫನ ಬಳಿಗೆ ತಂದರು. ಇಲ್ಲಿ ಮಂತ್ರಿಸಭೆಯಲ್ಲಿ ಹೆಚ್ಚಾದವರು ಮತ್ತು ನಿಶ್ಚಯವಾಗಿ ಬಹಳವಾಗಿ ಹಗೆ ಮಾಡುವವರು ಸದ್ಯಕ್ಕೆ ಆಲೋಚನೆ ಮಾಡಿ ವಿಚಾರಿಸುವದಕ್ಕೋಸ್ಕರ ಕೂಡಿ ಬಂದಿದ್ದರು. ಮೊದಲಾಗಿ ಪ್ರಧಾನಯಾಜಕನು ಕ್ರಿಸ್ತನನ್ನು ಅವನ ಶಿಷ್ಯರ ವಿಷಯವಾಗಿಯೂ ಬೋಧನೆಯ ವಿಷಯವಾಗಿಯೂ ಕೇಳಿದನು. ರಕ್ಷಕನು ತಾನು ಯಾವಾಗಲೂ ಬಹಿರಂಗವಾಗಿ ಸಭೆಮನೆಗಳಲ್ಲಿಯೂ ದೇವಾಲಯದಲ್ಲಿಯೂ ಎಲ್ಲಾ ಯೆಹೂದ್ಯರ ಮುಂದೆ ಬೋಧಿಸಿದ್ದೇನೆಂದು ಅವರನ್ನು ಕೇಳ ಬಹುದೆಂದು ಹೇಳಿದನು. ತರುವಾಯ ಅವನಿಗೆ ಪ್ರತಿಕೂಲವಾಗಿ ಸಾಕ್ಷಿ ಹೇಳಲಿಕ್ಕೆ ಸಿದ್ಧವಾಗಿದ್ದವರು ಎದ್ದು ಮಾತಾಡಿದರು. ಆದರೆ ಅವರ ಸಾಕ್ಷಿ ಒಂದಕ್ಕೊಂದು ಸರಿ ಬೀಳಲಿಲ್ಲ. ಯೇಸುವು ಸುಳ್ಳುಮೆಸ್ಸೀಯನಾಗಿರುತ್ತಾನೆಂದೂ ಮೊದಲೇ ಅವನನ್ನು ಶಿಕ್ಷಿಸ ಬೇಕೆಂದೂ ನಿಶ್ಚೈಸಿ ಕೊಂಡ ಆಲೋಚನೆಗೆ ಒಬ್ಬ ಸಾಕ್ಷಿಗಾರನು ಯೇಸು ಹೇಳಿದ್ದನ್ನು ಬೇಕಾಗಿ ವ್ಯತ್ಯಾಸ ಮಾಡಿ ಹೇಳಿದ ಮಾತು (ಸಮ ನೋಡು ಯೋಹಾ. ೨, ೧೯ ವಚನ) ಆಧಾರವಾಯಿತು. ಅದು ಯಾವದಂದರೆ — ಯೇಸುವು ದೇವರ ಆಲಯವನ್ನು ಮುರಿದು ಬಿಟ್ಟು ೩ ದಿವಸಗಳಲ್ಲಿ ತಿರಿಗಿ ಕಟ್ಟುತ್ತೇನೆಂದು ಹೇಳಿದನೆಂಬದೇ. ಆದರೆ ರಕ್ಷಕನು ಇದಕ್ಕೆಲ್ಲಾ ಪ್ರತಿಯಾಗಿ ಮಾತಾಡುವದನ್ನು ತುಚ್ಛೀಕರಿಸಿದನು. ಆದರೆ ಪ್ರಧಾನಯಾಜಕನು ನೀನು ದೇವರ ಮಗನಾದ ಕ್ರಿಸ್ತನಾಗಿದ್ದೀಯೋ ಎಂದು ಪ್ರಮಾಣ ಸಹಿತವಾದ ಪ್ರಶ್ನೆ

ಯನ್ನು ಮಾಡಿದಾಗ, ಯೇಸುವು ತಾನು ದೇವರಿಂದ ಕಳುಹಿಸಲ್ಪಟ್ಟವನೆಂದು ಪೂರ್ಣವಾಗಿ ತಿಳಿದವನಾಗಿ ಅವನಿಗೆ ನ್ಯಾಯ ತೀರಿಸಲಿಕ್ಕೆ ಉತ್ತರ ಕೊಟ್ಟು ಹೇಳಿದ್ದು: "ನೀನು ಹೇಳಿದ್ದೇ ಸರಿ, ಹಾಗಾಗಿದ್ದೇನೆ; ಇದಲ್ಲದೆ ಮನುಷ್ಯನ ಮಗನು ಬಲದ ಬಲಪಾರ್ಶ್ವದಲ್ಲಿ ಕೂತು ಕೊಂಡು ಆಕಾಶದ ಮೇಘಗಳ ಸಂಗಡ ಬರುವದನ್ನು ನೋಡುವಿರಿ." ಆಗ್ಯೆ ಪ್ರಧಾನಯಾಜಕನು ತನ್ನ ವಸ್ತ್ರಗಳನ್ನು ಹರಕೊಂಡು "ಇನ್ನ್ಯಾತಕ್ಕೆ ನಮಗೆ ಸಾಕ್ಷಿ ಬೇಕು, ದೂಷಣೆ ಕೇಳಿದಿರಲ್ಲ, ನಿಮಗೆ ಹ್ಯಾಗೆ ತೋಚುತ್ತದೆ" ಅಂದಾಗ ಅವರೆಲ್ಲರು "ಅವನು ಮರಣಕ್ಕೆ ಪಾತ್ರನು" ಎಂದು ಉತ್ತರ ಕೊಟ್ಟರು. ಆಗ್ಯೆ ಸುತ್ತಲೂ ನಿಂತ ಸೇವಕರ ಗುಂಪು ತೀರ್ಪು ಹೊಂದಿದವನನ್ನು ಉಪದ್ರ ಪಡಿಸುವದು ನ್ಯಾಯವೆಂದು ನೆನಸಿದರು. ಅವರು ಅವನ ಮುಖದ ಮೇಲೆ ಉಗುಳಿದರು; ಮುಷ್ಟಿಯಿಂದ ಗುದ್ದಿದರು, ಕಣ್ಣುಗಳನ್ನು ಮುಚ್ಚಿ, ಕೇಳಿದ್ದು: "ಪ್ರವಾದಿಸು ಕ್ರಿಸ್ತನೇ ನಿನ್ನನ್ನು ಹೊಡದವನ್ಯಾರು? ಈ ಪ್ರಕಾರ ಈ ಗುಲ್ಲಿನ ವಿಚಾರಣೆಯು ತೀರಿತು.

೨) ಮತ್ತಾ. ೨೬, ೬೯ ಇತ್ಯಾದಿ. ಮಾರ್ಕ. ೧೪, ೬೬ ಇತ್ಯಾದಿ. ಲೂಕ. ೨೨, ೫೪ ಇತ್ಯಾದಿ. ಯೋಹಾ. ೧೮, ೧೫ ಇತ್ಯಾದಿ. ಪೇತ್ರನು ಕರ್ತನನ್ನು ಹಿಡುಕೊಂಡು ಹೋದವರ ಹಿಂದೆಯೇ ಹೋಗಿದ್ದನು. ಯೋಹಾನನು ಅವನಿಗೆ ಪ್ರಧಾನಯಾಜಕನ ಮಠದಲ್ಲಿ ಬರಲಿಕ್ಕೆ ಉಪಾಯ ಮಾಡುತ್ತಾನೆ. ವಿಚಾರಣೆಯಾಗುವ ಸಮಯದಲ್ಲಿ ಅವನು ಮಂಟಪದಲ್ಲಿ ಸೇವಕರ ಹತ್ತರ ಇದ್ದನು. ಅವನ ಹೃದಯದಲ್ಲಿ ಉಂಟಾದ ಇಕ್ಕಟ್ಟೂ ಸಂಕಟವೂ ಮುಖದಲ್ಲಿ ಒಂದು ವೇಳೆ ಕಂಡು ಬಂದವು. ಹೀಗಾಗಿ ಸುತ್ತಲಿದ್ದವರು ಅವನ ವಿಷಯವಾಗಿ ಆಲೋಚಿಸಲಿಕ್ಕೆ ತೊಡಗಿದರು. ಆಗ್ಯೆ ಬಾಗಲು ಕಾಯುವವಳು ಅವನಿಗೆ ಹೇಳಿದ್ದು: "ನೀನು ಸಹಾ ಈ ಮನುಷ್ಯನ ಶಿಷ್ಯನಾಗಿರ ಬೇಕು?" ಮತ್ತು ಪೇತ್ರನು ಎಲ್ಲಾ ಬೆದರಿಕೆಗಳನ್ನೂ ಮೊದಲು ಮಾಡಿದ ಎಲ್ಲಾ ಆಲೋಚನೆಗಳನ್ನೂ ಮರತು ಬಿಟ್ಟು ಹೇಳಿದ್ದು: "ನೀನು ಹೇಳುವದನ್ನು ಅರಿಯೆನು" ಆಗ್ಯೆ ಕೋಳಿಯು ಮೊದಲನೇ ಸಾರಿ ಕೂಗಿತು. ಆದರೆ ಇದರಿಂದ ಸಹಾ ಅವನು ಬುದ್ಧಿ ಕಲಿಯಲಿಲ್ಲಾ, ಮತ್ತೊಬ್ಬ ದಾಸಿಯು ಅದೇ ಪ್ರಕಾರ ಮಾತಾಡಿದಾಗ ಅವನು ತನ್ನ ಕರ್ತನನ್ನೂ ಯಜಮಾನನನ್ನೂ ಎರಡನೇ ಸಾರಿ ಅಲ್ಲಗಳದನು. ಮತ್ತು ಸುತ್ತಲು ನಿಂತವರು ಹೆಚ್ಚು ಖಂಡಿತವಾಗಿ ಅವನಿಗೆ ನಿನ್ನ ಮಾತು ನಿನ್ನನ್ನು ತೋರಿಸುತ್ತದೆ (ಗಲಿಲೋಯನನು). ನೀನು ಅವನ ಸಂಗಡ ತೋಟದಲ್ಲಿದ್ದಿ ಎಂದು ಹೇಳಿದಾಗ ಅವನು ಆ ಮನುಷ್ಯನನ್ನು ಅರಿಯೆನು ಎಂದು ಶಪಿಸಿ ಕೊಳ್ಳಲೂ ಆಣೆ ಇಟ್ಟು ಕೊಳ್ಳಲೂ ಆರಂಭಿಸಿದನು; ಆಗ್ಯೆ ಕೋಳಿಯು ೨ನೇ ಸಾರಿ ಕೂಗಿತು. ಮತ್ತು ಅದೇ ಸಮಯದಲ್ಲಿ ದುಃಖಗೊಂಡು ಶಿಕ್ಷಿಸುವಂಥಾ ರಕ್ಷಕನ ದೃಷ್ಟಿಯು ಅವನ ಮೇಲೆ ಬಿತ್ತು. ಆಗ್ಯೆ ಪೇ

ತ್ರನು ಕರ್ತನ ಬೆದರಿಸುವಿಕೆಯ ಮಾತನ್ನು ನೆನಸಿ ಕೊಂಡು ಹೊರಗೆ ಹೋಗಿ ಬಹಳ ವಾಗಿ ಅತ್ತನು.

೩) ಮತ್ತಾ. ೨೭, ೧ ಇತ್ಯಾದಿ. ಮಾರ್ಕ. ೧೫, ೧ ಇತ್ಯಾದಿ. ಲೂಕ. ೨೨, ೬೬ ಇತ್ಯಾದಿ ಶ್ಲೋಕಗಳು. ಬೆಳಿಗ್ಗೆ ಮಂತ್ರಿಸಭೆಯು ವಿಶೇಷವಾದ ಸಭೆಯಾಗಿ ಕೂತು ಕೊಂಡು ವಿಚಾರಣೆಯನ್ನು ತಿರಿಗಿ ಆರಂಭಿಸಿದರು. “ಅವನು ಮರಣಕ್ಕೆ ಪಾತ್ರನು” ಎಂಬ ತೀರ್ಪು ಬೇಗ ನಿಶ್ಚಯವಾಯಿತು. ಆದರೆ ಮಂತ್ರಿಸಭೆಗೆ ಮರಣಶಿಕ್ಷೆ ಕೊಡುವ ಅಧಿಕಾರವು ಇನ್ನೂ ಇರದೇ ಇದ್ದದರಿಂದ ಅವನು ಮರಣಕ್ಕೆ ಪಾತ್ರನಾದ ಕೊಟಕಾಯಿಯವನೆಂಬದಾಗಿ ರೋಮಾಯ ಅಧಿಪತಿಯಾದ ಪೊಂತ್ಯಪಿಲಾತನಿಗೆ ಒಪ್ಪಿಸಿ ಕೊಟ್ಟರು. ಅದು ಅಷ್ಟಕ್ಕೆ ಬಂದೀತೆಂದು ಒಪ್ಪಿಸಿ ಕೊಟ್ಟ ಯೂದನು ನೆನಸಲಿಲ್ಲವೆಂದು ಕಾಣುತ್ತದೆ. ತನ್ನ ಕೆಟ್ಟ ಕೆಲಸಕ್ಕಾಗಿ ಮನಃಸ್ತಾಪ ಪಟ್ಟನು; ಅವನು ಒಪ್ಪಿಸಿ ಕೊಡುವದಕ್ಕಾಗಿ ತಕ್ಕೊಂಡ ಹಣವನ್ನು ಸುಮ್ಮನೇ ತಿರಿಗಿ ತಂದನು. “ನಾನು ನಿರಾಪರಾಧಿಯ ರಕ್ತವನ್ನು ಒಪ್ಪಿಸಿ ಕೊಟ್ಟೆನು” ಎಂದು ಮಂತ್ರಿಸಭೆಯ ಮುಂದೆ ಸಾಕ್ಷಿ ಕೊಟ್ಟು ಹೇಳಿದ್ದೂ ಸುಮ್ಮನೇಯಾಯಿತು. ಅವನನ್ನು ಧಿಕ್ಕರಿಸಿ ಬಿಟ್ಟರು. ನಮಗೇನು ನೀನೇ ನೋಡಿಕೋ ಅಂದರು. ಆಗಲವನು ನಿರಾಶೆಯಾಗಿ ರೂಪಾಯಿಗಳನ್ನು ದೇವಾಲಯದೊಳಗೆ ಹಾಕಿ ಬಿಟ್ಟು ಹೊರಟು ಹೋಗಿ, ಉರ್ಲು ಹಾಕಿ ಕೊಂಡನು. ಆದರೆ ಪ್ರಧಾನ ಯಾಜಕರು “ರಕ್ತದ ಕ್ರಯವಾದದರಿಂದ ಅವುಗಳನ್ನು ಬೊಕ್ಕಸದಲ್ಲಿ ಹಾಕ ಬಾರದು” ಎಂದು ಹೇಳಿ ಆಲೋಚನೆ ಮಾಡಿ ಅವುಗಳಿಂದ ಪರದೇಶಿಗಳನ್ನು ಹೂಳಿಡುವದಕ್ಕೋಸ್ಕರ ಕುಂಬಾರನ ಹೊಲವನ್ನು ತಕ್ಕೊಂಡರು. ಈ ಪ್ರಕಾರ ಈ ವಿಷಯದಲ್ಲಿ ಸಹಾ ಜಕರಿಯನ ಪ್ರವಾದನೆಯು (ಸಂ. ೧೧, ೧೨—೧೪) ಈಡೇರಿತು.

ಪರಿಶಿಷ್ಟ. ರಕ್ಷಕನು ಮನುಷ್ಯನಲ್ಲಿ ಏನವೆ ಎಂಬದನ್ನು ತಿಳಿದವನಾಗಿದ್ದು (ಯೋಹಾ. ೨, ೨೫) ಯೂದನ ಅಂತ್ಯವು ಎಂಥಾದಾಗಿರುವದೆಂಬುದನ್ನು ಮೊದಲೇ ತಿಳಿದವನಾಗಿದ್ದರೂ, ಅವನನ್ನು ತನ್ನ ಶಿಷ್ಯರಲ್ಲಿ ತಕ್ಕೊಳ್ಳಲಿಕ್ಕೂ ಮತ್ತು ಈ ಪ್ರಕಾರ ಅವನು ತನ್ನ ಹೃದಯದ ಮೋಸಗಳನ್ನು ಇಂಥಾ ದ್ರೋಹದ ಮಟ್ಟಿಗೂ ಬೈಲಿಯ ಮಾಡಿ ಪ್ರಕಟ ಮಾಡುವದಕ್ಕೆ ಅವನಿಗೆ ಎಡೆ ಬಿಡಲಿಕ್ಕೂ ಏನು ಕಾರಣವಾಯಿತು ಎಂತ ಪ್ರಶ್ನೆ ಮಾಡ ಬಹುದು. ಆದರೆ ಅವನು ತನ್ನ ನಾಶಕ್ಕೆ ಪ್ರಯೋಗಿಸಿದಂಥಾ ರಕ್ಷಕನ ಸಹವಾಸವು ಅವನಿಗೆ ಮನಸ್ಸಿದ್ದದ್ದಾದರೆ ಅವನಲ್ಲಿದ್ದ ಕೇಡಿಗೆ ತಪ್ಪಿಸಲಿಕ್ಕೆ ಬಹಳ ಬಲವಾದ (ಒಂದು ವೇಳ್ಯ ಒಂದೇಯಾಗಿರುವಂಥಾ) ಉಪಾಯವಾಗುತಿತ್ತು ಎಂಬದನ್ನು ಎಲ್ಲಾ ಮನುಷ್ಯರಲ್ಲಿ ಆಗ ಬೇಕಾದ ಪ್ರಕಾರವೇ ಯೂದನಲ್ಲಿ

ಸಹಾ ಯಾವ ಪಕ್ಷದವನೆಂಬದು ನಿಶ್ಚಯವಾಗ ಬೇಕಾಗಿತ್ತೆಂಬದನ್ನು ಮರಿಯ ಬಾರ ದು. ಕ್ರಿಸ್ತನು ಅವನನ್ನು ತನ್ನ ಶಿಷ್ಯರಲ್ಲಿ ತಕ್ಕೊಳ್ಳದೆ ಇದ್ದದ್ದಾದರೆ ಸಹಾ ಅವನ ಕಡೇ ಕಠಿಣತ್ವವು ಬಂದು ಪೇಳ್ವ ಮತ್ತೆ ಆದರೂ ನಿಶ್ಚಯವಾಗಿ ಉಂಟಾಗುತಿತ್ತು. ಪೇತ್ರನ ಪಾಪಕ್ಕೂ ಯೂದನ ಪಾಪಕ್ಕೂ ಅವನ ಮಾನಸಾಂತರಕ್ಕೂ ಇವನ ನಿರಾಶೆಗೂ ಇರುವ ಹೆಚ್ಚು ಕಡಿಮೆ ನೋಡ ತಕ್ಕದ್ದು.



## § 147. ಕ್ರಿಸ್ತನು ಪಿಲಾತನ ಮುಂದೆ

೧) ಯೋಹಾ. ೧೮, ೨೮ ಇತ್ಯಾದಿ. ಮತ್ತಾ. ೨೭, ೨ ಇತ್ಯಾದಿ. ಮಾರ್ಕ. ೧೫, ೧ ಇತ್ಯಾದಿ. ಲೂಕ. ೨೩, ೧ ಇತ್ಯಾದಿ ವಚನಗಳು. — ಮಂತ್ರಿಸಭೆಯ ಮುಂದೆ ಯೇಸುವಿನ ಮೇಲೆ ದೇವದ್ರೋಹದ ಅಪರಾಧ ಹಾಕಿದರು. ಆದರೆ ಅಂಥಾ ಅಪರಾಧವು ಮ್ಲೇಂಛ ಅಧಿಪತಿಯ ಮುಂದೆ ನಿರರ್ಥಕವಾದೀತೆಂದು ತಿಳಿದು, ಅವನ ಮೆಸ್ಸೀಯತ್ವವನ್ನು ರಾಜದ್ರೋಹವೆಂಬ ಹಾಗೆ ತೋರಿಸಲಿಕ್ಕೆ ಪ್ರಯತ್ನ ಮಾಡಿದರು. ಅವರು ಹೇಳಿದ್ದು: ಇವನು ಜನಾಂಗವನ್ನು ತಿರಿಗಿ ಬೀಳ ಮಾಡಿ, ತಾನು ಕ್ರಿಸ್ತನೆಂಬ ಅರಸನಾಗಿದ್ದೇನೆಂದು ಹೇಳಿ, ಕೈಸರನಿಗೆ ತೆರಿಗೆ ಕೊಡದ ಹಾಗೆ ಅಡ್ಡಿ ಮಾಡುವವನನ್ನು ಕಂಡಿದ್ದೇವೆ. ಆ ಪ್ರಕಾರ ಪಿಲಾತನು ಯೇಸುವಿನ ಹತ್ತರ ಕೇಳಿದ್ದು: "ನೀನು ಯೆಹೂದ್ಯರ ಅರಸನೋ" ಅದಕ್ಕೆ ಯೇಸು ಪ್ರತ್ಯುತ್ತರವಾಗಿ, "ನಿನ್ನಷ್ಟಕ್ಕೆ ನೀನೇ ಹೇಳುತ್ತೀಯೋ ಬೇರೊಬ್ಬರು ನಿನಗೆ ನನ್ನ ವಿಷಯವಾಗಿ ಹೇಳಿದ್ದಾರೋ" ಅಂದನು. ಪಿಲಾತನು ತುಚ್ಛೀಕಾರವಾಗಿ ಹೇಳಿದ್ದು: ನಾನು ಯೆಹೂದ್ಯನೋ? ನಿನ್ನ ಜನಾಂಗವೂ ಪ್ರಧಾನಯಾಜಕರೂ ನಿನ್ನನ್ನು ನನಗೆ ಒಪ್ಪಿಸಿದ್ದಾರೆ; ಏನು ಮಾಡಿದ್ದೀ! ಅದಕ್ಕೆ ಯೇಸು ನನ್ನ ರಾಜ್ಯವು ಈ ಲೋಕದ್ದಲ್ಲಾ ಎಂದು ಹೇಳಿದಾಗ, ಪಿಲಾತನು ಅವನಿಗೆ ಹಾಗಾದರೆ ನೀನು ಅರಸನೋ ಅನ್ನಲು, ಯೇಸು ಪ್ರತ್ಯುತ್ತರವಾಗಿ ಹೇಳಿದ್ದು: "ನೀನೇ ಹೇಳುತ್ತಿ, ನಾನು ಅರಸನಾಗಿದ್ದೇನೆ. ನಾನು ಸತ್ಯಕ್ಕೆ ಸಾಕ್ಷಿ ಕೊಡುವದಕ್ಕೋಸ್ಕರವೇ ಹುಟ್ಟಿ ಅದಕ್ಕೋಸ್ಕರವೇ ಲೋಕಕ್ಕೆ ಬಂದಿದ್ದೇನೆ; ಸತ್ಯದವರೆಲ್ಲರೂ ನನ್ನ ಶಬ್ದವನ್ನು ಕೇಳುತ್ತಾರೆ". — ಆಗ್ಯೆ ಪಿಲಾತನು ಸತ್ಯವಂದರೇನು ಎಂದು ಸುಮ್ಮನೇ ಕೇಳಿ ಬಿಟ್ಟು (ಯೋಹಾ. ೧೪, ೬ ವಚನ. ನಾನೇ ಸತ್ಯವು ಎಂಬ) ಪ್ರತ್ಯುತ್ತರವನ್ನು ಕೇಳಲಿಕ್ಕೆ ತಡಿಯದೆ, ಯೆಹೂದ್ಯರ ಬಳಿಗೆ ಹೊರಗೆ ಬಂದು, ಅವರಿಗೆ ಹೇಳಿದ್ದೇನಂದರೆ "ನಾನು ಅವನಲ್ಲಿ ಯಾವ ಅ

ಪರಾಧವನ್ನೂ ಕಾಣೆನು”. ಆದರೆ ಅವರು ಹೆಚ್ಚು ಹೆಚ್ಚು ಅಪರಾಧಗಳನ್ನು ಅವನ ಮೇಲೆ ಹಾಕುತ್ತಾ ಒಂದು ಸಾರಿ ಆಲೋಚನೆ ಮಾಡದೆ ಕ್ರಿಸ್ತನ ಜನ್ಮದೇಶವು ಗಲಿಲಾಯವೆಂದು ಹೇಳಿದಾಗ, ಪಿಲಾತನು ಇದನ್ನು ಹಿಡುಕೊಂಡು ಗಲಿಲಾಯದ ಚತುರಾಧಿಪತಿಯಾದ ಹೆರೋದ ಅಂತಿಪ್ಪನ ಬಳಿಗೆ ಅವನ್ನ ಕಳುಹಿಸಿ ಕೊಟ್ಟನು. (ಇವನು ಸಹಾ ಹಬ್ಬಕ್ಕೋಸ್ಕರ ಯೆರೂಸಲೇಮದಲ್ಲಿದ್ದನು). ಅವನು ಈ ಪ್ರಕಾರ ಒಳ್ಳೇ ಮಾರ್ಗದಲ್ಲಿ ಈ ಸಂಗತಿಗೆ ತಪ್ಪಿಸಿ ಕೊಳ್ಳ ಬಹುದೆಂದು ನೆನಸಿದನು. ಆದರೆ ಕ್ರಿಸ್ತನು ಹೆರೋದನ ಮುಂದೆ ಲಕ್ಷಣಗಳೇನೂ ಮಾಡದೆ, ಬೇರೆ ಬೇರೆ ಪ್ರಶ್ನೆಗಳಿಗೆ ಉತ್ತರ ಕೊಡದೆ ಇರಲಾಗಿ, ಅವನ ಕಡೆಯವರು (ಯೆಹೂದ್ಯ ಅರಸುತನವನ್ನು ನಿರೀಕ್ಷಿಸುವವನೆಂಬ ಹಾಗೆ) ಹಾಸ್ಯಕ್ಕಾಗಿ ಅವನಿಗೆ ಬಿಳೇ ವಸ್ತ್ರ ತೊಡಿಸಿದ ತರುವಾಯ ಹೆರೋದನು ಅವನನ್ನು ತಿರಿಗಿ ಪಿಲಾತನ ಹತ್ತರ ಕಳುಹಿಸಿದನು. ಮತ್ತು ಆ ದಿವಸದಲ್ಲಿಯೇ ಹೆರೋದನೂ ಪಿಲಾತನೂ ಸ್ನೇಹಿತರಾದರು. ಮೊದಲು ಅವರು ಪರಸ್ಪರ ಹಗೆ ಮಾಡಿದರು.

೨) ಪಿಲಾತನು ಈಗ ತಿರಿಗಿ ಯೆಹೂದ್ಯರ ಗದ್ದಲವನ್ನು ನಿಲ್ಲಿಸಲಿಕ್ಕೆ ಸುಮ್ಮನೇ ಪ್ರಯತ್ನ ಮಾಡಿದನು. (ಹಬ್ಬದ ಮರ್ಯಾದೆಯನ್ನು ಪ್ರಯೋಗಿಸಿ) ಜನರಿಗೆ ಕ್ರಿಸ್ತನನ್ನು ಇಲ್ಲವೆ ಕೆಟ್ಟ ಕೊಲೆಗಾರನೂ ಕೊಟಕೊಯಿಯವನೂ ಆಗಿದ್ದ ಬರಬ್ಬನನ್ನೂ ಆರಿಸಿ ತೆಗದು ಕೊಳ್ಳಲಿಕ್ಕೆ ಸುಮ್ಮನೇ ಬಿಟ್ಟನು. ಅವರು ಬರಬ್ಬನನ್ನು ಬಿಡಿಸ ಬೇಕೆಂದೂ ಕ್ರಿಸ್ತನನ್ನು ಶಿಲುಬೆಗೆ ಹಾಕ ಬೇಕೆಂದೂ ಬೇಡಿ ಕೊಂಡರು. ಅಧಿಪತಿಯ ಮನೋವ್ಯಥೆಯನ್ನು ಬಹಳವಾಗಿ ಹೆಚ್ಚಿಸಲಿಕ್ಕಾಗಿ ಈಗಲೇ ಅವನ ಹೆಂಡತಿಯು (ಸಂಪ್ರದಾಯದ ಪ್ರಕಾರ ಅವಳ ಹೆಸರು ಕ್ಲೌದಿಯಾಪ್ರೋಕುಲ) ಈ ವರ್ತಮಾನವನ್ನು ಅವನಿಗೆ ಕಳುಹಿಸಿದಳು — “ನಿನಗೆ ಆ ನೀತಿವಂತನ ಗೊಡವೆ ಬೇಡ, ಯಾಕಂದರೆ ಈ ಹೊತ್ತು ಸ್ವಪ್ನದಲ್ಲಿ ಅವನಿಗೋಸ್ಕರ ಬಹಳ ಶ್ರಮೆ ಪಟ್ಟೆನು.” ಅವನು ಜನರ ಗುಲ್ಲು ನಿಲ್ಲಿಸಲಿಕ್ಕೆ ಆಗುವದಿಲ್ಲವೆಂದು ನೋಡಿ, ನೀರನ್ನು ತಕ್ಕೊಂಡು ಕೈಗಳನ್ನು ತೊಳದು ಹೇಳಿದ್ದು: “ಈ ನೀತಿವಂತನ ರಕ್ತಕ್ಕೆ ನಿರಾಪರಾಧಿಯಾಗಿದ್ದೇನೆ; ನೀವೇ ನೋಡಿ ಕೊಳ್ಳಿರಿ”. ಆಗ್ಯೆ ಪ್ರಜೆ ಎಲ್ಲಾ ಪ್ರತ್ಯುತ್ತರವಾಗಿ “ಅವನ ರಕ್ತವು ನಮ್ಮ ಮೇಲೆಯೂ ನಮ್ಮ ಮಕ್ಕಳ ಮೇಲೆಯೂ ಬರಲಿ ಅಂದರು” ಇತ್ಯಾದಿ; ಸಮ ನೋಡು § ೧೧೩. ಪಿಲಾತನು ಮತ್ತೊಂದು ಸಾರಿ ಪ್ರಯತ್ನ ಮಾಡಿದನು. ನಿರಾಪರಾಧಿಗೋಸ್ಕರ ಜನರ ಕರುಣೆಯನ್ನು ಎಬ್ಬಿಸಲಿಕ್ಕೆ ಇಚ್ಛೈಸಿಪನು. ಆದದರಿಂದ ಅವನು ಅವನನ್ನು ಬಾರುಗಳಿಂದ ಹೊಡಿಸಿದನು. ರೋಣುವೆಯವರು ರಕ್ತಾಂಬರದ ಒಲ್ಲಿಯನ್ನು ಅವನಿಗೆ ಹೊದ್ದಿಸಿ, ಮುಳ್ಳುಗಳ ಕಿರೀಟವನ್ನು ಅವನ ತಲೆಯ ಮೇಲೆ ಇಟ್ಟು, ಅವನ ಬಲಗೈಯಲ್ಲಿ ಬೆತ್ತ ಕೊಟ್ಟು, ಅವ

ನನ್ನು ಹಾಸ್ಯ ಮಾಡಿ, ಅವನ ಮೇಲೆ ಉಗುಳಿದರು. ಈ ಭೂಷಣದಲ್ಲಿ ಪಿಲಾತೆನು ಅವನನ್ನು ಜನರ ಮುಂದೆ ತಕ್ಕೊಂಡು ಹೋಗಿ ಅವನ ನಿರಪರಾಧತ್ವಕ್ಕೆ ತಿರಿಗಿ ಸಾಕ್ಷಿ ಕೊಟ್ಟು "ಇಗೋ ಈ ಮನುಷ್ಯನು" ಎಂದು ಹೇಳಿದನು. ಆದರೆ ಜನರು ಹೆಚ್ಚು ಹೆಚ್ಚಾಗಿ ಕೂಗಿದ್ದು "ಶಿಲುಬೆಗೆ ಹಾಕು! ಶಿಲುಬೆಗೆ ಹಾಕು!" ಮತ್ತು ಪ್ರಧಾನಯಾಜಕರು ಕಡೆಯಲ್ಲಿ ಪಿಲಾತನಲ್ಲಿ (ತಿಬೇರಿಯ) ಕೈಸರನಿಗೋಸ್ಕರ ಭಯವನ್ನು ಹುಟ್ಟಿಸಲಾರಂಭಿಸಿದಾಗ ಸತ್ಯಕ್ಕೆ ಬಹು ಸಮೀಪವಾದಂಥಾ ಈ ಭಾಗ್ಯಹೀನನಾದ ಪ್ರಪಂಚಮನುಷ್ಯನಲ್ಲಿ ಎಲ್ಲಾ ನೀತಿಯು ಭಯದಿಂದ ಉಸುರು ಕಟ್ಟಿ ಹೋಯಿತು. ಅವನು ನ್ಯಾಯಸ್ಥಾನದಲ್ಲಿ ಕೂತುಕೊಂಡು ಯೇಸುವನ್ನು ಶಿಲುಬೆಗೆ ಹಾಕ ಬೇಕೆಂದು ತೀರ್ಪು ಮಾಡಿದನು.

ಪರಿಶಿಷ್ಟ. ಈ ಸ್ಥಳದಲ್ಲಿ ನಮಗೆ ತಿಳಿದಷ್ಟು ಪಿಲಾತನ ಮುಂದಿನ ಕಥೆಯನ್ನು ಆಲೋಚಿಸುವದು ನಮಗೆ ಹಿತಮಾತ್ರವಲ್ಲ, ವಿಶೇಷವಾಗಿ ಸಹಾ ಇರ ಬೇಕು. ಅವನು ೧೦ ವರುಷ ಅಧಿಪತಿಯ ಉದ್ಯೋಗವನ್ನು ಮಾಡಿ, ಹಣ ಸುಲು ಕೊಳ್ಳುವದರಿಂದಲೂ ಮನಸ್ಸಿಗೆ ಬಂದ ಹಾಗೆ ನಡ ಕೊಳ್ಳುವದರಿಂದಲೂ ಬಹಳ ಉಪದ್ರ ಕೊಡುವದರಿಂದಲೂ (ಸಮ ನೋಡು ಲೂಕ. ೧೩, ೧) ಜನರ ಹಗೆಯನ್ನು ಎಬ್ಬಿಸಿ ಕೆಲವು ಸಾರಿ ಕಾಟಕಾಯಿ ಹಾಗೆ ಗುಲ್ಲು ಉಂಟು ಮಾಡಿದ ತರುವಾಯ ಸೂರ್ಯದ ಅಧಿಪತಿಯಾದ ವಿತ್ತೆಲ್ಯನ ಹತ್ತರ ಅವನ ಮೇಲೆ ಫಿರಿಯಾದಿ ಬಂದಾಗ ಇವನು ಅವನನ್ನು ಕ್ರಿಸ್ತಶಕದ ೩೬ನೇ ವರುಷದಲ್ಲಿ ಉದ್ಯೋಗದಿಂದ ತೆಗದು ರೋಮಕ್ಕೆ ತಾನೇ ಕೈಸರನ ಮುಂದೆ ಉತ್ತರ ಕೊಡುವ ಹಾಗೆ ಕಳುಹಿಸಿ ಬಿಟ್ಟನು. ಅಲ್ಲಿಗೆ ತಿಬೇರಿಯನು ಸತ್ತ ಮೇಲೆ ಮುಟ್ಟಿದನು. ಮತ್ತೆ ಗಡಿಪಾರಾಗಿ ಅವನು ಯೂದನ ಹಾಗೆಯೇ ಸ್ವಹತ್ಯದಿಂದ ತನ್ನ ಜೀವಕ್ಕೆ ಅಂತ್ಯ ಮಾಡಿದನು.



## § 148. ಕ್ರಿಸ್ತನು ಶಿಲುಬೆಗೆ ಹಾಕಲ್ಪಟ್ಟದ್ದು

೧) ಮತ್ತಾ. ೨೭, ೩೧ ಇತ್ಯಾದಿ. ಮಾರ್ಕ. ೧೫, ೨೦ ಇತ್ಯಾದಿ. ಲೂಕ. ೨೩, ೨೬ ಇತ್ಯಾದಿ. ಯೋಹಾ. ೧೯, ೧೬ ಇತ್ಯಾದಿ. ಶಿಕ್ಷೆಯಾಗುವ ಸ್ಥಳಕ್ಕೆ ರಕ್ಷಕನು ತನ್ನ ಶಿಲುಬೆಯನ್ನು ತಾನೇ ಹೊತ್ತುಕೊಂಡು ಹೋಗ ಬೇಕಾಯಿತು. ಆದರೆ ಪಟ್ಟದ ಹೊರಗೆ ಬಂದಾಗಲೇ ರೋಮುವೆಯವರು ಹೊಲದಿಂದ ಬಂದ ಕುರೇನ್ಯನಾದ ಸಿಮಿಯೋನನೆಂಬ

ವನನ್ನು ಹಿಡಿದು ಯೇಸುವಿನ ಹಿಂದೆ ಹೋಗುವ ಹಾಗೆ ಭಾರವಾದ ಶಿಲುಬೆಯನ್ನು ಅವನ ಅವನ ಮೇಲೆ ಇಟ್ಟರು. ಹಿಂದಗಡೆಯಲ್ಲಿ ಬಹಳ ಜನರೂ ಹೆಂಗಸರೂ ಬಂದರು. ಇವರು ಅವನಿಗೋಸ್ಕರ ಅತ್ತು ಗೋಳಾಡಿದರು. ಆಗೈ ಯೇಸು ಆ ಹೆಂಗಸರ ಕಡೆಗೆ ತಿರಿಗಿ ಕೊಂಡು ಗಂಭೀರವಾಗಿ ಹೇಳಿದ್ದೇನಂದರೆ—"ಯೆರೂಸಲೇಮಿನ ಕುಮಾರ್ತೆಗಳೇ ನನಗೋಸ್ಕರ ಅಳ ಬೇಡಿರಿ. ನಿಮಗೋಸ್ಕರವೂ ನಿಮ್ಮ ಮಕ್ಕಳಿಗೋಸ್ಕರವೂ ಅಳಿರಿ. ಯಾಕಂದರೆ ಹಸಿಮರದಲ್ಲಿ ಇದನ್ನು ಮಾಡಿದರೆ ಒಣಗಿದ್ದರಲ್ಲಿ ಏನಾಗುವದು" ಅವನ ಸಂಗಡ ಅದೇ ಸಮಯದಲ್ಲಿ ಗೊಲ್ಗೊಥದಲ್ಲಿ (ಅಂದರೆ ಕಪಾಲಸ್ಥಳ, ಈ ಹೆಸರು ಕಪಾಲಧೋಪಾದಿಯಲ್ಲಿರುವ ಅದರ ಆಕಾರದಿಂದ ಬಂತೆಂದು ಕಾಣುತ್ತದೆ. ಸಮ ನೋಡು § ೧೫೦) ಇಬ್ಬರು ದುಷ್ಟರನ್ನು ಸಹಾ ಶಿಲುಬೆಗೆ ಹಾಕಿದರು. ಅಯೋಗ್ಯವಾದ ಕರುಣೆಯಿಂದ ಅವನಿಗೆ ಸ್ಮೃತಿ ತಪ್ಪಿಸುವ ದ್ರಾಕ್ಷರಸವನ್ನು ಕೊಡಲಾಗಿ ಅವನು ಇಂಥಾ ಹೀನ ಆದರಣೆಯನ್ನು ಧಿಕ್ಕರಿಸಿದನು. ಯಾಕಂದರೆ ಮರಣವನ್ನು ಜೈಸುವವನಾದ ಅವನಿಗೆ ಶುದ್ಧವಾಗಿಯೂ ಭದ್ರವಾಗಿಯೂ ಇರುವ ದೃಷ್ಟಿಯಿಂದ ಮರಣವನ್ನು ಚನ್ನಾಗಿ ನೋಡಿ, ಅದರ ಭಯಂಕರವಾದ ಕಠಿಣತ್ವವನ್ನು ಕಡಿಮೆ ಮಾಡದೆ ತಾಳಿ ಕೊಳ್ಳುವದು ಯೋಗ್ಯವಾಗಿತ್ತು. ರಾಣುವೆಯವರು ತಮ್ಮ ಕೆಲಸವನ್ನು ಅವನ ಮೇಲೆ ತೀರಿಸಿದ ತರುವಾಯ ಶಿಲುಬೆಗೆ ಹಾಕಲ್ಪಟ್ಟವನ ಮೊದಲನೇ ಮಾತು ತನ್ನ ಮಾರೆಕಾರರಿಗೋಸ್ಕರ ಪ್ರಾರ್ಥನೆಯಾಗಿತ್ತು. "ತಂದೆಯೇ ಅವರಿಗೆ ಮನ್ನಿಸು, ಯಾಕಂದರೆ ತಾವು ಮಾಡುವದೇನೆಂದು ಅರಿಯರು." ಪಿಲಾತನು ಮೇಬ್ಬರಹವನ್ನು ಬರದು ಶಿಲುಬೆಯ ಮೇಲೆ ಇರಿಸಿದನು. ಬರದದ್ದೇನಂದರೆ — ಯೆಹೂದ್ಯರ ಅರಸನಾಗಿರುವ ನಜರೇತದವನಾದ ಯೇಸು! ಅದು ಹೆಬ್ರಿಯ, ಗ್ರೇಕ ಲತೀನ ಭಾಷೆಗಳಲ್ಲಿ (I. N. R. I.) ಬರೆದಿತ್ತು. ಈ ಪ್ರಕಾರವಾಗಿ ತಾನು ತಿಳಿಯದೆ ಪಿಲಾತನು ಎಲ್ಲಾ ಲೋಕಕ್ಕೆ ಈಗ ಉಂಟಾದ ಮಹಾ ರಕ್ಷಣ್ಯವನ್ನು ೩ ಲೋಕಭಾಷೆಗಳಲ್ಲಿ ಎಲ್ಲಾ ಜನರಿಗೆ ತಿಳಿಸಿದವರಲ್ಲಿ ಮೊದಲನೆಯವನಾದನು. ತರುವಾಯ ರಾಣುವೆಯವರು ಅವನ ವಸ್ತ್ರಗಳನ್ನು ತಮ್ಮೊಳಗೆ ಪಾಲಿಟ್ಟರು. ಮತ್ತು ಅಂಗಿಗೆ ಇದರಲ್ಲಿ ಸಹಾ ಬರಹವು ಈಡೇರುವ ಹಾಗೆ ಚೀಟು ಹಾಕಿದರು (ಕೀರ್ತ. ೨೨, ೧೮).

೨) ಮತ್ಥಾ. ೨೭, ೩೯. ಮಾರ್ಕ. ೧೫, ೨೭ ಇತ್ಯಾದಿ. ಲೂಕ. ೨೩, ೩೯ ಇತ್ಯಾದಿ. ಯೋಹಾ. ೧೯, ೨೫. ದೇವರ ಮಗನೂ ಲೋಕದ ಅರಸನೂ ಆಗಿರುವವನು ಲೋಕದ ಪಾಪಗಳನ್ನು ಹೊತ್ತು ಕೊಳ್ಳುವ ದೇವರ ಕುರಿಮರಿಯಾಗಿ ಬೇನೆ ರೋಗಗಳಿಂದ ತುಂಬಿದವನಾಗಿ (ಯೆಶಾಯ. ೫೩) ಬಲಿಪೀಠದ ಮೇಲೆ ಎಂಬ ಹಾಗೆ ಕ್ರೂಜೆ

ಯ ಕಂಬದಲ್ಲಿ ಕೊಲ್ಲಲ್ಪಟ್ಟು ದಿವಭೂಮಿಗಳ ಮಧ್ಯದಲ್ಲಿ ತೂಗಾಡಿದನು. ಆದರೆ ಅವನ ಶ್ರಮೆಗಳ ಅಳತೆಯು ಇನ್ನೂ ಪೂರ್ಣವಾಗಲಿಲ್ಲ. ದಾಟಿ ಹೋಗುವವರು ಅವನನ್ನು ದೂಷಿಸಿದರು. ಮತ್ತು ಯಾಜಕರೂ ಶಾಸ್ತ್ರಿಗಳೂ ಲಜ್ಜೆ ಇಲ್ಲದ ಹಾಸ್ಯದಿಂದ ಅವನನ್ನು ನಿಂದಿಸಿದರು. ಅವನ ಸಂಗಡ ಶಿಲುಬೆಗೆ ಹಾಕಲ್ಪಟ್ಟ ದುಷ್ಟರಲ್ಲಿ ಒಬ್ಬನು ಸಹಾ ಅವನನ್ನು ಹೀನೈಸಿದನು. ಆದರೆ ಮತ್ತೊಬ್ಬನು ಅವನನ್ನು ಶಿಕ್ಷಿಸಿ, ಯೇಸುವಿಗೆ ಹೇಳಿದ್ದು: “ಕರ್ತನೇ ನಿನ್ನ ರಾಜ್ಯದೊಳಗೆ ಬರುವಾಗ ನನ್ನನ್ನು ಜ್ಞಾಪಕ ಮಾಡಿಕೋ!” ಮತ್ತು ಕರ್ತನು ತನ್ನ ಶಿಲುಬೆಯು ಲೋಕನ್ಯಾಯಾಧಿಪತಿಯ ಸಿಂಹಾಸನವೆಂಬ ಹಾಗೆ ಅವನಿಗೆ ಉತ್ತರ ಕೊಟ್ಟು ಹೇಳಿದ್ದು: “ನಿಶ್ಚಯವಾಗಿ ನಿನಗೆ ಹೇಳುತ್ತೇನೆ ಈ ಹೊತ್ತು ನನ್ನ ಸಂಗಡ ಪರದೈಸಿನಲ್ಲಿ ಇರುವಿ”. ತರುವಾಯ ಬಹಳ ಪ್ರೀತಿಯೂ ನಮ್ರತ್ವವೂ ಉಳ್ಳ ದೃಷ್ಟಿಯಿಂದ ತನ್ನ ತಾಯಿಯನ್ನು ನೋಡಿದನು. ಇವಳ ಹೃದಯವನ್ನು ಸಿಮಿಯೋನನು ಪ್ರವಾದಿಸಿದ ಖಡ್ಗವು ಈಗ ತಿವಿದು ಹೋಗಿತ್ತು (§ ೧೨೧, ೨). ಮತ್ತು ಯೋಹಾನನ ಕಡೆಗೆ ತೋರಿಸಿ ಯೇಸುವು ಹೇಳಿದ್ದು: “ಸ್ತ್ರಿಯೇ ಇಗೋ ನಿನ್ನ ಮಗನು” ಮತ್ತೆ ಅದೇ ಪ್ರಕಾರ ಶಿಷ್ಯನಿಗೆ ಹೇಳಿದ್ದು “ಇಗೋ ನಿನ್ನ ತಾಯಿ”. ಮತ್ತು ಆ ಘಳಿಗೆಯಿಂದ ಆ ಶಿಷ್ಯನು ಅವಳನ್ನು ಸ್ವಂತ ಮನೆಯಲ್ಲಿ ಸೇರಿಸಿ ಕೊಂಡನು.



## § 149. ಕ್ರಿಸ್ತನ ಮರಣ

೧) ಮತ್ತಾ. ೨೭, ೪೫ ಇತ್ಯಾದಿ. ಮಾರ್ಕ. ೧೫, ೩೩ ಇತ್ಯಾದಿ. ಲೂಕ. ೨೩, ೪೪ ಇತ್ಯಾದಿ. ಯೋಹಾ. ೧೯, ೨೮ ಇತ್ಯಾದಿ. ಮತ್ತು ೬ನೇ ತಾಸಿನಿಂದ ೯ನೇ ತಾಸಿನ ಪರ್ಯಂತರ (೧೨—೩ ಘಂಟೆಯ ವರೆಗೆ) ದೇಶವೆಲ್ಲಾದರ ಮೇಲೆ ಕತ್ತಲೆ ಬಂತು, ಮತ್ತು ಸೂರ್ಯವು ಕತ್ತಲಾಯಿತು. ಅದು ಭೂಮಿಯಲ್ಲಿ ಹೃದಯವನ್ನು ಛೇದಿಸುವಂಥ ನೋಟಕ್ಕಾಗಿ ತನ್ನ ಮುಖವನ್ನು ಮುಚ್ಚಿ ಕೊಂಡ ಹಾಗೆ ಆಯಿತು. ಜೀವದ ಪ್ರಭು ಮರಣದ ಸಂಗಡ ಹೋರಾಡುವಾಗ್ಯೆ, ಅದು ಜೀವ ಕೊಡುವ ತನ್ನ ಪ್ರಕಾಶವನ್ನು ಪ್ರಕಾಶಿಸಲೊಲ್ಲದು; (ಸಾಧಾರಣವಾದ ಸೂರ್ಯಗ್ರಹಣವು ಪೂರ್ಣಿಮಿಯ ಸಮಯದಲ್ಲಿ ಆಗ ಕೂಡದೆ ಇತ್ತು.) ರಕ್ಷಕನು ಈ ಸಮಯದಲ್ಲಿ ಕ್ರೂಜೆಯಲ್ಲಿ ಮೌನವಾಗಿ ತೂಗಾಡಿದನು! ಆದರೆ ಅವನ ಪರಿಶುದ್ಧ ಪ್ರಾಣವು

ಬಹಳ ಕಷ್ಟ ಪಡುವ ಶರೀರದ ಬಂಧಗಳಿಂದ ಬಿಡಿಸಿ ಕೊಳ್ಳುವಂಥ ಮರಣದ ಸಮಯವು ಸಮೀಪಿಸಿದಾಗ, ಅವನು ಇನ್ನು ಒಂದೇ, ಆದರೆ ಅತಿಭಯಂಕರವಾಗಿಯೂ ಕಡೇದಾಗಿಯೂ ಇರುವ ಹೋರಾಟವನ್ನು ಹೋರಾಡ ಬೇಕು. ಮರಣದ ಭಯಗಳು ಅವನ ಮೇಲೆ ಬಿದ್ದವು. ಮೇಲಿನಿಂದ ಸಹಾಯ ಬಲಗಳನ್ನು ಹೊಂದದೆ, ಎಲ್ಲಾ ಲೋಕದ ಪಾಪದ ಸಂಬಳವನ್ನು ಅದರ ಪೂರ್ಣ ಭಯಂಕರವಾದ ಕಠೀಣತ್ವದಲ್ಲಿ ರುಚಿ ನೋಡ ಬೇಕಾಯಿತು. ಆಗ್ಯೆ ಅವನು ೨೨ನೇ ಕೀರ್ತನೆಯ ೧ನೇ ವಾಕ್ಯವನ್ನು ಹೇಳಿ ಗೋಳಾಡಿದನು. "ಎಲೀ ಎಲೀ ಲಮ್ಮಾ ಅಸಫ್ತಾನಿ" "ಹಾಗಂದರೆ ನನ್ನ ದೇವರೇ, ನನ್ನ ದೇವರೇ ಯಾತಕ್ಕೆ ನನ್ನನ್ನು ಬಿಟ್ಟು ಬಿಟ್ಟಿದ್ದೀ!" ಕ್ರೂಜೆಯ ಬುಡದಲ್ಲಿ ನಿಂತು, ಪರಿಹಾಸ್ಯ ಮಾಡುವವರಿಗೆ ಭ್ರಾಂತಿ ಹತ್ತಿತು. ಯಾಕಂದರೆ ಅವರು ಅವನು ಎಲೀಯನನ್ನು ಕರಿಯುತ್ತಾನೆಂದು ನೆನಸಿದರು (ಮಲಕಿ. ೪, ೫. ೬. § ೯೫, ೩). ಮತ್ತು ಅವನು ನನಗೆ ದಾಹವಾಗುತ್ತದೆ ಎಂದು ಸಂಕಷ್ಟದಲ್ಲಿ ಕೂಗಿದಾಗ, ಅವರು ಹುಳಿರಸ ತುಂಬಿಸಿದ ಪಾಟಿಯನ್ನು ಅವನಿಗೆ ಕುಡಿಯ ಕೊಟ್ಟರು. ಈ ಪ್ರಕಾರ ಸ್ವಲ್ಪ ಆಶ್ರಮ ಪರಿಹಾರವಾದ ಮೇಲೆ ಅವನು ಹೇಳಿದ್ದು: "ತೀರಿತು! ತಂದೆಯೇ ನಿನ್ನ ಕೈಗಳಲ್ಲಿ ನನ್ನ ಆತ್ಮವನ್ನು ಇಡುತ್ತೇನೆ" ತರುವಾಯ ತಲೆ ಬಾಗಿಸಿ ಆತ್ಮವನ್ನು ಒಪ್ಪಿಸಿದನು.

೨) ಮತ್ತಾ. ೨೭, ೫೧ ಇತ್ಯಾದಿ. ಮಾರ್ಕ. ೧೫, ೩೮ ಇತ್ಯಾದಿ. ಲೂಕ. ೨೩, ೪೫ ಇತ್ಯಾದಿ. —ಹಾಗಾದರೆ ಪಾಪದ ಲೋಕವನ್ನು ಅದರ ಕೇಡಿನಿಂದ ತಪ್ಪಿಸುವದಕ್ಕಾಗಿ ತಂದೆಯ ನಿತ್ಯ ಪ್ರೀತಿಯು ಮೊದಲೇ ಆಲೋಚಿಸಿದಂಥಾದ್ದು, ದೇವಾಲಯದ ನೆರಳಿನ ಸೇವೆಯು ೨ ವರುಷ ಸಹಸ್ರಗಳ ಪರ್ಯಂತರ ಮುಂಗುರ್ತಾಗಿ ಇಟ್ಟಂಥಾದ್ದು ಈಗ ತೀರಿ ಇತ್ತು. ಈಗ ಎಲ್ಲರಿಗೆ ಕೃಪಾಸನಕ್ಕೆ ಪ್ರವೇಶವು ತೆರದದೆ ಎಂಬದಕ್ಕೆ ಸಾಕ್ಷಿಯಾಗಿ ದೇವಾಲಯದ ತೆರೆಯು ಮೇಲಿನಿಂದ ಕೆಳಗಿನ ಪರ್ಯಂತರ ಆಗಲೇ ಎರಡಾಗಿ ಹರದು ಹೋಯಿತು. ನಿತ್ಯ ಸಾಕಾಗಿರುವಂಥ ದೇವರ ಮಗನ ರಕ್ತಬಲಿಯು ತೀರಿ ಇತ್ತು. ಇಂದಿನಿಂದ ಮೊರೀಯದ ಮೇಲಿನ ದೇವಾಲಯದ ವಿಶೇಷತ್ವವು ಹೋಗಿತ್ತು. ಅದರಲ್ಲಿ ಆಗುವ ದೇವಾರಾಧನೆ ಎಲ್ಲಾ ಪ್ರಯೋಜನವಿಲ್ಲದ ಬರೇ ನಿಷ್ಫಯಾಗಿತ್ತು. ನರಳುವ ನಿರ್ಮಾಣ್ಯವು ಕಷ್ಟವಾಗಿ ಕಾದು ಕೊಂಡಿದ್ದಂಥಾದ್ದು ಸತ್ತವರೂ ಬದುಕುವವರೂ ವಿಶ್ವಾಸದಲ್ಲಿ ಅಪೇಕ್ಷಿಸಿದ್ದಂಥಾದ್ದು ತೀರಿ ಇತ್ತು. ಆದ ಕಾರಣ ಈಗ ಭೂಮಿಯು ಕಂಪಿಸಿತು, ಬಂಡೆಗಳು ಸೀಳಿ ಹೋದವು; ಸಮಾಧಿಗಳು ತೆರಿಯಲ್ಪಟ್ಟವು, ಮತ್ತು ಮಲಗಿದ್ದ ಅನೇಕ ಪರಿಶುದ್ಧರ ಶರೀರಗಳು ಎಬ್ಬಿಸಲ್ಪಟ್ಟವು. ಅವನು ಎದ್ದ ಮೇಲೆ (ಸಮ ನೋಡು ೧ ಕೊರಿಂಥ. ೧೫,

೨೦). ಅವರು ಸಮಾಧಿಗಳಿಂದ ಹೊರಟು, ಪರಿಶುದ್ಧ ಪಟ್ಟದಲ್ಲಿ ಪ್ರವೇಶಿಸಿ, ಅ ನೇಕರಿಗೆ ಕಾಣಿಸಿ ಕೊಂಡರು. ಇದಲ್ಲದೆ ಪ್ಲೇಂಥನಾದ ಶತಾಧಿಪತಿಯೂ ಅವನ ಸಂ ಗಡ ಯೇಸುವನ್ನು ಕಾಯುವವರೂ ಅಂಥಾ ಗುರ್ತುಗಳನ್ನು ನೋಡಿ ಭಯ ಪಟ್ಟು "ನಿಶ್ಚಯವಾಗಿ ಇವನು ದೇವರ ಮಗನಾಗಿದ್ದನು ಎಂದು ಸಾಕ್ಷಿ ಕೊಟ್ಟರು." ಮ ತ್ತು ಸುತ್ತಲು ನಿಂತ ಜನರೆಲ್ಲರೂ ನೋಡುತ್ತಿರುವಾಗ್ಯೆ ಎದೆ ಬಡ ಕೊಂಡು ತಿರಿಗಿ ಹೋದರು.

ಪರಿಶಿಷ್ಟ. ಮರಣವು ಪಾಪದ ಸಂಬಳವಾಗಿರುತ್ತದೆ. ಮನುಷ್ಯಸಂತತಿ ಎ ಲ್ಲಾ ಪಾಪದಿಂದ ಕಾಲಿಕವಾಗಿಯೂ ನಿತ್ಯದಲ್ಲಿಯೂ ಇರುವ ಮರಣಕ್ಕೆ ಒಳಗಾದರು. ಕ್ರಿಸ್ತನು ಪಾಪವನ್ನು ತಿಳಿಯದವನಾಗಿ ಮನುಷ್ಯಸಂತತಿ ಎಲ್ಲಾದರ ಪಾಪಕ್ಕೋಸ್ಕ ರ ಸಂಬಳವನ್ನು ತೆತ್ತನು. ಅವನ ಶ್ರಮವು ಮತ್ತೊಬ್ಬರಿಗೋಸ್ಕರವಾದ ಶ್ರಮವು; ಅವನ ಮರಣವು ಬಲಿಮರಣವು. ನಾವು ಸಹಿಸ ಬೇಕಾಗಿ ಇದ್ದಂಥಾ, ಆದರೆ ನಿತ್ಯ ಶಿಕ್ಷೆಗೊಳಗಾಗದೆ ಸಹಿಸ ಕೂಡದಂಥಾದ್ದನ್ನು ಅವನು ಸಹಿಸಿದನು. ಅವನು ಸಹಿಸಿ ದಂಥಾ ಮರಣವೂ ಅವನು ಒಳಗಾದಂಥಾ ಶಿಕ್ಷೆಯೂ ಕಾಲಿಕವಾಗಿತ್ತೆಂಬದು ಸರಿ. ಆದರೂ ನಾವು ದುಡಿದಂಥಾ ನಿತ್ಯ ಮರಣಕ್ಕೂ ನಿತ್ಯ ಶಿಕ್ಷೆಗೂ ಅದು ಪೂರ್ಣ ಸ ಮ ಭಾರವಾಗಿರುತ್ತದೆ. ಹ್ಯಾಗಂದರೆ: ಅವನು ನಿತ್ಯ ವಿಮೋಚನೆಯನ್ನು ಸಂ ಪಾದಿಸಿ ಕೊಂಡನು (ಇಬ್ರಿ. ೯, ೧೨). ನಿತ್ಯ ಆತ್ಮದಿಂದ ತನ್ನನ್ನು ದೇವರಿ ಗೆ ಕಳಂಕವಿಲ್ಲದವನಾಗಿ ಅರ್ಪಿಸಿದನು (ಇಬ್ರಿ. ೯, ೧೪), ಅಂದರೆ ಅವನ ನಿತ್ಯ ದೇವತ್ವವು ಸಹಿಸುವಂಥಾ ಮನುಷ್ಯಸ್ವಭಾವದೊಡನೆ ಒಂದೇ ಅಹಂಭಾವವಾಗಿ, ಈ ಕಾಲಿಕವಾದ ಶ್ರಮಗಳಿಗೆ ಅಮಿತವಾದ ಬೆಲೆಯನ್ನೂ ನಿತ್ಯ ಯೋಗ್ಯತೆಯನ್ನೂ ಉಂಟು ಮಾಡಿತು.



## § 150. ಕ್ರಿಸ್ತನ ಸಮಾಧಿ

ಮತ್ತಾ. ೨೭, ೫೭. ಮಾರ್ಕ. ೧೫, ೪೨ ಇತ್ಯಾದಿ. ಲೂಕ. ೨೩, ೫೦ ಇ ತ್ಯಾದಿ. ಯೋಹಾ. ೧೯, ೩೧ ಇತ್ಯಾದಿ. ಅದೇ ದಿವಸ ಸಾಯಂಕಾಲದಲ್ಲಿ ಸಬ್ಬತ ದಿವಸವು ಆರಂಭವಾದದರಿಂದ ಯೆಹೂದ್ಯರು (ಅವರು ಸತ್ತದ್ದನ್ನು ನಿಶ್ಚಯವಾಗಿ ತಿಳುಕೊಳ್ಳುವದಕ್ಕೋಸ್ಕರ) ಶವಗಳನ್ನು ತೆಗದು, ಅವರ ಕಾಲುಗಳನ್ನು ಮುರಿಯ ಬೇ

ಕೆಂದು ಅಪೇಕ್ಷಿಸಿದರು. ಪಿಲಾತನು ಅಪ್ಪಣೆ ಕೊಟ್ಟನು; ಆದರೆ ಇದಕೋಸ್ಕರ ಕಳುಹಿ
ಸಲ್ಪಟ್ಟ ರಾಣುವೆಯವರು ಯೇಸು ಸತ್ತಿದ್ದಾನೆಂಬದನ್ನು ನೋಡಿ, ಅವನ ಕಾಲುಗ
ಳನ್ನು ಮುರಿಯಲಿಲ್ಲ (೨ಮೋಶೆ. ೧೨, ೪೬. ಶ್ಲೋಕ). ಆದರೆ ರಾಣುವೆಯವರ
ಲ್ಲಿ ಒಬ್ಬನು ಭಲ್ಲೆಯಿಂದ ಅವನ ಪಕ್ಕೆ ತಿವಿದನು (ಜಕರಿಯ. ೧೨, ೧೦). ಕೂ
ಡಲೇ ನೀರೂ ರಕ್ತವೂ ಹೊರಗೆ ಬಂತು. ಮಂತ್ರಿಸಭೆಯಲ್ಲಿದ್ದ ಅರಿಮತ್ಥಾಯದ
ಯೋಸೇಫನು ಇಷ್ಟು ವರೆಗೆ ತನ್ನ ಸಂಗಡಿಗರ ಭಯದಿಂದ ಅಂತರಂಗದಲ್ಲಿ ಯೇ
ಸುವಿನ ಶಿಷ್ಯನಾಗಿದ್ದು, ಈಗ ಅಧಿಪತಿಯ ಅನುಜ್ಞೆಯನ್ನು ಹೊಂದಿ, ಶುದ್ಧ ಶವವನ್ನು
ತಕ್ಕೊಂಡು, ನಿಕೊದೇಮನ ಸಹಿತವಾಗಿ ತಾನು ಬಂಡೆಯಲ್ಲಿ ತೋಡಿಸಿದ ಹೊಸ ಸ
ಮಾಧಿಯೊಳಗೆ ಅದನ್ನು ಇಟ್ಟು (ಯೆಶಾಯ. ೫೩, ೯) ಸಮಾಧಿಯ ಬಾಗಲಿಗೆ
ದೊಡ್ಡ ಕಲ್ಲನ್ನು ಹೊರಳಿಸಿದನು. ಮಗ್ದಲದವಳಾದ ಮರೀಯಳೂ ಯಾಕೋಬನ
ತಾಯಾದ ಮರೀಯಳೂ ಇಳಿಸುವ ಪರ್ಯಂತರ ಶಿಲುಬೆಯ ಬುಡದಲ್ಲಿ ಇದ್ದವರಾ
ಗಿ ಈಗ ಅವರ ಹಿಂದೆ ಹೋಗಿ, ಸಮಾಧಿಯನ್ನೂ ಅವನ ಶರೀರವು ಹ್ಯಾಗೆ ಇಡಲ್ಪ
ಟ್ಟಿತ್ತೆಂಬದನ್ನೂ ನೋಡಿದರು. ಮರುದಿವಸ ಯಾಜಕರು ಪಿಲಾತನ ಬಳಿಗೆ ಕೂ
ಡಿ ಬಂದು, ಯೇಸುವಿನ ಶಿಷ್ಯರು ಶವವನ್ನು ತಕ್ಕೊಂಡು ಹೋಗಿ ಅವನು ಎದ್ದಿದ್ದಾ
ನೆಂದು ಹೇಳದ ಹಾಗೆ ಸಮಾಧಿಯನ್ನು ಭದ್ರ ಮಾಡುವದಕ್ಕೆ ರಾಣುವೆಯವರನ್ನು
ಕೊಡ ಬೇಕೆಂದು ಬೇಡಿಕೊಂಡರು. ಪಿಲಾತನು ಅವರಿಗೆ ಒಪ್ಪಿಕೊಳ್ಳಲಾಗಿ, ಅವರು
ಹೋಗಿ, ಕಲ್ಲಿಗೆ ಮುದ್ರೆ ಹಾಕಿ, ಸಮಾಧಿಯನ್ನು ಕಾವಲಿಯಿಂದ ಭದ್ರ ಮಾಡಿ
ದರು.

ಪರಿಶಿಷ್ಟ ೧. ಈ ಪ್ರಕಾರ ರಕ್ಷಕನ ಪರಿಶುದ್ಧ ಶರೀರವು ಸಮಾಧಿಯಲ್ಲಿ ವಿಶ್ರ
ಮಿಸಿಕೊಳ್ಳಲಾಗಿ ಅವನ ಪ್ರಾಣವು ಹಾದೇಸಿನಲ್ಲಿ (ಷೆಯೋಲ್ ಅಂದರೆ ಪಾತಾಳ)
ಅಂದರೆ ಎಲ್ಲಾ ಸತ್ತವರ ಪ್ರಾಣಗಳು ಉತ್ಥಾನವನ್ನೂ ನ್ಯಾಯವಿಚಾರವನ್ನೂ ಕಾ
ದುಕೊಂಡು ಇಡಲ್ಪಟ್ಟ ಸ್ಥಳದಲ್ಲಿ ಹೋಯಿತು. ಈ ತೆರಿಗೆಯನ್ನು ಸಹಾ ಕ್ರಿಸ್ತನು
ಪಾಪದ ಮಾಂಸದ ಆಕಾರದ ಪ್ರಕಾರ ತೆರ ಬೇಕಾಯಿತು. ಇದರಲ್ಲಿ ಸಹಾ ಅವನು
ನಮ್ಮೆಲ್ಲರ ಹಾಗೆಯೇ ಆಗ ಬೇಕಾಯಿತು. ಈ ಪ್ರಕಾರ ಪಾತಾಳಗಮನವು ತ
ಗ್ಗಿಸುವಿಕೆಯ ಕಡೇ ಮೆಟ್ಟು ಎಂದು ಹೇಳ ಬಹುದು. ಆದರೆ ಅದು ಅದೇ ಸ
ಮಯದಲ್ಲಿ ಹೆಚ್ಚಿಸುವಿಕೆಯ ಮೊದಲನೇ ಮೆಟ್ಟಾಗಿತ್ತು. ಹ್ಯಾಗಂದರೆ ಕೆಳಗೆ ಬೀಳು
ವದರಲ್ಲಿ ಜಯವೂ ದೀನತ್ವದಲ್ಲಿ ಮಹಿಮೆಯೂ, ಉಂಟಾಯಿತು. ಯಾಕಂದರೆ ನಮ್ಮೆ
ಲ್ಲರ ಹಾಗೆ ಮತ್ತೊಬ್ಬನು ಬಿಡಿಸುವ ಪರ್ಯಂತರಕ್ಕೂ ಅಲ್ಲಿಡಲ್ಪಡುವದಕ್ಕಾಗಿ ಅವ
ನು ಅಧೋಲೋಕಕ್ಕೆ ಹೋದದ್ದಾಗಿರುವದಿಲ್ಲ. ಅವನು ಮರಣವನ್ನು ಸ್ವಂತ

ಪಾಪದ ಸಂಬಳವಾಗಿ ತಾಳಿದ್ದಲ್ಲವಾದ್ದರಿಂದ ಹಾದೇಸಕ್ಕೆ ಅವನ ಮೇಲೆ ಏನೂ ಅಧಿಕಾರವಿರಲಿಲ್ಲ, ಮರಣದಿಂದ ಜೈಸಲ್ಪಟ್ಟವನಾಗಿ ಅವನು ಅಲ್ಲಿ ಹೋದದ್ದಲ್ಲ; ಮರಣದ ಮೇಲೆ ಜಯಶಾಲಿಯಾಗಿ (ಕೀರ್ತನೆ. ೧೬, ೧೦. ಸಮ ನೋಡು ಅಪೊ. ಕ್ರಿ. ೨, ೨೯—೩೨ನೇ ವರೆಗೆ ೧೩, ೩೬. ೩೭ ವಚನ) ಅಲ್ಲಿ ಸಹಾ ತನ್ನ ಮಹಿಮೆಯನ್ನು ಪ್ರಕಟ ಮಾಡುವದಕ್ಕೂ ಪೂರ್ವ ಕಾಲದಿಂದ ಇದ್ದಂಥಾ ಅವಿಶ್ವಾಸಿಗಳಿಗೂ ಮುಖ್ಯವಾಗಿ ನೋಹನ ಕಾಲದವರಿಗೂ ಮತ್ತೊಂದು ಸಾರಿ ಪ್ರಸಂಗಿಸಲಿಕ್ಕೂ (೧ಪೇತ್ರ. ೩, ೧೯. ೨೦. ವಚನಗಳು) ಇಷ್ಟು ಪರ್ಯಂತರ ವಿಶ್ವಾಸದಲ್ಲಿ ಸತ್ತವರಿಗೆ ಬಹು ಕಾಲ ಕಾದು ಕೊಂಡ ತರುವಾಯ ಸಂಪೂರ್ಣವಾದ ವಿಮೋಚನೆಯ ವಾರ್ತೆಯನ್ನು ತರಲಿಕ್ಕೂ (ಯೋಹಾನ. ೮, ೫೬) ಮತ್ತು ಅವರಿಂದ ಉತ್ಥಾನದ ಪ್ರಥಮ ಫಲಗಳನ್ನು ತನ್ನೊಡನೆ ಮಹಿಮೆಯಲ್ಲಿ ಸೇರಿಸಲಿಕ್ಕೂ ಹೋಗಿದ್ದನು (ಲೂಕ. ೨೩, ೪೩. ಮತ್ತಾ. ೨೭, ೫೨ ವಚನ). ಪಾತಾಳದ ವಿಷಯವಾದ ಕ್ರೈಸ್ತ ಬೋಧನೆಯನ್ನು ತಿಳುಕೊಳ್ಳುವದಕ್ಕೆ ಮುಖ್ಯವಾಗಿ ಐಶ್ವರ್ಯವಂತನ ಮತ್ತು ಬಡ ಲಾಜರನ ಸಾಮ್ಯವನ್ನು (ಲೂಕ. ೧೬, ೧೯). ನೋಡಿ ಕೊಳ್ಳ ಬೇಕು.

ಪರಿಶಿಷ್ಟ ೨. ಕೊನ್ಸ್ತಂತೀನನ ಕಾಲದಿಂದ ಸಂಪ್ರದಾಯವು ನ್ಯಾಯಸ್ಥಾನದ ಸ್ಥಳವನ್ನೂ ಕ್ರಿಸ್ತನ ಸಮಾಧಿಯ ಸ್ಥಳವನ್ನೂ ಕಲ್ಪನೆಯ ಪ್ರಕಾರ ಅವುಗಳ ಮೇಲೆ ದೇವಾಲಯಗಳನ್ನು ಕಟ್ಟುವದರಿಂದ ನಿಶ್ಚಯಿಸಿಯದೆ. ಈಗಿನ ಪರಿಶುದ್ಧ ಸಮಾಧಿ ದೇವಾಲಯವು ಈಗಿನ ಪಟ್ಟಣ ಪ್ರಾಕಾರದೊಳಗೆ ಅಕ್ರ (§ ೬೬, ೩) ಗುಡ್ಡದಲ್ಲಿ ಉಂಟು. ಇದರ ಬೇರೆ ಬೇರೆ ಭಾಗಗಳು ರೋಮಾಯರ ಗ್ರೇಕರ ಅರ್ಮೇನ್ಯರ ವಶದಲ್ಲಿ ಉಂಟು. ಆ ಇಡೀ ಆಲಯವೇ ಒಂದೇ ಮಾಡಿನ ಕೆಳಗೆ ೩ ದೇವಾಲಯಗಳಾಗಿರುತ್ತವೆ. ಶುದ್ಧ ಸಮಾಧಿಯದು ಕಪಾಲಪರ್ವತದ್ದು ಶಿಲುಬೆ ಸಂಪಾದನೆಯದು. ಮಧ್ಯ ಭಾಗದಲ್ಲಿ ಗ್ರೇಕರ ಸಭಾಲಯ ಮಂಟಪವು ಕಪಾಲಪರ್ವತದ ಸಹಿತವಾಗಿ ಇರುತ್ತದೆ. ಪಶ್ಚಿಮ ಕಡೆಯಲ್ಲಿ ಪರಿಶುದ್ಧ ಸಮಾಧಿಯು ಉಂಟು. ಇದರ ಮೇಲೆ ಒಂದು ದೊಡ್ಡ ಗೋಪುರ ಉಂಟು (ಇದು ಅರ್ಧ ರೋಮಾಯರಿಗೆ ಅರ್ಧ ಗ್ರೇಕರಿಗೆ). ಪೂರ್ವ ಕಡೆಯಲ್ಲಿ ನೆಲಮಾಳಿಗೆಯಾಗಿ ಶಿಲುಬೆ ಸಂಪಾದನೆಯ ಆಲಯ ಉಂಟು. ಕೊನ್ಸ್ತಂತೀನನ ತಾಯಿ ಹೆಲೇನಳು ೩ ಶಿಲುಬೆಗಳನ್ನು ಆಶ್ಚರ್ಯಕರವಾಗಿ ಸಂಪಾದಿಸಿ ಕೊಂಡು ಯೇಸುವಿನದು ಯಾವದೆಂದು ನಿಶ್ಚಯಿಸಿದಂಥಾ ಸ್ಥಳದಲ್ಲಿ ಈ ದೇವಾಲಯ ಉಂಟು. ಅದು ರೋಮಾಯರ ವಶದಲ್ಲಿ ಇರುತ್ತದೆ. ಅರ್ಮೇನ್ಯರಿಗೆ ಕೆಲವು ಗುಡಿಗಳು ಉಂಟು. ಅವುಗಳ ವಿಷಯವಾಗಿ ಸಹಾ ಪರಿಶುದ್ಧ ನೆನಪುಗಳನ್ನು ಹೇಳಿ ಕೊಳ್ಳುತ್ತಾರೆ. ಶಿಲುಬೆಗೆ ಹಾಕಿದ್ದೂ ಸಮಾ

ಧಿಯಲ್ಲಿಟ್ಟದ್ದೂ ಎಂಬ ಸ್ಥಳವು ಇದೇ ಎಂತ ಹೇಳುವದು ಅಸಾಧ್ಯವೆಂಬದಾಗಿ ಬಹು ಕಾಲ ಪರ್ಯಂತರ ಹೇಳಿದರು. ಯಾಕಂದರೆ ಸುವಾರ್ತೆಗಳ ಪ್ರಕಾರ ಎರಡು ಪಟ್ಣದ ಹೊರಗಿರ ಬೇಕು. ಆದರೆ ಹೊಸ್ತಾಗಿ ವಿಚಾರಿಸಿ ನೋಡಿದ್ದಲ್ಲಿ ಆಗಿನ ಪಟ್ಣದ ಗೋಡೆಯ ಭಾಗಗಳು ಪರಿಶುದ್ಧ ಸಮಾಧಿ ದೇವಾಲಯದ ಪೂರ್ವಕಡೆಯಲ್ಲಿ ಇರುತ್ತವೆಂದು ನಿಶ್ಚಯವಾಯಿತು. ಆದದರಿಂದ ಅದು ಸತ್ಯವಾಗಿರ ಬಹುದೆಂಬದು ಸಾಧ್ಯವೆಂಬದನ್ನು ಯಾರೂ ತರ್ಕಿಸ ಕೂಡದು.

## § 151. ಕ್ರಿಸ್ತನ ಪುನರುತ್ಥಾನವು, ಮಗ್ದಲದವಳಾದ ಮರೀಯಳು

೧) ಮತ್ತಾ. ೨೮, ೧ ಇತ್ಯಾದಿ. ಆದಿತ್ಯವಾರ ದಿವಸ ಬೆಳಿಗ್ಗೆ ಸುರ್ಯೋದಯವಾಗುವ ಮೊದಲೇ ಬಹಳ ಮುಂಜಾನೆ ಮಗ್ದಲದವಳಾದ ಮರೀಯಳೂ ಯಾಕೋಬನ ಮರೀಯಳೂ ಸಲೋಮೆಯೂ ತಾವು ಪ್ರೀತಿ ಮಾಡಿದಂಥವನ ಶವಕ್ಕೆ ಸುಗಂಧಗಳನ್ನು ಹಚ್ಚಲಿಕ್ಕೋಸ್ಕರ ಸಮಾಧಿಗೆ ಬಂದರು. ಆದರೆ ಅವರು ಅಲ್ಲಿ ಬರುವ ಮೊದಲೇ ಕರ್ತನು ಎದ್ದಿದ್ದನು. ದಿವಭೂಮಿಗಳು ಈ ಕ್ಷಣದಲ್ಲಿ ಉತ್ಸವ ಮಾಡಿ ಇದ್ದವು. ಭೂಮಿಯು ಕಂಪಿಸಿತು! ಮತ್ತು ಒಬ್ಬ ದೂತನು ಮಿಂಚಿನ ಹಾಗೆ ರೂಪವುಳ್ಳವನಾಗಿಯೂ ಹಿಮದ ಹಾಗೆ ಬಿಳುಪಾದ ವಸ್ತ್ರವುಳ್ಳವನಾಗಿಯೂ ದಿವದಿಂದ ಇಳಿದು ಬಂದು, ಬಾಗಲಿನಿಂದ ಕಲ್ಲನ್ನು ಹೊರಳಿಸಿ, ಅದರ ಮೇಲೆ ಕೂತುಕೊಂಡಿದ್ದನು. ಇದನ್ನು ಸಮಾಧಿಯ ಕಾವಲಿಯವರು ನೋಡಿ, ಭಯದಿಂದ ನೆಲಕ್ಕೆ ಬಿದ್ದಿದ್ದರು.

ಪರಿಶಿಷ್ಟ ೧. ರಕ್ಷಕನಲ್ಲಿದ್ದ ದೇವರ ಬಲದ ಸಂಪೂರ್ತಿಯಿಂದ ಅವನು ನಾವು ಮಾಡ ಕೂಡದಾದದ್ದನ್ನು ಮಾಡಿದನು. ಏನಂದರೆ—ಅವನು ಮರಣದಲ್ಲಿ ಮರಣವನ್ನು ಜೈಸಿದನು. ಕೊಳೆಯನ್ನು ತನ್ನ ಪರಿಶುದ್ಧ ಶರೀರದ ಹತ್ತರ ಬರಲಿಕ್ಕೆ ಬಿಡದೆ ಇದನ್ನು ಪರಿಶುದ್ಧವಾದಂಥಾ ಸಂಪೂರ್ಣವಾದಂಥಾ ತನ್ನ ಮನುಷ್ಯತ್ವಕ್ಕೆ ಮಹಿಮೆಯಾಗಿಯೂ ಆನಂದವಾಗಿಯೂ ಇರುವ ಮನೆಯಾಗ ಮಾಡಿದನು. ತನ್ನ ಬಲಿಮರಣದಿಂದ ಅವನು ಸ್ವೇಚ್ಛೆಯಿಂದ ತನ್ನ ಮೇಲೆ ತಕ್ಕೊಂಡ ಲೋಕದ ಪಾಪಗಳನ್ನು ವಿಮೋಚಿಸಿ ಲಯ ಮಾಡಿ ಇದ್ದನು. ಮತ್ತು ಅವುಗಳ ಸಂಗಡಲೇ ಪಾಪದ ಮಾಂಸದ ಆಕಾರವನ್ನು ಸಹಾ ಜೈಸಿ ಶುಚಿ ಮಾಡಿ ನಿತ್ಯ ಮಹಿಮೆಯ ವಸ್ತ್ರದಿಂದ ಹೊ

ದಿಸಿ ಇದ್ದನು. ಮರ್ತ್ಯವಾದದ್ದು ಅಮರತ್ವದಿಂದ ನುಂಗಲ್ಪಟ್ಟು ಅವನ ಜೀವದ ಅನಂತ ಸಂಪೂರ್ಣತೆಯಲ್ಲಿ ಕಾಣದೆ ಹೋಗಿತ್ತು. ಹಾಗಾದರೆ ಕ್ರಿಸ್ತನ ಉತ್ಥಾನವು ಲಾಜರನು ಮೊದಲಾದವರನ್ನು ಮರಣದಿಂದ ಎಬ್ಬಿಸಿದಕ್ಕೆ ಅನಂತವಾಗಿ ಬೇರೆಯಾಗಿತ್ತು. ಹ್ಯಾಗಂದರೆ ಇಲ್ಲಿ ಹೊರಗೆ ಹೋದ ಪ್ರಾಣವು ಅದೇ ಹಳೇ ಶರೀರದ ಸಂಗಡ ಸ್ವಲ್ಪ ಕಾಲಕ್ಕೆ ಕೂಡಿ ಕೊಂಡಿತು. ಆದರೆ ಈ ಶರೀರವು ತರುವಾಯ ಹ್ಯಾಗಾದರೂ ಮರಣಕ್ಕೂ ಕೊಳೆಗೂ ವಶವಾಗ ಬೇಕಾಯಿತು. ಆದರೆ ಕ್ರಿಸ್ತನು ಉತ್ಥಾನದಲ್ಲಿ ಪ್ರಕಾಶಮಯವಾದ ಅಮರತ್ವದಿಂದ ಹೊದಿಸಲ್ಪಟ್ಟಂಥಾ ಶರೀರತ್ವವನ್ನು ಧರಿಸಿದನು (ರೋಮ. ೬, ೯). ಇದು ಬಹಳ ಸೂಕ್ಷ್ಮವಾಗಿಯೂ ಆಕಾಶರೂಪವಾಗಿಯೂ ಇರಲಾಗಿ ನಮ್ಮ ಪಾಪದ ಶರೀರವು ಒಳಗಾಗಿರುವ ಬೇರೆ ಬೇರೆ ಇಕ್ಕಟ್ಟಿನ ಕಾರಣಗಳಿಗೂ ಸ್ಥಿತಿಗಳಿಗೂ ಉನ್ನತವಾಗಿತ್ತು. ಹ್ಯಾಗಂದರೆ—ಮುಚ್ಚಿದ ಬಾಗಲುಗಳೂ ಗೋಡೆಗಳೂ ಉತ್ಥಾನದ ಶರೀರಕ್ಕೆ ಅಡ್ಡಿಯಾಗಲಿಲ್ಲ. ವಿಶೇಷವಾಗಿಯೂ ಪ್ರತ್ಯೇಕವಾದ ಮನೋಸಂಕಲ್ಪವಿಲ್ಲದೆಯೂ ಮನುಷ್ಯನ ಕಣ್ಣುಗಳಿಗೆ ಆದೃಶ್ಯವಾಗಿತ್ತು. ಕ್ರಿಸ್ತನು ಉತ್ಥಾನದ ತರುವಾಯ ಇನ್ನೂ ಭೂಮ್ಯಾಹಾರವನ್ನು ತಕ್ಕೊಂಡದರಿಂದ (§ ೧೫೨, ೨) ಅದು ಅವನಿಗೆ ಅವಶ್ಯವಾಗಿತ್ತೆಂದು ಹೇಳಲಾಗದು. ಅದನ್ನು ಅವನು ಶರೀರವಿಲ್ಲದ ಆತ್ಮವಾಗಿರುತ್ತಾನೆಂದು ಶಿಷ್ಯರು ನೆನಸಿದ್ದು ತಪ್ಪೆಂತ ತೋರಿಸ ಬೇಕೆಂಬುದಕ್ಕಾಗಿ ಮಾಡಿದನೆಂತ ಸ್ಪಷ್ಟವಾಗಿ ಹೇಳಿಯದೆ (ಹ್ಯಾಗುಸಮ ನೋಡು ಮತ್ತಾ. ೨೬, ೨೯. ಮಾರ್ಕ. ೧೪, ೨೫. ಪ್ರಕಟ. ೨೨, ೧. ೧ಮೋಶೆ. ೧೮, ೮).

ಪರಿಶಿಷ್ಟ ೨. ಉತ್ಥಾನದಿಂದ ಕ್ರಿಸ್ತನು ದೇವರ ಮಗನೆಂದೂ (ರೋಮಾ. ೧, ೪) ನರಕದ ಮೇಲೆಯೂ ಮರಣದ ಮೇಲೆಯೂ ಜಯಶಾಲಿಯಾಗಿಯೂ ಬಲವಾಗಿ ನಿರ್ಣಯಿಸಲ್ಪಟ್ಟನು. ಅವನು ಮಾರ್ಗ ಮಾಡಿದನು. ಮತ್ತು ತನ್ನ ಉತ್ಥಾನದಿಂದ ನಮ್ಮ ನೀಚತನದ ಶರೀರವನ್ನು ಸಹಾ ತನ್ನ ಮಹಿಮೆಯ ಶರೀರಕ್ಕೆ ಸಾರೂಪ್ಯವಾಗುವ ಹಾಗೆ ಮಾರ್ಪಡಿಸುವನು (ಫಿಲಿಪ್. ೩, ೨೦. ೨೧ ಸಮ ನೋಡು; ೧ ಕೊರಿ. ೧೫, ೨೦—೫೨). ಕ್ರಿಸ್ತನ ಮರಣವೂ ಉತ್ಥಾನವೂ ಲೋಕಚರಿತ್ರದ ಮಧ್ಯಸ್ಥಳಗಳು ಸಭೆಯ ಮೂಲಾಧಾರಗಳೂ ವಿಶ್ವಾಸದ ಸ್ತಂಭಗಳೂ ನಿತ್ಯಜೀವದ ಹೊಣೆಗಳೂ ಆಗಿರುತ್ತವೆ. ಮರಣವು ಎಲ್ಲಾ ಮನುಷ್ಯಸಂತತಿಯ ಪಾಪದ ರುಣಗಳ ಲಯವಾಗಿತ್ತು. ಉತ್ಥಾನವು ಹೊಸ ಜೀವದ ಸಾದೃಶ್ಯವಾಗಿರುತ್ತದೆ. ಇದು (ಹೃದಯದಿಂದ ರಕ್ತವು ಎಲ್ಲಾ ನಾಡಿಗಳಲ್ಲಿ ಹ್ಯಾಗೋ ಹಾಗೆಯೇ) ಅವನೊಳಗಿಂದ ನವೀಕರಿಸುವಂಥಾದ್ದೂ ಶುದ್ಧೀಕರಿಸುವಂಥಾದ್ದೂ ಆಗಿ ಮನುಷ್ಯಸಂತತಿಯಲ್ಲಿ

ಹರಿಯುತ್ತದೆ. ಅವನ ಮರಣದಿಂದ ನಮ್ಮ ನೀತಿನಿರ್ಣಯವೂ ಅವನ ಉತ್ಥಾನದಿಂದ ನಮ್ಮ ಶುದ್ಧೀಕರಣವೂ ಸಾಧಿಸಲ್ಪಡುತ್ತದೆ. ಮತ್ತು ಈ ಎರಡು ವಿಶ್ವಾಸದಲ್ಲಿ ಸ್ವೀಕರಿಸುವದರಿಂದಲೇ ನಮಗೆ ಪೂರ್ಣ ವಿಮೋಚನೆ ಉಂಟು (ರೋಮಾ. ೪, ೨೫.ಸಂ. ೫. ೧೦ ವಚನ. ೨ ತಿಮೋ. ೧, ೧೦. ಎಫೆಸ. ೨, ೫. ೬ ವಚನಗಳು). ಸಮನೋಡು § ೧೮೭, ೨.

೨) ಮತ್ಥಾ. ೨೮, ೫ ಇತ್ಯಾದಿ. ಮಾರ್ಕ. ೧೬, ೧ ಇತ್ಯಾದಿ. ಲೂಕ. ೨೪, ೧ ಇತ್ಯಾದಿ. ಯೋಹಾ. ೨೦, ೧ ಇತ್ಯಾದಿ. ಮಗ್ದಲದವಳಾದ ಮರೀಯಳು ಬೇರೆ ಹೆಂಗಸರಿಗಿಂತ ಮುಂದೆ ಹೋದದರಿಂದ ಸಮಾಧಿಯ ಹತ್ತರ ಮುಂಚೆ ಬಂದಿದ್ದಳು. ಆದರೆ ಸಮಾಧಿಯ ಮುಂದೆ ಇದ್ದ ಕಲ್ಲು ಹೊರಳಿಸಿ ಸಮಾಧಿಯು ಬರಿದಾಗಿತ್ತೆಂಬದನ್ನು ನೋಡಲಾಗಿ ಅವಳು ಭಯ ಪಟ್ಟು ಮತ್ತೊಂದು ಮಾರ್ಗವಾಗಿ ತಿರಿಗಿ ಹೋಗಿ ತಾನು ನೋಡಿದ್ದನ್ನು ಪೇತ್ರನಿಗೂ ಯೋಹಾನನಿಗೂ ತಿಳಿಸಿದಳು. (ಯೋಹಾನ್) ಅಷ್ಟರೊಳಗೆ ಮಿಕ್ಕಾದ ಹೆಂಗಸರು ಸಹಾ ಸಮಾಧಿಗೆ ಬಂದರು. ಅವರು ಒಳಗೆ ಹೋಗಿ ದೂತನನ್ನು ಕಂಡರು. ಇವನು ಅವರಿಗೆ ಕರ್ತನ ಉತ್ಥಾನವನ್ನು ಸಾರಿ ಅವನ ಪ್ರವಾದನೆಗಳನ್ನು ಅವರ ನೆನಪಿಗೆ ತಂದು ಗಲಿಲಾಯಕ್ಕೆ ಹೋಗ ಬೇಕೆಂದೂ ಅಲ್ಲಿ ಅವನನ್ನು ಕಾಣ ಬಹುದೆಂದೂ ಅವರಿಗೆ ಹೇಳಿದನು. (ಮತ್ಥಾಯ) ಮಗ್ದಲದವಳಾದ ಮರೀಯಳು ತಂದ ಸುದ್ದಿಯನ್ನು ಕೇಳಿ ಪೇತ್ರನೂ ಯೋಹಾನನೂ ಸಹಾ ಸಮಾಧಿಗೆ ಹೋದರು. ಯೋಹಾನನು ಅತಿ ಕಾಂಕ್ಷೆಯಿಂದ ನಿರೀಕ್ಷಿಸುವವನಾಗಿ ಪೇತ್ರನಿಗಿಂತ ಮೊದಲೇ ಬಂದನು. ಇವನು ಬೇರೆ ಸಮಯದಲ್ಲಿ ವೇಗದವನಾಗಿದ್ದರೂ ಈ ಸಾರಿ ತಾನು ಮಾಡಿದ ಪಾಪದ ಭಾರದಿಂದ ದುಃಖಾಕ್ರಾಂತನಾಗಿ ತನ್ನೊಳಗೆ ಆಲೋಚಿಸುತ್ತಾ ಹಿಂದೆ ಬಿದ್ದನು. ಯೋಹಾನನು ಬರಿದಾಗಿದ್ದ ಸಮಾಧಿಯನ್ನು ದೃಷ್ಟಿಸಿದನು; ಆದರೆ ಪೇತ್ರನು ಇಲ್ಲಿ ಸಹಾ ಖಂಡಿತ ಮನಸ್ಸಿನವನಾಗಿ ಮುಂದಾಗಿ ಹೋದ ಮೇಲೆ ತಾನು ಸಹಾ ಒಳಗೆ ಹೋದನು. ಈ ಇಬ್ಬರು ಶಿಷ್ಯರು ತಿರಿಗಿ ಹೋಗುವಷ್ಟರೊಳಗೆ ಮಗ್ದಲದವಳಾದ ಮರೀಯಳು ಸಹಾ ೨ನೇ ಸಾರಿ ಸಮಾಧಿಯ ಹತ್ತರ ಒಬ್ಬಳೇ ಬಂದಳು. ಅಳುತ್ತಾ ಒಳಗೆ ನೋಡುವಾಗ್ಯೆ ಇಬ್ಬರು ದೂತರು ಕೂತು ಕೊಂಡದ್ದನ್ನು ಕಂಡು ದುಃಖದಿಂದ ಉತ್ತರ ಕೊಟ್ಟು ಅವಳು ಹೇಳಿದ್ದು: “ನನ್ನ ಕರ್ತನನ್ನು ತಕ್ಕೊಂಡು ಹೋಗಿದ್ದಾರೋ, ಅವನನ್ನು ಎಲ್ಲಿ ಇಟ್ಟಿದ್ದಾರೋ ಅರಿಯೆನು”. ಆದರೆ ಹಿಂದೆ ತಿರಿಗಿ ಕೊಂಡಾಗ ಯೇಸು ನಿಂತಿರುವದನ್ನು ಕಂಡಳು. ಅವನು ತೋಟಗಾರನೆಂದು ನೆನಸಿದಳು. ಆದರೆ ಅವನು ಮೊದಲು ಕೇಳಿದ ಪ್ರೀತಿಯ ಸ್ವರದಿಂದ ಅವಳಿಗೆ — “ಮರೀಯಳೇ” ಅನ್ನಲು ಅವಳು ಸಂತೋಷ ವಿಸ್ಮಯ ಪಟ್ಟು

ರಬೂನಿ! (ಬೋಧಕನೇ!) ಅಂದು ಅವನನ್ನು ಹಿಡಿಯಲಿಕ್ಕೆ ಹೋದಳು. ಆದರೆ ಯೇಸು ಅವಳಿಗೆ ಹೇಳಿದ್ದು: "ನನ್ನನ್ನು ಮುಟ್ಟ ಬೇಡ. (ಅಂದರೆ ಹಿಡುಕೊಳ್ಳ ಬೇಡ) ಯಾಕಂದರೆ ನಾನು ಇನ್ನು ನನ್ನ ತಂದೆಯ ಮನೆಗೆ ಏರಿ ಹೋಗಲಿಲ್ಲ. ಆದರೆ ನನ್ನ ಸಹೋದರರ ಬಳಿಗೆ ಹೋಗಿ ನನ್ನ ತಂದೆಯೂ ನಿಮ್ಮ ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರುವವನ ಬಳಿಗೆ ಏರಿ ಹೋಗುತ್ತೇನೆಂದು ಅವರಿಗೆ ಹೇಳು (ಯೋಹಾನ್)

ಆ ಬೇರೆ ಇಬ್ಬರು ಹೆಂಗಸರಿಗೆ ಕರ್ತನು ಅವರು ತಿರಿಗಿ ಹೋಗುವಾಗ್ಯೆ ಮಾರ್ಗದಲ್ಲಿ ಕಾಣಿಸಿ ಕೊಂಡು ಮುಂದಕ್ಕಾಗಿ ಗಲಿಲಾಯಕ್ಕೆ ಹೋಗ ಬೇಕೆಂದು ಹೇಳುತ್ತಾನೆ. (ಮತ್ತಾಯ) ಆದರೆ ಯಾಜಕರು ಆದವುಗಳನ್ನೆಲ್ಲಾ ಕಾವಲಿಗಾರರಿಂದ ತಿಳುಕೊಂಡ ಮೇಲೆ ಅವರಿಗೆ ಬಹಳ ಹಣ ಕೊಟ್ಟು ಅವನ ಶಿಷ್ಯರು ರಾತ್ರಿಯಲ್ಲಿ ಬಂದು ತಾವು ನಿದ್ದೆ ಮಾಡುವ ವೇಳೆಯಲ್ಲಿ ಅವನನ್ನು ಕದ್ದುಕೊಂಡು ಹೋದರೆಂಬದಾಗಿ ಹೇಳಿಸಿದರು (ಮತ್ತಾಯ).

ಪ ರಿ ಶಿ ಷ್ಟ. ಕ್ರಿಸ್ತನು ಮರೀಯಳಿಗೆ ಮುಟ್ಟ ಬೇಡೆಂದೂ ತೋಮನಿಗೆ ಮುಟ್ಟ ಬೇಕೆಂದೂ ಹೇಳಿದನು (ಯೋಹಾ. ೨೦, ೨೭ ವಚನ § ೧೫೩. ೨). ಕ್ರಿಸ್ತನ ಕಷ್ಟವಾದ ಈ ಮಾತಿನ ಅಭಿಪ್ರಾಯವು ಒಂದು ವೇಳೆ ಇದೇ: ಮರೀಯಳು ಕಳದು ಹೋದನೆಂಬದಾಗಿ ನೆನಸಿದಂಥಾ ಬೋಧಕನನ್ನು ತಿರಿಗಿ ಜೀವಂತನಾಗಿ ಕಂಡ ಸಂತೋಷದಿಂದ ಬಹಳ ತುಂಬಿದವಳಾಗಿರುವದರಿಂದ ಅವನು ತಿರಿಗಿ ಕಳದು ಹೋಗದ ಹಾಗೆ, ಅವನನ್ನು ಹಿಡಿದು ಬಲಾತ್ಕಾರದಿಂದ ಇರಿಸಿ ಕೊಳ್ಳ ಬೇಕೆಂದಿದ್ದಳು. ಈ ಪ್ರೀತಿಯ ಭಾವದಲ್ಲಿ ಪಾಪದ ಆತುರತ್ವವೂ ಅದೈವಿಕವಾದ ಸ್ವೇಚ್ಛೆಯೂ ಇತ್ತು. ಕ್ರಿಸ್ತನು ಮೊದಲೇ "ನಾನು ಹೋಗುವದು ನಿಮಗೆ ಪ್ರಯೋಜನವಾಗಿದೆ" (ಯೋಹಾ. ೧೬, ೭) ಎಂದು ಹೇಳಿದನು. ಮತ್ತೊಂದು ಸಾರಿ (ಪರಲೋಕಕ್ಕೇರುವದಕ್ಕಾಗಿ) ಅವರಿಂದ ಹೋಗುವದೇ ಲೋಕಾಂತ್ಯದ ವರೆಗೂ ಅವರ ಸಂಗಡ ಇರುವದಕ್ಕೆ (ಮತ್ತಾಯ. ೨೮, ೨೦) ಉಪಾಯವೂ ಮಾರ್ಗವೂ ಆಗಿತ್ತಷ್ಟೇ. ಈಗ ಅವನ ಕಾಲುಗಳನ್ನು ಹಿಡಿದು ತನ್ನವರ ಸಂಗಡ ಇರುವ ಹಾಗೆ ಅವನನ್ನು ಬಲಾತ್ಕಾರ ಪಡಿಸುವದಕ್ಕೆ ಸಮಯ ಇನ್ನೂ ಬಂದಿರಲಿಲ್ಲಾ. ಯಾಕಂದರೆ ಅವನು ತನ್ನ ತಂದೆಯ ಬಳಿಗೆ ಇನ್ನೂ ಏರಿ ಹೋಗಿರಲಿಲ್ಲ.



## § 152. ಯೆಮಾವು ಶಿಷ್ಯರು ಮತ್ತು ೧೨ ಮಂದಿ

೧) ಮಾರ್ಕ. ೧೬, ೧೨. ೧೩. ಲೂಕ. ೨೪, ೧೩ ಇತ್ಯಾದಿ. ಮಧ್ಯಾನ್ಹದಲ್ಲಿ ಇಬ್ಬರು ಶಿಷ್ಯರು (೧೨ ಮಂದಿಯೊಳಗಿಂದಲ್ಲ) ಯೆರೂಸಲೇಮಿನಿಂದ ೭ ಹರದಾರಿ ದೂರವಾಗಿರುವ ಯೆಮಾವುಸಿಗೆ ಹೋದರು. ಇವರಲ್ಲಿ ಒಬ್ಬನ ಹೆಸರು ಕ್ಲೆಯಾಫಾಸ್. ಅವರು ಸಂಭವಿಸಿದ ಈ ಎಲ್ಲಾ ಕಾರ್ಯಗಳ ವಿಷಯವಾಗಿ ದಾರಿಯಲ್ಲಿ ತಮ್ಮೊಳಗೆ ಸಂಭಾಷಿಸುತ್ತಾ ಇದ್ದರು. ಆಗ್ಯೆ ಕರ್ತನು ಅವರ ಸಮೀಪ ಬಂದು ಸಂಗಡ ನಡದನು. ಆದರೆ ಅವನನ್ನು ತಿಳಿಯದ ಹಾಗೆ ಅವರ ಕಣ್ಣುಗಳು ಹಿಡಿಯಲ್ಪಟ್ಟವು. ಕರ್ತನು ಅವರ ಸಂಭಾಷಣೆಯ ಸಂಗತಿ ಏನೆಂದು ಕೇಳಿದಾಗ ಎಲ್ಲಾದರ ವಿಷಯವಾಗಿ ತಾವು ಏನು ನೆನಸ ಬೇಕೆಂಬದನ್ನು ತಿಳಿಯೆವೆಂದು ಅವರು ಹೇಳಲಾಗಿ ಅವನು ಅವರಿಗೆ ಹೇಳಿದ್ದು: “ಓ ಬುದ್ಧಿಹೀನರೇ ಪ್ರವಾದಿಗಳು ಹೇಳುವದನ್ನೆಲ್ಲಾ ನಂಬುವದಕ್ಕೆ ಮಂದ ಹೃದಯವುಳ್ಳವರೇ ಕ್ರಿಸ್ತನು ಈ ಶ್ರಮಗಳನ್ನು ಪಟ್ಟು ತನ್ನ ಮಹಿಮೆಯಲ್ಲಿ ಪ್ರವೇಶಿಸ ಬೇಕಾಗಿರಲಿಲ್ಲವೋ”? ಮತ್ತು ಮೋಶೆಯಿಂದಲೂ ಪ್ರವಾದಿಗಳೆಲ್ಲರಿಂದಲೂ ಆರಂಭಿಸಿ ಸಮಸ್ತ ಬರಹಗಳಲ್ಲಿ ತನ್ನ ವಿಷಯವಾದವುಗಳನ್ನು ಅವರಿಗೆ ವಿವರಿಸಿದನು. ಯೆಮಾವುಸಿಗೆ ಬಂದ ಮೇಲೆ ತಮ್ಮ ಸಂಗಡಲಿರ ಬೇಕೆಂದು ಅವನಿಗೆ ಬಲಾತ್ಕಾರ ಮಾಡಿದರು. ಮತ್ತೆ ಅವನ ಮರ್ಯಾದೆಯ ಪ್ರಕಾರ ಅವರ ಸಂಗಡ ಊಟಕ್ಕೆ ಕೂತು ಕೊಂಡಾಗ ಅವರ ಕಣ್ಣುಗಳು ತೆರಿಯಲ್ಪಟ್ಟು ಅವನ ಗುರ್ತು ತಿಳಿದರು. ಆದರೆ ಅವನು ಅದೃಶ್ಯವಾದನು. ಆಗ್ಯೆ, ಅವನು ಮಾರ್ಗದಲ್ಲಿ ನಮ್ಮ ಸಂಗಡ ಮಾತಾಡಿ ಬರಹಗಳನ್ನು ನಮಗೆ ತೆರಿಯುವಾಗ ನಮ್ಮ ಹೃದಯ ನಮ್ಮೊಳಗೆ ಉರಿಯಲಿಲ್ಲವೋ? ಅದೇ ಘಳಿಗೆಯಲ್ಲಿ ಎದ್ದು ಯೆರೂಸಲೇಮಿಗೆ ತಿರಿಗಿ ಹೋಗಿ ಕೂಡಿ ಕೊಂಡ ಶಿಷ್ಯರಿಗೆ ತಮಗೆ ಸಂಭವಿಸಿದ್ದನ್ನು ವಿವರಿಸಿದರು. (ಲೂಕ).

೨) ಲೂಕ. ೨೪, ೩೬ ಇತ್ಯಾದಿ. ಯೋಹಾ. ೨೦, ೧೯ ಇತ್ಯಾದಿ. ಅವರು ಇವುಗಳನ್ನು ಮಾತಾಡುತ್ತಿರುವಾಗ ಯೇಸು ತಾನೇ (ಬಾಗಲು ಮುಚ್ಚಿ ಇರುವಾಗ) ಅವರ ಮಧ್ಯದಲ್ಲಿ ನಿಂತು, ನಿಮಗೆ ಸಮಾಧಾನವಾಗಲಿ ಎಂದು ಹೇಳಿದನು. ಆದರೆ ಅವರು ದಿಗಿಲು ಪಟ್ಟು ಆತ್ಮವನ್ನು ನೋಡುತ್ತೇವೆಂದು ನೆನಸಿದರು. ಪ್ರತೀಕಾರವಾದದ್ದನ್ನು ಅವರಿಗೆ ನಿಶ್ಚಯ ಮಾಡುವದಕ್ಕೋಸ್ಕರ ಕೈಕಾಲುಗಳನ್ನು ತೋರಿಸಿ ಮೀನನ್ನೂ ಜೇನತೊಟ್ಟೆಯನ್ನೂ ಅವರ ಮುಂದೆ ತಿಂದನು. ತರುವಾಯ ತಿರಿಗಿ ಅವರಿಗೆ ಹೇಳಿದ್ದು: ನಿಮಗೆ ಸಮಾಧಾನವಾಗಲಿ, ತಂದೆಯು ನನ್ನನ್ನು ಕಳುಹಿಸಿದ ಮೇರೆ

ಗೆ ನಾನೂ ನಿಮ್ಮನ್ನು ಕಳುಹಿಸುತ್ತೇನೆ. ಮತ್ತೆ ಪಂಚಾಶತ್ ದಿವಸದಲ್ಲಿ ಆತ್ಮವನ್ನು ಪೂರ್ಣವಾಗಿ ಹೊಯ್ಯುವದಕ್ಕೆ ಹೊಣೆಯೂ ಮುಂಗಡವೂ ಎಂಬ ಹಾಗೆ ಅವರ ಮೇಲೆ ಊದಿ ಹೇಳಿದ್ದು: "ಪರಿಶುದ್ಧಾತ್ಮವನ್ನು ಹೊಂದಿರಿ, ಯಾರ ಪಾಪಗಳನ್ನು ಬಿಡುತ್ತೀರೋ ಅವರಿಗೆ ಬಿಟ್ಟವೆ. ಯಾರವುಗಳನ್ನು ಹಿಡಿಯುತ್ತೀರೋ ಹಿಡಿಯಲ್ಪಟ್ಟವೆ" (ಲೂಕ. ಯೋಹಾನ್). ಆದರೆ ತೋಮನು ಆ ಸಮಯದಲ್ಲಿ ಅಲ್ಲಿ ಇರಲಿಲ್ಲಾ. ಮಿಕ್ಕಾದ ಶಿಷ್ಯರು ಕರ್ತನನ್ನು ನೋಡಿದೆವು ಎಂದು ಅವನಿಗೆ ಹೇಳಿದಾಗ ಅವನು ಹೇಳಿದ್ದು: "ನಾನು ಅವನ ಕೈಗಳಲ್ಲಿ ಮೊಳೆಗಳ ಗುರ್ತನ್ನು ನೋಡಿ ನನ್ನ ಬೆರಳನ್ನು ಮೊಳೆಗಳ ಗುರ್ತಿನಲ್ಲಿ ಹಾಕಿ, ಅವನ ಪಕ್ಕೆಯಲ್ಲಿ ನನ್ನ ಕೈ ಹಾಕಿದ ಹೊರ್ತು ನಂಬುವದಿಲ್ಲ." ೮ ದಿವಸಗಳಾದ ಮೇಲೆ ಅವನ ಶಿಷ್ಯರೂ ಅವರ ಸಂಗಡ ತೋಮನೂ ಒಳಗಿರುವಾಗ ಬಾಗಲುಗಳು ಮುಚ್ಚಿರಲಾಗಿ ಕರ್ತನು ಬಂದು ಮಧ್ಯದಲ್ಲಿ ನಿಂತು ನಿಮಗೆ ಸಮಾಧಾನವಾಗಲಿ ಅಂದನು. ತರುವಾಯ ತೋಮನಿಗೆ ಹೇಳಿದ್ದು, ನಿನ್ನ ಬೆರಳನ್ನು ಇಲ್ಲಿಗೆ ಚಾಚಿ ನನ್ನ ಕೈಗಳನ್ನೂ ನೋಡು, ಮತ್ತು ನಿನ್ನ ಕೈ ಚಾಚಿ ನನ್ನ ಪಕ್ಕೆಯಲ್ಲಿ ಹಾಕು, ಮತ್ತು ಅವಿಶ್ವಾಸಿಯಾಗಿರದೆ ವಿಶ್ವಾಸಿಯಾಗು!" ಆಗ್ಯೆ ಶಿಷ್ಯನ ಸಂಶಯಗಳೆಲ್ಲಾ ಹೋಗಿ ಅವನು ಪ್ರಾರ್ಥಿಸಿ ಹೇಳಿದ್ದು: "ನನ್ನ ಕರ್ತನೇ! ನನ್ನ ದೇವರೇ!" ಇದಕ್ಕೆ ಕ್ರಿಸ್ತನು ಅವನಿಗೆ — ತೋಮನೇ ನನ್ನನ್ನು ನೋಡಿದದರಿಂದ ವಿಶ್ವಾಸಿಸಿದ್ಧಿ, ನೋಡದೆ ವಿಶ್ವಾಸಿಸುವವರು ಭಾಗ್ಯವಂತರು! ಅಂದನು. (ಯೋಹಾನ್).

ಪರಿಶಿಷ್ಟ. ತೋಮನ ಮೇಲೆ ಬಹಳ ಸರ್ತಿ ಅನ್ಯಾಯವಾಗಿ ಅಪರಾಧ ಹಾಕುತ್ತಾರೆ. ಅವನ ಸಂಶಯವು ಹೃದಯದಲ್ಲಿ ಬೇರೂರಿರುವ ಅವಿಶ್ವಾಸಿಯ ಸಂಶಯವಲ್ಲ, ಅದು ಬುದ್ಧಿಯಲ್ಲಿ ಬೇರೂರಿರುವ ವಿಚಾರಕನ ಸಂಶಯವಾಗಿರುತ್ತದೆ. ಮೊದಲನೆಯವನು ಬುದ್ಧಿ ನಿಶ್ಚಯವಾದರೂ ನಂಬುವದಿಲ್ಲ. ಹಾಗೆ ಫರಿಸಾಯರು ಗುರುತುಗಳನ್ನೂ ಆಶ್ಚರ್ಯಗಳನ್ನೂ ಎಲ್ಲಾ ನೋಡಿ ಇನ್ನು ನಂಬುವದಿಲ್ಲ. ಆದರೆ ಎರಡನೆಯವನು ಸತ್ಯವಾಗಿಯೂ ಕಪಟವಿಲ್ಲದೆಯೂ ಹುಡುಕುತ್ತಾನೆ, ಆರಿಸುತ್ತಾನೆ, ವಿಚಾರಿಸುತ್ತಾನೆ. ಇವೆಲ್ಲಾ ತನ್ನ ಅವಿಶ್ವಾಸಕ್ಕೆ ಆಧಾರವನ್ನೂ ಸಹಾಯವನ್ನೂ ಅಲ್ಲ, ಸತ್ಯವನ್ನು ಪಡ ಕೊಳ್ಳುವದಕ್ಕಾಗಿಯೇ ಮಾಡುತ್ತಾನೆ. ಮತ್ತು ಅದನ್ನು ಹೊಂದಿದ ಮೇಲೆ ತೋಮನ ಹಾಗೆ ಖಂಡಿತವಾಗಿಯೂ ಏನು ಕೇಳದೆ ಮಾಡದೆಯೂ ಅದಕ್ಕೆ ತನ್ನನ್ನು ಒಪ್ಪಿಸಿ ಕೊಡುತ್ತಾನೆ. ತೋಮನು ತಿಳುವಿಕೆಯ ಮನುಷ್ಯನಾಗಿದ್ದನು. ತನ್ನನ್ನು ವಿಶ್ವಾಸಕ್ಕೆ ಒಪ್ಪಿಸಿ ಕೊಡುವ ಮೊದಲು ಅವನು ವಿಚಾರಿಸುವದು ಅವನಿಗೆ ಅವಶ್ಯವಾಯಿತು. ಪೇತ್ರನಲ್ಲಿಯೂ ಯೋಹಾನನಲ್ಲಿಯೂ ಬೇರೆ. ಅವರ ಹೃ

ದುಮವು ತನ್ನಷ್ಟಕ್ಕೆ ಸತ್ಯದ ಕಡೆಗೆ ಎಳಿಯಲ್ಪಟ್ಟಿತು. ಆದದರಿಂದ ಬುದ್ಧಿ ಸಹಾ ಸಂಗಡ ಹೋಗ ಬೇಕಾಯಿತು. ತೋಮನ ಮಾರ್ಗವೂ ಸ್ವಭಾವವೂ ಕ್ರೈಸ್ತರ ಮಧ್ಯದಲ್ಲಿ ಅಡ್ಡಿ ಇಲ್ಲದೆ ಇರ ಬಹುದು ಇದನ್ನು ತಿಳುಕೊಂಡು ಅದಕ್ಕೆ ಮಾನ ಕೊಡ ಬೇಕು (ಇದನ್ನು ಕ್ರಿಸ್ತನು ತೋಮನಿಗೆ ಮಾಡಿದನು).—ಆದರೂ ಪೇತ್ರ ಯೋಹಾನರ ಮಾರ್ಗವೂ ಸ್ವಭಾವವೂ ಹೆಚ್ಚು ಭಾಗ್ಯವುಳ್ಳದ್ದಾಗಿರುತ್ತದೆ. ಇಂಥವರು ವಿಶ್ವಾಸದ ಶುದ್ಧಗೃಹದಲ್ಲಿ ಸೇರ ಬೇಕಾದರೆ ಮೊದಲಾಗಿ ತರ್ಕದ ಮುಖಮಂಟಪದಲ್ಲಿ ಕಷ್ಟ ಪಡುವದು ಅವಶ್ಯವಿಲ್ಲ. ತೋಮನ ಗುಣವನ್ನು ತಿಳುಕೊಳ್ಳಲಿಕ್ಕೆ ಯೋಹಾನನ ೧೧, ೧೬ ಸಹಾ ನೋಡಿ ಕೊಳ್ಳ ಬೇಕು.



## § 153. ಪೇತ್ರನನ್ನು ತಿರಿಗಿ ಕರದದ್ದು, ಸ್ನಾನವನ್ನು ಸ್ಥಾಪಿಸಿದ್ದು

೧) ಯೋಹಾನ. ೨೧, ೧ ಇತ್ಯಾದಿ. ಹಬ್ಬದ ಸಪ್ತಕವು ತೀರಿ ಹೋಗಲಾಗಿ ಶಿಷ್ಯರು ಕರ್ತನು ತಿರಿಗಿ ತಿರಿಗಿ ಅಪ್ಪಣೆ ಕೊಟ್ಟ ಪ್ರಕಾರ ಸಹಾ ತಮ್ಮ ಜನ್ಮದೇಶವಾದ ಗಲಿಲಾಯಕ್ಕೆ ತಿರಿಗಿ ಹೋಗಿದ್ದರು. ಪೇತ್ರನು ಬಹಳವಾಗಿ ಬಿದ್ದು ಹೋದದರಿಂದ ಅಪೊಸ್ತಲೋದ್ಯೋಗದಲ್ಲಿ ಪ್ರತ್ಯೇಕವಾಗಿಯೂ ಉತ್ಸವವಾಗಿಯೂ ತಿರಿಗಿ ಸ್ಥಾಪಿಸಲ್ಪಡುವದು ಅವನಿಗೆ ಅವಶ್ಯವಾಗಿತ್ತು. ಇದು ತಿಬೇರ್ಯ ಸಮುದ್ರದ ಬಳಿಯ ಮೊದಲನೇ ಸಾರಿ ಮನುಷ್ಯಮೀನುಗಳನ್ನು ಹಿಡಿಯುವವನಾಗಿ ಕರಿಯಲ್ಪಟ್ಟಲ್ಲಿಯೇ, ಅಂಥಾದ್ದೇ ವಿಶೇಷವಾದ ಗುರ್ತುಗಳಾಗಿರುವ ಸಂಗತಿಗಳೊಡನೆ ಅವನಿಗೆ ಉಂಟಾಯಿತು. ಯೋಹಾನ ಯಾಕೋಬ ತೋಮಾಸ ನತನಯೇಲ ಈ ನಾಲ್ಕು ಮಂದಿಯ ಸಂಗಡ ರಾತ್ರಿ ಯೆಲ್ಲಾ ಬಲೆ ಹಾಕಿದ್ದು ವ್ಯರ್ಥವಾಗಿತ್ತು. ಬೆಳಗಾಗುವಾಗ್ಯೆ ಯೇಸುವು ತಿಳಿಯಲ್ಪಡದೆ ಥಡದಲ್ಲಿ ಕಾಣಿಸಿ ಕೊಂಡನು. ಅವನ ಮಾತಿನ ಪ್ರಕಾರ ಅವರು ಮತ್ತೊಂದು ಸಾರಿ ಬಲೆಯನ್ನು ಹಡಗದ ಬಲಗಡೆಯಲ್ಲಿ ಬೀಸಿದರು; ಮತ್ತು ಸಮೃದ್ಧಿಯಾಗಿ ಸಿಕ್ಕಿದದರಿಂದ ಬಲೆಯನ್ನು ಎಳಿಯಲಿಕ್ಕೆ ಕೂಡಲಿಲ್ಲ. ಆಗ್ಯೆ ಯೋಹಾನನು "ಅವನು ಕರ್ತನು" ಅಂದನು. ಮತ್ತು ಪೇತ್ರನು ಹಡಗಕ್ಕಿಂತ ಮೊದಲೇ ಥಡಕ್ಕೆ ಬರ ಬೇಕೆಂದು ಸಮುದ್ರದಲ್ಲಿ ಹಾರಿ ಈಜಿದನು. ಅಲ್ಲಿ ಕರ್ತನು ಅವರಿಗೆ ಭೋಜನವನ್ನು ಮಾಡುತ್ತಾನೆ. ಇದು ಸಹಾ ಮೀನುಗಳನ್ನು ಹಿಡಿದ ಹಾಗೆಯೇ ಗುರ್ತಾಗಿ ವಿಶೇಷವಾಗಿತ್ತು (=ಭೂಮಿಯ ಕಷ್ಟಗಳು ತೀರಿದ ಮೇಲೆ ಆಗುವ ಪರಲೋಕಭೋಜನವು). ಊಟ ತೀರಿದ ಮೇಲೆ ಕರ್ತನು ಪೇತ್ರನಿಗೆ (೩ ಸಾರಿ

ಅಲ್ಲಗಳೆದದಕ್ಕೆ ಪ್ರತಿಯಾಗಿ) ೩ ಸಾರಿ ಕೇಳಿದ್ದು: "ಯೋಹಾನನ ಮಗನಾದ ಸಿಮಿಯೋನನೇ ನನ್ನನ್ನು ಪ್ರೀತಿ ಮಾಡುತ್ತೀಯೋ"? ಪೂರ್ವಕಾಲದ ಉತ್ವೇಗವು ಈಗ ಇಲ್ಲ; ಇದಲ್ಲದೆ ದೈನ್ಯಭಾವವಾಗಿ ತನ್ನ ಬಲಹೀನತ್ವವನ್ನೂ ಆದರೆ ಪ್ರೀತಿಯನ್ನು ಸಹಾ ತಿಳಿದವನಾಗಿ ಪ್ರತಿಯಾಗಿ ಹೇಳಿದ್ದು: "ಕರ್ತನೇ ನಿನಗೆ ಎಲ್ಲಾ ತಿಳಿದದೆ, ನಿನ್ನನ್ನು ಸ್ನೇಹಿಸುತ್ತೇನೆಂದು ನೀನು ಬಲ್ಲಿ" ಇದಕ್ಕೆ ಕರ್ತನು ಪ್ರತಿ ಸರ್ತಿ ಹೇಳಿದ್ದು: "ನನ್ನ ಕುರಿಗಳನ್ನು ಮೇಯಿಸು." ತರುವಾಯ ಪೇತ್ರನು ಮತ್ತೆ ಕ್ರೂಜೆಯ ಮರಣವನ್ನು ಅನುಭವಿಸ ಬೇಕೆಂದು ಸೂಚಿಸಿ ತನಗೋಸ್ಕರ ಕಷ್ಟ ತಕ್ಕೊಳ್ಳುವದಕ್ಕೆ ಮಾತ್ರವಲ್ಲ ಸಹಿಸಲಿಕ್ಕೆ ಸಹಾ ಯೋಗ್ಯನಾಗುವನೆಂಬದನ್ನು ತಿಳಿಸುತ್ತಾನೆ.

೨) ತರುವಾಯ ಕರ್ತನು ತಾನು ಅಪ್ಪಣೆ ಕೊಟ್ಟ ಪ್ರಕಾರ ಗಲಿಲಾಯದ ಒಂದು ಪರ್ವತದಲ್ಲಿ ಐನೂರು ಮಂದಿಯಾದ (೧ ಕೊರಿ. ೧೫, ೬). ತನ್ನನ್ನು ಸೇರಿಕೊಂಡಿದ್ದವರೆಲ್ಲರ ಕೂಟಕ್ಕೆ ಕಾಣಿಸಿಕೊಂಡನು. ಇಲ್ಲಿ ಈ ಶಿಷ್ಯರೆಲ್ಲರಿಂದಲೂ ಅಪ್ಪಣೆ ತಕ್ಕೊಂಡು ತಾನು ಪರಲೋಕ ಭೂಲೋಕಗಳ ಕರ್ತನಾಗಿದ್ದೇನೆಂಬದನ್ನು ತಿಳಿಸಿ, ಅಪೊಸ್ತಲರನ್ನು ಎಲ್ಲಾ ಲೋಕದಲ್ಲಿ ಸುವಾರ್ತೆಯ ಪ್ರಸಂಗಿಗಳಾಗಿ ನೇಮಿಸಿ, (ಮತ್ತಾ. ೨೮, ೧೯ ಇತ್ಯಾದಿ) ಸ್ನಾನವನ್ನು ದೇವರ ರಾಜ್ಯಕ್ಕೆ ಪುನರ್ಜನನದ ಪ್ರಸಾದವಾಗಿ ಸ್ಥಾಪಿಸಿದನು. "ಪರಲೋಕದಲ್ಲಿಯೂ ಭೂಮಿಯಲ್ಲಿಯೂ ಸಮಸ್ತ ಅಧಿಕಾರವು ನನಗೆ ಕೊಡಲ್ಪಟ್ಟಿದೆ; ಆದದರಿಂದ ನೀವು ಹೊರಟು ಹೋಗಿ ಸಮಸ್ತ ಜನಾಂಗಗಳನ್ನು ತಂದೆಯ ಮತ್ತು ಮಗನ ಮತ್ತು ಪರಿಶುದ್ಧಾತ್ಮದ ಹೆಸರಿನಲ್ಲಿ ಅವರಿಗೆ ಸ್ನಾನ ಕೊಡುವವರಾಗಿಯೂ ನಾನು ನಿಮಗೆ ಆಜ್ಞಾಪಿಸಿದವುಗಳನ್ನೆಲ್ಲಾ ಕೈಕೊಳ್ಳುವದಕ್ಕೆ ಅವರಿಗೆ ಬೋಧಿಸುವವರಾಗಿಯೂ ಶಿಷ್ಯರಾಗ ಮಾಡಿರಿ" (ಮತ್ತಾಯ). "ವಿಶ್ವಾಸಿಸಿ ಸ್ನಾನ ಹೊಂದುವವನು ರಕ್ಷಿಸಲ್ಪಡುವನು, ಆದರೆ ವಿಶ್ವಾಸಿಸದವನು ಆಗ್ನಿನಿರ್ಣಯ ಪಡುವನು" (ಮಾರ್ಕ). ಕಡೆಯಲ್ಲಿ "ಇಗೋ ನಾನು ಯುಗದ ಅಂತ್ಯದ ವರೆಗೂ ಎಲ್ಲಾ ದಿವಸಗಳಲ್ಲಿ ನಿಮ್ಮ ಸಂಗಡ ಇದ್ದೇನೆ" ಎಂಬ ವಾಗ್ದತ್ತವನ್ನು ಕೊಟ್ಟು ಅಗಲಿದನು.

ಪರಿಶಿಷ್ಟ. ಸ್ನಾನದ ಭಾವ ವಿಶೇಷತ್ವಗಳ ವಿಷಯದಲ್ಲಿ § ೧೮೩ ನೋಡು.



## § 154. ಕ್ರಿಸ್ತನ ದಿವಾರೋಹಣ

೧) ಮಾರ್ಕ. ೧೬, ೧೯. ೨೦. ಲೂಕ. ೨೪, ೫೦ ಇತ್ಯಾದಿಗಳು ಅಪೊ. ಕ್ರಿ. ೧, ೪ ಇತ್ಯಾದಿ ಶ್ಲೋಕಗಳು. —ಕ್ರಿಸ್ತನು ಉತ್ಥಾನದ ತರುವಾಯ ೪೦ ದಿವಸಗಳೊಳಗೆ ತನ್ನ ಶಿಷ್ಯರಿಗೆ ಅಲ್ಲಿ ಇಲ್ಲಿ ಉತ್ಥಾನವಾದವನಾಗಿ ಕಾಣಿಸಿ ಕೊಂಡ ಮೇಲೆ, ಅವನು ಎಲ್ಲಾ ಭೂಮಿಯ ಬಂಧಗಳಿಗೆ ಬಿಡುಗಡೆಯಾಗಿ ಲೋಕವಾಗುವ ಮೊದಲೇ ತಂದೆಯ ಬಳಿಯ ಇದ್ದ ಅವನ ಮಹಿಮೆಗೆ ತಿರಿಗಿ ಹೋಗುವ ಕಾಲವು ಬಂದಿತ್ತು. ೧೧ ಶಿಷ್ಯರು ಕರ್ತನ ಅಪ್ಪಣೆಯ ಪ್ರಕಾರ ಪಂಚಾಶತ ದಿನದ ಸ್ವಲ್ಪ ಮೊದಲು ಯೆರೂಸಲೇಮಿಗೆ ಇಲ್ಲಿ ಸಮಾಧಾನದಲ್ಲಿ ಲೌಕಿಕಕೆಲಸಗಳಿಂದ ತೊಂದರೆಯಾಗದೆ ಪರಿಶುದ್ಧಾತ್ಮವು ಹೊಯ್ಯಲ್ಪಡುವದಕ್ಕೆ ಸಿದ್ಧ ಮಾಡಿ ಕೊಳ್ಳಲಿಕ್ಕಾಗಿ ಬಂದಿದ್ದರು. ಬೆಥಾನ್ಯಕ್ಕೆ ಸಮೀಪವಾಗಿರುವ ಇಪ್ಪೆ ಗುಡ್ಡದಲ್ಲಿ ಯೇಸುವು ಅವರನ್ನು ಅದೇ ಸ್ಥಳದಲ್ಲಿ ಅವನ ತಗ್ಗಿಸುವಿಕೆಯ ಭಯಭ್ರಾಂತನಾದದರ ಸಾಕ್ಷಿಗಳಾಗಿದ್ದ ಪ್ರಕಾರವೇ ತಿರಿಗಿ ಅಲ್ಲಿಯೇ ಅವನ ಮಹಿಮೆಯ ಸಾಕ್ಷಿಗಳು ಸಹಾ ಆಗುವ ಹಾಗೆ ಕಡೇ ಸಾರಿ ಅವರನ್ನು ಕೂಡಿಸಿದನು. ದೇವರ ರಾಜ್ಯವು ಹ್ಯಾಗೆ ವಿಕಸಿತವಾಗುವದೆಂಬದರ ವಿಷಯದಲ್ಲಿ ಇನ್ನು ಏನೂ ಚನ್ನಾಗಿ ತಿಳಿಯದೆ ಅವರು ಕೇಳಿದ್ದು: "ಕರ್ತನೇ ಈ ಕಾಲದಲ್ಲಿ ಇಸ್ರಾಯೇಲನಿಗೆ ತಿರಿಗಿ ರಾಜ್ಯವನ್ನು ಸ್ಥಾಪಿಸುತ್ತೀಯೋ". ಅದಕ್ಕೆ ಅವನು ತಂದೆಯು ಸ್ವಂತ ಅಧಿಕಾರದಲ್ಲಿ ಇಟ್ಟು ಕೊಂಡ ಕಾಲಗಳನ್ನೂ ಸಮಯಗಳನ್ನೂ ತಿಳಿಯುವದು ನಿಮ್ಮದಲ್ಲ. ಆದರೆ ಪರಿಶುದ್ಧಾತ್ಮವು ನಿಮ್ಮ ಮೇಲೆ ಬಂದಾಗ ನೀವು ಬಲವನ್ನು ಹೊಂದಿ ಯೆರೂಸಲೇಮಿನಲ್ಲಿಯೂ ಸಮಸ್ತ ಯೆಹೂದ ಸಮಾರ್ಯಗಳಲ್ಲಿಯೂ ಭೂಮಿಯ ಅಂತ್ಯದ ವರಿಗೂ ನನಗೆ ಸಾಕ್ಷಿಗಳಾಗಿರುವಿರಿ ಅಂದನು. ತರುವಾಯ ಅವನು ತನ್ನ ಕೈಗಳನ್ನೆತ್ತಿ ಅವರನ್ನು ಆಶೀರ್ವದಿಸಿದನು. ಮತ್ತೆ ಅವರು ನೋಡುತ್ತಿರಲಾಗಿ ಎತ್ತಲ್ಪಟ್ಟನು. ಮತ್ತು ಮೇಘವು (ಈ ಮಹಿಮೆಯ ಅಗ್ರಾಹ್ಯವಾದ ಮಹಾಗುಂಭವನ್ನು ಶಿಷ್ಯರ ಕೀಳು ಕಣ್ಣುಗಳ ಮುಂದೆ ಅಡಗಿಸುವಂಥಾದ್ದಾಗಿ) ಅವನನ್ನು ಅವರ ಕಣ್ಣುಗಳಿಗೆ ಮರೆಯಾಗಿ ತೆಗದು ಕೊಂಡು ಹೋಯಿತು. ಅವರು ಅವನ ಕಡೆಗೆ ದೃಷ್ಟಿ ಇಟ್ಟು ನೋಡುತ್ತಿರುವಾಗ ಬಿಳೀ ವಸ್ತ್ರಗಳನ್ನು ಉಟ್ಟು ಕೊಂಡ ಇಬ್ಬರು ದೂತರು ಅವರ ಬಳಿಯಲ್ಲಿ ನಿಂತು ಕೊಂಡು "ಗಲಿಲಾಯದವರೇ ಯಾಕೆ ಆಕಾಶವನ್ನು ದೃಷ್ಟಿಸುತ್ತಾ ನಿಂತು ಕೊಂಡಿದ್ದೀರಿ, ನಿಮ್ಮಲ್ಲಿಂದ ಪರಲೋಕಕ್ಕೆ ಎತ್ತಲ್ಪಟ್ಟವನಾದ ಈ ಯೇಸು ಯಾವ ರೀತಿಯಿಂದ ಪರಲೋಕಕ್ಕೆ ಹೋಗುವದನ್ನು ನೋಡಿದಿರೋ ಅದೇ ರೀತಿಯಿಂದ ಬರುವನು". ಆಗ್ಯೆ ಅವರು ಯೆರೂಸಲೇಮಕ್ಕೆ ತಿರಿಗಿದರು.

ಪರಿಶಿಷ್ಟ. ದಿವಾರೋಹಣವು ಉತ್ಥಾನಕ್ಕೆ ಅವಶ್ಯವಾದ ಪೂರ್ಣತೆಯೂ ಮನುಷ್ಯನಾಗುವಾಗ್ಯೆ ಬರಿದು ಮಾಡಿ ಕೊಂಡಂಥಾ ದಿವ್ಯ ಮಹತ್ವವನ್ನು ಪೂರ್ಣವಾಗಿ ತಿರಿಗಿ ತಕ್ಕೊಳ್ಳುವದರಿಂದ ಕರ್ತನ ಪ್ರಕಾಶ ಮಹಿಮೆಗಳ ತುದಿಯೂ ಆಗಿರುತ್ತದೆ. ಅದು ನಿತ್ಯವಾದಂಥಾ ಲೋಕಪರವಾದಂಥಾ ಅವನ ಇರೋಣದರ ರೂಪಕ್ಕೆ ತಿರಿಗಿ ಹೋದದ್ದಾಗಿರುತ್ತದೆ. ಆದರೆ ದೇವರು ಎಲ್ಲಾ ನಿರ್ಮಾಣದ ಮೇಲೆ ಉನ್ನತನಾಗಿಯೂ ಅದಕ್ಕೆ ಬೇರೆಯಾಗಿಯೂ ಅತ್ತ ಕಡೆಯುವನಾಗಿ ಮಾತ್ರವಲ್ಲ; ಸರ್ವತ್ರನಾಗಿ ಎಲ್ಲಾ ನಿರ್ಮಾಣ್ಯವನ್ನು ತುಂಬಿಸಿ ಆದರಿಸಿ ಕಾಪಾಡುವಂಥಾ ಇತ್ತ ಕಡೆಯುವನಾಗಿ ಸಹಾ ಇರುತ್ತಾನೆ. ಆದದರಿಂದ ದಿವಾರೋಹಣವು ಒಂದು ಪರಿಯಾಗಿ ಕ್ರಿಸ್ತನು ಹೋದ್ದಾಗಿರುತ್ತದೆ. ಇದರಿಂದ ಕ್ರಿಸ್ತನು ಎಲ್ಲಾ ನಿರ್ಮಾಣ್ಯದ ಮೇಲೆ ಉನ್ನತನಾದನು. ಮತ್ತೊಂದು ಪರಿಯಲ್ಲಿ ಅದು ಆತನು ಬಂದದ್ದು ಹ್ಯಾಗಂದರೆ ಅದರಿಂದ ಅವನು ಎಲ್ಲಾ ತುಂಬಿಸಿ ಎಲ್ಲಾ ಪೂರಾಗುತ್ತಾನೆ (ಮತ್ಥಾ. ೧೮, ೨೦. ೨೮, ೨೦).

೨) ಕ್ರಿಸ್ತನು ದೇವಮನುಷ್ಯನಾಗಿ ದಿವಾರೋಹಣದಿಂದ ಪ್ರವೇಶಿಸಿದ ಸಿತ್ಥಿಯನ್ನೂ ಯತ್ನವನ್ನೂ ಪರಿಶುದ್ಧ ಬರಹವು ದೇವರ ಬಲ ಕಡೆಯಲ್ಲಿ ಕೂತುಕೊಂಡನೆಂಬ ಗುರ್ತಿನಿಂದ ತಿಳಿಸುತ್ತದೆ (ಮತ್ತಾ. ೨೬, ೬೪. ಅಪೊ. ಕ್ರಿ. ೭, ೫೫. ಯೆಫೆಸ್. ೧, ೨೦ ಶ್ಲೋಕಗಳು). ಇದರಿಂದ ಅವನು ಭೂಮಿಯಲ್ಲಿ ಆರಂಭಿಸಿದ ಕೆಲಸವನ್ನು ಪರಲೋಕದಲ್ಲಿ ದಿವ್ಯವಾಗಿಯೂ ಬಲವಾಗಿಯೂ ಮುಂದೆ ನಡಿಸಿ ತೀರಿಸುತ್ತಾನೆಂಬದನ್ನು ತಿಳಿಯ ಬೇಕು. ಪ್ರವಾದಿಯಾಗಿ ಅವನು ತನ್ನ ವಾಕ್ಯದಿಂದಲೂ ಆತ್ಮದಿಂದಲೂ ಸಭೆಯನ್ನು ಕರದು ಕೂಡಿಸಿ ಪ್ರಕಾಶವುಳ್ಳದ್ದಾಗ ಮಾಡುತ್ತಾನೆ. ಅರಸನಾಗಿ ಎಲ್ಲಾ ಲೋಕದ ಮೇಲೆ ಆಳಿ, ಸಭೆಗೆ ಎಲ್ಲಾದರ ಮೇಲೆ ತಲೆಯಾಗಿದ್ದಾನೆ. ಪ್ರಧಾನಯಾಜಕನಾಗಿ ಅವನು ಮರಣ ಉತ್ಥಾನಗಳಿಂದ ದುಡಿದ ಆಶೀರ್ವಾದ ಬಲಗಳನ್ನೂ ಪ್ರಸಾದಗಳ ಮೂಲವಾಗಿ ದಯ ಪಾಲಿಸಿ ತಂದೆಯ ಬಳಿಯಲ್ಲಿ ನಮಗೋಸ್ಕರವಾದ ವಿಜ್ಞಾಪನೆಯಿಂದ ನಮಗಾಗಿ ಬರುತ್ತಾನೆ (ಇಬ್ರಿ. ೯, ೨೪. ರೋಮಾ. ೮, ೩೪ ವಚನ. ೧ ಯೋಹಾ. ೨, ೧. ೨ ವಚನ.)

ಪರಿಶಿಷ್ಟ. ಕ್ರಿಸ್ತನ ದಿವ್ಯಸ್ವಭಾವವು ಆತನ ಭೂಮಿಸಂಚಾರದ ಸಮಯದಲ್ಲಿ ಮನುಷ್ಯಸ್ವಭಾವದ ತಗ್ಗಿಸುವಿಕೆಯಲ್ಲಿಯೂ ಸೇವಕರೂಪದಲ್ಲಿಯೂ ಎಲ್ಲಾ ಕಷ್ಟಗಳಲ್ಲಿಯೂ ಹ್ಯಾಗೆ ಪಾಲು ಉಳ್ಳದ್ದಾಯಿತೋ ಹಾಗೆಯೇ ಮನುಷ್ಯಸ್ವಭಾವವು ದಿವ್ಯಸ್ವಭಾವದ ಸಮಸ್ತ ಮಹಿಮೆಯಲ್ಲಿ ಪೂರ್ಣ ಪಾಲುವುಳ್ಳದ್ದಾಗುವ ಹಾ

ಗೆ ಶ್ರೇಷ್ಠತ್ವವನ್ನು ಹೊಂದಿತು. ದಿವಾರೋಹಣದಂದಿನಿಂದ ಕ್ರಿಸ್ತನ ದೈವತ್ವ ಮಾತ್ರವಲ್ಲ ಪೂರ್ಣ ಕ್ರಿಸ್ತನು ತಾನೇ, ಅಂದರೆ ಒಂದೇ ಮೂರ್ತಿಯಲ್ಲಿ ದೇವರೂ ಮನುಷ್ಯನೂ ಗೋದಲಿಯಲ್ಲಿ ಬಲಹೀನವಾದ ಮಗುವಾಗಿ ಬಿದ್ದಿದ್ದಂಥಾ, ಕ್ರೂಜೆಯಲ್ಲಿ ಲೋಕದ ಪಾಪಗಳನ್ನು ಹೊತ್ತುಕೊಂಡಂಥಾ ಅದೇ ಕ್ರಿಸ್ತನು ಈಗ ಸರ್ವತ್ರಾಣಿಯೂ ಸರ್ವಜ್ಞನೂ ಸರ್ವತ್ರನೂ ಲೋಕರಾಜನೂ ಲೋಕನ್ಯಾಯಾಧಿಪತಿಯೂ ಆಗಿರುತ್ತಾನೆ. ಹ್ಯಾಗಂದರೆ—ಸ್ವಲ್ಪ ಕಾಲಕ್ಕಾಗಿ ಅಲ್ಲ, ನಿತ್ಯತ್ವಕ್ಕಾಗಿ ಕ್ರಿಸ್ತನು ಮನುಷ್ಯನಾಗಿದ್ದನು. ಆತನು ಶರೀರ ಜೀವ ಆತ್ಮಗಳೊಡನೆ ಮನುಷ್ಯಸ್ವಭಾವಗಳನ್ನೆಲ್ಲಾ ತನ್ನ ದಿವ್ಯಸ್ವಭಾವದಲ್ಲಿ ಒಂದೇ ಅಹಂಭಾವಕ್ಕೆ ತಕ್ಕೊಂಡಿದ್ದನಲ್ಲ. ಈ ಏಕತ್ವವು ತಿರಿಗಿ ಬೇರೆ ಬೇರೆಯಾಗುವದು ಅಸಾಧ್ಯವಾಗಿರುತ್ತದೆ. ಇದರ ಹೊರ್ತು ನಮ್ಮ ರಕ್ಷಣ್ಯಕ್ಕೆ ರಕ್ಷಕನ ಸಂಗಡ ನಮಗೆ ಇರುವ ಸಂಬಂಧವು ಮತ್ತು ಸಂಬಂಧಕ್ಕೆ ಆತನು ನಮ್ಮ ಮಾಂಸದ ಮಾಂಸವೂ ನಮ್ಮ ಎಲುಬಿನ ಎಲುಬೂ ಆಗಿರುವದು ಆಧಾರವಾಗಿರುತ್ತದೆ. ಕ್ರಿಸ್ತನು ನಮಗೋಸ್ಕರ ಮಾಡಿ ತಾಳಿದ್ದೆಲ್ಲಾ ಅವನು ಎಂದಾದರೂ ನಿಜವಾಗಿ ಮನುಷ್ಯನಾಗಿರುವದನ್ನು ಬಿಟ್ಟದ್ದಾದರೆ ವ್ಯರ್ಥವಾಗಿಯೂ ನಿಷ್ಫಲವಾಗಿಯೂ ಹೋಗೀತು. ಆದರೆ ಅವನು ಶರೀರ ಜೀವ ಆತ್ಮಗಳೊಡನೆ ತಂದೆಯ ಬಲಕಡೆಯಲ್ಲಿ ಹ್ಯಾಗೆ ಹೆಚ್ಚಿಸಲ್ಪಟ್ಟಿದ್ದಾನೋ ಹಾಗೆಯೇ ಅವನು ಅನೇಕ ಸಹೋದರರಲ್ಲಿ ಚೊಚ್ಚಲವನಾಗಿ ಇರುವದರಿಂದ (ರೋಮಾ. ೮, ೨೯) ನಾವು ಅವನ ಮರಣ ಉತ್ಥಾನಗಳ ಬಲವನ್ನೂ ಪುಣ್ಯವನ್ನೂ ನಮ್ಮಲ್ಲಿ ತಕ್ಕೊಂಡದ್ದಾದರೆ ತಕ್ಕ ಸಮಯದಲ್ಲಿ ನಮ್ಮನ್ನು ಸಹಾ ತನ್ನ ಹತ್ತರ ಎಳಕೊಂಡು ಅವನ ನಿತ್ಯ ಮಹಿಮೆಯಲ್ಲಿ ಸಹಾ ಭಾಗ್ಯರಾಗ ಮಾಡುತ್ತಾನೆ (ರೋಮಾ. ೮, ೧೭. ಶ್ಲೋಕ).



# ಎರಡನೇ ಒಳಭಾಗ

## ಅಪೊಸ್ತಲರ ಪರಿಮುಖವಾಗಿ ರಕ್ಷಣ್ಯವು ಸಾರಲ್ಪಡುತ್ತದೆ

### § 155. ಈ ಕಾಲದಲ್ಲಿ ತೀರ ಬೇಕಾದದ್ದೂ ವಿಶೇಷವಾದದ್ದೂ

ರೋಮಾ. ೧೦, ೧೭. ಹಾಗಾದರೆ ವಿಶ್ವಾಸವು ಕೇಳ್ವಿಕೆಯಿಂದ, ಕೇಳ್ವಿಕೆಯು ದೇವರ ಮಾತಿನಿಂದ.

ಎಫೆಸ. ೨, ೨೦. ಅಪೊಸ್ತಲರೂ ಪ್ರವಾದಿಗಳೂ ಇವರ ಅಸ್ತಿವಾರಗಳ ಮೇಲೆ ಕಟ್ಟಲ್ಪಟ್ಟವರಾಗಿದ್ಧೀರಿ. ಯೇಸು ಕ್ರಿಸ್ತನು ತಾನೇ ಮೂಲೆಕಲ್ಲಾಗಿದ್ದಾನೆ. ಅವನಲ್ಲಿ ಕಟ್ಟುವಿಕೆ ಎಲ್ಲಾ ಚನ್ನಾಗಿ ಜೋಡಿಸಲ್ಪಟ್ಟು ಕರ್ತನಲ್ಲಿ ಪರಿಶುದ್ಧ ಮಂದಿರವಾಗ ಬೆಳೆಯುತ್ತದೆ.

೧) ರಕ್ಷಕನ ಮೂರ್ತಿಯಲ್ಲಿ ರಕ್ಷಣ್ಯವು ಸಾಧಿಸಲ್ಪಟ್ಟಿತು. ಅವನು ತನ್ನ ಮರಣದಿಂದ ಸಮಸ್ತ ಲೋಕದ ಪಾಪಗಳಿಗೋಸ್ಕರ ನಿತ್ಯ ಬಲವುಳ್ಳಂಥಾ ಅಮಿತವಾಗಿ ಸಾಕಾದಂಥಾ ವಿಮೋಚನಾಬಲಿಯನ್ನು ಕಾಣಿಕೆ ಮಾಡಿದ್ದನು. ಮತ್ತು ಉತ್ಥಾನದಲ್ಲಿ ಸಮಸ್ತವನ್ನು ನವೀಕರಿಸುವ ನಿತ್ಯ ಜೀವದ ಬಲಗಳನ್ನು ಪ್ರಕಾಶಕ್ಕೆ ತಂದಿದ್ದನು. ಆದರೆ ಮನುಷ್ಯರು ತಾವೇ ಕ್ರಿಸ್ತನಲ್ಲಿರುವ ರಕ್ಷಣ್ಯವನ್ನು ಅಂಗೀಕರಿಸಿ ಕೊಂಡು, ತಮ್ಮ ಜೀವನದಲ್ಲಿ ಸೇರಿಸಿ ಕೊಳ್ಳದಿದ್ದರೆ ಅದು ಅಷ್ಟು ಪರ್ಯಂತರಕ್ಕೂ ಅವರಿಗೆ ಅನ್ಯವಾಗಿಯೂ ಪ್ರಯೋಜನವಿಲ್ಲದ್ದಾಗಿಯೂ ಇರುತ್ತದೆ. ರಕ್ಷಣ್ಯವನ್ನು ಕೊಟ್ಟು ಸ್ವೀಕಾರವಾಗುವ ಹಾಗೆ ಮಾಡುವ ಉದ್ಯೋಗವು ಪರಿಶುದ್ಧ ಆತ್ಮದ್ದು. ಹಾಗಾದರೆ ದೇವರ ರಾಜ್ಯದಲ್ಲಿ ಪ್ರವರ್ತನೆ ಆಗ ಬೇಕಾದರೆ ಅತ್ಯವಶ್ಯವಾದದ್ದು (ಪ್ರವಾದಿಗಳಿಂದ ಹಾಗೆ ಯೋವೇಲನಿಂದ ೩ನೇ ಸಂಧಿ ೧ ಇತ್ಯಾದಿ ಸಾರಲ್ಪಟ್ಟಂಥಾ ಕ್ರಿಸ್ತನಿಂದ ಖಂಡಿತವಾಗಿ ವಾಗ್ದತ್ತ ಮಾಡಲ್ಪಟ್ಟಂಥಾ ಯೋಹಾನ್. ೧೪, ೧೬; ೧೬, ೭ ಶ್ಲೋಕ) ಎಲ್ಲಾ ಮಾಂಸದ ಮೇಲೆ ಪರಿಶುದ್ಧಾತ್ಮವು ಹೊಯ್ಯಲ್ಪಡುವಂಥಾದ್ದೇ. ರಕ್ಷಣ್ಯವು ಸ್ವೀಕಾರವಾಗ ಬೇಕಾದರೆ, ಮನುಷ್ಯರ ಕಡೆಯಿಂದ ಅವಶ್ಯವಾದದ್ದೇನಂದರೆ ವಿಶ್ವಾಸವು. ಹಾಗಂದರೆ ಕ್ರಿಸ್ತನಲ್ಲಿ ಕೊಡಲ್ಪಡುವಂಥಾ ರಕ್ಷಣ್ಯಕ್ಕೆ ಮನುಷ್ಯನು ಸಂತೋಷವಾಗಿಯೂ ಚರವಸ ಪೂರ್ಣನಾಗಿಯೂ ತನ್ನನ್ನು ಒಪ್ಪಿಸಿ ಕೊಡುವದೇ. ಆದರೆ ವಿಶ್ವಾಸವು ಕೇಳ್ವಿಕೆಯಿಂದ ಬರುತ್ತದೆ. ಹ್ಯಾಗಂದರೆ -- ಕಥೆಯಾಗಿ ಸಂಚವಿಸಿದ್ದಾಗಿ ಕೊಡಲ್ಪಡುವ ರಕ್ಷಣ್ಯಕ್ಕೆ ಅದನ್ನು ತಿಳಕೊಳ್ಳದೆ ತನ್ನನ್ನು ಒಪ್ಪಿಸಿ ಕೊಡುವದು ಅಸಾಧ್ಯವಾಗಿರುತ್ತದೆ. ಆದ್ದರಿಂದ ಕ್ರಿಸ್ತನು ಎಲ್ಲಾ ನಿರ್ಮಾಣ್ಯಕ್ಕೆ ಸುವಾರ್ತೆಯನ್ನು ಸಾರ ಬೇಕಾಗಿ ತನ್ನ ಶಿಷ್ಯರಿಗೆ ಅಪ್ಪಣೆ ಕೊಟ್ಟಿದ್ದನು.

೨) ಆದರೆ ಕೇಳ್ವಿಕೆಯು ದೇವರ ಮಾತಿನಿಂದ ಬರುತ್ತದೆ, ಯಾಕಂದರೆ ದೇವರು ಮಾತ್ರವೇ ದೇವರ ಕೃಪೆಯ ಆಶ್ಚರ್ಯವಾದ ಮರ್ಮಗಳನ್ನು ನಂಬಲಿಕ್ಕೆ ಯೋಗ್ಯವಾಗಿಯೂ ಸ್ಥಿರವಾಗಿಯೂ ನಿರ್ಮಲವಾಗಿಯೂ ಸಾರಲಿಕ್ಕೆ ಶಕ್ತನಾಗಿರುತ್ತಾನೆ. ಆದ ಕಾರಣ ಅಪೋಸ್ತಲರು ದೇವರಿಂದಲೇ ಪ್ರತ್ಯೇಕವಾಗಿ ಆತ್ಮಪ್ರಕಾಶವನ್ನು ಹೊಂದ ಬೇಕಾಯಿತು. ಇದರಿಂದ ಅವರ ಬೋಧನೆಯಲ್ಲಿ ಎಲ್ಲಾ ತಪ್ಪು

ದೂರವಾಯಿತು; ರಕ್ಷಣ್ಯದ ಪೂರ್ಣ ತಿಳುವಿಕೆಯು ಅವರ ಆತ್ಮದಲ್ಲಿ ಹುಟ್ಟಿಸಲ್ಪ ಟ್ಟಿತು. ದಿವ್ಯ ಯಜಮಾನನ ಬೋಧನೆಯುಳ್ಳ ಸಹವಾಸವು ವಾಕ್ಯದ ಜೀವವುಳ್ಳ ಬೀಜದ ಕಾಳುಗಳನ್ನು ಅವರ ಆತ್ಮದಲ್ಲಿ ಬಿತ್ತಿ ಇತ್ತು. ಆದರೆ ಅವುಗಳು ಬದುಕಿ ಸುವಂಥಾ ತಿಳುವಿಕೆ ಬೋಧನೆಗಳ ಫಲವನ್ನು ಕ್ರಿಸ್ತನಿಂದ ಕಳುಹಿಸಲ್ಪಟ್ಟ ಸತ್ಯದ ಆ ತ್ಮದ ಪ್ರತ್ಯೇಕ ಪೋಷಣೆಯಿಂದಲೇ ಫಲಿಸ ಬಹುದಾಯಿತು. ಯಜಮಾನನ ಅ ನೇಕ ಅಮೂಲ್ಯವಾದ ಮಾತುಗಳು ಅವರ ಹೃದಯಗಳಲ್ಲಿ ತಿಳಿಯಲ್ಪಡದೆ ಪ್ರ ಯೋಗಿಸಲ್ಪಡದೆ ಇರುವ ನಿಕ್ಷೇಪದೋಪಾದಿಯಲ್ಲಿ ಬಿದ್ದಿದ್ದವು. ಇವುಗಳ ತಿಳುವಿ ಕೆಯನ್ನು ಪರಿಶುದ್ಧಾತ್ಮವು ಅವರಲ್ಲಿ ತೆರಿಯ ಬೇಕಾಯಿತು. ಇದಲ್ಲದೆ ಅವರು ತಾಳಲಾರದೆ ಇರುವದರಿಂದ ಅವರಿಗೆ ಬಹಳ ಹೇಳದೆ ಇರ ಬೇಕಾಯಿತು. ಆದರೆ ಆತ್ಮವು ಅವರನ್ನು ಎಲ್ಲಾ ಸತ್ಯದಲ್ಲಿ ನಡಿಸ ಬೇಕಾಯಿತು (ಸಮ ನೋಡು § ೧೨೭, ೨). ಆದರೆ ಅಪೊಸ್ತಲರ ಕಡೆಯಿಂದ ಬರೇ ಬಾಯಿಯ ಪ್ರಸಂಗವು ಸಾಕಾಗಿರಲಿಲ್ಲ. ಅದು ಆ ಕಾಲಕ್ಕೆ ಸಹಾ ಸಾಕಾಗಿರಲಿಲ್ಲ; ಯಾಕಂದರೆ ಕೇಳಿದ ವಾಕ್ಯವು ಸುಲಭವಾ ಗಿ ಮರತು ತಿಳಿಯ ಕೂಡದಾಗ ಬಹುದು. ಆದದರಿಂದ ಅದನ್ನು ತಿರಿಗಿ ತಿರಿಗಿ ನ ವೀಕರಿಸುವದೂ ಅದಕ್ಕೆ ಚದ್ರವಾಗಿಯೂ ನಿಶ್ಚಂಚಲವಾಗಿಯೂ ಇರುವ ಆಧಾರವ ನ್ನು ಕಾಡುವದೂ ಅವಶ್ಯವಾಗಿತ್ತು. ಇದನ್ನು ಅಪೊಸ್ತಲರು ತಾವೇ ಒಂದಾಂ ದು ಸಭೆಗೆ ದೂರವಾಗಿರುವದರಿಂದ ಅವರಿಗೆ ಬರಹಮೂಲಕವಾಗಿ ಮಾತ್ರವೇ ಕಾ ಡಲಿಕ್ಕೆ ಶಕ್ತರಾದರು. ಅದರ ಹೊರ್ತು ಬಾಯಿಯ ಪ್ರಸಂಗವು ತರುವಾಯದ ವರ್ಷ ಶತಗಳಿಗೆ ಏನೇನೂ ಸಾಕಾಗಿರ ಕೂಡದು. ಯಾಕಂದರೆ ಲೋಕದ ಬದುಕಿಸುವ ವಿಶ್ವಾ ಸಕ್ಕೆ ಆಧಾರವಾಗಿರುವ ಸ್ವಸ್ಥಬೋಧನೆಯು ಮನುಷ್ಯನ ತಪ್ಪಿನಿಂದ ಎಲ್ಲಾ ಸಂಕ್ಷೇ ಪಕ್ಕೂ ಬೇರೆಯಾಗುವದಕ್ಕೂ ಮಿಶ್ರಿತವಾಗುವದಕ್ಕೂ ಒಳಗಾಗಿ, ಚದ್ರವಾಗಿಯೂ ಅಚಂಚಲವಾಗಿಯೂ ನಿತ್ಯವಾಗಿ ಚರವಸಕ್ಕೆ ಯೋಗ್ಯವಾಗಿಯೂ ಇರುವಂಥಾ ರ ಕ್ಷಣ್ಯದ ಆಧಾರವಾಗಿರ ಕೂಡದಾಗಿರುತಿತ್ತು. ಆದದರಿಂದ ಈ ಕಾಲದಲ್ಲಿ ಮುಖ್ಯವಾಗಿ ಯೂ ಅವಶ್ಯವಾಗಿಯೂ ತೀರ ಬೇಕಾದದ್ದು ಯಾವದಂದರೆ — ಎಲ್ಲಾ ಚಕ್ತಿಯ ತಿಳು ವಿಕೆಗೆ ಹರಿಯುವ ಬುಗ್ಗೆಯಾಗಿಯೂ ವಿಶ್ವಾಸದ ಚದ್ರದುರ್ಗವಾಗಿಯೂ ಎಲ್ಲಾ ಮುಂದಿನ ರಕ್ಷಣ್ಯದ ಪ್ರಸಂಗಕ್ಕೆ ನಿಶ್ಚಂಚಲವಾದ ಅಸ್ತಿವಾರವಾಗಿಯೂ ಇರ ಬೇಕಾದ ಹೊಸ ಒಡಂಬಡಿಕೆಯ ದೇವವಾಕ್ಯದ ಸ್ಥಾಪನೆಯೇ.

೩) ಎರಡನೇದು ಇದಕ್ಕೆ ಸಂಬಂಧವಾದಂಥಾದ್ದೂ ಅದೇ ಪ್ರಕಾರ ವಿಶೇಷವಾ ದದ್ದೂ ಆಗಿರುವ ಈ ಕಾಲದ ಕೆಲಸವು ಯಾವದಂದರೆ: ದೇವರ ವಾಕ್ಯದ ಅಸ್ತಿವಾರ ದಮೇಲೆ ಸಭೆಯನ್ನು ಸ್ಥಾಪಿಸುವಂಥಾದ್ದೇ. ಸಭೆಯು ಯಾವದಂದರೆ ನೀರು

ಆತ್ಮಗಳ ಪುನರ್ಜನನದಿಂದ ಕ್ರಿಸ್ತನ ಜೀವದ ಅನ್ಯಾನ್ಯದಲ್ಲಿ ಅಂಗೀಕರಿಸಲ್ಪಟ್ಟವರ ಅವಯವವುಳ್ಳ ಏಕತ್ವವು (ಕ್ರಿಸ್ತನ ಶರೀರವು ಎಫೆಸ್. ೧, ೨೨. ೨೩. ೧ಕೊರಿ. ೧೨, ೧೨—೨೭ ವರೆಗೆ) ಅದು ಈ ಅನ್ಯಾನ್ಯದ ಅವಯವಗಳನ್ನೆಲ್ಲಾ ಒಟ್ಟಿಗೆ ಹಿಡಿದು ಸುತ್ತಿ ಕೊಂಡಿರುವಂಥಾ ಸಾಲೆಯೂ ಪರಿಶುದ್ಧಾತ್ಮದ ಕೆಲಸದ ಸ್ಥಳವೂ ಆಗಿರುತ್ತದೆ. ಇದರಲ್ಲಿ ಅವನು ಭೂಮಿಯಲ್ಲಿ ಎಲ್ಲಾ ಕ್ರೈಸ್ತಸಭೆಯನ್ನು ಕರದು ಕೂಡಿಸಿ, ಪ್ರಕಾಶ ಕೊಟ್ಟು ನೀತಿನಿರ್ಣಯಿಸಿ ಪರಿಶುದ್ಧ ಮಾಡಿ, ಯೇಸು ಕ್ರಿಸ್ತನ ಸಮವಾದಂಥಾ ಒಂದೇ ವಿಶ್ವಾಸದಲ್ಲಿ ಕಾಪಾಡುತ್ತಾನೆ. ಅದು ಪರಿಶುದ್ಧಾತ್ಮದ ಆಶ್ರಯದಿಂದಲೂ ಆಳ್ವಿಕೆಯಿಂದಲೂ ದೇವರ ವಾಕ್ಯವನ್ನು ಕಾಪಾಡುವಂಥಾದ್ದೂ ಮನುಷ್ಯರಲ್ಲಿ ಸಮಸ್ತ ದಿವ್ಯತಿಳುವಿಕೆಯನ್ನೂ ಸಮಸ್ತ ದಿವ್ಯಜೀವವನ್ನೂ ಸಾಕುವಂಥಾದ್ದೂ ತನಗೆ ಕೊಟ್ಟ ಪ್ರಸಾದಗಳಿಂದ ಪರಲೋಕದ ಕೃಪೆಯನ್ನು ಹಂಚುವಂಥಾದ್ದೂ ಆಗಿರುತ್ತದೆ. ಸಭೆಯನ್ನು ಎಲ್ಲಾ ವರ್ಷಶತಗಳಲ್ಲಿಯೂ ಸಾಕುವದೂ ಕಾಪಾಡುವದೂ ಹೆಚ್ಚಿಸುವದೂ ಹ್ಯಾಗೋ ಹಾಗೆಯೇ ಅದಕ್ಕೆ ಅಸ್ಥಿವಾರವನ್ನೂ ಇಡುವದು ಸಹಾ ಪರಿಶುದ್ಧಾತ್ಮದ ಕೆಲಸವಾಗಿರುತ್ತದೆ. ಇದನ್ನು ಮಾಡುವದಕ್ಕೋಸ್ಕರ ಪರಿಶುದ್ಧಾತ್ಮವು ಅಪೊಸ್ತಲರನ್ನು ಆಯ್ದುಕೊಂಡು ಆಶ್ಚರ್ಯವಾಗಿಯೂ ಅಸಾಧಾರಣವಾಗಿಯೂ ಇರುವ ತರ ತರದ ಕೃಪೆಯ ವರಗಳಿಂದ ಯೋಗ್ಯರಾಗ ಮಾಡಿದನು.

ಪರಿಶಿಷ್ಟ ೧. (ಗ್ರೀಕ ಭಾಷೆಯಲ್ಲಿ ಖಾರಿಸ್ಮ) ಕೃಪಾವರವು ಪರಿಶುದ್ಧಾತ್ಮದ ಯತ್ನದಿಂದ ಹೆಚ್ಚಿದಂಥಾ ಪರಿಶುದ್ಧ ಮಾಡಲ್ಪಟ್ಟಂಥಾ ಸ್ವಭಾವಿಕ ಆತ್ಮ ವರವಾಗಿರುತ್ತದೆ. ಅಪೊಸ್ತಲರ ಕಾಲದ ಸಭೆಯಲ್ಲಿ ಯತ್ನೈಸಿದ ಬೇರೆ ಬೇರೆ ಕೃಪಾವರಗಳನ್ನು ಅಪೊಸ್ತಲನು ೧ಕೊರಿ. ೧೨, ೧—೧೨ ಮತ್ತು ೭೮—೩೦ ವರೆಗೆ ಹೇಳುತ್ತಾನೆ.

ಪರಿಶಿಷ್ಟ ೨. ಅಪೊಸ್ತಲಚರಿತ್ರಕ್ಕೆ ಆಧಾರವು ಅಪೊಸ್ತಲರ ಕ್ರಿಯಗಳೆಂಬ ಪುಸ್ತಕವೇ. ಸಮ ನೋಡು. § ೧೭೮



## § 156. ಪಂಚಾಶತ್ತಿನ ಹಬ್ಬ

೧) ಅಪೊ. ಕ್ರಿ. ೧, ೧೩ ಇತ್ಯಾದಿ. ಕರ್ತನ ದಿವಾರೋಹಣದ ತರುವಾಯ ಶಿಷ್ಯರು (೧೨೦ ಮಂದಿ) ಆತನ ಅಪ್ಪಣೆಯ ಪ್ರಕಾರ ಏಕ ಮನಸ್ಸಾಗಿ ಯೆರೂ

ಸಲೇಮದಲ್ಲಿ ಪ್ರಾರ್ಥನೆ ಮಾಡುತ್ತಾ ಬೇಡಿಕೊಳ್ಳುತ್ತಾ ವಾಗ್ದತ್ತವಾದ ಆತ್ಮದ ಹೊಯ್ಯುವಿಕೆಯನ್ನು ಕಾದುಕೊಳ್ಳುತ್ತಾ ಇದ್ದರು. ಆದರೆ ಯೂದನು ಹೊರಗಾದ ದರಿಂದ ಕುಂದಿ ಹೋದ ಅತಿ ವಿಶೇಷವಾದ ದ್ವಾದಶ ಸಂಖ್ಯೆಯು ತಿರಿಗಿ ಸ್ಥಾಪಿಸಲ್ಪಡ ಬೇಕಾಯಿತು. ಹೀಗಾಗಿ ಅವರು ತರುವಾಯ ಕೂಡಲೇ ಇಸ್ರಯೇಲಿನ ೧೨ ಗೋತ್ರಗಳಿಗೆ ಮೆಸ್ಸೀಯನಿಂದಾದ ರಕ್ಷಣ್ಯವನ್ನು ಸಾರುವವರಾಗಿ ಇರ ಬಹುದಾಯಿತು. ಪೇತ್ರನು ಎಲ್ಲರಲ್ಲಿ ಕಾರ್ಯಶೀಲನಾಗಿ ಕರ್ತನಿಂದ ಅಪೊಸ್ತಲರಿಗೆ ಶ್ರೇಷ್ಠ ಮಾಡಲ್ಪಟ್ಟವನಾಗಿ (§ ೧೨೫, ೩) ಈ ಕೊರತೆಯನ್ನು ತಿದ್ದಲಿಕ್ಕೆ ಕಾರಣವಾದನು. ಆರಂಭದಿಂದಲೇ ಕರ್ತನ ವಾಕ್ಯಕ್ರಿಯೆಗಳನ್ನು ಕೇಳಿ ನೋಡಿದ ಸಾಕ್ಷಿಗಳಾಗಿ ಈ ಕೆಲಸಕ್ಕೆ ಯೋಗ್ಯರಾದ ಇಬ್ಬರು ಯೋಸೇಫನೂ (ಇವನು ಬರ್ಸಬ ಪ್ರತಿ ನಾಮದಿಂದ ಯುಸ್ತ ಎಂದು ಕರಿಯಲ್ಪಟನು) ಮತ್ಥೀಯನೂ ಎಂಬವರಿದ್ದರು. ಇವರಿಗೋಸ್ಕರ ಪ್ರಾರ್ಥನೆ ಮಾಡಿ ಹಾಕಿದ ಚೀಟಿನಿಂದ ಮತ್ಥೀಯನು ಆರಿಸಲ್ಪಟ್ಟನು.

೨) ಅಪೊ. ಕ್ರಿ. ೨. ೧ ಇತ್ಯಾದಿ. ಅಷ್ಟರೊಳಗೆ ಪಂಚಾಶತ ದಿವಸವು ಬಂತು. ಶಿಷ್ಯರು ತಾವು ವಾಡಿಕೆಯಾಗಿ ಕೂಡಿ ಬರುವ ಸ್ಥಳದಲ್ಲಿ (ಸೊಲೊಮೋನನ ಮಂಟಪದಲ್ಲಿ ಒಂದು ವೇಳೆ ಸಂ. ೩, ೧. ೧೧; ಸಂ. ೫, ೧೨ ವಚನ ಸಹ ನೋಡು § ೭೨) ಪ್ರಾರ್ಥನೆ ಮಾಡುತ್ತಾ ಕೂಡಾ ಇದ್ದರು. ಆಗ್ಯೆ ಬೀಸುವ ಬಿರುಘಾಳಿಯಂತಿರುವ ಶಬ್ದವು ಚಗ್ಗನೆ ಆಕಾಶದಿಂದುಂಟಾಗಿ ಅವರು ಕೂತು ಕೊಂಡಿದ್ದ ಮನೆ ಎಲ್ಲಾ ತುಂಬಿತು. ದೊಡ್ಡ ಬೆಂಕಿಪ್ರಕಾಶಗಳ ಸಮುದಾಯವು ಅವರ ಮೇಲೆ ತೂಗಾಡಿ ಭಾಗವಾಗಿ ಪ್ರತ್ಯಪ್ರತ್ಯೇಕವಾದ ಅಗ್ನಿಜಿಹ್ವೆಗಳಾಗಿ ಒಬ್ಬೊಬ್ಬನ ಮೇಲೆ ಕೂತು ಕೊಂಡಿತು. ಆಗ್ಯೆ ಎಲ್ಲರು ಪರಿಶುದ್ಧಾತ್ಮದಿಂದ ತುಂಬಿದವರಾಗಿ ಆತ್ಮವು ಅವರಿಗೆ ನುಡಿಯ ಕೊಟ್ಟ ಪ್ರಕಾರ ಬೇರೆ ಭಾಷೆಗಳಿಂದ ಮಾತಾಡಿದರು. ಈ ಆಶ್ಚರ್ಯಕ್ಕೆ ಆಧಾರವಾದ ಬೆಂಕಿ ಇತ್ಯಾದಿಗಳು ಬಹಳ ಜನರನ್ನು ಅವರಲ್ಲಿ ಹಬ್ಬಕ್ಕೆ ಬಂದ ಪರದೇಶಿಗಳನ್ನು ಸಹಾ ಅವರು ಇದ್ದಲ್ಲಿಗೆ ಕೂಡಿಸಿತು. ಮತ್ತು ವಿದ್ವಾಂಸರಲ್ಲದ ಗಲಿಲಾಯರು ತಮ್ಮ ತಮ್ಮ ಹುಟ್ಟುಭಾಷೆಯಲ್ಲಿ ದೇವರ ಮಹತ್ತಿನವುಗಳನ್ನು ನುಡಿಯುವದನ್ನು ಒಬ್ಬೊಬ್ಬನು ಕೇಳಲಾಗಿ ಎಲ್ಲರೂ ಭ್ರಮಿಸಿ ಇದೇನಾಗ ಬೇಕು ಅಂದರು. ಆದರೆ ಮತ್ತೊಬ್ಬರು ಹಾಸ್ಯ ಮಾಡಿ "ಅವರು ಶೀಯಾದ ದ್ರಾಕ್ಷೆಯರಸದಿಂದ ತುಂಬಿದವರಾಗಿದ್ದಾರೆ" ಅಂದರು. ಆಗ್ಯೆ ಪೇತ್ರನು ಸಂಪೂರ್ಣವಾದ ರಕ್ಷಣೆಯ ಮೊದಲನೇ ಪ್ರಸಂಗಿಯಾಗಿ ಎದ್ದನು. ಅವನು — ಕುಡಿದು ಮತ್ತನಾಗಿ ಈ ಜನರು ಮಾತಾಡುವದಿಲ್ಲ, ಪ್ರವಾದಿಯಾದ ಯೋವೇಲನು ಎಲ್ಲಾ ಮಾಂಸದ ಮೇಲೆ ಆತ್ಮವು ಹೊಯ್ಯಲ್ಪಡುವದೆಂಬ ಪ್ರವಾದನೆಯು ಎಲ್ಲರ ಕಣ್ಣುಗಳ ಮುಂದೆ ಈಡೇ

ರುತ್ತದೆಂದೂ, (§ ೮೬, ೨) ಅವರು ಶಿಲುಬೆಗೆ ಹಾಕಿದರೂ ದೇವರು ಎಬ್ಬಿಸಿ ಮಹಿಮೆಯ ಬಲಗಡೆಗೆ ಉನ್ನತ ಮಾಡಿದ ನಜರೇಥಿನವನಾದ ಯೇಸುವೆಂಬ ಮೆಸ್ಸೀಯನು (ಇದು ದಾವಿದನು ಅವನ ವಿಷಯವಾಗಿ ಪ್ರವಾದಿಸಿದ ಪ್ರಕಾರ ಆಗುತ್ತದೆ, ಕೀರ್ತನೆ. ೧೬, ೯. ೧೧೦, ೧) ಇವನೇ ತನ್ನವರ ಮೇಲೆ ತನ್ನ ಆತ್ಮವನ್ನು ಹೊಯಿದಿದ್ದಾನೆಂದೂ ಹೇಳಿದನು. ಇದನ್ನು ಕೇಳಿ ಅವರು ಹೃದಯದಲ್ಲಿ ತಿವಿಯಲ್ಪಟ್ಟು ತಮ್ಮ ಆತ್ಮರಕ್ಷಣ್ಯಕ್ಕೋಸ್ಕರ ಚಿಂತಿಕರಾಗಿ "ಸಹೋದರರಾದ ಜನರೇ ನಾವೇನು ಮಾಡುವಾ" ಎಂದು ಹೇಳಿದರು. ಪೇತ್ರನು ಅವರಿಗೆ "ನಿಮ್ಮಲ್ಲಿ ಒಬ್ಬೊಬ್ಬನು ಮಾನಸಾಂತರ ಪಟ್ಟು ನೀವೆಲ್ಲರು ಪಾಪಗಳ ಪರಿಹಾರಕ್ಕೋಸ್ಕರ ಯೇಸು ಕ್ರಿಸ್ತನ ಹೆಸರಿನಲ್ಲಿ ಸ್ನಾನ ಹೊಂದಿರಿ; ಆಗಲು ಪರಿಶುದ್ಧಾತ್ಮದ ವರವನ್ನು ಹೊಂದುವಿರಿ. ಯಾಕಂದರೆ ವಾಗ್ದತ್ತವು ನಮ್ಮ ದೇವರಾದ ಕರ್ತನು ಕರಿಯುವಷ್ಟರಾದ ನಿಮಗೂ ನಿಮ್ಮ ಮಕ್ಕಳಿಗೂ ದೂರದಲ್ಲಿರುವವರೆಲ್ಲರಿಗೂ ಇರುತ್ತದೆ" ಎಂದು ಹೇಳಿದನು. ಆಗ್ಯೆ ಅವನ ವಾಕ್ಯವನ್ನು ಸಂತೋಷವಾಗಿ ಅಂಗೀಕರಿಸಿದವರು ಸ್ನಾನ ಹೊಂದಿದರು. ಆ ದಿವಸದಲ್ಲಿ ಹೆಚ್ಚು ಕಡಿಮೆ ಮೂರು ಸಾವಿರ ಜೀವಿಗಳು ಸೇರಿಸಲ್ಪಟ್ಟವು.

ಪರಿಶಿಷ್ಟ ೧. ಮೊದಲನೇ ಹೊಸ ಒಡಂಬಡಿಕೆಯ ಪಂಚಾಶತ ದಿನವು, ಮುಂಗುರ್ತಾಗಿದ್ದ ಹಳೇ ಒಡಂಬಡಿಕೆಯ ಹಬ್ಬದ ಈಡೇರುವಿಕೆಯಾಗಿರುತ್ತದೆ (ಸಮನೋಡು § ೪೦, ೨) ದೇವರ ರಾಜ್ಯದ ಹೊಲದಲ್ಲಿ ಆದ ಆ ದೊಡ್ಡ ಪೈರಿನ ಪ್ರಥಮ ಫಲಗಳು ಇಲ್ಲಿ (ಮತ್ಥಾ. ೯, ೩೭. ಯೋಹಾ. ೪, ೩೫ ವಚನ) ಪೈರಿನ ಕರ್ತನಿಗೆ ಹೊಸತಾದ ಆತ್ಮದ ದೇವಾಲಯದಲ್ಲಿ (ಯೋಹಾ. ೪, ೨೩) ಕಾಣಿಕೆಯಾಗಿ ತರಲ್ಪಟ್ಟವು. ಪೂರ್ವದಲ್ಲಿ ಅದೇ ದಿನದಲ್ಲಿ ಸೀನಾಯಿ ಪರ್ವತದಲ್ಲಿ ನೇಮವು ಕೇಳಿದಾಗ ದೇವರ ಜನಾಂಗದ ಹಳೇ ಒಡಂಬಡಿಕೆಯ ಸಭೆಯು ಹ್ಯಾಗೆ ಸ್ಥಾಪಿಸಲ್ಪಟ್ಟಿತೋ, ಹಾಗೆಯೇ ಈಗ ನೇಮವು ಈಡೇರಿದಾಗ ಹೊಸ ಒಡಂಬಡಿಕೆಯ ಸಭೆಯು ಸ್ಥಾಪಿಸಲ್ಪಟ್ಟಿತು. ಮತ್ತು ಆತ್ಮದ ಮೊದಲನೇ ಆಶ್ಚರ್ಯಕರವಾಗಿರುವ ಹೊಯ್ಯುವಿಕೆಯಿಂದ ಮುದ್ರೆ ಹಾಕಲ್ಪಟ್ಟಿತು. ಅಲ್ಲಿ "ನೀನು ಮಾಡಬೇಕು?" ಎಂದಾಯಿತು. ಈಗ ನೀನು ಮಾಡಬಲ್ಲಿ ಎಂಬದು ಉಂಟು (ಹೆಜೆಕಿಯೇಲ್. ೩೬, ೨೭). ದೇವರ ಆತ್ಮವು ಎಲ್ಲಾ ಆತ್ಮಗಳಿಗೆ ನಿತ್ಯವಾದ ಅನಿರ್ಮಿತ ಬೆಳಕಾಗಿಯೂ ಅದೈವಿಕವಾದದ್ದನ್ನೆಲ್ಲಾ ಸುಟ್ಟು, ಬಿಡುವಂಥಾ ಎಲ್ಲಾ ಜೀವಿಗಳನ್ನು ಬೆಳಕು ಮಾಡುವಂಥಾ ಕಾವೆ ಕೊಡುವಂಥಾ ಜೀವಿಸ ಮಾಡುವಂಥಾ ದಿವ್ಯ ಬೆಂಕಿಯಾಗಿರುತ್ತದೆ; ಆದದರಿಂದ ಆತನು (ನೀರಿನಲ್ಲಿ ಆಗುವ ವಾಡಿಕೆಯಾದ ಸ್ನಾನದಲ್ಲಿ ಹ್ಯಾಗೋ ಹಾಗೆಯೇ) ಇಲ್ಲಿ ಆತನು ಬೆಂಕಿಯಲ್ಲಿ

ಪ್ರತ್ಯಕ್ಷವಾಗಿ ಮೊದಲೇ ಯೋಹಾನನ ಸ್ನಾನದ ನೀರಿನಲ್ಲಿ ಕ್ರಿಸ್ತನಿಂದ ಬರುವ ಹೊಸ ಜೀವಕ್ಕೋಸ್ಕರ ಪ್ರತ್ಯೇಕಿಸಲ್ಪಟ್ಟವರಾಗಿದ್ದರೂ, ಈಗ ಅದರಲ್ಲಿ ಆತ್ಮದ ಹುಟ್ಟಿಸೋಣದಿಂದ ಮುದ್ರೆ ಹಾಕಲ್ಪಟ್ಟು (ಯೋಹಾ. ೩, ೩. ೫) ರಕ್ಷಣ್ಯದ ಪ್ರಸಂಗಿಗಳಾಗಲಿಕ್ಕೂ ಸಭೆಯ ಸ್ಥಾಪಕರಾಗಲಿಕ್ಕೂ ಈಗ ಯೋಗ್ಯರಾಗುವ ಶಿಷ್ಯರ ಪುನರ್ಜನನವನ್ನು ಸಂಪೂರ್ಣ ಮಾಡಿತು.

ಪರಿಶಿಷ್ಟ ೨. ಭಾಷೆಗಳಲ್ಲಿ ಮಾತಾಡುವದನ್ನು ಕರ್ತನು ತಾನೇ ವಾಗ್ದತ್ತದ ವರಗಳಲ್ಲಿ ಒಂದು ಎಂದು ಹೇಳುತ್ತಾನೆ (ಮಾರ್ಕ. ೧೬, ೧೭). ಅದು ಅಪೊಸ್ತಲರ ಕಾಲದಲ್ಲಿ ಅನೇಕ ಸಾರಿ ಕಾಣ ಬಂತು. ಅದು ಮನಸ್ಸಿನ ಉದ್ರೇಕವಾಗಿ ಮಾತಾಡುತಿತ್ತು. ಆಗ್ಯೆ ದಿವ್ಯ ಆಸಕ್ತಿಯ ಪೂರ್ಣತೆಯು ಆತ್ಮದ ಸಹಾಯದಿಂದ ದೈವತ್ವದ ಗುಡಿಗಳೊಳಗಿಂದ (೧ ಕೊರಿ. ೨, ೧೦) ತೊಗೆದ ಹೊಸ ತಿಳುವಿಕೆಗಳ ಪರಾಕ್ರಮವುಳ್ಳ ಬಲವು ಸಾಧಾರಣ ಮಾತಿನ ತರದ ನಿಬಂಧನೆಗಳನ್ನು ಹರದು ಬಿಡುವವು. ಸಮ ನೋಡು ೧ ಕೊರಿ. ೧೪ ಸಂಧಿ. ಆದರೆ ಮೊದಲನೇ ಪಂಚಾಶತ ದಿನದಲ್ಲಿ ಭಾಷೆಗಳಿಂದ ಮಾತಾಡುವ ವರವು ಪೂರ್ಣವಾಗಿ ಅಪರೂಪವಾದದ್ದೂ ಆ ತರದಲ್ಲಿ ಒಂದೆಯಾಗಿದದ್ದೂ ಆಗಿತ್ತು. ಹ್ಯಾಗಂದರೆ ಹಬ್ಬಕ್ಕೆ ಬಂದ ಅನೇಕರಲ್ಲಿ ಪ್ರತಿ ಮನುಷ್ಯನು ಅಪೊಸ್ತಲರು ತನ್ನ ಸ್ವಂತ ಜನ್ಮಭಾಷೆಯಲ್ಲಿ ಮಾತಾಡುವದನ್ನು ಕೇಳುವವನಾದನು. ಒಂದೇ ಆ ಆಶ್ಚರ್ಯವು ಮಾತಾಡುವವರಲ್ಲಿ ಮಾತ್ರವೇ ಸಂಭವಿಸಿರಬೇಕು; ಹೀಗಾದರೆ ಅಪೊಸ್ತಲರು ಕಲಿತು ಕೊಳ್ಳದ ಅನ್ಯಭಾಷೆಗಳನ್ನು ಮಾತಾಡಶಕ್ತರಾದರು. ಇಲ್ಲವೆ (ಮತ್ತು ಇದಕ್ಕೆ ಹೆಚ್ಚು ಆಧಾರ ಇರ ಬಹುದು) ಆ ಆಶ್ಚರ್ಯವು ಮಾತಾಡುವವರಲ್ಲಿಯೂ ಕೇಳುವವರಲ್ಲಿಯೂ ಒಟ್ಟಿಗೆಯುಂಟಾಯಿತು. ಹೀಗಾದರೆ ಕೇಳುವವರಲ್ಲಿ ಮೃದುಮನಸ್ಸಿದ್ದವರು ಅಲ್ಲಿ ಆಳುವ ಆತ್ಮದಿಂದ ಒಟ್ಟಿಗೆ ಹಿಡಿಯಲ್ಪಟ್ಟವರಾಗಿ ಅಪೊಸ್ತಲರು (ಮನುಷ್ಯಪರವಾದ ಭಾಷೆಯಲ್ಲಿ) ಮನಸ್ಸೋದ್ರೇಕವಾಗಿ ಮಾತಾಡಿದ್ದನ್ನು ತಮ್ಮ ಜನ್ಮಭಾಷೆಯಲ್ಲಿ ಮಾತಾಡಿದೋಪಾದಿಯಲ್ಲಿ ಸ್ಪಷ್ಟವಾಗಿ ತಿಳುಕೊಂಡರು. ಆದದರಿಂದ ತಾವು ಕೇಳಿದ ಭಾಷೆಯು ಸ್ವಭಾಷೆ ಎಂದು ನೆನಸ ಬೇಕಾಯಿತಲ್ಲದೆ ಬೇರೊಂದು ಇಲ್ಲ. ಆದರೆ ಅವರಲ್ಲಿ ಗ್ರಹಿಸಲೊಲ್ಲದವರು ತಿಳಿಯ ಕೂಡದ ಧ್ವನಿಗಳನ್ನು ಮಾತ್ರವೇ ಕೇಳಿರ ಬೇಕು. ಆದದರಿಂದ ಇದನ್ನು ಅವರು ಅಶುದ್ಧವಾದ ಹಾಸ್ಯದಿಂದ ಮತ್ತರಾದವರು ಬೊಗಳುವಂಥಾದಕ್ಕೆ ಸಮಾನ ಮಾಡಿ ಬಿಟ್ಟರು. ಈ ಆಕಾರದಲ್ಲಿ ಭಾಷೆಗಳಿಂದ ಮಾತಾಡುವವರು ಬಾಬೇಲಿನಲ್ಲಿ ಆದ ಭಾಷಾಭೇದಕ್ಕೆ ಹಿಂದೆ ಕಡೆಯಲ್ಲಿ ಬೆರಳು ತೋರಿಸಿತು. ಅದಕ್ಕೆ ಇದು ಪ್ರತೀಕಾರ ರೂಪವಾಗಿತ್ತು. ಅದೇ ಪ್ರಕಾರ ಮುಂದೆ ಕಡೆಯಲ್ಲಿ ಸಹಾ ತಿರಿಗಿ ಒಂದೇ ಭಾ

ಷೆಯೂ ಒಂದೇ ಮನೋಭಾವವೂ ರಾಜ್ಯದಲ್ಲಿ ಎಲ್ಲಾ ಮಕ್ಕಳನ್ನು ಒಂದು ಮಾಡು ವಂಥಾ ಕಾಲಕ್ಕೂ ತೋರಿಸಿತು. ಇದಕ್ಕೆ ಅದು ಮುಂಗುರ್ತು ಮುಂಗಡವೂ ಆಗಿ ತ್ತು. ಬಾಬೇಲಿದ ಗೋಪುರವು ಆಗ ಬೇಕಾದದ್ದು "ಸಭೆಯು ಪೂರ್ಣವಾಗಿ ಆಗಿ ಇರುತ್ತದೆ." ಅಂದರೆ ಪರಲೋಕಕ್ಕೆ ಪರ್ಯಂತರ ಮುಟ್ಟುವಂಥಾ ಪರಲೋಕವನ್ನೂ ಭೂಲೋಕವನ್ನೂ ಒಟ್ಟು ಕೂಡಿಸುವಂಥಾ ಎಲ್ಲಾ ಜನಾಂಗಗಳನ್ನು ಅಂಗೀಕರಿಸಿ ಒಂ ದಾಗ ಮಾಡಿ ಒಟ್ಟಿಗೆ ಹಿಡುಕೊಳ್ಳುವಂಥಾ ಕಟ್ಟುವಿಕೆಯಾಗಿರುತ್ತದೆ.



## § 157. ಯೆರೂಸಲೇಮುದ ಮೊದಲನೇ ಸಭೆಯ ಒಳಸ್ಥಿತಿಯು

೧) ಅಪೊ. ಕ್ರಿ. ೨, ೪೨—೪೭; ಸಂ. ೪, ೩೨—೩೭. ಹೊಸತಾಗಿ ಮಾ ನಸಾಂತರ ಪಟ್ಟವರು ಅಪೊಸ್ತಲರ ಬೋಧನೆಯಲ್ಲಿಯೂ ಅನ್ಯೋನ್ಯದಲ್ಲಿಯೂ ರೊ ಟ್ಟಿ ಮುರಿಯುವದರಲ್ಲಿಯೂ ಪ್ರಾರ್ಥನೆಯಲ್ಲಿಯೂ ನೆಲೆಯಾಗಿದ್ದರು, ಮಹಾ ಬ ಲದಿಂದ ಅಪೊಸ್ತಲರು ಕರ್ತನಾದ ಯೇಸುವಿನ ಉತ್ಥಾನಕ್ಕೆ ಸಾಕ್ಷಿ ಕೊಟ್ಟರು. ಯೇ ಸುವಿನ ನಾಮದಲ್ಲಿ ಅನೇಕ ಅದ್ಭುತಗಳನ್ನೂ ಲಕ್ಷಣಗಳನ್ನೂ ಮಾಡಿದರು. ಮತ್ತು ಕರ್ತನು ರಕ್ಷಿಸಲ್ಪಡುವವರನ್ನು ದಿನದಿನಕ್ಕೆ ಸಭೆಯಲ್ಲಿ ಸೇರಿಸಿದನು. ವಿಶ್ವಾಸಿಸುವ ವರ ಸಮೂಹದ ಹೃದಯವು ಒಂದೇಯಾಗಿತ್ತು. ಮತ್ತು ಒಬ್ಬನಾದರೂ ತನಗುಂ ಟಾದವುಗಳಲ್ಲಿ ಒಂದಾದರೂ ತನ್ನದೆಂದು ಹೇಳಲಿಲ್ಲ. ಆದರೆ ಎಲ್ಲಾ ಅವರಿಗೆ ಹುದುವಾಗಿತ್ತು. ಮತ್ತು ಅವರಲ್ಲಿ ಹೆಚ್ಚಾದವರು ಬಡವರಾಗಿದ್ದರೂ ಅವರೊಳಗೆ ಕೊರತೆ ಪಡುವವನು ಒಬ್ಬನೂ ಇರಲಿಲ್ಲ. ಹ್ಯಾಗಂದರೆ ಹೊಲಗಳಾದರೂ ಮನೆಗ ಳಾದರೂ ಉಂಟಾದವರೆಲ್ಲರೂ (ಹಾಗೆ ಕಿಪ್ರದ ಲೇವ್ಯನಾದ ಯೋಸಿ ಬರ್ನಬನೆಂ ಬವನು) ಮಾರಿ ಬಿಟ್ಟು, ಮಾರಿದವುಗಳ ಕ್ರಯವನ್ನು ಒಟ್ಟಾಗಿಟ್ಟು, ಒಬ್ಬೊಬ್ಬನಿಗೆ ಅ ಗತ್ಯವಿದ್ದ ಹಾಗೆ ಇಲ್ಲದವರಿಗೆ ಕೊಟ್ಟರು. ಅವರು ದಿನಾಲು ಏಕಮನಸ್ಸಾಗಿ ದೇ ವಾಲಯದಲ್ಲಿ ನೆಲೆಯಾಗಿದ್ದು ಮನೆಮನೆಯಲ್ಲಿ ರೊಟ್ಟಿ ಮುರಿದು ದೇವರನ್ನು ಹೊ ಗಳುತ್ತಾ ಜನರೆಲ್ಲರ ದಯ ಹೊಂದುತ್ತಾ ಆನಂದದಲ್ಲಿಯೂ ಹೃದಯದ ಸಾಧು ತ್ವದಲ್ಲಿಯೂ ಆಹಾರವನ್ನು ತೆಗದು ಕೊಳ್ಳುತ್ತಾ ಇದ್ದರು.

ಪರಿಶಿಷ್ಟ. ಅಗಾಪಿಗಳು ಅಂದರೆ ಪ್ರೀತಿಭೋಜನಗಳು ಅಪೊಸ್ತಲರ ಕಾಲದ ಲ್ಲಿ ಸಭೆಗೆ ಸೇರಿದವರೆಲ್ಲರೂ ಒಂದೇ ಮನೆತನರೆಂದು ಎಣಿಸುವ ಸಹೋದರಪ್ರೀತಿಯ

ಆತ್ಮದಿಂದ ಉಂಟಾದವು. ದೊಡ್ಡವರು ಬಡವರು ಎಂಬ ಭೇದವು ಇಲ್ಲಿ ಜೈಸಲ್ಪಟ್ಟಿತ್ತು. ಮತ್ತು ದಾನ ಕೊಡುವಂಥಾದ್ದು ಇಲ್ಲಿ ಪೂರ್ಣವಾಗಿ ಬೇರೆಯಾದದರಿಂದ ತಗ್ಗಿಸುವಂಥಾ ಭಿಕ್ಷೆ ಕೊಡುವದರ ಆಕಾರವು ಅದರಲ್ಲಿ ಏನೇನೂ ಇರಲಿಲ್ಲ. ಪ್ರೀತಿಭೋಜನಗಳು ಯಾವಾಗಲೂ ಪರಿಶುದ್ಧ ರಾತ್ರಿಭೋಜನದ ಸಂಗಡ ಆದವು. ಅವುಗಳು ಆರಂಭದಲ್ಲಿ ಅಥವಾ ಕಡೆಯಲ್ಲಿ ನಡದವು. ಈ ಕ್ರೈಸ್ತ ನಡತೆಯು ೪ ನೇ ವರ್ಷಶತದ ಪರ್ಯಂತರಕ್ಕೂ ನಡಿಯುತ್ತಾ ಬಂತು. ಆದರೆ ಆಗ್ಯೆ ಅಪೊಸ್ತಲರ ಕಾಲದಲ್ಲಿಯೇ ಆರಂಭವಾದಂಥಾದರ ಹಾಗೆ (೧ ಕೊರಿ. ೧೧, ೧೭—೨೨) ದುರ್ನಡತೆ ಹೆಚ್ಚಲಾಗಿ ಅದು ಬಿದ್ದು ಹೋಯಿತು.

೨) ಅಪೊ. ಕ್ರಿ. ೫, ೧—೧೨. ಕ್ರೈಸ್ತ ಭಾವಜೀವನಗಳು ಈ ಪ್ರಕಾರ ಮಹಿಮೆಯಾಗಿ ಕಾಣ ಬಂದಾಗಲೇ ಬೇಗ ವಂಚನೆಯೂ ಡಾಂಭಿಕತನವೂ ಸಭೆಯಲ್ಲಿ ಸೇರಿತು. ಅನನೀಯನೆಂಬ ಒಬ್ಬ ಮನುಷ್ಯನು ತನ್ನನ್ನು ತಾನೇ ಅಲ್ಲಗಳಿಯುವಂಥಾ ಸಹೋದರಪ್ರೀತಿಯ ಯಶಸ್ಸನ್ನು ಅಪೇಕ್ಷಿಸಿದನು. ತನ್ನ ಹೆಂಡತಿ ಸಫೀರಳ ಸಂಗಡ ಒಂದೇ ಮನಸ್ಸಾಗಿ ತನ್ನ ಆಸ್ತಿಯನ್ನು ಮಾರಿ ತಾರೀಕೆಗೆ ಎಲ್ಲಾ ಕಾಡುವವನೆಂಬ ಹಾಗೆ ಒಂದು ಭಾಗವನ್ನು ಮಾತ್ರವೇ ಅಪೊಸ್ತಲರ ಬಳಿಯ ತಂದನು. ಪೇತ್ರನು ಅವನ ಡಂಭವನ್ನು ಆಗಲೇ ತಿಳಿದು ಅವನಿಗೆ ಹೇಳಿದ್ದು—"ಅನನೀಯನೇ ನೀನು ಪರಿಶುದ್ಧಾತ್ಮಕ್ಕೆ ಸುಳ್ಳಾಡಿ ಆ ಹೊಲದ ಕ್ರಯದಲ್ಲಿ ಒಂದು ಪಾಲು ಮುಡಗಿ ಕೊಳ್ಳುವ ಹಾಗೆ ಸೈತಾನನು ಯಾಕೆ ನಿನ್ನ ಹೃದಯವನ್ನು ತುಂಬಿಸಿದ್ದಾನೆ. ಅದು ನಿನ್ನಲ್ಲಿ ಇದ್ದು ನಿನ್ನದಾಗಿತ್ತಲ್ಲವೋ ಮಾರಿದ ಮೇಲೆ ನಿನ್ನ ವಶವಾಗಿತ್ತಲ್ಲವೋ ಯಾಕೆ ಈ ಕಾರ್ಯವನ್ನು ನಿನ್ನ ಹೃದಯದಲ್ಲಿ ಇಟ್ಟು ಕೊಂಡಿ, ಮನುಷ್ಯರಿಗಲ್ಲ ದೇವರಿಗೆ ಸುಳ್ಳಾಡಿದಿ!" ಅನನೀಯನು ಈ ಮಾತುಗಳನ್ನು ಕೇಳಿ, ದೇವರ ಶಿಕ್ಷೆಯನ್ನು ಹೊಂದಿ ಬಿದ್ದು ಪ್ರಾಣ ಬಿಟ್ಟನು. ಸ್ವಲ್ಪ ಕಾಲದ ಮೇಲೆ ಒಳಗೆ ಬಂದು ಅದೇ ಪ್ರಕಾರ ಸುಳ್ಳಾಡಿದ ಅವನ ಹೆಂಡತಿಗೆ ಸಹಾ ಹಾಗೆಯೇ ಆಯಿತು. ಹೀಗಾಗಿ ಸಮಸ್ತ ಸಭೆಗೂ ಇವುಗಳನ್ನು ಕೇಳುವವರೆಲ್ಲರಿಗೂ ಮಹಾ ಭಯವಾಯಿತು.

ಪರಿಶಿಷ್ಟ. ಕರ್ತನು ಮುಂದಿನ ನ್ಯಾಯವಿಚಾರದ ಭಯಂಕರವಾದ ಮುಂಗುರ್ತಾಗಿ ತನ್ನ ಸಭೆಗೆ ಕೊಟ್ಟಿರುವ ಸಭೆಯ ಶಿಕ್ಷಾಕ್ರಮದ ಮೊದಲನೇ ಉದಾಹರಣೆ ಇದೇ (ಮತ್ಥಾ. ೧೬, ೧೮. ೧೪ ಸಂ. ೧೮, ೧೮. ಯೋಹಾ. ೨೦, ೨೨). ಈ ಶಿಕ್ಷೆಯು ಇಲ್ಲಿ ಕಠಿಣವಾದಂಥಾ ಕಂಪಿಸುವಂಥಾ ಆಕಾರದಲ್ಲಿ ಪ್ರಕಟವಾದದ್ದಕ್ಕೂ ದೇವರಿಂದಲೇ ಪ್ರತ್ಯೇಕವಾಗಿ ಬಂದದಕ್ಕೂ ಆಗಿನ ಕಾಲವೂ ಸಂಗತಿಗಳೂ ಕಾರಣವಾಗಿರುತ್ತವೆ.

ಒಳಗಿರುವವರಿಗೋಸ್ಕರವೂ ಹೊರಗಿರುವವರಿಗೋಸ್ಕರವೂ ಅಂಥಾ ಬೆದರಿಸುವ ಶಿಕ್ಷೆಯನ್ನು ಸ್ಥಾಪಿಸುವದು ಸಭೆಯು ಆರಂಭದಲ್ಲಿ ಅತ್ಯವಶ್ಯವಾಗಿತ್ತು. ಅದರ ಹೊರ್ತು ಅನನೀಯನ ಅಪರಾಧವು ಈ ಕಾಲದಲ್ಲಿಯೂ ಈ ಸಂಗತಿಗಳಲ್ಲಿಯೂ (ಅಂದರೆ ಇಂಥಾ ಕ್ರೈಸ್ತರ ಮಧ್ಯದಲ್ಲಿಯೂ ಈ ಮೊದಲನೇ ಪ್ರೀತಿಯ ಆತುರತ್ವದಲ್ಲಿಯೂ ದೇವರ ಆತ್ಮದ ಈ ಪ್ರಕಟಣೆಯಲ್ಲಿಯೂ) ಬೇರೆ ಕಾಲಕ್ಕಿಂತಲೂ ಸಂಗತಿಗಳಿಗಿಂತಲೂ ದೊಡ್ಡದಾಗಿಯೂ ಭಾರವಾಗಿಯೂ ಇರ ಬೇಕು.

೩) ಅಪೊ. ಕ್ರಿ. ೬, ೧—೭. ಜೈಸಲ್ಪಡ ಬೇಕಾದ ಮತ್ತೊಂದು ಯಥಾರ್ಥಹೀನತ್ವವು ಬೇಗ ಕಾಣ ಬಂತು. ಸಭೆಯು ಪಾಲಾಗಿ ಅಪೊಸ್ತಲರು ತಾವೇ ಸಹಾ ಯೆಹೂದ್ಯ ಪ್ರತ್ಯೇಕತನದಲ್ಲಿ ಇನ್ನೂ ಶಿಕ್ಕಿ ಕೊಂಡಿದ್ದರೂ ಇಲ್ಲವೇ ತಮಗಿದ್ದಷ್ಟೇ ಮ್ಲೇಂಛರಾಗಿರುವಾಗಲೇ ಇವರಿಗೆ ಸಹಾ ಸಮ ಬಾಧ್ಯತೆ ಉಂಟೆಂಬ ಪೂರ್ಣವಾಗಿಯೂ ಸ್ಪಷ್ಟವಾಗಿಯೂ ಇರುವ ತಿಳುವಿಕೆಗೆ ಇನ್ನೂ ಬರಲಿಲ್ಲ. ಹೀಗಾಗಿ ತಿರಿಗಿ ಕೊಂಡವರು ಯೆಹೂದ್ಯತನಕ್ಕಾಗಿ ತಮಗಿರುವ ಅತಿ ಛಿದ್ರವಾಗಿರುವ ಗರ್ವವನ್ನು ಸಹಾ ಸಭೆಯಲ್ಲಿ ಸಂಗಡ ತಂದಿದ್ದರು. ಮತ್ತು ಈ ಗರ್ವದ ಮುಂದೆ ಗ್ರೇಕರಲ್ಲಿದ್ದ ಯೆಹೂದ್ಯರು ಸಹಾ ಭಾಷೆಯಿಂದಲೂ ಮರ್ಯಾದೆಯಿಂದಲೂ ಮ್ಲೇಂಛರಿಗೆ ಸಮೀಪಿಸಿ ಇರುವದರಿಂದ ಕಡಿಮೆಯವರಾಗಿ ಕಾಣಿಸಿ ಕೊಳ್ಳ ಬೇಕಾಯಿತು. ಅವರಿಗೆ ಅಷ್ಟು ಮಾನ ಸಹಾ ಶಿಕ್ಕಲಿಲ್ಲವೆಂದು ಕಾಣುತ್ತದೆ. ಹ್ಯಾಗೂ ದಿನದಿನದ ಸೇವೆಯಲ್ಲಿ ತಮ್ಮ ವಿಧವೆಗಳು ಅಶ್ರದ್ಧೆ ಮಾಡಲ್ಪಟ್ಟರೆಂದು ಗುಣುಗುಟ್ಟಿದರು. ಇಂಥಾ ದುರ್ನಡತೆಗಳಿಗೆ ಬಲವಾಗಿ ಎದುರು ನಿಲ್ಲುವದಕ್ಕೂ ಅಂಥಾದ್ದನ್ನು ಮೊದಲೇ ತೆಗದು ಹಾಕಲಿಕ್ಕೂ ಅಪೊಸ್ತಲರು ಏಳು ಸೇವಕರನ್ನು (ಒಂದು ವೇಳ್ಯ ಹೆಲ್ಲೆನಿಸ್ತರನ್ನೇ) ಬಡವರ ಸೇವೆಯನ್ನು ನಡಿಸುವದಕ್ಕೋಸ್ಕರ ಆರಿಸಿ ತಕ್ಕೊಂಡರು. ಹಸ್ತಮಸ್ತಕ ಮಾಡಿ ಈ ಕೆಲಸಕ್ಕೆ ಪ್ರತ್ಯೇಕಿಸಿದರು. ಇದು ಅತಿ ವಿಶೇಷದ್ದಾಗಿತ್ತು ಹ್ಯಾಗಂದರೆ ಸಭೆಯನ್ನು ಬಹಿರಂಗವಾಗಿಯೂ ನೇಮಕ್ಕೊಳಗಾಗಿಯೂ ಇರುವ ಯೆಹೂದ್ಯತನದ ಸಂಕೋಲೆಗಳಿಗೆ ಬಿಡುಗಡೆ ಮಾಡಲಿಕ್ಕೆ ಇದು ಮೊದಲಾಗಿ ಉಪಾಯ ಮಾಡಿತು.



## § 158. ಸಭೆಯ ಮೊದಲನೇ ಹಿಂಸೆಗಳೂ (ಪೇತ್ರನೂ ಯೋಹಾನನೂ)

೧) ಅಪೊ. ಕ್ರಿ. ೩. ೪ ಸಂ. ತಾಯಿಯ ಗರ್ಭದಿಂದ ಕುಂಟನಾಗಿದ್ದ ಭಿಕ್ಷೆಗಾರನನ್ನು ದೇವಾಲಯದ ಬಾಗಲಿನ ಮುಂದೆ ಪೇತ್ರನೂ ಯೋಹಾನನೂ

ಯೇಸುವಿನ ನಾಮದಲ್ಲಿ ಆಶ್ಚರ್ಯವಾಗಿ ವಾಸಿ ಮಾಡಿದ್ದರಿಂದ ಜನರು ವಿಸ್ಮಯ ಪಟ್ಟರು. ಮತ್ತು ಅನೇಕರು ಅಪೊಸ್ತಲರ ಬಳಿಯ ಕೂಡಿ ಬಂದರು. ಪೇತ್ರನು ಒಳ್ಳೇ ಸಮಯವೆಂದು ನೋಡಿ, ಯಾರ ದಿವ್ಯ ಬಲದಿಂದ ಈ ಕುಂಟನು ವಾಸಿಯಾದನೋ ಆ ಶಿಲುಬೆಗೆ ಹಾಕಲ್ಪಟ್ಟು ಉತ್ಥಾನವಾದ ಯೇಸುವನ್ನು ಕೂಡಿ ಬಂದ ಜನರಿಗೆ ಎಲ್ಲಾ ಪ್ರವಾದಿಗಳು ಪ್ರವಾದಿಸಿದಂಥವನಲ್ಲಿ ಮಾನಸಾಂತರ ಪಟ್ಟು ವಿಶ್ವಾಸಪಿಟ್ಟದ್ದಾದರೆ ಪಾಪಗಳ ಪರಿಹಾರವನ್ನೂ ನಿತ್ಯಜೀವವನ್ನೂ ಹೊಂದ ಬಹುದೆಂಬದಾಗಿ ಪ್ರಸಂಗಿಸಿದನು. ಈ ಪ್ರಸಂಗಕ್ಕೆ ಬಹಳ ಫಲ ಹುಟ್ಟಿತು. ಕೇಳುವವರಲ್ಲಿ ಅನೇಕರು ವಿಶ್ವಾಸಿಸಿದರು. ಹೀಗಾಗಿ (ಹೆಂಗಸರು ಮಕ್ಕಳು ಅಲ್ಲದೆ) ಸಭೆಯ ಸಂಖೆಯು ೫ ಸಾವಿರವಾಯಿತು. ಆದರೆ ಅಪೊಸ್ತಲರು ಇನ್ನೂ ಮಾತಾಡುತ್ತಾ ಇರುವಾಗಲೇ ಮಂತ್ರಿಸಭೆಯಿಂದ ಕಳುಹಿಸಲ್ಪಟ್ಟ ದೇವಾಲಯದ ಕಾವಲಿಗಾರರು ಬಂದು ಅವರನ್ನು ಹಿಡುಕೊಂಡು ಹೋದರು. ಮರು ದಿವಸ ಬೆಳಿಗ್ಗೆ ಅವರನ್ನು ಮುಂದೆ ತಂದರು. ಅವರು (ಹೆಚ್ಚಾಗಿ ಸದುಕಾಯ ಮತದವರಾಗಿದ್ದ) ಮಂತ್ರಿಸಭೆಯವರಿಗೆ ಈತನು ಅವರಿಂದ ಶಿಲುಬೆಗೆ ಹಾಕಲ್ಪಟ್ಟಂಥಾ ಆದರೆ ದೇವರಿಂದ ಎಬ್ಬಿಸಲ್ಪಟ್ಟಂಥಾ ಯೇಸುವಿನ ನಾಮದಿಂದ ವಾಸಿಯಾದನೆಂದು ಸಾಕ್ಷಿ ಕೊಟ್ಟು ಹೇಳಿದ್ದು: “ಅವನೇ ಮನೆ ಕಟ್ಟುವವರಾದ ನಿಮ್ಮಿಂದ ತಿರಸ್ಕರಿಸಲ್ಪಟ್ಟ ಕೋಣಾಗ್ರದ್ದಾದ ಕಲ್ಲಾಗಿದ್ದಾನೆ. ಮತ್ತಾವನಲ್ಲಿಯೂ ರಕ್ಷಣೆ ಇಲ್ಲ. ಹ್ಯಾಗಂದರೆ — ಅದರಲ್ಲಿ ನಾವು ರಕ್ಷಿಸಲ್ಪಡ ಬೇಕೆಂದು ಆಕಾಶದ ಕೆಳಗೆ ಮನುಷ್ಯರಲ್ಲಿ ಕೊಡಲ್ಪಟ್ಟ ಬೇರೆ ಹೆಸರು ಇಲ್ಲವೇ ಇಲ್ಲ”. ಸಂಗಡ ನಿಂತ ವಾಸಿಯಾದವನು ಅವರ ಮಾತಿಗೆ ಪ್ರತಿಕೂಲವಾಗಿ ಹೇಳ ಕೂಡದಂಥಾ ಸಾಕ್ಷಿಯಾಗಿದ್ದನು. ಆದ ಕಾರಣ ಮಂತ್ರಿಸಭೆಯು ಅವರಿಗೆ ಅವರು ಇನ್ನು ಮುಂದೆ ಪ್ರಸಂಗಿಸ ಬಾರದೆಂದೂ ಯೇಸುವಿನ ನಾಮದಲ್ಲಿ ಬೋಧಿಸ ಬಾರದೆಂದೂ ಅಪ್ಪಣೆ ಕೊಡುವದು ಸಾಕೆಂದು ಮಾಡಿ ಕೊಂಡರು. ಆಗ್ಗೆ ಅಪೊಸ್ತಲರು “ದೇವರಿಗಿಂತ ಹೆಚ್ಚಾಗಿ ನಿಮ್ಮನ್ನು ಕೇಳುವದು ನ್ಯಾಯವೋ ನಿರ್ಣಯಿಸಿರಿ. ಯಾಕಂದರೆ ನಾವು ನೋಡಿದವುಗಳನ್ನೂ ಕೇಳಿದವುಗಳನ್ನೂ ಮಾತಾಡದೆ ಇರಲಾರೆವು” ಎಂದು ಉತ್ತರ ಕೊಟ್ಟಾಗ ಅವರು ಇವರನ್ನು ಅಧಿಕವಾಗಿ ಬೆದರಿಸಿ ಬಿಟ್ಟು ಬಿಟ್ಟರು. ಅವರು ತಂಮ ಜನರ ಬಳಿಗೆ ಬಂದು ಮಂತ್ರಿಸಭೆಯು ಹೇಳಿದ್ದನ್ನು ತಿಳಿಸಲಾಗಿ ಅವರು ಏಕಮನಸ್ಸಾಗಿ ಪ್ರಾರ್ಥನೆ ಮಾಡಿ ವಾಕ್ಯವನ್ನು ಪೂರ್ಣ ಧೈರ್ಯದಿಂದ ಮಾತಾಡಲಿಕ್ಕೆ ತಮಗೆ ಕೊಡ ಬೇಕೆಂದು ಬೇಡಿ ಕೊಂಡರು. ಅವರು ಕೂಡಿ ಕೊಂಡಿರುವ ಸ್ಥಳವು ಕದಲಿತು. ಮತ್ತು ಎಲ್ಲರು ಪರಿಶುದ್ಧಾತ್ಮದಿಂದ ತುಂಬಿದವರಾದರು.

೨) ಅಪೊ. ಕ್ರಿ. ೫, ೧೨—೪೨. ಹ್ಯಾಗೂ ಸಭೆಯು ದಿನದಿನ ಹೆಚ್ಚಿತು. ಅಪೊಸ್ತೋಲರು ಅನೇಕ ಲಕ್ಷಣಗಳನ್ನೂ ಅದ್ಭುತಗಳನ್ನೂ ಮಾಡಿದರು. ಮತ್ತು ಜನರೆಲ್ಲರೂ ಅವರನ್ನು ಮಹಿಮೆ ಪಡಿಸಲಾಗಿ ಯೆರೂಸಲೇಮದವರೂ ಸುತ್ತಲಿರುವ ಪಟ್ಣಗಳವರೂ ಪೇತ್ರನು ಬರಲಾಗಿ ಅವನ ನೆರಳಾದರೂ ಅವರ ಮೇಲೆ ಬಿದ್ದಿತ್ತೇನೋ ಎಂದು ರೋಗಿಷ್ಟರನ್ನು ಬೀದಿಗಳಲ್ಲಿ ಹೊರಗೆ ತಂದು ಮಂಚಗಳ ಮೇಲೆಯೂ ಹಾಸಿಗೆಗಳ ಮೇಲೆಯೂ ಇಟ್ಟರು. ಇದರಿಂದ ಮಂತ್ರಿಸಭೆಯ ಹಗೆಯು ತಿರಿಗಿ ಉದ್ರೇಕವಾಯಿತು. ಅಪೊಸ್ತಲರನ್ನು ಹಿಡಿದು ಸಾಧಾರಣವಾದ ಬಂದಿಖಾನೆಯಲ್ಲಿ ಹಾಕಿದರು. ಆದರೆ ರಾತ್ರಿಯಲ್ಲಿ ಕರ್ತನ ದೂತನು ಶೆರೆಮನೆಯ ಬಾಗಲುಗಳನ್ನು ತೆರದು ದೇವಾಲಯಕ್ಕೆ ಹೋಗಿ ಅಲ್ಲಿ ಜೀವದ ಮಾತುಗಳನ್ನೆಲ್ಲಾ ಬೋಧಿಸಲಿಕ್ಕೆ ಅಪ್ಪಣೆ ಕೊಟ್ಟನು. ಮರು ದಿವಸ ಬೆಳಿಗ್ಗೆ ಮಂತ್ರಿಸಭೆಯವರು ಕೂಡಿ ಬಂದರು. ಆದರೆ ಕಳುಹಿಸಿದ ಸೇವಕರಿಗೆ ಅಪೊಸ್ತಲರು ಬಂದಿಖಾನೆಯಲ್ಲಿ ಶಿಕ್ಕಲಿಲ್ಲಾ; ಆದರೆ ಬಂದಿಖಾನೆಯು ಭದ್ರವಾಗಿತ್ತು. ಮತ್ತು ಕಾವಲಿಗಾರರು ಮುಂದೆ ನಿಂತಿದ್ದರು. ಅಷ್ಟರೊಳಗೆ ಅವರು ದೇವಾಲಯದಲ್ಲಿ ಪ್ರಕಟವಾಗಿ ಬೋಧಿಸುತ್ತಾರೆಂಬ ವರ್ತಮಾನವು ಬಂತು. ಅವರನ್ನು ತಂದು ಕೇಳಿದಾಗ ಅವರು ಹೇಳಿದ್ದು: “ಮನುಷ್ಯರಿಗಿಂತ ಹೆಚ್ಚಾಗಿ ದೇವರಿಗೆ ವಿಧೇಯರಾಗಿರ ಬೇಕು. ನೀವು ಮರದ ಮೇಲೆ ತೂಗಿಸಿ ಕೊಂದು ಹಾಕಿದ ಯೇಸುವನ್ನು ನಮ್ಮ ಪಿತೃಗಳ ದೇವರು ಎಬ್ಬಿಸಿದ್ದಾನೆ. ದೇವರು ಇವನನ್ನು ನಾಯಕನಾಗಿಯೂ ರಕ್ಷಕನಾಗಿಯೂ ಇಸ್ರಯೇಲಸಿಗೆ ಮಾನಸಾಂತರವನ್ನೂ ಪಾಪಗಳ ಪರಿಹಾರವನ್ನೂ ಕೊಡುವದಕ್ಕೋಸ್ಕರ ತನ್ನ ಬಲಗೈಯಿಂದ ಎತ್ತಿದ್ದಾನೆ. ಮತ್ತು ಈ ಮಾತುಗಳಿಗೆ ನಾವೂ ತನಗೆ ವಿಧೇಯವಾಗಿರುವವರಿಗೆ ದೇವರು ಕೊಟ್ಟ ಪರಿಶುದ್ಧಾತ್ಮವೂ ಅವನ ಸಾಕ್ಷಿಗಳಾಗಿದ್ದೇವೆ”. ಇದರಿಂದ ಇರಿಯಲ್ಪಟ್ಟು ಅವರನ್ನು ಕೊಲ್ಲುವದಕ್ಕೆ ಯೋಚನೆ ಮಾಡಿದರು. ಆದರೆ ಈ ಸಾರಿ ಗ ಮಾ ಲಿ ಯೇ ಲ ನಿಂದ ಕಂಟಕವು ಪರಿಹಾರವಾಗುತ್ತದೆ. ಬಹಳ ಮಾನ ಹೊಂದಿದ ಈ ಶಾಸ್ತ್ರಿಯು ಸುಳ್ಳುಪ್ರವಾದಿಗಳ ಕೆಲಸವು ನಾಶವಾಗಿ ಹೋಯಿತೆಂಬ ಉದಾಹರಣೆಗಳನ್ನು ಕೊಟ್ಟು ಈ ಬಂಧಿತರನ್ನು ಅವರ ಕೆಲಸದೊಡನೆ ದೇವರ ನ್ಯಾಯಶಿಕ್ಷೆಗೆ ಒಪ್ಪಿಸಿ ಕೊಡಬೇಕೆಂದು ಆಲೋಚನೆ ಕೊಟ್ಟನು. ಅವನು ಹೇಳಿದ್ದು: “ಈ ಆಲೋಚನೆಯೂ ಈ ಕೆಲಸವೂ ಮನುಷ್ಯರದ್ದಾಗಿದ್ದರೆ ಲಯವಾಗುವದು, ಆದರೆ ದೇವರದ್ದಾಗಿದ್ದರೆ ಅದನ್ನು ಲಯ ಮಾಡಲಾರಿರಿ; ಒಂದು ವೇಳೆ ನೀವು ದೇವವಿರೋಧಿಗಳಾಗಿ ಕಾಣಲ್ಪಡುವಿರಿ.” ಮಂತ್ರಿಸಭೆಯವರು ಅಪೊಸ್ತಲರನ್ನು ಬಿಡುತ್ತಾರೆ. ಆದರೂ ಯೇಸುವಿನ ಹೆಸರಿನಲ್ಲಿ ಇನ್ನು ಮುಂದೆ ಮಾತಾಡ ಬಾರದೆಂದು ಮೊದಲು ಅವರನ್ನು

ಹೊಡಿಸಿ ಬಿಟ್ಟು ಬಿಟ್ಟರು. ಆದರೆ ಇವರು ಯೇಸುವಿನ ಹೆಸರಿಗೋಸ್ಕರ ನಿಂದೆ ಪಡುವದಕ್ಕೆ ಯೋಗ್ಯರಾಗಿ ಎಣಿಸಲ್ಪಟ್ಟೆವೆಂದು ಸಂತೋಷ ಪಟ್ಟು ಮಂತ್ರಿಸಭೆಯ ಸಮುಖದಿಂದ ಹೊರಟು ಹೋಗಿ ದಿನಾಲು ಬಿಡದೆ ದೇವಾಲಯದಲ್ಲಿಯೂ ಮನೆಯಲ್ಲಿಯೂ ಬೋಧಿಸುತ್ತಾ ಕ್ರಿಸ್ತನಾಗಿರುವ ಯೇಸುವನ್ನು ಪ್ರಂಗಿಸುತ್ತಾ ಇದ್ದರು.



## § 159. ಮುಂದಿನ ಕಥೆ—ಸ್ತೆಫಾನನು

ಅಪೊ. ಕ್ರಿ. ೬, ೮ ಇತ್ಯಾದಿ. ಸಭೆಯು ಆರಂಭದಲ್ಲಿ ಆಚಾರನೇಮವನ್ನು ಬಹಳ ಜಾಗ್ರತೆಯಾಗಿಯೂ ಕೂಲಂಕುಶವಾಗಿಯೂ ಕೈಕೊಳ್ಳುತ್ತಾ ಇರಲಾಗಿ ಜನರು ಅವರಿಗೆ ಬಹಳ ಮಾನ ಕೊಟ್ಟರು. ಆದರೆ ಕ್ರೈಸ್ತತ್ವವು ಸರ್ವಲೌಕಿಕವಾಗಿರುತ್ತದೆಂಬ ತಿಳುವಿಕೆಯು ಸಭೆಯಲ್ಲಿ ಎಷ್ಟಕ್ಕೆ ಹೆಚ್ಚಿತೋ ಮತ್ತು ಆ ತಿಳುವಿಕೆಯು ಯೆಹೂದ್ಯತನದ ಬಹಿರಂಗದ ಸತ್ತ ನೇಮಾಚಾರಕ್ಕೆ ಎಷ್ಟು ಪ್ರತಿಕೂಲವಾಗಿ ನಿಂತಿತೋ ಅಷ್ಟಕ್ಕೆ ಹೆಚ್ಚಾಗಿ ಜನರ ಹಗೆಯು ಕ್ರೈಸ್ತರ ಮೇಲೆ ಹುಟ್ಟಿತು. ಇಷ್ಟು ವರೆಗೆ ನಡದ್ದಕ್ಕಿಂತ ಹೆಚ್ಚಾಗಿ ಈಗ ಹೆಚ್ಚು ಸ್ವತಂತ್ರವುಳ್ಳ ಆತ್ಮಿಕವಾದ ರೀತಿಯನ್ನು ಆರಿಸಲ್ಪಟ್ಟ ಸೇವಕರಲ್ಲಿ ಅತಿ ಸೀಲನಾಗಿಯೂ ವಿಶ್ವಾಸದಿಂದಲೂ ಪರಿಶುದ್ಧಾತ್ಮದಿಂದಲೂ ತುಂಬಿದವನಾಗಿಯೂ ತಿಳುವಿಕೆಯೂ ಲಕ್ಷಣಗಳನ್ನೂ ಅದ್ಭುತಗಳನ್ನೂ ಮಾಡುವ ಬಲವೂ ಬಹಳವಾಗಿ ಉಳ್ಳವನೂ ಆಗಿರುವ ಸ್ತೆಫಾನನು ಹಿಂಬಾಲಿಸಿದನು. ಹೆಲ್ಲೇನಿಸ್ತರ ಸಭೆಮನೆಯ ಮುಖ್ಯಸ್ಥರು ಅವನ ಸಂಗಡ ತರ್ಕವಾಡಿದರು. ಆದರೆ ಅವನ ಜ್ಞಾನವನ್ನೂ ಅವನು ಮಾತಾಡಿದ ಆತ್ಮವನ್ನೂ ಎದುರಿಸಲಾರದೆ ಇದ್ದರು. ಇದೇ ಅವನು ದೇವಾಲಯಕ್ಕೂ ಆರಾಧನೆಗೂ ವಿರೋಧವಾಗಿ ದೂಷಣೆ ಮಾತುಗಳನ್ನಾಡುತ್ತಾನೆಂಬದಾಗಿ ಅವನನ್ನು ಮಂತ್ರಿಸಭೆಯ ಮುಂದೆ ತರಲಿಕ್ಕೆ ಕಾರಣವಾಯಿತು. ಅವನಲ್ಲಿದ್ದ ಆತ್ಮದ ಪ್ರಕಾಶದಿಂದ ದೂತನ ಮುಖದ ಹಾಗೆ ಮುಖವುಳ್ಳವನಾಗಿ ಪ್ರತ್ಯುತ್ತರ ಕೊಡಲಿಕ್ಕೆ ಮುಂದೆ ಬಂದು ಪ್ರಸಂಗ ಮಾಡಿದನು. ಇದರಲ್ಲಿ ಹಳೇ ಒಡಂಬಡಿಕೆಯ ಚರಿತ್ರವನ್ನು ಸಂಕ್ಷೇಪವಾಗಿ ಹೇಳಿ ಹಳೇ ಒಡಂಬಡಿಕೆಯಲ್ಲಿ ಆದ ದೇವರ ಪ್ರಕಟಣೆಗಳ ಮೇಲೆ ತನಗಿದ್ದ ಭದ್ರವಾದ ವಿಶ್ವಾಸವನ್ನು ಖಂಡಿತವಾಗಿಯೂ ಬಲವಾಗಿಯೂ ತಿಳಿಸಿ ಅದೇ ಸಮಯದಲ್ಲಿ ದೇವರ ಆಶ್ಚರ್ಯಕರವಾದ ನಂಬಿಕೆಯುಳ್ಳ ಕೃಪೆಗೆ ಪ್ರತಿಕೂಲವಾಗಿ ಇಸ್ರಯೇಲ್ಯರ ಸೊಟ್ಟಗಾದ ಕಠಿಣ ಮನಸ್ಸು ಚರಿತ್ರದಲ್ಲಿ ಎಲ್ಲಾ ಕಡೆ

ಯಲ್ಲಿಯೂ ಪ್ರತ್ಯಕ್ಷವಾಯಿತು ಎಂಬದನ್ನು ಕಾಣಿಸಿದನು. ಆದರೆ ಮಂತ್ರಿಸಭೆಯವರ ಮನಸ್ಸು ಉದ್ರೇಕವಾಗಿ ಕಡೇ ವರೆಗೂ ಮಾತಾಡಲಿಕ್ಕೆ ಬಿಡಲಿಲ್ಲ. ಆದದರಿಂದ ಅವರ ಸ್ವಂತ ಕಠಿಣತ್ವಕ್ಕೆ ಈಗಲೇ ಬೆರಳು ತೋರಿಸಿ ಪ್ರಸಂಗವನ್ನು ಮುಗಿಸಿದನು. ಆಗ್ಯೆ ಮಹಾ ಕ್ರೋಧದಿಂದ ಅವನ ಮೇಲೆ ಹಲ್ಲು ಕಡದರು. ಆದರೆ ಅವನು ಪರಿಶುದ್ಧಾತ್ಮದಿಂದ ತುಂಬಿದವನಾಗಿ ಆಕಾಶವನ್ನು ದೃಷ್ಟಿಸಿ ದೇವರ ಮಹಿಮೆಯನ್ನೂ ದೇವರ ಬಲಪಾರ್ಶ್ವದಲ್ಲಿ ಯೇಸು ನಿಂತು ಕೊಂಡಿರುವದನ್ನೂ ನೋಡಿ "ಇಗೋ ಪರಲೋಕಗಳು ತೆರದಿರುವದನ್ನೂ ಮನುಷ್ಯನ ಮಗನು ದೇವರ ಬಲಪಾರ್ಶ್ವದಲ್ಲಿ ನಿಂತುಕೊಂಡಿರುವದನ್ನೂ ನೋಡುತ್ತೇನೆ" ಅಂದನು. ಆಗಲವರು ಮಹಾ ಶಬ್ದದಿಂದ ಕೂಗಿ ತಮ್ಮ ಕಿವಿಗಳನ್ನು ಮುಚ್ಚಿ ಕೊಂಡು ಏಕಮನಸ್ಸಾಗಿ ಅವನ ಮೇಲೆ ಬಿದ್ದು ಅವನನ್ನು ಪಟ್ಟಣದ ಹೊರಗೆ ಹಾಕಿ ಕಲ್ಲೆಸದರು. ರಕ್ತಸಾಕ್ಷಿಗಳ ದೊಡ್ಡ ಪಂಕ್ತಿಯಲ್ಲಿ ಮೊದಲನೇಯವನಾದ ಸ್ತೆಫಾನನು "ಕರ್ತನಾದ ಯೇಸುವೇ ನನ್ನ ಆತ್ಮವನ್ನು ಅಂಗೀಕರಿಸು." ಎಂದು ಪ್ರಾರ್ಥಿಸಿ ಮೊಣಕಾಲೂರಿ ಕೊಂಡು "ಕರ್ತನೇ ಈ ಪಾಪವನ್ನು ಅವರ ಮೇಲೆ ಹೊರಿಸ ಬೇಡ" ಎಂದು ಸಾಯುವಾಗ್ಯೆ ಕೂಗಿದನು. (ಕ್ರಿಸ್ತ ಶಕದ ೩೬ನೇ ವರ್ಷದಲ್ಲಿ).

ಪರಿಶಿಷ್ಟ. ಮಂತ್ರಿಸಭೆಗೆ ಮರಣಶಿಕ್ಷೆ ಕೊಡುವ ಅಧಿಕಾರವಿರಲಿಲ್ಲ. ಹಾಗಾದರೆ ಸ್ತೆಫಾನನನ್ನು ಕಲ್ಲೆಸದದ್ದು ನ್ಯಾಯದ ಪ್ರಕಾರದ ಮರಣಶಿಕ್ಷೆಯಾಗಿರಲಿಲ್ಲ. ಅದು ಗುಂಪಿನಲ್ಲಿ ನಡದ ಅತಿಕ್ರಮವಾಗಿರುತ್ತದೆ. ಸ್ತೆಫಾನನು ಬಿದ್ದನು. ಆದರೆ ಪೌಲನು, ಅವನ ಮರಣಕ್ಕೆ ಸಂತೋಷ ಪಟ್ಟವನೀತನು ಅವನ ಸ್ಥಾನದಲ್ಲಿ ಸೇರಿ, ಅವನು ಆರಂಭಿಸಿದ ಕೆಲಸವನ್ನು ಪೂರ್ಣವಾಗಿ ಮಹಿಮೆ ಪಡಿಸ ಬೇಕಾಯಿತು.



## § 160. ಸಮಾರ್ಯರ ಸಂವರ್ತನ, ಮಂತ್ರಗಾರನಾದ ಸಿಮೆಯೋನನು ಐತ್ಯೋಪ್ಯನಾದ ಭಂಡಾರಿಯು

೧) ಅಪೊ. ಕ್ರಿ. ೮, ೧—ಇತ್ಯಾದಿ. ಸ್ತೆಫಾನನ ಹತವು ಎಲ್ಲಾ ಸಭೆಯನ್ನು ಹಿಂಸಿಸಲಿಕ್ಕೆ ಸೌಜ್ಞೆಯಾಗಿತ್ತು. ಇದರಲ್ಲಿ ಪೌಲನು ಬಹಳ ಪ್ರಯತ್ನ ಮಾಡಿದವನು (§ ೧೬೧). ಅವನು ಮನೆಮನೆಗಳಲ್ಲಿ ಹೊಕ್ಕು ಗಂಡಸರನ್ನೂ ಹೆಂಗಸರನ್ನೂ ಎಳದು ಸೆರೆಯಲ್ಲಿ ಒಪ್ಪಿಸಿ ಕೊಟ್ಟು ಸಭೆಯನ್ನು ಹಾಳು ಮಾಡಿದನು. ಈ

ಪ್ರಕಾರ ಯೆರೂಸಲೇಮಿನ ಸಭೆಯನ್ನು ಸ್ವಲ್ಪ ಕಾಲಕ್ಕೆ ಚದರಿಸಲಿಕ್ಕೆ ಅವರಿಂದ ಆಯಿ
ತು. ಅಪೊಸ್ತಲರು ಮಾತ್ರವೇ ಸ್ಥಳ ಬಿಟ್ಟು ಹೋಗಲಿಲ್ಲ. ಆದರೆ ಚದರಿಸಲ್ಪ
ಡುವದರಿಂದಲೇ ಹೇಳ ಕೂಡದಷ್ಟು ಆಶೀರ್ವಾದವು ಉಂಟಾಯಿತು. ಹ್ಯಾಗಂದ
ರೆ — ಇಷ್ಟು ವರೆಗೆ ಬಹು ಸಣ್ಣ ಪ್ರದೇಶದಲ್ಲಿ ಮಾತ್ರವೇ ನಡದಂಥಾ ಸುವಾರ್ತೆಯ
ಪ್ರಸಂಗವು ಈಗ ಯೂದ ಸಮಾರ್ಯ ಪಟ್ಟಣಗಳಲ್ಲೆಲ್ಲಾ ಹಬ್ಬಿತು. ೭ ಸೇವಕರಲ್ಲಿ
ಒಬ್ಬನಾದ ಫಿಲಿಪ್ಪನು ಮುಖ್ಯವಾಗಿ ಸಮಾರ್ಯದಲ್ಲಿ ಪ್ರಸಂಗಿಸಿ ಕರ್ತನು ತಾನೇ
ಅಲ್ಲಿ ಬಿತ್ತಿದಂಥಾ ಒಳ್ಳೇ ಬೀಜದ ಪೈರನ್ನು ಸಮೃದ್ಧಿಯಾಗಿ ಕೊಯಿದನು (§ ೧೩೨, ೨).
ಆ ಪ್ರದೇಶದಲ್ಲಿ ಪ್ರಖ್ಯಾತಿ ಪಟ್ಟ ಒಬ್ಬ ಮಂತ್ರಗಾರನಾದ (ದೇವರ ಮಹಾ
ಶಕ್ತಿ ಎಂದು ಜನರಿಂದ ಎಣಿಸಲ್ಪಟ್ಟ) ಸಿಮೆಯೋನನೆಂಬವನು ಫಿಲಿಪ್ಪನು ಮಾ
ಡಿದ ಲಕ್ಷಣ ಅದ್ಭುತಗಳಿಗೋಸ್ಕರ ಈ ಹೊಸ ಬೋಧನೆಯು ದೈವಿಕವಾಗಿರ ಬೇಕೆಂದು
ನೆನಸಿ ಸ್ನಾನ ತಕ್ಕೊಂಡನು. ಸಮಾರ್ಯವು ಸಹಾ ದೇವರ ವಾಕ್ಯವನ್ನು ಅಂಗೀಕರಿಸಿ
ತು ಎಂಬ ವರ್ತಮಾನವು ಯೆರೂಸಲೇಮಿಗೆ ಮುಟ್ಟಿದ ಕೂಡಲೇ ಅಪೊಸ್ತಲರು
ಪೇತ್ರನನ್ನೂ ಯೋಹಾನನನ್ನೂ ಅಲ್ಲಿ ಕಳುಹಿಸಿದರು. ಇವರು ಸ್ನಾನ ಹೊಂದಿದವ
ರ ಮೇಲೆ ಪ್ರಾರ್ಥನೆ ಮಾಡಿ, ಹಸ್ತಮಸ್ತಕದಿಂದ ಅವರಿಗೆ (ಆಶ್ಚರ್ಯವಾದ) ಪರಿ
ಶುದ್ಧಾತ್ಮದ ಕೃಪೆಯ ವರಗಳನ್ನು ಕೊಟ್ಟರು. ಸಿಮೆಯೋನನು ಇದನ್ನು ನೋಡಿದಾಗ
ಹಸ್ತಮಸ್ತಕದಿಂದ ಪರಿಶುದ್ಧಾತ್ಮವನ್ನು ಮತ್ತೊಬ್ಬರಿಗೆ ಕೊಡಲಿಕ್ಕೆ ತನಗೆ ಸಹಾ ಅಧಿ
ಕಾರವನ್ನು ಕೊಡ ಬೇಕೆಂದು ಅಪೊಸ್ತಲರಿಗೆ ಹಣ ತಂದನು. ಆದರೆ ಪರಿಶುದ್ಧವಾ
ದ ಕೋಪದಿಂದ ಪೇತ್ರನು "ದೇವರ ವರವನ್ನು ಹಣದಿಂದ ಕೊಂಡುಕೊಳ್ಳ ಬಹುದೆಂ
ದು ನೀನು ನೆನಸಿದ ಕಾರಣ ನಿನ್ನ ಬೆಳ್ಳಿಯು ನಿನ್ನ ಸಂಗಡ ನಾಶವಾಗಲಿ" ಎಂದು
ಹೇಳಿ, ಹೃದಯದ ಕೆಟ್ಟತನಕ್ಕೋಸ್ಕರ ಮಾನಸಾಂತ್ರ ಪಡ ಬೇಕೆಂದು ಸಾರಿದನು.
ಹಪವುಳ್ಳ ಈ ಶಿಕ್ಷೆಯ ಮಾತುಗಳಿಂದ ಭಯಭ್ರಷ್ಟನಾಗಿ ಸಿಮೆಯೋನನು ತಾನು ದು
ಃಖಿತನಾಗಿರುತ್ತೇನೆಂದು ಹೇಳಿದನು. ಆದರೆ ಅವನ ಮನಃಸ್ತಾಪವು ಬಹು ಕಾಲವಿ
ರಲಿಲ್ಲವೆಂದು ಕಾಣುತ್ತದೆ. ಯಾಕಂದರೆ ಬೇರೆ ಕಡೆಯಲ್ಲಿ ಶಿಳಿಸಿ ಇರುವ ಪ್ರಕಾರ
ಅವನು ಮಂತ್ರಗಾರನ ಕೆಲಸಗಳನ್ನು ಮೊದಲಿನ ಹಾಗೆಯೇ ಮತ್ತೆ ಸಹಾ ನಡಿಸು
ತ್ತಾ ಇದ್ದನಂತೆ.

೨) ಅಪೊ. ಕ್ರಿ. ೮, ೨೬ ಇತ್ಯಾದಿ. ದೂತನ ಅಪ್ಪಣೆಯ ಪ್ರಕಾರ ಫಿಲಿ
ಪ್ಪನು ಯೆರೂಸಲೇಮಿನಿಂದ ಗಾಜಕ್ಕೆ ನಡಿಸುವ ಮಾರ್ಗಕ್ಕೆ ಹೋದನು. ಅಲ್ಲಿ
(ಐಥ್ಯೋಪ್ಯದ) ಮೇರೋಯೆ ದೇಶದ ರಾಣಿಯಾದ ಕಂದಾಕೆಯ ರಕ್ಷಣ್ಯಪ್ರಿಯನಾದ
ಭಂಡಾರಾಧಿಪತಿಯನ್ನು ಕಂಡನು. ಅವನು ಆರಾಧಿಸುವದಕ್ಕೋಸ್ಕರ ಯೆರೂಸಲೇ

ಮಿಗೆ ಬಂಡವನಾಗಿ ಈಗ ಸ್ವದೇಶಕ್ಕೆ ತಿರಿಗಿ ಹೋಗುವ ಮಾರ್ಗದಲ್ಲಿದ್ದನು (ಅವನು ಯೆಹೂದ್ಯನಾಗಿದ್ದನೋ ದ್ವಾರದ ಮತಶೇರಿದವನಾಗಿದ್ದನೋ ಎಂಬದು ಹೇಳಿಇರುವದಿಲ್ಲ). ಫಿಲಿಪ್ಪನು ಪರಿಶುದ್ಧಾತ್ಮದಿಂದ ಅಪ್ಪಣೆಯನ್ನು ಹೊಂದಿದವನಾಗಿ ರಥದ ಹತ್ತರ ಹೋದಾಗ ಚಂಡಾರಾಧಿಪತಿಯು ಯೆಶಾಯನ ೫೩.ನೇ ಸಂಧಿಯನ್ನು ಓದುವದನ್ನು ಕೇಳಿ, (§ ೮೭, ೨). ಅವನಿಗೆ ಕೇಳಿದ್ದು: ಓದುವವುಗಳನ್ನು ತಿಳುಕೊಳ್ಳುತ್ತೀಯೋ? ಅದಕ್ಕೆ ಅವನು "ಒಬ್ಬನು ನನಗೆ ಉಪದೇಶಿಸದಿದ್ದರೆ ಹ್ಯಾಗೆ ತಿಳುಕೊಂಡೇನು" ಎಂದು ಹೇಳಿ "ಪ್ರವಾದಿಯು ಇದನ್ನು ಯಾರ ವಿಷಯವಾಗಿ ಹೇಳುತ್ತಾನೆ, ತನ್ನ ವಿಷಯವಾಗಿಯೋ ಬೇರೊಬ್ಬನ ವಿಷಯವಾಗಿಯೋ, ದಯ ಮಾಡಿ ಹೇಳ ಬೇಕು" ಎಂಬದಾಗಿ ವಿಚಾರಿಸಿದಾಗ ಫಿಲಿಪ್ಪನು ಆ ಬರಹದಿಂದ ಆರಂಭ ಮಾಡಿ ಅವನಿಗೆ ಯೇಸುವಿನ ಸುವಾರ್ತೆಯನ್ನು ಪ್ರಸಂಗಿಸಿದನು. ಅಷ್ಟರೊಳಗೆ ಅವರು ನೀರಿನ ಬಳಿಗೆ ಬರಲಾಗಿ ಚಂಡಾರಾಧಿಪತಿಯು ಹೇಳಿದ್ದು: "ಇಗೋ ನೀರು ನಾನು ಸ್ನಾನ ಹೊಂದುವದಕ್ಕೆ ಅಡ್ಡಿ ಏನು"? ಅದಕ್ಕೆ ಫಿಲಿಪ್ಪನು ನೀನು ಪೂರ್ಣ ಹೃದಯದಿಂದ ವಿಶ್ವಾಸಿಸಿದರೆ ಆಗ ಬಹುದು ಅನ್ನಲು ಅವನು — "ಯೇಸು ಕ್ರಿಸ್ತನು ದೇವರ ಮಗನಾಗಿದ್ದಾನೆಂದು ವಿಶ್ವಾಸಿಸುತ್ತೇನೆ" ಎಂಬದಾಗಿ ಸಂತೋಷದಿಂದ ಪ್ರತ್ಯುತ್ತರ ಕೊಡಲಾಗಿ ಫಿಲಿಪ್ಪನು ಅವನಿಗೆ ಸ್ನಾನ ಕೊಟ್ಟನು. ಚಂಡಾರಾಧಿಪತಿಯು ಸಂತೋಷದಿಂದ ತನ್ನ ಮಾರ್ಗವಾಗಿ ಹೋದನು. ಆದರೆ ಫಿಲಿಪ್ಪನು ಅಜೋತಿನಲ್ಲಿ ಕಾಣಲ್ಪಟ್ಟು ಕೈಸರಯಕ್ಕೆ ಬರುವ ಪರ್ಯಂತರ ಪಟ್ಟಣಗಳೆಲ್ಲಾ ಹಾದು ಹೋಗಿ ಸುವಾರ್ತೆ ಪ್ರಸಂಗಿಸಿದನು. ಮತ್ತು ಇಲ್ಲಿ ಉಳುಕೊಂಡನು (ಅಪೊ. ಕ್ರಿ. ೨೧, ೮).



## § 161. ಪೌಲನ ಸಂವರ್ತನ

ಯೆಹೂದ್ಯ ಹೆಸರಿನ ಪ್ರಕಾರ ಸೌಲನೆಂಬ ಪೌಲನು ಕಿಲಿಕ್ಯದ ತರ್ಸ ಎಂಬಲ್ಲಿ ಹುಟ್ಟಿದವನು. ಅವನ ಹೆತ್ತವರು ಬೆನ್ಯಮೀನ ಗೋತ್ರದ ಯೆಹೂದ್ಯರೂ (ರೋಮಾ. ೧೧, ೨. ೨ಕೊರಿ. ೧೧, ೨೨. ಫಿಲಿಪ್. ೩, ೫ ಶ್ಲೋಕ) ರೋಮಾಯ ಪಟ್ಟಣವಾಸವುಳ್ಳವರೂ (ಅಪೊ. ಕ್ರಿ. ೧೬, ೩೭. ಸಂ. ೨೨, ೨೫ ಶ್ಲೋಕ) ಆಗಿದ್ದರು. ಇವರು ಅವನು ನ್ಯಾಯಶಾಸ್ತ್ರಿಯಾಗ ಬೇಕೆಂಬದಾಗಿ ಚಿಕ್ಕತನದಲ್ಲಿಯೇ ಅವನನ್ನು ಯೆರೂಸಲೇಮಿಗೆ ಪ್ರಖ್ಯಾತಿ ಪಟ್ಟ ಫರಿಸಾಯನಾದ "ನ್ಯಾಯಶಾಸ್ತ್ರಿ" ಗಮಲಿಯೇಲನ ಶಾಲೆಗೆ ಕಳುಹಿಸಿದರು (ಅಪೊ. ಕ್ರಿ. ೨೨, ೩ ಸಮ ನೋಡು § ೧೫೮, ೨).

ಹ್ಯಾಗೂ ಅದೇ ಸಮಯದಲ್ಲಿ ಆಗಿನ ಪದ್ಧತಿಯ ಪ್ರಕಾರ ಅವನು ಒಂದು ಕೈಕೆಲಸವನ್ನು ಸಹಾ ಅಂದರೆ ಗುಡಾರ ಮಾಡುವದನ್ನು ಕಲಿತನು (ಅಪೊ. ಕ್ರಿ. ೧೮, ೩). ಪೂರ್ಣ ಖಂಡಿತವಾಗಿ ಅವನು ಫರಿಸಾಯ ಮತದಲ್ಲಿ ನಿಮಗ್ನನಾಗಿ ಅದರಲ್ಲಿದ್ದ ಸತ್ಕೃತ್ಯಕ್ಕೋಸ್ಕರವೂ ಅದೇ ಪ್ರಕಾರ ತಪ್ಪುಗಳಿಗೋಸ್ಕರವೂ ಬಹು ವಾತ್ಸಲ್ಯವುಳ್ಳವನಾಗಿದ್ದನು (§ ೧೦೬). ಈ ಮಾರ್ಗದಲ್ಲಿ ಅವನು ಕ್ರೈಸ್ತತ್ವಕ್ಕೆ ಶತ್ರುವಾಗಿ ನಿಲ್ಲ ಬೇಕಾಯಿತೇ ಹೊರ್ತು ಬೇರೊಂದು ಇಲ್ಲ. ಪೂರ್ಣ ಹೃದಯದಿಂದ ಫರಿಸಾಯನಾಗಿದ್ದು, ತೀವ್ರ ಮನಸ್ಸಿನ ಪೂರ್ಣ ತ್ರಾಣದಿಂದ ಹೊಸ ಬೋಧನೆಯನ್ನೂ ಅದರ ಶಿಷ್ಯರನ್ನೂ ಹಗೆ ಮಾಡಿದನು. ಸ್ತೆಫಾನನ್ನು ಕಲ್ಲೆಸದಾಗ ಜಯಧ್ವನಿ ಮಾಡಿ ಸಂಗಡ ನಿಂತನು. ಹಗೆಗೆ ಪಾತ್ರರಾದ ಕ್ರೈಸ್ತರನ್ನು ಹುಡುಕಿ, ಸೆರೆಮನೆಗಳಲ್ಲಿ ಹಾಕುವದಕ್ಕಿಂತ ಹೆಚ್ಚು ಪರಿಶುದ್ಧವಾದ ಧರ್ಮವನ್ನು ಅವನು ಅಂದಿನಿಂದ ತಿಳುಕೊಳ್ಳಲಿಲ್ಲ. ಅವನ ವಾತ್ಸಲ್ಯವು ಅವನನ್ನು ಯೆರೂಸಲೇಮಕ್ಕೆ ಹೊರಗೆ ನಡಿಸಿತು. ಪ್ರಧಾನಯಾಜಕರಿಂದ ಅಧಿಕಾರವನ್ನು ಹೊಂದಿ, ಅವನು ದಮಸ್ಕದಲ್ಲಿ ಸಹಾ ಹಗೆ ಮಾಡಲ್ಪಟ್ಟ ಕ್ರೈಸ್ತರನ್ನು ಹುಡುಕುವದಕ್ಕಾಗಿ ಅಲ್ಲಿಗೆ ಹೋದನು (ಕ್ರಿಸ್ತ ಶಕ ೩೫. ಇಲ್ಲವೆ ೩೬ನೇಯಲ್ಲಿ).

೨) ಅಪೊ ಕ್ರಿ. ೯, ೧ ಇತ್ಯಾದಿ ಶ್ಲೋಕಗಳು (ಸಂ. ೨೨, ೩ ಇತ್ಯಾದಿ. ಸಂ. ೨೬, ೯ ಇತ್ಯಾದಿ ಶ್ಲೋಕಗಳು). ಆದರೆ ಇಲ್ಲಿ ಅವನಿಗಿಂತ ಹೆಚ್ಚು ಬಲವಂತನ ಕೈ ಅವನನ್ನು ಹಿಡಿಯಿತು. ಸ್ತೆಫಾನನು ಮರಣವನ್ನು ಅನುಭವಿಸಿ ಹಗೆಗಾರರಿಗಾಗಿ ಬೇಡಿಕೊಂಡು ತೋರಿಸಿದ ಸಂತೋಷವಾದ ಧೈರ್ಯವು ಸೌಲನಂಥಾ ಮನುಷ್ಯನ ಮನಸ್ಸು ಮುಟ್ಟದೆ ಇರದು. ಅದು ಅವನ ಚಿತ್ತಕ್ಕೆ ಪ್ರತಿಕೂಲವಾಗಿ ಸಹಾ ಅವನ ಹೃದಯದಲ್ಲಿ ತಿವಿದು ಇರ ಬೇಕು. ಇದರಿಂದ ಕರ್ತನ ಕೈ ಅಂತರಂಗವಾಗಿ ಅವನ ಹೃದಯದಲ್ಲಿ ಕೆಲಸ ನಡಿಸಿ ಇರುವದು. ಹೀಗಾಗಿ ಫರಿಸಾಯ ಮತಾಭಿಮಾನಿಯಾಗಿ ಅವನು ನಡಕೊಂಡರೂ ಅವನಲ್ಲಿ ಆಗಲಿಕ್ಕಿದ್ದ ಅದ್ಭುತಕಾರ್ಯಕ್ಕೆ ಅಂತರಂಗದಲ್ಲಿ ಹೆಚ್ಚು ಹೆಚ್ಚಾಗಿ ಸಿದ್ಧ ಮಾಡಲ್ಪಟ್ಟಿರುವನು. ಹೀಗಿರುತ್ತಿರಲಾಗಿ ಅವನು ದಮಸ್ಕಕ್ಕೆ ಸಮೀಪವಾಗಿ ಮಾರ್ಗದಲ್ಲಿದ್ದಾಗ ಫಕ್ಕನೇ ಆಕಾಶದಿಂದ ಬೆಳಕು ಅವನ ಸುತ್ತಲು ಮಿಂಚಿತು. ಮತ್ತು ಅವನು ಕರ್ತನನ್ನು ಅವನ ಪರಲೋಕದ ಮಹತ್ವಿಕೆಯ ಮಹಿಮಾಪ್ರಕಾಶದಲ್ಲಿ ಕಂಡನು (ಶ್ಲೋಕ ೨೭. ೧ ಕೊರಿ. ೯, ೧; ಸಂ. ೧೫, ೮). ವಿಸ್ಮಯವಾಗಿ ನೆಲಕ್ಕೆ ಬಿದ್ದು "ಸೌಲನೇ! ಸೌಲನೇ! ನನ್ನನ್ನು ಯಾಕೆ ಹಿಂಸಿಸುತ್ತೀ? ನಾನು ನೀನು ಹಿಂಸಿಸುವ ಯೇಸುವೇ, ಮುಳ್ಳುಗಳ ಮೇಲೆ ಒದೆಯುವದು ನಿನಗೆ ಕಠಿಣವು" ಎಂಬ ಧ್ವನಿಯನ್ನು ಕೇಳಿದನು. ಅವನು ನಡುಗಿ ಭ್ರಮಿಸಿ "ಕರ್ತನೇ ನಾನು ಏನು ಮಾಡ ಇಚ್ಛೈಸುತ್ತಿ" ಅನ್ನಲು ಕರ್ತನು

ದಮಸ್ಕಕ್ಕೆ ಹೋಗ ಬೇಕೆಂದೂ ಅಲ್ಲಿ ಅವನಿಗೆ ಹೇಳಲ್ಪಡುವದೆಂದೂ ತಿಳಿಸಿದನು. ಮತ್ತು ಪೌಲನು ಎದ್ದಾಗ ಪರಲೋಕದ ಪ್ರಕಾಶದ ಹೊಳವು ಅವನ ಕಣ್ಣಿಗೆ ಬಡದಿರುವದರಿಂದ ಕಣ್ಣು ಕಾಣದವನಾಗಿದ್ದನು. ಅವನು ತನ್ನ ಸಂಗಡ ಇದ್ದ ಜನರ ಸಹಾಯದಿಂದ ಮುಂದೆ ಹೋಗ ಬೇಕಾಯಿತು. ಇವರು ಪ್ರಕಾಶವನ್ನು ನೋಡಿದ್ದರು. ಆದರೆ ಮೂರ್ತಿಯನ್ನಲ್ಲ ಧ್ವನಿಯನ್ನು ಕೇಳಿದ್ದರು, ಆದರೆ ಮಾತುಗಳನ್ನು ತಿಳುಕೊಳ್ಳಲಿಲ್ಲಾ. ಮತ್ತು ಹ್ಯಾಗೆ ಬಹಿರಂಗವಾಗಿಯೋ ಹಾಗೆಯೇ ಅಂತರಂಗವಾಗಿ ಸಹಾ ಅವನ ಸ್ವಭಾವಿಕ ಬಲವು ಮುರಿದು ಹೋಗಿತ್ತು; ಸ್ವಂತ ಪ್ರಕಾಶವು ಹಾರಿ ಹೋಗಿತ್ತು. ಈ ಪ್ರಕಾರ ೩ ದಿನ ಪರ್ಯಂತರ ಅಂಧನಾಗಿಯೂ ಪರತಂತ್ರನಾಗಿಯೂ ಬರಲಿಕ್ಕಿದ್ದವುಗಳಿಗಾಗಿ ಪ್ರಾರ್ಥನೆ ಉಪವಾಸಗಳಲ್ಲಿ ದಮಸ್ಕದಲ್ಲಿ ೩ ದಿವಸ ಕಾದು ಕೊಂಡಿದ್ದನು. ಅಷ್ಟರೊಳಗೆ ದಮಸ್ಕದಲ್ಲಿ ಶಿಷ್ಯನಾಗಿದ್ದ ಅನನೀಯನೆಂಬವನು ಅವನ ಬಳಿಗೆ ಹೋಗ ಬೇಕೆಂದು ಕರ್ತನಿಂದ ಅಪ್ಪಣೆಯನ್ನು ಹೊಂದಿದನು. ಮತ್ತು ಇವನು ಅನುಮಾನ ಮಾಡಲಾಗಿ ಕರ್ತನು ಪ್ರತ್ಯುತ್ತರವಾಗಿ ಹೇಳಿದ್ದು: “ನೀನು ಹೋಗು ಯಾಕಂದರೆ ಇವನು ಜನಾಂಗಗಳ ಮುಂದೆಯೂ ಅರಸರ ಮುಂದೆಯೂ ಇಸ್ರಯೇಲ ಮಕ್ಕಳ ಮುಂದೆಯೂ ನನ್ನ ಹೆಸರನ್ನು ಧರಿಸುವದಕ್ಕೆ ನನಗೆ ಆಯಲ್ಪಟ್ಟ ಪಾತ್ರೆಯಾಗಿದ್ದಾನೆ. ಮತ್ತು ಅವನು ನನ್ನ ನಾಮಕ್ಕೋಸ್ಕರ ಎಷ್ಟು ಶ್ರಮೆ ಪಡ ಬೇಕೆಂದು ಅವನಿಗೆ ತೋರಿಸುವೆನು”. ಆಗ್ಯೆ ಇವನು ಬರುವದಕ್ಕಾಗಿ ದರ್ಶನದಿಂದ ಮೊದಲೇ ಸಿದ್ಧ ಮಾಡಲ್ಪಟ್ಟ ಪೌಲನ ಬಳಿಗೆ ಅನನೀಯನು ಹೋಗಿ ಅವನ ಮೇಲೆ ಕೈಗಳನ್ನಿಟ್ಟನು. ಕೂಡಲೇ ಸಿಪ್ಪಿಗಳ ಹಾಗಿರುವವುಗಳು ಅವನ ಕಣ್ಣುಗಳಿಂದ ಬಿದ್ದವು. ಅವನು ಕ್ಷಣದಲ್ಲಿ ದೃಷ್ಟಿಯನ್ನು ಹೊಂದಿ ಎದ್ದು ಸ್ನಾನ ಹೊಂದಿದನು (೪೦ನೇ ವರ್ಷದಲ್ಲಿ).

೩) ಅಪೊ. ಕ್ರಿ. ೯, ೨೦ ಇತ್ಯಾದಿ. ಪೌಲನು ಸ್ವಲ್ಪ ದಿವಸಗಳ ಮೇಲೆ ಯೇಸುವು ದೇವರ ಮಗನಾಗಿರುತ್ತಾನೆಂದು ಸಭೆಮನೆಗಳಲ್ಲಿ ಸಾರಲಾಗಿ ಕೇಳುವವರೆಲ್ಲರೂ ಭ್ರಮೆಗೊಂಡರು. ಯಾಕಂದರೆ ಅವನು ಯಾವ ಕಾರ್ಯಕ್ಕೋಸ್ಕರ ದಮಸ್ಕಕ್ಕೆ ಬಂದಿದ್ದನೆಂದು ತಿಳಿದಿದ್ದರು. ಆದರೆ ಅವನು ಹೆಚ್ಚು ಹೆಚ್ಚು ಬಲವಾಗಿ ಯೇಸುವೇ ಕ್ರಿಸ್ತನೆಂದು ಸ್ಥಾಪಿಸಿ ದಮಸ್ಕದಲ್ಲಿರುವ ಯೆಹೂದ್ಯರನ್ನು ಭಂಗ ಪಡಿಸಿದನು. ಆದದರಿಂದ ಯೆಹೂದ್ಯರು ಅವನನ್ನು ಕೊಲ್ಲುವದಕ್ಕೆ ಆಲೋಚನೆ ಮಾಡಿದರು. ಮತ್ತು ಅವನು ತಪ್ಪಿ ಹೋಗ ಬಾರದೆಂದು ಪಟ್ಟಣದ ಬಾಗಿಲುಗಳನ್ನು ರಾತ್ರಿ ಹಗಲು ಜಾಗ್ರತೆಯಾಗಿ ಕಾಯುತ್ತಾ ಇದ್ದರು. ಆದರೆ ಶಿಷ್ಯರು ರಾತ್ರಿಯಲ್ಲಿ ಅವನನ್ನು ಕರಕೊಂಡು ಹೋಗಿ ಪುಟ್ಟಿಯಲ್ಲಿಟ್ಟು ಗೋಡೆಯಿಂದ ಇಳಿಸಿದರು. ಈ ಪ್ರಕಾರ

(ಅವನ ಸಂವರ್ತನದ ೩ ವರ್ಷದ ಮೇಲೆ ಗಲಾ. ೧, ೧೮ ವಚನ. ೪೩ನೇ ಇಸವಿಯಲ್ಲಿ) ಯೆರೂಸಲೇಮಿಗೆ ಬಂದನು. ಆದರೆ ಇಲ್ಲಿ ಶಿಷ್ಯರು ಅವನಿಗೆ ಚನ್ನಾಗಿ ನಂಬಲಿಲ್ಲ. ಕಡೆಯಲ್ಲಿ ಬರ್ನಬನು ಅವನನ್ನು ಕೈ ಹಿಡಿದು ಅಪಾಸ್ತಲರ ಬಳಿಗೆ ಕರಕೊಂಡು ಬಂದನು. ಯೆರೂಸಲೇಮಿನಲ್ಲಿ ಸಹಾ ಅವನು ಕರ್ತನಾದ ಯೇಸುವಿನ ಹೆಸರಿನಲ್ಲಿ ಧೈರ್ಯವಾಗಿ ಪ್ರಸಂಗಿಸುತ್ತಾ ಇದ್ದನು. ಆದರೆ ಇಲ್ಲಿ ಸಹಾ ಅವನನ್ನು ಕೊಲ್ಲುವದಕ್ಕೆ ಯತ್ನ ಮಾಡಿದಾಗ ಸಹೋದರರು ಅವನನ್ನು ಕೈಸರೈಯಕ್ಕೆ ಕರಕೊಂಡು ಹೋಗಿ, ಅಲ್ಲಿಂದ ತಾರ್ಸಕ್ಕೆ ಕಳುಹಿಸಿದರು.

ಪರಿಶಿಷ್ಟ. ಪೌಲನ ಸಂವರ್ತನವು ಕ್ರೈಸ್ತತ್ವದ ವಿಜಯುಗಳಲ್ಲಿ ಅತಿ ಮಹಿಮೆಯುಳ್ಳದ್ದಾಗಿತ್ತು. ಆದರೂ ಇಂಥಾದ್ದು ಅಲ್ಪವಾಗಿ ಆಗಲಿ ಮಹತ್ತಾಗಿ ಆಗಲಿ ಅನೇಕ ಸರ್ತಿ ಅಂದಿನಿಂದ ಸಂಭವಿಸುತ್ತಾ ಬಂದದೆ "ಶತ್ರುಗಳಾಗಿದ್ದವರು ಮಿತ್ರರಾಗುವದು." ಅದೇ ಕ್ರೈಸ್ತತ್ವದ ದಿವ್ಯ ಮುದ್ರೆಯಾಗಿರುತ್ತದೆ. ಪೌಲನು ಕರ್ತನಿಂದ ಮ್ಲೇಂಛರ ಅಪೊಸ್ತಲನಾಗಿ ಆಯಲ್ಪಟ್ಟದ್ದನ್ನು (ಗಲಾ. ೧, ೧೬) ಇಸ್ರಯೇಲನ ಗೋತ್ರಗಳಿಗೆ ಕಳುಹಿಸಲ್ಪಟ್ಟ ೧೨ ಮಂದಿ ಸಾರುವವರ ಹಾಗೆಯೇ ಅಧಿಕಾರವುಳ್ಳವನೂ ಅವರೆಲ್ಲರಿಗಿಂತ ಅಧಿಕವಾದ ಫಲ ಹೊಂದಿದವನೂ ಆಗಿದ್ದನು. ಬೇರೆ ಅಪೊಸ್ತಲರ ಹಾಗೆಯೇ ಕರ್ತನ ಉತ್ಥಾನದ ಸಾಕ್ಷಿಯಾಗಲಿಕ್ಕೋಸ್ಕರ ಕರ್ತನು ಅವನಿಗೆ ಸಹಾ ತಾನೇ ದೇಹಿಯಾಗಿ ಕಾಣಿಸಿ ಕೊಂಡು, ಅವರನ್ನು ಹ್ಯಾಗೋ ಹಾಗೆಯೇ ಇವನನ್ನು ಸಹಾ ಪ್ರತ್ಯೇಕವಾಗಿ ಕರಿಯ ಬೇಕಾಯಿತು (೧ ಕೊರಿ. ೧೫, ೫). ಆದ್ದರಿಂದ ಅವನು ತಾನೇ ಈ ದರ್ಶನವು ಅತಿ ವಿಶೇಷವಾದದ್ದೆಂದು ಹೇಳುತ್ತಾನೆ (೧ ಕೊರಿ. ೯, ೧ ವಚನ).



## § 162. ಪೇತ್ರನು ಲುದ್ದ ಯೊಪ್ಪೆಗಳಲ್ಲಿ ಮಾಡಿದ ಅದ್ಭುತಗಳು ಕೊರ್ನೇಲ್ಯನ ಸಂವರ್ತನ

೧) ಅಪೊ. ಕ್ರಿ. ೯, ೩೧ ಇತ್ಯಾದಿ. ತನ್ಮಧ್ಯ ಸಮಸ್ತ ಯೆಹೂದ್ಯ ಗಲಿಲಾಯ ಸಮಾರ್ಯಗಳಲ್ಲಿ ಇರುವ ಸಭೆಗಳು ಕೆಲವು ವರ್ಷ ಪರ್ಯಂತರ ಬಿಡದೇ ಸಮಾಧಾನವಾಗಿ ಇದ್ದವು. ಹೀಗಾಗಿ ಒಳಗೆ ಹೊರಗೆ ಬಹಳವಾಗಿ ಅಭಿವೃದ್ಧಿ ಹೊಂದಿದವು. ಈ ಸಮಯದಲ್ಲಿ ಪೇತ್ರನು ಸಭೆಗಳನ್ನು ನೋಡಲಿಕ್ಕೆ ಹೋದನು. ಯೆ

ರೂಸಲೇಮಿಗೂ ಯಾಪ್ಪೆಗೂ ಮಧ್ಯದಲ್ಲಿರುವ ಉದ್ದದಲ್ಲಿ ಪಕ್ಷವಾಯು ರೋಗದ ವನೂ ೮ ವರ್ಷಗಳಿಂದ ಮಂಚದ ಮೇಲೆ ಬಿದ್ದವನೂ ಆಗಿರುವ ಐನೇಯನೆಂಬ ಒಬ್ಬ ಮನುಷ್ಯನನ್ನು ಯೇಸುವಿನ ಹೆಸರಿನಲ್ಲಿ ಸ್ವಸ್ಥ ಮಾಡಿದನು. ಮತ್ತು ಯಾಪ್ಪದಲ್ಲಿ ದೋರ್ಕಳೆಂಬ ಅರ್ಥವುಳ್ಳ ತಬೀತ ಎಂಬವಳನ್ನು ಮರಣದಿಂದ ಎಬ್ಬಿಸಿದನು. ಅವಳು ಒಳ್ಳೇ ಕ್ರಿಯೆಗಳಿಂದಲೂ ಧರ್ಮಗಳಿಂದಲೂ ತುಂಬಿದವಳಾಗಿದ್ದಳು. ಈ ೨ ಅದ್ಭುತಗಳಿಂದ ಸುತ್ತಲಿನ ಪ್ರದೇಶದವರು ಅನೇಕರು ಸಭೆಯಲ್ಲಿ ಶೇರಿ ಅದು ಅಭಿವೃದ್ಧಿಯಾಯಿತು. ಯಾಪ್ಪದಲ್ಲಿ ಪೇತ್ರನು ಸಿಮೆಯೋನನೆಂಬ ಒಬ್ಬ ತೊಗಲುಗಾರನ ಸಂಗಡ ಬಹು ದಿವಸ ವಾಸವಾಗಿದ್ದನು.

ಪರಿಶಿಷ್ಟ. ಸುವಾರ್ತೆಯು ಪಲೆಸ್ತೀನದ ಪ್ರಾಂತ್ಯಗಳನ್ನು ದಾಟಿ (೯, ೩೧. ಸಂ. ೧೧, ೧೯—೨೧ ವರೆಗೆ) ಇದರಿಂದ ಹೆಚ್ಚು ಹೆಚ್ಚಾಗಿ ರಕ್ಷಿಸಲ್ಪಡ ಇಚ್ಛೈಸುವ ಮ್ಲೇಂಛರ ಹತ್ತಿರ ಬಂದಿರಲಾಗಿ ಇವರ ವಿಷಯವಾಗಿ ಹ್ಯಾಗೆ ನಡಕೊಳ್ಳ ಬೇಕೆಂಬ ಪ್ರಶ್ನೆಯು ಖಂಡಿತವಾಗಿ ತೀರಿಸಲ್ಪಡ ಬೇಕಾಯಿತು. ಮ್ಲೇಂಛರು ಸಹಾ ದೇವರ ರಾಜ್ಯದಲ್ಲಿ ಬರಲಿಕ್ಕೆ ಕರಿಯಲ್ಪಟ್ಟಿದ್ದಾರೆಂಬದಕ್ಕೆ ಅಪೊಸ್ತಲರು ಏನೇನೂ ಸಂಶಯ ಪಡಲಿಲ್ಲಾ. ಇದಕ್ಕೆ ಹಳೇ ಒಡಂಬಡಿಕೆಯು ಮತ್ತು ಕರ್ತನ ಸ್ವಂತ ಖಂಡಿತವಾದ ಪ್ರವಾದನೆಗಳು ಇದ್ದವು. ಆದರೆ ಮ್ಲೇಂಛರು ಪರಿಚ್ಛೇದನೆಯಿಂದಲೂ ಇದರ ಸಂಗಡ ನಿಷ್ಠಾನೇಮದ ಅಂಗೀಕಾರದಿಂದಲೂ ಶೇರಿಸಲ್ಪಡ ಬೇಕೆಂದು ಇನ್ನೂ ನೆನಸುತ್ತಾ ಇದ್ದರು. ಇದಲ್ಲದೆ ಕ್ರಿಸ್ತನ ವಾಕ್ಯದ ತಿಳುವಿಕೆಯನ್ನು ಪೂರ್ಣವಾಗಿಯೂ ಸ್ವಚ್ಛವಾಗಿಯೂ ಪಡಕೊಳ್ಳುವ ಪರ್ಯಂತರಕ್ಕೂ ಮತ್ಥಾ. ೫,೧೮. (§ ೧೨೭,೧) ಹಳೇ ಒಡಂಬಡಿಕೆಯು ಪರಿಚ್ಛೇದನೆಯೂ ನಿಷ್ಠಾನೇಮವೂ ನಿತ್ಯವಾಗಿರುತ್ತದೆಂಬ ವಾಕ್ಯಗಳಿಗೋಸ್ಕರ ಒಪ್ಪಿ ಕೊಳ್ಳ ಅವಶ್ಯವಾಯಿತು. ಹೀಗಾಗಿ ಈ ಪ್ರಶ್ನೆಯು ತೀರ್ಪು ಯೆಹೂದ್ಯ ಅಪೊಸ್ತಲನಾಗಿಯೂ ಅಪೊಸ್ತಲರಲ್ಲಿ ಶ್ರೇಷ್ಠನಾಗಿಯೂ ಇರುವ ಪೇತ್ರನಿಂದ ಉಂಟಾಗುವಂಥಾದ್ದು ಅತಿ ಪ್ರಾಮುಖ್ಯವಾಗಿತ್ತು. ಹ್ಯಾಗಂದರೆ—ಇವನು ಯೆರೂಸಲೇಮಿನ ಯೆಹೂದ್ಯ ಮಾತೃಸಭೆಯ ಸ್ಥಾಪಕನಾಗಿ ಬಹಳವಾಗಿ ಮನಸ್ಸಾಕ್ಷಿಗೋಸ್ಕರ ನಿಷ್ಠಾನೇಮವನ್ನು ಕೈಕೊಳ್ಳುವದು ಅವಶ್ಯವಾಗಿರುತ್ತದೆಂದು ಇಷ್ಟು ವರೆಗೆ ನಂಬಿದವನಾಗಿದ್ದನು.

೨) ಅಪೊ. ಕ್ರಿ. ೧೦,೧ ಇತ್ಯಾದಿ. ಇತಾಲಿಕವೆಂಬ ಹೆಸರುಳ್ಳ ರಾಣುವೆಯಲ್ಲಿ ಶತಾಧಿಪತಿಯಾಗಿದ್ದ ಕೊರ್ನೇಲ್ಯನು ದ್ವಾರದ ಮತ ಶೇರಿದವನಾಗಿ ದೇವರಿಗೆ ಭಯ ಪಡುವವನೂ ಪ್ರಜೆಗೆ ಬಹಳ ಧರ್ಮ ಮಾಡುವವನೂ ಆಗಿದ್ದನು. ಒಂದು

ದಿವಸ ಅವನು ಉಪವಾಸ ಮಾಡಿ ಪ್ರಾರ್ಥನೆ ಮಾಡುತ್ತಾ ಇರುವಾಗ್ಗೆ ದರ್ಶನದಲ್ಲಿ ದೇವರ ದೂತನು ಅವನಿಗೆ ಪ್ರತ್ಯಕ್ಷವಾಗಿ ಅವನಿಗೆ ಹೇಳಿದ್ದು—ನಿನ್ನ ಪ್ರಾರ್ಥನೆಗಳೂ ನಿನ್ನ ಧರ್ಮಗಳೂ ದೇವರ ಮುಂದೆ ಜ್ಞಾಪಕವಾಗಿ ಏರಿ ಬಂದವು. ಈಗ ಯಾಪ್ಪೆಗೆ ಜನರನ್ನು ಕಳುಹಿಸಿ ಪೇತ್ರನೆಂಬ ಸಿಮೆಯೋನನನ್ನು ಕರಸು. ಅವನು ನೀನು ಮಾಡ ಬೇಕಾದ್ದೇನೆಂದು ನಿನಗೆ ತಿಳಿಸುವನು. ಕಾರ್ನೇಲ್ಯನು ಕೂಡಲೇ ಚಾಕ್ರಿಯವರನ್ನು ಯಾಪ್ಪಕ್ಕೆ ಕಳುಹಿಸಿದನು. ಆದರೆ ಭದ್ರವಾಗಿ ನೇಮವನ್ನು ಅನುಸರಿಸುವ ಪೇತ್ರನು ಸಹಾ ಇಂಥಾ ವಿಶೇಷವಾದ ಕೆಲಸಕ್ಕೆ ಸಿದ್ಧ ಮಾಡಲ್ಪಡ ಬೇಕಾಯಿತು. ಚಾಕರಿಯವರು ಪಟ್ಟಕ್ಕೆ ಸಮೀಪವಾಗಿರುವಾಗ್ಗೆ ಪೇತ್ರನು ಮಾಳಿಗೆಯಲ್ಲಿ ಪ್ರಾರ್ಥನೆ ಮಾಡುತ್ತಾ ಇದ್ದನು. ಅಲ್ಲಿ ಹಸಿದನು. ಶರೀರಕ್ಕೆ ಬೇಕಾದದ್ದು ಮುಂಗುರ್ತಾದ ದರ್ಶನದ ಬೋಧನೆಯಾಗಿ ದೇವರಿಂದ ಪ್ರಯೋಗಿಸಲ್ಪಡುತ್ತದೆ. ಅವನು ಊಟಕ್ಕೆ ಕಾದು ಕೊಂಡಿರುವಾಗ್ಗೆ ಅವನು ಪರವಶನಾಗಿ ಪರಲೋಕವು ತೆರದಿರುವದನ್ನೂ ೪ ಕೊನೆ ಕಟ್ಟಿದ ದೊಡ್ಡ ದುಪ್ಪಟಿಯ ಹಾಗೆ ಇರುವಂಥಾ ಭೂಮಿಯ ಮೇಲೆ ಇಳಿಸಲ್ಪಡುವ ಪಾತ್ರೆಯು ತನ್ನ ಬಳಿಗೆ ಇಳಿದು ಬರುವದನ್ನೂ ನೋಡಿದನು. ಅದರೊಳಗೆ ಭೂಮಿಯ ಸಕಲ ಚತುಷ್ಪಾದಗಳೂ ಮೃಗಗಳೂ ಕ್ರಿಮಿಗಳೂ ಆಕಾಶದ ಪಕ್ಷಿಗಳೂ ಇದ್ದವು. ಮತ್ತು "ಪೇತ್ರನೇ ಎದ್ದು, ಕೊಂದು ತಿನ್ನು" ಎಂಬ ಶಬ್ದವು ಅವನಿಗೆ ಆಯಿತು. ಅದಕ್ಕೆ ಪೇತ್ರನು "ಕರ್ತನೇ ಬೇಡವೇ ಬೇಡ. ನಾನೆಂದೂ ಅಪವಿತ್ರವಾದದ್ದೂ ಅಶುದ್ಧವಾದದ್ದೂ ಏನಾದರೂ ತಿನ್ನಲಿಲ್ಲ" ಅಂದನು. ಆದರೆ ಶಬ್ದವು ತಿರಿಗಿ ಅವನಿಗೆ ಹೇಳಿದ್ದು "ದೇವರು ಶುದ್ಧ ಮಾಡಿದ್ದನ್ನು ನೀನು ಅಪವಿತ್ರ ಮಾಡ ಬೇಡ" ಇದು ಮೂರು ಸಾರಿ ಆಯಿತು. ಮತ್ತೆ ದರ್ಶನವು ತೀರಿತು. ತಾನು ಕಂಡ ನೋಟವು ಏನೆಂದು ತನ್ನ ಮನಸ್ಸಿನಲ್ಲಿ ಅನುಮಾನ ಪಡುತ್ತಿರುವಾಗ (ಸಮ ನೋಡು ೩ ಮೋಶೆ. ೨೦, ೨೪. ೨೬. § ೪೨) ಇಗೋ ಚಾಕರಿಯವರು ತನ್ನನ್ನು ಕುರಿತು ಕೆಳಗೆ ವಿಚಾರಿಸುವದನ್ನು ಕೇಳಿದನು. ಮತ್ತು ಆತ್ಮವು ಅವನಿಗೆ—"ನೀನು ಎದ್ದು ಇಳಿದು ಏನೂ ಸಂದೇಹ ಪಡದೆ ಅವರ ಸಂಗಡ ಹೋಗು! ನಾನು ಅವರನ್ನು ಕಳುಹಿಸಿದ್ದೇನೆ" ಎಂದು ಹೇಳಿತು. ಕಾರ್ನೇಲ್ಯನು ತನ್ಮಧ್ಯ ತನ್ನ ನೆಂಟರನ್ನೂ ಆಪ್ತಸ್ನೇಹಿತರನ್ನೂ ಕೂಡಾ ಕರಸಿ ಇದ್ದನು. ಮತ್ತು ಪೇತ್ರನು ಬಂದಾಗ ತನಗೆ ಆದದ್ದನ್ನೆಲ್ಲಾ ಅವನಿಗೆ ತಿಳಿಸಿದನು. ಆಗ್ಗೆ ಪೇತ್ರನು ಬಾಯಿ ತೆರದು ಹೇಳಿದ್ದು—ದೇವರು ಮುಖದಾಕ್ಷಿಣ್ಯ ನೋಡುವವನಲ್ಲವೆಂದೂ ಸಕಲ ಜನಾಂಗಗಳಲ್ಲಿ ಅವನಿಗೆ ಭಯ ಪಟ್ಟು ನೀತಿಯನ್ನು ನಡಿಸುವವನು ಅವನಿಗೆ ಸಮರ್ಪಕನಾಗಿದ್ದಾನೆಂದೂ ನಿಶ್ಚಯವಾಗಿ ಗ್ರಹಿಸುತ್ತೇನೆ. ತರುವಾಯ ಶಿಲುಬೆಗೆ ಹಾಕಲ್ಪಟ್ಟು ಉತ್ಥಾನವಾದ

ಯೇಸು ಕ್ರಿಸ್ತನನ್ನು ಅವರಿಗೆ ಪ್ರಸಂಗಿಸಿದನು. ಮತ್ತು ಅವನು ಇನ್ನು ಮಾತಾಡು ತ್ತಿರಲಾಗಿ ಕೇಳುವವರೆಲ್ಲರ ಮೇಲೆ ಪರಿಶುದ್ಧಾತ್ಮವು ಬಿತ್ತು. ಮತ್ತು ಅವರು ಭಾ ಷೆಗಳಿಂದ ಮಾತಾಡಿ ದೇವರನ್ನು ಮಹಿಮೆ ಪಡಿಸಿದರು. ಆಗ್ಯೆ ಪೇತ್ರನು ತನ್ನ ಸಂ ಗಡ ಬಂದ ಯೆಹೂದ್ಯ ವಿಶ್ವಾಸಿಗಳಿಗೆ ಹೇಳಿದ್ದು — "ನಮ್ಮ ಹಾಗೆಯೇ ಪರಿಶುದ್ಧಾ ತ್ಮ ಹೊಂದಿದ ಇವರು ಸ್ನಾನ ಹೊಂದದ ಹಾಗೆ ನೀರಿಗೆ ಒಬ್ಬನು ಅಡ್ಡಿ ಮಾಡ ಬ ಹುದೇ"; ಕೂಡಲೇ ಕರ್ತನ ಹೆಸರಿನಲ್ಲಿ ಅವರಿಗೆ ಸ್ನಾನ ಕಾಡ ಬೇಕೆಂದು ಅಜ್ಞಾಪಿಸಿ ದನು. ಈ ಸ್ನಾನದ ವರ್ತಮಾನವು ಯೆರೂಸಲೇಮಿಗೆ ಬಂದಾಗ ಕೆಲವು ವಾತ್ಸಲ್ಯಗಾ ರರು ಆತಂಕ ಪಟ್ಟು ಪೇತ್ರನ ಮೇಲೆ ಅಪವಾದ ಹಾಕಿದರು. ಆದರೆ ಇವನು ನಡದ ಸಂಗತಿಗಳನ್ನೆಲ್ಲಾ ತಿಳಿಸಲಾಗಿ ಅವರು ಸುಮ್ಮನೇ ಇದ್ದು ದೇವರನ್ನು ಮಹಿಮೆ ಪ ಡಿಸಿ ಹೇಳಿದ್ದು — "ಹಾಗಾದರೆ ದೇವರು ಜನಾಂಗಗಳಿಗೂ ಜೀವಕ್ಕೆ ಮಾನಸಾಂತರ ವನ್ನು ಕಾಟ್ಟಿದ್ದಾನೆ".

ಪರಿಶಿಷ್ಟ. ಸ್ನಾನದ ಮೊದಲು ಕೊಡಲ್ಪಟ್ಟ ಆತ್ಮಕ್ಕಾಗಿ ಸ್ನಾನವು ಅವಶ್ಯವ ಲ್ಲವೆಂದು ಎಷ್ಟು ಮಾತ್ರವು ಆಗಲಿಲ್ಲ. ಯಾಕಂದರೆ ಸ್ನಾನದಲ್ಲಿ ನಡಿಯುವಂಥಾ ಆತ್ಮದ ಕೆಲಸಕ್ಕೆ ಅದು ಪೂರ್ಣವಾಗಿ ಬೇರೆಯಾಗಿರುತ್ತದೆ. ಅಲ್ಲಿ ವಿಶೇಷವಾದ ವರಗ ಳು (ಭಾಷೆಗಳಿಂದ ಮಾತಾಡುವದು) ಮಾತ್ರವೇ ಪ್ರಾಮುಖ್ಯವಾಗಿತ್ತು. ಇವುಗಳು ಸ್ನಾನದಲ್ಲಿ ಆಗುವ ಪುನರ್ಜನನದ ವರಕ್ಕಿಂತ ಆಶ್ಚರ್ಯಕರವಾಗಿರುತ್ತದೆಂಬದು ಸರಿ. ಆದರೆ ಅದಕ್ಕಿಂತ ಬಹಳ ಕಡಿಮೆ ತರದ್ದಾಗಿರುತ್ತದೆ ಸಹಾ.



## § 163. ಅಂತ್ಯೋಕ್ಯದ ಸಭೆ, ಯಾಕೋಬನ ಹತ, ಪೇತ್ರನ ರಕ್ಷೆ

೧) ಅಪೊ. ಕ್ರಿ. ೧೧, ೧೯ ಇತ್ಯಾದಿ. ಸ್ತೆಫಾನನನ್ನು ಕಲ್ಲೆಸದು ಆರಂಭವಾ ದ ಹಿಂಸೆಯು ವಾಕ್ಯದ ಬೀಜಗಳನ್ನು ಪ್ಪೊನಿಕ್ಯ, ಕುಪ್ರ, ಅಂತ್ಯೋಕ್ಯ ಪರ್ಯಂತರ ತಕ್ಕೊಂಡು ಹೋಯಿತು. ಆದರೆ ಓಡಿ ಹೋದವರು ವಾಕ್ಯವನ್ನು ಯೆಹೂದ್ಯರಿಗೆ ಹೊರ್ತು ಮತ್ಯಾರಿಗೂ ಹೇಳಲಿಲ್ಲ. ಕೆಲವು ಹೆಲ್ಲೇನಿಸ್ತರು ಮಾತ್ರವೇ ಅಂತ್ಯೋ ಕ್ಯದ ಹ್ಲೇಂಥರಿಗೆ ಸಹಾ ಪ್ರಸಂಗಿಸಲಿಕ್ಕೆ ಆರಂಭಿಸಿದರು. ಕರ್ತನ ಕೈ ಅವರ ಸಂ ಗಡಲಿತ್ತು. ಆದದರಿಂದ ಬಹು ಮಂದಿ ವಿಶ್ವಾಸಿಸಿದರು. ಯೆರೂಸಲೇಮಿನ ಮಾ ತೃಸಭೆಯು ಇದನ್ನು ಕೇಳಿದಾಗ, ಆತ್ಮವಿಶ್ವಾಸಗಳಿಂದ ತುಂಬಿದವನಾದ ಬರ್ನಬನ

ನ್ನು ಅವರ ಬಳಿಗೆ ಕಳುಹಿಸಿತು. ಇವನು ಬಂದು, ಹೊಸ ಸಭೆಯು ಮಹಿಮೆಯಾಗಿಯೂ ಕೃಪೆಯಾಗಿಯೂ ಬೆಳೆಯುವದನ್ನು ನೋಡಿ, ಸಂತೋಷ ಪಟ್ಟು ಹೃದಯದ ನಿರ್ಣಯದಿಂದ ಕರ್ತನಲ್ಲಿ ನೆಲೆಯಾಗಿರ ಬೇಕೆಂದು ಅವರೆಲ್ಲರನ್ನು ಬೇಡಿ ಕೊಂಡ ತರುವಾಯ ಪೌಲನನ್ನು ಈ ದೊಡ್ಡ ಕೆಲಸಕ್ಕಾಗಿ ಹುಡುಕುವದಕ್ಕೆ ತಾರ್ಸಕ್ಕೆ ಹೊರಟು ಹೋಗಿ, ಅವನನ್ನು ಕರಕೊಂಡು ಬಂದು ಅವನ ಸಂಗಡ ಪೂರ್ಣ ವರ್ಷ ಅಂತ್ಯೋಕ್ಯದಲ್ಲಿ ಉಳಕೊಂಡನು. ಆ ದಿನಗಳಲ್ಲಿ ಪ್ರವಾದಿಗಳು ಯೆರೂಸಲೇಮಿನಿಂದ ಅಂತ್ಯೋಕ್ಯಕ್ಕೆ ಇಳಿದು ಬಂದರು. ಅವರಲ್ಲಿ ಅಗಬನೆಂಬ ಒಬ್ಬನು ಎದ್ದು ಸ್ವಲ್ಪ ಕಾಲದಲ್ಲಿಯೇ ದೊಡ್ಡ ಬರವು ಉಂಟಾಗುವದೆಂದು ಸೂಚಿಸಿದನು. ಅದು ಕೈಸರನಾದ ಕ್ಲೌದ್ಯನ ಕಾಲದಲ್ಲಿ ಉಂಟಾಯಿತು. ಹೀಗಾಗಿ ಯೆರೂಸಲೇಮಿನ ಬಡ ಮಾತೃಸಭೆಗೋಸ್ಕರ ಹಣ ಕೂಡಿಸಿದರು. ಇದನ್ನು ಪೌಲನೂ ಬರ್ನಬನೂ ತಂದು ಕೊಟ್ಟರು (ಅಪೊ. ಕ್ರಿ. ೧೨, ೨೫).

ಪರಿಶಿಷ್ಟ. ಅಂತ್ಯೋಕ್ಯವು ಈ ಸಮಯದಿಂದ ಕ್ರೈಸ್ತತ್ವವು ವಿಕಸಿತವಾಗುವ ಚರಿತ್ರದಲ್ಲಿ ಪ್ರಾಮುಖ್ಯ ಸ್ಥಾನವುಳ್ಳದ್ದಾಯಿತು. ಹ್ಯಾಗೆ ಯೆರೂಸಲೇಮು ಯೆಹೂದ್ಯರಲ್ಲಿ ಸುವಾರ್ತೆಯನ್ನು ವಿಸ್ತರಿಸುವದಕ್ಕೆ ಮಧ್ಯಸ್ಥಳವಾಯಿತೋ? ಹಾಗೆಯೇ, ಅಂತ್ಯೋಕ್ಯವು ಮ್ಲೇಂಛರಲ್ಲಿ ಅದನ್ನು ವಿಸ್ತರಿಸುವದಕ್ಕೆ ಮಧ್ಯಸ್ಥಳವೂ ಮೂಲಸ್ಥಳವೂ ಆಯಿತು. ಇಲ್ಲಿ ಅಂದರೆ ಅಂತ್ಯೋಕ್ಯದಲ್ಲಿ ಸರಳವಾದ ಆತ್ಮದ ತರವು ವಿಕಸಿಸಿತು. ಇದು ಮತ್ತೆ ಪೌಲನ ಯತ್ನದಿಂದ ಸಂಪೂರ್ಣ ಜಯವನ್ನು ಹೊಂದಿತು. ಇಲ್ಲಿಯೇ ಮ್ಲೇಂಛರ ವಿದ್ಯವು ಕ್ರೈಸ್ತತ್ವದಲ್ಲಿ ಅಂಗೀಕರಿಸಲ್ಪಟ್ಟಿತು. ಮತ್ತು ಕ್ರೈಸ್ತತ್ವವು ಈ ಕಾಲದ ಇಕ್ಕಟ್ಟಿನ ಯೆಹೂದ್ಯತನದ ಸಂಕೋಲೆಗಳಿಗೆ ಪೂರ್ಣ ಬಿಡುಗಡೆಯಾಗಲಿಕ್ಕೆ ಆರಂಭವಾಯಿತು. ಅಂತ್ಯೋಕ್ಯದಲ್ಲಿಯೇ "ಕ್ರೈಸ್ತರು" ಎಂಬ ಹೆಸರು ಮೊದಲಾಗಿ ವಾಡಿಕೆಯಾಯಿತು. ಇದರಿಂದ ಇವರು ಯೆಹೂದ್ಯರಲ್ಲದೆ ಪೂರ್ಣವಾಗಿ ಪ್ರತ್ಯೇಕವಾಗಿದ್ದಾರೆಂಬದು ಸ್ಥಾಪಿಸಲ್ಪಟ್ಟಿತು.

೨) ಅಪೊ. ಕ್ರಿ. ೧೨, ೧ ಇತ್ಯಾದಿ. ಎಂಟು ವರ್ಷ ಪರ್ಯಂತರ ಸಮಾಧಾನವಿದ್ದ ಮೇಲೆ ೪೪ನೇ ಇಸವಿಯಲ್ಲಿ ರಕ್ತಪ್ರವಾಹದ ಹೊಸ ಕ್ರೈಸ್ತ ಹಿಂಸೆಯು ಆರಂಭವಾಯಿತು. ಮೊದಲನೇ ಅಗ್ರಿಪ್ಪನಾದ ಹೆರೋದನು (ಸಮ ನೋಡು § ೧೦೯, ೨) ಇದರಿಂದ ಜನರ ದಯೆಯನ್ನು ದುಡಿಯ ಬಹುದೆಂದು ಅದಕ್ಕೆ ಕಾರಣವಾದನು. ಯೆರೂಸಲೇಮಿನ ಸಭೆಯವರಲ್ಲಿ ಕೆಲವರು ಹಿಂಸೆ ಪಟ್ಟರು. ಮತ್ತು ಯೋಹಾನನ ಸಹೋದರನಾದ ಹಿರೆ ಯಾಕೋಬನು ಮಾರೆಕಾರರ ಕೈಯಿಂದ

ಬಿದ್ದನು. ಪೇತ್ರನನ್ನು ಸಹಾ ಹಿಡಿದರು. ಮತ್ತು ಪಸ್ಕಹಬ್ಬವಾದ ಕೂಡಲೇ ಅವನನ್ನು ಕೊಲ್ಲಲಿಕ್ಕೆ ಇದ್ದರು. ಆದರೆ ನಿಶ್ಚಯಿಸಿದ ದಿವಸದ ಮೊದಲನೇ ರಾತ್ರಿಯಲ್ಲಿ ಕರ್ತನು ಅವನಿಗೆ ಕಾಣಿಸಿ ಕೊಂಡನು. ಪ್ರಕಾಶವು ಸೆರೆಮನೆಯನ್ನು ತುಂಬಿಸಿತು. ಮತ್ತು ಅವನ ಸಂಕೋಲೆಗಳು ಕೈಗಳಿಂದ ಕಳಚಿ ಬಿದ್ದವು. ದೂತನು ಅವನನ್ನು ೨ ಪಹರೆಗಳನ್ನು ದಾಟಿಸಿ ಪಟ್ಟಕ್ಕೆ ಹೋಗುವ ಕಬ್ಬಿಣದ ಬಾಗಲಿಗೆ ಬಂದಾಗ, ಅದು ತಾನಾಗಿ ತೆರಿಯಲ್ಪಟ್ಟಿತು! ಒಂದು ಬೀದಿಯನ್ನು ದಾಟಿದ ಮೇಲೆ ದೂತನು ಹೋದ ತರುವಾಯ ಪೇತ್ರನು ತನಗಾದದ್ದೆಲ್ಲಾ ದರ್ಶನವಲ್ಲ, ನಿಜವಾಗಿರುತ್ತದೆಂದು ತಿಳುಕೊಂಡನು. ಅವನು ಯೋಹಾನನೆಂಬ ಮಾರ್ಕನ ತಾಯಿಯಾದ ಮರೀಯಳ ಮನೆಗೆ ಬೇಗ ಹೋದನು. ಅಲ್ಲಿ ಅನೇಕ ಕ್ರೈಸ್ತರು ಪ್ರಾರ್ಥನೆಗಾಗಿ ಕೂಡಿ ಬಂದಿದ್ದರು. ಅವರಿಗೆ ಅವನು ತನಗಾದ ಆಶ್ಚರ್ಯದ ಬಿಡುಗಡೆಯನ್ನು ತಿಳಿಸಿ, ಯೆರೂಸಲೇಮಿನಿಂದ ಮತ್ತೆ ಓಡಿ ಹೋದನು. ಸ್ವಲ್ಪ ಕಾಲದ ಮೇಲೆ ಅರಸನು ಸತ್ತು ಹೋಗಲಾಗಿ ಸಭೆಗೆ ತಿರಿಗಿ ಪೂರ್ಣ ಸಮಾಧಾನ ಉಂಟಾಯಿತು.



## § 164. ಬರ್ನಬನ ಸಹಿತವಾಗಿ ಪೌಲನು ಮಾಡಿದ ಮೊದಲನೇ ಪ್ರಸಂಗಪ್ರಯಾಣ

೧) ಅಪೊ. ಕ್ರಿ. ೧೩, ೧ ಇತ್ಯಾದಿ. ಪೌಲನೂ ಬರ್ನಬನೂ ೧ ವರ್ಷ ಪರ್ಯಂತರ ಅಂತ್ಯೋಕ್ಯದ ಸಭೆಯಲ್ಲಿ ಕೆಲಸ ಮಾಡಿದ ತರುವಾಯ ಪರಿಶುದ್ಧಾತ್ಮದ ಅಪ್ಪಣೆಯ ಪ್ರಕಾರ ಅವರು ಪ್ರಾರ್ಥನೆಯಿಂದಲೂ ಹಸ್ತಮಸ್ತಕದಿಂದಲೂ ಪ್ರತ್ಯೇಕಿಸಲ್ಪಟ್ಟು ದೊಡ್ಡದಾದ ಪ್ರಸಂಗಪ್ರಯಾಣಕ್ಕೆ ಹೊರಟರು (೪೫ನೇ ವರ್ಷದಲ್ಲಿ). ಬರ್ನಬನು ಅಳಿಯನಾದ ಯೋಹಾನ ಮಾರ್ಕನೆಂಬವನನ್ನು ಸಹಾ ಸಂಗಡ ತಕ್ಕೊಂಡನು. ಅವರು ಮೊದಲಾಗಿ ಬರ್ನಬನ ಜನ್ಮದೇಶವಾದ ಕುಪ್ರಕ್ಕೆ ಹಡಗದಲ್ಲಿ ಹೋದರು. ಈ ದ್ವೀಪದ ಮುಖ್ಯ ಪಟ್ಟವಾಗಿರುವ ಪಾಫಾಸಿನಲ್ಲಿ ಪ್ರತಿಧಾರೆಯಾಗಿದ್ದ ಸೆರ್ಗಿಯ ಪೌಲನೆಂಬವನು ಸಹಾ ಹೊಸತಾದ ದಿವ್ಯ ಬೋಧನೆ ಎಂದು ಹೇಳಿಸಿ ಕೊಂಡದ್ದನ್ನೆಲ್ಲಾ ಬಹು ಆತುರತ್ವದಿಂದ ಹೊಂದಲಿಕ್ಕೆ ಅಪೇಕ್ಷಿತರಾದ ಹೆಚ್ಚು ಆಲೋಚನೆ ಮಾಡುವ ಮ್ಲೇಂಛರಲ್ಲಿ ಒಬ್ಬನಾಗಿ (§ ೧೧೪, ೧) ದೇವರ ವಾಕ್ಯವನ್ನು ಕೇಳಲಿಚ್ಛೈಸಿದನು. ಆದರೆ ಮಂತ್ರಗಾರನೆಂಬ ಅರ್ಥವುಳ್ಳ ಹೆಸರುಂಟಾದ ಎ

ಲುಮನೆಂದು ಸಹಾ ಕರಿಯಲ್ಪಟ್ಟ ಬರ್ಯೇಸು ಎಂಬ ಯೆಹೂದ್ಯನೊಬ್ಬನು (ಎಲುಮನಂದರೆ ಅರಬಿ ಭಾಷೆಯಲ್ಲಿ ಜ್ಞಾನಿ) ಪ್ರತಿಧೊರೆಯನ್ನು ವಿಶ್ವಾಸದಿಂದ ತಿರುಗಿಸ ಹುಡುಕಿದನು. ಆದರೆ ಪೌಲನು ಬಲವುಳ್ಳ ಶಿಕ್ಷೆಯ ಮಾತುಗಳಿಂದ ಅವನಿಗೆ ಮಾತಾಡಿದಾಗ ಜ್ಞಾನಿಯು ಕುರುಡನಾಗಲಾಗಿ ಪ್ರತಿಧೊರೆಯು ಈ ಲಕ್ಷಣದಲ್ಲಿ ಅಪೊಸ್ತಲರ ಬೋಧನೆಗೆ ಸಾಕ್ಷಿ ಉಂಟೆಂದು ತಿಳುಕೊಂಡು ಕರ್ತನಲ್ಲಿ ವಿಶ್ವಾಸಿಸಿದನು.

ಕುಪ್ರದಿಂದ ಸಣ್ಣ ಆಸ್ಯಕ್ಕೆ ದಾಟಿ ಹೋದರು. ಫಂಫಿಲ್ಯದ ಪೆರ್ಗೆ ಎಂಬಲ್ಲಿ ಮಾರ್ಕನು ಅವರನ್ನು ಬಿಟ್ಟು ಯೆರೂಸಲೇಮಿಗೆ ತಿರಿಗಿ ಹೋದನು.

೨) ಅಪೊ. ಕ್ರಿ. ೧೩, ೧೪ ಇತ್ಯಾದಿ. ಅಲ್ಲಿಂದ ಅವರು ಪಿಸಿದ್ಯದ ಅಂತ್ಯೋಕ್ಯಕ್ಕೆ ಹೋಗಿ ಸಬ್ಬತ್ ದಿವಸದಲ್ಲಿ ಸಭೆಮನೆಯಲ್ಲಿ ಪ್ರವೇಶಿಸಿದರು. ಸಭೆಯ ಯಜಮಾನರು ಜನರಿಗೆ ಹೇಳುವದಕ್ಕೆ ಬುದ್ಧಿಮಾತು ಏನಾದರೂ ಇದ್ದರೆ ಹೇಳ ಬೇಕೆಂದು ಅವರಿಗೆ ಕೇಳಲಾಗಿ, ಪೌಲನು ಮುಂದೆ ಬಂದು ಪ್ರಸಂಗ ಮಾಡಿದನು. ಇದರಲ್ಲಿ ಅವನು ಇಸ್ರಯೇಲ್ಯರನ್ನು ದೇವರು ಆಯಿದು ಕೊಂಡದ್ದನ್ನು ಆರಂಭಿಸಿ ಕಡೆಯಲ್ಲಿ ಯೆಹೂದ್ಯರಿಂದ ಯೆರೂಸಲೇಮಿನಲ್ಲಿ ಕೊಲ್ಲಲ್ಪಟ್ಟಂಥಾ ಆದರೆ ದೇವರಿಂದ ಎಬ್ಬಿಸಲ್ಪಟ್ಟಂಥಾ ದಾವಿದಪುತ್ರನಾದ ಯೇಸು ಕ್ರಿಸ್ತನಲ್ಲಿ ಲೋಕಕ್ಕೆ ವಾಗ್ದತ್ತವಾದ ರಕ್ಷಣ್ಯವು ಪ್ರತ್ಯಕ್ಷವಾಗಿದೆ ಎಂಬದನ್ನು ತೋರಿಸಿದನು. ಈ ಪ್ರಸಂಗವು ಜನರ ಮನಸ್ಸಿಗೆ ಒಳ್ಳೇದೆಂದು ಕಂಡಿತು. ಪೌಲನು ಬರುವ ಸಬ್ಬತ್ ದಿವಸದಲ್ಲಿ ಈ ಬೋಧನೆಯನ್ನು ಇನ್ನೂ ವಿಸ್ತಾರವಾಗಿ ಬಿಡಿಸಿ ಹೇಳ ಬೇಕೆಂದು ಸಭೆ ಎಲ್ಲಾದರ ಹೆಸರಿನಲ್ಲಿ ಅವನಿಗೆ ಬೇಡಿ ಕೊಂಡರು. ಆದರೆ ಕೇಳಿದ ಮ್ಲೇಂಛರು ಪ್ರಸಂಗದ ಬಲವನ್ನು ಹೆಚ್ಚಾಗಿ ಅನುಭವಿಸಿದ್ದರು. ವಾರದ ಉಳಿದ ದಿವಸಗಳಲ್ಲಿ ಅಪೊಸ್ತಲರು ಹೆಚ್ಚು ಬೋಧಿಸಲಿಕ್ಕೆ ಸಾಕಷ್ಟು ಉಪಾಯ ಕಂಡರು. ಮತ್ತು ಬರುವ ಸಬ್ಬತ್ ದಿವಸದಲ್ಲಿ ಸ್ವಲ್ಪ ಕಡಿಮೆ ಎಲ್ಲಾ ಪಟ್ಟಣದವರು ದೇವರ ವಾಕ್ಯವನ್ನು ಕೇಳಲಿಕ್ಕಾಗಿ ಬಂದರು. ಇದು ಯೆಹೂದ್ಯರಲ್ಲಿ ಹೊಟ್ಟೆಕಿಚ್ಚು ಹುಟ್ಟಿಸಿತು. ಕೋಪವಾದ ಪ್ರತಿವಾದಗಳಿಂದಲೂ ನಿಂದೆಗಳಿಂದಲೂ ಅವರು ಪೌಲನ ಪ್ರಸಂಗಕ್ಕೆ ಅಡ್ಡಿ ಮಾಡಿದರು. ಆಗ್ಯೆ ಅಪೊಸ್ತಲರು ಪ್ರಕಟವಾಗಿಯೂ ಖಂಡಿತವಾಗಿಯೂ ಚುರುಕಾದ ಒಂದು ವಾಕ್ಯವನ್ನು ಹೇಳಿದರು ಅದೇನಂದರೆ: "ನಿಮಗೆ ಮೊದಲು ದೇವರ ವಾಕ್ಯವನ್ನು ಹೇಳ ಬೇಕಾಯಿತು. ಆದರೆ ನೀವು ಅದನ್ನು ತಳ್ಳಿ ನಿಮ್ಮನ್ನು ನಿತ್ಯ ಜೀವಕ್ಕೆ ಅಪಾತ್ರರೆಂದು ಎಣಿಸುವದರಿಂದ ಇಗೋ! ಜನಾಂಗಗಳ ಕಡೆಗೆ ತಿರುಗುತ್ತೇವೆ." ಮ್ಲೇಂಛರು ಇದನ್ನು ಕೇಳಿದಾಗ ಸಂತೋಷ ಪಟ್ಟರು. ಮತ್ತು ಕರ್ತನ ವಾಕ್ಯವು ದೇಶವೆಲ್ಲಾದ

ರಲ್ಲಿ ವಿಸ್ತರಿಸಲ್ಪಟ್ಟಿತು. ಆದರೆ ಯೆಹೂದ್ಯರು ಗುಬಾರು ಎಬ್ಬಿಸಿ, ಅಪೊಸ್ತಲರನ್ನು ತಮ್ಮ ಪ್ರಾಂತ್ಯಗಳಿಂದ ಹೊರಡಿಸಿದರು.

೩) ಅಪೊ. ಕ್ರಿ. ೧೪, ೧ ಇತ್ಯಾದಿ. ಇವರು (ಲಿಕಾವೋನ್ಯದ) ಇಕೋನ್ಯದ ಕಡೆಗೆ ತಿರಿಗಿ ಕೊಂಡು ಅಲ್ಲಿ ಸಹಾ ಸಭೆಮನೆಯಲ್ಲಿ ಪ್ರಸಂಗಿಸಿದರು. ಯೆಹೂದ್ಯರಿಂದಲೂ ಗ್ರೇಕರಿಂದಲೂ ಅನೇಕರು ವಿಶ್ವಾಸಿಗಳಾದರು. ಮತ್ತು ಕರ್ತನು ತನ್ನ ಕೃಪೆಯ ವಾಕ್ಯಕ್ಕೆ ಲಕ್ಷಣಗಳಿಂದಲೂ ಅದ್ಭುತಗಳಿಂದಲೂ ಸಾಕ್ಷಿ ಕೊಟ್ಟನು. ಆದರೆ ಅವಿಶ್ವಾಸಿಗಳಾದ ಯೆಹೂದ್ಯರು ಇಲ್ಲಿ ಸಹಾ ಗುಬಾರು ಎಬ್ಬಿಸಿ ಅಪೊಸ್ತಲರನ್ನು ಕಲ್ಲೆಸೆಯ ಬೇಕೆಂದು ಇದ್ದರು. ಆದದರಿಂದ ಇವರು ಪಟ್ಟಣವನ್ನು ಬಿಟ್ಟು ಲುಸ್ತ್ರಕ್ಕೆ ಮುಂದೆ ನಡದರು. ಇಲ್ಲಿ ಪೌಲನು ಹುಟ್ಟಿದಂದಿನಿಂದ ಕುಂಟನಾಗಿದ್ದ ಮನುಷ್ಯನನ್ನು ವಾಸಿ ಮಾಡಿದಾಗ ಜನರು ಬಹಳ ವಿಸ್ಮಯ ಪಟ್ಟು ಅವರು ದೇವರುಗಳು (ಬ್ರಹಸ್ಪತಿ ಮತ್ತು ಬುಧ) ಎಂದು ಹೇಳಿ ಕೊಂಡರು. ಕೂಡಲೇ ಜನರ ಸಂಗಡ ಬ್ರಹಸ್ಪತಿಯ ಯಾಜಕನು ಎತ್ತುಗಳನ್ನೂ ಹೂಮಾಲೆಗಳನ್ನೂ ತಂದು ಅವರಿಗೆ ಅರ್ಪಿಸ ಬೇಕೆಂದಿದ್ದನು. ಆಗ್ಯೆ ಅಪೊಸ್ತಲರು ಸಮೂಹದ ಮಧ್ಯದಲ್ಲಿ ಓಡಿ ಅವರಿಗೆ ಅಡ್ಡಿ ಮಾಡಿ ಏನೂ ಅಲ್ಲದ ವಿಗ್ರಹಗಳನ್ನು ಬಿಟ್ಟು ಪರಲೋಕ ಭೂಲೋಕಗಳನ್ನು ಮಾಡಿದಂಥಾ ದೇವರ ಕಡೆಗೆ ತಿರುಗ ಬೇಕೆಂದು "ಹೋದ ತಲಾಂತರಗಳಲ್ಲಿ ಜನಾಂಗಗಳನ್ನೆಲ್ಲಾ ತಮ್ಮ ತಮ್ಮ ಮಾರ್ಗಗಳಲ್ಲಿ ನಡಿಯಗೊಡಿಸಿದರೂ ಆಕಾಶದೊಳಗಿಂದ ಮಳೆಗಳನ್ನೂ ಫಲಫಲಿಸುವ ಕಾಲಗಳನ್ನೂ ಕೊಟ್ಟು ತನಗೆ ತಾನೇ ಸಾಕ್ಷಿಯನ್ನು ಕೊಡದೆ ಇರದಂಥಾ" ದೇವರ ಕಡೆಗೆ ತಿರುಗ ಬೇಕೆಂದು ಹೇಳಿದರು. ಸ್ವಲ್ಪ ಕಾಲದ ಮೇಲೆ ಅಂತ್ಯೋಕ್ಯದಿಂದಲೂ ಇಕೋನ್ಯದಿಂದಲೂ ಯೆಹೂದ್ಯರು ಬಂದು ಸಮೂಹಗಳನ್ನೂ ಸಮ್ಮತಿ ಪಡಿಸಿ ಪೌಲನನ್ನು ಕಲ್ಲೆಸದು ಅವನು ಸತ್ತನೆಂದು ನೆನಸಿ ಪಟ್ಟಣದ ಹೊರಗೆ ಹಾಕಿದರು. ಆದರೆ ಶಿಷ್ಯರು ಅವನನ್ನು ಸುತ್ತಿ ಕೊಂಡಿದ್ದಾಗ ಅವನೆದ್ದು ಪಟ್ಟಣದಲ್ಲಿ ಪ್ರವೇಶಿಸಿದನು. ಮಾರನೇ ದಿವಸ ಬರ್ನಬನ ಸಂಗಡ ದೆರ್ಬೆಗೆ ಹೋಗಿ ಇಲ್ಲಿ ಸಹಾ ಒಂದು ಸಭೆಯನ್ನು ಸ್ಥಾಪಿಸಿದರು. ಮತ್ತೆ ಲುಸ್ತ್ರಕ್ಕೂ ಇಕೋನ್ಯಕ್ಕೂ ಅಂತ್ಯೋಕ್ಯಕ್ಕೂ ತಿರಿಗಿ ಬಂದು ಶಿಷ್ಯರ ಆತ್ಮಗಳನ್ನು ವಿಶ್ವಾಸದಲ್ಲಿ ಸ್ಥಿರ ಪಡಿಸಿ, ಸಭೆಸಭೆಯಲ್ಲಿ ಹಿರಿಯರನ್ನು ನೇಮಿಸಿದರು. ತರುವಾಯ ಪಿಸಿದ್ಯವನ್ನೂ ಪಂಫುಲ್ಯವನ್ನೂ ದಾಟಿ ಹೋಗಿ (ಸುರ್ಯದ) ಅಂತ್ಯೋಕ್ಯಕ್ಕೆ ಹಡಗಮಾರ್ಗವಾಗಿ ಹೋದರು. ಇಲ್ಲಿಗೆ ಶುಮಾರು ೪೮ನೇ ವರ್ಷದಲ್ಲಿ ಮುಟ್ಟಿರುವರು.



## § 165. ಯೆರೂಸಲೇಮಿನ ಅಪೊಸ್ತಲಮಂಡಲಿಯು

ಅಪೊ. ಕ್ರಿ. ೧೫, ೧ ಇತ್ಯಾದಿ. (ಸಮ ನೋಡು ಗಲಾ. ೨, ೧—೧೦). ಇಬ್ಬರು ಅಪೊಸ್ತಲರು ಶಿರಿಗಿ ಎಥೇಷ್ಟ ಸಮಯ ಅಂತ್ಯಾಕ್ಯದಲ್ಲಿ ಕೆಲಸ ಮಾಡುತ್ತಾ ಇದ್ದರು. ಅಷ್ಟರೊಳಗೆ ಯೆರೂಸಲೇಮಿನಿಂದ ಯೆಹೂದ್ಯ ಕ್ರೈಸ್ತರೊಳಗಿಂದ ಫರಿಸಾಯ ವಾತ್ಸಲ್ಯಗಾರರು ಬಂದು, ಮ್ಲೇಂಛ ಕ್ರೈಸ್ತರಿಗೆ ರಕ್ಷಣ್ಯವು ಇಲ್ಲವೆಂದು ಹೇಳಿದರು. ಪೌಲನೂ ಬರ್ನಬನೂ ಅವರ ಸಂಗಡ ಬಹಳ ವಾಚ್ಛಾಟ ಮಾಡ ಬೇಕಾಯಿತು. ಮತ್ತು ಸಭೆಯು ಯೆರೂಸಲೇಮಿಗೆ ಅಲ್ಲಿರುವ ಅಪೊಸ್ತಲರ ಮತ್ತು ಹಿರಿಯರ ಸಂಗಡ ಸಂಭಾಷಣೆಯಲ್ಲಿ ಈ ಕರ್ಕರೆಯ ತರ್ಕವನ್ನು ತೀರಿಸುವದಕ್ಕೋಸ್ಕರ ತಮ್ಮಲ್ಲಿ ಅತಿ ಮಾನ ಹೊಂದಿದ ಬೋಧಕರನ್ನು ನಿಶ್ಚೈಸಿದರು. ಪೌಲನೂ ಬರ್ನಬನೂ ಈ ಕೆಲಸಕ್ಕೆ ಒಪ್ಪಿ ಕೊಂಡು ಹೋದರು (ಸುಮಾರು ೫೦ನೇ ವರ್ಷದಲ್ಲಿ ಸಮ ನೋಡು ಗಲಾ. ೨, ೧). ಫರಿಸಾಯರೊಳಗಿನ ವಿಶ್ವಾಸಿಗಳು ಇಲ್ಲಿ ಬಹಳವಾಗಿ ಎದುರಾಡಿದರು. ಆಗ್ಯೆ ಪೇತ್ರನು ಖಂಡಿತವಾಗಿಯೂ ಬಲವಾಗಿಯೂ ಮಾತಾಡಿ ದೇವರು ತಾನೇ ಈ ಸಂಗತಿಯನ್ನು ಮೊದಲೇ ನಿರ್ಣಯಿಸಿದ್ದಾನೆಂಬದನ್ನು ನೆನಪು ಮಾಡಿದನು. ಇವನಿಗೆ ನೇಮವನ್ನು ಚನ್ನಾಗಿ ಕೈಕೊಳ್ಳುವವನಾಗಿ ಬಹಳ ಮಾನ ಹೊಂದಿದ ಕಿರಿ ಯಾಕೋಬನು ಸಹಾ ಪೂರ್ಣವಾಗಿ ಒಪ್ಪಿ ಕೊಂಡನು. ಆದರೂ ಪರಸ್ಪರ ಪ್ರತಿಕೂಲತೆಯನ್ನು ಕಡಿಮೆ ಮಾಡುವದಕ್ಕೋಸ್ಕರ ವಿಶ್ವಾಸಿಸಿದ ಮ್ಲೇಂಛರು ನೋಹನ ಕಟ್ಟಳೆಗಳನ್ನೂ ಕೈಕೊಳ್ಳ ಅಪ್ಪಣೆ ಕೊಡ ಬೇಕೆಂದು ನೆನಸಿದರು. (ಮುಖ್ಯವಾಗಿ ವಿಗ್ರಹಬಲಿಗಳಿಂದಲೂ ರಕ್ತದಿಂದಲೂ ಕೊರಳು ಹಿಸಕಲ್ಪಟ್ಟದರಿಂದಲೂ ಜಾರತ್ವದಿಂದಲೂ ತೊಲಗ ಬೇಕೆಂದು) ಇವನ ಆಲೋಚನೆಗೆ ಎಲ್ಲರೂ ಸಮ್ಮತಿಸಿದರು. ಅಪೊಸ್ತಲರು ಅಂತ್ಯಾಕ್ಯ ಸಭೆಗೆ ಈ ತೀರ್ಪನ್ನು ಕಾಗದದ ಮೂಲವಾಗಿ ತಿಳಿಸಿದರು. ಈ ಕಾಗದವನ್ನು ಪೌಲನೂ ಬರ್ನಬನೂ ಯೆರೂಸಲೇಮಿನ ಸಭೆಯಿಂದ ಪ್ರತ್ಯೇಕವಾಗಿ ಕಳುಹಿಸಲ್ಪಟ್ಟ ಯೂದ ಬರ್ಸಬನೂ ಸೀಲನೂ ಅಲ್ಲಿಗೆ ತಂದರು. ಹೀಗಾಗಿ ಏಕತ್ವವು ಶಿರಿಗಿ ಉಂಟಾಯಿತು. ಸೀಲನು ಅಂತ್ಯಾಕ್ಯರನ್ನು ಪ್ರೀತಿ ಮಾಡಿ ಅಲ್ಲಿಯೇ ಉಳುಕೊಂಡನು.



## § 166. ಅಪೊಸ್ತಲನಾದ ಪೌಲನ ಎರಡನೇ ಪ್ರಸಂಗಪ್ರಯಾಣವು ಫಿಲಿಪ್ಪಿಯಲ್ಲಿ ಆದದ್ದು

೧) ಅಪೊ. ಕ್ರಿ. ೧೫, ೩೬ ಇತ್ಯಾದಿ. ಸ್ವಲ್ಪ ಕಾಲದ ಮೇಲೆ (೫೦ನೇ ವರ್ಷದಲ್ಲಿ) ಪೌಲನು ಬರ್ನಬನನ್ನು ೨ನೇ ಸಾರಿ ಒಟ್ಟಿಗೆ ಪ್ರಸಂಗಪ್ರಯಾಣಕ್ಕೆ ಕರದನು. ಆದರೆ ಮೊದಲನೇ ಪ್ರಯಾಣದಲ್ಲಿ ಬಿಟ್ಟು ಹೋದ ಮಾರ್ಕನನ್ನು ಸಂಗಡ ತಕ್ಕೊಳ್ಳಲಿಕ್ಕೆ ಪೌಲನು ಒಪ್ಪಿ ಕೊಳ್ಳದೆ ಇರಲಾಗಿ ಹೊರಡುವ ಮೊದಲೇ ಅವರಿಬ್ಬರು ಬೇರೆ ಬೇರೆಯಾದರು. ಬರ್ನಬನು ಮಾರ್ಕನನ್ನು ತಕ್ಕೊಂಡು ಕುಪ್ರಕ್ಕೆ ಹೋದನು. ಪೌಲನು ಸೀಲನನ್ನೂ (ಸಿಲ್ವಾನ) (ಅಪೊ. ಕ್ರಿಯೆಗಳನ್ನು ಬರದವನಾದ) ಲೂಕನನ್ನೂ ಕರಕೊಂಡು ಸುರ್ಯವನ್ನು ದಾಟಿ, ಸಣ್ಣ ಆಸ್ಯದ ಪರ್ಯಂತರ ಹೋಗಿ, ಎಲ್ಲಾ ಕಡೆಯಲ್ಲಿಯೂ ಸಭೆಗಳನ್ನು ಸ್ಥಿರ ಪಡಿಸಿದನು. ಲುಸ್ತ್ರದಲ್ಲಿ ತಿಮೊಥೇಯನನ್ನು ಸಹಾ ತಕ್ಕೊಂಡನು. ಇವನು ಬುದ್ಧಿಬಲದಿಂದಲೂ ವಿಶ್ವಾಸದಿಂದಲೂ ವಿಶೇಷವಾದ ಯೌವನಸ್ಥನಾಗಿದ್ದನು. ಮತ್ತು ಬಾಲ್ಯದಲ್ಲಿಯೇ ತಾಯಿಯಾದ ಯೂನೀಕೆಯಿಂದಲೂ ಅಜ್ಜಿಯಾದ ಲೋವಿಯಿಂದಲೂ ವಿಶ್ವಾಸದಲ್ಲಿ ಬೋಧನೆ ಹೊಂದಿದವನಾಗಿದ್ದನು (೨ ತಿಮೊ. ೧, ೫ ಸಂ. ೩, ೧೫). ಪೌಲನು ಸಣ್ಣ ಆಸ್ಯದಲ್ಲಿ ಮಾತ್ರವೇ ಕೆಲಸ ಮಾಡಲಿಕ್ಕೆ ನಿಶ್ಚೈಸಿ ಕೊಂಡಿದ್ದನು. ಆದ್ದರಿಂದ ಅವನು ಫ್ರುಗ್ಯ ಗಲಾತ್ಯ ಬಿಥೂನ್ಯ ಮೂಸ್ಯ ಸೀಮೆಗಳಲ್ಲಿ ಸಂಚಾರ ಮಾಡಿದನು. ಆದರೆ ದೇವರ ಆತ್ಮವು ಅವನಿಗೋಸ್ಕರ ಇನ್ನೊಂದು ದೊಡ್ಡ ಹೊಲವನ್ನು ಆರಿಸಿ ಕೊಂಡಿತ್ತು. ರಾತ್ರಿಯಲ್ಲಿ ಪೌಲನಿಗೆ ದರ್ಶನವು ಕಾಣಿಸಿತು. ಏನಂದರೆ — ಒಬ್ಬ ಮಕೆದೋನ್ಯ ಮನುಷ್ಯನು "ನೀನು ಮಕೆದೋನ್ಯಕ್ಕೆ ಬಂದು ನಮಗೆ ಸಹಾಯ ಮಾಡು" ಎಂದು ಅವನನ್ನು ಬೇಡಿ ಕೊಂಡನು. ಪೌಲನು ಇದರಲ್ಲಿ ಖಂಡಿತವಾದ ಕರ್ತನ ಕರಿಯುವಿಕೆಯನ್ನು ತಿಳುಕೊಂಡು ತ್ರೋಯದಿಂದ ವಿಲಾಯಿತಿಗೆ ಹೋದನು.

೨) ಅಪೊ. ಕ್ರಿ. ೧೬, ೧೨ ಇತ್ಯಾದಿ. ಮಕೆದೋನ್ಯದಲ್ಲಿ ಬಹಳ ಸ್ವತಂತ್ರ ಹೊಂದಿದ ಫಿಲಿಪ್ಪಿಯಲ್ಲಿ ಸಬ್ಬತ್ ದಿವಸ ಅವನು ಯೆಹೂದ್ಯ ಪ್ರಾರ್ಥನಾಗೃಹದಲ್ಲಿ ಅಲ್ಲಿ ಕೂಡಿ ಬಂದ ಕೆಲವು ಹೆಂಗಸರ ಸಂಗಡ ಮಾತಾಡಿದನು. ಇವರಲ್ಲಿ ರಕ್ತಾಂಬರ ಮಾರುವವಳೂ ಲುದ್ಯದ ಥುವತ್ತೈರ ಪಟ್ಟಣದವಳೂ ದೇವರಿಗೆ ಭಯ ಪಡುವ ಮತಶೇರಿದವಳೂ ಆಗಿರುವ ಲೂದ್ಯಳೆಂಬವಳು ಇದ್ದಳು. ಕರ್ತನು ಅವಳ ಹೃದಯವನ್ನು ತೆರದನು; ಅವಳೂ ಅವಳ ಮನೆಯವರೂ ಸ್ನಾನ ಹೊಂದಿದ ಮೇಲೆ, ಅವಳ ಮನೆಯು ಉಂಟಾಗುವ ಸಭೆಗೆ ಮಧ್ಯಸ್ಥಳವಾಯಿತು. ಆದರೆ ಕಣಿ ಹೇ

ಳುವಂಥಾ ಪುಥೋನನ ಆತ್ಮವುಳ್ಳ ಒಬ್ಬ ದಾಸಿಯು ಎಲ್ಲಾ ಕಡೆಯಲ್ಲಿಯೂ ಅ ಪೊಸ್ತಲರ ಹಿಂದೆ ಹೋಗಿ ದೆವ್ವಗಳ ಬಲದಿಂದ ಅವರನ್ನು ಸ್ತುತಿಸುತ್ತಾ ಇರಲು, ಪೌಲನು ಆತ್ಮವನ್ನು ಯೇಸುವಿನ ನಾಮದಲ್ಲಿ ಹೊರಡಿಸಿದನು. ಆದರೆ ಅವಳು ಕಣಿ ಹೇಳುವದರಿಂದ ಲಾಭ ಹೊಂದಿದಂಥಾ ದಾಸಿಯ ಯಜಮಾನರಲ್ಲಿ ಬಹಳ ಹಗೆ ಉಂಟಾಯಿತು. ಅವರು ಜನರಲ್ಲಿ ಅಪೊಸ್ತಲರ ಮೇಲೆ ಕೋಪವೆಬ್ಬಿಸಿ, ಅಧಿಪತಿಗಳಿಂದ ಅವರನ್ನು ಗುಬಾರು ಎಬ್ಬಿಸುವವರೆಂದು ಹೊಡಿಸಿ, ಒಳಗಿನ ಶೆರೆಮ ನೆಯಲ್ಲಿ ಹಾಕಿಸಿದರು. ರಾತ್ರಿಯಲ್ಲಿ ಪೌಲನೂ ಸೀಲನೂ ಪ್ರಾರ್ಥಿಸಿದರು. ಆ ಗ್ಯೆ ಮಹಾ ಭೂಕಂಪ ಉಂಟಾಯಿತು. ಶೆರೆಮನೆಯ ಬಾಗಲುಗಳೆಲ್ಲಾ ತೆರಿಯ ಲ್ಪಟ್ಟವು; ಎಲ್ಲರ ಬಂಧಗಳು ಬಿಚ್ಚಿ ಹೋದವು. ಶೆರೆಯ ಕಾವಲಿಗಾರನು ಶೆರೆಯ ವರು ಓಡಿ ಹೋದರೆಂದು ನೆನಸಿ, ನಿರಾಶೆಯಿಂದ ತನ್ನನ್ನು ಕೊಂದು ಕೊಳ್ಳುವದಕ್ಕಿದ್ದ ನು. ಆದರೆ ಪೌಲನು ಅಡ್ಡಿ ಮಾಡಿದನು. ಆಗ್ಯೆ ಅವನು ನಡುಗುತ್ತಾ ಅಪೊಸ್ತ ಲರ ಕಾಲುಗಳ ಮುಂದೆ ಬಿದ್ದು ಹೇಳಿದ್ದು: "ಐಯ್ಯಗಳೇ ನಾನು ರಕ್ಷಿಸಲ್ಪಡುವ ಹಾಗೆ ಏನು ಮಾಡ ಬೇಕು." ಅವರು — "ಕರ್ತನಾದ ಯೇಸು ಕ್ರಿಸ್ತನಲ್ಲಿ ವಿಶ್ವಾಸ ವಿಡು, ಆಗಲು ನೀನೂ ನಿನ್ನ ಮನೆಯವರೂ ರಕ್ಷಿಸಲ್ಪಡುವಿರಿ" ಎಂದು ಹೇಳಿ, ಅವನಿ ಗೂ ಅವನ ಮನೆಯವರಿಗೂ ದೇವರ ವಾಕ್ಯವನ್ನು ಹೇಳಿ ಎಲ್ಲರಿಗೆ ಸ್ನಾನ ಕೊಟ್ಟ ರು. ಮರು ದಿವಸ ಬೆಳಿಗ್ಯೆ ಪೌಲನು ತಾನು ರೋಮಾಯ ಪಟ್ಟಣವಾಸಿ ಎಂದು ಹೇಳಿದದರಿಂದ ಮಹಾ ಮಾನದಲ್ಲಿ ಬಿಡಲ್ಪಟ್ಟರು.



## § 167. ಮುಂದಿನ ಕಥೆ—ಥೆಸ್ಸಲೋನಿಕ, ಬೆರೋಯ, ಅಥೆನೆ

೧) ಅಪೊ. ಕ್ರಿ. ೧೭, ೧ ಇತ್ಯಾದಿ. ಫಿಲಿಪ್ಪಿಯಿಂದ ಅವರು ಥೆಸ್ಸಲೊನಿಕಕ್ಕೆ ಹೋದರು. ಇಲ್ಲಿ ಪೌಲನು ೩ ಸಬ್ಬತ್ ದಿವಸಗಳಲ್ಲಿ ಸಭೆಮನೆಯಲ್ಲಿ ಪ್ರಸಂಗಿ ಸಿದನು. ಹೀಗಾಗಿ ಮುಖ್ಯವಾಗಿ ಗ್ರೇಕರಿಂದ ಆದ ಸಭೆಯು ಉಂಟಾಯಿತು. ಆದರೆ ಅವಿಶ್ವಾಸಿಗಳಾದ ಯೆಹೂದ್ಯರು ಗುಬಾರು ಎಬ್ಬಿಸಿ, ಅಪೊಸ್ತಲರನ್ನು ಮನೆ ಯಲ್ಲಿ ಶೇರಿಸಿ ಕೊಂಡ ಯಾಸೋನನನ್ನು ಕಷ್ಟ ಪಡಿಸಿ, ಅಪೊಸ್ತಲರನ್ನು ಪಟ್ಣ ಬಿ ಟ್ಟು ಹೋಗುವ ಹಾಗೆ ಬಲಾತ್ಕಾರ ಪಡಿಸಿದರು.

ಬೆರೊಯದಲ್ಲಿ ಸಹಾ ಅವರು ಸಭೆಮನೆಯಲ್ಲಿ ಪ್ರಸಂಗಿಸಿದರು. ಆರಂಭ ದಲ್ಲಿ ಯೆಹೂದ್ಯರು ಅವರಿಗೆ ಎದುರು ನಿಲ್ಲಲಿಲ್ಲ; ಅವರು ಪೂರ್ಣ ಮನಸ್ಸಿನಿಂದ

ವಾಕ್ಯವನ್ನು ಅಂಗೀಕರಿಸಿ, ಇವು ಹೀಗೋ ಎಂದು ದಿನದಿನಕ್ಕೆ ಬರಹಗಳನ್ನು ಶೋಧಿಸಿದರು. ಹೀಗಾಗಿ ಯೆಹೂದ್ಯರಿಂದಲೂ ಗ್ರೀಕರಿಂದಲೂ ಬೇಗ ಒಂದು ಸಭೆಯು ಉಂಟಾಯಿತು. ಆದರೆ ಥೆಸ್ಸಲೋನಿಕದಿಂದ ಯೆಹೂದ್ಯರು ಬಂದು, ಜನರನ್ನು ಕದಲಿಸಿದಾಗ, ಪೌಲನು ಈ ಗಂಡಾಂತರಕ್ಕೆ ಬೇಗ ತಪ್ಪಿಸಿ ಕೊಳ್ಳುವದು ಅವನಿಗೆ ಅವಶ್ಯವಾಯಿತು. ಸೀಲನೂ ತಿಮೊಥೇಯನೂ ಅಲ್ಲಿಯೇ ನಿಂತರು. ಆದರೆ ಅವನನ್ನು ಶಿಷ್ಯರು ಅಥೇನೆಯ ವರೆಗೂ ಸಾಗ ಕಳುಹಿಸಿದರು.

೨) ಅಪೊ. ಕ್ರಿ. ೧೭, ೧೬ ಇತ್ಯಾದಿ. ಮ್ಲೇಂಛರ ಜ್ಞಾನಮತಗಳ ಮುಖ್ಯಸ್ಥಾನವಾದ ಅಥೇನೆಯಲ್ಲಿ ಪೌಲನು ಸಭೆಮನೆಯಲ್ಲಿಯೂ ಸಂತೆಯಲ್ಲಿಯೂ ದಿನದಿನ ಪ್ರಸಂಗಿಸಿದನು. ಇದಕ್ಕೆ ಜನರು ವಿಸ್ಮಯ ಪಟ್ಟು ಪೌಲನು ತನ್ನ ಬೋಧನೆಯನ್ನು ತಿಳಿಸ ಬೇಕೆಂಬದಾಗಿ ಅರೆಯೊಪಾಗಕ್ಕೆ ಅವನನ್ನು ಕರ ಕೊಂಡು ಹೋದರು. ಯಾಕಂದರೆ ಅಥೇನ್ಯರೆಲ್ಲರಿಗೂ ಅಲ್ಲಿ ವಾಸವಾಗಿರುವ ಅನ್ಯ ದೇಶಸ್ಥರಿಗೂ ನೂತನವಾದದ್ದನ್ನು ಏನಾದರೂ ಮಾತಾಡುವದಕ್ಕೂ ಕೇಳುವದಕ್ಕೂ ಹೊರ್ತು ಬೇರೆ ಯಾವದಕ್ಕೂ ಸಾವಕಾಶವಿರಲಿಲ್ಲ. ಪಟ್ಣದಲ್ಲಿ ತಿರುಗಾಡುವಾಗ್ಯೆ ಪೌಲನು "ತಿಳಿಯದ ದೇವರಿಗೆ" ಎಂದು ಮೇಲೆ ಬರದಿರುವ ಪೀಠವನ್ನು ಸಹಾ ಕಂಡನು. ಈ ಸಂಗತಿಯನ್ನು ಹಿಡುಕೊಂಡು ಪೌಲನು ಪ್ರಸಂಗಿಸಿದನು. ಅವರು ಅಲ್ಲಿ ಹುಡುಕಿದ್ದನ್ನು ತಾನು ಈಗ ಸಾರುತ್ತೇನೆ ಎಂದು ಪರಲೋಕ ಭೂಲೋಕಗಳ ಕರ್ತನಾಗಿದ್ದು ಒಂದೇ ರಕ್ತದಿಂದ ಮನುಷ್ಯರ ಎಲ್ಲಾ ಜನಾಂಗಗಳನ್ನು ಉಂಟು ಮಾಡಿ ಮುನ್ನೇಮಿಸಿದ ಕಾಲಗಳನ್ನೂ ಅವರ ನಿವಾಸದ ಮೇರೆಗಳನ್ನೂ ಗೊತ್ತು ಮಾಡಿ ಮ್ಲೇಂಛರು ಸಹಾ ತನ್ನನ್ನು ತಡವಿ ಕಂಡು ಕೊಂಡಾರೇನೋ ಎಂದು ಇದನ್ನು ನೇಮಿಸಿದಂಥಾ ದೇವರನ್ನೇ ಸಾರುತ್ತೇನೆಂದು ಆತನು ಯಾವನೊಬ್ಬನಿಗಾದರೂ ದೂರವಾದವನಲ್ಲವೆಂದೂ ಅವನ ವಂಶದವರಾಗಿದ್ಧೇವೆಂದೂ ಮ್ಲೇಂಛರ ಕವಿಗಳಲ್ಲಿ ಕೆಲವರು ಹೇಳಿದ ಪ್ರಕಾರ ಅವನಲ್ಲಿ ಬದುಕುತ್ತೇವೆ, ಚರಿಸುತ್ತೇವೆ, ಇರುತ್ತೇವೆಂದೂ (ಕ್ಲೆಯಂತೆ ಮತ್ತು ಅರಾತನು) ಸಾರುತ್ತೇನೆಂದೂ, ದೇವರು ಅಜ್ಞಾನದ ಕಾಲಗಳನ್ನು ಲಕ್ಷ ಮಾಡದೆ ಇದ್ದು, ಈಗ ತಾನು ನೇಮಿಸಿದ ಮನುಷ್ಯನಿಂದ ತಾನು ಸತ್ತವರೊಳಗಿಂದ ಎಬ್ಬಿಸಿದ ಯೇಸು ಕ್ರಿಸ್ತನಿಂದ ಲೋಕಕ್ಕೆ ನೀತಿಯಾಗಿ ನ್ಯಾಯ ತೀರಿಸುವದಕ್ಕಿರುವ ದಿವಸವನ್ನು ನಿಷ್ಕರ್ಷೆ ಮಾಡಿ ಇರುವದರಿಂದ ಎಲ್ಲಾ ಕಡೆಯಲ್ಲಿರುವ ಎಲ್ಲಾ ಮನುಷ್ಯರಿಗೆ ಮಾನಸಾಂತ್ರ ಪಡ ಬೇಕೆಂದು ಅಪ್ಪಣೆ ಕೊಡುತ್ತಾನೆಂಬದಾಗಿ ಸಾರುತ್ತೇನೆಂದೂ ಪ್ರಸಂಗಿಸಿದನು. ಅವರು ಸತ್ತವರ ಪುನರುತ್ಥಾನವನ್ನು ಕುರಿತು ಕೇಳಿ ಕೆಲವರು ಹಾಸ್ಯ ಮಾಡಿದರು. ಕೆಲವರು "ಇದರ ವಿಷಯ ತಿರಿಗಿ ನಿನ್ನ ಹತ್ತರ ಕೇಳುತ್ತೇವೆ" ಅಂದ

ರು. ಆದರೆ ಮತ್ತಾಬ್ಬರು ಇವರಲ್ಲಿ ಮುಖ್ಯವಾಗಿ ಅರೆಯೋಪಾಗದವನಾದ ದಿ
ಯೋನಿಸ್ಯನೂ ದಾಮಾರಿ ಎಂಬ ಸ್ತ್ರೀಯೂ ಖಂಡಿತವಾಗಿ ವಿಶ್ವಾಸಿಸಿದರು.



§ 168. ಮುಂದೆ ಕೊರಿಂಥ, ಅಂತ್ಯೋಕ್ಯಕ್ಕೆ, ತಿರಿಗಿ ಬಂದದ್ದು
(ಥೆಸ್ಸಲೋನಿಕ್ಯರಿಗೆ ಬರದ ಪತ್ರಿಕೆಗಳು)

೧) ಅಪೊ. ಕ್ರಿ. ೧೮, ೧ ಇತ್ಯಾದಿ. ಅಥೇನೆಯಿಂದ ಪೌಲನು (ಕ್ರಿಸ್ತ ಶಕದ ೫೨ನೇ ವರ್ಷದಲ್ಲಿ) ಕೊರಿಂಥಕ್ಕೆ ಹೋದನು. ಇದು ಸಂಪತ್ತು ಉಳ್ಳ ಬೆಳೆಯುವ ವ್ಯಾಪಾರಪಟ್ಟವೂ, ವಿದ್ಯೆಗಳಿಗೂ ಆತಂಕವಿಲ್ಲದ ದುಷ್ಕರ್ಮಗಳಿಗೂ ಸ್ಥಳವಾಗಿಯೂ ಇತ್ತು. ಇಲ್ಲಿ ಸ್ವಲ್ಪ ಕಾಲದ ಹಿಂದೆ ಕೈಸರನಾದ ಕ್ಲೌದ್ಯನು ರೋಮಪಟ್ಟಣದಿಂದ ಯೆಹೂದ್ಯರೆಲ್ಲರ ಸಂಗಡ ಓಡಿಸಿದ ಪಾಂತ್ಯಯೆಹೂದ್ಯರಾದ ಗುಡಾರಕೆಲಸ ಮಾಡುವ ಅಕ್ವಿಲಾ ಮತ್ತು ಅವನ ಹೆಂಡತಿ ಪ್ರಿಸ್ಕಿಲ್ಲಾ ಎಂಬವರು ಪೌಲನನ್ನು ಸ್ನೇಹವಾಗಿ ಮನೆಯಲ್ಲಿ ಸೇರಿಸಿ ಕೊಂಡರು. ಸೀಲನೂ ತಿಮೊಥೇಯನೂ ಅಲ್ಲಿ ಅವನಿಗೆ ತಿರಿಗಿ ಕೂಡಿ ಕೊಂಡರು. ಸಭೆಮನೆಯಲ್ಲಿ ಅವನು ಬಹು ವಾತ್ಸಲ್ಯದಿಂದ ಪ್ರಸಂಗಿಸಿ ಅನೇಕ ಯೆಹೂದ್ಯರನ್ನೂ (ಇವರಲ್ಲಿ ಎಲ್ಲಾ ಮನೆಯ ಸಹಿತವಾಗಿ ಸಭೆಮನೆಯ ಮುಖ್ಯಸ್ಥನಾದ ಕ್ರಿಸ್ಪನನ್ನು) ಗ್ರೇಕರನ್ನೂ ಸಮ್ಮತಿ ಪಡಿಸಿದನು. ಆದರೆ ಬೇರೆ ಯೆಹೂದ್ಯರು ಬಹಳವಾಗಿ ಅವನಿಗೆ ಎದುರಿಸಲಾಗಿ ಅವನು ತನ್ನ ವಸ್ತ್ರಗಳನ್ನು ಜಾಡಿಸಿ ಹೇಳಿದ್ದು: “ನಿಮ್ಮ ರಕ್ತವು ನಿಮ್ಮ ತಲೆಯ ಮೇಲೆ ಇರಲಿ! ನಾನು ಶುದ್ಧನು, ಇಂದಿನಿಂದ ಜನಾಂಗಗಳ ಬಳಿಗೆ ಹೋಗುತ್ತೇನೆ”. ಅಂದಿನಿಂದ ಅವನು ಯುಸ್ತನೆಂದು ಹೆಸರುಳ್ಳ ಒಬ್ಬ ದೇವಭಕ್ತನ ಮನೆಯಲ್ಲಿ ಬೋಧಿಸಿದನು. ಸಭೆಯು ದಿನದಿನ ಹೆಚ್ಚಿತು. ಮತ್ತು ಕರ್ತನು ದರ್ಶನದಲ್ಲಿ ತನಗೆ ಬಹು ಜನರು ಈ ಪಟ್ಟದಲ್ಲಿ ಇದ್ದಾರೆಂದು ಹೇಳಿ, ತಾನು ಕಾಪಾಡುತ್ತೇನೆಂದು ವಾಗ್ದತ್ತ ಮಾಡಲಾಗಿ—ಪೌಲನು ಸಂತೋಷವಾಗಿ ಧೈರ್ಯಗೊಂಡನು. ಆದರೆ ಯೆಹೂದ್ಯರು ಏಕಮನಸ್ಸಾಗಿ ಪೌಲನ ಮೇಲೆ ಕೈ ಹಾಕಿ (ಜ್ಞಾನಶಾಸ್ತ್ರಿಯಾದ ಸೆನೆಕನ ಸಹೋದರನಾದ) ಪ್ರತಿಥೋರೆಯಾಗಿರುವ ಗಲ್ಲಿಯೋನನ ಪೀಠದ ಬಳಿಗೆ ತಂದು, ಇವನು ನ್ಯಾಯಪ್ರಮಾಣವನ್ನು ಕೆಡಿಸುವವನಾಗಿರುತ್ತಾನೆಂದು ಹೇಳಿದರು. ಆದರೆ ಗಲ್ಲಿಯೋನನು ಅವರನ್ನು ಪೀಠದ ಬಳಿಯಿಂದ ಹೊರಡಿಸಿದನು.

ಪರಿಶಿಷ್ಟ. ಒಂದೂವರೆ ವರ್ಷ ಕೊರಿಂಥದಲ್ಲಿ ಪೌಲನು ವಾಸ ಮಾಡಿದಾಗ ಥೆಸ್ಸಲೋನಿಕ್ಯರ ೨ ಪತ್ರಿಕೆಗಳನ್ನು ಬರದನು. ಬೆರೋಯದಿಂದ (೧ನೇ ಥೆಸ್ಸಲೋನಿಕ್ಯರ ೩, ೧.) ಪೌಲನ ಅಪ್ಪಣೆಯ ಪ್ರಕಾರ ತಿಮೊಥೇಯನು ಥೆಸ್ಸಲೋನಿಕ್ಯಕ್ಕೆ ಹೋಗಿ, ಅಲ್ಲಿಯ ಸಭೆಯ ಸ್ಥಿತಿಯ ವಿಷಯವಾಗಿ ಅತಿ ಸಂತೋಷಕರವಾದ ವರ್ತಮಾನವನ್ನು ಕೊರಿಂಥಕ್ಕೆ ತಂದನು (§ ೧೬೭, ೧). ಆದರೆ ನಡತೆಯ ವಿಷಯದಲ್ಲಿ ದೊಡ್ಡ ವ್ಯಾಪಾರಪಟ್ಟಣಗಳ ಗಂಡಾಂತ್ರಗಳಲ್ಲಿಯೂ ಹಾಗೆಯೇ ಬೋಧನೆಯ ವಿಷಯದಲ್ಲಿ ಕರ್ತನ ತಿರಿಗಿ ಬರೋಣವನ್ನು ಕುರಿತು ನಾನಾ ಪ್ರಕಾರದ ಸುಳ್ಳುಬೋಧನೆಗಳಲ್ಲಿಯೂ ಅವರು ಬೀಳಲಿಕ್ಕಿರುವದರಿಂದ ಪೌಲನು ಅವರು ಈ ಪ್ರಕಾರ ತಪ್ಪದ ಹಾಗೆ ಅವರನ್ನು ಗದರಿಸಲಿಕ್ಕೂ ವಿಶ್ವಾಸದಲ್ಲಿ ಬಲ ಪಡಿಸಲಿಕ್ಕೂ ಬೇಕಾಗಿ ಮೊದಲನೇ ಪತ್ರಿಕೆಯನ್ನು ಬರದನು. ಅವನು ಇನ್ನು ಕೊರಿಂಥದಲ್ಲಿರುವಾಗಲೇ ಹೊಸತಾಗಿ ವರ್ತಮಾನವು ಅವನಿಗೆ ಬಂತು. ಮೋಸಗಾರರು ಕರ್ತನ ತಿರಿಗಿ ಬರೋಣವನ್ನು ಕುರಿತು ಅವರಲ್ಲಿ ಇದ್ದ ಕೋರಿಕೆಯನ್ನು ತಮಗೆ ಪ್ರಯೋಜನ ಮಾಡಿ ಕೊಂಡಿದ್ದರು. ಆದದರಿಂದ ೨ನೇ ಪತ್ರಿಕೆಯಲ್ಲಿ ಪೌಲನು ಈ ಬೋಧನೆಯ ವಿಷಯವಾಗಿ ಏನು ನೆನಸಬೇಕೆಂದೂ ಮತ್ತು ಮುಖ್ಯವಾಗಿ ಕರ್ತನು ಬರುವ ಮುಂಚೆ ಪ್ರತಿಕ್ರಿಸ್ತನು ಬರ ಬೇಕೆಂದು ಸ್ವಚ್ಛವಾಗಿಯೂ ಖಂಡಿತವಾಗಿಯೂ ವಿವರಿಸಿದನು.

೨) ಅಪೊ. ಕ್ರಿ. ೧೮, ೧೮ ಇತ್ಯಾದಿ. ಬಹಳವಾಗಿ ಆಶೀರ್ವದಿಸಲ್ಪಟ್ಟ ಕೆಲಸವನ್ನು ತೀರಿಸಿದ ತರುವಾಯ ಪೌಲನು ಸುರ್ಯಕ್ಕಾಗಿ ತಿರಿಗಿ ಪ್ರಯಾಣ ಮಾಡಿದನು (೫೪ನೇ ವರ್ಷದಲ್ಲಿ). ಅವನು ಕೃತಜ್ಞತೆಯಿಂದ ತುಂಬಿದವನಾಗಿ ಮಾಡಿದ ನಜಿರಾಯನ ಹರಿಕೆಯನ್ನು (§ ೪೩) ಸಲ್ಲಿಸಿದ ಮೇಲೆ, ಸಣ್ಣಆಸ್ಯಕ್ಕೆ ಹೋದನು. ಪ್ರಿಸ್ಕಿಲ್ಲಳೂ ಅಕ್ವಿಲನೂ ಎಫೆಸದ ಪರ್ಯಂತರಕ್ಕೂ ಅವನ ಸಂಗಡ ಬಂದರು. ಅಲ್ಲಿಯ ಯೆಹೂದ್ಯರು ಅವನನ್ನು ಸ್ನೇಹದಲ್ಲಿ ಅಂಗೀಕರಿಸಿದರು. ಅವನು ತಮ್ಮ ಸಂಗಡ ಇನ್ನು ಇರ ಬೇಕೆಂದು ಅವರ ಮನಸ್ಸಾಗಿತ್ತು. ಆದರೆ ಪೌಲನು ಒಳಕೊಳ್ಳಲಿಲ್ಲ. ಯಾಕಂದರೆ ತನ್ನ ಹರಿಕೆಯನ್ನು ಸಲ್ಲಿಸುವದಕ್ಕೋಸ್ಕರ ಹಬ್ಬಕ್ಕೆ ಯೆರೂಸಲೇಮದಲ್ಲಿರ ಬೇಕೆಂದು ನೆನಸಿದನು. ಅಕ್ವಿಲನೂ ಪ್ರಿಸ್ಕಿಲ್ಲಳೂ ತಿರಿಗಿ ಕೊರಿಂಥಕ್ಕೆ ಹೋದರು. ಅವರ ಸಂಗಡ ಅಲೆಕ್ಸಂದ್ರಿಯದ ಯೆಹೂದ್ಯನಾದ ಅಪೊಲ್ಲೋಸನು ಇದ್ದನು. ಇವನು ಯೇಸುವು ಮೆಸ್ಸೀಯನೆಂದು ತಿಳುಕೊಂಡಿದ್ದನು. ಆದರೆ ಯೋಹಾನನ ಸ್ನಾನ ಮಾತ್ರವೇ ಅವನಿಗೆ ಗೊತ್ತಿತ್ತು. (ಹಾಗಾದರೆ ಅವನ ತಿಳುವಿಕೆಯು ಪಂಚಾಶತ್ ದಿನದ ಮೊದಲಿನದಾಗಿತ್ತು). ಇವನು ದಿವ್ಯ ಬರಹದ ಕೂಲಂಕುಶ ತಿ

ಳುವಿಕೆ ಇದ್ದವನೂ ಮಹಾ ವಾಗ್ಮಾಲಿಯೂ ಆಗಿದ್ದು, ತಾನು ತಿಳುಕೊಂಡಷ್ಟು ಕರ್ತನ ಮಾರ್ಗವನ್ನು ವಾತ್ಸಲ್ಯದಿಂದಲೂ ಚುರುಕಾದ ಆತ್ಮದಿಂದಲೂ ಬೋಧಿಸುತ್ತಾ ಇದ್ದದರಿಂದ ಆ ಕ್ರೈಸ್ತ ದಂಪತಿಗಳು ಅವನನ್ನು ಕರಕೊಂಡು ಇನ್ನು ಚನ್ನಾಗಿ ಬೋಧಿಸಿದರು. ತರುವಾಯ ಅಪೊಲ್ಲೋಸನು ಕೊರಿಂಥದಲ್ಲಿ ಪೌಲನ ಕೆಲಸವನ್ನು ಮುಂದೆ ನಡಿಸಿದನು. ಯೆಹೂದ್ಯರನ್ನು ಯಾವಾಗಲೂ ಜೈಸಿ ಯೇಸುವು ಕ್ರಿಸ್ತನಾಗಿರುತ್ತಾನೆಂದು ಬರಹದಿಂದ ಪ್ರಕಟವಾಗಿ ಸ್ಥಾಪಿಸಿದನು.



## § 169. ಅಪೊಸ್ತಲನಾದ ಪೌಲನ ಮೂರನೇ ಪ್ರಸಂಗಪ್ರಯಾಣ ಎಫೆಸ್ಯದಲ್ಲಿ ಆದದ್ದು (ಗಲಾತ್ಯರ ೧ ತಿಮೊಥೇಯನ ೧ ಕೊರಿಂಥ ತೀತ ಪತ್ರಿಕೆಗಳು)

೧) ಅಪೊ. ಕ್ರಿ. ೧೯. ೧ ಇತ್ಯಾದಿ. ಪೌಲನು ಈ ಸಾರಿ ಅಂತ್ಯೋಕ್ಯದಲ್ಲಿ ಬಹು ಕಾಲ ಉಳುಕೊಳ್ಳಲಿಲ್ಲ. ಕ್ರಿಸ್ತನ ಪ್ರೀತಿಯು ಅವನಿಗೆ ಎಡೆ ಬಿಡಲಿಲ್ಲ. ೫೪ನೇ ಇಲ್ಲವೆ ೫೫ನೇ ವರ್ಷದಲ್ಲಿ ಅವನು ಲೂಕ, ತೀತ, ತಿಮೊಥೇಯರ ಸಹಿತವಾಗಿ ೩ನೇ ದೊಡ್ಡ ಅಪೊಸ್ತಲಪ್ರಯಾಣವನ್ನು ಮಾಡಿದನು. ಗಲಾತ್ಯ ಫ್ರೂಗ್ಯಗಳನ್ನು ದಾಟಿದ ಮೇಲೆ ಎಫೆಸಕ್ಕೆ ಬಂದನು. ಇಲ್ಲಿ ೧೨ ಶಿಷ್ಯರನ್ನು ಕಂಡನು. ಇವರು ಸಹಾ ಅಪೊಲ್ಲೋಸನ ಹಾಗೆಯೇ ಯೋಹಾನನ ಸ್ನಾನವನ್ನು ಮಾತ್ರವೇ ಹೊಂದಿದವರಾಗಿ ಪರಿಶುದ್ಧಾತ್ಮದ ಹೊಯ್ಯುವಿಕೆಯನ್ನು ಕುರಿತು ಏನೂ ತಿಳಿಯಲಿಲ್ಲ. ಅವರಿಗೆ ಯೇಸುವಿನ ನಾಮದಲ್ಲಿ ಸ್ನಾನವನ್ನು ಕೊಟ್ಟು ಅವರ ಮೇಲೆ ಕೈಗಳನ್ನು ಇಟ್ಟಾಗ ಅವರು ಸಹಾ ಪರಿಶುದ್ಧಾತ್ಮದಿಂದ ತುಂಬಿದರು. ತರುವಾಯ ೩ ತಿಂಗಳು ಪರ್ಯಂತರ ಅಡ್ಡಿ ಇಲ್ಲದೆ ಸಭೆಮನೆಯಲ್ಲಿ ಪ್ರಸಂಗಿಸುತ್ತಾ ಇದ್ದನು. ಆದರೆ ಇಲ್ಲಿ ಸಹಾ ಯೆಹೂದ್ಯರ ಪ್ರತಿಕೂಲತೆಯ ಆತ್ಮವು ಎದ್ದಾಗ ತುರನ್ನನೆಂಬ ಗ್ರೇಕ ಜ್ಞಾನಶಾಸ್ತ್ರಿಯ ಶಾಲೆಯಲ್ಲಿ ೨ ವರ್ಷ ಪರ್ಯಂತರ ಪ್ರಸಂಗಿಸುತ್ತಾ ಇದ್ದನು. ಈ ಪ್ರಕಾರ ಅವನು ಎಫೆಸ್ಯದಲ್ಲಿ ದೊಡ್ಡ ಸಭೆಯನ್ನು ಸ್ಥಾಪಿಸಿದನು ಮಾತ್ರವಲ್ಲ, ಈ ಮಧ್ಯಸ್ಥಾನದಿಂದ ಎಲ್ಲಾ ಸಣ್ಣ ಆಸ್ಯದ ಮೇಲೆ ಬಹಳ ಆಶೀರ್ವಾದ ಬರುವ ಹಾಗೆ ಆಯಿತು. ದೇವರು ಅವನಿಂದ ಆಗುವ ಬಹಳ ಲಕ್ಷಣ ಅದ್ಭುತಗಳಿಂದ ಅವನ ಬೋಧನೆಯನ್ನು ಬಲ ಪಡಿಸಿದನು. ಅವನ ವಸ್ತ್ರದ ಪರಿಮುಖವಾಗಿ ಸಹಾ ರೋಗಿಗಳು ವಾಸಿಯಾದರು. ದುರಾತ್ಮಗಳು ಹೊರಡಿಸಲ್ಪಟ್ಟವು. ಇದನ್ನು

ನೋಡಿ ಕೆಲವು ಯೆಹೂದ್ಯ ಮಂತ್ರಗಾರರು ಸಹಾ (ಇವರು ಸ್ಕೇವನೆಂಬ ಒಬ್ಬ ಪ್ರಶಸ್ತ ಯೆಹೂದ್ಯ ಯಾಜಕನ ೭ ಮಕ್ಕಳಾಗಿದ್ದರು) ಮಂತ್ರಗಳನ್ನು ಮಾಡುವಾಗ್ಯೆ ಯೇಸುವಿನ ನಾಮವನ್ನೂ ಪೌಲನ ನಾಮವನ್ನೂ ಪ್ರಯೋಗಿಸಿದರು. ಆದರೆ ಅವರು ಹೊರಡಿಸ ಬೇಕೆಂದಿದ್ದ ದೆವ್ವವು ಅವರಿಗೆ ಸಾಕು ಸಾಕು ಮಾಡಿತು. ಆಗ್ಯೆ ಸಮಸ್ತ ಯೆಹೂದ್ಯರ ಮೇಲೆಯೂ ಗ್ರೇಕರ ಮೇಲೆಯೂ ಭಯವು ಬಿತ್ತು. ಮತ್ತು ಮಂತ್ರಚಮತ್ಕಾರಗಳನ್ನು ನಡಿಸಿದ ಅನೇಕರು ಅವುಗಳನ್ನು ಪೂರ್ಣವಾಗಿ ಬಿಟ್ಟು ಬಹಳ ಕ್ರಯಕ್ಕೆ ತಕ್ಕೊಂಡ ಮಂತ್ರದ ಪುಸ್ತಕಗಳನ್ನು ಸುಟ್ಟು ಬಿಟ್ಟರು.

ಪರಿಶಿಷ್ಟ. ಎಫೆಸ್ಯದಲ್ಲಿದ್ದ ಗ್ರಮ್ಮತಾ ಅಲೆಕ್ಸಿಫರ್ಮಕಾ ಎಂಬ ಆ ಪುಸ್ತಕಗಳು ಬಹಳ ಪ್ರಖ್ಯಾತಿ ಪಟ್ಟವುಗಳಾಗಿ ಬಹಳ ಬೆಲೆಯುಳ್ಳವುಗಳಾಗಿದ್ದವು. ಹೀಗಾಗಿ ಈ ಸಾರಿ ಸುಟ್ಟ ಪುಸ್ತಕಗಳ ಬೆಲೆಯು ೫೦ ಸಾವಿರ ಬೆಳ್ಳಿಯ ಹಣ (ಶುಮಾರು ೨೦ ಸಾವಿರ ರೂಪಾಯಿ ಆಗಿತ್ತು).

೨) ಅಪೊ. ಕ್ರಿ. ೧೯, ೨೧ ಇತ್ಯಾದಿ. ಪೌಲನು ಮಕೆದೋನ್ಯ ಅಕಾಯ ಎಂಬಲ್ಲಿಗೆ ಪ್ರಯಾಣ ಮಾಡಲಿಕ್ಕೆ ಸಿದ್ಧ ಮಾಡಿ ಕೊಂಡು ತಿಮೊಥೇಯನನ್ನು ಅಲ್ಲಿ ಮುಂದಾಗಿ ಕಳುಹಿಸಿದನು. ಆದರೆ ಅವನು ಇನ್ನು ಅಲ್ಲಿದ್ದಾಗ ಅವನಿಗೂ ಸಭೆಗೂ ಒಂದು ದೊಡ್ಡ ಕಂಟಕ ಬಂತು. ದೆಮೆತ್ರಿಯನೆಂಬ ಒಬ್ಬ ಅಕ್ಕಸಾಲಿಗನು, ಪ್ರಖ್ಯಾತಿ ಪಟ್ಟ ಅರ್ತೆಮಿಯ (ರೋಮಾಯರಿಗೆ ದಿಯಾನ) ಬೆಳ್ಳಿಗುಡಿಗಳನ್ನು ಮಾಡಿ ಎಲ್ಲಾ ಸಣ್ಣ ಆಸ್ಯದಲ್ಲಿ ಲಾಭವುಳ್ಳ ವ್ಯಾಪಾರ ಮಾಡುತ್ತಾ ಇದ್ದು, ಪೌಲನು ಅಲ್ಲಿ ಕೆಲಸ ಮಾಡಿದಂದಿನಿಂದ ತಕ್ಕೊಳ್ಳುವವರು ಬಹಳ ಕಡಿಮೆಯಾದರೆಂದು ನೋಡಿ, ಆ ಉದ್ಯೋಗಸ್ಥರನ್ನೂ ಅದೇ ತರದ ಪಂಚಾಳರನ್ನೂ ಕೂಡಿಸಿ, ಇವರೊಡನೆ ಜನರಲ್ಲಿ ತಮ್ಮ ದೊಡ್ಡ ದೇವಿಯಾದ ದಿಯಾನಳನ್ನು ದೂಷಿಸುವವರಾದ ಅವರ ಮೇಲೆ ಮಹಾ ಕ್ರೋಧವನ್ನು ಎಬ್ಬಿಸಿದನು. ಬುದ್ಧಿಹೀನವಾದ ಕ್ರೋಧದಲ್ಲಿ ಅವರು ಪಟ್ಟಣವನ್ನು ಸುತ್ತಿಕೊಂಡು, ಪೌಲನ ಜತೆಗಾರರಲ್ಲಿ "ಕೆಲವರನ್ನು" ಉಪದ್ರ ಪಡಿಸಿ, ೨ ತಾಸುಗಳ ಪರ್ಯಂತರಕ್ಕೂ ಬಿಡದೇ ಕೂಗಿದ್ದೇನಂದರೆ—ಎಫೆಸ್ಯರ ಅರ್ತೆಮಿಯು ದೊಡ್ಡವಳು. ಬಹಳ ಕಷ್ಟದಿಂದಲೂ ಬಹಳ ಬುದ್ಧಿಚಮತ್ಕಾರದಿಂದಲೂ ಶಾನಭೋಗನು ಕ್ರೋಧಭ್ರಷ್ಟ ಜನರನ್ನು ಶಾಂತಿ ಪಡಿಸಿದನು. ಪೌಲನನ್ನು ಸ್ನೇಹಿತರು ಗುಲ್ಲಿನಲ್ಲಿ ಹೋಗ ಬಿಡಲಿಲ್ಲ. ತರುವಾಯ ಅವನು ಮೊದಲೇ ನಿಶ್ಚೈಸಿ ಕೊಂಡ ಪ್ರಕಾರ ಮಕೆದೋನ್ಯಕ್ಕೆ ಕೂಡಲೇ ಪ್ರಯಾಣ ಮಾಡಿದನು.

ಪರಿಶಿಷ್ಟ. ಸ್ವಲ್ಪ ಕಡಿಮೆ ಮೂರು ವರ್ಷ ಪರ್ಯಂತರ ಪೌಲನು ಎಫೆಸ್ಯದಲ್ಲಿ ಉಳಕೊಂಡಾಗ ಕೆಲವು ಪತ್ರಿಕೆಗಳನ್ನು ಬರದನು.

೧ನೇ) ಗಲಾತ್ಯರ ಪತ್ರಿಕೆ. ಅವನು ೨ನೇ ಸಾರಿ ಪ್ರಸಂಗಪ್ರಯಾಣ ಮಾಡಿದಾಗಲೇ, ಗಲಾತ್ಯದಲ್ಲಿ ಕೆಲವು ಸಭೆಗಳನ್ನು ಸ್ಥಾಪಿಸಿ, ೩ನೇದರಲ್ಲಿ ಅವರನ್ನು ಕಂಡು, ವಿಶ್ವಾಸದಲ್ಲಿ ದೃಢೀಕರಿಸಿದ್ದನು. ಆದರೆ ಸ್ವಲ್ಪ ಕಾಲದಲ್ಲಿಯೇ ಯೆಹೂದಿಯ ಸುಳ್ಳುಬೋಧಕರು ಅಲ್ಲಿ ಬಂದು, ಅಪೊಸ್ತಲನಾದ ಪೌಲನ ಮಾನವನ್ನು ಕಡಿಮೆ ಮಾಡಿ, ದೇವರ ಮುಂದೆ ನೀತಿನಿರ್ಣಯವು ಎಲ್ಲಾ ನಿಷ್ಠಾನೇಮವನ್ನು ಕೈಕೊಳ್ಳುವದರಿಂದ ಉಂಟಾಗುತ್ತದೆಂಬದನ್ನು ಸ್ಥಾಪಿಸಿ, ಕೆಲವು ಮ್ಲೇಂಛ ಕ್ರೈಸ್ತರಿಗೆ ಪರಿಭೇದನೆ ಮಾಡಿಸಿದರು. ಎಫೆಸ್ಯದಲ್ಲಿ ಪೌಲನು ಈ ದುಃಖಕರ ವರ್ತಮಾನವನ್ನು ಕೇಳಿ, ತಪ್ಪುಮಾರ್ಗದಲ್ಲಿ ಸೇರಿಸಲ್ಪಟ್ಟ ಸಭೆಯನ್ನು ರಕ್ಷಣ್ಯದ ಸತ್ಯವಾದ ಆಧಾರಕ್ಕೆ ತಿರಿಗಿ ತರುವದಕ್ಕಾಗಿ ಅತಿ ಮೃದುಮನಸ್ಸಿನ ಮಮತೆಯಲ್ಲಿಯೂ ಅತ್ಯಂತವಾದ ದುಃಖದಲ್ಲಿಯೂ ಈ ಪತ್ರಿಕೆಯನ್ನು ಬರದನು. ಯೆರೂಸಲೇಮಿನ ಅಪೊಸ್ತಲರು ತನ್ನ ಮೂಲವಾಕ್ಯಗಳನ್ನು ಏನೂ ಅಡ್ಡಿ ಇಲ್ಲದೆ ಅಂಗೀಕರಿಸಿದರೆಂಬದನ್ನು ಹೇಳಿ, ನೇಮವು ಕ್ರಿಸ್ತನಿಗೋಸ್ಕರ ಉಪಾಧ್ಯ ಮಾತ್ರವೇ ಆಗಿತ್ತೆಂಬದನ್ನೂ ನೀತಿನಿರ್ಣಯವು ದೇವರ ಮುಂದೆ ಕ್ರಿಸ್ತನ ವಿಶ್ವಾಸದಿಂದ ಮಾತ್ರವೇ ಸಿಕ್ಕುತ್ತದೆಂಬದನ್ನೂ ತೋರಿಸುತ್ತಾನೆ.

೨ನೇ) ತಿಮೊಥೇಯನ ಮೊದಲನೇ ಪತ್ರಿಕೆ. ಪೌಲನು ಬಹುಕಾಲ ಪರ್ಯಂತರ ಎಫೆಸ್ಯದಲ್ಲಿದ್ದಾಗ, ಅಪೊಸ್ತಲರ ಕ್ರಿಯೆಗಳಲ್ಲಿ ಬರದಿರದಂಥಾ ಒಂದು ಸಣ್ಣ ಪ್ರಯಾಣವನ್ನು ಮಕೆದೋನ್ಯಕ್ಕೂ (೧ ತಿಮೊ. ೧, ೩.) ಅಕಾಯಕ್ಕೂ ಕ್ರೇತಕ್ಕೂ ಮಾಡಿ, ಇಲ್ಲಿ ತೀತನನ್ನು ಬಿಟ್ಟು ಬಂದಿರ ಬೇಕು (ತೀತ. ೧, ೫). ಮಕೆದೋನ್ಯದಿಂದ ಈಗ ಅವನು ತಿಮೊಥೇಯನಿಗೆ ಮೊದಲನೇ ಪತ್ರಿಕೆಯನ್ನು ಅವನ ಬೋಧಕೋದ್ಯೋಗಕ್ಕಾಗಿ ಬುದ್ಧಿಮಾತುಗಳೂ ಬೋಧನೆಗಳೂ ಸಹಿತವಾಗಿ ಎಫೆಸ್ಯಕ್ಕೆ ಬರದಿರ ಬೇಕು. ತಿರಿಗಿ ಬಂದ ಮೇಲೆ ಎಫೆಸ್ಯದಿಂದ ಬರದದ್ದು.

೩ನೇ) ಕೊರಿಂಥ್ಯರಿಗೆ ಬರದ ನಮಗಿರುವ ಮೊದಲನೇ ಪತ್ರಿಕೆ. (ಇದಕ್ಕಿಂತ ಮೊದಲು ಬರದ ಒಂದು ಪತ್ರಿಕೆಯು (೧ ಕೊರಿ. ೫, ೯) ಈಗ ಇರುವದಿಲ್ಲ. ಕೊರಿಂಥಸಭೆಯ ಸ್ಥಾಪನೆಯ ವಿಷಯವಾಗಿ ಸಮ ನೋಡು § ೧೬೮, ೧ ಅಪೊಲ್ಲೋಸನ ಹೊರ್ತು ಯೆಹೂದಿಯ ಸುಳ್ಳುಬೋಧಕರು ಸಹಾ ಅಲ್ಲಿಯೇ ಇದ್ದರು (ಇವರು ಪೇತ್ರನ ಪ್ರಕಾರ ಬೋಧಿಸುತ್ತೇವೆಂತ ಹೇಳಿದರು). ಇದರಿಂದ ಒಬ್ಬರಿಗೊಬ್ಬರು

೫೧

ಪ್ರತಿಕೂಲವಾಗಿ ನಿಲ್ಲುವ ೩ ಪಕ್ಷಗಳು ಸಭೆಯಲ್ಲಿ ಉಂಟಾದವು. ಅವುಗಳಲ್ಲಿ ಒಂದು ಪೌಲನದು, ಒಂದು ಅಪೊಲ್ಲೋಸನದು, ಮತ್ತೊಂದು ಪೇತ್ರನದು ಎಂದು ಹೇಳಿಕೊಂಡರು. ಪೌಲನ ಪಕ್ಷದವರೆಂಬವರು ಸುವಾರ್ತೆಯಲ್ಲಿರುವ ತಮ್ಮ ಸ್ವತಂತ್ರವನ್ನು ಬಲಹೀನರಾದ ಸಹೋದರರ ಆತಂಕಕ್ಕೆ ಪ್ರಯೋಗಿಸಿದರು. ಅಪೊಲ್ಲೋಸನ ಪಕ್ಷದವರು ಕ್ರಿಸ್ತನ ಶಿಲುಬೆಯ ಹುಚ್ಚುತನವನ್ನು ಪ್ಲೇಂಥರ ಜ್ಞಾನಶಾಸ್ತ್ರದ ಶಿಕ್ಷೆಯಿಂದ ಲೌಕಿಕಜ್ಞಾನ ಮಾಡಲಿಕ್ಕೆ ಇದ್ದರು. ಪೇತ್ರನ ಪಕ್ಷದವರು ರಕ್ಷಣ್ಯವನ್ನು ನಿಷ್ಟಾನೇಮದ ಕೈಕೊಳ್ಳುವಿಕೆಗೆ ಒಳಗಾಗ ಮಾಡಿದರು. ಇವುಗಳ ಹೊರ್ತು ನಾಲ್ಕನೇದು ಒಂದು ಇತ್ತು. ಈ ಪಕ್ಷದವರು ತಮ್ಮನ್ನು ತಾವೇ ಹೆಚ್ಚಿಸಿ ಕೊಂಡು, ತಾವು ಕ್ರಿಸ್ತನ ಪಕ್ಷದವರೆಂದು ಹೇಳಿ ಪ್ರತ್ಯೇಕವಾದಂಥಾ ಕ್ರೈಸ್ತ ಮೂಲಬೋಧನೆಗಳನ್ನು ಬಲಹೀನ ಮಾಡುವಂಥಾ ಮುಖ್ಯವಾಗಿ ಮಾಂಸದ ಉತ್ಥಾನವನ್ನು ಅಲ್ಲಗಳಿಯುವಂಥಾ ಸುವಾರ್ತೆಯನ್ನು ಉಂಟು ಮಾಡಿ ಕೊಂಡು, ಅದೇ ಕ್ರಿಸ್ತನ ಶುದ್ಧ ಬೋಧನೆ ಎಂದು ಹೇಳಿ ಕೊಂಡರು. ಈ ವಾಚ್ಛಾಟಗಳಿಂದ ಸಭಾದಂಡಣೆಯು ಬಿದ್ದು ಹೋಯಿತು. ಸಭೆಯಲ್ಲಿ ಒಬ್ಬನು ಶಿಕ್ಷೆ ಹೊಂದದೆ ಪ್ರಕಟವಾಗಿ ಸಂಬಂಧಮೇಲಿನ ದೊಡ್ಡ ಪಾಪದಲ್ಲಿ ಜೀವಿಸಿದನು. ಅಕ್ರಮಗಳು ಕೂಟಗಳಲ್ಲಿ ಹೆಚ್ಚಿದವು. ವಿಪರೀತ ಬುದ್ಧಿಯು ಪ್ರೀತಿಯನ್ನು ಹೊರಡಿಸಿತು, ಇತ್ಯಾದಿ. ಈ ದುಖ್ಖಕರ ವರ್ತಮಾನವನ್ನು ಪೌಲನು ಎಫೆಸ್ಯದಲ್ಲಿ ಹೊಂದಿದನು. ತಿಮೊಥೇಯನನ್ನು ವಿಲಾಯಿತಿಗೆ ಕಳುಹಿಸಲಿಕ್ಕಾದ ಕಾರಣವು ಒಂದು ವೇಳೆ ಇದೇ (೧ ಕೊರಿ. ೪, ೧೭; ಸಂ. ೧೬, ೧೦ನೇ ವಚನ). ಆದರೂ ಸಭೆಗೆ ಕಾಗದವನ್ನು ಸಹಾ ಬರಿಯುವದು ಅವಶ್ಯವೆಂದು ಅಪೊಸ್ತಲನು ನೆನಸಿದನು.

ಈ ಪತ್ರಿಕೆಯು ಅವನ ಮಹಾಜ್ಞಾನಕ್ಕೂ ಮನುಷ್ಯರ ಹೃದಯದ ತಿಳುವಿಕೆಗೂ ಮೃದುಮನಸ್ಸಿಗೂ ಅದೇ ಸಮಯದಲ್ಲಿ ಪಕ್ಷ ಪರಪಕ್ಷವಿಲ್ಲದ ಗಂಭೀರತ್ವಕ್ಕೂ ಸಾಕಾದ ಸಾಕ್ಷಿಯಾಗಿರುತ್ತದೆ. ಇದರಲ್ಲಿ ಪಕ್ಷಗಳಾಗುವದನ್ನೂ ಆತ್ಮದ ವಿಷಯ ಗರ್ವವನ್ನೂ ಶಿಕ್ಷಿಸಿ, ಸಂಬಂಧದ್ರೋಹಿಯನ್ನು ಹೊರಗೆ ಹಾಕುವದು ಅವಶ್ಯವೆಂಬದಾಗಿ ಹೇಳಿ, ವ್ಯವಹಾರ ಮಾಡುವದಕ್ಕಾಗಿಯೂ ಜಾರತ್ವಕ್ಕಾಗಿಯೂ ಗದರಿಸಿ, ವಿವಾಹವಿಲ್ಲದೆ ಇರುವದನ್ನು ಕುರಿತು, ಕ್ರೈಸ್ತರು ಯಾವ ಸ್ಥಿತಿಯಲ್ಲಿ ಇರುತ್ತಾರೆಂಬದರ ವಿಷಯವಾಗಿಯೂ ಬಲಿಮಾಂಸ ತಿನ್ನುವದರ ವಿಷಯವಾಗಿಯೂ ಹ್ಯಾಗೆ ನಡಕೊಳ್ಳ ಬೇಕೆಂಬದನ್ನು ತಿಳಿಸಿ, ಸಭೆ ಕೂಡಿ ಬರುವಾಗ ನಡಿಯುವ ಅನಾಚಾರಗಳನ್ನೂ ಪರಿಶುದ್ಧ ರಾತ್ರಿಭೋಜನವನ್ನೂ ಆತ್ಮದ ವರಗಳನ್ನೂ (ಮುಖ್ಯವಾಗಿ ಭಾಷೆಗಳಿಂದ ಮಾತಾಡುವದನ್ನು) ಎಲ್ಲಾದಕ್ಕಿಂತ ಅಮೂಲ್ಯವಾಗಿರುವ ಪ್ರೀತಿಯನ್ನೂ ಕು

ರಿತು ನಿರ್ಣಯಿಸಿ, ದೇಹದ ಉತ್ಥಾನದ ಬೋಧನೆಯನ್ನು ಖಚಿತವಾಗುವ ಹಾಗೆಯೂ ಸ್ಪಷ್ಟವಾಗಿಯೂ ವಿವರಿಸಿ ಕಡೆಯಲ್ಲಿ ಪಲೆಸ್ತೀನದ ಬಡ ಸಹೋದರರಿಗೋಸ್ಕರ ಹಣ ಕೂಡಿಸ ಬೇಕೆಂದು ಅಪೇಕ್ಷಿಸುತ್ತಾನೆ. ಎಫೆಸ್ಯದಿಂದ ಹೊರಟು ಹೋಗುವ ಮೊದಲೇ ಅಪೊಸ್ತಲನು ಮತ್ತೊಂದು ಪತ್ರಿಕೆಯನ್ನು ಸಹಾ ಬರದನೆಂತ ಕಾಣುತ್ತದೆ.

೪ನೇ) ತೀತನಿಗೆ ಕ್ರೇತಕ್ಕೆ ಅಲ್ಲಿ ಉದ್ಯೋಗವನ್ನು ಹ್ಯಾಗೆ ನಡಿಸ ಬೇಕೆಂಬದಕ್ಕೆ ಪ್ರತ್ಯೇಕ ಬೋಧನೆಗಳ ಸಹಿತವಾಗಿ ಬರದ ಪತ್ರಿಕೆ.



§ 170. ಮುಂದೆ ವಿಲಾಯಿತಿಯಲ್ಲಿ ಅವನು ಮಾಡಿದ ಪ್ರಯತ್ನ ಮತ್ತು ಯೆರೂಸಲೇಮಿಗೆ ತಿರಿಗಿ ಬಂದದ್ದು (ಕೊರಿ ೨ನೇ ಮತ್ತು ರೋಮಾಯರ ಪತ್ರಿಕೆ)

೧) ಅಪಾ. ಕ್ರಿ. ೨೦, ೧ ಇತ್ಯಾದಿ. ಈಗ ಪೌಲನು ಮಕೆದೋನ್ಯದ ಸಭೆಗಳನ್ನು ಪರಾಮ್ಶರಿಸಿ, ಇಲ್ಲೂರಿಕದ ಪರ್ಯಂತರಕ್ಕೂ ಹೋಗಿ, (ರೋಮಾ. ೧೫, ೧೯) ಗ್ರೇಕದಲ್ಲಿ ೩ ತಿಂಗಳು ವಾಸವಾಗಿದ್ದು, ಮುಖ್ಯವಾಗಿ ಕೊರಿಂಥ್ಯವನ್ನು ಪರಾಮ್ಶರಿಸಿ ತರುವಾಯ ತಿರಿಗಿ ಮಕೆದೋನ್ಯ ದಾಟಿ, ಸಣ್ಣ ಆಸ್ಯಕ್ಕೆ ಬಂದನು.

ಪರಿಶಿಷ್ಟ. ತಿಮೊಥೇಯನು ಕೊರಿಂಥದಿಂದ ಅಪೇಕ್ಷಿಸಿದ ವರ್ತಮಾನವನ್ನು ಬಹು ಕಾಲಪರ್ಯಂತರ ತಾರದೆ ಇರಲಾಗಿ, ಪೌಲನು ತೀತನನ್ನು ಕೊರಿಂಥಕ್ಕೆ ಕಳುಹಿಸಿದನು (೨ ಕೊರಿ. ೭, ೧೩). ಈತನು ಮಕೆದೋನ್ಯದಲ್ಲಿ ಅವನ ಹತ್ತರ ಬಂದು, ಕಡೆಯಲ್ಲಿ ಕೊರಿಂಥದ ವಿಷಯವಾಗಿ ವರ್ತಮಾನ ತಂದನು. ಇವುಗಳು ಒಟ್ಟು ನೋಡಿದರೆ ಅತಿ ಸಂತೋಷಕರವಾಗಿರಲಾಗಿ ೨ನೇ ಕೊರಿಂಥ್ಯರ ಪತ್ರಿಕೆ ಬರಿಯಲಿಕ್ಕೆ ಕಾರಣವಾಯಿತು. ಇದರಲ್ಲಿ ಅವನು ಹೊರಗೆ ಹಾಕಲ್ಪಟ್ಟು ಈಗ ಮಾನಸಾಂತರ ಪಡುವ ಪಾಪಿಯನ್ನು ಅಂಗೀಕರಿಸ ಬೇಕೆಂದು ಆಲೋಚನೆ ಹೇಳಿ, ಮೊದಲನೇ ಕಾಗದವು ಅಷ್ಟು ಕಠಿಣವಾಗುವದಕ್ಕೆ ಏನು ಕಾರಣವಾಯಿತೆಂಬದನ್ನು ತಿಳಿಸಿ, ಮೊದಲನೇ ಕಾಗದದಿಂದ ಹೆಚ್ಚು ಕೋಪಭ್ರಷ್ಟರಾದ ಯೆಹೂದಿಯ ವಿರೋಧಿಗಳು ಹಾಕಿದ ನಾನಾ ಪ್ರಕಾರದ ಅಪರಾಧಗಳಿಗಾಗಿ ತನ್ನನ್ನೂ ತನ್ನ ಅಪೊಸ್ತಲತನವನ್ನೂ ಸ್ಥಾಪಿಸುತ್ತಾನೆ. ಈ ೨ನೇ ಕಾಗದದಿಂದ ಅಲ್ಲಿ ಏನು ನಡಿಯುತ್ತದೆಂಬದನ್ನು ಕಾದು ಕೊಳ್ಳಲಿಕ್ಕಾಗಿ ಅಪೊಸ್ತಲನು ಮೊದಲಾಗಿ ಇಲ್ಲೂರಿಯಕ್ಕೆ ಮತ್ತೆ ಕೊರಿಂಥಕ್ಕೆ ಸಹಾ ಹೋಗುತ್ತಾನೆ. ಇಲ್ಲಿ ಅವನು ೩ ತಿಂಗಳು ಉಳುಕೊಂಡಾಗ ರೋಮಾಯರ

ಪತ್ರಿಕೆಯನ್ನು ಬರದನು. ಇದನ್ನು ರೋಮಕ್ಕೆ ಹೋಗುವಂಥಾ ಕೆಂಕ್ರೆಯ ಸಭೆಯ ಸೇವಕಿಯಾದಂಥಾ ಪ್ರೊಯಿಬೆ ಎಂಬವಳು ತಕ್ಕೊಂಡು ಹೋದಳು (ರೋಮಾ. ೧೬, ೧). ರೋಮದ ಸಭೆಯು ಮೊದಲೇ ಒಂದು ವೇಳ್ಯ ಅಪೊಸ್ತಲರ ಪ್ರಸಂಗವಿಲ್ಲದೆ ಬೇರೆ ಬೇರೆ ಜಿಲ್ಲೆಗಳು ಮುಖ್ಯ ಪಟ್ಣಕ್ಕೆ ಬಹಳ ವ್ಯಾಪಾರ ಮಾಡುತ್ತಾ ಇರಲಾಗಿ ಇದರಿಂದ ಉಂಟಾಯಿತೆಂತ ಕಾಣುತ್ತದೆ (ಸಮ ನೋಡು ಅಪೊ. ಕ್ರಿ. ೨, ೧೦. ರೋಮಾ. ೧೬, ೭; ಸಂ. ೧೬, ೩). ಈ ಸಭೆಯಲ್ಲಿ ಯೆಹೂದ್ಯರೂ ಮ್ಲೇಂಥರೂ ಸಮ ಸಮ ಇದ್ದರು. ಸಾಕಾದ ಅಪೊಸ್ತಲಬೋಧನೆಯು ಇಲ್ಲದ ಕೊರತೆಯು (ಮುಖ್ಯ ಪಟ್ಣದಲ್ಲಿರುವ) ಈ ಸಭೆಯ ವಿಶೇಷತ್ವವೂ ಇಲ್ಲಿ ಸಹಾ ಯೆಹೂದ್ಯಕ್ರೈಸ್ತರಿಗೂ ಮ್ಲೇಂಛಕ್ರೈಸ್ತರಿಗೂ ಅನ್ಯೋನ್ಯದಲ್ಲಿ ಹೆಚ್ಚುಕಡಿಮೆ ಬಂದೀತೆಂಬ ಭಯವೂ ತನಗೆ ಸ್ವಂತವಾಗಿ ಪರಿಚಿತಿಯಾಗಿರದಂಥಾ ಈ ಸಭೆಗೆ ಸಹಾ ಪೌಲನು ಪತ್ರಿಕೆ ಬರಿಯಲಿಕ್ಕೆ ಕಾರಣವಾದವು. ಇದಕ್ಕೆ ಯೋಗ್ಯವಾಗಿ ಅವನು ಈ ಪತ್ರಿಕೆಯಲ್ಲಿ ಬಹಳ ಜಾಗ್ರತೆಯಿಂದ ಅಸ್ತಿವಾರ ಸಹಿತವಾಗಿ ಕ್ರೈಸ್ತಜ್ಞಾನದ ಆಲಯವನ್ನು ಕಟ್ಟ ಬೇಕಾಯಿತು. ಹೀಗಾಗಿ ಈಗ ಕ್ರೈಸ್ತಸಭೆಗೆ ಪರಿಶುದ್ಧಾತ್ಮದ ವಿಶೇಷ ಜಾಗ್ರತೆಯಿಂದ ಈ ಪತ್ರಿಕೆಯಲ್ಲಿ ಅತಿ ಅಗಾಧವಾಗಿಯೂ ಐಶ್ವರ್ಯವಾಗಿಯೂ ಇರುವ ತಿಳುವಿಕೆಯ ಅತ್ಯಮೂಲ್ಯವಾದ ನಿಧಿಯು ಎಂದಿಗೂ ಅಚಂಚಲವಾಗಿರುವ ಬೋಧನೆಯ ಅಸ್ತಿವಾರವೂ ಉಂಟಾಯಿತು. ಇದರ ವಿಷಯವಾಗಿ ಲುಥರನು ತಾನು ಬರದ ಮನೋಹರವಾದ ಪೀಠಿಕೆಯಲ್ಲಿ ಹೇಳುವದೇನಂದರೆ: "ಈ ಪತ್ರಿಕೆಯು ಹೊಸ ಒಡಂಬಡಿಕೆಯ ನಿಜ ಮುಖ್ಯ ಭಾಗವೂ ಅತಿ ನಿರ್ಮಲವಾದ ಸುವಾರ್ತೆಯೂ ಆಗಿರುತ್ತದೆ. ಅದು ಒಬ್ಬ ಕ್ರೈಸ್ತಮನುಷ್ಯನು ಅದರ ಒಂದೊಂದು ವಾಕ್ಯವನ್ನು ಬಾಯಿಪಾಠ ಮಾಡುವದಕ್ಕೆ ಮಾತ್ರವಲ್ಲ, ಪ್ರಾಣಗಳ ಅನುದಿನದ ರೊಟ್ಟಿ ಎಂದು ಅನುದಿನವು ಅದನ್ನು ಪ್ರಯೋಗಿಸುವದಕ್ಕೆ ಸಹಾ ಯೋಗ್ಯವಾಗಿರುತ್ತದೆ. ಯಾಕಂದರೆ ಯಾರಾದರೂ ಅದನ್ನು ಅವಶ್ಯವಿರುವದಕ್ಕಿಂತ ಹೆಚ್ಚಾಗಿ ಅಥವಾ ಚನ್ನಾಗಿ ಓದಿ, ಧ್ಯಾನಿಸಿ ಆಯಿತೆಂತ ಹೇಳ ಕೂಡದು. ಅದನ್ನು ಎಷ್ಟಕ್ಕೆ ಹೆಚ್ಚಾಗಿ ಪ್ರಯೋಗಿಸುತ್ತೇವೋ ಅಷ್ಟಕ್ಕೆ ಹೆಚ್ಚು ಅಮೂಲ್ಯವಾಗುವದು, ಅಷ್ಟಕ್ಕೆ ಹೆಚ್ಚು ರುಚಿಕರವಾಗುವದು."

ಈ ಪತ್ರಿಕೆಗೆ ೨ ಭಾಗಗಳು.

I ಬೋಧನೆ ಹೇಳುವಂಥಾದ್ದು ೧—೧೧ ಸಂಧಿಯ ವರೆಗೆ.

II ಈ ಆಧಾರದ ಮೇಲೆ ಎಚ್ಚರಿಸುವಂಥಾದ್ದು ೧೨. ೧೫ ಸಂಧಿಗಳು.

Iನೇ ಭಾಗದ ಪ್ರಸ್ತಾಪವೇನಂದರೆ: ದೊಡ್ಡದಾಗಿರುವಂಥಾ ಲೋಕವನ್ನು ಜೈಸು ವಂಥಾ ಸುವಾರ್ತೆಯ ಮೂಲಸತ್ಯವು ಯೇಸು ಕ್ರಿಸ್ತನ ವಿಶ್ವಾಸದಿಂದ ದೇವರ ಮುಂದೆ ಪಾಪಿಯು ನೀತಿನಿರ್ಣಯವು ಆಗುತ್ತದೆಂಬದೇ. ಮ್ಲೇಂಛರು ಅಂಧಕಾರ ವಾಗ ಮಾಡಿದ ಸ್ವಭಾವಿಕ ಪ್ರಕಾಶದಿಂದಲಾಗಲೀ ಯೆಹೂದ್ಯರು ಅವರ ಪಾಪವನ್ನು ದೊಡ್ಡದಾಗ ಮಾಡಿ ಮನಸ್ಸಿನ ತಿಳುವಿಕೆಗೆ ತರಲಿಕ್ಕಾಗಿ ಇರುವ ನ್ಯಾಯಪ್ರಮಾಣ ದಿಂದಲಾಗಲಿ, ದೇವರ ಮುಂದೆ ನೀತಿವಂತರಾಗ ಕೂಡದೆಂದು ಅಪೊಸ್ತಲನು ತೋರಿ ಸುತ್ತಾನೆ. ಆದಾಮನು ಬಿದ್ದಂದಿನಿಂದ ಮನುಷ್ಯರು ಯೆಹೂದ್ಯರೂ ಮ್ಲೇಂಛರೂ ಎಲ್ಲರೂ ಪಾಪಿಗಳಾಗಿ ಮರಣಕ್ಕೆ ಪಾತ್ರರಾಗಿದ್ದಾರೆ. ಆದರೆ ಸ್ವಂತ ಕೃಪೆಯಿಂದ ದೇವರು ನಿತ್ಯ ರಕ್ಷಣೆಯನ್ನು ಉಂಟು ಮಾಡಿ, ೨ನೇ ಆದಾಮನಾದ ತನ್ನ ಮಗನಾ ಗಿರುವ ಕ್ರಿಸ್ತ ಯೇಸುವಿನಲ್ಲಿ ಪ್ರಕಟ ಮಾಡಿದ್ದಾನೆ. ಕ್ರಿಸ್ತನ ಬಲಿಮರಣದಲ್ಲಿ ರಕ್ಷ ಣ್ಯದ ವಿಮೋಚಿಸುವಂಥಾ ಬಲವೂ ಉಂಟು. ಇದನ್ನು ಮನುಷ್ಯನು ವಿಶ್ವಾಸದಲ್ಲಿ ತನ್ನದಾಗ ಮಾಡಿ ಕೊಂಡು, ಅದರಿಂದ ಸ್ವಂತ ಪುಣ್ಯ ಯೋಗ್ಯತೆ ಏನೂ ಇಲ್ಲದೆ ನೀತಿನಿರ್ಣಯವಾಗಿ ಹೊಸ ನಿರ್ಮಾಣವೂ ದೇವರ ಮಗುವೂ ನಿತ್ಯಜೀವದ ಬಾಧ್ಯ ಸ್ತನೂ ಕ್ರಿಸ್ತನ ಸಹಬಾಧ್ಯಸ್ತನೂ ಆಗುತ್ತಾನೆ. ಇಸ್ರಯೇಲನು (ಜನಾಂಗವಾಗಿ) ಈ ರಕ್ಷಣ್ಯವನ್ನು ಬಿಸಾಡಿತು. ಮತ್ತು ಅವನ ಬಿಸಾಡಲ್ಪಡುವಿಕೆಗೆ (ಇದು ಬಹು ಕಾ ಲದ ಮೇಲೆ ತಿರುಗಿಸಲ್ಪಡುತ್ತದೆ) ತಾವೇ ಕಾರಣವಾಗಿರುತ್ತಾರೆ. ಮ್ಲೇಂಛರು ಅದ ನ್ನು ಹಿಡುಕೊಂಡರು. ಆದರೆ ತಮಗೆ ಸಂಭವಿಸಿದ ಕೃಪೆಗೋಸ್ಕರ ಗರ್ವ ಮಾ ಡ ಬಾರದು.

೨) ಅಪೊ. ಕ್ರಿ. ೨೦, ೪ ಇತ್ಯಾದಿ. ತ್ರೋಯಕ್ಕೆ ಪೌಲನು ಮುಂದೆ ಕಳು ಹಿಸಿದ ಜತೆಗಾರರು ಅವನನ್ನು ಕಾದು ಕೊಂಡಿದ್ದರು. ಪೌಲನು ಬಂದು ೭ದಿವಸ ಉಳುಕೊಂಡು, ಸಭೆಯಲ್ಲಿದ್ದಾಗ ನಿದ್ರೆಯಲ್ಲಿ ಕಿಟಿಕಿಯಿಂದ ಜಾರಿ ಹಾರಗೆ ಬಿದ್ದು ಸ ತ್ತ ಐತುಕೆ ಎಂಬವನನ್ನು ಮರಣದಿಂದ ಎಬ್ಬಿಸಿದನು. ಅಲ್ಲಿಂದ ಲೆಸ್ಬೋ ಖಿಯೋ ಸಾ ಮೋ ಎಂಬ ದ್ವೀಪಗಳನ್ನು ನೋಡಿ ಕೊಂಡು, ಮಿಲೇತಕ್ಕೆ ಪ್ರಯಾಣ ಮಾಡಿದನು. ಅಲ್ಲಿಗೆ ಎಫೆಸ್ಸದ ಸಭೆಯ ಹಿರಿಯರನ್ನು ಬರಲಿಕ್ಕೆ ಆಜ್ಞಾಪಿಸಿ ಇದ್ದನು. ಯೆರೂಸ ಲೇಮಿನಲ್ಲಿ ತನಗೆ ಬಂಧಗಳೂ ಸಂಕಷ್ಟವೂ ಪ್ರಾಪ್ತಿಯಾಗುವದೆಂಬದನ್ನು ಚನ್ನಾಗಿ ತಿಳಿದವನಾಗಿ ಬಹಳ ಕಣ್ಣೀರಿಟ್ಟು ಬುದ್ಧಿಮಾತುಗಳನ್ನು ಹೇಳಿ, ಹಿರಿಯರಿಂದ ಅ ಪ್ಪಣೆ ತಕ್ಕೊಳ್ಳಲಿಕ್ಕೆ ಮೊಣಕಾಲೂರಿ, ಅವರೆಲ್ಲರ ಸಂಗಡ ಪ್ರಾರ್ಥನೆ ಮಾಡಿದನು. ತರುವಾಯ ಅವರು ಅವನ ಸಂಗಡ ಹಡಗದ ಪರ್ಯಂತರಕ್ಕೂ ಬಂದರು. ಅದು ಅ

ವನನ್ನೂ ಅವನ ಜತೆಗಾರರನ್ನೂ ಕೈಸರೈಯಕ್ಕೆ ತಂತು. ಅಲ್ಲಿ ಯೆಹೂದ್ಯದಿಂದ ಬಂದ ಪ್ರವಾದಿಯಾದ ಅಗಬನು (§ ೧೬೩, ೧) ಪೌಲನ ನಡುಕಟ್ಟನ್ನು ತೆಗದು ತನ್ನ ಕೈಕಾಲುಗಳನ್ನು ಕಟ್ಟಿ ಕೊಂಡು ಪೌಲನಿಗೆ ಅವನು ಯೆರೂಸಲೇಮಿನಲ್ಲಿ ಬಂಧಿಸಲ್ಪಡುವನೆಂಬದನ್ನು ಆ ಸೌಜ್ಞೆಯಿಂದ ತಿಳಿಸಿದನು. ಸಹೋದರರು ಅಪೊಸ್ತಲನನ್ನು ಯೆರೂಸಲೇಮಿಗೆ ಹೋಗ ಬಾರದೆಂದು ಬಹಳವಾಗಿ ಬೇಡಿ ಕೊಂಡರೂ ನಡಿಯಲಿಲ್ಲ. ಪೌಲನು ಹೇಳಿದ್ದು: "ನೀವು ಅತ್ತು ನನ್ನ ಹೃದಯವನ್ನು ಒಡೆಯುವದೇನು. ನಾನು ಯೆರೂಸಲೇಮಿನಲ್ಲಿ ಕರ್ತನಾದ ಯೇಸುವಿಗೋಸ್ಕರ ಬಂಧಿಸಲ್ಪಡುವದಕ್ಕೆ ಮಾತ್ರವಲ್ಲ, ಸಾಯುವದಕ್ಕೂ ಸಿದ್ಧವಾಗಿದ್ದೇನೆ." ಆಗ್ಯೆ ಅವರು ಕರ್ತನ ಚಿತ್ತವೇ ಆಗಲಿ ಎಂದು ಹೇಳಿ ಸುಮ್ಮನಿದ್ದರು.



## § 171. ಯೆರೂಸಲೇಮಿನಲ್ಲಿ ಅಪೊಸ್ತಲನಾದ ಪೌಲನಿಗೆ ಸಂಭವಿಸಿದ ಬಂಧನೆ

೧) ಅಪೊ. ಕ್ರಿ. ೨೧, ೧೫ ಇತ್ಯಾದಿ. ಯೆರೂಸಲೇಮಿಗೆ ಪ್ರಯಾಣ ಮಾಡಲಿಕ್ಕೆ ಆದ ಬಹಿರಂಗವಾದ ಕಾರಣವೇನಂದರೆ: ಅವನು ವಾಗ್ದತ್ತ ಮಾಡಿದ ಪ್ರಕಾರ (ಗಲಾ. ೨, ೧೦) ಹೆಚ್ಚು ಐಶ್ವರ್ಯವುಳ್ಳ ಸಂಣ ಆಸ್ಯ ಗ್ರೇಕಗಳ ಸಭೆಗಳಲ್ಲಿ ಕೂಡಿಸಿದಂಥಾ ಹಣವನ್ನು ತರುವಂಥಾದ್ದೇ (ರೋಮಾ. ೧೫, ೨೫ ಇತ್ಯಾದಿ. ಅಪೊ. ಕ್ರಿ. ೨೦, ೩ ಇತ್ಯಾದಿ). ಯೆರೂಸಲೇಮಿಗೆ ಬಂದಾಗಲೇ (೫೮ನೇ ವರ್ಷದಲ್ಲಿ) ಪೌಲನು ಯಾಕೋಬನಿಗೂ ಅವನ ಸಂಗಡ ಕೂಡಿ ಬಂದ ಹಿರಿಯರಿಗೂ ದೇವರು ತನ್ನ ಉದ್ಯೋಗದಿಂದ ಮ್ಲೇಂಛರಲ್ಲಿ ನಡಿಸಿದಂಥಾದ್ದೆಲ್ಲಾದರ ವಿಷಯದಲ್ಲಿ ವರ್ತಮಾನ ಕೊಟ್ಟನು. ಅವರು ಇದೆಲ್ಲಾದಕ್ಕಾಗಿ ಕರ್ತನನ್ನು ಸ್ತುತಿಸಿದರು. ಆದರೆ ಯೆರೂಸಲೇಮಿನ ವಾತ್ಸಲ್ಯವುಳ್ಳ ಯೆಹೂದ್ಯಕ್ರೈಸ್ತರಲ್ಲಿ ಅವನ ಮೇಲೆ ಪ್ರತೀಕಾರತ್ವವು ಹುಟ್ಟಿಯದೆ ಎಂಬದನ್ನು ಸಹಾ ಅವನಿಗೆ ಅದಗಿಸದೆ ಅದು ಉಕ್ಕಿ ಬಾರದ ಹಾಗೆ ನಜರಾಯ ಹರಕೆ ಹೇಳಿ ಕೊಂಡ ೪ ಮಂದಿ ಬಡ ಯೆಹೂದ್ಯಕ್ರೈಸ್ತರ ಸಂಗಡ ಕೂಡಿ ಕೊಂಡು (§ ೪೩) ಬಲಿಗೆ ಬೇಕಾದ ವೆಚ್ಚವನ್ನು ಸಹಾ ಮಾಡ ಬೇಕೆಂದು ಬುದ್ಧಿ ಹೇಳಿದರು. ಪೌಲನು ನಿಷ್ಠಾನೇಮವು ಅಭಿಪ್ರಾಯವಿಲ್ಲದ ಬರೇ ಆಕಾರವೆಂದು ನೆನಸಿ ಇರದವನಾಗಿಯೂ ಮ್ಲೇಂಛರ ಅಪೊಸ್ತಲತನದ ಉದ್ಯೋಗಕ್ಕೆ ಅಡ್ಡಿಯಾಗದಿದ್ದರೆ ತಾನೇ ನಿಷ್ಠಾನೇಮವನ್ನು ಕೈಕೊಳ್ಳುವವನಾಗಿಯೂ ಇದ್ದು, ಈಗ ಸಹಾ ಸಂತೋಷವಾಗಿ ಇದಕ್ಕೆ ಒಪ್ಪಿ ಕೊಂಡನು.

೨) ಅಪೊ. ಕ್ರಿ. ೨೧, ೨೭ ಇತ್ಯಾದಿ. ಆದರೆ ಹರಕೆಯ ದಿವಸಗಳು ಮುಗಿದು ಹೋದಾಗ ಹಬ್ಬಕ್ಕೆ ಬಂದಂಥಾ ಕೆಲವು ಆಸ್ಯದ ಯೆಹೂದ್ಯರು ಅವನನ್ನು ದೇವಾಲಯದಲ್ಲಿ ಕಂಡು, ಸಮೂಹವನ್ನೆಲ್ಲಾ ಕೂಡಿಸಿ, ಕೂಗಿದ್ದು ಏನಂದರೆ: "ಪ್ರಜೆಗೂ ನ್ಯಾಯಪ್ರಮಾಣಕ್ಕೂ ಈ ಸ್ಥಳಕ್ಕೂ ವಿರೋಧವಾಗಿ ಸರ್ವರಿಗೆ ಎಲ್ಲೆಲ್ಲಿಯೂ ಬೋಧಿಸುವ ಮನುಷ್ಯನು ಇವನೇ ಮತ್ತು ಇವನು ಗ್ರೇಕರನ್ನು ಸಹಾ ದೇವಾಲಯದೊಳಗೆ ತಂದು ಈ ಪರಿಶುದ್ಧಸ್ಥಳವನ್ನು ಅಪವಿತ್ರ ಮಾಡಿದ್ದಾನೆ" ಆಗ್ಯೆ ಪುಂಡುಜನರು ಓಡಿ ಬಂದು ಅವನನ್ನು ದೇವಾಲಯದಿಂದ ಹೊರಗೆ ಎಳದು ಕೊಲ್ಲಬೇಕೆಂದಿದ್ದರು. ಆದರೆ ಅಷ್ಟರೊಳಗೆ ರೋಮಾಯ ಕಾವಲಿಯ ಸಹಸ್ರಾಧಿಪತಿಯಾದ ಲೂಸಿಯನು ಅವರ ಕ್ರೋಧಕ್ಕೆ ಅವನನ್ನು ತಪ್ಪಿಸಿ ಸಂಕೋಲೆಗಳಿಂದ ಕಟ್ಟಿಸಿ ಕೋಟೆಗೆ ತರಿಸಿದನು. ಸಹಸ್ರಾಧಿಪತಿಯ ಅನುಜ್ಞೆಯಿಂದ ಪೌಲನು ಮೆಟ್ಟುಗಳ ಮೇಲೆ ನಿಂತು ಕೊಂಡು, ಇಬ್ರಿಯಭಾಷೆಯಲ್ಲಿ ಮಾತಾಡಿ ಕೋಟೆಯ ಮುಂದೆ ಕೂಡಿ ಬಂದ ಜನರನ್ನು ಸಮಾಧಾನ ಪಡಿಸಲಿಕ್ಕೆ ನೋಡಿದನು. ತಾನು ಫರಿಸಾಯನಾಗಿ ಬೆಳದೆನೆಂಬದನ್ನೂ ಮೊದಲು ಕ್ರೈಸ್ತರನ್ನು ತಾನೇ ಹಿಂಸಿಸಿದೆನೆಂಬ ತನ್ನ ವಾತ್ಸಲ್ಯವನ್ನೂ ದಮುಸ್ಕಕ್ಕೆ ಹೋಗುವ ಮಾರ್ಗದಲ್ಲಿ ಸಂಭವಿಸಿದ ಆಶ್ಚರ್ಯವನ್ನೂ ಅವರಿಗೆ ವರ್ಣಿಸಿದನು. ಅಲ್ಲಿ ಪರ್ಯಂತರ ಅವರು ಸಮಾಧಾನದಿಂದ ಕೇಳಿದರು. ಆದರೆ ಮ್ಲೇಂಛರಿಗೋಸ್ಕರ ಕರಿಯಲ್ಪಟ್ಟೆನೆಂಬದನ್ನು ಅವನು ತಿಳಿಸಲಿಕ್ಕೆ ಆರಂಭಿಸಿದಾಗ ಆ ಪುಂಡು ಬೊಬ್ಬೆ ಹಾಕಿ, "ಇಂಥವನನ್ನು ಭೂಮಿಯಿಂದ ತೆಗದು ಹಾಕು! ಅವನು ಬದುಕುವದು ಯುಕ್ತವಲ್ಲ" ಎಂದು ಒದರಿದರು. ಆಗ್ಯೆ ಸಹಸ್ರಾಧಿಪತಿಯು ಮಾತಾಡಿದ್ದೇನೂ ತಿಳಿಯದೆ ಅವನನ್ನು ತಕ್ಕೊಂಡು ಹೋಗಿ ಅವನು ತನ್ನ ತಪ್ಪು ಏನೆಂಬದನ್ನು ಹೇಳುವ ಹಾಗೆ ಅವನನ್ನು ಹೊಡಿಯ ಬೇಕೆಂದು ಅಪ್ಪಣೆ ಕೊಟ್ಟನು. ಆದರೆ ಪೌಲನು ತಾನು ರೋಮ ಪಟ್ಣವಾಸವುಳ್ಳವನೆಂದು ಹೇಳಿದಾಗ ಅವನು ಭಯ ಪಟ್ಟು ಅಪ್ಪಣೆ ತಿರುಗಿಸಿದನು.

೩) ಅಪೊ. ಕ್ರಿ. ೨೨, ೩೦ ಇತ್ಯಾದಿ. ಮರುದಿವಸ ಸಹಸ್ರಾಧಿಪತಿಯು ಕಾರಣವನ್ನು ಚನ್ನಾಗಿ ತಿಳಿಯುವದಕ್ಕೋಸ್ಕರ ಬಂಧಿತನನ್ನು ಮಂತ್ರಿಸಭೆಯ ಮುಂದೆ ನಿಲ್ಲಿಸಿದನು. ಉತ್ತರ ಕೊಡುವಾಗ್ಯೆ ಆರಂಭದಲ್ಲಿಯೇ ಪ್ರಧಾನಯಾಜಕನಾದ ಅನನೀಯನು ಕೋಪದಲ್ಲಿ ಪ್ರತೀಕಾರವಾಗಿ ಮಾತಾಡಿದ್ದನ್ನು ನೋಡಿ ಪೌಲನು ಸಮಾಧಾನದಿಂದಲೂ ವಿಸ್ತಾರವಾಗಿಯೂ ನೀತಿನಿರ್ಣಯ ಪಡಿಸಿ ಕೊಳ್ಳುವದು ಎಷ್ಟು ಅಸಂದರ್ಭವಾಗಿರುತ್ತದೆಂದು ತಿಳುಕೊಂಡನು. ಆದ್ದರಿಂದ ಮಂತ್ರಿಸಭೆಯಲ್ಲಿ ಫರಿ

ಸಾಯರಿಗೂ ಸದುಕಾಯರಿಗೂ ಇರುವ ಭೇದವನ್ನು ಪ್ರಯೋಗಿಸಿ ತಾನು ಕ್ರಿಸ್ತನ ಉತ್ಥಾನದಲ್ಲಿ ಆಧಾರ ಹೊಂದಿದ್ದಾಗಿ ಎಲ್ಲಾ ಕಡೆಯಲ್ಲಿಯೂ ಪ್ರಸಂಗಿಸುವಂಥಾ ಸತ್ತವರ ಉತ್ಥಾನದ ಈ ಫರಿಸಾಯರ ಮೂಲಬೋಧನೆಗೆ ಒಪ್ಪಿಕೊಳ್ಳುತ್ತೇನೆಂದು ಹೇಳಿದನು. ಆ ಮಾತಿಗೆ ಬಲವಿತ್ತು. ಫರಿಸಾಯರ ಪಕ್ಷದವರು ಅವನ ಕಡೆಯವರಾದರು. ಆದರೆ ಮಂತ್ರಿಸಭೆಯಲ್ಲಿಯೇ ಬಹಳ ಭೇದ ಉಂಟಾಗಲಾಗಿ, ಸಹಸ್ರಾಧಿಪತಿಯು ಪೌಲನನ್ನು ತಕ್ಕೊಂಡು ಹೋಗಲಿಕ್ಕೆ ಅಪ್ಪಣೆ ಕೊಟ್ಟನು. ರಾತ್ರಿಯಲ್ಲಿ ಕರ್ತನು ಪೌಲನಿಗೆ ಪ್ರತ್ಯಕ್ಷವಾಗಿ "ಪೌಲನೇ! ಧೈರ್ಯವಾಗಿರು! ನೀನು ಯೆರೂಸಲೇಮಿನಲ್ಲಿ ನನ್ನ ವಿಷಯವಾಗಿ ಸಾಕ್ಷಿ ಕೊಟ್ಟ ಪ್ರಕಾರವೇ ರೋಮದಲ್ಲಿಯೂ ಸಾಕ್ಷಿ ಕೊಡ ಬೇಕು!" ಅಂದನು. ಆದರೆ ಯೆಹೂದ್ಯರಲ್ಲಿ ಕೆಲವರು ತಾವು ಪೌಲನನ್ನು ಕೊಲ್ಲುವ ಪರ್ಯಂತರ ಉಣ್ಣುವದೂ ಕುಡಿಯುವದೂ ಇಲ್ಲವೆಂದು ಶಪಥವನ್ನು ಮಾಡಿಕೊಂಡರು. ಅದನ್ನು ಪೌಲನು ತನ್ನ ಅಳಿಯನ ಪರಿಮುಖವಾಗಿ ತಿಳುಕೊಂಡು ಈ ಯೌವನಸ್ಥನನ್ನು ಸಹಸ್ರಾಧಿಪತಿಯ ಬಳಿಗೆ ಕಳುಹಿಸಿದನು. ಮತ್ತು ಈತನು ಬರುವ ರಾತ್ರಿಯಲ್ಲಿಯೇ ಬಂಧಿತನನ್ನೂ ೨೦೦ ರಾಣುವೆಯವರನ್ನೂ ೭೦ ರಾಹುತರನ್ನೂ ೨೦೦ ಭಲ್ಲೆಯವರನ್ನೂ ಸಿದ್ಧ ಮಾಡಿಸಿ ಪೌಲನನ್ನು ಇವರ ಸಂಗಡ ಪ್ರತಿಧೊರೆಯಾದ ಫೇಲಿಕ್ಸನ ಬಳಿಗೆ ಕೈಸರೈಯಕ್ಕೆ ಕಳುಹಿಸಿ ಬಿಟ್ಟನು.



## § 172. ಪೌಲನು ಫೆಲಿಕ್ಸ ಫೆಸ್ತ ಅಗ್ರಿಪ್ಪರ ಮುಂದೆ

೧) ಅಪೊ. ಕ್ರಿ. ೨೪, ೧ ಇತ್ಯಾದಿ. ಪ್ರಧಾನಯಾಜಕನಿಗೆ ಪೌಲನನ್ನು ತನ್ನ ಕೈಯಲ್ಲಿ ಹೊಂದುವದೇ ಮುಖ್ಯವಾಗಿತ್ತು. ಆದ್ದರಿಂದ ೫ ದಿವಸಗಳ ಮೇಲೆ ಅವನು ಪ್ರಸಂಗಿಯಾದ ತೆರ್ತುಲ್ಲನನ್ನು ಕರಕೊಂಡು ಕೈಸರೈಯಕ್ಕೆ ಹೋಗಿ, ಪ್ರತಿಧೊರೆಗೆ ಈ ಸಂಗತಿಯು ದೇವಾಲಯದ ಅಧಿಕಾರಕ್ಕೆ ಒಳಗಾಗಿ ಇರುವಂಥಾದ್ದಾಗಿ ಹೇಳಿದನು (ದೇವಾಲಯದ ಅಧಿಕಾರವು ಮಂತ್ರಿಸಭೆಗೆ ಇತ್ತು). ಆದರೆ ಪೌಲನು ಸಂಕ್ಷೇಪವಾಗಿಯೂ ಸ್ಪಷ್ಟವಾಗಿಯೂ ಈ ಸಂಗತಿಯು ಹ್ಯಾಗಿರುತ್ತದೆಂಬದನ್ನು ಸತ್ಯದ ಪ್ರಕಾರ ತಿಳಿಸಿದನು. ಫೆಲಿಕ್ಸನಿಗೆ ಅವನು ನಿರಪರಾಧಿ ಎಂಬದು ನಿಶ್ಚಯವಾಗಿತ್ತು. ಆದರೆ ಪೌಲನು ತನಗೆ ಹಣ ಕೊಟ್ಟಾನೆಂದು ನಿರೀಕ್ಷಿಸುತ್ತಾ ಇದ್ದದರಿಂದ ಅವನನ್ನು ಪಹರೆಯಲ್ಲಿ ಇಟ್ಟನು. ಆದರೂ ಅವನ ಬಳಿಗೆ ಬಂದು ಹೋಗಲಿಕ್ಕೆ ಜನರಿಗೆ ಅಪ್ಪಣೆ ಇತ್ತು. ಅಪೊಸ್ತಲನು ಬಲವುಳ್ಳ ಮನುಷ್ಯನೆಂದು ಫೆಲಿಕ್ಸನು

ತಿಳುಕೊಂಡನು. ಮತ್ತು ಅವನನ್ನು ಒಂದೊಂದು ಸಾರಿ ತನ್ನ ಬಳಿಗೆ ಕರೇ
ಕಳುಹಿಸಿ ಕ್ರಿಸ್ತನ ಮೇಲಿರುವ ವಿಶ್ವಾಸದ ವಿಷಯವಾಗಿ ಮಾತಾಡಿದನು. ಆದರೆ
ಅವನ ಲೋಕಬುದ್ಧಿಯ ಅಭಿಲಾಷೆಯು ಜೈಸಿತು. ಒಂದು ಸಾರಿ ಪೌಲನು ಅವ
ನಿಗೂ ಹೆರೋದನೆಂಬ ಮೊದಲನೇ ಅಗ್ರಿಪ್ಪನ ಮಗಳಾಗಿ ತನ್ನ ಮೊದಲನೇ ಗಂಡನನ್ನು
ಅವನಿಗೋಸ್ಕರವಾಗಿ ಬಿಟ್ಟು ಬಂದ ಅವನ ಹೆಂಡತಿಯಾದ ದ್ರುಸಿಲ್ಲಳಿಗೂ ನೀತಿಯ
ನ್ನೂ ಮಿತಿಯನ್ನೂ ಬರುವ ನ್ಯಾಯತೀರ್ವಿಕೆಯನ್ನೂ ಕುರಿತು ಭದ್ರವಾಗಿ ಪ್ರಸಂಗ
ಮಾಡಲಾಗಿ ಫೆಲಿಕ್ಸನು ಹೆದರಿ ಹೇಳಿದ್ದು: "ಈಗ ಹೋಗು, ಸಮಯ ಸಿಕ್ಕಿದರೆ
ನಿನ್ನನ್ನು ಕರಿಸುವೆನು." ಹೀಗೆ ೨ ವರ್ಷಗಳು ಕಳದವು. ಮತ್ತು ಫೆಲಿಕ್ಸನಿಗೆ ಬದ
ಲಾಗಿ ಪೋರ್ಕಿಯ ಫೆಸ್ತನು ಬಂದನು.

೨) ಅಪೊ. ಕ್ರಿ. ೨೫, ೧ ಇತ್ಯಾದಿ. ಫೆಸ್ತನು ಯೆಹೂದ್ಯರ ಅಪೇಕ್ಷೆಯ ಪ್ರಕಾರ
ಪೌಲನನ್ನು ಮಂತ್ರಿಸಭೆಯ ಮುಂದೆ ನಿಲ್ಲಿಸಲಿಕ್ಕೆ ಮನಸ್ಸುಳ್ಳವನಾಗಿರಲಾಗಿ ಪೌಲ
ನು ರೋಮಪಟ್ಣವಾಸದ ಆಧಾರದಿಂದ ಕೈಸರನಿಗೆ ವಿಜ್ಞಾಪನೆ ಮಾಡಿದ್ದೇನೆಂದು
ಹೇಳಿದನು. ಈ ಪ್ರಕಾರ ಯೆಹೂದ್ಯರ ತಂತ್ರಗಳೆಲ್ಲಾ ತೀರಿದವು. ಕೆಲವು ದಿವಸದ
ತರುವಾಯ ಅರಸನಾದ ೨ನೇ ಅಗ್ರಿಪ್ಪನು (§ ೧೦೯, ೨) ತನ್ನ ಸಹೋದರಿಯಾ
ದ ಬೆರ್ನಿಕೆಯ ಸಹಿತವಾಗಿ ಕೈಸರ್ಯೆಯಕ್ಕೆ ಹೊಸ ಪ್ರತಿಧಾರೆಯನ್ನು ನೋಡಲಿಕ್ಕಾಗಿ
ಬಂದನು. ಫೆಸ್ತನು ಪೌಲನ ಸಂಗಡ ನಡದ ವ್ಯವಹಾರವನ್ನೆಲ್ಲಾ ತಿಳಿಸಿದನು.
ಅರಸನು ಬಂಧಿತನನ್ನು ತಾನು ಸಹಾ ಕೇಳ ಬೇಕೆಂದು ಅಪೇಕ್ಷಿಸಲಾಗಿ ಫೆಸ್ತನು ಮರು
ದಿವಸ ನ್ಯಾಯಸ್ಥಾನಕ್ಕೆ ಕರಿಸಿ, ಅರಸನ ಮುಂದೆ ನಿಲ್ಲಿಸಿದನು. ಪೌಲನು ಅರಸನಿಗೆ
ತನ್ನ ವೃತ್ತಾಂತವನ್ನೆಲ್ಲಾ ಅಂದರೆ ಫರಿಸಾಯನಾಗಿ ವಿದ್ಯ ಕಲಿತದ್ದನ್ನೂ ಸಭೆಯ
ನ್ನು ಹಿಂಸಿಸಿದ ತನ್ನ ವಾತ್ಸಲ್ಯವನ್ನೂ ತನ್ನ ಮಾನಸಾಂತರದ ಅದ್ಭುತವನ್ನೂ ಕರ್ತ
ನ ವಿಮೋಚನೆಯ ಮರಣದ ವಿಷಯವಾಗಿಯೂ ಉತ್ಥಾನದ ವಿಷಯವಾಗಿಯೂ
ಮ್ಲೇಂಛರಲ್ಲಿ ತಾನು ಮಾಡುವ ಪ್ರಸಂಗವನ್ನು ಕುರಿತೆಲ್ಲಾ ವಿವರಿಸಿದನು. ಆಗ್ಗೆ
ಫೆಸ್ತನು ಬಹು ಶಬ್ದದಿಂದ — "ಪೌಲನೇ ಮರುಳಾಗಿದ್ದೀ, ಬಹು ವಿದ್ಯೆಯು (ಅಂದರೆ
ರಬ್ಬೀಯ ಯೆಹೂದ್ಯ ವಿದ್ವಾಂಸತನವು) ನಿನ್ನನ್ನು ಮರಳುಗೊಳಿಸುತ್ತದೆ" ಅಂದ
ನು. ಅದಕ್ಕೆ ಪೌಲನು — "ಶ್ರೀಮತ್ ಫೆಸ್ತನೇ ನಾನು ಮರುಳಾಗಲಿಲ್ಲ, ಸತ್ಯವೂ
ಸ್ವಸ್ಥ ಬುದ್ಧಿಯೂ ಆದ ವಾಕ್ಯಗಳನ್ನು ನುಡಿಯುತ್ತೇನೆ" ಎಂದು ಹೇಳಿದನು.
ತರುವಾಯ ಅರಸನನ್ನು ಸಾಕ್ಷಿಯಾಗ ಮಾಡಿ, ಅರಸನಾದ ಅಗ್ರಿಪ್ಪನೇ ಪ್ರವಾದಿ
ಗಳಲ್ಲಿ ವಿಶ್ವಾಸಿಸುತ್ತೀಯೋ ಎಂದು ಹೇಳಿ, ಅವರು ಕ್ರಿಸ್ತನ ಶ್ರಮ ಉತ್ಥಾನಗಳ

ವಿಷಯವಾಗಿ ಪ್ರವಾದಿಸಿದ್ಧಾರೆಂದು ಸೂಚಿಸಿದಾಗ ಇವನು ದ್ವಯಾರ್ಥವಾಗಿ ಹೇಳಿದ್ದು: "ನಾನು ಕ್ರಿಸ್ತನವನಾಗುವ ಹಾಗೆ ನನ್ನನ್ನು ಸ್ವಲ್ಪ ಕಡಿಮೆಯಾಗಿ ಸಮ್ಮತಿ ಪಡಿಸುತ್ತಿ." ಆದರೆ ಫೆಸ್ತನೂ ಅಗ್ರಿಪ್ಪನೂ ಅವನು ಮರಣಬಂಧಗಳಿಗೆ ಪಾತ್ರ ಕೂಡುವಂಥಾದ್ದನ್ನು ಏನೂ ಮಾಡಲಿಲ್ಲವೆಂಬದಕ್ಕೂ ಅವನು ಕೈಸರನಿಗೆ ವಿಜ್ಞಾಪನೆ ಮಾಡಿದ್ದೇನೆಂದು ಉಚ್ಚರಿಸದೆ ಇದ್ದನಾದರೆ ಅಡ್ಡಿ ಇಲ್ಲದೆ ಅವನನ್ನು ಬಿಡುಗಡೆ ಪಡಿಸ ಬಹುದೆಂಬದಕ್ಕೂ ಒಪ್ಪಿ ಕೊಂಡರು.



## § 173. ರೋಮದಲ್ಲಿ ಪೌಲನ ಬಂಧನ, ಎಫೆಸ್ಯರ ಕೊಲೊಸ್ಸೆಯರ ಫಿಲೆಮೋನನ ಫಿಲಿಪ್ಪಿಯರ ಪತ್ರಿಕೆಗಳು

೧) ಅಪೊ. ಕ್ರಿ. ೨೭, ೧ ಇತ್ಯಾದಿ. ಹಡಗವು ಅಲ್ಲಿಗೆ ಹೋಗುವಂಥಾದ್ದು ಸಿಕ್ಕಿದ ಕೂಡಲೇ ಪ್ರತಿಥಾರೆಯು ಪೌಲನನ್ನೂ ಬೇರೆ ಬಂಧಿತರನ್ನೂ ದಂಡಿನವರ ಸಂಗಡ ರೋಮಕ್ಕೆ ಕಳುಹಿಸಿದನು. ಲೂಕನು ಒಂದು ವೇಳೆ ಬೇರೆ ಜತೆಕೆಲಸದವರು ಸಹಾ ಅವನೊಡನೆ ಹೋದರು. ವ್ಯಾಪಾರದ ಹಡಗದಲ್ಲಿ ಅವರು ಮೊದಲು ಸಣ್ಣ ಆಸ್ಯದ ಲೂಕ್ಯಕ್ಕೆ ಹೋದರು. ಅಲ್ಲಿಂದ ಸಮಯವು ಒಳ್ಳೇದಾಗಿರದೆ ಇದ್ದರೂ ಪೌಲನ ಖಂಡಿತವಾದ ಗದರಿಕೆಗೆ ಕಿವಿ ಕೊಡದೆ ಬಹಳ ಗಂಡಾಂತ್ರವುಳ್ಳ ಸಮುದ್ರ ಪ್ರಯಾಣವನ್ನು ಇತಾಲ್ಯಕ್ಕೆ ಮಾಡಿದರು. ಹಡಗದವರೆಲ್ಲರೂ ಜೀವದ ಆಶೆ ಬಿಟ್ಟಿದ್ದರು. ಆದರೆ ಪೌಲನಿಗೆ ದೇವರ ದೂತನು ಪ್ರತ್ಯಕ್ಷವಾಗಿ—"ಪೌಲನೇ ಭಯ ಪಡ ಬೇಡ, ನೀನು ಕೈಸರನ ಮುಂದೆ ನಿಲ್ಲ ಬೇಕು. ಮತ್ತು ಇಗೋ ದೇವರು ನಿನ್ನ ಸಂಗಡ ಹಡಗದಲ್ಲಿರುವವರೆಲ್ಲರನ್ನು ನಿನಗೆ ದಯಪಾಲಿಸಿದ್ಧಾನೆ" ಎಂದು ಹೇಳಿ ಇದ್ದಪರಿಂದ ಅವನು ಆದರಣೆಯಿಂದ ಅವರ ಕೋರಿಕೆಯನ್ನು ಸ್ವಲ್ಪ ಘಟ್ಟಿ ಮಾಡಿದನು. ಕಡೆಯಲ್ಲಿ ಹಡಗವು ಮೆಲೀತೆ (ಮಲ್ತಾ) ಎಂಬ ದ್ವೀಪದ ಹತ್ತರ ನೆಲಕ್ಕೆ ಹತ್ತಿತು. ಹಡಗದಲ್ಲಿದ್ದವರೆಲ್ಲರೂ ರಕ್ಷಿಸಲ್ಪಟ್ಟರು. ದ್ವೀಪದವರು ಅವರಿಗೆ ಸ್ನೇಹವನ್ನು ತೋರಿಸಿದರು. ಪೌಲನನ್ನು ಅಕಸ್ಮಾತ್ತಾಗಿ ಒಂದು ವಿಷಸರ್ಪವು ಕಚ್ಚಿದಾಗ ಅವರು ಇವನು ಕೊಲೆಗಾರನಾಗಿರ ಬೇಕು; ಇಲ್ಲಿ ಸಹಾ ಶಿಕ್ಷೆಗೆ ತಪ್ಪಿಸಿ ಕೊಳ್ಳ ಕೂಡದೆಂದು ನೆನಸಿದರು. ಆದರೆ ಅವನು ಸರ್ಪವನ್ನು ಬೆಂಕಿಯೊಳಗೆ ಜಾಡಿಸಿ ಸ್ವಸ್ಥವಾಗಿಯೇ ಇರಲಾಗಿ (ಮಾರ್ಕ. ೧೬, ೧೮.) ಅವನು ದೇವರಾಗಿರ ಬೇಕೆಂದು

ನೆನಸಿದರು. ದ್ವೀಪದಲ್ಲಿರುವ ರೋಮಾಯ ಉದ್ಯೋಗಸ್ಥನಾದ ಪೊಪ್ಲಿಯನೆಂಬವ
ನು ಅವರನ್ನು ತನ್ನ ಮನೆಯಲ್ಲಿ ಅಂಗೀಕರಿಸಿದನು. ಪೌಲನು ಪ್ರಾರ್ಥನೆಯಿಂದ
ಅವನ ತಂದೆಯನ್ನೂ ಬೇರೆ ಅನೇಕ ರೋಗಿಗಳನ್ನೂ ಸ್ವಸ್ಥ ಮಾಡಿದನು. ೩ ತಿಂಗ
ಳಾಗಿ ಹಿಮಕಾಲ ತೀರಿದ ಮೇಲೆ ತಿರಿಗಿ ಪ್ರಯಾಣ ಮಾಡಿ ಪೊತಿಯೋಲದಲ್ಲಿ ಇ
ಳಿದರು. ಅಲ್ಲಿ ಕ್ರೈಸ್ತ ಸಭೆ ಇತ್ತು. ಅವರ ಸಂಗಡ ೭ ದಿನ ಇದ್ದರು. ರೋಮದ
ಸಭೆಯವರು ಕೆಲಬರು ೨ ದಿನದ ಮಾರ್ಗವಾಗಿ ಅವರಿಗೆ ಎದುರಾಗಿ ಬಂದರು.

೨) ಅಪೊ. ಕ್ರಿ. ೨೮, ೧೬ ಇತ್ಯಾದಿ. ರೋಮದಲ್ಲಿ ಪೌಲನನ್ನು ಕೈಸರನ
ಸ್ವಂತ ಕಾವಲಿಯವರ ಮುಖ್ಯಸ್ಥನಿಗೆ (ಸೈನ್ಯಾಧಿಪತಿಗೆ) ಒಪ್ಪಿಸಿ ಕೊಟ್ಟರು (ಶುಮಾ
ರು ೬೧ನೇ ವರ್ಷದಲ್ಲಿ). ಇವನು ಒಂದು ವೇಳೆ ಪ್ರತಿಧೋರೆಯು ಪೌಲನ ವಿಷಯ
ವಾಗಿ ಒಳ್ಳೇದನ್ನೇ ಬರೆದಿದ್ದದರಿಂದ ಪೌಲನಿಗೆ ಪ್ರತ್ಯೇಕ ಮನೆಯಲ್ಲಿ ಇರಲಿಕ್ಕೂ ಒ
ಬ್ಬ ರಾಣುವೆಯವನ ಸಂಗಡ ಬೇಕಾದ್ದಲ್ಲಿ ಹೋಗಲಿಕ್ಕೂ ಬೋಧಿಸಲಿಕ್ಕೂ ಅನುಜ್ಞೆ
ಕೊಟ್ಟನು. ೩ ದಿವಸಗಳ ಮೇಲೆ ಅವನು ಅಲ್ಲಿರುವ ಯೆಹೂದ್ಯಸಭೆಯ ಹತ್ತಿರ
ಹೋದನು. ಇವರು ಅವನ ನಿರಪರಾಧತ್ವಕ್ಕೂ ಪ್ರಸಂಗಕ್ಕೂ ಮನಸ್ಸು ಕೊಡಲಿಲ್ಲ;
ಆದರೂ ಅವರೊಳಗಿಂದ ಕೆಲವರನ್ನು ತಿರಿಗಿಸಲಿಕ್ಕೆ ಅವನಿಗೆ ಕೈಕೂಡಿ ಬಂತು. ವ್ಯವ
ಹಾರ ಕೆಲವು ವರ್ಷಗಳ ಪರ್ಯಂತರ ನಡಿಯಿತು. ಈ ಕಾಲದಲ್ಲಿ ಪೌಲನು ಅ
ಡ್ಡಿ ಇಲ್ಲದೆ ವಾತ್ಸಲ್ಯದಿಂದಲೂ ಸಂತೋಷದಿಂದಲೂ ಸುವಾರ್ತೆಯನ್ನು ಪ್ರಸಂಗಿಸು
ತ್ತಾ ತಾನು ಸ್ಥಾಪಿಸಿದ ಸಭೆಗಳಿಗೆ ಕಾಗದಗಳನ್ನು ಬರಿಯುತ್ತಾ ವರ್ತಮಾನವನ್ನು
ಹೊಂದುತ್ತಾ ಇದ್ದನು.

ಪರಿಶಿಷ್ಟ. ಈ ಮೊದಲನೇ ರೋಮಾಯರ ಬಂಧನಕಾಲದಲ್ಲಿ ಎಫೆಸ್ಯರ ಕೊ
ಲೊಸ್ಸೆಯರ ಫಿಲೆಮೋನನ ಫಿಲಿಪ್ಪಿಯರ ಪತ್ರಿಕೆಗಳು ಬರಿಯಲ್ಪಟ್ಟಿರಬೇಕು. ಇವುಗಳಲ್ಲಿ
ಪೌಲನು ತಾನು ಬಂಧಿತನೆಂದು ಹೇಳುತ್ತಾನೆ. ಫಿಲಿಪ್ಯರ ಪತ್ರಿಕೆಯಲ್ಲಿ ಬಿಡುಗಡೆಯು
ಸಮೀಪವಾಗಿರುತ್ತದೆಂದು ನಿಶ್ಚಯವಾಗಿ ಕೋರುತ್ತಾನೆ. ಪ್ರೊಕೊನ್ಸುಲನ ಕೆಳಗೆ
ಇರುವಂಥಾ ಆಸ್ಯದ ಕ್ರೈಸ್ತರಿಗೆ, ಮುಖ್ಯವಾಗಿ ಕೊಲೊಸ್ಸೆಯ ಸಭೆಗೆ, ಆ ಸಮಯ
ದಲ್ಲಿ ಒಂದು ತರದ ಯೆಹೂದಿಯ ಸುಳ್ಳುಬೋಧಕರಿಂದ ದೊಡ್ಡ ಗಂಡಾಂತರವು
ಬರಲಿಕ್ಕಿತ್ತು. ಇವರು ನೇಮದ ಕ್ರಿಯೆಗಳಿಲ್ಲದೆ ವಿಶ್ವಾಸದಿಂದಲೇ ನೀತಿನಿರ್ಣಯ
ಆಗುತ್ತದೆಂಬ ಅಪೊಸ್ತೋಲಿಕಬೋಧನೆಗೆ ಪೂರ್ಣ ಹಗೆಗಾರರಾಗಿ, ಅದರ ಸ್ಥಳದಲ್ಲಿ
ಕ್ರಿಸ್ತನ ಸತ್ಯ ದೈವತ್ವವನ್ನು ಅಲ್ಲಗಳೆದು, ತಾನೇ ಮಾಡಿ ಕೊಂಡ ಮನೋದೀನ
ತ್ವವನ್ನೂ ದೂತರ ಆತ್ಮಿಕತ್ವವನ್ನೂ (ಅಂದರೆ ದೂತ ಸಮಾನ ಪರಿಶುದ್ಧತ್ವವನ್ನೂ)

ಸ್ವನೀತಿಯು ದೇಹದಂಡನೆಯನ್ನೂ ಆತ್ಮಿಕ ವಿಪರೀತಜ್ಞಾನವನ್ನೂ ದೇವಜ್ಞಾನವೆಂ
ಬ ಮರಳುತನ ಕೂಡಿಸಿದ ಯೆಹೂದ್ಯತನವನ್ನೂ ಸ್ಥಾಪಿಸಲಿಕ್ಕೆ ಇಚ್ಛೈಸಿದರು (ಕೊ
ಲೊ. ೨, ೮. ೧೬. ೧೮. ೨೩). ಈ ಮೋಸದ ಸುಳ್ಳುಬೋಧನೆಗಳಿಗೆ ಎದುರಾಗಿ
ಪೌಲನು ಒಂದೇ ಸಮಯದಲ್ಲಿ ಬರದಂಥಾ ಅಭಿಪ್ರಾಯದಲ್ಲಿ ಬಹಳ ಸಂಬಂಧವುಳ್ಳಂ
ಥಾ ಎಫೆಸ್ಯರ ಮತ್ತು ಕೊಲೊಸ್ಸೆಯರ ೨ ಪತ್ರಿಕೆಗಳನ್ನು ಕಳುಹಿಸಿದನು.

ಎಫೆಸ್ಯರ ಪತ್ರಿಕೆಯು ಸಣ್ಣಾಸಿಯದ ಸಮಸ್ತ ಮ್ಲೇಂಛ ಕ್ರೈಸ್ತ ಸಭೆಗಳಿಗೆ ಬ
ರದ ಸರ್ವಪತ್ರಿಕೆ ಎಂದು ಕಾಣುತ್ತದೆ. ಇದರಲ್ಲಿ ಮುಖ್ಯವಾಗಿ ವಿರೋಧಿಗಳನ್ನು
ಖಂಡ್ರಿಸುವದಕ್ಕೆ ಪ್ರಯತ್ನ ಮಾಡದೆ, ಕ್ರೈಸ್ತತ್ವವು ಸತ್ಯವಾದಂಥಾ ದಿವ್ಯವಾದಂಥಾ
ಮನುಷ್ಯಜಾತಿಯನ್ನು ನೀತಿನಿರ್ಣಯಿಸುವ ಮತ್ತು ಪರಿಶುದ್ಧ ಮಾಡುವಂಥಾ ಜ್ಞಾನ
ವಾಗಿರುತ್ತದೆಂಬದಾಗಿ ತೋರಿಸಿ, ಸಭೆಯು ಕ್ರಿಸ್ತನ ಶರೀರವಾಗಿರುತ್ತದೆಂದು ನಿರ್ಣ
ಯಿಸಿ, ಕ್ರೈಸ್ತರ ಮುಖ್ಯ ಕಟ್ಟಳೆಗಳು ಏನೆಂದು ಹೇಳಿ ಇವುಗಳಲ್ಲಿ ವಿವಾಹವು ಕ್ರಿ
ಸ್ತನು ಸಭೆಗೆ ಏನಾಗಿರುತ್ತಾನೋ ಅದರ ರೂಪವಾಗಿರುತ್ತದೆಂದು ತಿಳಿಸಿ, ಅಂಧಕಾರ
ದ ಬಲವು ಮೇಲೆ ಬೀಳುವಾಗ್ಯೆ ಪ್ರತೀಕಾರವಾಗಿ ಆತ್ಮಿಕ ಆಯುಧಸನ್ನಾಹವುಳ್ಳವ
ರಾಗಿರ ಬೇಕೆಂದು, ಬೋಧಿಸಿ ಸಮಾಪ್ತಿ ಮಾಡುತ್ತಾನೆ.

ಕೊಲೊಸ್ಸೆಯರ ಪತ್ರಿಕೆಯಲ್ಲಿ (ಈ ಸಭೆಯು ಅಪೊಸ್ತಲನ ಶಿಷ್ಯನಾದ
ಎಪಫ್ರನಿಂದ ಸ್ಥಾಪಿಸಲ್ಪಟ್ಟಿತೆಂದು ತೋರುತ್ತದೆ, ಕೊಲೊ. ೧, ೭) ಇವನು ಅ
ಪೊಸ್ತಲನಿಗೆ ರೋಮಕ್ಕೆ ವರ್ತಮಾನ ತಂದನು. ಮತ್ತು ಅಲ್ಲಿ ತಾನೇ ಬಂಧನದಲ್ಲಿ
ಬಿದ್ದನು (ಫಿಲೆಮೋನ್. ೨, ೩). ಪೌಲನು, ಕ್ರಿಸ್ತನು ಅದೃಷ್ಯನಾದ ದೇವರ ದೃಷ್ಯ
ಪ್ರತಿರೂಪವೂ ಎಲ್ಲಾದರ ನಿರ್ಮಾಣಿಕನೂ ದೇವರಿಗೂ ಮನುಷ್ಯರಿಗೂ ಒಬ್ಬನೇ
ಮಧ್ಯಸ್ಥನೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಎಲ್ಲಾ ಆತ್ಮಗಳಿಗೆ ತಲೆ
ಯೂ ಎಲ್ಲಾ ಜ್ಞಾನದ ಬುಗ್ಗೆಯೂ ಆಗಿರುತ್ತಾನೆಂದು ಹೇಳಿ ಮೇಲೆ ಹೇಳಿದ ಸುಳ್ಳು
ಬೋಧಕರಿಗಾಗಿ ಕೂಲಂಕುಶವಾಗಿಯೂ ಸ್ಪಷ್ಟವಾಗಿಯೂ ಗದರಿಸುತ್ತಾನೆ. ಕೊಲೊಸ್ಸೆ
ಯಲ್ಲಿ ಕ್ರೈಸ್ತನಾಗಿರುವ ಫಿಲೆಮೋನನ ಪತ್ರಿಕೆಯಲ್ಲಿ ಒನೇಸಿಮನೆಂಬ ಒಬ್ಬ
ದಾಸನಿಗೋಸ್ಕರ ಪೂರ್ಣ ಹೃದಯ ಮನಃಪೂರ್ವಕವಾಗಿಯೂ ವಿನಯವಾಗಿಯೂ
ಮೃದುಮನಸ್ಸಾಗಿಯೂ ಪೌಲನು ಬೇಡಿ ಕೊಳ್ಳುತ್ತಾನೆ. ದಾಸನು ಫಿಲೆಮೋನನಿಂ
ದ ಓಡಿ ಹೋದ ಮೇಲೆ ರೋಮದಲ್ಲಿ ಅಪೊಸ್ತಲನಿಂದ ತಿರುಗಿಸಲ್ಪಟ್ಟಿದ್ದನು. ಅವ
ನನ್ನು ಪೌಲನು ಈಗ ಅವನ ಯಜಮಾನನ ಬಳಿಗೆ ತಿರಿಗಿ ಕಳುಹಿಸಿದನು. ಅಪೊ
ಸ್ತಲನ ಸಂಗಡಿಗನಾದ ತುಖಿಕನು ಈ ೩ ಪತ್ರಿಕೆಗಳನ್ನು ಮುಟ್ಟಿಸಿದನು. ಫಿಲಿಪ್ಪಿ

ಯ ಸಭೆಯು (ಸಮ ನೋಡು § ೧೬೬, ೨) ಸ್ಥಾಪಿಸಲ್ಪಟ್ಟಂದಿನಿಂದ ಅಪೊಸ್ತಲನನ್ನು ವಿಶೇಷವಾಗಿ ಮಮತೆ ಮಾಡಿದರೆಂಬದು ಪ್ರಖ್ಯಾತವಾಗಿತ್ತು. ಮತ್ತು ಬಹಳ ಸರ್ತಿ ಮತ್ತು ಈಗ ಸಹಾ ರೋಮಕ್ಕೆ ಎಫಫ್ರೊದಿತನ ಪರಿಮುಖವಾಗಿ ಹಣ ಕಳುಹಿಸಿ ಇದ್ದರು (೨ ಕೊರಿ. ೧೧, ೯. ಫಿಲಿ. ೪, ೧೫—೧೮). ಆದರೆ ಎಫಫ್ರೊದಿತನು ರೋಮದಲ್ಲಿ ಮರಣಸಂಕಟದಲ್ಲಿ ಬಿದ್ದನು. ಮತ್ತು ಸಭೆಯು ಇದಕ್ಕಾಗಿ ಬಹಳ ದುಖ್ಖಿತವಾಗಿರಲಾಗಿ ಪೌಲನು ಅವನು ಸ್ವಸ್ಥವಾದ ಕೂಡಲೇ ಅವನನ್ನು ತಿರಿಗಿ ಕಳುಹಿಸಿ ಸಭೆಗೆ ಈ ಪತ್ರಿಕೆಯನ್ನು ಸಹಾ ಬರದನು. ಇದರಲ್ಲಿ ಕ್ರಿಸ್ತನನ್ನು ನಂಬಿಕಸ್ತರಾಗಿ ಘಟ್ಟಿ ಹಿಡುಕೊಳ್ಳ ಬೇಕೆಂದು ಎಚ್ಚರಿಸಿ ಯೆಹೂದಿಯ ಸುಳ್ಳುಬೋಧಕರ ಸುಳ್ಳುಬೋಧನೆಯು ಎಲ್ಲಾ ಕಡೆಯಲ್ಲಿಯೂ ಹಬ್ಬುವದರಿಂದ ಅದಕ್ಕಾಗಿ ಗದರಿಸುತ್ತಾನೆ.

## § 174. ಮುಂದೆ (ತಿಮೊಥೇಯನ ೨ನೇ ಪತ್ರಿಕೆ ಮತ್ತು ಇಬ್ರಿಯರ ಪತ್ರಿಕೆ)

ಬಂಧನೆಯ ೨ನೇ ವರ್ಷವು ತೀರಿದ ಮೇಲೆ ಪೌಲನಿಗೆ ಹೆಚ್ಚು ಕಷ್ಟ ಬಂತು. (ಒಂದು ವೇಳ್ಯ ಅವನ ಮೇಲೆ ತಪ್ಪು ಹಾರಿಸುವ ಯೆಹೂದ್ಯರು ಬಂದದರಿಂದ) ಇಷ್ಟು ವರೆಗೆ ಅವನ ಸ್ನೇಹಿತರಾಗಿದ್ದವರಲ್ಲಿ ಕೆಲವರು ಹಿಂಜಾರಿದರು; ಹಾಗೆ ದೇಮನು ಇತ್ಯಾದಿ (೨ ತಿಮೊ. ೪, ೧೦. ೧೪. ೧೬). ಕೈಸರನ ಮುಂದೆ ಆದ ಅವನ ಮೊದಲನೇ ಪ್ರತ್ಯುತ್ತರದಲ್ಲಿ (೨ ತಿಮೊ. ೪, ೧೬. ೧೭.) ಅವನಿಗೆ ಕಷ್ಟವಾಯಿತು. ಆದರೂ ಇನ್ನೂ ಖಂಡಿತವಾಗಿ ತೀರ್ಪು ಆಗಲಿಲ್ಲ. ಸ್ವಲ್ಪ ಕಾಲದ ಮೇಲೆಯೇ ತಿಮೊಥೇಯನಿಗೆ ೨ನೇ ಪತ್ರಿಕೆಯನ್ನು ಬರದನು. ಇದರಲ್ಲಿ ಬೇಗ ಸಾಕ್ಷಿಮರಣವು ಬರುವದೆಂಬ ಖಂಡಿತವಾದ ನಿರೀಕ್ಷಣೆಯನ್ನು ತಿಳಿಸಿ, ತಿಮೊಥೇಯನು ಬೇಗ ರೋಮಕ್ಕೆ ಬರ ಬೇಕೆಂದು ಅವನನ್ನು ಬಹಳವಾಗಿ ಬೇಡಿ ಕೊಳ್ಳುತ್ತಾನೆ (೨ ತಿಮೊ. ೪, ೬—೯. ೪, ೨೧). ಬರುವ ವರ್ಷದ ಆರಂಭದಲ್ಲಿ (೬೪) ಒಂದು ವೇಳ್ಯ ಮರಣ ನಿರ್ಣಯವಾಯಿತು. ಮತ್ತು ಕತ್ತಿಯಿಂದ ಕೊಲ್ಲಲ್ಪಟ್ಟನು.

ಪರಿಶಿಷ್ಟ ೧. ಪೌಲನು ಮೊದಲನೇ ಬಂಧನೆಯಿಂದ ಬಿಡುಗಡೆಯಾಗಿ ೨ನೇ ಸಾರಿ ಬಂಧನೆಯಲ್ಲಿ ಬಿದ್ದು ೬೭ನೆಯಲ್ಲಿ ಕೊಲ್ಲಲ್ಪಟ್ಟನೆಂಬದು ತಪ್ಪಾಗಿರುತ್ತದೆಂತ ಕಾಣುತ್ತದೆ.

ಪರಿಶಿಷ್ಟ ೨. ಇಬ್ರಿಯರ ಪತ್ರಿಕೆಯನ್ನು ಬರದವನು ಯಾರೆಂಬ ವಿಷಯದಲ್ಲಿ ಆಲೋಚನೆಗಳು ಆರಂಭದಿಂದಲೇ ಬೇರೆ ಬೇರೆಯಾಗಿದ್ದವು. ಪತ್ರಿಕೆಯನ್ನು ಹೊಂದಿದ ಪೂರ್ವ ದೇಶಗಳವರೆಲ್ಲರು ಅದು ಅಪೊಸ್ತಲನಾದ ಪೌಲನ ಪತ್ರಿಕೆ ಎಂಬದಕ್ಕೆ ಒಪ್ಪಿ ಕೊಂಡರು. ಆದರೆ ಅದು ಎಲ್ಲಿಂದ ಕಳುಹಿಸಲ್ಪಟ್ಟಿತೋ ಆ ದೇಶದವರು ಅಂದರೆ ವಿಲಾಯತಿಯ ಪಶ್ಚಿಮ ದೇಶಸ್ಥರು ಈ ವಿಷಯದಲ್ಲಿ ಸಂಶಯ ಪಟ್ಟರು. ಇದರಲ್ಲಿರುವ ಆಲೋಚನೆಗಳ ಆಶ್ಚರ್ಯಕರವಾದ ಅಗಾಧವನ್ನೂ ಯೆಹೂದ್ಯತನದ ಅತಿ ಮಹಿಮೆಯುಳ್ಳ ಗ್ರಹಿಕೆಯನ್ನೂ ಆಲೋಚಿಸುವಾಗ್ಯೆ ತಿರಿಗಿ ತಿರಿಗಿ ದೊಡ್ಡ ವ್ಲೀಂಚ ಅಪೊಸ್ತಲನೇ ಬರದಿರ ಬೇಕೆಂದು ನೆನಸ ಬೇಕಾಗುತ್ತದೆ. ಆದರೂ ಈ ಪತ್ರಿಕೆಗೂ (ಪತ್ರಿಕೆ ಎಂದು ಹೇಳುವದಕ್ಕಿಂತ ಅದು ಹೆಚ್ಚಾಗಿ ಎಚ್ಚರಿಕೆಯಾಗಿರುತ್ತದೆ) ಪೌಲನ ಬೇರೆ ಪತ್ರಿಕೆಗಳಿಗೂ ಹೆಚ್ಚು ಕಡಿಮೆ ಉಂಟು. ಇದರಲ್ಲಿ ಗ್ರೀಕ ಭಾಷೆಯು ಶುದ್ಧವಾಗಿರುತ್ತದೆ. ಆಲೋಚನೆಗಳು ಒಂದು ಸಂಗತಿಯಿಂದ ಮತ್ತೊಂದಕ್ಕೆ ಬೇಗ ಹಾರದೆ ಮೆಲ್ಲಕ್ಕೆ ಪ್ರವರ್ತಿಸುವ ವಾಕ್ಯಗಳುಂಟು. ಒಂದು ವೇಳ್ಯೆ ಈ ಪತ್ರಿಕೆಯು ಅಪೊಸ್ತಲನಾದ ಪೌಲನ ಶಿಷ್ಯರಲ್ಲಿ ಒಬ್ಬನಿಂದ ಬರಿಯಲ್ಪಟ್ಟಿತು (ಒಂದು ವೇಳ್ಯೆ ಅಪೊಲ್ಲೋಸನಿಂದ ಅಲ್ಲವಾದರೆ ಬರ್ನಬನಿಂದ). ಅದು ಗ್ರೀಕ ಮಾತಾಡುವಂಥಾ ಯೆಹೂದ್ಯಕ್ರೈಸ್ತರಿಗೆ ಪಲೆಸ್ತೀನಕ್ಕೆ ಇಲ್ಲವೆ ಸಣ್ಣ ಆಸ್ಯಕ್ಕೆ ಬರಿಯಲ್ಪಟ್ಟಿತು. ಇವರು ದೇವಾಲಯದ ದೇವಾರಾಧನೆಯು ಇನ್ನು ಮಹಿಮೆಯಲ್ಲಿರಲಾಗಿ ಹಳೇ ಯೆಹೂದ್ಯತನದಲ್ಲಿ ಬೀಳುವ ಗಂಡಾತ್ರದಲ್ಲಿದ್ದರು. ಇವರಿಗೆ ಈ ಪತ್ರಿಕೆಯು ದೇವರ ಮಗನು (ದೇವರ ಮಹಿಮೆಯ ಪ್ರತಿಕಾಂತಿಯಾಗಿಯೂ ಲೋಕನಿರ್ಮಾಣಿಕನಾಗಿಯೂ ಇರುವವನಾಗಿ) ದೂತರಿಗಿಂತಲೂ ಹಳೇ ಒಡಂಬಡಿಕೆಯ ಮಧ್ಯಸ್ಥರಿಗಿಂತಲೂ ಎಷ್ಟೋ ಶ್ರೇಷ್ಠನಾಗಿರುತ್ತಾನೆಂಬದೂ ಹಳೇ ಒಡಂಬಡಿಕೆಯ ಆರಾಧನೆಗಳು ಮೆಲ್ಕೀಜೆದೇಕನ ತರದಲ್ಲಿ ನಿತ್ಯ ಪ್ರಧಾನಯಾಜಕನಾದ ಕ್ರಿಸ್ತನಿಂದ ನಿತ್ಯವಿರುವಂಥಾದ್ದಾಗಿರುವದರಿಂದ ಒಂದೇ ಸಾರಿ ಸಂಪೂರ್ಣತೆಯನ್ನು ಹೊಂದಿರಲಾಗಿ ಅದು ಮುಂಗುರ್ತು ಮಾತ್ರವೇ ಆಗಿತ್ತೆಂಬದನ್ನೂ ತೋರಿಸುತ್ತಾನೆ.



## § 175. ಮಿಕ್ಕಾದ ಅಪೊಸ್ತಲರ ಮುಂದಿನ ಪ್ರಯತ್ನಗಳು, ಪೇತ್ರನು

ಕರ್ತನ ಮಿಕ್ಕಾದ ಅಪೊಸ್ತಲರ ಮುಂದಿನ ಪ್ರಯತ್ನಗಳ ವಿಷಯದಲ್ಲಿ ನಂಬಿಕೆಗೆ ಯೋಗ್ಯವಾದ ವರ್ತಮಾನವು ಇಲ್ಲ. ಅವರಲ್ಲಿ ಶ್ರೇಷ್ಠರಾದಂಥಾ ಪೇತ್ರ,

ಯೋಹಾನ, ಯಾಕೋಬರ ವಿಷಯದಲ್ಲಿ ಮಾತ್ರವೇ ವರ್ತಮಾನ ಉಂಟು. ಆದರೆ ಅದು ಸಹಾ ಬಹಳ ಸ್ವಲ್ಪ, ಹಳೇ ಸಂಪ್ರದಾಯವು. ಏಕಪ್ರಕಾರವಾಗಿ ಹೇಳುವದನ್ನು ಅನುಸರಿಸಿದರೆ, ಪೇತ್ರನು ರೋಮದಲ್ಲಿ ನೇರೋನನ ಕಾಲದಲ್ಲಿ ಕರ್ತನು ಮೊದಲೇ ತಿಳಿಸಿದ ಪ್ರಕಾರ (ಯೋಹಾ. ೨೧, ೧೮. ೧೯) ಶಿಲುಬೆಯಲ್ಲಿ ಸಾಕ್ಷಿಮರಣವನ್ನು ಅನುಭವಿಸಿದನಂತೆ (ಕ್ರಿಸ್ತಶಕ. ೬೪ನೆಯಲ್ಲಿ ಅಪೊಸ್ತಲರ ಕೂಟವು ಆದಂದಿನಿಂದ ಅಂತ್ಯೋಕ್ಯದಲ್ಲಿ ನಡದದರ ಹೊರತು, ಗಲಾ. ೨, ೧೨ ಇತ್ಯಾದಿ). ಅವನ ವಿಷಯವಾಗಿ ನಮಗೇನೊಂದು ನಿಶ್ಚಯ ವರ್ತಮಾನವು ಇಲ್ಲ. ಆದರೆ ಅವನು ಆರಂಭದಲ್ಲಿಯೇ ಅಪೊಸ್ತೋಲಿಕ ಪ್ರಯತ್ನವನ್ನು ಎಲ್ಲಾ ಪಲೆಸ್ತೀನದಲ್ಲಿಯೂ ಸುರ್ಯದಲ್ಲಿಯೂ ನಡಿಸಿ ಇದ್ದದರಿಂದ ಅವನು ಹಾಗೆಯೇ ಮುಂದೆ ಮುಂದೆ ಹೋಗಿರುವನೆಂದು ಭದ್ರವಾಗಿ ನಂಬ ಬಹುದು.

ಪರಿಶಿಷ್ಟ. ೧ನೇ ಪತ್ರಿಕೆಯನ್ನು ಪೇತ್ರನು ೫, ೧೩ ಶ್ಲೋಕದ ಪ್ರಕಾರ ಪೌಲನ ಬಂಧನೆಯಿಂದ ನೋಡುವವನಿಲ್ಲದೆ ಇರುವ ಸಣ್ಣ ಆಸ್ಯದ ಸಭೆಯವರಿಗೆ ಬಬಿಲೋನದಿಂದ ಬರದನು. ಈ ಪತ್ರಿಕೆಯು ಅವನು ಪಂಚಾಶತ್ತಿನ ಮೇಲೆ ಯೆರೂಸಲೇಮದಲ್ಲಿ ಪ್ರಯತ್ನ ಮಾಡುತ್ತಾ ಇದ್ದ ಆತ್ಮದಿಂದಲೂ ಬಲದಿಂದಲೂ ತುಂಬಿಯದೆ. ಈ ಪತ್ರಿಕೆಯ ಪ್ರಯೋಜನವು ಎರಡು: ಮೊದಲು ಸಭೆಗಳನ್ನು ಅವರಿಗೆ ಬರುವ ಬೇರೆ ಬೇರೆ ಹಿಂಸೆಗಳ ಸಮಯದಲ್ಲಿ ಕಷ್ಟದಲ್ಲಿ ಭದ್ರವಾಗಿರ ಬೇಕೆಂದೂ ಶುದ್ಧೀಕರಣದಲ್ಲಿ ಬೆಳಿಯ ಬೇಕೆಂದೂ ಎಚ್ಚರಿಸುವದು. ಎರಡನೇ, ಯೆಹೂದ್ಯ ಸುಳ್ಳುಬೋಧಕರು ಏನೇನು ಕುಟಿಲಗಳನ್ನು ನಡಿಸುತ್ತಾ ಇರುವದರಿಂದ ತಾನೇ ಯೆಹೂದ್ಯ ಅಪೊಸ್ತಲನಾಗಿ ಅವರಿಗೆ ಪೌಲಂಥ ಅಪೊಸ್ತಲನಿಂದ ಸಾರಲ್ಪಟ್ಟ ಬೋಧನೆಯೇ ಸತ್ಯವಾದದ್ದೆಂದು ಸ್ಥಾಪಿಸುವದು. ಆದದರಿಂದ ಬಹಳ ಸರ್ತಿ ಪೌಲನ ಪತ್ರಿಕೆಗಳ ಮಾತುಗಳು ಇಲ್ಲಿ ಸಹಾ ಕಾಣುತ್ತವೆ.

೨ನೇ ಪತ್ರಿಕೆಯು ಅದೇ ಸಭೆಗಳಿಗೆ ಬರಿಯಲ್ಪಟ್ಟಿತು. ಇದಕ್ಕೆ ಸುಳ್ಳುಬೋಧಕರು ಅಡ್ಡ ಮಾರ್ಗದಲ್ಲಿ ತಕ್ಕೊಂಡು ಹೋಗುವದು ಹೆಚ್ಚಾಗುವದೇ ಕಾರಣವಾಯಿತು. ೨ನೇ ಸಂಧಿಯಲ್ಲಿ ಯೂದನ ಪತ್ರಿಕೆಯಿಂದ ಬಹಳ ತಕ್ಕೊಂಡದ್ದು ಉಂಟು. ಇಲ್ಲವೇ ಅಂಥಾದ್ದೇ ಇಲ್ಲಿ ತೋರುತ್ತದೆ. ಈ ಪತ್ರಿಕೆಯಲ್ಲಿ ಕರ್ತನು ಬರುವಾಗ್ಯೆ ಪರಲೋಕ ಭೂಲೋಕಗಳು ಬೆಂಕಿಯಿಂದ ಸ್ಫುಟವಾಗ ಬೇಕೆಂಬ ಬೋಧನೆಯು ವಿಶೇಷವಾದದ್ದು.



## § 176. ಮುಂದೆ ಯೋಹಾನನು

ಸಣ್ಣ ಆಸ್ಯದ ಸಭೆಗಳಿಗೆ ಇದ್ದ ಸ್ಥಾಪಕನೂ ಪಾಲಕನೂ ಇಲ್ಲದೆ ಹೋದಾಗ, ಯೋಹಾನನು ಎಫೆಸ್ಸದಲ್ಲಿ ತನ್ನ ಕೆಲಸ ನಡಿಸಿದನು. ಆದರೂ ಅವನು ಅಲ್ಲಿಗೆ ಬಂದ ಸ್ವಲ್ಪ ಕಾಲದಲ್ಲಿಯೇ ಒಂದು ವೇಳೆ ದೊಮಿತ್ಯಾನನ ಕಾಲದಲ್ಲಿ (ಪೌಲನಿಗೂ ಪೇತ್ರನಿಗೂ ಮರಣಕ್ಕೆ ಕಾರಣವಾದ ನೇರೋನನ ಹಿಂಸೆಯ ಕಾಲದಲ್ಲೆಂದು ಮತ್ತೊಬ್ಬರು ಹೇಳುತ್ತಾರೆ) ಪಾತ್ಮೊಸ ದ್ವೀಪಕ್ಕೆ ಗಡಿಪಾರು ಮಾಡಲ್ಪಟ್ಟನು. ಅಲ್ಲಿ ಸ್ವಲ್ಪ ಕಾಲದ ಮೇಲೆ ಬರದಂಥಾ ಪ್ರಕಟಣೆಯನ್ನು ಹೊಂದಿದನು (ಪ್ರಕಟ. ೧, ೯ ಇತ್ಯಾದಿ). ಬಿಡುಗಡೆಯಾದ ಮೇಲೆ ಎಫೆಸ್ಸಕ್ಕೆ ತಿರಿಗಿ ಬಂದು ಕೈಸರನಾದ ತ್ರಯಾನನ ಕಾಲದಲ್ಲಿ ಮರಣ ಪ್ರಾಪ್ತಿಯಾಗುವ ಪರ್ಯಂತರಕ್ಕೂ ಶುಮಾರು ೩೦ ವರ್ಷ ಸಣ್ಣ ಆಸ್ಯದ ಸಭೆಗಳ ಕ್ಷೇಮಕ್ಕೋಸ್ಕರ ಎಫೆಸ್ಸದಲ್ಲಿ ತಂದೆ ಎಂಬ ಹಾಗೆ ವಾತ್ಸಲ್ಯದಿಂದ ಯತ್ನೈಸಿದನು. ಮುದಿಪ್ರಾಯದಲ್ಲಿ ಅವನು ಸುವಾರ್ತೆಯನ್ನೂ ಪತ್ರಿಕೆಗಳನ್ನೂ ಬರದಿರ ಬೇಕು. ಆದ್ದರಿಂದ ಈ ಪುಸ್ತಕಗಳಲ್ಲಿ ಗ್ರೀಕ ಭಾಷೆಯು ಹೆಚ್ಚು ಶುದ್ಧವಾಗಿರುತ್ತದೆ.

ಪರಿಶಿಷ್ಟ. ಯೋಹಾನನ ಪ್ರಕಟಣೆಯು ಪ್ರವಾದನೆಯ ದೊಡ್ಡ ಮುಖ್ಯ ನದಿಯಾಗಿರುತ್ತದೆ. ಇದು ಹಳೇ ಒಡಂಬಡಿಕೆಯ ಪ್ರವಾದನೆಯ ನದಿಗಳೆಲ್ಲವುಗಳ ಸಂಗಮದಿಂದ ಉಂಟಾದದ್ದಾಗಿ ನಿತ್ಯತ್ವದ ಸಮುದ್ರಕ್ಕೆ ಕೂಡುತ್ತದೆ. ಎಲ್ಲಾ ಸಂಪೂರ್ಣ ಮಾಡುವಂಥಾ ಕರ್ತನ ಬರೋಣವನ್ನು ನಿರೀಕ್ಷಿಸುವದೇ ಅದರ ಮುಖ್ಯ ಸ್ವರವಾಗಿರುತ್ತದೆ. ಪೂರ್ಣವಾಗಿ ಸಂಪೂರ್ತಿಯಾಗುವ ಪರ್ಯಂತರಕ್ಕೂ—ಕ್ರೈಸ್ತ ಸಭೆಯ ಕಟ್ಟುವಿಕೆಗೆ ಹ್ಯಾಗೂ ಏನೂ ಕೇಡು ಆಗದೆ ಒಂದೊಂದು ತಿಳಿಯ ಕೂಡದಾಗಿದ್ದರೂ ಪರಿಶುದ್ಧವಾದಂಥಾ ಗುರ್ತುಗಳಾಗಿರುವಂಥಾ ಸಾಮ್ಯ ಚಿತ್ರಗಳಿಂದ ತುಂಬಿದ ಮಹಿಮಾನವಾದ ರೇಖೆಗಳಿಂದ ದೇವರ ರಾಜ್ಯವು ವಿಕಸಿತವಾಗುವಂಥಾದ್ದನ್ನು ಕಡೆಯಲ್ಲಿ ಮಹಿಮೆಯಾಗಿ ನಿತ್ಯಜೀವದಲ್ಲಿ ಸಂಪೂರ್ತಿಯಾಗುವ ಮಟ್ಟಿಗೂ ವರ್ಣಿಸುತ್ತದೆ.

ಪತ್ರಿಕೆಗಳಿಗಿಂತ ಸುವಾರ್ತೆಯು ಮೊದಲು ಬರದಿರ ಬೇಕು. ಈ ಯೋಹಾನನ ಸುವಾರ್ತೆಯ ವಿಷಯವಾಗಿ (ಸಮ ನೋಡು § ೧೭೮) ಯೋಹಾನನ ಮೊದಲನೇ ಪತ್ರಿಕೆಯು ಒಂದು ವೇಳ್ಯೆ ಸಣ್ಣ ಆಸ್ಯದ ಸಭೆಗಳಿಗೆ ಕುರುಬನ ಪತ್ರಿಕೆ ಎಂಬ ಹಾಗೆ ಪೌಲನು ಕೊಲೊಸ್ಸೆಯರ ಪತ್ರಿಕೆಯಲ್ಲಿಯೂ ಕುರುಬನ ಪತ್ರಿಕೆಗಳಲ್ಲಿಯೂ ಖಂಡಿಸಿ

ದಂಥಾ ತರದ ಸುಳ್ಳುಬೋಧನೆಗಳಿಗೆ ಎದುರಾಗಿ ಯತ್ನೈಸುತ್ತದೆ. ಈ ೧ನೇ ಪತ್ರಿಕೆಯಲ್ಲಿ ಸಮಾನವಿಲ್ಲದ ಶಾಂತತ್ವಕ್ಕೂ ಮಮತೆಗೂ ಅತ್ಯಂತ ಪ್ರೀತಿಗೂ ಖಂಡಿತವಾದ ಗಂಭೀರತ್ವವೂ ಖಂಡಿತವಾಗಿ ನಿಶ್ಚೈಸುವ ತೀರ್ಪೂ ಅತ್ಯಾಶ್ಚರ್ಯವಾಗಿ ಕೂಡಿಯದೆ. ಎಲ್ಲಾ ಕಟ್ಟಳೆಗಳನ್ನು ಸುಲಭ ಮಾಡುವಂಥಾ ಪಾಪವನ್ನು ಅಸಾಧ್ಯ ಮಾಡುವಂಥಾ ಕ್ರಿಸ್ತನಲ್ಲಿ ನಮಗೆ ದೇವರ ಸಂಗಡಲಿರುವ ಸಂಪೂರ್ಣ ಐಕ್ಯವು ಕ್ರೈಸ್ತ ಜೀವನವನ್ನು ಅಳಿಯುವ ಪ್ರಮಾಣವಾಗಿರುತ್ತದೆ.

೨ ನೇ ಪತ್ರಿಕೆಯು ಕುರೀಯ ಎಂಬ ಧೊರೆಸಾನಿಗೆ ಬರದ್ದು: ಅವಳಿಗೆ ಅಪೊಸ್ತಲನು ಅವಳ ಮಕ್ಕಳು ಶುದ್ಧತ್ವದಲ್ಲಿ ಜೀವಿಸುವದರಿಂದ ಶುಭವಾಗಲೆಂದು ಹೇಳಿ ತಾನು ನೋಡ ಬರುತ್ತೇನೆಂದು ತಿಳಿಸುತ್ತಾನೆ.

೩ ನೇ ಪತ್ರಿಕೆಯು ಗಾಯುನೆಂಬ ಒಬ್ಬ ಮಾನದ ಕ್ರೈಸ್ತನಿಗೆ ಬರದ್ದು: ಇದು ಪ್ರಯಾಣ ಮಾಡುವ ಕ್ರೈಸ್ತರಿಗೆ ಸಹಾಯ ಮಾಡ ಬೇಕೆಂಬದಾಗಿ ಬರಿಯಲ್ಪಟ್ಟಿರುವದು.

## § 177. ಮುಂದೆ ಯಾಕೋಬನೂ ಯೂದನೂ

ಚಿಕ್ಕ ಯಾಕೋಬನು ಕರ್ತನ ಸಹೋದರನಾಗಿದ್ದನು (§ ೧೭೫, ೧). ಇವನು ಅಪೊಸ್ತಲರ ಕೂಟದಲ್ಲಿ ಆಲೋಚನೆಗಳನ್ನು ನಡಿಸುವವನಾಗಿಯೂ ಯೆರೂಸಲೇಮದ ಸಭೆಯಲ್ಲಿ ನಾಯಕನಾಗಿಯೂ ಕಾಣಿಸಿ ಕೊಳ್ಳುತ್ತಾನೆ. ಅವನನ್ನು ಪೌಲನು (ಗಲಾ. ೨, ೯.) ಪೇತ್ರ ಯೋಹಾನರ ಸಂಗಡ ಸಭೆಯ ಸ್ತಂಭವೆಂದು ಕರಿಯುತ್ತಾನೆ. ಇವನೇ ಅವನ ಹೆಸರುಳ್ಳ ಪತ್ರಿಕೆಯ ಕರ್ತನಾಗಿರುತ್ತಾನೆ. ಇವನೇ ಯೆಹೂದ್ಯ ಕ್ರೈಸ್ತತ್ವವನ್ನೂ ಶುದ್ಧ ಸುವಾರ್ತೆಯನ್ನೂ ಕುರಿತು ರೂಪಿಸಿದವನಾಗಿರುತ್ತಾನೆ. ಅವನು ಶುದ್ಧ ಮನೋಸಾಕ್ಷಿಯಾಗಿ ಉದ್ಯೋಗ ನಡಿಸುವದರಿಂದಲೂ ನಿಷ್ಠಾನೇಮವನ್ನು ನಂಬಿಕೆಯಿಂದ ಕೈಕೊಂಡದರಿಂದಲೂ ನೀತಿವಂತನೆಂಬ ಹೆಸರನ್ನು ಪಡಕೊಂಡನು. ಇದೇ ಕಾರಣದಿಂದ ಕಠಿಣವಾಗಿ ನೇಮವಾದಿಗಳಾಗಿರುವ ಯೆಹೂದ್ಯರಿಂದ ಅವನಿಗೆ ಬಹಳ ಮಾನ ಉಂಟಾಯಿತು. ಆದರೆ ಹ್ಯಾಗೆ ಅವನ ಪತ್ರಿಕೆಯೋ ಹಾಗೆ ಅವನ ಯತ್ನಗಳೆಲ್ಲಾ — ಆ ಕಾಲದಲ್ಲಿ ಬೇರೆಯಾಗಿದ್ದರೂ — ಪೌಲನ ತರಕ್ಕೂ ಅವನ ತರಕ್ಕೂ ಆತ್ಮದ ನಿಜ ಐಕ್ಯತ್ವವು ಇತ್ತೆಂಬದಕ್ಕೆ ಸಾಕ್ಷಿ ಕೊಟ್ಟವು. ಅವನು ಸಭೆಯನ್ನು ಒಡಂಬಡಿಕೆಯ ಜನಾಂಗದಲ್ಲಿ ವಿಸ್ತಾರ ಮಾಡಿ ಭದ್ರ ಪಡಿಸು

ವದೇ ತನ್ನ ಕರಿಯುವಿಕೆ ಎಂದು ಗ್ರಹಿಸಿ ಕೊಂಡು ಇದೇ ಕಾರಣದಿಂದ ಪೂರ್ವದ ಶುದ್ಧ ಪಟ್ಟವನ್ನು ತನ್ನ ಅಪೊಸ್ತೊಲಿಕಪ್ರಯತ್ನಗಳಿಗೆ ನಿತ್ಯ ಮಧ್ಯಸ್ಥಳವಾಗಿ ಮಾಡಿ ಕೊಂಡನು. ಆದರೆ ಅವನಿಗೆ ಸಹಾ ಅವನ ಜನಾಂಗದ ಕ್ರೈಯಿಂದಲೇ ಸಾಕ್ಷಿಮರಣವು ನಿಶ್ಚಯವಾಗಿತ್ತು. ಪೌಲನು ಕಡೇ ಸಾರಿ ಯೆರೂಸಲೇಮಿನಲ್ಲಿ ಇದ್ದಾಗ ವಾತ್ಸಲ್ಯಭ್ರಾಂತರಾದ ಯೆಹೂದ್ಯರು ಯಾಕೋಬನು ಪಸ್ಕದಿವಸದಲ್ಲಿ ದೇವಾಲಯದ ಶಿಖರದಿಂದ ಕ್ರಿಸ್ತನನ್ನು ಶಪಿಸ ಬೇಕೆಂದು ಹೇಳಿದರು. ಆದರೆ ಅವನು ಅದು ಬಿಟ್ಟು ತನ್ನ ವಿಶ್ವಾಸದ ವಿಷಯವಾಗಿ ಬಲವಾದ ಸಾಕ್ಷಿಯನ್ನು ಕೊಡಲಾಗಿ ಅವನನ್ನು ಕೆಳಗೆ ನೂಕಿ ಕಲ್ಲೆಸೆದರು.

ಯೂದನ ಪತ್ರಿಕೆಯ ಕರ್ತನು ತಾನು ಈ ಯಾಕೋಬನ ಸಹೋದರನೆಂದು ಹೇಳುತ್ತಾನೆ (ಸಮ ನೋಡು ಮತ್ತಾ. ೧೩, ೫೫. ಮಾರ್ಕ. ೬, ೩). ಈತನೇ ಯಾಕೋಬನವನೆಂಬ ಅಪೊಸ್ತಲನಾದ ಯೂದನೋ ಎಂಬದರಲ್ಲಿ ಸಂಶಯ ಉಂಟು. ಅವನ ಅಪೊಸ್ತೊಲಿಕಪ್ರಯತ್ನದ ವಿಷಯದಲ್ಲಿ ಬೇರೇನೂ ತಿಳಿಯುವದಿಲ್ಲ.

ಪರಿಶಿಷ್ಟ. ಯಾಕೋಬನ ಪತ್ರಿಕೆಯು ಪಲೆಸ್ತೀನದಲ್ಲಿಯೂ ಪಲೆಸ್ತೀನದ ಹೊರಗೆಯೂ ಇರುವ ೧೨ ಗೋತ್ರಗಳ ಕ್ರೈಸ್ತರಿಗೆ ಬರದದ್ದು: ಇದಕ್ಕೆ ಯೆಹೂದ್ಯಕ್ರೈಸ್ತರಲ್ಲಿ ಉಂಟಾದ ಸಂಕಷ್ಟಗಳೂ ತಪ್ಪುಗಳೂ ಕಾರಣವಾಯಿತು. ಅವನು ಬಲವಾಗಿ ಗದರಿಸುವ ನಿರ್ಜೀವವಿಶ್ವಾಸವು ನಿರರ್ಥಕವಾದಂಥಾ ಆಗಿನ ಯೆಹೂದ್ಯತನದಲ್ಲಿ ಬಹಳ ಬೇರೂರಿದಂಥಾ ಭ್ರಾಂತಿಯಾಗಿತ್ತು. ವಿಶ್ವಾಸಿಗಳಾದ ಯೆಹೂದ್ಯರು ಸಹಾ ಇದನ್ನು ಬಿಡುವದು ದುರ್ಲಭವಾಗಿರಲಾಗಿ ಅಬ್ರಹಾಮನ ಸಂತತಿಯಲ್ಲಿ ಹುಟ್ಟಿದದರಿಂದಲೇ ತಾವು ಮ್ಲೇಂಛರಿಗಿಂತ ಪ್ರಿಯರಾಗಿದ್ದೇವೆಂದು ಅಬ್ರಹಾಮನ ದೇವರನ್ನು ಅರಿಕೆ ಮಾಡಿದ್ದಾದರೆ ರಕ್ಷಣ್ಯವೂ ದೇವರ ಮುಂದೆ ನೀತಿನಿರ್ಣಯವೂ ಶಿಕ್ಕದೆ ಹೋಗ ಕೂಡದೆಂದು ನಂಬಿದರು. ಇಂಥಾ ನಿರ್ಜೀವವಾದಂಥಾ ಸತ್ಯ ಶುದ್ಧೀಕರಣದ ಫಲಗಳಿಲ್ಲದಂಥಾ ವಿಶ್ವಾಸಕ್ಕೆ ಯಾಕೋಬನು ವಿಶ್ವಾಸದ ಜೀವ ಉಳ್ಳ ಫಲಗಳಲ್ಲಿ ಸಮೃದ್ಧಿಯಾಗಿರುವ ಅಬ್ರಹಾಮನ ಜೀವನದ ದೃಷ್ಟಾಂತವನ್ನು ಮುಂದಿಟ್ಟು, ಅವನ ಕ್ರಿಯೆಗಳೇ ನೀತಿನಿರ್ಣಯಿಸುವ ವಿಶ್ವಾಸದ ಮುದ್ರೆಯಾಗಿತ್ತೆಂದು ತೋರಿಸುತ್ತಾನೆ. ಪೌಲನು ಮನುಷ್ಯನು ವಿಶ್ವಾಸದಿಂದ ನೇಮದ ಕ್ರಿಯೆಗಳಿಲ್ಲದೆ ನೀತಿವಂತನಾಗುತ್ತಾನೆಂತ ಹೇಳುವದೂ ಯಾಕೋಬನು ಮನುಷ್ಯನು ವಿಶ್ವಾಸದಿಂದ ಮಾತ್ರವಲ್ಲಾ ಕ್ರಿಯೆಗಳಿಂದ ನೀತಿವಂತನಾಗುತ್ತಾನೆಂದು ಹೇ

ಳುವದೂ (ಯಾಕೊ. ೨, ೨೪) ಸ್ವಲ್ಪವಾದರೂ ಒಂದಕ್ಕೊಂದು ವಿರೋಧವಾಗಿ ರುವದಿಲ್ಲಾ. ಯಾಕಂದರೆ ಅಲ್ಲಲ್ಲಿ ಚನ್ನಾಗಿ ನೋಡಿದ್ದಾದರೆ ಪೌಲನು ಶುದ್ಧೀಕರಣದಲ್ಲಿ ಕಾಣುವಂಥಾ ಜೀವ ಉಳ್ಳ ವಿಶ್ವಾಸವನ್ನೂ ಯಾಕೋಬನು ವಿಶ್ವಾಸದಿಂದ ಬರುವ ಶುದ್ಧೀಕರಣವನ್ನೂ ರಕ್ಷಣ್ಯಕ್ಕೆ ಅತ್ಯವಶ್ಯವಾದ ಉಪಾಯವೆಂಬದಾಗಿ ವರ್ಣಿಸುತ್ತಾನೆ. ಇದಲ್ಲದೆ ಕುರುಡವಾದ ಮಾಂಸಭಾವದ ಸ್ವನೀತಿಯ ನಿರ್ಜೀವ ಕ್ರಿಯೆಗಳಲ್ಲಿ ಭರವಸವನ್ನಿಡುವದು ಮಾತ್ರವೇ ಪೌಲನೂ, ಸತ್ಯವಾದ ದೇವರನ್ನು ನಿರ್ಜೀವವಾಗಿಯೂ ಬಹಿರಂಗವಾಗಿಯೂ ಅರಿಕೆ ಮಾಡುವದರಲ್ಲಿ ನಿರರ್ಥಕವಾಗಿ ಭರವಸವಿಡುವದನ್ನು ಯಾಕೋಬನು ಖಂಡಿಸಿ, ಅವುಗಳು ನಿರ್ಬಲವಾಗಿಯೂ ರಕ್ಷಣ್ಯಕ್ಕೆ ಅಡ್ಡಿಯಾಗಿಯೂ ಇರುತ್ತವೆಂದು ಹೇಳುತ್ತಾನೆ.

ಯೂದನ ಸಂಣ ಪತ್ರಿಕೆಯು ಬಲವಾದ ವಿವರಣೆಯಿಂದ ಹಳೇ ಒಡಂಬಡಿಕೆಯ ನ್ಯಾಯಶಿಕ್ಷೆಗಳಲ್ಲಿ ಮುಂಗುರ್ತಾಗಿ ಆಜ್ಞಾನಿರ್ಣಯವನ್ನು ಹೊಂದಿದಂಥಾ ಶಿರಿಗಿ ಬಿದ್ದಂಥಾ ದೂಷಣಾಪ್ರಿಯರಾದಂಥಾ ಆತುರರಾದ ಮೋಸಗಾರರಿಗಾಗಿ ಗದರಿಸುತ್ತದೆ.



## § 178. ಸುವಾರ್ತೆಗಳನ್ನೂ ಅಪೊಸ್ತಲರ ಕ್ರಿಯೆಗಳನ್ನೂ ಬರದದ್ದನ್ನು ಕುರಿತು

ಕ್ರಿಸ್ತನ ಕ್ರಿಯೆ ಬೋಧನೆಗಳನ್ನು ನೋಡಿ ಕೇಳಿದ ಸಾಕ್ಷಿಗಳು ಮೆಲ್ಲಕ್ಕೆ ಮರಣದ ಮೂಲವಾಗಿ ಸಭೆಗೆ ಕಡಿಮೆಯಾಗುತ್ತಾ ಇದ್ದು ಕ್ರೈಸ್ತತ್ವವು ದಿವಸ ಹೋಗುತ್ತಾ ವಿಸ್ತಾರವಾಗುತ್ತಾ ಬರಲಾಗಿ ಕರ್ತನ ಜೀವನದ ವಿಷಯದಲ್ಲಿ ಅಪೊಸ್ತಲರಿಂದ ಸ್ಥಾಪಿಸಲ್ಪಟ್ಟ ವರ್ತಮಾನಗಳನ್ನು ಬರಹಮೂಲಕವಾಗಿ ನಿಶ್ಚಯಿಸುವದೂ ಈ ಪ್ರಕಾರ ಎಲ್ಲಾ ಸುಳ್ಳುಗಳ ಮುಂದೆ ಕಾಪಾಡುವದೂ ಅತ್ಯವಶ್ಯವಾಯಿತು. ಈ ಪ್ರಕಾರ ಮೊದಲಾಗಿ ಮತ್ತಾಯನ ಸುವಾರ್ತೆ (ಇವನು ಅಪೊಸ್ತಲನೂ ದೃಷ್ಟಿಸಾಕ್ಷಿಯೂ ಆಗಿದ್ದನು.) ಮಾರ್ಕನ ಸುವಾರ್ತೆಯೂ ಲೂಕನ ಸುವಾರ್ತೆಯೂ (ಇವರು ಪೇತ್ರ, ಪೌಲರ ಅಪೊಸ್ತೋಲಿಕ ಕರ್ತೃತ್ವದ ಸಹಾಯದಿಂದ ಬರದರು.) ಮತ್ತು ಸುವಾರ್ತೆಗಳ ಮುಂದಿನ ಭಾಗವೆಂದು ಲೂಕನ ಅಪೊಸ್ತಲರ ಕ್ರಿಯೆಗಳೂ ಉಂಟಾದವು. ಕಡೆಯಲ್ಲಿ ಈ ಸುವಾರ್ತೆಗಳು ಬಹು ಕಾಲದ ಮುಂಚೆ ಬರದು ಹಬ್ಬಿದ ಮೇಲೆ ಕರ್ತನ ಪ್ರಿಯ ಶಿಷ್ಯನಾದ ಯೋಹಾನನು ಸಹಾ ಆನೇ ಸು

ವಾರ್ತೆಯನ್ನು ಬರದನು. ಇದರಲ್ಲಿ ಅವನ ಪ್ರೀತಿ ಮಾಡುವ ಹೃದಯದ ಗುಂ ಡಿಯಲ್ಲಿ ಮಾಜ ಕೂಡದಂಥಾ ರೇಖೆಗಳಿಂದ ಕೆತ್ತಲ್ಪಟ್ಟ ಮೇಲೆ ಪರಿಶುದ್ಧಾತ್ಮದ ನವೀಕರಣದಿಂದ (ಯೋಹಾ. ೧೪, ೨೬.) ಹೊಸತೆಂಬ ಹಾಗೆಯೂ ಚುರುಕಾ ಗಿಯೂ ಕಾಪಾಡಲ್ಪಟ್ಟ ರಕ್ಷಕನ ಬಿಂಬವನ್ನು ಸಭೆಗೆ ಅತ್ಯಮೂಲ್ಯವಾದ ಮರಣ ಪತ್ರಿಕೆ ಎಂಬ ಹಾಗೆ ಬರದಿಟ್ಟನು. ಈ ನಾಲ್ಕು ಸುವಾರ್ತೆಗಳು ಒಂದೊಂದು ತನ್ನ ಪ್ರಶಸ್ತ ಸಂಗತಿಯನ್ನು ಪ್ರತ್ಯೇಕವಾದ ರೀತಿಯಾಗಿಯೂ ಬೇರೆ ಬೇರೆ ಕಡೆಯಿಂದಲೂ ಗ್ರಹಿಸಿ ಇದ್ದರೂ ಒಟ್ಟಿಗೆಯಾದರೆ ಒಂದೇ ವಾರ್ತೆಯಾಗಿರುತ್ತವೆ. ಇದರಲ್ಲಿ ಮನು ಷ್ಯನ ಗ್ರಹಿಕೆಯು ಗ್ರಹಿಸಲಿಕ್ಕೆ ಶಕ್ತವಾಗುವಷ್ಟು ಯಥಾರ್ಥವಾಗಿಯೂ ಬಹು ವಿಧ ವಾಗಿಯೂ ರಕ್ಷಕನ ಬಿಂಬವು ಸಭೆಗೆ ನಮ್ಮ ವಿಶ್ವಾಸದ ಆಧಾರವಾಗಿಯೂ (೧ ತಿಮೊ. ೩, [೧೫] ೧೬.) ನಮ್ಮ ಪ್ರೀತಿಗೆ ಹಿಡಿಯಾಗಿಯೂ (೧ ಯೋಹಾ. ೪, ೧೯.) ನಮ್ಮ ಜೀವನದ ಮುಂಗುತಾರ್ಗಿಯೂ (೧ ಪೇತ್ರ. ೧, ೨೧.) ರೂಪಿಸಿ ಅದೆ. ಅದೇ ಸಮಯದಲ್ಲಿ ಅಪೊಸ್ತಲರ ಕ್ರಿಯೆಗಳು ಎಂಬ ಪುಸ್ತಕವು ಎಲ್ಲಾ ಸತ್ಯದ ಲ್ಲಿ ನಡಿಸುವಂಥಾ ಕ್ರಿಸ್ತನ ಆತ್ಮದ ಪ್ರಯತ್ನವನ್ನು ನಮಗೆ ತಿಳಿಸಿ, ಅಪೊಸ್ತಲರ ಪ್ರ ಯತ್ನದಲ್ಲಿ ಸುವಾರ್ತೆಯ ಪ್ರಸಂಗ ಕುರುಬತನಗಳ ಮಾದ್ರಿಯನ್ನೂ ಮೊದಲನೇ ಸಭೆಗಳ ಸ್ಥಿತಿಗಳಲ್ಲಿ ನಾವು ಸಹಾ ಹಾಗೆಯೇ ಮಾಡ ಬೇಕೆಂಬದಕ್ಕೂ ಇಲ್ಲವೆ ಗ ದರಿಸಲ್ಪಡುವದಕ್ಕೂ ಬೇಕಾದ ದೃಷ್ಟಾಂತವನ್ನೂ ವರ್ಣಿಸುತ್ತದೆ.

ಪರಿಶಿಷ್ಟ. ಮೊದಲನೇ ೩ ಸುವಾರ್ತೆಗಳು ಕ್ರಮದಲ್ಲಿಯೂ ಸಂಗತಿಗಳಲ್ಲಿ ಯೂ ಬಹಳವಾಗಿ ಒಂದೇ ಪ್ರಕಾರ ಇರುವದು ಆಶ್ಚರ್ಯ. ಅವರೆಲ್ಲರೂ ಒಂದೇ ಪ್ರಕಾರ ನೆಲಗಟ್ಟು ಹಾಕಿದ್ಧಾರೆ. ಅವರು ವಿಶೇಷವಾಗಿ ಶಬ್ದಗಳಲ್ಲಿ ಸಹಾ ಒಂದ ಕ್ಕೊಂದು ಸಮವಾಗಿರುವ ವರ್ಣನೆಯಿಂದ ಕರ್ತನ ಅದೇ ಮಾತುಗಳನ್ನೂ ಅದೇ ಕ್ರಿಯೆಗಳನ್ನೂ ಹೆಚ್ಚಾಗಿ ತಿಳಿಸುತ್ತಾರೆ. ಆದ್ದರಿಂದ ಈ ಸುವಾರ್ತೆಗಳಿಗೆ ಸಮದೃ ಷ್ಟಿ ಸುವಾರ್ತೆಗಳೆಂಬ ಹೆಸರು ಇಟ್ಟದ್ದು ಅಯೋಗ್ಯವಲ್ಲ. ಆದರೂ ಒಂದೊಂದ ಕ್ಕೆ ಪ್ರತ್ಯೇಕವಾದ ಪ್ರಯೋಜನವೂ ಪ್ರತ್ಯೇಕವಾದ ಗುಣಭಾವವೂ ಒಂದೊಂದು ವಿಷಯದಲ್ಲಿ ಇಲ್ಲವೆ ಒಟ್ಟಿಗೆ ಹೆಚ್ಚು ಸಂಗತಿಗಳೂ ಇಲ್ಲವೆ ಹೆಚ್ಚು ಬಿಟ್ಟದ್ದು ಒಂ ದೊಂದರ ವಿಷಯದಲ್ಲಿ ಗ್ರಹಿಕೆಯಲ್ಲಿಯೂ ಕ್ರಮದಲ್ಲಿಯೂ ಹೆಚ್ಚು ಕಡಿಮೆಯೂ ತೋರಿಕೆಗೆ ಪರಸ್ಪರ ವಿರೋಧಗಳೂ ಸಹಾ ಉಂಟು. ಈ ಪ್ರಕಾರ ಆಶ್ಚರ್ಯವಾ ದ ವಿಶೇಷಗಳಿಗೆ ಅಪೊಸ್ತೊಲಿಕಕಾಲದ ಸ್ಥಿತಿಗಳೇ ಕಾರಣವಾಗಿರ ಬೇಕೆಂದು ಹೇಳ ಲಿಕ್ಕೆ ಬಹಳ ಕಾರಣ ಉಂಟು. ಕೆಲವು ವರ್ಷ ದಶಗಳಲ್ಲಿ ಸುವಾರ್ತೆಯ ಕಥೆಯನ್ನು

ಬಾಯಿಯಿಂದ ಮಾತ್ರವೇ ತಿಳಿಸಲಾಗಿ (ಬೇಕೆಂದು ಮಾಡದಿದ್ದರೂ) ಮೆಲ್ಲಕ್ಕೆ ಒಂದೊಂದು ಸಂಗತಿಯನ್ನು ತಿಳಿಸುವದರಲ್ಲಿಯೂ ವರ್ಣಿಸುವದರಲ್ಲಿಯೂ ಸಮ್ಮತಿಯೂ ಒಂದೇ ತರದ ರೂಪವೂ ಉಂಟಾಯಿತು. ಹೀಗಾಗಿ ಸುವಾರ್ತಿಕರು ಸಹಾ ಬಾಯಿಯಿಂದ ತಿಳಿಸಿ ನಿಶ್ಚಯಿಸಲ್ಪಟ್ಟ ಸಂಗತಿಗಳನ್ನೇ ಬರಹಮೂಲಕವಾಗಿ ಸಹಾ ವರ್ಣಿಸಿದರು. ಮತ್ತು ಸ್ವಂತ ತಿಳುವಿಕೆಯಿಂದಲೂ ಶೋಧನೆಯಿಂದಲೂ ಅವುಗಳನ್ನು ಹೆಚ್ಚಿಸಿದರು. ಇಲ್ಲವೆ ಅವಶ್ಯವಿದ್ದ ಹಾಗೆಯೂ ತಮ್ಮ ಪ್ರಯೋಜನಕ್ಕೆ ಸರಿಯಾಗಿಯೂ ಸ್ವಲ್ಪ ಬೇರೆ ಮಾಡಿರುವರು. ಯೋಹಾನನು ಮಾತ್ರವೇ ಈ ಪ್ರಕಾರ ಮಾಡಲಿಲ್ಲಾ. ಯಾಕಂದರೆ ಮೊದಲಿದ್ದ ಸುವಾರ್ತೆಗಳಲ್ಲಿ ಹೇಳಿದ್ದನ್ನು ಸ್ವಂತ ನೆನಪಿನಿಂದ ಹೆಚ್ಚು ಪೂರ್ಣ ಮಾಡುವದೂ ರಕ್ಷಕನ ಮೂರ್ತಿ ಪ್ರಯತ್ನಗಳ ಬಿಂಬವನ್ನು ಪೂರ್ಣವಾಗಿ ಬೇರೊಂದು ಕಡೆಯಿಂದ ಆಲೋಚಿಸಿ ವರ್ಣಿಸುವದೂ ಅವನ ಆಲೋಚನೆಯಾಗಿತ್ತು. ಇವರೆಲ್ಲರಲ್ಲಿ ಅಪೊಸ್ತಲನಾದ ಮತ್ಥಾಯನು ಮೊದಲು ಬರದನು. ಅವನ ಅಪೊಸ್ತೊಲಿಕಪ್ರಯತ್ನದ ವಿಷಯದಲ್ಲಿ ಭರವಸವಿಡಲಿಕ್ಕೆ ಯೋಗ್ಯವಾದ ವರ್ತಮಾನವು ನಮಗಿಲ್ಲಾ. ಈ ಸುವಾರ್ತೆಯು ಯೆಹೂದ್ಯಕ್ರೈಸ್ತರಿಗೆ ತಿಳಿಯಲವಶ್ಯವಾದದ್ದನ್ನು ಮುಖ್ಯವಾಗಿ ವರ್ಣಿಸುತ್ತದೆ. ಅವನು ರಕ್ಷಕನ ಜೀವನವನ್ನು ಮೆಸ್ಸೀಯನ ಶ್ರೇಷ್ಟತ್ವದಲ್ಲಿಯೂ ತಗ್ಗಿಸುವಿಕೆಯಲ್ಲಿಯೂ ತಿಳಿಸಿ ಅವನಲ್ಲಿಯೂ ಅವನಿಂದಲೂ ನೇಮವೂ ವಾಗ್ದತ್ತವೂ ಹ್ಯಾಗೆ ಪೂರ್ಣವಾದವೆಂಬದನ್ನು ತೋರಿಸುತ್ತಾನೆ.

ಮಾರ್ಕನು (ಯೆಹೂದ್ಯ ಹೆಸರಿನ ಪ್ರಕಾರ ಯೋಹಾನನು) ಬರ್ನಬನ ಅಳಿಯನು. ತನ್ನ ಸುವಾರ್ತೆಯನ್ನು ಅಪೊಸ್ತಲನಾದ ಪೇತ್ರನ ಕರ್ತೃತ್ವದ ಸಹಾಯದಿಂದ ಬರದನು (೧ ಪೇತ್ರ. ೫, ೧೩). ಬರ್ನಬನು ಪಾಲನಿಂದ ಬೇರೆಯಾದಾಗ (§ ೧೬೬, ೧.) ಅವನು ಬರ್ನಬನ ಸಂಗಡ ಪ್ರಸಂಗಪ್ರಯಾಣಕ್ಕೆ ಹೋದನು. ಮತ್ತೆ ಅವನು ಪಾಲನಿಗೆ ನಂಬಿಗಸ್ತ ಸಹಾಯಕನೂ (ಕೊಲೊ. ೪, ೧೦. ಫಿಲೆಮೋನ್. ೨೪. ೨ ತಿಮೊ. ೪, ೧೧.) ಪೇತ್ರನಿಗೆ ಜತೆಯವನೂ ಆಗಿದ್ದದ್ದನ್ನು (೧ ಪೇತ್ರ. ೫, ೧೩.) ಅವನು ಭರವಸಕ್ಕೆ ಯೋಗ್ಯವಾದ ಸಾಕ್ಷಿಗಳ ಪ್ರಕಾರ ರೋಮದಲ್ಲಿ ಮ್ಲೇಂಛಕ್ರೈಸ್ತರಿಗೋಸ್ಕರ ತನ್ನ ಸುವಾರ್ತೆಯನ್ನು ಬರದನು. ಈ ಸುವಾರ್ತೆಯಲ್ಲಿ ವಿಶೇಷವಾದದ್ದೇನಂದರೆ: ಅವನು ಹೆಚ್ಚು ಉದ್ದವಾಗಿರುವ ಪ್ರಸಂಗಗಳನ್ನು ಬಿಟ್ಟು ಸಣ್ಣ ಅತಿ ವಿಶೇಷವಾದ ರೇಖೆಗಳಿಂದ ಬಹಳ ಸಂಗತಿಗಳನ್ನು ತಿಳಿಸಿ ಚುರುಕಾಗಿಯೂ ಸಂಕ್ಷೇಪವಾಗಿಯೂ ಯೇಸುವು ಏನು ಮಾಡಿದನೆಂಬದರ ರೂಪವನ್ನು ವರ್ಣಿಸುತ್ತಾನೆ.

ಲೂಕನು, ಕೊಲೊ. ೪, ೧೪ನೇ ಪ್ರಕಾರ ವೈದ್ಯನೂ ಅಪೊಸ್ತಲನಾದ ಪಾಲನ ನಂಬಿಗಸ್ತನಾದ ಜತೆಗಾರನೂ ಸಹಾಯಕನೂ ಆಗಿ ಇದ್ದನು. ಈತನು ಪಾಲನ ಮೊದಲನೇ ಬಂಧನೆಯ ಸಮಯದಲ್ಲಿ ೨ ವರ್ಷ ರೋಮದಲ್ಲಿದ್ದಾಗ ತನ್ನ ಸುವಾರ್ತೆಯನ್ನೂ ಅಪೊಸ್ತಲರ ಕ್ರಿಯೆಯನ್ನೂ ಬರದನೆಂತ ಕಾಣುತ್ತದೆ (ಅಪೊ. ಕ್ರಿ. ೨೮, ೩೦). ಇವೆರಡು ಒಬ್ಬ ಕುಲೀನನಾದ ಥೆಯೊಫಿಲನೆಂಬ ರೋಮಾಯನಿಗೋಸ್ಕರ ಬರಿಯಲ್ಪಟ್ಟವು (ಲೂಕ. ೧, ೧. ಅಪೊ. ಕ್ರಿ. ೧, ೧). ಲೂಕನು ತನ್ನ ಸುವಾರ್ತೆಯನ್ನು ಪಾಲನ ಕರ್ತೃತ್ವದ ಸಹಾಯದಿಂದ ಬರದನು. ಆದ್ದರಿಂದ ಪಾಲನ ಮನೋರೀತಿಯು ಯೇಸುವಿನ ಬೋಧನೆ ಕ್ರಿಯೆಗಳನ್ನೂ ಆರಿಸಿ ತೆಗದು ಕೊಳ್ಳುವದರಲ್ಲಿ ನಿಶ್ಚಯವಾಗಿ ಪ್ರಮಾಣವಾಗಿತ್ತು. ಆ ಪ್ರಕಾರ ಅವನು ನಿರಾತಂಕವಾಗಿಯೂ ಪಾಪಿಗೆ ಎದುರುಗೊಳ್ಳುವಂಥಾದ್ದಾಗಿಯೂ ಎಲ್ಲಾ ಮಾನುಷ್ಯಪುಣ್ಯವನ್ನು ಒಳಗೆ ಬರಗೊಡಿಸದಂಥಾದ್ದಾಗಿಯೂ ಇರುವ ದೇವರ ಕೃಪೆಯನ್ನೂ ರಕ್ಷಣ್ಯಕ್ಕೆ ಎಲ್ಲರೂ ಒಂದೇ ಪ್ರಕಾರ ಕರಿಯಲ್ಪಟ್ಟಿದ್ದಾರೆಂಬದನ್ನೂ ತೋರಿಸಿದಂಥಾ ಸಂಗತಿಗಳನ್ನು ವಿಶೇಷ ಮಮತೆಯಿಂದ ವರ್ಣಿಸುತ್ತಾನೆ. ಯೇಸುವು ಪಾಪಿಗಳ ರಕ್ಷಕನಾಗಿರುತ್ತಾನೆಂಬದನ್ನು ವರ್ಣಿಸುವದೇ ಅವನ ಕೆಲಸವಾಗಿತ್ತು.

೪ನೇ ಸುವಾರ್ತೆಯು ರಕ್ಷಕನ ದೇವಮನುಷ್ಯನಾದ ಮೂರ್ತಿಯನ್ನು ಇದರ ಸ್ವಚ್ಛವಾಗಿ ಗ್ರಹಿಸಿದ ಬಿಂಬವು ಬಹಳವಾಗಿ ಯೋಹಾನನ ಹೃದಯದಲ್ಲಿ ಖಚಿತವಾಗಿ ಇದ್ದದರಿಂದ ಅದನ್ನು ವರ್ಣಿಸುವದೇ ಮುಖ್ಯ ಕೆಲಸವಾಗಿ ಮಾಡಿ ಕೊಂಡಿತು. ಆದ್ದರಿಂದ ಯೋಹಾನನು ದೇವರ ನಿತ್ಯವಾಗಿಯೂ ನಿಜವಾಗಿಯೂ ಅಹಂಭಾವಿಯೂ ಆಗಿ ಇರುವ ವಾಕ್ಯವಾದ ಕ್ರಿಸ್ತನು ಲೋಕದ ಮೊದಲೇ ಇದ್ದನೆಂಬದನ್ನು ಹೇಳಿ ಆರಂಭಿಸುತ್ತಾನೆ. ಆದ್ದರಿಂದಲೇ ಈ ದಿವ್ಯ ಯಜಮಾನನು ತನ್ನ ಮೂರ್ತಿಯ ವಿಷಯವಾಗಿಯೂ ಕಳುಹಿಸುವಿಕೆಯ ವಿಷಯವಾಗಿಯೂ ತಾನೇ ಸಾಕ್ಷಿ ಕೊಟ್ಟ ಮಾತುಗಳನ್ನೂ ಅದೇ ಪ್ರಕಾರ "ತಂದೆಯಿಂದ ಒಬ್ಬನೇ ಹುಟ್ಟಿದವನ ಮಹಿಮೆಯ ಹಾಗೆ ಕೃಪೆಯಿಂದಲೂ ಸತ್ಯದಿಂದಲೂ ತುಂಬಿದ್ದಾಗ" (ಯೋಹಾ. ೧, ೧೪.) ಅವನ ಮಹಿಮೆಯನ್ನು ಅತಿ ಸ್ವಚ್ಛವಾಗಿ ಪ್ರಕಾಶಿಸ ಮಾಡಿದ (ಸಮ ನೋಡು ಯೋಹಾ. ೨೦, ೩೧.) ಕ್ರಿಯೆಗಳನ್ನೂ ವಿಶೇಷ ಮಮತೆಯಿಂದ ವರ್ಣಿಸುತ್ತಾನೆ.



# ಮೂರನೇ ಒಳಭಾಗ

## ಸಭೆಯಲ್ಲಿ ರಕ್ಷಣ್ಯದ ಸ್ವೀಕಾರ

### § 179. ಈ ಕಾಲದ ಉದ್ಯೋಗವೂ ಗುಣವೂ

೧) ರಕ್ಷಣ್ಯವು ಈಗ ಸಂಪೂರ್ಣವಾಯಿತು ಮಾತ್ರವಲ್ಲ, ಅದನ್ನು ಸ್ವೀಕಾರ ಮಾಡಿ ಕೊಳ್ಳಲಿಕ್ಕೆ ಬೇಕಾದದ್ದು ಸಹಾ ಎಲ್ಲಾ ಉಂಟು. ಕ್ರಿಸ್ತನ ವಿಮೋಚನಾ ಮರಣದಿಂದ ನಿತ್ಯನೀತಿಗೆ ತೃಪ್ತಿಯಾಯಿತು. ಅವನ ಉತ್ಥಾನದಿಂದ ಜೀವವೂ ನಿರ್ಣಯವೂ ಪ್ರಕಾಶಕ್ಕೆ ಬಂತು. ಪ್ರಸಾದಗಳು ಸ್ಥಾಪಿಸಲ್ಪಟ್ಟವೆ. ಸಮಸ್ತ ಸತ್ಯ ದಲ್ಲಿ ನಡಿಸುವಂಥಾ ಪರಿಶುದ್ಧಾತ್ಮವು ಹೊಯಿದದೆ. ಸಭೆಯು ಸ್ಥಾಪಿಸಲ್ಪಟ್ಟದೆ. ದೇವರ ವಾಕ್ಯವು ಬರಿಯಲ್ಪಟ್ಟದೆ, ಈಗ ಉಳಿದದ್ದು ಇಷ್ಟೇ; ಏನಂದರೆ — ರಕ್ಷಣ್ಯವು ಭೂಮಿಯ ಸಮಸ್ತ ಜನಾಂಗಗಳಿಗೂ ಅವರಲ್ಲಿ ಒಬ್ಬೊಬ್ಬ ಮನುಷ್ಯನಿಗೂ ಪ್ರಸಂ ಗಿಸಲ್ಪಡುವದೂ ತಾವಾಗಿ ಅದನ್ನು ಅಂಗೀಕಾರ ಮಾಡದೆ ಇದ್ದರೆ ಮಾತ್ರ ಹೊರ್ತು ಎಲ್ಲರೂ ರಕ್ಷಣ್ಯವನ್ನು ಸ್ವಂತ ಮನಸ್ಸಿನಿಂದ ಸ್ವೀಕರಿಸಿ ಕೊಂಡು ತಮ್ಮ ಪಾಪಗಳ ಕ್ಷ ಮೆಯನ್ನೂ ನಿತ್ಯಜೀವವನ್ನೂ ಹೊಂದುವದೂ ಇದೇ ರಕ್ಷಣ್ಯವು ಹುಳಿ ಹಿಟ್ಟಿನ ಹಾಗೆ (ಮತ್ತಾ. ೧೩, ೩೩.) ಮನುಷ್ಯತ್ವವೆಂಬ ಇಡೀ ಮುದ್ದೆಯನ್ನೂ ಆವರಿಸಿ ಕೊಂಡು ಹುಳಿ ಮಾಡ ಬೇಕು. ಅದು ಎಲ್ಲಾ ಸ್ಥಿತಿಗಳನ್ನೂ ಪ್ರಯತ್ನಗಳನ್ನೂ ಮ ನುಷ್ಯಜೀವನದ ಎಲ್ಲಾ ರೀತಿಗಳನ್ನೂ ಸಂಬಂಧಗಳನ್ನೂ ಅವು ಅತ್ಯುನ್ನತವಾಗಿರಲಿ, ಅತ್ಯಲ್ಪವಾಗಲಿ, ಎಲ್ಲಾ ಶುದ್ಧೀಕರಿಸ ಬೇಕು. ಇದೇ ಈ ಕಾಲದ ಉದ್ಯೋಗವು.

೨) ಇವೆಲ್ಲಾದಕ್ಕೆ ಅಪೊಸ್ತಲಿಕಕಾಲದಲ್ಲಿಯೇ ನೆಲಗಟ್ಟು ಇಟ್ಟದೆ. ಆರಂ ಭ ಮಾಡಿ ಅದೆ ಎಂಬದು ನಿಶ್ಚಯ. ಇಷ್ಟು ಆಲೋಚಿಸುವಾಗ್ಯೆ ಅಪೊಸ್ತಲಿಕಕಾ ಲದ ಅನಂತರದ್ದು ಸಹಾ ಅದೇ ಉದ್ಯೋಗವೂ ಅದೇ ಗುಣವೂ ಉಳ್ಳದ್ದಾಗಿತ್ತು. ಹೀಗೆ ನೆನಸಿದರೆ ಈ ೨ ಕಾಲಗಳಲ್ಲಿಯೂ ಕಥೆಯಲ್ಲಿ ವಿಕಸಿತವಾದದ್ದು ಒಂದೇ ಒಂ ದು ಪ್ರವಾಹವಾಗಿರುತ್ತದೆ. ಆದರೂ ಈ ಒಂದು ತರದ ಉದ್ಯೋಗದ ಒಳಗೆ ೨ ಕಾಲಗಳೂ ಒಂದಕ್ಕೊಂದು ಬೇರೆಯಾಗಿಯೂ ವ್ಯತ್ಯಾಸವಾಗಿಯೂ ಇರುತ್ತವೆ. ಅ ಪೊಸ್ತಲಿಕಕಾಲದಲ್ಲಿ ವಿಕಸಿತವಾದದ್ದಕ್ಕೆ ನೆಲಗಟ್ಟೂ ಆಧಾರವೂ ಯಾವದಂದರೆ: ಪರಿಶುದ್ಧಾತ್ಮದ ಅಸಾಧಾರಣವಾದ ಕೃಪಾವರಗಳೂ ಮುಖ್ಯವಾಗಿ ಅಪೊಸ್ತ ಲಿಕಪ್ರಸಂಗಕ್ಕೆ ಆಧಾರವಾದ ಪರಸಹಾಯವಿಲ್ಲದೆ ಉಂಟಾದ ಆತ್ಮಪ್ರಕಾಶವೂ

ಅಪೊಸ್ತೊಲಿಕಪ್ರಯತ್ನವನ್ನು ಬಹು ಬಲವಾಗಿ ಆದರಿಸಿ ಹೊದಗಿಸಿದ ಅದ್ಭುತಗಳನ್ನೂ ಲಕ್ಷಣಗಳನ್ನೂ ಮಾಡುವ ವರವೂ ಇವುಗಳೇ. ಆಗ್ಯೆ ಅದು ಅವಶ್ಯವಾಗಿತ್ತು. ದೇವರ ವಾಕ್ಯವು ಪರಸಹಾಯವಿಲ್ಲದೆ ಆತ್ಮಪ್ರಕಾಶದಿಂದ ಮಾತ್ರವೇ ಮುಂದಿಡಲ್ಪಡ ಬಹುದಾಯಿತು. ಅಪೊಸ್ತೊಲಿಕಪ್ರಸಂಗವು ಅದರ ಸಂಗಡ ಅವ ಲಕ್ಷಣ ಅದ್ಭುತಗಳಿಂದ ಮಾತ್ರವೇ ಸಾಕಾಗಿ ಭರವಸಕ್ಕೆ ಯೋಗ್ಯವಾಗ ಬಹುದಾಯಿತು. ಈ ಪ್ರಕಾರವೇ ದೇವರ ಸಭೆಯ ನೆಲಗಟ್ಟು ನಿಶ್ಚಂಚಲವಾಗಿಯೂ ಭದ್ರವಾಗಿಯೂ ಇಡಲ್ಪಡ ಬಹುದಾಯಿತು.

೩) ಅಪೊಸ್ತಲರು ತೀರಿ ಹೋದ ಮೇಲೆ ಪರಿಶುದ್ಧಾತ್ಮವು ವಿಶೇಷವಾಗಿ ಸಾಧಾರಣವಾದ ಕೃಪಾಕರಣಗಳಿಂದ ಅಂದರೆ ವಾಕ್ಯದಿಂದಲೂ ಪ್ರಸಾದದಿಂದಲೂ ಯತ್ನೈಸುತ್ತದೆ. ಮತ್ತು ಒಂದು ಸಾರಿ ಭದ್ರವಾಗಿಯೂ ರಕ್ಷಣ್ಯದ ಬಂಡೆಯಲ್ಲಿ ನಿಶ್ಚಂಚಲವಾಗಿಯೂ ಸ್ಥಾಪಿಸಲ್ಪಟ್ಟ ಸಭೆಗೆ ಅಸಾಧಾರಣವಾದ ಕೃಪಾವರಗಳು ಅವಶ್ಯವಾಗಿ ಸಹಾ ಇರುವದಿಲ್ಲಾ. ಅದಕ್ಕೆ ಪ್ರಸಂಗಕ್ಕೋಸ್ಕರ ಬಹಿರಂಗದ ಲಕ್ಷಣಗಳ ಮತ್ತು ಅದ್ಭುತಗಳ ಸಹಾಯವು ಇನ್ನೂ ಅವಶ್ಯವಾಗಿರುವದಿಲ್ಲಾ. ಯಾಕಂದರೆ ಸಭೆಯು ತಾನೇ ಮತ್ತು ಅದರಿಂದ ಉಂಟಾದ ಲೋಕದ ರೂಪಾಂತ್ರವೇ ಅದ್ಭುತವಾಗಿರುತ್ತದೆ. ಇದು ಆ ಅದ್ಭುತಗಳೆಲ್ಲವುಗಳಿಗಿಂತ ದೊಡ್ಡದಾಗಿರುತ್ತದೆ. ಅದಕ್ಕೆ ಪರಸಹಾಯವಿಲ್ಲದ ಆತ್ಮಪ್ರಕಾಶವೂ ಬಲಪಡಿಸುವಿಕೆಯೂ ಇನ್ನು ಬೇಡ. ಯಾಕಂದರೆ ಕೃಪೋಪಾಯಗಳಲ್ಲಿ ಪ್ರಕಾಶಬಲಗಳ ಎಂದೂ ಸಮೃದ್ಧಿಯಾಗಿರುವ ಬುಗ್ಗೆಯು ಅದಕ್ಕೆ ಉಂಟು. ಅದ್ಭುತಗಳು ಅಪೊಸ್ತೊಲಿಕಕಾಲದಲ್ಲಿ ಹ್ಯಾಗೋ ಹಾಗೆಯೇ ಇಲ್ಲಿ ಸಹಾ ಅದೇ ಪ್ರಕಾರವಾಗಿಯೂ ಅಷ್ಟೇ ಸಾರಿಯೂ ಆಗುತ್ತವೆ. ಆದರೆ ಅದ್ಭುತವು ಪ್ರಕೃತಿಯ ಕೀಳಪ್ರದೇಶದಿಂದ ಅಂತರಂಗದ ಆತ್ಮಜೀವನದ ಮೇಲ್ಪ್ರದೇಶದಲ್ಲಿ ಸೇರಿಯದೆ. ಇದೇ ಅದರ ನಿಜವಾದದ್ದೂ ಯೋಗ್ಯವಾದದ್ದೂ ಆಗಿರುವ ಪ್ರದೇಶವಾಗಿರುತ್ತದೆ. ಪಾಪಿಯ ಆತ್ಮಪ್ರಕಾಶ ನೀತಿನಿರ್ಣಯ ಶುದ್ಧೀಕರಣಗಳ ಗವಜಿ ಇಲ್ಲದ ಅಡಗಿರುವ ಅದ್ಭುತಗಳು (§ ೧೮೭) ಆತ್ಮದ ಆಶ್ಚರ್ಯಕರವಾದ ನಡಿಸೋಣಗಳೂ ಕೃಪೆಯಾಗಿ ಎಳಿಯೋಣಗಳೂ ಮೆಲ್ಲಕ್ಕೆ ಆದರೆ ಹೆಚ್ಚು ಹೆಚ್ಚು ಆಗಿ ಬರುವಂಥ ಲೋಕದ ರೂಪಾಂತ್ರವೂ ನವೀಕರಣವೂ ಪ್ರಾರ್ಥನೆಗಳನ್ನು ಕೇಳುವದೂ (§ ೧೮೧) ಮುಂತಾದ ಇದೆಲ್ಲಾ ವಿಶ್ವಾಸದ ಕಣ್ಣಿಗೆ ರೋಗಗಳನ್ನು ವಾಸಿ ಮಾಡುವದಕ್ಕಿಂತಲೂ ಸತ್ತವರನ್ನು ಎಬ್ಬಿಸುವದಕ್ಕಿಂತಲೂ ದೊಡ್ಡ ಅದ್ಭುತವಾಗಿ ಕಾಣುತ್ತದೆ. ಕ್ರೈಸ್ತತ್ವವು ಅದರ ಒಳಗಿನ ದೈವಬಲದಿಂದ ಜೈಸ ಬೇಕು. ಲೋಕವು ವಿಶ್ವಾಸದಿಂದ ಜೈಸಲ್ಪಡ ಬೇಕು (೧ ಯೋಹಾ. ೫, ೪). ಸ್ವೀಕಾರಕ್ಕೆ ಬೇಕಾದ್ದೆಲ್ಲಾ ಈಗ

ಇರುವಂಥಾ ರಕ್ಷಣ್ಯವನ್ನು ಯಾರಾದರೂ ಅದ್ಭುತಗಳಿಂದ ತಕ್ಕೊಳ್ಳಲಿಕ್ಕೆ ಬಲಾತ್ಕರಿಸಲ್ಪಡ ಬಾರದು.



## § 180. ರಕ್ಷಣ್ಯೋಪಾಯಗಳು (ದೇವರ ವಾಕ್ಯವು)

ಈ ಕಾಲದ ಉದ್ಯೋಗವನ್ನು ತೀರಿಸ ಬೇಕಾದರೆ ಪರಿಶುದ್ಧಾತ್ಮದ ಪ್ರಯತ್ನದಿಂದ ಸಭೆಗೆ ಒಪ್ಪಿಸಲ್ಪಟ್ಟ ರಕ್ಷಣ್ಯದ ಇಲ್ಲವೆ ಕೃಪೆಯ ಉಪಾಯಗಳಿಂದ (ವಾಕ್ಯದಿಂದಲೂ ಪ್ರಸಾದದಿಂದಲೂ) ಆಗ ಬೇಕು. ದೇವರವಾಕ್ಯವು ರಕ್ಷಣ್ಯವನ್ನು ಸಾರುವದಕ್ಕೂ ತಿಳುಕೊಳ್ಳಲಿಕ್ಕೂ ಇದೆಲ್ಲದಕ್ಕೂ ನಿಶ್ಚಂಚಲವಾದ ನೆಲಗಟ್ಟಾಗಿರುತ್ತದೆ. ಅದರಲ್ಲಿ ಯತ್ನೈಸುವ ಪರಿಶುದ್ಧಾತ್ಮದ ಬಲದಿಂದ ಪಾಪಿಯು ಮಾನಸಾಂತ್ರಕ್ಕೆ ಕರಿಯಲ್ಪಟ್ಟು ವಿಶ್ವಾಸಕ್ಕೆ ತರಲ್ಪಡುತ್ತಾನೆ. ಮಾನಸಾಂತ್ರ ಪಡುವವನಿಗೂ ರಕ್ಷಣ್ಯವನ್ನು ಅಪೇಕ್ಷಿಸುವವನಿಗೂ ನೀತಿನಿರ್ಣಯವು ಸಾರಲ್ಪಡುತ್ತದೆ. ನೀತಿನಿರ್ಣಯ ಪಟ್ಟವನು ಶುದ್ಧೀಕರಣದ ಮಾರ್ಗದಲ್ಲಿ ನಡಿಸಲ್ಪಡುತ್ತಾನೆ (ಸಮ ನೋಡು § ೧೮೬. ೧೮೭). ಅಪೊಸ್ತಲರ ಮತ್ತು ಪ್ರವಾದಿಗಳ ಆತ್ಮದಲ್ಲಿ ದೇವರ ವಾಕ್ಯವನ್ನು ಹುಟ್ಟಿಸಿದಂಥಾ ಅದೇ ಆತ್ಮವು (೨ನೇ ಪೇತ್ರ. ೧, ೨೧. ೨ನೇ ತಿಮೊ. ೩, ೧೬. ಮತ್ತಾ. ೧೦, ೨೦. ಯೋಹಾ. ೧೬, ೧೩. ೧ ಕೊರಿ. ೨, ೧೦—೧೩.) ಅದು ಯಾವದಕ್ಕೋಸ್ಕರ ಕೊಡಲ್ಪಟ್ಟದೆಯೋ ಅದನ್ನು ಮಾಡುವಾಗ್ಯೆ ಯಥಾರ್ಥ ಮನಸ್ಸಿನಿಂದ ಓದುವಂಥಾ ಇಲ್ಲವೆ ಕೇಳುವಂಥಾ ಒಬ್ಬೊಬ್ಬನ ಮನಸ್ಸಿನಲ್ಲಿ ಅದಕ್ಕೆ ಸಾಕ್ಷಿಯಾಗಿರುತ್ತದೆ. ಯೆಶಾಯ. ೫೫, ೧೦. ೧೧. ಇಬ್ರಿ. ೪, ೧೨. ಎರೆಮಿಯ. ೨೩, ೨೯. ೨ನೇ ತಿಮೊ. ೩, ೧೫—೧೭. ಯೋಹಾ. ೫, ೩೯. ಆದ್ದರಿಂದ ವಾಕ್ಯವು ಸಮಾಧಾನ ಸೌಖ್ಯಗಳಿಗೂ ಒಳ್ಳೇ ಮನಸ್ಸು ಹುಟ್ಟಿಸುವದಕ್ಕೂ ಶಿಕ್ಷೆಗೂ ಆರದ ಬುಗ್ಗೆಯೂ ರಕ್ಷಣ್ಯಕ್ಕೆ ಮಾರ್ಗ ತೋರಿಸುವಂಥಾದ್ದೂ ಎಲ್ಲಾ ಸ್ಥಿತಿಗಳಿಗೂ ಸಂಬಂಧಗಳಿಗೂ ಎಲ್ಲಾ ಕಾಲಗಳಿಗೂ ಸ್ಥಾನಗಳಿಗೂ ಪ್ರಾಯಗಳಿಗೂ ಜೀವನದ ಸೂತ್ರವೂ ಆಗಿರುತ್ತದೆ. ಅದು ಅತ್ಯಂತ ಬುದ್ಧಿಶಾಲಿ ಸಹಾ ಅದರ ಅಗಾಧಗಳನ್ನು ನಿಶ್ಚಯಿಸ ಕೂಡದಂಥಾ ಗುಂಡಿಯಾಗಿರುತ್ತದೆ. ಮತ್ತೊಂದು ಕಡೆಯಲ್ಲಿ ಅದು ಆತ್ಮದಲ್ಲಿ ಬಡವನು ಸಹಾ ಗ್ರಹಿಸಿ ತಿಳುಕೊಳ್ಳುವಷ್ಟು ಸ್ವಚ್ಛವಾಗಿಯೂ ಗ್ರಾಹ್ಯವಾಗಿಯೂ ಇರುತ್ತದೆ (ಅದು "ಆನೆಯು ಈಜುವ ಹಾಗೆಯೂ ಕುರಿಮರಿಯು ದಾಟುವ ಹಾಗೆಯೂ ಸಾಕಾದ ನೀರಾಗಿರುತ್ತದೆ"). ಒಂದೊಂದು ವ

ರ್ಷಶತವು ದಿವ್ಯ ಜ್ಞಾನ ತಿಳುವಿಕೆಗಳ ಹಾಸ ನಿಧಿಗಳನ್ನು ಅದರ ಅಗಾಧಗಳಿಂದ ಮೇಲೆ ತಂದು, ಸಭೆಯು ಅವುಗಳನ್ನು ಕ್ರೈಸ್ತ ಜೀವನಕ್ಕೋಸ್ಕರವೂ ದೇವರ ರಾಜ್ಯವನ್ನು ವಿಸ್ತರಿಸುವದಕ್ಕೋಸ್ಕರವೂ ಫಲ ಧರಿಸ ಮಾಡುವ ಹಾಗೆ ಅದಕ್ಕೆ ಒಪ್ಪಿಸಿ ಕಾಡ ಬೇಕು.

ಪರಿಶಿಷ್ಟ ೧. ಹಳೇ ಒಡಂಬಡಿಕೆಯ ದೇವವಾಕ್ಯವು ಹಳೇ ಒಡಂಬಡಿಕೆಯ ಸಭೆಗೆ ಮಾತ್ರವಲ್ಲ (ಯೋಶುವಾ. ೧, ೮. ಯೆಶಾಯ. ೫೫, ೧೦. ೧೧.) ಎಲ್ಲಾ ಕ್ರೈಸ್ತಸಭೆಗೂ ಮಹಾ ಕೃಪೋಪಾಯವಾಗಿರುತ್ತದೆ. ಅಂಥಾದ್ದೆಂದು ಕ್ರಿಸ್ತನೂ (ಯೋಹಾ. ೫, ೩೯) ಅಪೊಸ್ತಲರೂ (೨ ತಿಮೊ. ೩, ೧೫—೧೭. ೨ ಪೇತ್ರ. ೧, ೧೯) ವಾತ್ಸಲ್ಯದಿಂದಲೂ ಮನಸ್ಸಾಕ್ಷಿಗೆ ಸರಿಯಾಗಿಯೂ ಅದನ್ನು ಪ್ರಯೋಗಿಸ ಬೇಕೆಂದು ಹೇಳಿದರು. ಭಕ್ತಿಯ ವಿಷಯವಾದ ತಿಳುವಿಕೆ ಬೋಧನೆಗಳನ್ನು ಕುರಿತು ಇದನ್ನು ಮಾತ್ರ ಯಾವಾಗಲೂ ಮರಿಯ ಬಾರದು. ಏನಂದರೆ—ಹಳೇ ಒಡಂಬಡಿಕೆಯ ಪ್ರಕಟಣೆಯು ಹೊಸ ಒಡಂಬಡಿಕೆಯ ಪ್ರಕಟಣೆಯ ಹಾಗೆ ದಿವ್ಯ ಸತ್ಯವಾಗಿದ್ದರೂ ಸುಶಿಕ್ಷೆಯನ್ನು ಕೊಟ್ಟು ವಿಕಸಿತವಾಗುತ್ತಾ ಇರುವ ಗುಣಕ್ಕಾಗಿ ಸ್ವಲ್ಪವಾದರೂ ಅಪೂರ್ಣವಾದ ಪ್ರಕಟಣೆಯ ಸ್ಥಾನಕ್ಕೆ ಶೇರಿ ಇರುವದರಿಂದ ಹೊಸ ಒಡಂಬಡಿಕೆಯ ಸಂಪೂರ್ಣತೆಯ ಪ್ರಕಾಶದಲ್ಲಿ ಅದನ್ನು ಓದಿ ಫಲ ಧರಿಸ ಮಾಡ ಬೇಕು. ಆದರೆ ಹಳೇ ಒಡಂಬಡಿಕೆಯು ಭಕ್ತಿಯಲ್ಲಿ ನಡಿಯುವ ಮಿಕ್ಕಾದ ಜೀವನಕ್ಕೆ ಮುಖ್ಯವಾಗಿ ಜೀವದ ಗಂಡಾಂತ್ರ ಹೋರಾಟ ಸಂಕಟಗಳಲ್ಲಿ ಹೊಸ ಒಡಂಬಡಿಕೆಗಿಂತ ಕಟ್ಟುವಿಕೆಗೆ ಹೆಚ್ಚು ಸಂಗತಿಗಳನ್ನು ಕೊಡುತ್ತದೆ. ಮತ್ತು ಲುಥರನು ಕೀರ್ತನೆಗಳ ವಿಷಯ ಹೇಳುವಂಥಾದ್ದು (ಸಮ ನೋಡು § ೭೦ ಪರಿಶಿಷ್ಟ) ಹಳೇ ಒಡಂಬಡಿಕೆಯ ಮಿಕ್ಕಾದ ಪುಸ್ತಕಗಳ ವಿಷಯವಾಗಿ ಸಹಾ ಹೇಳ ಬಹುದು. ಇಲ್ಲಿ ನಾವು ರಕ್ಷಣ್ಯಕ್ಕೋಸ್ಕರ ದೇವರು ಮಾಡಿದ ಸುಶಿಕ್ಷೆಯ ಸ್ಥಳದಲ್ಲಿ ನಡಿಸಲ್ಪಡುತ್ತೇವೆ. ಮತ್ತು ಮಾನುಷ್ಯಹೃದಯವು ಎಲ್ಲಾ ಕಾಲಗಳಲ್ಲಿ ಒಂದೇ ಪ್ರಕಾರವಾಗಿ ಚಂಚಲವಾಗಿಯೂ ಆದರೆ ದಿವ್ಯಕೃಪೆಯು ಒಂದೇ ಪ್ರಕಾರವಾಗಿ ನಂಬಿಕೆಯುಳ್ಳದ್ದಾಗಿಯೂ ಇರುವದರಿಂದ ಸಂತೋಷ ದುಃಖಗಳ ಹೋರಾಟ ಶೋಧನೆಗಳ, ಜಯಾಪಜಯಗಳ ವಿಷಯವಾಗಿ ನಡದಂಥಾ ದಿವ್ಯ ಪ್ರಕಟಣೆಯ ಪ್ರಕಾಶದಲ್ಲಿ ನಿಶ್ಚಯಿಸಲ್ಪಟ್ಟಂಥಾ ಮುಂಗುರ್ತುಗಳು ಇಲ್ಲಿ ನಮ್ಮ ಜೀವನಕ್ಕೆ ಉಂಟು.

ಪರಿಶಿಷ್ಟ ೨. ಹೊಸ ಒಡಂಬಡಿಕೆಯ ನಿರ್ಣಯವು (ಸಮ ನೋಡು § ೯೭) ಈಗ ನಮಗಿರುವ ಪ್ರಕಾರ ಆಫ್ರಿಕದ ಹಿಪ್ಪೊರೇಗ್ಯ ಎಂಬಲ್ಲಿ ಕೂಡಿ ಬಂದ ಸಮಾಗಮದಲ್ಲಿ ೩೯೩ನೇ ವರ್ಷದಲ್ಲಿ ಸಭೆಗೆ ನಿಶ್ಚಯಿಸಲ್ಪಟ್ಟಿತು. ಇದರಲ್ಲಿರುವಂಥಾದ್ದೇನಂದರೆ:

೧ನೇ ಹೊಸ ಒಡಂಬಡಿಕೆಯ ಅಸ್ತಿವಾರದ ಶಾಸನಗಳು ಅಂದರೆ ಮತ್ತಾಯ ಮಾರ್ಕ ಲೂಕ ಯೋಹಾನರ ೪ ಸುವಾರ್ತೆಗಳು.

೨ನೇ ಹೊಸ ಒಡಂಬಡಿಕೆಯ ಕಥೆಯ ಶಾಸನವು ಅಂದರೆ ಅಪೊಸ್ತಲರ ಕ್ರಿಯೆಗಳ ಪುಸ್ತಕ.

೩ನೇ ಹೊಸ ಒಡಂಬಡಿಕೆಯ ಬೋಧನೆಯ ಮತ್ತು ಭಕ್ತಿಜೀವನದ ಶಾಸನಗಳು. ಇದಕ್ಕೆ ಸೇರುವಂಥಾದ್ದು ಅಪೊಸ್ತಲನಾದ ಪೌಲನ ಪತ್ರಿಕೆಗಳು ರೋಮಾಯರಿಗೆ ಕೊರಿಂಥ್ಯರಿಗೆ ಗಲಾತ್ಯರಿಗೆ ಎಫೆಸ್ಯರಿಗೆ ಫಿಲಿಪ್ಪಿಯರಿಗೆ ಕೊಲೊಸ್ಸೆಯರಿಗೆ ಥೆಸ್ಸಲೋನಿಕ್ಯರಿಗೆ, (ಕುರುಬರ ಸಂಬಂಧ ಪತ್ರಿಕೆಗಳು) ತಿಮೊಥೇಯನಿಗೆ ತೀತನಿಗೆ ಫಿಲೆಮೋನನಿಗೆ—ಇವುಗಳ ಹೊರ್ತು ಇಬ್ರಿಯರ ಪತ್ರಿಕೆ. ಅದೇ ಪ್ರಕಾರ ಸರ್ವ ಪತ್ರಿಕೆಗಳು (ಬಹಳ ಸ್ಥಳಗಳಿಗೆ ಒಂದೇ ಸಾರಿ ಬರದದ್ದು) ಯಾಕೋಬನದು ಪೇತ್ರನದೂ ಯೋಹಾನನದೂ ಯೂದನದೂ.

೪ನೇ ಕಡೆಯಲ್ಲಿ ಹೊಸ ಒಡಂಬಡಿಕೆಯ ಪ್ರವಾದನೆಯ ಶಾಸನವು ಅಂದರೆ ಪ್ರಕಟಣೆಯ ಪುಸ್ತಕ.

ಪರಿಶಿಷ್ಟ ೩. ಶುದ್ಧ ಬರಹವು ಎಲ್ಲಾ ಕ್ರೈಸ್ತ ತಿಳುವಿಕೆಗೆ ಒಂದೇಯಾಗಿರುವ ಬುಗ್ಗೆಯೂ ಮಾದ್ರಿಯೂ ಆಗಿರ ಬೇಕು. ಆದರೆ ಶುದ್ಧ ಬರಹದ ಬೋಧನೆಯನ್ನು ವಿಕಸಿತ ಮಾಡುವದೂ ಕಟ್ಟಿ ಕೊಂಡು ಬರುವದೂ ಬರಹದಲ್ಲಿ ಸ್ಪಷ್ಟವಾಗಿ ಬೋಧಿಸಲ್ಪಡದೆ ಇರುವಂಥಾದ್ದು ಎಲ್ಲಾ ಅಕ್ರೈಸ್ತವಾಗಿರುತ್ತದೆಂತಲೂ ಬರಹಕ್ಕೆ ವಿರೋಧವಾಗಿರುತ್ತದೆಂತಲೂ ಹೇಳುವಂಥಾದ್ದು ಇಕ್ಕಟ್ಟಿನ ಹೃದಯದ ಸುಳ್ಳು ಆಲೋಚನೆಯಾಗಿರುತ್ತದೆ. ಬರಹ ವಾಕ್ಯಗಳು ಆತ್ಮವೂ ಜೀವವೂ ಆಗಿ ಬಿತ್ತಿದಂಥಾ ಅದೇ ಆತ್ಮದ ಅಧ್ಯಕ್ಷತನದಿಂದ ಹೆಚ್ಚು ಹೆಚ್ಚು ಮಹಿಮೆಯುಳ್ಳದ್ದಾಗಿ ಬೆಳೆಯುವ ಪೈರಾಗುವ ಪರ್ಯಂತರಕ್ಕೂ ವಿಕಸಿತವಾಗ ಕೂಡುವಂಥಾ ಮತ್ತು ಆಗ ಬೇಕಾದಂಥಾ ತಿಳುವಿಕೆಯ ಜೀವವುಳ್ಳ ಬೀಜಗಳಾಗಿರುತ್ತವೆ. ಈ ಪೈರನ್ನು ಸಾಕಲಿಕ್ಕೆ ಅಪ್ಪಣೆ ಹೊಂದಿದ ಸಭೆಯು ಸಹಾ ಆತ್ಮದಿಂದ ಉಜ್ಜೀವಿಸಲ್ಪಟ್ಟು ನಡಿಸಲ್ಪಡುತ್ತದೆ. ಆದ್ದರಿಂದ ಸಭೆಯು ವಿಕಸಿತ ಮಾಡುವದರಲ್ಲಿ ಏನೂ ಬರಹಕ್ಕೆ ವಿರೋಧವಾಗಿ ಇರದೆ ಬರಹದ ಬೋಧನೆಯನ್ನು ಅವಯವಗಳಾಗಿ ಅರಳ ಮಾಡುವಂಥಾದ್ದಾಗಿ ಪ್ರತ್ಯಕ್ಷವಾಗಿರುತ್ತದೋ ಅದು ಅದರ ಹಾಗೆಯೇ ಆತ್ಮದ ಬೋಧನೆ ಎಂದೆಣಿಸ ಬೇಕು. ಆದರೆ ಸಭೆಯು ಜೀವನದ ಮತ್ತು ಬೋಧನೆಯ ಬೆಳೆಯುವಿಕೆಯಲ್ಲಿ ಏನೇನು ಬರಹಕ್ಕೆ ವಿರೋಧವಾಗಿರುತ್ತದೋ ಅದು ಆತ್ಮದ ಕೃತ್ಯವಲ್ಲ, ಅದು ಅದೈವಿಕವಾದ ಮನುಷ್ಯಕೃತ್ಯವೂ ತಪ್ಪಾಗಿರುವ ಮನುಷ್ಯಾಜ್ಞೆಯೂ ಆಗಿರುತ್ತದೆ; ಆದ

ಕಾರಣ ಅಂಥಾದ್ದು ಸಂದೇಹವಿಲ್ಲದೆ ತ್ಯಜಿಸಲ್ಪಡಲಿಕ್ಕೆ ಯೋಗ್ಯವಾದ್ದಾಗಿರುತ್ತದೆ (ಸಮ ನೋಡು ಮತ್ಥಾ. ೧೫, ೮). ೧ ಥೆಸ್ಸ. ೫, ೨೧. ಎಲ್ಲವನ್ನು ಪರೀಕ್ಷಿಸಿ ಒಳ್ಳೇದನ್ನೇ ಹಿಡಿದು ಕೊಳ್ಳಿರಿ.



## § 181. ಮುಂದೆ (ಪ್ರಾರ್ಥನೆ)

ದೇವರು ಪರಿಶುದ್ಧ ಬರಹದಲ್ಲಿ ನಮ್ಮ ಸಂಗಡ ಮಾತಾಡುತ್ತಾನೆ, ತನ್ನ ಚಿತ್ತವನ್ನೂ ನಮ್ಮ ರಕ್ಷಣ್ಯಕ್ಕೋಸ್ಕರವಾದ ಯೋಚನೆಯನ್ನೂ ಸಾರಿ, ಅದರಲ್ಲಿ ಸೇರ ಬೇಕೆಂದು ನಮ್ಮನ್ನು ಕರಿಯುತ್ತಾನೆ. ಈ ದೇವರ ವಾಕ್ಯಕ್ಕೆ ಕೃಪೆಯನ್ನು ಅಂಗೀಕರಿಸಲಿಕ್ಕೆ ಮನುಷ್ಯನಿಗಿರುವ ಸಿದ್ಧತ್ವವನ್ನೂ ಅಪೇಕ್ಷೆಯನ್ನೂ ತೋರಿಸುವಂಥಾ ದೇವರ ಕಡೆಗೆ ಪ್ರಾರ್ಥನೆಯಲ್ಲಿ ಮನುಷ್ಯನಿಂದ ಬರುವ ವಾಕ್ಯವು ಪ್ರತಿಯಾಗಿರುತ್ತದೆ. ಹಾಗಾದರೆ ಪ್ರಾರ್ಥನೆಯು ಎದುರುಗೊಂಡು ಉತ್ತರ ಕೊಡುವಂಥಾ ಮನುಷ್ಯನ ಮಾತು ದೇವರ ಕಡೆಗೆಂದು ಹೇಳ ಬಹುದು. ಹಾಗಂದರೆ ದಿವ್ಯಚಿತ್ತದ ಸಂಗಡ ಮಾನುಷ್ಯಚಿತ್ತವು ಐಕ್ಯವಾಗುತ್ತದೆ. ಪ್ರಾರ್ಥನೆ ಎಂಬ ಹೆಸರನ್ನು ಹೊಂದಲಿಕ್ಕೂ ಕೃಪೋಪಾಯದ ಪೂರ್ಣ ಆಶೀರ್ವಾದವನ್ನು ಪಡಕೊಳ್ಳಲಿಕ್ಕೂ ಯೇಸುವಿನ ನಾಮದಲ್ಲಿಯೂ ಪರಿಶುದ್ಧಾತ್ಮದ ಬಲದಲ್ಲಿಯೂ ಆಗುವಂಥಾ ಪ್ರಾರ್ಥನೆಯೂ ಆಗಿರುವ ಕ್ರೈಸ್ತ ಪ್ರಾರ್ಥನೆಯು ಮಾತ್ರ ಯೋಗ್ಯವಾಗಿರುತ್ತದೆ. ಆದರೆ ಯೇಸುವಿನ ನಾಮದಲ್ಲಿ ಪ್ರಾರ್ಥಿಸುವದಂದರೆ ನಮ್ಮ ಸ್ವಂತ ನಾಮದಲ್ಲಿ ಅಲ್ಲ ಸ್ವಂತ ಬಲದಿಂದಲೂ ಸ್ವಂತ ಪುಣ್ಯದಿಂದಲೂ ಅಲ್ಲಾ (ದಾನಿಯೇಲ್. ೯, ೧೮) ಅದು ಸಂಪೂರ್ಣವಾದ ರಕ್ಷಣ್ಯದ ಆಧಾರದಿಂದಲೂ ಕ್ರಿಸ್ತನ ಅಪ್ಪಣೆಯಿಂದಲೂ ಅವನ ಶರೀರದ ಅಂಗವೆಂದು ಪ್ರಾರ್ಥಿಸುವದಾದ್ದರಿಂದ ನಮ್ಮ ಪ್ರಾರ್ಥನೆಯು ಕ್ರಿಸ್ತನ ಪ್ರಾರ್ಥನೆ ಎಂದು ಕಾಣುತ್ತದೆ. ಆ ತ್ರಾಣವುಳ್ಳದ್ದಾಗಿರುತ್ತದೆ. ಆದರೆ ಆ ಪ್ರಕಾರ ಪ್ರಾರ್ಥನೆ ಮಾಡ ಬೋಧಿಸುವಂಥಾ ಪ್ರಾರ್ಥಿಸ ಸಹಾಯ ಮಾಡುವಂಥಾ (ರೋಮಾ. ೮, ೧೫. ೨೬.) ಪರಿಶುದ್ಧಾತ್ಮದ ಬಲದಿಂದಲ್ಲದೆ ಅಂಥಾ ಪ್ರಾರ್ಥನೆಯು ಅಸಾಧ್ಯವಾಗಿರುತ್ತದೆ. ಆದರೆ ಯಾವ ಪ್ರಾರ್ಥನೆಯು ಮಗನ ಪುಣ್ಯದಿಂದ ಆಧರಿಸಲ್ಪಡುತ್ತದೋ ಪರಿಶುದ್ಧಾತ್ಮದ ಬಲದಿಂದ ಹೊರಲ್ಪಡುತ್ತದೋ ಆ ಪ್ರಾರ್ಥನೆಗೆ ತಂದೆಯ ಕೇಳ್ವಿಕೆ ಸಹಾ ಉಂಟು (ಯೋಹಾ. ೧೪, ೧೩. ೧೪. ೧೬, ೨೩). ಯಾಕಂದರೆ ಅಂಥಾ ಪ್ರಾರ್ಥನೆಯು, ಪ್ರಾರ್ಥನೆಯು ಏನಾಗಿರ ಬೇಕೋ ಪೂರ್ಣವಾಗಿ ಅದೇ

ಯಾಗಿರುತ್ತದೆ. ಏನಂದರೆ ದಿವ್ಯ ಚಿತ್ತದ ಸಂಗಡ ಮಾನುಷ್ಯಚಿತ್ತವು ಪೂರ್ಣವಾಗಿ ಐಕ್ಯವಾಗಿರುವಂಥಾದ್ದೇ ಆದದರಿಂದ ಪರಿಶುದ್ಧ ಬರಹವು ಕ್ರೈಸ್ತ ಪ್ರಾರ್ಥನೆಯು ನಿಸ್ಸಂಶಯವಾಗಿ ಕೇಳಲ್ಪಡುತ್ತದೆಂದೂ ಅದರಲ್ಲಿ ಪ್ರತ್ಯಕ್ಷವಾಗುವ ವಿಶ್ವಾಸಕ್ಕೆ ದಿವ್ಯ ಸರ್ವಶಕ್ತಿಯ ಅದ್ಭುತಬಲದಲ್ಲಿ ಪಾಲುಂಟೆಂದೂ ಹೇಳುವಾಗ್ಯೆ ಆಶ್ಚರ್ಯ ಪಡ ಕಾರಣವಿಲ್ಲಾ (ಮಾರ್ಕ. ೧೧, ೨೩. ೨೪. ಮತ್ತಾ. ೧೭, ೨೦. ಸಂ. ೧೧, ೨೨. ಮಾರ್ಕ. ೯, ೨೩).

ಪರಿಶಿಷ್ಟ ೧. ದೇವರು ಪ್ರಾರ್ಥನೆಗಳನ್ನು ಕೇಳಿ ಪ್ರಾರ್ಥನೆ ಇಲ್ಲದೆ ನಡಿಸುವದಕ್ಕಿಂತ ಬೇರೆಯಾಗಿ ಪ್ರಾರ್ಥನೆಗೋಸ್ಕರ ನಡಿಸುವದಾದರೆ ಅವನು ತನ್ನ ಆಲೋಚನೆಯನ್ನು ಬೇರೆ ಮಾಡುವವನಾಗಿ ನಿರ್ವಿಕಾರಿ ಎಂಬದು ಅಲ್ಲವಾಗಿರ ಬೇಕು ಎಂತ ಹೇಳುವಂಥಾದ್ದು ಬುದ್ಧಿ ಇಲ್ಲದ ಹುಚ್ಚುಕಕ್ಷೆಯಾಗಿರುತ್ತದೆ. ಯಾಕಂದರೆ ದೇವರು ಲೋಕಾರಂಭದಿಂದ ತಿಳಿದಿರುವ ನಮ್ಮ ಪ್ರಾರ್ಥನೆಗಳು ದೇವರ ಯೋಚನೆಯಲ್ಲಿ ಮೊದಲೇ ಶೇರಿ ಇರುತ್ತದೆ. ಆದ ಕಾರಣ ಬಹಳ ಸರ್ತಿ ಉಚ್ಚರಿಸುವ ಮೊದಲೇ ಪ್ರಾರ್ಥನೆಗಳು ಕೇಳಲ್ಪಡುತ್ತವೆ. ದನಿಯೇಲ್. ೯, ೨೩. ಯೆಶಾಯ. ೬೫, ೨೪.

ಪರಿಶಿಷ್ಟ ೨. ನಾವು ದೇವರ ಹತ್ತರ ಬೇಡಿ ಕೊಳ್ಳುವ ಮೊದಲೇ ನಮಗೇನು ಬೇಕೆಂಬದನ್ನು ದೇವರು ತಿಳಿದಿರುವದರಿಂದ ಪ್ರಾರ್ಥನೆ ಮಾಡುವದು ಅನವಶ್ಯವಾಗಿರುತ್ತದೆಂದು ಹೇಳುವದು ಸಹಾ ಅದೇ ಪ್ರಕಾರ ಬುದ್ಧಿ ಇಲ್ಲದ ಮಾತು (ಮತ್ತಾ. ೬, ೮). ಯಾಕಂದರೆ ನಮ್ಮ ಹೃದಯದಲ್ಲಿ ಏನುಂಟೆಂಬದನ್ನು ದೇವರು ತಿಳುಕೊಳ್ಳುವ ಹಾಗೆ ನಾವು ಪ್ರಾರ್ಥಿಸುವದಾಗಿರುವದಿಲ್ಲ. ಪ್ರಾರ್ಥನೆಯು ನಮ್ಮ ಆತ್ಮಿಕ ಜೀವನದ ಅವಶ್ಯವಾಗಿಯೂ ಸ್ವಾಭಾವಿಕವಾಗಿಯೂ ಇರುವ ಪ್ರಕಟಣೆಯೂ ಪ್ರಯತ್ನವೂ ಆಗಿರುತ್ತದೆ.

ಪರಿಶಿಷ್ಟ ೩. ಸಮವಾದ ಪ್ರಾರ್ಥನೆಗೆ ವಾಗ್ದತ್ತವಾಗಿರುವ ನಿಶ್ಚಯವಾದ ಕೇಳ್ವಿಕೆಯು ಉಂಟಾಗದಿದ್ದರೆ ಪ್ರಾರ್ಥನೆಯು ತಪ್ಪಾದದ್ದು ಅಂದರೆ ವಿಶ್ವಾಸ ಇಲ್ಲದ್ದಾಗಿತ್ತು (ಯಾಕೊ. ೧, ೬. ೭. ಸಂ. ೪, ೩). ಅಥವಾ ಕೇಳಲ್ಪಡಲಿಲ್ಲವೆಂಬದು ತೋರಿಕೆಗೆ ಮಾತ್ರ ಹಾಗಿರುತ್ತದೆ. ಯಾಕಂದರೆ ದೇವರು ತನ್ನ ಮಾರ್ಗಗಳ ಅಶೋಧ್ಯ ಜ್ಞಾನದ ಪ್ರಕಾರ ಪ್ರಾರ್ಥನೆಯ ಫಲವು ಪ್ರತ್ಯಕ್ಷ ಮಾಡುವದರಲ್ಲಿ ತಡ ಮಾಡುತ್ತಾನೆ. ಒಂದು ವೇಳ್ಯ ನಮ್ಮ ವಿಶ್ವಾಸವನ್ನು ಶೋಧಿಸುವದಕ್ಕೋಸ್ಕರ; ಅಥವಾ ನಮ್ಮಲ್ಲಿಯೇ ಇಲ್ಲವೆ ನಮ್ಮ ಹೊರಗೆ ಆಗ ಬೇಕಾದ ಬೇರೆ ಕಾರಣಗಳಿಗೋಸ್ಕರ ಹಾಗೆ ಮಾಡುತ್ತಾನೆ (೨ ಪೇತ್ರ. ೩, ೯). ಬಹಳ ಸರ್ತಿ ನಮ್ಮ ಅಲ್ಪ ದೃಷ್ಟಿಯಿಂದ

ಲೂ ಆತ್ಮಿಕ ಭಾವಹೀನತ್ವದಿಂದಲೂ ತಿಳಿಯದೆ ಇದ್ದರೂ ಆತನು ನಮ್ಮ ಪ್ರಾರ್ಥನೆಗಳನ್ನು ತಕ್ಷಣದಲ್ಲಿ ಕೇಳುತ್ತಾನೆ. ನಮಗೆ ತಿಳಿಯದೆ ಇರುವದು ಯಾಕಂದರೆ ನಾವು ನಿರೀಕ್ಷಿಸದಕ್ಕಿಂತಲೂ ಅಪೇಕ್ಷಿಸದಕ್ಕಿಂತಲೂ ಪೂರ್ಣವಾಗಿ ಬೇರೆ ತರವಾಗಿ ಆತನು ಕೇಳಿ ಮಾಡುವದರಿಂದಲೇ.



## § 182. ಮುಂದೆ ಪ್ರಸಾದಗಳ ವಿಷಯವಾಗಿ, ಒಟ್ಟಾರೆ

ಪ್ರಸಾದಗಳು ನಾವು ಅವುಗಳ ಪರಿಮುಖವಾಗಿ ನಿಜವಾಗಿ ಕ್ರಿಸ್ತನ ಸಂಗಡ ಅತ್ಯಂತವಾಗಿಯೂ ನಿಜವಾಗಿಯೂ ಇರುವ ಜೀವನೈಕ್ಯದಲ್ಲಿ ಸೇರಿ, ಅದರಲ್ಲಿ ಕಾಪಾಡಲ್ಪಟ್ಟು ಭದ್ರವಾಗಿರುವ ಹಾಗೆ ಆತನಿಂದ ನಿಶ್ಚೈಸಲ್ಪಟ್ಟವು. ಹ್ಯಾಗೆ ಸಾಧಾರಣ ಜೀವನಕ್ಕೆ ಎರಡು ಅಂದರೆ ಜನನ ಪೋಷಣಗಳು ಅವಶ್ಯವಾಗಿರುತ್ತವೋ ಅದೇ ಪ್ರಕಾರ ಕ್ರಿಸ್ತನಲ್ಲಿರುವ ಹೊಸ ಜೀವನಕ್ಕೆ ಸಹಾ. ಆದ್ದರಿಂದ ಎರಡನೇ ಪ್ರಸಾದಗಳು ಇರುತ್ತವೆ. ಹೊಸ ಜೀವನದ ಜನನವನ್ನು ಉಂಟು ಮಾಡುವದಕ್ಕೆ ಸ್ನಾನವೂ ಅದೇ ಜೀವನವನ್ನು ಪೋಷಿಸುವದಕ್ಕೂ ಬೆಳಿಸುವದಕ್ಕೂ ರಾತ್ರಿಭೋಜನವು ಉಂಟು. ಹೀಗಿರಲಾಗಿ ಸ್ನಾನವು ಒಂದೇ ಸಾರಿಯಾಗ ಬೇಕೆಂಬದೂ ರಾತ್ರಿಭೋಜನವು ತಿರಿಗಿ ತಿರಿಗಿ ಅವಶ್ಯವೆಂಬದೂ ಪ್ರತ್ಯಕ್ಷ. (ಮುಂಗುರ್ತುಗಳಿಗೆ ಇಲ್ಲದಂಥಾ) ಪ್ರಸಾದಗಳಿಗೆ ವಿಶೇಷವಾದಂಥಾದ್ದು ಏನಂದರೆ — ಅವುಗಳಲ್ಲಿ ಅದೃಶ್ಯವಾದಂಥಾ ಇಂದ್ರಿಯಪರವಾದಂಥಾ ಕೃಪಾವರವು ದೃಶ್ಯವಾದಂಥಾ ಇಂದ್ರಿಯ ಗ್ರಾಹ್ಯವಾದಂಥಾ ವಸ್ತುಗಳಲ್ಲಿ ಮುಚ್ಚಿದ್ದಾಗಿರುತ್ತದೆ. ಅವುಗಳನ್ನು ಪಡಕೊಂಡಿದ್ದೇವೆಂಬದನ್ನು ಇಂದ್ರಿಯದ ಪರಿಮುಖವಾಗಿ ಸಹಾ ನಿಶ್ಚಯವಾಗಿ ತಿಳುಕೊಳ್ಳುವ ಹಾಗೆ ಬಹಿರಂಗವಾದ ಇಂದ್ರಿಯಗಳಿಂದ ಅವುಗಳನ್ನು ತಕ್ಕೊಳ್ಳುತ್ತೇವೆ.

ಪರಿಶಿಷ್ಟ ೧. ಮುಂಗುರ್ತಿಗೂ ಪ್ರಸಾದಕ್ಕೂ ಬಹಳ ಹೆಚ್ಚುಕಡಿಮೆ ಉಂಟು. ಮುಂಗುರ್ತು ಇಂದ್ರಿಯಪರವಾದ ಆಲೋಚನೆಗೆ ಇಂದ್ರಿಯ ಗ್ರಾಹ್ಯವಾದ ಆಕಾರವೂ ಗುರ್ತೂ ಆಗಿರುತ್ತದೆ. ಮತ್ತು ಮುಂದಿರುವ ಪ್ರತ್ಯಕ್ಷವಾದ ಗುರ್ತಿನಿಂದ ಅದು ರೂಪಿಸುವಂಥಾ ದೂರವಾಗಿರುವ ಅದೃಷ್ಯವಾದ ವಸ್ತುವನ್ನೇ ನೆನಪಿಗೆ ತರುವದು ಪ್ರಯೋಜನವಾಗಿರುತ್ತದೆ. ಆದರೆ ಎರಡಕ್ಕೂ ನಿಜವಾದ ಐಕ್ಯ ಉಂಟಾಗುವದಿಲ್ಲಾ. ಪ್ರಸಾದದಲ್ಲಿ ಸಹಾ ಇಂದ್ರಿಯ ಗ್ರಾಹ್ಯವಾದದ್ದೇ ಇಂದ್ರಿಯಪರವಾದದರ

ಬಿಂಬವೂ ಗುರ್ತೂ ಆಗಿರುತ್ತದೆ. ಆದರೆ ಇಂದ್ರಿಯಪರವಾದದ್ದು ಇಂದ್ರಿಯ ಗ್ರಾಹ್ಯವಾದ್ದಕ್ಕೆ ದೂರವಾಗಿಯೂ ಬೇರೆಯಾಗಿಯೂ ಇರುವದಿಲ್ಲಾ. ಅದು ಇದರ ಸಂಗಡ ಅತ್ಯಂತವಾಗಿ ಸಂಬಂಧಿಸಲ್ಪಟ್ಟು ಒಂದಾಗುತ್ತದೆ. ಹೀಗಾಗಿ ಯಾರಿಗೆ ಇಂದ್ರಿಯ ಗ್ರಾಹ್ಯವಾದ ಗುರ್ತುಂಟೋ ಅವನಿಗೆ ಅದರಲ್ಲಿಯೂ ಅದರ ಸಂಗಡಲೂ ಅವರ ಪರಿಮುಖವಾಗಿಯೂ ಇಂದ್ರಿಯಪರವಾದ ದಾನ ಸಹಾ ಉಂಟು. ಮುಂ ಗುರ್ತು ಯಾವದನ್ನು ರೂಪಿಸುತ್ತದೋ ಅದು ಅದಕ್ಕೆ ಕೂಡಿಕೊಂಡು ಅದರ ಸಂಗಡ ಒಂದಾದ ಕೂಡಲೇ ಅದು ಪ್ರಸಾದವಾಗಿರುತ್ತದೆ.

ಪರಿಶಿಷ್ಟ ೨. ಕಾಣುವಂಥಾ ಗುರ್ತು ಪ್ರಸಾದವಾಗುವದು ಪ್ರತಿಷ್ಠೆಯಿಂದ, ಅಂದರೆ ಸ್ಥಾಪನೆಯ ಮತ್ತು ವಾಗ್ದತ್ತದ ವಾಕ್ಯಗಳು ಕಡಿಮೆ ಮಾಡದೆ ಮಿಶ್ರ ಮಾಡದೆ ಅದರ ಮೇಲೆ ಉಚ್ಚರಿಸಲ್ಪಡುವದರಿಂದಲೇ. ಪೀಠದ ಸೇವಕನು ವಸ್ತುವನ್ನು ಪ್ರಸಾದವಾಗ ಮಾಡುವವನಲ್ಲ, ಅವನು ಕ್ರಿಸ್ತನ ಹೆಸರಿನಲ್ಲಿಯೂ ಅಪ್ಪಣೆಯಿಂದಲೂ ಹೇಳುವ ಕ್ರಿಸ್ತನ ವಾಕ್ಯವು ಇರುವಂಥಾ ಪರಲೋಕದ ಕೃಪಾದಾನವನ್ನು ಇರುವ ಭೂಮಿಯ ವಸ್ತುವಿಗೆ ಕೂಡಿಸುತ್ತದೆ. ಹೀಗಾಗಿ ಅವನ ವಿಶ್ವಾಸವೂ ಅವನ ಭಕ್ತಿಯೂ ಪ್ರಸಾದದ ಆಶೀರ್ವಾದದಲ್ಲಿಯೂ ಪ್ರಯತ್ನದಲ್ಲಿಯೂ ಏನೂ ಹೆಚ್ಚಿಸುವದಿಲ್ಲಾ. ಅದೇ ಪ್ರಕಾರ ಅವನ ಅವಿಶ್ವಾಸವೂ ಅವನ ಅಯೋಗ್ಯತೆಯೂ ಅದರಲ್ಲಿ ಏನೂ ಕಡಿಮೆ ಮಾಡುವದೂ ಇಲ್ಲ.

ಪರಿಶಿಷ್ಟ ೩. ಪರಲೋಕದ ಕೃಪಾದಾನವನ್ನು ತಕ್ಕೊಳ್ಳುವದಕ್ಕೆ ನಮ್ಮ ವಿಶ್ವಾಸವು ಅವಶ್ಯವಿಲ್ಲ; ಆದರೆ ಆಶೀರ್ವಾದಕ್ಕೆ ಅದು ಬೇಕು. ವಿಶ್ವಾಸದಲ್ಲಿ ತಕ್ಕೊಂಡು ಪ್ರಯೋಗಿಸುವವನಿಗೆ ಮಾತ್ರವೇ ಅದು ರಕ್ಷಣ್ಯಕ್ಕಾಗಿ ಇರುವದು. ಆದರೆ ಅವಿಶ್ವಾಸಿಗೂ ತುಚ್ಛೀಕಾರ ಮಾಡುವವನಿಗೂ ನಾಶಕ್ಕಾಗಿ ಇರಬೇಕು.



## § 183. ಮುಂದೆ (ಸ್ನಾನ)

ಸ್ನಾನವು ಪುನರ್ಜನ್ಮದ ತೊಳೆಯುವಿಕೆಯೂ ಪರಿಶುದ್ಧಾತ್ಮದ ನವೀಕರಣವೂ ಆಗಿರುತ್ತದೆ (ತೀತ. ೩, ೫). ಅದು ಇಹದಲ್ಲಿ ಸ್ನಾನದ ನೀರಿಗೆ ಬಂಧಿಸಲ್ಪಟ್ಟದೆ (ಯೋಹಾ. ೩, ೫). ಆದರಿಂದ ನಾವು ಕ್ರಿಸ್ತನ ಮರಣದ ಐಕ್ಯದಲ್ಲಿಯೂ ಜೀವದೈಕ್ಯದಲ್ಲಿಯೂ ಅಂಗೀಕರಿಸಲ್ಪಡುತ್ತೇವೆ (ರೋಮಾ. ೬, ೩. ೪). ಮತ್ತು

ದೇವರ ಪುತ್ರತ್ವದಲ್ಲಿಯೂ ನಿತ್ಯಜೀವದ ಬಾಧ್ಯತೆಯಲ್ಲಿಯೂ ಪ್ರವೇಶಿಸುತ್ತೇವೆ (ರೋಮಾ. ೮, ೧೭). ಮಾಂಸದಿಂದ ಮಾಂಸವಾಗಿ ಸ್ತ್ರೀಗರ್ಭದಿಂದ ಹುಟ್ಟಿದ ಹಳೇ ಮನುಷ್ಯನಲ್ಲಿ ದೇವರ ವಾಕ್ಯದ ಮತ್ತು ವಾಗ್ದತ್ತದ ಬಲದ ಮುಖಾಂತ್ರ ಸ್ನಾನದ ನೀರಿನಿಂದ ಆತ್ಮದಿಂದ ಆತ್ಮವಾಗಿರುವ ಹೊಸ ಮನುಷ್ಯನು ಹುಟ್ಟುತ್ತಾನೆ (ಯೋಹಾ. ೩, ೬). ಹಾಗಾದರೆ ಸ್ನಾನ ಹೊಂದಿದ ಪ್ರತಿ ಮನುಷ್ಯನು ಪುನರ್ಜನ್ಮಿತನಾಗಿ ತನ್ನಲ್ಲಿ ಇಮ್ಮಡಿ ಛಾಪವನ್ನು ಧರಿಸುತ್ತಾನೆ, ತಂದೆತಾಯಿಗಳಿಂದ ಹುಟ್ಟಿಸಲ್ಪಟ್ಟು ಹುಟ್ಟಿದವನಾಗಿ ಆದಾಮನ ಬಿಂಬವನ್ನು ಅಂದರೆ ಹಳೇ ಮನುಷ್ಯನನ್ನು, ಮತ್ತು ನೀರಿನಿಂದಲೂ ಆತ್ಮದಿಂದಲೂ ಹೊಸತಾಗಿ ಹುಟ್ಟಿ ಇರುವದರಿಂದ ಕ್ರಿಸ್ತನ ಬಿಂಬವನ್ನು ಅಂದರೆ ಹೊಸ ಮನುಷ್ಯನನ್ನು ಧರಿಸುತ್ತಾನೆ. ಎರಡು ಛಾಪಗಳು ಹಳತೂ ಹೊಸತೂ ಕೂಡಾ ಒಂದೇ ಮೂರ್ತಿಯಾಗಿರುತ್ತವೆ. ಇದಕ್ಕೆ ಐಕ್ಯದ ಮತ್ತು ಮಧ್ಯಸ್ಥಾನವು ಅಹಂಛಾಪವು ಅಂದರೆ ಅಹಂಛಾಪಿಯಾದ ನಾನು ಎಂಬದೇ. ಸ್ನಾನದ ಪರಿಮುಖವಾಗಿ ದೇವರಿಂದ ಹುಟ್ಟಿದ ಹೊಸ ನಿರ್ಮಾಣವು ಹಳೇ ಮನುಷ್ಯನ ಮೇಲೆ ಆಳಿ, ಅವನು ರೂಪಾಂತರವಾಗಿ ಐಕ್ಯವಾಗುವ ಮಟ್ಟಿಗೂ (ಎಫೆಸ. ೪, ೨೨. ಕೊಲೊ. ೩, ೯) ಹೆಚ್ಚು ಹೆಚ್ಚಾಗಿ ಶುದ್ಧೀಕರಿಸುತ್ತಾ ಇರುವ ಹಾಗೆ ಕ್ರಿಸ್ತನ ಸಂಪೂರ್ಣತೆಯ ನೀಳದ ಪ್ರಮಾಣಕ್ಕೆ (ಎಫೆಸ. ೪, ೧೩) ಅದನ್ನು ತರುವದೇ ಈ ಶೋಧನೆಯ ಮತ್ತು ಶಿಕ್ಷೆಯ ಜೀವನದ ಉದ್ಯೋಗವಾಗಿರುತ್ತದೆ. ಸ್ನಾನ ಹೊಂದುವದರಿಂದ ಪುನರ್ಜನ್ಮಿತನಾಗಿರುವದು ರಕ್ಷಣ್ಯಕ್ಕೆ ಸಾಲದು. ಯಾಕಂದರೆ ಯೋಗ್ಯವಾದ ಆಹಾರಪೋಷಣ ಶಿಕ್ಷೆಗಳಿಂದ ಬೆಳೆಯದೆ ವಿಕಸಿತವಾಗದೆ ಇರುವ ಯಾವ ಜನ್ಮವಾದರೂ ಸಂಕಟವಾಗಿ ಕಡೆಯಲ್ಲಿ ಸಾಯುವದೇ ಸರಿ.

ಪರಿಶಿಷ್ಟ ೧. ಇಂದ್ರಿಯ ಗ್ರಾಹ್ಯವಾದ ವಸ್ತುವಾಗಿ ಸ್ನಾನಪ್ರಸಾದಕ್ಕೆ ನೀರನ್ನು ಆರಿಸಿ ತೆಗದುಕೊಂಡದ್ದು ಸಾಧಾರಣವಾಗಿಯೂ ವಿನಾಕಾರಣವಾಗಿಯೂ ಇರುವದಿಲ್ಲ. ನೀರಿನ ಸ್ವಭಾವಿಕ ಪ್ರಯತ್ನವು ಸ್ನಾನಕೃಪೆಯ ಸ್ವಭಾವಪರವಾದ ಪ್ರಯತ್ನಕ್ಕೆ ಪ್ರತಿಯಾಗಿ ಅದನ್ನು ರೂಪಿಸುವದರಿಂದಲೇ ಅದು ಸ್ನಾನಕೃಪೆಯ ಆಧಾರವಾಗಲಿಕ್ಕೆ ಭೂಮಿಯ ಎಲ್ಲಾ ವಸ್ತುಗಳಲ್ಲಿ ಅತ್ಯಂತವಾಗಿ ಶಕ್ಯದ್ದಾಗಿರುತ್ತದೆ. ಸ್ನಾನದ ನೀರು ಶುದ್ಧೀಕರಿಸುವಂಥಾದ್ದಾಗಿ ಮಾತ್ರವಲ್ಲ, ಮುಖ್ಯವಾಗಿ ಹುಟ್ಟಿಸುವಂಥಾದ್ದಾಗಿಯೂ ಫಲಿಸುವಂಥಾದ್ದಾಗಿಯೂ ಉಜ್ಜೀವಿಸ ಮಾಡುವಂಥಾದ್ದಾಗಿಯೂ ಪುನರ್ಜನ್ಮಿಸುವಂಥಾದ್ದಾಗಿಯೂ ಇರುವ ವಸ್ತುವೆಂದು ಆಲೋಚಿಸಲ್ಪಡ ತಕ್ಕದ್ದು. ಈ ಆಲೋಚನೆಯು (ನೀರನ್ನು ಮತದ ಕಾರ್ಯಗಳಲ್ಲಿ ಪ್ರಯೋಗಿಸುವದರಲ್ಲಿಯಾದರೂ)

ಪೂರ್ವಜರೆಲ್ಲರಿಗೆ ಮೊದಲನೇ ಆಲೋಚನೆಗಿಂತ ಸಮೀಪವಾದ್ದಾಗಿತ್ತು. ಮತ್ತು ಪ್ರಕೃತಿಯಲ್ಲಿ ಹ್ಯಾಗೋ ಹಾಗೆಯೇ ದೇವರ ವಾಕ್ಯದಲ್ಲಿ ಸಹಾ ಅದಕ್ಕೆ ಸ್ವಚ್ಛವಾದ ಆಧಾರ ಉಂಟು (೨ ಪೇತ್ರ. ೩, ೫. ೧ ಮೋಶೆ. ೧, ೨. ೨೦. ಸಂ. ೨, ೫. ಇಯೋಬ್. ೧೪, ೮).

ಪರಿಶಿಷ್ಟ ೨. ಕರ್ತನು ಮಾರ್ಕನ ೧೬, ೧೬ನೇ ಶ್ಲೋಕದಲ್ಲಿ ವಿಶ್ವಾಸಿಸಿ ಸ್ನಾನ ಹೊಂದುವವನು ರಕ್ಷಿಸಲ್ಪಡುವನು, ಆದರೆ ವಿಶ್ವಾಸಿಸದವನು ಆಜ್ಞೆನಿರ್ಣಯ ಪಡುವನೆಂದು ಹೇಳುತ್ತಾನೆ. ಇಂಥವನು ಸ್ನಾನ ಹೊಂದಿದರೂ ಇಲ್ಲದಿದ್ದರೂ ಒಂದೇ. ದೇವರ ಬುದ್ಧಿಯುಳ್ಳ ರಕ್ಷಣ್ಯಕರವಾದ ಕ್ರಮವು ಕ್ರಿಸ್ತನ ಜೀವನ ಶ್ರಮೆ ಮರಣ ಉತ್ಥಾನ ದೇವರ ಬಲಗಡೆಗೆ ಕೂಡೊಯ್ಯೋಣಗಳಿಂದ ಉಂಟಾದ ರಕ್ಷಣ್ಯದಾನಗಳಲ್ಲಿ ಪಾಲು ಹೊಂದುವದನ್ನು ಸ್ನಾನಕ್ಕೆ ಕಟ್ಟಿದ್ದಾನೆ. ಮತ್ತು ಅವುಗಳನ್ನು ಹೊಂದಲಿಕ್ಕೆ ಸ್ನಾನವಲ್ಲದೆ ಬೇರೆ ಒಂದೇ ಉಪಾಯವಾದರೂ ಒಂದೇ ಮಾರ್ಗವಾದರೂ ಇಹದಲ್ಲಿ ಇಲ್ಲ. ಹಾಗಾದರೆ ಸ್ನಾನವಿಲ್ಲದೆ ನಾವು ರಕ್ಷಣ್ಯ ಹೊಂದ ಕೂಡದು. ಆದರೆ ವಿಶ್ವಾಸವಿಲ್ಲದೆ ಸ್ನಾನ ಸಹಾ ಪ್ರಯೋಜನವಿಲ್ಲ. ಸ್ವಭಾವಿಕವಾದ ಸಾಧನದ ಯೋಗ್ಯತೆಯನ್ನು ಹೆಚ್ಚಿಸಲಿಕ್ಕೆ ಮಾತ್ರವೇ ಆದೀತು. ಸ್ನಾನಕ್ಕೆ ಕೂಡ ಬೇಕಾದ ವಿಶ್ವಾಸವು ಎರಡು ತರದ್ದು. ೧, ಸ್ನಾನವನ್ನು ಸಮವಾಗಿ ಪಡಕೊಳ್ಳುವದಕ್ಕೆ ಅವಶ್ಯವಾಗಿರುವ ಮೊದಲೇ ಇರ ಬೇಕಾದ ವಿಶ್ವಾಸವು. ೨, ಸಮವಾಗಿ ಪಡಕೊಂಡ ಸ್ನಾನದ ಪ್ರಯತ್ನವಾಗಿರುವ ಮತ್ತೆ ಉಂಟಾಗುವ ವಿಶ್ವಾಸವು. ಅನುಭವವಲ್ಲಾ, ರಕ್ಷಣ್ಯದ ತಿಳುವಿಕೆ ಮಾತ್ರವೇ ಸಂಪೂರ್ಣವಾದಂಥಾ ಕ್ರೈಸ್ತಜೀವನದಲ್ಲಿ ಪರೀಕ್ಷಿತವಾಗುವಂಥಾ ವಿಶ್ವಾಸವಲ್ಲ, ಸಮ್ಮತಿಯೂ ಅಪೇಕ್ಷೆಯೂ ಅತ್ಯಾಪೇಕ್ಷೆಯೂ ಸ್ನಾನಕ್ಕೆ ಅವಶ್ಯವಾದದ್ದು. ಇದು ರಕ್ಷಣ್ಯದ ಒಡವೆಗಳು ನಿಜವಾಗಿ ಶಿಕ್ಕುವ ಮೊದಲೇ ಸ್ವಾಭಾವಿಕ ಮನುಷ್ಯನಲ್ಲಿ ಸಹಾ ಎಚ್ಚರಿಸಲ್ಪಡ ಬಹುದು. ಮತ್ತು ಆ ಒಡವೆಗಳು ಸಮವಾದಂಥಾ ಪೂರ್ಣ ಆಶೀರ್ವಾದ ಸಹಿತವಾಗಿ ಹೊಂದಲ್ಪಡ ಬೇಕಾದರೆ ಎಚ್ಚರಿಸಲ್ಪಟ್ಟಿರ ಬೇಕು. ಮೊದಲನೇದು ಸಮವಾಗಿ ಪಡಕೊಂಡು ಸಮವಾಗಿ ಪ್ರಯೋಗಿಸಿದ ರಕ್ಷಣ್ಯದ ಒಡವೆಗಳ ಫಲವಾಗಿಯೂ ಪ್ರಯತ್ನವಾಗಿಯೂ (ಆತ್ಮಪ್ರಕಾಶದಲ್ಲಿ ನೀತಿನಿರ್ಣಯದಲ್ಲಿ ಶುದ್ಧೀಕರಣದಲ್ಲಿ ಸಮ ನೋಡು § ೧೪೬, ೧೪೭.) ಮಾತ್ರವೇ ಶಿಕ್ಕುವಂಥಾದ್ದಾಗಿರುತ್ತದೆ. ಮೊದಲಿರ ಬೇಕಾದ ವಿಶ್ವಾಸವು ಸ್ನಾನದ ಬೀಜಕ್ಕೆ ಫಲಿಸುವ ಭೂಮಿಯಾಗಿರುತ್ತದೆ, ಮತ್ತೆ ಬರುವಂಥಾ (ಇಲ್ಲವೆ ರಕ್ಷಿಸುವಂಥಾ) ವಿಶ್ವಾಸವು ಈ ಬೀಜದಿಂದ ಬೆಳೆಯುವ ಫಲವಾಗಿರುತ್ತದೆ.

ಪರಿಶಿಷ್ಟ ೩. ಕ್ರೈಸ್ತಸಭೆಯು ಅದನ್ನು ಎಲ್ಲಾ ಸತ್ಯದಲ್ಲಿ ನಡಿಸುವ ಆತ್ಮದ ಬಲದಿಂದ ಬಾಲಸ್ನಾನವನ್ನು ಏಕಮನಸ್ಸಾಗಿ ಆರಂಭಿಸಿತು. ಅದು ಹೊಸ ಮತದವರಿಗೂ ಪ್ರತ್ಯೇಕಿಸಿ ಕೊಂಡವರಿಗೂ ಪ್ರತಿಯಾಗಿ ಅಂಥಾ ಸ್ನಾನವು ಅವಶ್ಯವಾಗಿರುತ್ತದೆಂದು ಭದ್ರವಾಗಿಯೂ ಜಯವಾಗಿಯೂ ಸ್ಥಾಪಿಸಿ ಅದೆ ಎಂದು ಅದನ್ನು ಬಿಡಕೂಡದು. ಬಾಲಸ್ನಾನದ ಪ್ರತಿಕಕ್ಷಿಗಳಿಗೆ ಅಜ್ಞಾನ ಇಲ್ಲವೆ ಅಪಜ್ಞಾನ ಕಾರಣ. ಸ್ನಾನವಾಕ್ಯವು (ಮತ್ಥಾ. ೨೮, ೧೯) ಅದಕ್ಕೆ ವಿರೋಧವಾಗಿರುತ್ತದೆಂದು ಅಜ್ಞಾನಮಾತ್ರವೇ ಹೇಳ ಬಹುದು (ಸಮ ನೋಡು § ೧೫೩, ೨ರಲ್ಲಿ ಹೇಳಿದಂಥಾ ಈ ವಾಕ್ಯದ ಸಮವಾದ ಭಾಷಾಂತರವನ್ನು). ಅಪೊಸ್ತಲರು ಬಾಲಕರಿಗೆ ಸ್ನಾನ ಕೊಡಲಿಲ್ಲಾ ಎಂಬದನ್ನು ಇನ್ನೂ ತೋರಿಸಿ ಇರುವದಿಲ್ಲಾ. ಮತ್ತು ಅದನ್ನು ತೋರಿಸಿದರೂ ಈಗಿನ ಕ್ರೈಸ್ತಸಭೆಯ ನಡತೆಗೆ ಅದು ವಿರೋಧವಾಗಿರುತ್ತದೆ ಎಂದಾಗುವದಿಲ್ಲಾ; ಯಾಕಂದರೆ ಸಭೆಯು ಅದನ್ನು ಸಮಸ್ತ ಸತ್ಯದಲ್ಲಿ ನಡಿಸುವ ಆತ್ಮದ ನಡಿಸೋಣದಿಂದ ಅಪೊಸ್ತೋಲಿಕಬೋಧನೆಯನ್ನೂ ನಡತೆಯನ್ನೂ ಮುಂದೆ ಕಟ್ಟಲಿಕ್ಕೂ ಅದು ಪೂರ್ಣ ವಿಕಸಿತವಾಗುವದಕ್ಕೂ ಮುಂದೆ ನಡಿಸುವದಕ್ಕೆ ಕರಿಯಲ್ಪಟ್ಟದೆ. ಸ್ನಾನದ ಸ್ವಭಾವದಿಂದಲೇ ಮಾಡುವ ಪ್ರತಿಕಕ್ಷಿಗಳಿಗೆ ಹೆಚ್ಚು ಬಲ ತೋರುತ್ತದೆ. ಮಗುವಿಗೆ ಅನುಭವವೂ ವಿಶ್ವಾಸವೂ ಇರ ಕೂಡದಾದ್ದರಿಂದ ಸ್ನಾನ ಸಹಾ ಹೊಂದ ಕೂಡದೆಂದೂ ಅವಶ್ಯವಾಗಿರುವಂಥಾ ಸ್ನಾನ ಹೊಂದುವವನ ಸ್ವಂತ ಸಮ್ಮತಿಯು ಇಲ್ಲವೆಂದೂ ಹೇಳುತ್ತಾರೆ. ರಕ್ಷಣ್ಯವನ್ನೂ ಹಾಗಾದರೆ ಸ್ನಾನವನ್ನು ಸಹಾ ಯಾರಿಗಾದರೂ ಬಲಾತ್ಕಾರದಿಂದ ಕೊಡಲಿಕ್ಕೆ ಆಗುವದಿಲ್ಲವೆಂಬದು ಸರಿ. ಆದರೆ ಮಗುವಿನ ಚಿತ್ತವೂ ಸಮ್ಮತಿಯೂ ಇಲ್ಲದೆ ಬಹಳ ಸರ್ತಿ ಅವುಗಳಿಗೆ ವಿರೋಧವಾಗಿ ಸಹಾ ಮನುಷ್ಯರಲ್ಲಿ ಇರುವ ತಿಳುವಿಕೆಗಳೂ ಸುಶಿಕ್ಷೆಯೂ ಕೊಡಲ್ಪಡುವಾಗ ಹ್ಯಾಗೋ ಹಾಗೆಯೇ ಸ್ನಾನವನ್ನು ಕೊಡುವದರಿಂದ ಸಹಾ ಮಗುವಿನ ಮೇಲೆ ಸ್ವಲ್ಪವಾದರೂ ಬಲಾತ್ಕಾರ ನಡಿಯುವದಿಲ್ಲಾ. ಹೆತ್ತವರ ಚಿತ್ತವೇ ಅಡ್ಡಿ ಇಲ್ಲದೆ ಬಾಯಿಯಿಲ್ಲದ ಮಗುವಿನ ಚಿತ್ತವು ಆಗಿರುತ್ತದೆ. ಈ ಅರ್ಥದಲ್ಲಿ ಒಂದು ವೇಳೆ ಅವರ ವಿಶ್ವಾಸವು (ಸಮ್ಮತಿ ಅಪೇಕ್ಷೆ ಅತ್ಯಾಪೇಕ್ಷೆಯಾಗಿ ವಿಶ್ವಾಸವು ಸ್ನಾನಕ್ಕೆ ಅವಶ್ಯವಾಗಿರುತ್ತದೆಂಬದಷ್ಟಕ್ಕಾದರೂ ಸಮ ನೋಡು ಪರಿಶಿಷ್ಟ ೨) ಅಹಂಭಾವಿಯಾಗಿ ಸ್ವತಂತ್ರದ ಪುರುಷತ್ವಕ್ಕೆ ಇನ್ನು ಬಾರದ ಮಗುವಿನ ವಿಶ್ವಾಸ ಸಹಾ ಆಗಿರುತ್ತದೆ. ಜನನವಾಗುವ ಮೊದಲು ಮಗುವಿನ ಶರೀರಜೀವನವು ತಾಯಿಯ ಶರೀರಜೀವನದ ಸಂಗಡ ಒಂದೇಯಾಗಿದ್ದು, ಜನನದಿಂದ ಸ್ವಂತ ಸ್ಥಿತಿಯುಳ್ಳದ್ದಾಗಿರುತ್ತದೆ ಹ್ಯಾಗೋ ಹಾಗೆಯೇ ಅದರ ಆತ್ಮಜೀವನವು ನಿರಾತಂಕವಾದ ಸ್ವಂತ ಸ್ಥಿತಿಗೂ ಸ್ವಚ್ಛವಾದಂಥಾ ಪೂರ್ಣವಾದಂ

ಥಾ ಅಹಂತೆಗೂ ಅರಳದೆ ಇರುವ ಮಟ್ಟಿಗೂ ಮಗುವಿನ ಆತ್ಮಜೀವನವು ಜನನದ ಮೇಲೆ ಸಹಾ ಹೆತ್ತವರ ಆತ್ಮಜೀವನದ ಸಂಗಡ ಒಂದೇಯಾಗಿರುತ್ತದೆ. ರಕ್ಷಣ್ಯದ ಅನುಭವ ಇಲ್ಲವೆ ಸಮವಾಗಿ ಹೇಳಿದರೆ ತಿಳುವಿಕೆ ಸ್ನಾನ ತೆಕ್ಕೊಳ್ಳುವವನು ಪ್ರಾಯಸ್ಥನಾದರೆ ಅಂಥವನಲ್ಲಿ ಅವಶ್ಯವಾಗಿ ಇರ ಬೇಕು. ಇದು ಸಹಾ ಅವನಿಗೆ ಅಪೇಕ್ಷೆಯೂ ಸಮ್ಮತಿಯೂ ಉಂಟಾಗುವದಕ್ಕೋಸ್ಕರ ಮಾತ್ರವೇ. ಆದರೆ ಬಾಲಸ್ನಾನದಲ್ಲಿ ಆಗುವ ಪ್ರಕಾರ ಹೆತ್ತವರ ಚಿತ್ತವೂ ಸಮ್ಮತಿಯೂ ಮಗುವಿಗೆ ಇನ್ನೂ ಇರದ ಸ್ವಂತ ಚಿತ್ತದ ಸ್ಥಳದಲ್ಲಿ ಇದ್ದು, ಅದಕ್ಕೋಸ್ಕರ ಕಾರ್ಯ ನಡಿಸುವದಾದ ಮೇಲೆ ಸ್ನಾನ ಹೊಂದುವ ಮಗುವಿನಲ್ಲಿ ಇರ ಬೇಕಾದದ್ದು ಹೆತ್ತವರಲ್ಲಿ ಇರ ಬೇಕೆಂಬದು ತನ್ನಷ್ಟಕ್ಕೆ ಆಗುತ್ತದೆ. ಅವರು ತಮ್ಮ ಮಗುವಿಗೆ ಯಾತಕ್ಕೆ ಸ್ನಾನ ಕೊಡುವದೆಂಬದನ್ನು ಅವಶ್ಯವಾಗಿ ತಿಳಿದಿರ ಬೇಕು.

ಪರಿಶಿಷ್ಟ ೪. ಹ್ಯಾಗೆ ಬದುಕೋಣವನ್ನು ಪ್ರತ್ಯಕ್ಷತೆಗೆ ತರುವ ಶರೀರದ ಜನನದ ಸಂಗಡ ರೋಗದಿಂದಲೂ ಮೂರ್ಛೆಯಿಂದಲೂ ಸತ್ತ ಹಾಗೆ ತೋರುವ ಮರಣದಿಂದಲೂ ಉಜ್ಜೀವಿಸುವಂಥಾ ಎಚ್ಚರಿಕೆಯು ಒಂದೇಯಾಗಿರುವದಿಲ್ಲವೋ ಅದೇ ಪ್ರಕಾರ ಪುನರ್ಜನನವು (ಆತ್ಮಿಕವಾದ) ಎಚ್ಚರಿಕೆಯ ಸಂಗಡ ಒಂದೇಯಲ್ಲ. ಎಲ್ಲಿ ಸ್ನಾನದಿಂದ ನೆಡಲ್ಪಟ್ಟಂಥಾ ಕರ್ತನ ಸಂಗಡ ಇರುವ ಅನ್ಯೋನ್ಯವು ಬೇಕಾದ ಆತ್ಮಿಕ ಪೋಷಣ ಆಹಾರಗಳಿಂದ ಕಾಪಾಡಿ, ಯಾವಾಗಲೂ ನವೀಕರಿಸಲ್ಪಡುವದಿಲ್ಲವೋ ಅಲ್ಲಿ ಶರೀರಸಂಬಂಧವಾಗಿ ನಿದ್ರೆ ಮೂರ್ಛೆ ತೋರಿಕೆಯ ಮರಣಗಳ ಪ್ರಕಾರವೇ ಇರುವ ಆತ್ಮಿಕಸ್ಥಿತಿಯು ಉಂಟಾಗುತ್ತದೆ. ಮತ್ತು ಈ ಸ್ಥಿತಿಯು ತಕ್ಕ ಕಾಲದಲ್ಲಿ ಬೇರೆಯಾಗದೆ ಇದ್ದರೆ ನಿಜವಾದಂಥಾ (ನಿತ್ಯವಾದ) ಮರಣಕ್ಕೆ ಕೂಡುತ್ತದೆ. ಪರಿಶುದ್ಧಾತ್ಮದ ಪ್ರಕಾಶೀಕರಣ ಕರಿಯೋಣಗಳ ಪರಿಮುಖವಾಗಿ ಅಂಥಾ ಮರಣನಿದ್ರೆಯೊಳಗಿಂದ ಏಳುವದೇ ಎಚ್ಚರಿಸುವಿಕೆಯಾಗಿರುತ್ತದೆ.



## § 184. ಮುಂದೆ (ರಾತ್ರಿಭೋಜನ)

ರಾತ್ರಿಭೋಜನದಲ್ಲಿ (ಸಮ ನೋಡು § ೧೪೪, ೩) ಸ್ನಾನ ಹೊಂದಿದವನು ಹೊಸ ಮನುಷ್ಯನಿಗೆ ಬೇಕಾದ ಆಹಾರವನ್ನು ಹೊಂದುತ್ತಾನೆ. ತಾಯಿಯು ತನ್ನ ಮಗುವನ್ನು ಮೊಲೆಹಾಲೆಂಬ ತನ್ನ ಸ್ವಂತ ಮಾಂಸ ರಕ್ತಗಳಿಂದ ಹ್ಯಾಗೆ ಸಾ

ಕುತ್ತಾಳೋ ಹಾಗೆಯೇ ತಾಯಿಯ ಪ್ರೀತಿಗಿಂತ (ಎಶಾಯ. ೪೯, ೧೫) ಬಹಳ ಹೆಚ್ಚು ಬಲವುಳ್ಳಂಥಾ ನಿತ್ಯಪ್ರೀತಿಯುಳ್ಳ ರಕ್ಷಕನು ಕ್ರಿಸ್ತನ ಆತ್ಮದಿಂದ ಹುಟ್ಟಿದಂಥಾ ಎಳೇ ಕೂಸುಗಳಂತೆ ಇರುವ ತನ್ನ ವಿಶ್ವಾಸಿಗಳನ್ನು (೧ ಪೇತ್ರ. ೨, ೨) ಅವರೆಲ್ಲರು "ಕ್ರಿಸ್ತನ ಸಂಪೂರ್ಣತೆಯ ನೀಳದ ಪ್ರಮಾಣಕ್ಕೂ ಪೂರ್ಣ ಗಂಡಸುತನಕ್ಕೂ" (ಎಫೆಸ್ಯ. ೪, ೧೩) ಶೇರುವ ಹಾಗೆ ತನ್ನ ಸ್ವಂತ ಮಾಂಸದಿಂದಲೂ ರಕ್ತದಿಂದಲೂ ಸಾಕುತ್ತಾನೆ. ಹ್ಯಾಗೆ ಕ್ರಿಸ್ತನು ಎಲ್ಲದರಲ್ಲಿಯೂ ನಮ್ಮ ಹಾಗೆ ಆಗುವದಕ್ಕೋಸ್ಕರ ಪಾಪ ಮರಣಗಳಿಂದ ಕೆಟ್ಟು ಹೋದ ನಮ್ಮ ಮಾಂಸವನ್ನೂ ರಕ್ತವನ್ನೂ ತನ್ನ ಮೇಲೆ ತಕ್ಕೊಂಡನೋ ಹಾಗೆಯೇ ನಾವು ಸಹಾ ಎಲ್ಲದರಲ್ಲಿ ಅವನ ಹಾಗೆ ಆಗುವದಕ್ಕೋಸ್ಕರ ಮರಣದಲ್ಲಿ ನಮಗೋಸ್ಕರ ಮುರಿಯಲ್ಪಟ್ಟು ಉತ್ಥಾನದಲ್ಲಿ ಮಹಿಮೆಗೊಂಡು ದಿವಾರೋಹಣದಲ್ಲಿ ನಿತ್ಯಮಹಿಮೆಯ ಪೂರ್ಣ ಪಾಲು ಹೊಂದಿದಂಥಾ ಹಾಗಾದರೆ ತನ್ನ ದಿವ್ಯ ಸ್ವಭಾವದ ಸರ್ವತ್ರತೆಗೆ (§ ೧೫೪, ೨) ಉನ್ನತವಾದಂಥಾ ಮಾಂಸವನ್ನೂ ರಕ್ತವನ್ನೂ ಸ್ವೀಕರಿಸಿ ನಮ್ಮೊಳಗೆ ತಕ್ಕೊಳ್ಳ ಬೇಕು. ಮತ್ತು ಈ ಇಂದ್ರಿಯಪರವಾದ ಆಹಾರವನ್ನು ನಮ್ಮ ಇಹದ ಇಂದ್ರಿಯ ಸಹಿತವಾದ ಸ್ವಭಾವದಲ್ಲಿ ತಕ್ಕೊಳ್ಳಲಾಗುವ ಹಾಗೆಯೂ ತಕ್ಕೊಂಡದ್ದಕ್ಕೆ ಇಂದ್ರಿಯದಿಂದ ನಿಶ್ಚಯವಾಗುವ ಹಾಗೆಯೂ ಆತನು ಎಲ್ಲಾ ಭೂಮಿಯ ಆಹಾರ ತ್ರಾಣವನ್ನು ರೂಪಿಸಿ ಅದರ ಮಹಿಮೆಯಾಗಿರುವ ರೊಟ್ಟಿ ದ್ರಾಕ್ಷೆರಸಗಳಲ್ಲಿ ಮುಚ್ಚಿದನು.

ಪರಿಶಿಷ್ಟ. ಕ್ರಿಸ್ತನ ಶರೀರ ರಕ್ತಗಳಿಗೆ ರಾತ್ರಿಭೋಜನದ ರೊಟ್ಟಿ ದ್ರಾಕ್ಷೆರಸಗಳ ಸಂಗಡ ಯಾವ ಸಂಬಂಧ ಉಂಟೆಂಬದರ ವಿಷಯದಲ್ಲಿ ೪ ಬೇರೆ ಬೇರೆ ಆಲೋಚನೆಗಳುಂಟು.

ರೋಮಾಯ ಸಭೆಯು ಬೋಧಿಸುವದೇನಂದರೆ— ಪ್ರತಿಷ್ಠೆಯಿಂದ ರೊಟ್ಟಿಯೂ ದ್ರಾಕ್ಷೆರಸವೂ ಕ್ರಿಸ್ತನ ಶರೀರವೂ ರಕ್ತವೂ ಆಗುತ್ತದೆ. ಅದ್ದರಿಂದ ಅದಾದ ಮೇಲೆ ಇನ್ನು ಬಂದೇ ಅಂದರೆ ಶರೀರವೂ ರಕ್ತವೂ ಮಾತ್ರವೆ ಇರುತ್ತದೆ ಎಂತ (ವಸ್ತ್ವಂತರ).

ಈ ಆಲೋಚನೆಗೆ ಪೂರ್ಣ ಪ್ರತೀಕಾರವಾಗಿ ಜ್ವಿಂಗ್ಲಿಯು ಬೋಧಿಸುವದೇನಂದರೆ: ರೊಟ್ಟಿಯೂ ದ್ರಾಕ್ಷೆರಸವೂ ಕ್ರಿಸ್ತನ ಶರೀರಕ್ಕೂ ರಕ್ತಕ್ಕೂ ಬರೇ ಮುಂಗುರ್ತು ಗುರ್ತು ಆಗಿರುತ್ತದೆ. ರೊಟ್ಟಿಯೂ ದ್ರಾಕ್ಷೆಯ ರಸವೂ ಬರೇ ರೊಟ್ಟಿ ದ್ರಾಕ್ಷೆರಸಗಳ್ಳೇ ಹೊರ್ತು ಬೇರೇನೂ ಆಗಿರಲಿಲ್ಲಾ, ಆಗುವದೂ ಇಲ್ಲಾ. ಅವುಗಳು ಕ್ರಿಸ್ತನ ಶರೀರವನ್ನೂ ರಕ್ತವನ್ನೂ ರೂಪಿಸಿ ನೆನಪಿಗೆ ತರುವದು ಮಾತ್ರವೇ. ಉತ್ಸವವಾ

ಗಿಯೂ ಅತಿ ವಿಶೇಷವಾಗಿಯೂ ಇರುವ ಈ ಕ್ರಿಯೆಯಿಂದ ಹೆಚ್ಚಿಸಲ್ಪಡುವಂಥಾ ವಿಶ್ವಾಸವನ್ನು ಬಲವಾಗಿ ಉಜ್ಜೀವಿಸ ಮಾಡುವಂಥಾ ನೆನಪೇ ಪ್ರಸಾದದ ಪ್ರಯೋಜನವೂ ಆಶೀರ್ವಾದವೂ ಆಗಿರುತ್ತದೆ ಎಂತ ಈ ಎರಡು ಆಲೋಚನೆಗಳು ರೋಮಾಯರದೂ ಜ್ವಿಂಗ್ಲಿಯದೂ ಮೇಲೆ ಹೇಳಿದ ವಾಕ್ಯದಿಂದ ೧ನೇ ಕೊರಿಂಥ. ೧೦, ೧೬. ದೇವವಾಕ್ಯಕ್ಕೆ ವಿರೋಧವೆಂದು ಹೇಳ ಬೇಕಾಗುತ್ತದೆ. ಯಾಕಂದರೆ ರೊಟ್ಟಿಗೂ ಶರೀರಕ್ಕೂ ಅದೇ ಪ್ರಕಾರ ದ್ರಾಕ್ಷೆರಸಕ್ಕೂ ರಕ್ತಕ್ಕೂ ಎಲ್ಲಿ ಐಕ್ಯ ಉಂಟಾಗಬೇಕೋ ಅಲ್ಲಿ ಎರಡೂ ಇರ ಬೇಕು. ಮತ್ತು ಒಂದಕ್ಕೊಂದು ಕೂಡ ಬೇಕು. ಜ್ವಿಂಗ್ಲಿಯ ಆಲೋಚನೆಗೆ ಸ್ಥಾಪನೆಯ ವಾಕ್ಯಗಳು ಸಹಾ ಮುಖ್ಯವಾಗಿ ವಿರೋಧವಾಗಿರುತ್ತವೆ (§ ೧೪೪, ೩). “ಇದೇ ನನ್ನ ಶರೀರವು—ಇದೇ ನನ್ನ ರಕ್ತವು” ಈ ವಾಕ್ಯಗಳು ಮರಣಜಾತಕದ ವಾಕ್ಯಗಳ, ಹಾಗಿದ್ದು ಪೂರ್ಣವಾಗಿಯೂ ಅರ್ಥ ಹೊಂದ ಬೇಕು. ಹಾಗೆಯೇ ಅಪೊಸ್ತಲನಾದ ಪೌಲನ ವಾಕ್ಯಗಳು ವಿರೋಧವಾಗಿರುತ್ತವೆ (೧ ಕೊರಿ. ೧೧, ೨೭. ೨೯). ಆ ಪ್ರಕಾರ ಅಯೋಗ್ಯವಾಗಿ ತಕ್ಕೊಳ್ಳುವವನು ಕರ್ತನ ಶರೀರಕ್ಕೂ ರಕ್ತಕ್ಕೂ ಅಪರಾಧಿಯಾಗಿರುತ್ತಾನೆ. ಮತ್ತು ಕರ್ತನ ಶರೀರವನ್ನು ವಿಶೇಷ ಮಾಡದೆ ತನಗೆ ಆಜ್ಞೆನಿರ್ಣಯವನ್ನು ತಿಂದು ಕುಡಿಯುತ್ತಾನೆ. ಹಾಗಾದರೆ ಕರ್ತನು ತಾನೇ ಅಲ್ಲಿರ ಬೇಕು. ಇದಲ್ಲದೆ ಆ ಆಲೋಚನೆಯ ಪ್ರಕಾರ ರಾತ್ರಿಭೋಜನವು ಅವಶ್ಯವಾಗಿರುತ್ತದೆಂದು ಹೇಳ ಕೂಡದು. ಅಂಥಾ ನೆನಪು ವಿಶ್ವಾಸದ ಬಲಪಡಿಸೋಣವೂ ಪ್ರಸಾದವಿಲ್ಲದೆ ಬೇರೆ ಅನೇಕ ಉಪಾಯಗಳಿಂದ ಅಷ್ಟೆ ತ್ರಾಣವಾಗಿ ಆಗ ಬಹುದು. ಈ ಎರಡು ವಿಪರೀತವಾದ ಅಂತ್ಯಗಳಿಗೆ ಸಮವಾಗಿಯೂ ಸತ್ಯವಾಗಿಯೂ ದೇವವಾಕ್ಯದ ಪ್ರಕಾರವಾಗಿಯೂ ಇರುವ ಮಧ್ಯವನ್ನು ಲುಥರನ ಬೋಧನೆಯು ತಕ್ಕೊಂಡದೆ. ಆ ಪ್ರಕಾರ ಎರಡೂ ಯಥಾರ್ಥವಾಗಿಯೂ ಸತ್ಯವಾಗಿಯೂ ಪರಲೋಕದ್ದು ಭೂಮಿಯದರಲ್ಲಿ ಅದರ ಸಂಗಡ ಅದರ ಪರಿಮುಖವಾಗಿ ಇರುತ್ತದೆ. ಮತ್ತು ಅದನ್ನು ವಿಶ್ವಾಸಿಯೂ ಅವಿಶ್ವಾಸಿಯೂ ತಕ್ಕೊಳ್ಳುತ್ತಾನೆ. ಲುಥರನ ಬೋಧನೆಗೂ ಜ್ವಿಂಗ್ಲಿಯ ಬೋಧನೆಗೂ ಮಧ್ಯದಲ್ಲಿ ಕಲ್ವೀನನ ಬೋಧನೆಯುಂಟು. ಆ ಪ್ರಕಾರ ಕರ್ತನ ಮಹಿಮೆ ಪಟ್ಟ ಶರೀರತ್ವವು ರಾತ್ರಿಭೋಜನದಲ್ಲಿ ಬಲವಾಗಿಯೂ ಯತ್ನೈಸುವಂಥಾದ್ದಾಗಿಯೂ ಇರುತ್ತದೆಂಬದು ಸರಿ. ಆದರೆ ಅದು ರೊಟ್ಟಿ ದ್ರಾಕ್ಷೆರಸಗಳಲ್ಲಿಯೂ ಅವುಗಳ ಸಂಗಡಲೂ ಅವುಗಳ ಮೂಲವಾಗಿಯೂ ಅಲ್ಲ, ಅವುಗಳ ಹತ್ತರವೂ ಪಾರ್ಶ್ವದಲ್ಲಿಯೂ ಮಾತ್ರ ಇರುತ್ತದೆ. ಯಾಕಂದರೆ ರೊಟ್ಟಿ ದ್ರಾಕ್ಷೆರಸಗಳು ಭೂಮಿಯಲ್ಲಿರುತ್ತವೆ. ಕ್ರಿಸ್ತನ ಶರೀರ ರಕ್ತಗಳು ಪರಲೋಕದಲ್ಲಿರುತ್ತವೆ. ಇದಲ್ಲದೆ ಕ್ರಿಸ್ತನ ಸರ್ವತ್ರಾಣವುಳ್ಳ (ಸ್ಥಾ

ಪನೆಯ ಮತ್ತು ವಾಗ್ದತ್ತದ) ವಾಕ್ಯವು (ಪ್ರತಿಷ್ಠೆಯಲ್ಲಿ ಸಮ ನೋಡು § ೧೭೨, ಪರಿ. ೨) ಪರಲೋಕದ್ದನ್ನು ಭೂಮಿಯದರ ಸಂಗಡ ಒಟ್ಟು ಮಾಡುವಂಥಾದ್ದಾಗಿರುವದಿಲ್ಲ, ಮನುಷ್ಯನ ವಿಶ್ವಾಸವು ಕರ್ತನ ಶರೀರವನ್ನು (ಸಮವಾಗಿ ಹೇಳುವದಾದರೆ ಕ್ರಿಸ್ತನ ಹೆಚ್ಚಿಸಲ್ಪಟ್ಟ ಶರೀರದಿಂದ ಹೊರಡುವ ಪ್ರಾಣವನ್ನು ಮಾತ್ರವೇ) ಕೆಳಗೆ ಎಳಕೊಳ್ಳುತ್ತದೆ. ರೊಟ್ಟಿ ದ್ರಾಕ್ಷೆರಸಗಳು ಗುರ್ತು ಮುಂಗಡವೂ ಹೊರ್ತು ಇಂದ್ರಿಯಪರವಾದ ಪರಲೋಕದ ಆಹಾರವನ್ನು ಅನುಭವಿಸಲಿಕ್ಕಾಗಿ ಉಪಾಯವಾಗಿರುವದಿಲ್ಲ. ಶರೀರಸಂಬಂಧವಾದ ಬಾಯಿಯು ರೊಟ್ಟಿ ದ್ರಾಕ್ಷೆರಸಗಳನ್ನು ತಿಂದು ಕುಡಿಯುವಾಗ್ಯೆ ಆತ್ಮಿಕಬಾಯಿ ಅಂದರೆ ವಿಶ್ವಾಸವು ಪರಲೋಕದ ಆಹಾರವನ್ನು ತಿನ್ನುತ್ತದೆ. ಆದ್ದರಿಂದ ಅವಿಶ್ವಾಸಿಯು ರೊಟ್ಟಿ ದ್ರಾಕ್ಷೆರಸಗಳನ್ನು ಮಾತ್ರವೇ ತಿಂದು ಕುಡಿಯುತ್ತಾನೆ. ಈ ಆಲೋಚನೆಗೆ ಈ ಕೆಳಗೆ ಬರುವಂಥಾದ್ದು ಪ್ರತೀಕಾರವಾಗಿರುತ್ತದೆ.

೧ನೇ ಅಪೊಸ್ತಲನು ೧ ಕೊರಿ. ೧೦, ೧೬. (ಕಲ್ವೀನನ ಆಲೋಚನೆಗೆ ಅನುಸಾರವಾಗಿ ಹೇಳ ಬೇಕಾಗಿರುವ ಪ್ರಕಾರ) ವಿಶ್ವಾಸವಲ್ಲ, ರೊಟ್ಟಿಯೇ ಕ್ರಿಸ್ತನ ಶರೀರದ ಅನ್ಯೋನ್ಯವೆಂದು ಹೇಳುತ್ತಾನೆ.

೨ನೇ ೧ ಕೊರಿ. ೧೧, ೨೭. ೨೯ನೇ ಶ್ಲೋಕಗಳ ಪ್ರಕಾರ ಅಯೋಗ್ಯವಾಗಿ ತಿಂದು ಕುಡಿಯುವವನು ಕ್ರಿಸ್ತನ ಶರೀರ ರಕ್ತಗಳ ಮೇಲೆ ಪಾಪ ಮಾಡಿದವನಾಗಿ ಅದರಿಂದ ಆಜ್ಞೆನಿರ್ಣಯವನ್ನು ತಿಂದು ಕುಡಿಯುತ್ತಾನಾದ್ದರಿಂದ ಅವಿಶ್ವಾಸಿ ಸಹಾ ಪ್ರಸಾದದಲ್ಲಿ ಶರೀರ ರಕ್ತಗಳನ್ನು ತಿಂದು ಕುಡಿಯುತ್ತಾನೆಂದಾಗ ಬೇಕು.

೩ನೇ ವಿಶ್ವಾಸದಿಂದ ಮಾತ್ರವೇ ಅಂಥಾ ಆತ್ಮಿಕ ತಿಂದು ಕುಡಿಯೋಣವು ಪ್ರಸಾದವಿಲ್ಲದೆ ಆಗ ಬಹುದು. ರೊಟ್ಟಿ ದ್ರಾಕ್ಷೆರಸಗಳು ಅತ್ಯವಶ್ಯವಾಗಿರುವದಿಲಾ, ಮತ್ತು ಪ್ರಸಾದವು ಅವಶ್ಯವಾಗಿರುತ್ತದೆಂಬದು ಹೋಗುತ್ತದೆ.

೪ನೇ ಕ್ರಿಸ್ತನ ಸ್ಥಾಪನೆಯ ವಾಕ್ಯಗಳು ಸಹಾ ತಕ್ಕ ಅಭಿಪ್ರಾಯವನ್ನು ಹೊಂದುವದಿಲ್ಲಾ.



## § 185. ರಕ್ಷಣ್ಯಸ್ಥಾನ

೧) ಕೃಪೋಪಾಯಗಳ ಆಡಳಿತೆಯೂ ಅವುಗಳನ್ನು ಕಾದುವಂಥಾದ್ದೂ ಅವುಗಳ ಪರಿಮುಖವಾಗಿ ಉಂಟಾದ ಹೊಸ ಜೀವದ ಪೋಷಣವೂ (ಅಂದರೆ ಕುರುಬನ

ಕೆಲಸ ಮಾಡುವದು) ಸಭೆಗೆ (ಸಮ ನೋಡು § ೧೫೫, ೩) ಒಪ್ಪಿಸಿ ಅದೆ. ಆದ್ದರಿಂದ ಒಳಗೆಯೂ ಹೊರಗೆಯೂ ದೇವರ ರಾಜ್ಯವನ್ನು ವಿಸ್ತರಿಸುವಂಥಾದ್ದೂ ಬೆಳಿಸುವಂಥಾದ್ದೂ ತನಗೆ ಒಪ್ಪಿಸಲ್ಪಟ್ಟ ತಲಾಂತವು ಬಹಳ ಫಲ ಫಲಿಸುವ ಹಾಗೆ ಅದರಿಂದ ವ್ಯಾಪಾರ ಮಾಡುವದೂ ಸಭೆಯ ಕೆಲಸವಾಗಿರುತ್ತದೆ. ಈ ಕೆಲಸವನ್ನು ಮಾಡುವದಕ್ಕೆ ನೇಮಿಸಲ್ಪಟ್ಟ ಸಭೆಯ ಸೇವಕರು ಮಾತ್ರವಲ್ಲ, ಸಭೆಯವರೆಲ್ಲರು ಸಹಾ ಒಬ್ಬೊಬ್ಬನು ತನ್ನಿಂದ ಆಗುವಷ್ಟು ತನ್ನ ವರಗಳ ಪ್ರಕಾರವಾಗಿಯೂ ಶಕ್ತಿಯ ಪ್ರಕಾರವಾಗಿಯೂ ಪಾಲುಳ್ಳವರಾಗಿರುತ್ತಾರೆ. ಇದಕ್ಕೆ ಸಭೆಯು ಅದನ್ನು ಹೋರಾಟದಲ್ಲಿಯೂ ಉಪದ್ರದಲ್ಲಿಯೂ ಜಯಕ್ಕೂ ಮಹಿಮೆಗೂ ತಕ್ಕೊಂಡು ಹೋಗುವಂಥಾ ತನ್ನ ಅರಸನೂ ತಲೆಯೂ ಆಗಿರುವಂಥವನ ಸರ್ವತ್ರಾಣ ಉಳ್ಳ ಆಶ್ರಯ ಉಂಟೆಂದೂ ಅದನ್ನು ತಪ್ಪಿನೊಳಗಿಂದಲೂ ಬಲಹೀನತ್ವದೊಳಗಿಂದಲೂ ಸತ್ಯಕ್ಕೂ ಬಲಕ್ಕೂ ತಕ್ಕೊಂಡು ಹೋಗುವಂಥಾ ಅದರಲ್ಲಿ ಯತ್ನೈಸುವ ಆತ್ಮದ ಪೋಷಣ ಸಹಾಯಗಳುಂಟೆಂದೂ ಸಂತೋಷವಾಗಿರ ಬಹುದು.

೨) ಸಭೆಯು ಸ್ವಭಾವಕ್ಕೂ ಪ್ರಯೋಜನಕ್ಕೂ ಸರಿಯಾಗಿ ಸರ್ವ ಸಭೆಯಾಗಿರುತ್ತದೆ. (ಕಥೋಲಿಕ) ಯಾಕಂದರೆ ಸಮಸ್ತ ಭೂಮಂಡಲದಲ್ಲಿರುವ ಎಲ್ಲಾ ಜನಾಂಗಗಳೂ ಭಾಷೆಗಳೂ ಅದರಲ್ಲಿ ಅಂಗೀಕರಿಸಲ್ಪಡ ಬೇಕು. ಅದೇ ಸಮಯದಲ್ಲಿ ಅದು ಒಂದೇಯಾಗಿರುತ್ತದೆ. ಯಾಕಂದರೆ ಅದರ ತಲೆಯಾಗಿರುವ ಕ್ರಿಸ್ತನು ಒಬ್ಬನೇಯಾಗಿರುತ್ತಾನೆ. ಈ ಒಂದೇಯಾಗಿರುವ ಸರ್ವ ಕ್ರೈಸ್ತಸಭೆಯು ಕೆಲವು ಪ್ರತ್ಯೇಕ ಸಭೆಗಳಾಗಿ ಹೋಯಿತು ಸರಿ. ಆದರೆ ಅದರ ಏಕತ್ವವೂ ಸಾರ್ವಿಕತ್ವವೂ ಸರ್ವಥಾ ಹೋಗಲಿಲ್ಲಾ. ಹ್ಯಾಗಂದರೆ ಭೂಮಿಯಲ್ಲಿ ಪಾಲಾಗಿರುವ ಸಭೆಗಳು ಪರಲೋಕದಲ್ಲಿರುವ ಒಂದೇ ತಲೆಯಿಂದಲೂ ವಾಕ್ಯಪ್ರಸಾದಗಳ ಮುಖವಾಗಿ ಎಲ್ಲರಲ್ಲಿಯೂ ಯತ್ನೈಸುವಂಥಾ ಒಂದೇ ಆತ್ಮದಿಂದಲೂ ಅಂತರ್ಭಾವದಲ್ಲಿ ಏಕವಾಗಿರುತ್ತದೆ. ಸದೃಕ್ಕೆ ಮರೆಯಾಗಿರುವಂಥಾ ಮನುಷ್ಯರ ತಪ್ಪಿನಿಂದಲೂ ನಿತ್ರಾಣದಿಂದಲೂ ದುರಾಸಕ್ತಿಯಿಂದಲೂ ಮಂದವಾದಂಥಾ ಅಭ್ಯಂತರ ಹೊಂದಿದಂಥಾ ಐಕ್ಯವು ಮುಂದಿನ ಕಾಲದಲ್ಲಿ ಪ್ರತ್ಯಕ್ಷವಾಗ ಬೇಕು. ಮತ್ತು ಒಂದೊಂದು ಸಭೆಯು ತನ್ನೊಳಗೆ ಬೆಳದು ಅದರಿಂದ ತನ್ನ ಸತ್ಯವನ್ನು ಹೆಚ್ಚಿಸಿ ಸ್ಫುಟ ಮಾಡಿ ತನ್ನ ಸುಳ್ಳು ಕಡದು ಹಾಕಿದಷ್ಟಕ್ಕೆ ಐಕ್ಯದ ಮಾರ್ಗವು ಹೆಚ್ಚು ಹೆಚ್ಚು ಸಮವಾಗುತ್ತದೆ. ತನ್ಮಧ್ಯ ದೇವರ ಆತ್ಮವು ತಾನೇ ಮನುಷ್ಯರ ಅಪರಾಧದಿಂದ ಉಂಟಾದ ಛೇದದಿಂದಲೂ ಅದು ಅಭ್ಯಂತರವಾಗಿಯೂ ದುಃಖಕರವಾಗಿಯೂ ಇದ್ದರೂ ಫಲವನ್ನುಂಟು ಮಾಡಲಿಕ್ಕೆ ಬಲ್ಲದು. ಹ್ಯಾಗಂದರೆ — ಆತ್ಮವು ನಡಿಸುವದರಿಂದ ಬೇರೆ ಬೇರೆ ಭಕ್ತಿಯ ಪ್ರತ್ಯೇಕ ಗುಣ

ಗಳಿಗೂ ಕಾರತೆಗಳಿಗೂ ಬಹು ತರವಾಗಿ ವಿಕಸಿತವಾಗುವದಕ್ಕೆ ಉಪಾಯವಾಗುತ್ತದೆ. ಮತ್ತು ಬೇರೆ ಬೇರೆ ಸಭೆಗಳಲ್ಲಿ ತಮ್ಮೊಳಗೆ ಕ್ಷೇಮಕರವಾದ ಪಂಥವು ಹುಟ್ಟುತ್ತದೆ.

೩) ಎಲ್ಲಿ "ಶುದ್ಧ ಶಿಲುವಿಕೆಯಿಂದ ಸುವಾರ್ತೆಯು ಪ್ರಸಂಗಿಸಲ್ಪಡುತ್ತದೋ ಮತ್ತು ಪ್ರಸಾದಗಳು ದಿವ್ಯ ವಾಕ್ಯಕ್ಕೆ ಅನುಸಾರವಾಗಿ ಕಾಡಲ್ಪಡುತ್ತವೋ" ಅಲ್ಲಿ ಸತ್ಯಸಭೆಯು ಉಂಟು. ಹಾಗಾದರೆ ಎಲ್ಲಿ ಸತ್ಯಬೋಧನೆಯಿಂದಲೂ ಪ್ರಸಾದಗಳ ಯೋಗ್ಯ ಪ್ರಯೋಗದಿಂದಲೂ ಏನೂ ಇರುವದಿಲ್ಲವೋ ಅಲ್ಲಿಯೇ ಸುಳ್ಳು ಸಭೆ ಇರುವದು. ಆದರೆ ದೇವರ ದಯೆಯಿಂದ ಈಗ ಇರುವ ಬೇರೆ ಬೇರೆ ಕ್ರೈಸ್ತಸಭೆಗಳಲ್ಲಿ ಅಂಥಾದ್ದು ಇಲ್ಲ. ಅವುಗಳಲ್ಲಿರುವ ಪ್ರಶೀಕಾರತ್ವವು ಒಂದೊಂದು ವಿಷಯದಲ್ಲಿ ಬಹಳ ದೊಡ್ಡದಾಗಿ ಕಂಡು ಬಂದರೂ ಸತ್ಯವಾದದಕ್ಕೂ ಸುಳ್ಳಾದದಕ್ಕೂ ಇರುವಂಥ ಪ್ರಶೀಕಾರತ್ವವೆಂದು ಹೇಳ ಕೂಡದು. ಅದು ಹೆಚ್ಚು ಮತ್ತು ಕಡಿಮೆ ಶಿಲುವಿಕೆಯ ನಿರ್ಮಲತ್ವಕ್ಕೂ ಐಶ್ವರ್ಯಕ್ಕೂ ಸಮೃದ್ಧಿಗೂ ಇರುವಂಥಾ ಮತ್ತು ಪ್ರಸಾದಗಳ ಹೆಚ್ಚು ಇಲ್ಲವೆ ಕಡಿಮೆ ಯೋಗ್ಯವಾಗಿರುವ ಪ್ರಯೋಗಕ್ಕೂ ಇರುವಂಥಾ ಪ್ರಶೀಕಾರತ್ವ ಮಾತ್ರವೇ ಆಗಿರುತ್ತದೆ. ಒಂದೊಂದು ಸಭೆಯು ಆ ಎರಡು ಲಕ್ಷಣಗಳಿಗೆ ಯೋಗ್ಯವಾಗಿರುವದರಿಂದಲೂ ಯೋಗ್ಯವಾಗಿರುವಷ್ಟಕ್ಕೂ ಸತ್ಯಸಭೆ ಎಂಬ ಹೆಸರು ಪಡ ಕೊಳ್ಳ ಬಹುದು. ವಾಕ್ಯವೂ ಪ್ರಸಾದವೂ ಇರುವ ಒಂದೊಂದು ಸಭೆಯಲ್ಲಿ ವಿಶ್ವಾಸಿಯು ಅದು ಕೊಡುವಂಥಾ ಸತ್ಯವಾದದನ್ನು ಮನಸು ಕೊಟ್ಟು ಪ್ರಯೋಗಿಸಿದರೆ ರಕ್ಷಿಸಲ್ಪಡ ಬಹುದು. ಆದರೆ ಒಂದಕ್ಕಿಂತ ಮತ್ತೊಂದರಲ್ಲಿ ಹೆಚ್ಚು ನಿಶ್ಚಯವಾಗಿಯೂ ಗಂಡಾಂತರವಿಲ್ಲದೆಯೂ ರಕ್ಷಣ್ಯಕ್ಕೆ ಮುಟ್ಟ ಬಹುದು.

ಪರಿಶಿಷ್ಟ. ದೃಷ್ಯ ಮತ್ತು ಅದೃಷ್ಯಸಭೆ ಎಂದು ಹೆಚ್ಚು ಕಡಿಮೆ ಮಾಡುವದು ಸಹಾ ಉಂಟು. ಕ್ರಿಸ್ತನ ಹೆಸರಿನಲ್ಲಿ ಸ್ನಾನ ಹೊಂದಿ ಅವನ ಹೆಸರನ್ನು ಅರಿಕೆ ಮಾಡುವವರೆಲ್ಲರ ಬಹಿರಂಗದ ಕೂಟ್ಟಕ್ಕೆ ದೃಷ್ಯಸಭೆ ಎಂದು ಹೇಳುತ್ತಾರೆ. ಇದರಲ್ಲಿ ಬಹಳ ತೋರಿಕೆಯ ಕ್ರೈಸ್ತರೂ ಹೆಸರಿನ ಕ್ರೈಸ್ತರೂ ಇರುತ್ತಾರೆ. ಆದರೆ ಅದೃಷ್ಯಸಭೆ ಎಂದು ಹೇಳುವದು ಯಾರಿಗಂದರೆ: ಬಾಯಿಯಿಂದ ಮಾತ್ರವಲ್ಲ, ಪೂರ್ಣ ಹೃದಯದಿಂದ ಕ್ರಿಸ್ತನನ್ನು ಅರಿಕೆ ಮಾಡಿ, ಬಹಿರಂಗದ ಸಭೆಯ ಸತ್ಯವಾಗಿ ಜೀವವುಳ್ಳ ಅಂಗಗಳಾಗಿರುವವರೆಲ್ಲರ ಐಕ್ಯಕ್ಕೆಯೇ. ಆದರೆ ಈ ಹೆಚ್ಚು ಕಡಿಮೆ ಮಾಡುವಾಗ್ಯೆ ಅದೃಷ್ಯಸಭೆಯು ದೃಷ್ಯಸಭೆ ಇಲ್ಲದೆ ಎಲ್ಲಿಯೂ ಇರುವದಿಲ್ಲವೆಂಬದನ್ನೂ ಏನೂ ಆಗಿರುವದಿಲ್ಲವೆಂಬದನ್ನೂ ಅದರ ಹೊರಗೆ ಇಲ್ಲವೆ ಅದರ ಮೇಲೆ ಅಲ್ಲ, ಅದರ ಒಳಗೆ, ಅದರ ಒಳಗೆ ಮಾತ್ರವೆ ಇರುತ್ತದೆಂಬದನ್ನು ಮರಿಯ

ಬಾರದು. ಯಾಕಂದರೆ ಕೃಪೋಪಾಯಗಳು ಅದೃಷ್ಯಸಭೆಗೆ ಅಲ್ಲ, ದೃಷ್ಯವಾದದ್ದಕ್ಕೆ ಕೊಡಲ್ಪಟ್ಟವೆ. ಮತ್ತು ವಿಶ್ವಾಸಿಯು ದೃಷ್ಯಸಭೆಯ ಅಂಗವಾಗಿರುವದರಿಂದಲೂ ಅಂಗವಾಗಿರುವಷ್ಟಕ್ಕೆ ಮಾತ್ರವೇ ಸಹಾ ದೇವರ ಕೃಪೆಯಲ್ಲಿ ಪಾಲು ಹೊಂದುತ್ತಾನೆ.



## § 186. ರಕ್ಷಣ್ಯಮಾರ್ಗ (ಕರಿಯೋಣ ಪ್ರಕಾಶೀಕರಣ ತಿರುಗೋಣ)

೧) ಪರಿಶುದ್ಧಾತ್ಮವು ಪಾಪಿಗಳನ್ನು ಕ್ರಿಸ್ತನ ಬಳಿಗೆ ಅವರು ಅವನಲ್ಲಿ ತಮ್ಮ ಪಾಪಗಳ ಕ್ಷಮೆಯನ್ನೂ ತಮ್ಮ ಜೀವನದ ನವೀಕರಣವನ್ನೂ ನಿತ್ಯರಕ್ಷಣ್ಯವನ್ನೂ ಹೊಂದುವ ಹಾಗೆ ವಾಕ್ಯದಿಂದಲೂ ಪ್ರಸಾದದಿಂದಲೂ ತರುತ್ತದೆ. ಅದಕ್ಕೆ ಕೊಂಡು ಹೋಗುವ ಮಾರ್ಗಕ್ಕೆ ರಕ್ಷಣ್ಯಮಾರ್ಗವೆಂಬ ಹೆಸರು. ಪರಿಶುದ್ಧಾತ್ಮವು ಮನುಷ್ಯನ ಹೃದಯದಲ್ಲಿ ಕರಿಯೋಣದರ ಮೂಲವಾಗಿ ತನ್ನ ಕೆಲಸವನ್ನು ಆರಂಭಿಸುತ್ತಾನೆ. ಯಾಕಂದರೆ: ಅದು ಸುವಾರ್ತೆಯ ಪ್ರಸಂಗದಿಂದ ಅವನಿಗೆ ದೇವರ ರಕ್ಷಣ್ಯಾಲೋಚನೆಯನ್ನು ಸಾರಿ, ಕ್ರಿಸ್ತನ ಪರಿಮುಖವಾಗಿ ದೇವರ ಸಂಗಡ ಅನ್ಯೋನ್ಯವಾಗ ಬೇಕೆಂದೂ ಕ್ರಿಸ್ತನಿಂದ ಸ್ಥಾಪಿಸಲ್ಪಟ್ಟ ದೇವರರಾಜ್ಯದ ಮಹಿಮೆಯಲ್ಲಿ ಪಾಲು ಹೊಂದ ಬೇಕೆಂದೂ ಅವನನ್ನು ಕರಿಯುತ್ತಾನೆ (ಲೂಕ. ೧೪, ೧೬. ಮತ್ತಾ. ೨೨, ೧—೧೪. ಸಂ. ೧೧. ೨೮—೩೦. ೨ ಕೊರಿ. ೫, ೧೯. ೨೦). ಮನುಷ್ಯನು ಪರಿಶುದ್ಧಾತ್ಮದ ಈ ಕರೆಯುವಿಕೆಗೆ ಹೃದಯವನ್ನೂ ಕಿವಿಗಳನ್ನೂ ಮುಚ್ಚದೆ ಹೋದರೆ ದೇವರ ವಾಕ್ಯದ ಮುಂದಿನ ಬೋಧನೆಯಿಂದ ಪ್ರಕಾಶೀಕರಣ ಉಂಟಾಗುತ್ತದೆ. ಇದು ಸ್ವಂತ ಪಾಪದ ಕೇಡಿನ ವಿಷಯವಾಗಿಯೂ ಕ್ರಿಸ್ತನಲ್ಲಿರುವ ದೇವರ ಮಿತಿ ಮೀರುವ ಐಶ್ವರ್ಯವಾದ ಕೃಪೆಯ ವಿಷಯವಾಗಿಯೂ ಜೀವವುಳ್ಳ ತಿಳುವಿಕೆಗೆ ಮುಟ್ಟುತ್ತದೆ. ಈ ತಿಳುವಿಕೆಯು ಕೂಡಲೇ ತಿರುಗೋಣವನ್ನು ಉಂಟು ಮಾಡುತ್ತದೆ. ಇದಕ್ಕೆ ೨ ಕಡೆಗಳು ಉಂಟು ೧) ಪ್ರತಿಕೂಲವಾದದ್ದು ಯಾವದಂದರೆ: ಪಾಪಕ್ಕೆ ವಿಮುಖವಾಗುವದು, ಅಂದರೆ ಮಾನಸಾಂತರ ೨) ಮತ್ತೊಂದು ಅನುಕೂಲವಾದದ್ದು ಯಾವದಂದರೆ: ದೇವರ ಕಡೆಗೆ ಅಭಿಮುಖವಾಗುವದು ಅಂದರೆ ವಿಶ್ವಾಸ.

೨) ಮಾನಸಾಂತರವನ್ನು ಪರಿಶುದ್ಧಾತ್ಮವು ನೇಮದ ಪರಿಮುಖವಾಗಿ ಹುಟ್ಟಿಸುತ್ತದೆ. ಯಾಕಂದರೆ ನೇಮವು ನಮ್ಮ ಪಾಪತ್ವವನ್ನೂ ಅಯೋಗ್ಯತೆ

ಯನ್ನೂ ಅತ್ತಕಡೆಯಲ್ಲಿ ದೇವರ ನೀತಿಯನ್ನೂ ಪರಿಶುದ್ಧತ್ವವನ್ನೂ ನಮಗೆ ಮುಂದಿಡುತ್ತದೆ. ಆದರೆ ಸಮವಾದ ಮಾನಸಾಂತರಕ್ಕೆ ಮೂರು ಬೇಕು. ಪಾಪವು ಪಾಪವೆಂದು ಅಂದರೆ ದೇವರಿಗೆ ಪ್ರತಿಕೂಲವಾದಂಥಾ ಶಾಪಕ್ಕೆ ಪಾತ್ರವಾದ ಕಾಟಕಾಯಿ ಆಗಿರುತ್ತದೆಂದು ತಿಳುಕೊಂಡು ಅರಿಕೆ ಮಾಡ ಬೇಕು (ಯೆರೆಮಿ. ೩, ೧೩. ಕೀರ್ತ. ೫೧, ೪. ೫). ಅದಕ್ಕಾಗಿ ಹೃದಯಪೂರ್ವಕ ಅನುತಾಪ ಪಡ ಬೇಕು. ಆದರೆ ಹಾಗಂದರೆ ಪಾಪದ ಅಹಿತ ಫಲಗಳಿಗೋಸ್ಕರವಲ್ಲಾ, ಪಾಪಕ್ಕೋಸ್ಕರವೇ ದುಖ್ಖಪಟ್ಟು, ಅದನ್ನೇ ಹಗೆ ಮಾಡಿ, ಅದಕ್ಕೆ (೨ನೇ ಕೊರಿಂಥ. ೭, ೧೦.) ಹೇಸಿಸುವಂಥಾದ್ದಾಗಿರುತ್ತದೆ. ಮತ್ತು ಕಡೆಯಲ್ಲಿ ಕೃಪೆಗೋಸ್ಕರವೂ ಪಾಪದ ಕ್ಷಮೆಗೋಸ್ಕರವೂ ಅತ್ಯಾಪೇಕ್ಷೆಯಾಗಿರುವದು (ಅಪೊ. ಕ್ರಿ. ೧೬, ೩೦. ಕೀರ್ತ. ೫೧, ೨. ೩. ಶ್ಲೋ. ೧೦ — ೧೩). (ದೈವಹೀನವಾದ ನಿರಾಶೆಯಾಗಿರ ಬಾರದು) ಈ ಅಪೇಕ್ಷೆಯೇ ಮಾನಸಾಂತ್ರದಿಂದ ವಿಶ್ವಾಸಕ್ಕೆ ಸಂಕವಾಗಿರುತ್ತದೆ. ವಿಶ್ವಾಸವನ್ನು ಪರಿಶುದ್ಧಾತ್ಮವು ಸುವಾರ್ತೆಯ ಮೂಲವಾಗಿ ಯತ್ನೈಸುತ್ತದೆ. ಹ್ಯಾಗಂದರೆ ಅದು ನಮ್ಮನ್ನು ಪಾಪದ ಸಮಸ್ತ ಸಂಕಷ್ಟಗಳೊಳಗಿಂದ ರಕ್ಷಿಸುವವನನ್ನು ತೋರಿಸಿ ಕೊಡುತ್ತದೆ. ಸಮವಾಗಿರುವಂಥಾ ಜೀವವುಳ್ಳ ವಿಶ್ವಾಸಕ್ಕೆ ಸಹಾ ೩ ಉಂಟು. ೧) ಕ್ರಿಸ್ತನಲ್ಲಿರುವ ದೇವರ ಕೃಪೆಯ ತಿಳುವಿಕೆಯು ಸಮ್ಮತಿ ಭರವಸಗಳ ಸಹಿತವಾಗಿ (ಇಬ್ರಿ. ೧೧, ೧. ಮತ್ಥಾ. ೮, ೨.) ೨) ಕೃಪೆಯನ್ನು ಪಡ ಕೊಳ್ಳುವದಕ್ಕೋಸ್ಕರ ಕ್ರಿಸ್ತನಿಗೆ ಪೂರ್ಣ ಭರವಸದಲ್ಲಿ ಒಪ್ಪಿಸಿ ಕೊಡೋಣ (ಹ್ಯಾಗಂದರೆ ಅವನಿಂದ ಸ್ಥಾಪಿಸಲ್ಪಟ್ಟ ಕೃಪೋಪಾಯಗಳಾಗಿರುವ ವಾಕ್ಯಪ್ರಸಾದಗಳನ್ನು ಜಾಗ್ರತೆಯಾಗಿ ಪ್ರಯೋಗಿಸುವದು.) (ಇಬ್ರಿ. ೪, ೧೬. ೩) ಮತ್ತು ಕಡೆಯಲ್ಲಿ ಕೊಡಲ್ಪಡುವಂಥಾ ಕೃಪೆಯನ್ನು ಶಿದ್ಧ ಸಂತೋಷವಾಗಿಯೂ ಕೃತಜ್ಞತೆಯಲ್ಲಿಯೂ ಅಂಗೀಕರಿಸಿ ಪಡ ಕೊಂಡ ಕೃಪೆಯನ್ನು ಭಕ್ತಿಯುಳ್ಳ ಕ್ರೈಸ್ತ ನಡತೆಗೋಸ್ಕರ ಮನಸ್ಸಾಕ್ಷಿಗೆ ಸರಿಯಾಗಿ ಪ್ರಯೋಗಿಸುವದು (ಯಾಕೋ. ೨, ೧೭. ಮತ್ಥಾ. ೭, ೧೬).

## § 187. ಮುಂದೆ (ನೀತಿನಿರ್ಣಯ, ಶುದ್ಧೀಕರಣ)

೧) ಈ ಪ್ರಕಾರ ಪಾಪಿಯು ಆತ್ಮದ ಶಿಕ್ಷೆ ನಡಿಸೋಣದರ ಕೆಳಗೆ ರಕ್ಷಣೇಚ್ಛೆಯಾಗಿ ದೇವರ ಕಡೆಗೆ ತಿರುಗಿದ್ದಾದರೆ ದೇವರು ಸಹಾ ರಕ್ಷಣ್ಯದಾತನಾಗಿ ಅವನ ಕಡೆ

ಗೆ ತಿರುಗುತ್ತಾನೆ. ಪಾಪಿಯು ಮಾನಸಾಂತರ ವಿಶ್ವಾಸಗಳಿಂದ ತಿರಿಗಿ ಕೊಂಡಾಗ
ದೇವರು ನೀತಿನಿರ್ಣಯ ಶುದ್ಧೀಕರಣಗಳಿಂದ ಕೃಪೆ ಕೊಡುತ್ತಾನೆ.

ನೀತಿನಿರ್ಣಯವು ಪಾಪದ ಅಪರಾಧದ ಸಂಹಾರವು ಇಲ್ಲವೆ ದುಡಿದ ದಂಡ
ಣೆಗೆ ಬಿಡುಗಡೆಯಾಗಿರುತ್ತದೆ. ಇದಕ್ಕೆ ಕ್ರಿಸ್ತನು ವಿಮೋಚಿಸಿ ಮನುಷ್ಯರ ಸ್ಥಳದಲ್ಲಿ
ತಾಳಿದ ತಾಳ್ಮೆಮರಣಗಳೇ ಆಧಾರವಾಗಿರುತ್ತದೆ (§ ೧೪೯, ೨ ಪ). ದೇವರು ಮಾ
ನಸಾಂತರ ಪಟ್ಟು ವಿಶ್ವಾಸಿಸುವ ಪಾಪಿಗೆ ಕ್ರಿಸ್ತನ ಪುಣ್ಯನೀತಿಗಳನ್ನು ಎಣಿಸಿ, ಇದ
ಕ್ಕೋಸ್ಕರ ಎಲ್ಲಾ ಅಪರಾಧ ದಂಡಣೆಗೆ ಅವನು ಬಿಡುಗಡೆಯಾಗಿರುತ್ತಾನೆಂದು
ಹೇಳಿ, ಅವನು ನೀತಿವಂತನೂ ತನಗೆ ಸಮರ್ಪಕನೂ ಎಂದು ಹೇಳುತ್ತಾನೆ. ನೀತಿ
ನಿರ್ಣಯವು ನಾವೇನೂ ಮಾಡದೆ ನಮ್ಮ ಕ್ರಿಯೆಗಳ ಪುಣ್ಯವೇನೂ ಇಲ್ಲದೆ ಆಗು
ತ್ತದೆ. ನಮ್ಮ ವಿಶ್ವಾಸಕ್ಕೋಸ್ಕರ ಸಹಾ ಅಲ್ಲ ಕೃಪೆಯಿಂದ ಕ್ರಿಸ್ತನಿಗೋಸ್ಕರವೇ, ಕೊಡ
ಲ್ಪಡುವಂಥಾ ಕ್ರಿಸ್ತನ ಪುಣ್ಯವನ್ನು ಅಂಗೀಕರಿಸುವ ವಿಶ್ವಾಸದಿಂದಲೇ ಅದು ಶಿಕ್ಕುತ್ತ
ದೆ (ರೋಮಾ. ೫, ೧. ಎಫೆಸ್ಯ. ೧, ೭. ರೋಮಾ. ೩, ೨೩—೨೮. ಗಲಾ.
೩, ೧೧).

೨) ವಿಶ್ವಾಸದಲ್ಲಿ ನೀತಿನಿರ್ಣಯದಿಂದ ದೇವರ ಸಂಗಡ ಅನ್ಯೋನ್ಯವಾದ ಹೃ
ದಯವು ಆಧಾರವಾಗಿರುತ್ತದೆ. ಇದರಿಂದ ಶುದ್ಧೀಕರಣವು ದೇವರ ಸುಯೋ
ಚನೆಯ ಪ್ರಕಾರ ಕ್ರಿಸ್ತನ ಮುಂಗುರ್ತಿನ ಹೋಲಿಕೆಯಾಗಿ ಪರಿಶುದ್ಧಾತ್ಮದ ಯತ್ನ
ದಿಂದ ಬೆಳದು ಬರುತ್ತದೆ. ಶುದ್ಧೀಕರಣಕ್ಕೆ ಆಧಾರವೇನಂದರೆ: ಕ್ರಿಸ್ತನು ತನ್ನ ಸ್ವಂತ
ಜೀವನದಲ್ಲಿ ಸಾಧಿಸಿದಂಥಾ ತನ್ನ ಶರೀರದ ಅಂಗಗಳಾಗಿರುವ ನಮಗೆ ನಾವು ಅದರ
ಪರಿಮುಖವಾಗಿ ಪೂರ್ಣ ನವೀಕರಿಸಲ್ಪಟ್ಟು (೨ ಕೊರಿ. ೫, ೧೭. ೧೮) ನಿತ್ಯಜೀವಕ್ಕೆ
ಸಿದ್ಧ ಮಾಡಲ್ಪಡುವ ಹಾಗೆ ಕೊಟ್ಟು ಸ್ವಂತವಾಗುವ ಹಾಗೆ ಮಾಡುವಂಥಾ
(ಯೋಹಾ. ೧೫, ೫) ಹೊಸ ಜೀವನದ ಬಲವಾಗಿರುತ್ತದೆ.

೩) ಆದರೆ ಮೇಲೆ ಹೇಳಿದ ಆತ್ಮದ ಕೃಪಾಯತ್ನಗಳಲ್ಲಿ ಒಂದಾದರೂ ಒಂದೇ
ಸಾರಿ ಆಗಿ ತೀರಿತ್ತೆಂತ ಹೇಳುವದಿಲ್ಲ. ನಾವು ದೇವರ ಕೃಪೆಪುತ್ರತ್ವದಲ್ಲಿ ನೆಲೆ
ಗೊಂಡು ಬೆಳಿಯ ಬೇಕಾದರೆ, ನಮಗೆ ಕರಿಯೋಣ ಹಿಡಿದು ಶುದ್ಧೀಕರಣದ ಪರ್ಯಂ
ತರಕ್ಕೂ ಇವುಗಳಲ್ಲಿ ಒಂದೊಂದರ ಪ್ರತಿದಿನದ ನವೀಕರಣವೂ ಬಲ ಪಡಿಸೋಣವೂ
ವಿಸ್ತರಿಸೋಣವೂ ಅವಶ್ಯವಾಗಿರುತ್ತದೆ. ಪ್ರತಿದಿನದ ನವೀಕರಣ ಮೊದಲಾದವುಗ
ಳು ಯಾಕೆ ಅಷ್ಟು ಅವಶ್ಯವಾಗಿರುತ್ತದೆ ಅಂದರೆ ನಮ್ಮ ಆತ್ಮ ಜೀವನಕ್ಕೆ ಸುತ್ತಲೂ
ಗಂಡಾಂತರಗಳುಂಟು. (ಮಾಂಸದ ಅಭಿಲಾಷೆ ಲೋಕದ ಪುಸಲಾಯಿಸೋಣ ಕೆಟ್ಟ

ಶತ್ರುವಿನ ಶೋಧನೆಗಳು) ಮತ್ತು ನಾವು ನಿತ್ರಾಣದಿಂದಲೂ ತಪ್ಪಿನಿಂದಲೂ ಉದ್ವೇಗದಿಂದಲೂ ಇನ್ನೂ ಬಹಳ ಸರ್ತಿ ಅವುಗಳಿಗೆ ಕೈವಶವಾಗುವದರಿಂದಲೇ.

ಪರಿಶಿಷ್ಟ. ರಕ್ಷಣ್ಯಕ್ರಮದಲ್ಲಿ ಪ್ರಸಾಧಗಳು ಹ್ಯಾಗೆ ಯಾವ ಪ್ರಕಾರ ಎಲ್ಲಿ ಯಾವಾಗ್ಯೆ ಆರಂಭವಾಗ ಬೇಕೆಂತ ಕೇಳಿದ್ದಾದರೆ, ಮೇಲೆ ಹೇಳಿದದರಿಂದಲೇ ಇಷ್ಟು ಸಾಧ್ಯವಾಗುತ್ತದೆ. ಏನಂದರೆ ಮ್ಲೇಂಛರು ಕ್ರೈಸ್ತರಲ್ಲದವರು ಪ್ರಸಂಗದಿಂದಲೂ ಬೋಧನೆಯಿಂದಲೂ ತಮ್ಮ ಸ್ವಂತ ಕೇಡನ್ನು ಕುರಿತೂ ಕ್ರಿಸ್ತನಲ್ಲಿರುವ ದೇವರ ಕೃಪೆಯನ್ನು ಕುರಿತೂ ತಿಳಿದು ಒಪ್ಪಿಕೊಂಡು, ಆ ಪ್ರಕಾರ ಸಭೆಯಲ್ಲಿ ಅಂಗೀಕರಿಸಲ್ಪಡಲಿಚ್ಛೈಸಿದ ಕೂಡಲೇ (ಸಮ ನೋಡು ಅಪೊ. ಕ್ರಿ. ೮, ೩೭; ಸಂ. ೧೬, ೩೦—೩೩) ಅವರಿಗೆ ಸ್ನಾನ, ಇದಾದ ಮೇಲೆ ಕೂಡಲೇ ಪರಿಶುದ್ಧ ರಾತ್ರಿಭೋಜನ ಶಿಕ್ಕ ತಕ್ಕದ್ದು. ಆದರೆ ಕ್ರೈಸ್ತ ತಂದೆತಾಯಿಗಳಿಂದ ಹುಟ್ಟಿದದರಿಂದಲೇ ಸಭೆಯ ಅಂಗಗಳಾಗಲಿಕ್ಕೆ ನಿಶ್ಚಯಿಸಲ್ಪಟ್ಟ ಕ್ರೈಸ್ತಮಕ್ಕಳ ವಿಷಯವಾಗಿ ಅದೆಲ್ಲಾ ಬೇರೆ (೧ ಕೊರಿ. ೭, ೧೪). ಇಲ್ಲಿ ಎಲ್ಲಾದಕ್ಕೆ ಮೊದಲೇ ಸ್ನಾನವು ಕೊಡಲ್ಪಡ ಬಹುದು (§ ೧೮೩ ಪ ೩). ಕೊಡಲ್ಪಡ ಬಹುದಾದ್ದರಿಂದ ಕೊಡಲ್ಪಡ ಬೇಕು ಸಹಾ. ಯಾಕಂದರೆ ಕ್ರೈಸ್ತ ಮಗುವಿಗೆ ವರ್ಷದಶಗಳ ಪರ್ಯಂತರಕ್ಕೂ ಅದರ ಕರ್ತನೂ ರಕ್ಷಕನೂ ಆಗಿರುವವನ ಸಂಗಡ ಅನ್ಯೋನ್ಯವು ಬೇಕೆಂದು ಶಿಕ್ಕದ ಹಾಗೆ ಮಾಡುವದು ಮಹಾ ಅನ್ಯಾಯವಾಗಿದ್ದೀತು. ಆದರೆ ಪರಿಶುದ್ಧ ರಾತ್ರಿಭೋಜನವನ್ನು ತಕ್ಕೊಳ್ಳುವ ಸಂಗತಿಯು ಬೇರೆ, ನಾವು ಅಪೊಸ್ತಲನ ಅಪೇಕ್ಷೆಯ ಪ್ರಕಾರ "ಕರ್ತನ ಮರಣವನ್ನು ಸಾರಲಿಕ್ಕೂ" (೧ ಕೊರಿ. ೧೧, ೨೬) "ನಮ್ಮನ್ನು ನಾವೇ ಶೋಧಿಸಿಕೊಳ್ಳಲಿಕ್ಕೂ" (ಶ್ಲೋಕ. ೨೮) ಮತ್ತು "ಕರ್ತನ ಶರೀರವನ್ನು ವಿಶೇಷ ಮಾಡಲಿಕ್ಕೂ" (ಶ್ಲೋಕ. ೨೯) ಯೋಗ್ಯರಾಗಿರ ಬೇಕಾದರೆ ತನ್ನ ವಿಷಯವಾಗಿಯೂ ದೇವರ ವಿಷಯವಾಗಿಯೂ ಸಾಕಷ್ಟು ತಿಳದಿರ ಬೇಕು. ಆದದರಿಂದ ಸಭೆಯಲ್ಲಿರುವಂಥವರಿಗೆ ದೃಢೀಕರಣದ ಮೇಲೆ ರಾತ್ರಿಭೋಜನವನ್ನು ಕೊಡುತ್ತಾರೆ. ಇದರಿಂದ ಯೌವನದ ಕ್ರೈಸ್ತನು ಸಾಕಾದ ತಿಳುವಿಕೆಯನ್ನು ಹೊಂದಿದವನಾಗಿ ನಂಬಿಕೆಯನ್ನು ಅರಿಕೆ ಮಾಡಿದ ತರುವಾಯ ಆತ್ಮಿಕವಾದವುಗಳಲ್ಲಿ ಸತ್ಯಾಸತ್ಯ ತಿಳುಕೊಳ್ಳಲಿಕ್ಕೆ ಸಾಕಷ್ಟು ಪ್ರಾಯವುಳ್ಳವನೆಂದು ಹೇಳಿದ ಹಾಗೆ ಆಯಿತು.



## § 188. ಈ ಕಾಲದ ಪ್ರವರ್ತನೆ ಮತ್ತು ಮೇರೆ

ಈ ಕಾಲದ ಅಂತ್ಯವು ಭವಿಷ್ಯದಲ್ಲಿ ಬರುವದು. ಸುವಾರ್ತೆಯು ಎಲ್ಲಾ ಲೋಕಕ್ಕೆ ಪ್ರಸಂಗಿಸಲ್ಪಟ್ಟು ಎಲ್ಲಾ ಮನುಷ್ಯರಿಗೆ ರಕ್ಷಣ್ಯವನ್ನು ಸ್ವೀಕರಿಸಲಿಕ್ಕೆ ಉಪಾಯವಾದಾಗ, ಆ ಅಂತ್ಯವು ಬಂದಿರುವದು. ತನ್ಮಧ್ಯ ಕರ್ತನ ವಾಕ್ಯದ ಪ್ರಕಾರ ಶತ್ರುವು ಬಿತ್ತಿದಂಥಾ ಊದರೆಯು ಪೈರು ಕಾಲದ ಪರ್ಯಂತರಕ್ಕೂ ಗೋಧಿಯ ಮಧ್ಯದಲ್ಲಿ ಬೆಳೆಯುವದು. ದೇವರ ರಾಜ್ಯವು ಪೂರ್ಣ ವಿಕಸಿತವಾಗಿ ಎಲ್ಲಾ ಮಹಿಮೆಯುಳ್ಳ ಮೊಗ್ಗೆಗಳನ್ನೂ ಫಲಗಳನ್ನೂ ಹೊಂದ ಬೇಕಾಗಿರುತ್ತದೆ ಮಾತ್ರವಲ್ಲ, ಈ ಲೋಕದ ಅಂಧಕಾರದಲ್ಲಿ ಆಳುವಂಥಾ ಆ ಪ್ರಭುವಿನ ರಾಜ್ಯವು ಸಹಾ ಅದು ನ್ಯಾಯನಿರ್ಣಯಕ್ಕೂ ನಾಶನಕ್ಕೂ ತಕ್ಕದ್ದಾಗುವ ಹಾಗೆ ಪೂರ್ಣ ವಿಕಸಿತವಾಗಿ ಎಲ್ಲಾ ನರಕದ ಫಲಗಳನ್ನು ಹಣ್ಣಾಗುವ ಪರ್ಯಂತರಕ್ಕೂ ಬೆಳಿಸ ಬೇಕು. ಆದ್ದರಿಂದ ರಕ್ಷಣ್ಯದ ಸಂಗಡಲೇ ನಾಶನವು ಸಹಾ ಬೆಳೆಯುತ್ತದೆ. ಮತ್ತು ಅವುಗಳ ಪ್ರತೀಕಾರತ್ವವು ಹೆಚ್ಚು ಹೆಚ್ಚು ಸ್ಪಷ್ಟವಾಗಿಯೂ ಖಂಡಿತವಾಗಿಯೂ ಒಂದನ್ನೊಂದು ಹೊರಗೆ ಹಾಕುವಂಥಾದ್ದಾಗಿ ಕಂಡು ಬರುತ್ತದೆ. ಹಾಗಾದರೆ ಸಭೆಯು ಈ ಕಾಲದಲ್ಲಿ ಯಾವಾಗಲೂ ಹೋರಾಡುವಂಥಾದ್ದಾಗಿರುತ್ತದೆ. ಆದರೆ ಅದು ರಕ್ಷಣ್ಯದ ಬಂಡೆಯಲ್ಲಿ ಅಲ್ಲಾಡಿಸಲ್ಪಡ ಕೂಡದ ಹಾಗೆ ಭದ್ರವಾಗಿ ಸ್ಥಾಪಿಸಲ್ಪಟ್ಟದೆ. ಈ ಕಾಳಗದಲ್ಲಿ ಸಭೆಯ ಬಹಿರಂಗದ ಸ್ಥಿತಿಯು ತರತರದ ಅಂತರಗಳಿಗೆ ಒಳಗಾಗಿರುತ್ತದೆ. ಆದರೆ ಸ್ವಲ್ಪ ಸಮಯಕ್ಕೆ ಅಪಜಯವಾಯಿತೆಂತ ಕಾಣುವಲ್ಲಿ ಸಹಾ ಅದು ಯಾವಾಗಲೂ ಜೈಸುತ್ತಾ ಇರುತ್ತದೆ. ಒಂದು ಸಾರಿ ಬಹಿರಂಗವಾಗಿ ಅದು ಚನ್ನಾಗಿರುತ್ತದೆ. ಮತ್ತು ಆಗ್ಯೆ ಬಹಿರಂಗದಲ್ಲಿ ಭದ್ರವಾಗಿ ವಿಸ್ತಾರವಾಗುವದಕ್ಕೋಸ್ಕರ ಕಡೇ ಪೂರ್ಣ ಜಯದ ಮುಂಗುರ್ತಾಗಿ ತಪ್ಪಿನ ಮತ್ತು ಅಂಧಕಾರದ ಬಲದ ಮೇಲೆ ಮಹಿಮೆಯುಳ್ಳ ದಿಗ್ವಿಜಯ ಮಾಡುತ್ತದೆ. ಆದರೆ ಅದು ಉಗುರುಬೆಚ್ಚವಾಗಿ ಹೋಗದೆ ಒತ್ತಾಯದಿಂದಲೂ ಕಾಳಗದಿಂದಲೂ ಹೊಸತ್ತಾಗಿ ಯುದ್ಧಸನ್ನದ್ಧವಾಗುವ ಹಾಗೆಯೂ ಅಂತರ್ಯದಲ್ಲಿ ಬಲಗೊಳ್ಳುವ ಹಾಗೆಯೂ ಒತ್ತಾಯವೂ ಹಿಂಸೆಯೂ ಅದರ ಮೇಲೆ ಬರುತ್ತದೆ.

ಪರಿಶಿಷ್ಟ. ಈ ಕಾಲದಲ್ಲಿ ದೇವರ ರಾಜ್ಯವು ಭೂಮಿಯಲ್ಲಿ ವಿಕಸಿತವಾದದರ ಕಥೆಯನ್ನು ಪ್ರತ್ಯಕ್ಷವಾದಷ್ಟು ವರ್ಣಿಸುವದು ಪರಿಶುದ್ಧ ಚರಿತ್ರದ ಕೆಲಸವಲ್ಲ. (ಪರಿಶುದ್ಧ ಬರಹವು ಚರಿತ್ರವಾಗಿಯೂ ಪ್ರವಾದನೆಯಾಗಿಯೂ ಕೊಟ್ಟದ್ದನ್ನು ಕ್ರಮ

ವಾಗಿ ಇಡುವದು ಮಾತ್ರವೇ ಅದರ ಕೆಲಸ) ಅದನ್ನು ಸಭಾಚರಿತ್ರವು ಮಾಡ ಬೇಕು. ಆದರೆ ಇನ್ನು ಮುಂದೆ ಬರಲಿಕ್ಕಿರುವಂಥಾ (ಮಹಿಮೆಯುಳ್ಳ ಜಯಗಳೂ ಮಹಾ ಸಂಕಷ್ಟಗಳೂ ವಿಶೇಷವಾಗಿ ಇರುವಂಥಾ) ಕಾಲದ ವಿಷಯವಾದ ಪ್ರವಾದನೆಯು (ಪ್ರಕಟನೆ. ೬—೧೮ ಸಂಧಿವರೆಗೆ) ಪ್ರವಾದನೆಯು ಮುಂಗುರ್ತಾಗಿ ತಿಳಿಯ ಕೂಡದ ಹಾಗೆ ಸಾಜ್ಞೆಗಳಲ್ಲಿಯೇ ಕಾಣ ಬರುವದರಿಂದ ಅದು ಪೂರ್ಣವಾಗುವ ಮೊದಲೇ ಒಂದೊಂದಾಗಿ ವಿವರಿಸುವದು ವಿಪರೀತ ಬುದ್ಧಿಯಾಗಿ ಕಾಣುವದು. ಸಭೆಯು ಅದರಲ್ಲಿರುವ ಎಲ್ಲರಿಗೆ ಬೇಕಾದ ಬೋಧನೆ ಗದರಿಸೋಣ ಆದರಣೆ ಕಟ್ಟುವಿಕೆಗಳ ಐಶ್ವರ್ಯವಾದ ನಿಧಿಯಿಂದಲೇ ಸದ್ಯಕ್ಕೆ ಸಂತೃಪ್ತಿ ಪಡ ಬೇಕು.



# ನಾಲ್ಕನೇ ಒಳಭಾಗ

## ರಕ್ಷಣ್ಯದ ಕಡೇ ಸಂಪೂರ್ಣತೆಯು

### § 189. ಕಡೇ ಸಂಪೂರ್ಣತೆಗೆ ಅವಶ್ಯವಾದದ್ದೂ ಪೂರ್ವ ಗಾಮಿಗಳೂ

೧) ಎಲ್ಲಾ ತೀರಿಸುವ ಕಡೇ ಸಂಪೂರ್ಣತೆಯ ಕಾಲವು ದೇವರ ಜ್ಞಾನವುಳ್ಳ ಯೋಚನೆಯ ಪ್ರಕಾರ ಎಲ್ಲಾ ನಿರ್ಮಾಣಕ್ಕೆ ದೂತರಿಗೂ ಮನುಷ್ಯರಿಗೂ ಮರೆಯಾಗಿರುತ್ತದೆ (ಮಾರ್ಕ. ೧೩, ೩೨. ೩೩). ಆದರೂ ಕ್ರಿಸ್ತನು (ದೇವರ ಶುದ್ಧಪಟ್ಟದ ಕಾವಲಿಯವನಾಗಿ ಯೆಶಾಯ. ೨೧, ೧೧.) ಕಾಲದ ಗುರ್ತುಗಳನ್ನು ವಿಚಾರಿಸಿ (ಮತ್ತಾ. ೧೬, ೩.) ಬರೋಣದರ ದಿವಸವು ಸಮೀಪಿಸುವಂಥಾದ್ದನ್ನು ತಿಳುಕೊಳ್ಳುವ ಹಾಗೆಯೂ ತಿಳುಕೊಳ್ಳ ಬೇಕೆಂದೂ (ಮತ್ತಾ. ೨೪, ೩೨. ೩೩.) ಇದಕ್ಕೆ ಅವಶ್ಯವಾಗಿರುವ ಸೂಚನೆಗಳನ್ನು ಪ್ರವಾದನೆಯ ಆತ್ಮವು ಕಾಟ್ಟದೆ. ಪರಿಶುದ್ಧ ಬರಹವು ಕಡೇ ಉತ್ಪಾತವು ಹ್ಯಾಗೆ ಆಗುತ್ತದೆಂಬದನ್ನೂ ಅದರ ಮೊದಲು ಏನೇನು ನಡಿಯ ಬೇಕೆಂಬದನ್ನೂ ಒಟ್ಟಾರೆ ಪ್ರಕಟಿಸಿ ಅದೆ. ಕಾಲವನ್ನೂ ತಾಸನ್ನೂ ನಿಶ್ಚಯಿಸುವಂಥಾದ್ದು ಮೊದಲಾಗಿಯೂ ಮುಖ್ಯವಾಗಿಯೂ ದೇವರ ಜ್ಞಾನವುಳ್ಳ ಸರ್ವತ್ರಾಣದ ಚಿತ್ತಕ್ಕೆ ಒಳಗಾಗಿರುತ್ತದೆ (ಅಪೊ. ಕ್ರಿ. ೧, ೭). ಆದರೂ ಅದೇ ಸಮಯದಲ್ಲಿ ಅದಕ್ಕೆ ಅವಶ್ಯವಾದದ್ದು ಮನುಷ್ಯರ ಕೈಗಳಲ್ಲಿ ಸಹಾ ಇಟ್ಟದೆ. ಹ್ಯಾಗಂದರೆ ಎಲ್ಲಾ ಲೋಕ

ದಲ್ಲಿ ಸುವಾರ್ತೆಯು ಪ್ರಸಂಗಿಸಲ್ಪಡ ಬೇಕು (ಮತ್ತಾ. ೨೪, ೧೪). ಹೀಗಾಗಿ ಕಡೇ ಬರೋಣವು ಬೇಗ ಆಗುವದು ಇಲ್ಲವೆ ತಡವಾಗುವದು ಸ್ವಲ್ಪವಾದರೂ ಕ್ರೈಸ್ತರ ಸುವಾರ್ತೆ ಪ್ರಸಂಗಿಸುವ ವಾತ್ಸಲ್ಯಕ್ಕೆ ಒಳಗಾಗಿರುತ್ತದೆಂದಾಯಿತು. ಇದು ಅವಶ್ಯವಾಗಿರುತ್ತದೆಂಬದು ಪ್ರತ್ಯಕ್ಷವಾಗಿಯದೆ. ಆದರೆ ಇದರ ಸಂಗಡ ಮತ್ತೊಂದು ಸಹಾ ಅತ್ಯವಶ್ಯವಾಗಿರುತ್ತದೆ (ರೋಮಾ. ೧೧, ೨೫. ೨೬). ಏನಂದರೆ: ಮ್ಲೇಂಛರ ಪೂರ್ಣತೆಯು ಬಂದ ಮೇಲೆ ಕಡೆಯವರು ಮೊದಲನೇಯವರಾದ ತರುವಾಯ ಇಸ್ರಯೇಲ ಜನಾಂಗವೆಲ್ಲಾ ಸಹಾ (§ ೧೧೩) ರಕ್ಷಣ್ಯವನ್ನು ಅಂಗೀಕರಿಸಿ ಇರ ಬೇಕು.

ಪರಿಶಿಷ್ಟ. ಅಂತ್ಯವು ಬರುವ ಮೊದಲು ಸುವಾರ್ತೆಯು ಎಲ್ಲಾ ಮನುಷ್ಯರಿಗೆ ಪ್ರಸಂಗಿಸಲ್ಪಡ ಬೇಕೆಂಬ ಅವಶ್ಯವನ್ನು ನೋಡುವಾಗ್ಯೆ ಎಂದಾದರೂ ಕ್ರಿಸ್ತನ ವಿಷಯದಲ್ಲಿ ಏನಾದರೂ ಕೇಳದೆ ಸತ್ತು ಹೋದಂಥಾ ಅನೇಕ ಮಿಲಿಯ ಮ್ಲೇಂಛರ ವಿಷಯವಾಗಿ ಏನು ಹೇಳ ಬೇಕೆಂಬ ಪ್ರಶ್ನೆಯು ಹುಟ್ಟುತ್ತದೆ. ಬರಹಕ್ಕೆ ಸಮವಾಗಿ ಈ ಪ್ರಶ್ನೆಗೆ ಉತ್ತರ ಕೊಡುವದಾದರೆ ಭದ್ರವಾಗಿರ ಬೇಕಾದದ್ದೇನಂದರೆ: ಸಕಲ ಮನುಷ್ಯರು ರಕ್ಷಿಸಲ್ಪಡ ಬೇಕೆಂಬದು ದೇವರ ಚಿತ್ತವಾಗಿರುತ್ತದೆ (೧ ತಿಮೊ. ೨, ೩. ೪. ೨ ಪೇತ್ರ. ೩, ೯). ಮತ್ತು ಎರಡನೇ ಸಂಗತಿ ಏನಂದರೆ: ಕ್ರಿಸ್ತನ ಹೊರ್ತು ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ರಕ್ಷಣೆ ಇಲ್ಲ (ಅಪೊ. ಕ್ರಿ. ೪, ೧೨). ಯಾಕಂದರೆ "ಆತನೇ ನಮ್ಮ ಪಾಪಗಳಿಗೋಸ್ಕರ ಶಾಂತಕರವಾದ ಬಲಿಯಾಗಿದ್ದಾನೆ, ನಮ್ಮವುಗಳಿಗೋಸ್ಕರ ಮಾತ್ರವಲ್ಲ ಸಮಸ್ತ ಲೋಕದವುಗಳಿಗೋಸ್ಕರ ಸಹಾ (೧ಯೋಹಾ. ೨, ೨). ಆದರೆ ಮನುಷ್ಯನು ಈ ರಕ್ಷಣ್ಯವನ್ನು ವಿಶ್ವಾಸದಲ್ಲಿ ಮಾತ್ರವೇ ಸ್ವೀಕರಿಸ ಬಹುದೆಂಬದೂ ವಿಶ್ವಾಸವು ಪ್ರಸಂಗದಿಂದ ಬರುತ್ತದೆಂಬದೂ (ರೋಮಾ. ೧೦, ೧೩ ಇತ್ಯಾದಿ.) ಭದ್ರವಾಗಿ ನಿಲ್ಲ ಬೇಕಾದ ಮೇಲೆ, ಸ್ವಂತ ಅಪರಾಧವಿಲ್ಲದೆ ಈ ಜೀವದಲ್ಲಿ ಕ್ರಿಸ್ತನ ವಿಷಯವಾಗಿ ಏನೂ ಕೇಳದೆ ಇರುವವರಿಗೆ ಪಾತಾಳದಲ್ಲಿಯಾದರೂ ಸುವಾರ್ತೆಯು ಅವರು ಸಹಾ ಅದಕ್ಕೆ ಅನುಕೂಲ ಇಲ್ಲವೆ ಪ್ರತಿಕೂಲ ಆಗುವ ಹಾಗೆ ಪ್ರಸಂಗಿಸಲ್ಪಡುವದೆಂಬದು ಅವಶ್ಯವಾಗಿರುತ್ತದೆ. ಆದರೂ ದೇವರ ಬುದ್ಧಿಯು ನಮ್ಮ ಬುದ್ಧಿಗೆ ಅವಶ್ಯವಾಗಿರುತ್ತದೆಂದು ತೋರುವಂಥಾದ್ದಕ್ಕೆ ಒಳಗಾಗಿರುವದಿಲ್ಲವೆಂದು ಅವನು (ಅವರು ತಾವೇ ಆರಿಸಿ ಕೊಳ್ಳುವ ಪ್ರಕಾರ ರಕ್ಷಣ್ಯಕ್ಕೋಸ್ಕರವಾಗಲಿ ನಾಶಕ್ಕೋಸ್ಕರವಾಗಲಿ) ಬೇರೆ ತರವಾಗಿ ನ್ಯಾಯವಿಚಾರಣೆಗೆ ಪಕ್ವ ಮಾಡಲಿಕ್ಕೆ ಸಾಮರ್ಥ್ಯನಾಗಿದ್ದಾನೆ ಎಂಬದು ನಿಶ್ಚಯವಾಗಿರು

ತ್ತದೆ. ಆದರೆ ಕ್ರಿಸ್ತನು ಪಾತಾಳಕ್ಕೆ ಇಳಿದು ಹೋದಾಗ ಸೆರೆಯಲ್ಲಿರುವ ಅವಿಶ್ವಾಸಿ ಆತ್ಮಗಳಿಗೆ ಪ್ರಸಂಗಿಸಿದನೆಂದೂ (೧ ಪೇತ್ರ. ೩, ೧೯. ೨೦.) ಸತ್ತವರೂ ಬದುಕುವವರೂ ನ್ಯಾಯತೀರಿಸಲ್ಪಡುವ ಹಾಗೆ (೧ ಪೇತ್ರ. ೪, ೫. ೬.) ಸತ್ತವರಿಗೆ ಸಹಾ ಸುವಾರ್ತೆಯು ಪ್ರಸಂಗಿಸಲ್ಪಟ್ಟಿತ್ತೆಂದೂ ಪೇತ್ರನು ಹೇಳುವದನ್ನು ನೋಡಿದರೆ ನಾವು ಮೊದಲು ಹೇಳಿದ್ದು ಸಮವೆಂಬದಕ್ಕೆ ಆಧಾರ ಬರುತ್ತದೆ. ಆದರೆ ಮ್ಲೇಂಛರಿಗೆ ಸುವಾರ್ತೆಯನ್ನು ಪ್ರಸಂಗಿಸುವದು ವಿಶೇಷವಾಗಿರುತ್ತದೆ ಎಂಬದಕ್ಕೂ ಅವಶ್ಯವಾಗಿರುತ್ತದೆಂಬದಕ್ಕೂ ಇದರಿಂದ ಸ್ವಲ್ಪವಾದರೂ ಅಡ್ಡಿಯಾಗುವದಿಲ್ಲಾ.

೨) ಅವಶ್ಯವಾಗಿರುತ್ತದೆಂದು ಮೇಲೆ ಹೇಳಿದ್ದು ಪೂರ್ಣವಾದ ಕೂಡಲೇ ಅಂತ್ಯ ಬರುವದಕ್ಕಿಂತ ಮೊದಲು ಕ್ರೈಸ್ತಶಕ್ತಿಯು ಎಲ್ಲಾ ಭೂಮಿಯ ಮೇಲೆಯೂ ಸಮಸ್ತ ನಿವಾಸಿಗಳ ಮೇಲೆಯೂ ಅತಿ ಶ್ರೇಷ್ಟವಾಗಿಯೂ ಬಲವಾಗಿಯೂ ಉಳ್ಳ ಆಶೀರ್ವಾದಗಳನ್ನು ಸುರಿಸದೆ ಇರ ಕೂಡದು. ಮತ್ತು ಇದು ಸಹಸ್ರ ವರ್ಷದ ರಾಜ್ಯದಲ್ಲಿ ಆಗುತ್ತದೆ (ಪ್ರಕಟ. ೨೦). ಆದರೆ ಇದರಿಂದಲೇ ಅಂಧಕಾರದ ಬಲವು ಪೂರ್ಣ ಬೆಳೆಯದೆಯೂ ಅದು ಮತ್ತೊಂದು ಸರ್ತಿ ಇರುವಷ್ಟು ಬಲವನ್ನು ಒಟ್ಟು ತಾರದೆಯೂ ದೇವರ ಸಭೆಗೆ ತಿರಿಗಿ ಕಠಿಣವಾದಂಥಾ ಅತ್ಯಂತ ಕಠಿಣವಾದಂಥಾ ಕಾಲವು ಬಾರದೆಯೂ ಸಹಾ ಇರಲಿಕ್ಕಿಲ್ಲ. ಆದರೆ ಈ ಕಾಲವು ದೇವರ ಕೃಪೆಯಿಂದ ಸಣ್ಣದಾಗಿರುವದು (ಪ್ರಕಟ. ೨೦, ೩. ೮ ಇತ್ಯಾದಿ. ಮತ್ತಾ. ೨೪, ೨೨). ಆಗ್ಯೆ ಸುಳ್ಳುಪ್ರವಾದಿಗಳೂ ಸುಳ್ಳುಕ್ರಿಸ್ತರೂ ಎದ್ದು, ಅನೇಕರನ್ನು ಮೋಸಗಾಳಿಸುವರು (ಮತ್ತಾ. ೨೪, ೫. ೧೧). ಆಗ್ಯೆ ಅಂಧಕಾರದ ರಾಜ್ಯವು ತನ್ನ ಬಲಗಳನ್ನೆಲ್ಲಾ ಒಂದೇ ದೃಷ್ಯವಾದ ಮುಖ್ಯಸ್ಥನ ಅಂದರೆ ಪ್ರತಿಕ್ರಿಸ್ತನ ಕೆಳಗೆ ಕೂಡಿಸುವದು (೨ನೇ ಥೆಸ್ಸ. ೨, ೧—೧೦). ಆಗ್ಯೆ ಎಲ್ಲಾ ಕೇಡೂ ದುರ್ಭಿಕ್ಷವೂ ಒಟ್ಟಾಗುವದು: ಅನೀತಿಯೂ ಜನಾಂಗಗಳಲ್ಲಿ ಕಾಟಕಾಯಿಯೂ ಯುದ್ಧವೂ ಪ್ರಕೃತಿಯಲ್ಲಿ ಬರಗಳೂ ವ್ಯಾಧಿಗಳೂ ಭೂಕಂಪಗಳೂ (ಮತ್ತಾ. ೨೪, ೭.) ಆದರೆ ಅದೇ ಸಮಯದಲ್ಲಿ ಆಕಾಶದಲ್ಲಿಯೂ ಭೂಮಿಯಲ್ಲಿಯೂ ಗುರ್ತುಗಳೂ (ಮತ್ತಾ. ೨೪, ೨೯. ೩೦.) ಮನುಷ್ಯನ ಮಗನ ಸಮೀಪವಾದ ಬರೋಣವನ್ನು ಸಾರುವವು. ಮತ್ತು ನ್ಯಾಯತೀರ್ವಿಕೆಯ ದಿನವೂ ರಕ್ಷಣ್ಯದ ದಿನವೂ ನಿರೀಕ್ಷಿಸದೆ ಇದ್ದಾಗ ಕ್ಷಣ ಮಾತ್ರದಲ್ಲಿ ಉದಯಿಸುವದು.



## § 190. ಸಹಸ್ರ ವರ್ಷರಾಜ್ಯ

೧) ಪ್ರಕಟ. ೨೦, ೧—೬. ಮೇಲೆ ಹೇಳಿದ ಕಾಲದ ಕಡೆಯಲ್ಲಿ ಬಹಳ ವಿಪರೀತವಾಗುವಂಥಾ ಮುಖ್ಯವಾಗಿ ಕಾಣುವ ವಿಶೇಷವಾದ ಸಂಕಷ್ಟ ಹೋರಾಟಗಳ ಮೇಲೆ ಕಡೆಯಲ್ಲಿ ಸಭೆಯು ಅತಿ ಮಹಿಮೆಯುಳ್ಳಂಥಾ ಭೂಮಿಯ ಮೇಲಿನ ವಿಜಯವನ್ನು ಆಚರಿಸುತ್ತದೆ. ಯಾಕಂದರೆ ಕ್ರೈಸ್ತ ಭಕ್ತಿಯು ಈ ಭೂಜೀವನದಲ್ಲಿ ಸಹಾ ಏನು ಮಾಡಲಿಕ್ಕೆ ಸಾಮರ್ಥ್ಯವುಳ್ಳದ್ದೆಂಬದು ಶುದ್ಧವಾಗಿಯೂ ಅಟಕವಿಲ್ಲದೆಯೂ ಪ್ರತ್ಯಕ್ಷವಾಗ ಬೇಕು. ತೋರಿಕೆಗೆ ನಿಷ್ಫಲವೆಂದು ಕಂಡಂಥಾ ಸಭೆಯ ಎಲ್ಲಾ ಪ್ರಯತ್ನಗಳೂ ಹೋರಾಟಗಳೂ ಎಲ್ಲಾ ಸಂಕಷ್ಟಗಳೂ ಜಯಗಳೂ ನಿರರ್ಥಕವಾಗಿರಲಿಲ್ಲವೆಂದು ಪ್ರಕಟವಾಗಿ ಕಂಡು ಬರ ಬೇಕು. ಆದ್ದರಿಂದ ಅಂಧಕಾರದ ಪ್ರಭುವು ಎಲ್ಲಾ ಅವನ ಬಲದಾಡನೆ ಕಟ್ಟಲ್ಪಟ್ಟು ಸಾವಿರ ವರ್ಷ ಪರ್ಯಂತರಕ್ಕೆ ಅಗಾಧದಲ್ಲಿ ದಾಬ್ಬಲ್ಪಡ ಬೇಕು. ಆಗ್ಯೆ ಎಲ್ಲಾ ಸೈತಾನನ ಪ್ರಯತ್ನವೂ ಎಲ್ಲಾ ಅವನ ಶೋಧನೆಗಳೂ ಮೋಸಗಾಳಿಸೋಣಗಳೂ ಎಲ್ಲಾ ಅವನ ತಂತ್ರವೂ ಕೆಟ್ಟತನವೂ ತೀರಿ ಹೋಗುತ್ತದೆ. ಎಲ್ಲಾ ವರ್ಷಶತಗಳಲ್ಲಿ ಇದ್ದ ಸತ್ಯದ ಪರಿಶುದ್ಧ ರಕ್ತಸಾಕ್ಷಿಗಳು ಮೊದಲನೇ ಉತ್ಥಾನಕ್ಕೆ ಶೇರುತ್ತವೆ (ಇದು ಮತ್ತಾ. ೨೭, ೫೨. ೫೩. ಆಗುವಾಗ್ಯೆ ಒಂದು ವೇಳ್ಯ ಆರಂಭವಾಯಿತು). ಕ್ರಿಸ್ತನ ಸಂಗಡ ಸಾವಿರ ವರ್ಷ ಬದುಕಿ ಆಳುತ್ತಾರೆ. ಈ ಆಳ್ವಿಕೆಯು, ಬುದ್ಧಿಹೀನತ್ವವು ಬಹಳ ಸರ್ತಿ ಆಲೋಚಿಸಿದ ಪ್ರಕಾರ, ದೃಷ್ಯವಾದ್ದೂ ಭೂಮಿಯದೂ ಲೌಕಿಕ ಆಳ್ವಿಕೆಯೂ ಅಲ್ಲ; ಅದು ಅದೃಷ್ಯವಾದ್ದೂ ಪಾರಲೌಕಿಕವೂ ಆಗಿರುತ್ತದೆ. ಯಾಕಂದರೆ ಪರಲೋಕವೂ ಭೂಲೋಕವೂ ಕಡೇ ಸಂಪೂರ್ಣತೆಯನ್ನು ಹೊಂದಿರುವದಿಲ್ಲಾ. ಮರಣವು ಇನ್ನು ತೆಗದು ಹಾಕಲ್ಪಟ್ಟಿರುವದಿಲ್ಲಾ. ಕೆಟ್ಟವರನ್ನೂ ಭಕ್ತರನ್ನೂ ಬೇರೆ ಬೇರೆ ಮಾಡುವಂಥಾ ಕಡೇ ನ್ಯಾಯತೀರ್ವಿಕೆಯು ಇನ್ನು ಆಗಿರುವದಿಲ್ಲಾ, ಆದರೆ ಈ ಅದೃಷ್ಯ ಆಳುವಿಕೆಯ ಫಲಗಳೂ ಪ್ರಯತ್ನಗಳೂ ದೃಷ್ಯವಾಗಿಯೂ ಭೂಮಿಯದ್ದಾಗಿಯೂ ಲೌಕಿಕವಾಗಿಯೂ ಇರುವದು. ಕ್ರೈಸ್ತ ಭಕ್ತಿಯು ಪೂರ್ಣವಾಗಿ ಬಹಿರಂಗವಾದ ಜಯವನ್ನು ಹೊಂದಿರುವದು. ಎಲ್ಲಾ ಅಧಿಕಾರಸ್ಥರೂ ಸಂಸ್ಥಾನಗಳೂ ಪೂರ್ಣವಾಗಿ ಅದಕ್ಕೆ ಒಪ್ಪಿ ಕೊಳ್ಳುವರು; ಜೀವನದ ಎಲ್ಲಾ ವಿಷಯದಲ್ಲಿಯೂ ಸ್ಥಿತಿಗಳಲ್ಲಿಯೂ ಚಮತ್ಕಾರಗಳಲ್ಲಿಯೂ ವಿದ್ಯೆಗಳಲ್ಲಿಯೂ ಆಚಾರ ವಿಚಾರಗಳಲ್ಲಿಯೂ ನಡೆನುಡಿಗಳಲ್ಲಿಯೂ ಜೀವನದಲ್ಲಿ ಶ್ರೇಷ್ಟವಾದವುಗಳೂ ನೀತವಾದವುಗಳೂ ಎಲ್ಲಾ ವಿಷಯಗಳು ಕರ್ತನಲ್ಲಿ ಸ್ಥಾಪಿಸಲ್ಪಟ್ಟು, ಶುದ್ಧೀಕರಿಸಲ್ಪಟ್ಟಿರುವವು (ಸಮ ನೋಡು ಉದಾಹರಣೆಗಾಗಿ ಜಕರಿಯ. ೧೪, ೨೦. ೨೧).

೨) ಆದರೆ ಈ ತೀರಿಕೆಯು ಭೂಮಿಯದ್ದಾಗಿರುವದರಿಂದ ಇನ್ನೂ ಅಪೂರ್ಣವಾಗಿರುತ್ತದೆ. ಆ ಕೆಟ್ಟವನು ತೆಗದು ಹಾಕಲ್ಪಟ್ಟನು. ಆದರೆ ಆ ಕೆಟ್ಟದ್ದೂ ಆ ಕೆಟ್ಟವರೂ ಇನ್ನೂ ಇದ್ದಾರೆ. ಆತ್ಮಕ್ಕೂ ಮಾಂಸಕ್ಕೂ ಲೋಕದ ಮಕ್ಕಳಿಗೂ ರಾಜ್ಯದ ಮಕ್ಕಳಿಗೂ ಇರುವ ಹೋರಾಟವು ಇನ್ನೂ ನಡಿಯುತ್ತದೆ. ಪರಿಶುದ್ಧರು ಭೂಮಿಯಲ್ಲಿ ಯಾತ್ರಸ್ಥರೂ ಪರವಾಸಿಗಳೂ ಆಗಿ ನೋಡುವಂಥವರಾಗಿ ಅಲ್ಲ, ವಿಶ್ವಾಸದಲ್ಲಿ ನಡಕೊಳ್ಳುತ್ತಾರೆ. ಮುಖದ ಬೆವರಿನಲ್ಲಿ ಮಾಡುವ ಕೆಲಸವು ಇನ್ನೂ ತೀರಲಿಲ್ಲ. ಪ್ರಕೃತಿಯು ಮಾಯೆಯ ಚಾಕ್ರಿಗೆ ಇನ್ನು ಬಿಡುಗಡೆಯಾಗಲಿಲ್ಲ. ಮತ್ತು ಮರಣವು ತನ್ನ ಸುಂಕವನ್ನು ಇನ್ನು ಕೇಳುತ್ತದೆ. ಆದರೆ ಆತ್ಮದ ಐಶ್ವರ್ಯದ ಪುಣ್ಯವು ಸಭೆಯ ಮೇಲೆಯೂ ವಿಶ್ವಾಸಿಗಳ ಮೇಲೆಯೂ ಹೊಯ್ಯಲ್ಪಟ್ಟದೆ. ಮಾಂಸದ ಸಂಗಡಲಿರುವ ಆತ್ಮದ ಹೋರಾಟವೂ ಇನ್ನೂ ಇರುವ ರಕ್ಷಣ್ಯದ ಶತ್ರುಗಳ ಸಂಗಡ ಸಭೆಯ ಹೋರಾಟವೂ ಸುಲಭವಾಗಿಯೂ ಒಟ್ಟಾರೆ ಜಯವುಳ್ಳದ್ದಾಗಿಯೂ ಇರುತ್ತದೆ. ಯೆಶಾಯನು ಈ ಸಮಾಧಾನ ಆಶೀರ್ವಾದಗಳ ಕಾಲವನ್ನು ಬಹು ಸೌಂದರ್ಯವಾಗಿ ವರ್ಣಿಸುತ್ತಾನೆ. ಅದು ಸಾಮ್ಯರೂಪವಾದ ಪ್ರವಾದನೆಯ ನೋಟವಾಗಿರುತ್ತದೆಂಬದು ಸರಿ; ಆದರೂ ವರ್ಣನೆಯು ವರ್ಣಿಸಲ್ಪಡುವಂಥಾದ್ದಕ್ಕೆ ವಿಶೇಷವಾಗಿ ಸಂಬಂಧ ಇಲ್ಲದೆ ಇರ ಕೂಡದು: ಸೂರ್ಯ ಚಂದ್ರಗಳ ಪ್ರಭೆಯು ಹೆಚ್ಚಿಯದೆ (ಯೆಶಾಯ. ೩೦, ೨೬). ಗುಬಾರು ಮಾಡುವ ಭೂತಗಳೂ ಕಾಡುಮೃಗಗಳೂ ಪ್ರಕೃತಿಯ ಮೇಲೆ ಮನುಷ್ಯನಿಗೆ ತಿರಿಗಿ ಬಲವಾಗಿ ಕೊಡಲ್ಪಟ್ಟ ಅಧಿಕಾರದಿಂದ ಹಿಡಿಯಲ್ಪಟ್ಟಿದ್ದಾವೆ (ಯೆಶಾಯ. ೧೧, ೬—೯). ಮತ್ತು ಮರಣದ ಬಲವು ಕಡಿಮೆಯಾಗಿದೆ. ಹ್ಯಾಗಂದರೆ "ತಮ್ಮ ದಿವಸಗಳನ್ನು ಪಡಕೊಳ್ಳದಂಥಾ ಮಕ್ಕಳೂ ತಮ್ಮ ವರ್ಷಗಳನ್ನು ತೀರಿಸದಂಥಾ ಮುದುಕರೂ ಇನ್ನು ಮೇಲೆ ಇರಲಿಕ್ಕಿಲ್ಲ. ನೂರು ವರ್ಷದ ಹುಡುಗರು ಸಾಯುವರು" (ಯೆಶಾಯ. ೬೫, ೨೦).

ಪರಿಶಿಷ್ಟ. ಸಾವಿರ ವರ್ಷಗಳೆಂಬ ಈ ಪ್ರವಾದನೆಯ ಸಂಖ್ಯೆಯ ಮೇಲೆ ಶಬ್ದಾರ್ಥವಾದ ಭಾರವನ್ನಿಡ ಬಾರದು—ಸಹಸ್ರ ವರ್ಷರಾಜ್ಯದ ವಿಶೇಷತ್ವವು ೨ ತರ: ೧) ಹಿಂದುಳಿದ ಕಾಲದ ವಿಷಯವಾಗಿ ಅದು ಕ್ರೈಸ್ತ ಭಕ್ತಿಯು ಕಳೆದ ವರ್ಷಸಹಸ್ರಗಳಲ್ಲಿ ನಿಶಬ್ದವಾಗಿಯೂ ರಹಸ್ಯವಾಗಿಯೂ ತಗ್ಗಿಸುವಿಕೆಯಲ್ಲಿಯೂ ದಾಸತ್ವ ರೂಪದಲ್ಲಿಯೂ ವಿಸ್ತರಿಸಿದಂಥಾ ಆಶೀರ್ವಾದವೆಲ್ಲವುಗಳ ಮುಖ್ಯ ಸ್ಥಾನವಾಗಿರುತ್ತದೆ. ೨) ಮುಂದಿನ ಕಾಲದ ವಿಷಯವಾಗಿ ಆದರೆ, ಅದು ಮುಂದಾಗಿ ರುಚಿ ನೋಡುವ ಕಾಲವೂ ಕಡೇ ಸಂಪೂರ್ಣವಾದ ತೀರಿಕೆಯು ಕಾಲಕ್ಕೋಸ್ಕರ ಅವಯುವವಾಗಿ ಸಿದ್ಧ

ವಾಗುವ ಕಾಲವೂ ಆಗಿರುತ್ತದೆ. ಒಂದೊಂದು ಪೂರ್ಣವಾಗಿ ಹೊಸ ರೂಪವು ಪೂರ್ಣವಾಗಿಯೂ ನೆಲೆಯಾಗಿಯೂ ಪ್ರಕಟವಾಗ ಬೇಕಾದರೆ, ಮೊದಲಾಗಿ ಬೇಗ ಹಾದು ಹೋಗುವ ಪ್ರಕಟಣೆಗಳಾಗಿ ವರ್ತಮಾನ ಕೊಟ್ಟು ಪ್ರತಿಬಿಂಬ ಮಾಡಿಕೊಂಡು ಮಾರ್ಗ ಸಿದ್ಧ ಮಾಡುವದು ಅದರ ಸ್ವಭಾವವಾಗಿರುತ್ತದೆ. ಹಾಗೆ ಕ್ರಿಸ್ತನ ಬರೋಣವು ಹಳೇ ಒಡಂಬಡಿಕೆಯ ಮುಂಗುರ್ತುಗಳಲ್ಲಿಯೂ, ಕರ್ತನ ಉತ್ಥಾನ ದಿವಾರೋಹಣಗಳು ತಾಬೋರದ ರೂಪಾಂತ್ರದಲ್ಲಿಯೂ, ಪಂಚಾಶತ್ತಿನ ಆತ್ಮದ ಹೊಯ್ಯೋಣವು ಶಿಷ್ಯರಿಗೆ ಸದ್ಯಕ್ಕೆ ಆತ್ಮವನ್ನು ಕೊಟ್ಟದರಲ್ಲಿಯೂ (ಯೋಹಾ. ೨೦, ೨೨.) ಮುಂಗುರ್ತು ಹೊಂದಿತು. ಅದೇ ಪ್ರಕಾರ ಸಾವಿರ ವರ್ಷದರಾಜ್ಯದಲ್ಲಿ ಸಹಾ ಭವಿಷ್ಯವು ಮಾರ್ಗ ಮಾಡಿ ಕೊಳ್ಳುತ್ತದೆ. ಸರ್ವೋತ್ಥಾನವು ಪ್ರಥಮ ಉತ್ಥಾನದಿಂದಲೂ, ಕಡೇ ನ್ಯಾಯತೀರ್ವಿಕೆಯೂ ಕ್ರಿಸ್ತನ ಮತ್ತು ಅವನ ಪರಿಶುದ್ಧರ ಆಳ್ವಿಕೆಯಿಂದಲೂ, ನಿತ್ಯರಕ್ಷಣ್ಯವು ಸಾವಿರವರ್ಷದ ಸಮಾಧಾನದಿಂದಲೂ, ಪರಲೋಕ ಭೂಲೋಕಗಳ ರೂಪಾಂತ್ರವು ಪ್ರಕೃತಿಯ ಮಹಿಮೆ ಪಡೋಣದರಿಂದಲೂ ಮಾರ್ಗ ಮಾಡಿಕೊಳ್ಳುತ್ತದೆ.



## § 191. ಕಡೇ ರಣದ ಸಣ್ಣ ಕಾಲವು

೧) ಪ್ರಕಟ. ೨೦, ೩. ೭—೧೦. "ಆ ಸಾವಿರವರ್ಷ ಮುಗಿದಾಗ ಸೈತಾನನು ತನ್ನ ಶೆರೆಯಾಳಗಿಂದ ಬಿಡಿಸಲ್ಪಡುವನು" (ಶ್ಲೋ. ೭). ಕೇಡಿನ ಬಲವು ಸಾವಿರವರ್ಷದ ರಾಜ್ಯದಲ್ಲಿ ಇನ್ನೂ ನಿರ್ಮೂಲವಾಗಲಿಲ್ಲ. ಹಿಮ್ಮೆಟ್ಟಿಸಲ್ಪಟ್ಟು ಬಾಧಿಸ ಕೂಡದ್ದಾಗಿ ಮಾತ್ರವೇ ಇತ್ತು. ಆದರೆ ತನ್ನ ಅರಸನಲ್ಲಿ ಮಧ್ಯಸ್ಥಾನವನ್ನೂ ಆಧಾರವನ್ನೂ ಹೊಂದಿದ್ದಾಗಿ ತನ್ನ ತ್ರಾಣವನ್ನೆಲ್ಲಾ ಕೂಡಿಸಿ ಕೊಳ್ಳುತ್ತದೆ. ಎಷ್ಟು ಹೆಚ್ಚು ಕಾಲದಲ್ಲಿಯೂ ಎಷ್ಟು ಬಲವಾಗಿಯೂ ಕಟ್ಟಲ್ಪಟ್ಟು ಹಿಮ್ಮೆಟ್ಟಿಸಲ್ಪಟ್ಟಿತೋ ಅಷ್ಟೇ ನಿಶ್ಚಯವಾಗಿ ಅದು ಪ್ರತೀಕಾರವಾಗಿ ಕಾಣ ಬರುವದು ಸಹಾ ಅವಶ್ಯ (ಆದರೆ ಕೇಡನ್ನು ಪೂರ್ಣವಾಗಿ ಬೇರೆ ಮಾಡಿ ಜೈಸಿದ ಮೇಲೆ ಆ ಬಲವು ತೀರ ಬೇಕು ಎಂಬದು ಸರಿ). ಹ್ಯಾಗೂ ಅದು ಆರಿ ಹೋಗುವ ದೀಪವು ಕಡೇ ಸಾರಿ ಉಜ್ಜೀವಿಸುವ ಹಾಗೆಯೇ ಇರುವದು. ಅದೆಲ್ಲಾ ಕೇಡು ಕಡೇ ಸಾರಿ ಕೈಕಾಲು ಬಡಿಯುವ ಹಾಗೆ ಉಂಟು. ಇದರಲ್ಲಿ ಸರ್ಪಸ್ವಭಾವದ ಗುಣವು ಕಂಡು ಬರುತ್ತದೆ. ಇದು ಕಡೇ ಪ್ರಯತ್ನವು; ಇದರಲ್ಲಿ ತ್ರಾಣವನ್ನೆಲ್ಲಾ ಕಳಕೊಳ್ಳುತ್ತದೆ. ಹೀಗಾಗಿ ಹೊಂದಿದ

ಮರಣಘಾಯದಿಂದಲೇ ಶೀರಿ ಹೋಗ ಬೇಕು. ತಿಗೈ "ಸುಳ್ಳುಕ್ರಿಸ್ತರೂ ಸುಳ್ಳುಪ್ರವಾದಿಗಳೂ ಎದ್ದು ಸಾಧ್ಯವಾದರೆ ಆಯಲ್ಪಟ್ಟವರನ್ನು ಸಹಾ ಮೋಸಗೊಳಿಸುವಷ್ಟು ದೊಡ್ಡ ಲಕ್ಷಣಗಳನ್ನೂ ಅದ್ಭುತಗಳನ್ನೂ ನಡಿಸುವರು" (ಮತ್ತಾ. ೨೪, ೨೪). "ಆಗಲು ಮಹಾ ಉಪದ್ರವು ಇರುವದು, ಅಂಥಾದು ಜಗದುತ್ಪತ್ತಿಯ ಮೊದಲುಗೊಂಡು ಆಗಲಿಲ್ಲಾ; ಇನ್ನು ಮೇಲೆಯೂ ಆಗುವದಿಲ್ಲಾ. ಮತ್ತು ಆ ದಿವಸಗಳು ಅಡಕ ಮಾಡಲ್ಪಟ್ಟ ಹೊರ್ತು ಯಾವ ಮಾಂಸವಾದರೂ ರಕ್ಷಿಸಲ್ಪಡದು; ಆದರೆ ಆಯಲ್ಪಟ್ಟವರಿಗೋಸ್ಕರ ಆ ದಿವಸವು ಅಡಕ ಮಾಡಲ್ಪಡುವದು (ಮತ್ತಾ. ೨೪, ೨೧. ೨೨). ಆದರೂ ಅನೀತಿಯು ಹೆಚ್ಚಾಗುವದರಿಂದ ಅನೇಕರ ಪ್ರೀತಿಯು ತಣ್ಣಗಾಗುವದು, ಆದರೆ ಅಂತ್ಯದ ಪರ್ಯಂತ್ರಕ್ಕೂ ತಾಳುವವನ್ಯಾವನೋ ಅವನು ರಕ್ಷಿಸಲ್ಪಡುವನು (ಮತ್ತಾ. ೨೪, ೧೨. ೧೩). ಯುದ್ಧವೂ ಕಾಟಕಾಯಿಯೂ ಜನಾಂಗಗಳಲ್ಲಿ ಪ್ರಬಲವಾಗುವದು. ಬರಗಳೂ ವ್ಯಾಧಿಗಳೂ ಭೂಕಂಪಗಳೂ ಪ್ರಕೃತಿಯಲ್ಲಿ ಕಂಡು ಬರುವವು (ಮತ್ತಾ. ೨೪, ೬. ೭).

೨) ದೈವವಿರೋಧವಾದದರ ಮಹಾ ಪ್ರಯತ್ನವು ಅಂಧಕಾರದ ಎಲ್ಲಾ ವಸ್ತುಗಳೂ ತ್ರಾಣಗಳೂ ಒಬ್ಬನೇ ದುಷ್ಟನಾದ ನಾಯಕನ ಕೆಳಗೆ ಒಂದಾಗಿರುವದರಲ್ಲಿಯೇ ಆಧಾರ ಹೊಂದಿರುವದು. ಅವನೇ ಪ್ರತಿಕ್ರಿಸ್ತನು (೧ ಯೋಹಾ. ೨, ೧೮. ೨೨.) ಪಾಪದ ಮನುಷ್ಯನೂ ನಾಶನದ ಮಗನೂ ಆಗಿರುತ್ತಾನೆ. ಈತನೇ ಎದುರಿಸುವವನಾಗಿ ದೇವರ ಮಂದಿರದಲ್ಲಿ ದೇವರೆಂದು ಕೂತು ಕೊಂಡು ತಾನು ದೇವರೆಂದು ತನ್ನನ್ನು ತೋರಿಸಿ ಕೊಳ್ಳುವ ಹಾಗೆ ದೇವರೆಂದು ಕರಿಯಲ್ಪಡುವಂಥಾ ಅಥವಾ ಆರಾಧಿಸಲ್ಪಡುವಂಥಾ ಎಲ್ಲಾದರ ಮೇಲೆ ತನ್ನನ್ನು ಎಬ್ಬಿಸಿ ಕೊಳ್ಳುವವನು ಆಗಿರುತ್ತಾನೆ. ಅವನ ಬರುವಿಕೆಯು ಸೈತಾನನ ಯತ್ನದ ಪ್ರಕಾರವಾಗಿ ಸುಳ್ಳಿನ ಎಲ್ಲಾ ಬಲದಲ್ಲಿಯೂ ಗುರ್ತುಗಳಲ್ಲಿಯೂ ಅದ್ಭುತಗಳಲ್ಲಿಯೂ ಅನ್ಯಾಯದ ಎಲ್ಲಾ ಮೋಸದಲ್ಲಿಯೂ ತಮ್ಮ ರಕ್ಷಣೆಗಾಗಿರುವ ಸತ್ಯದ ಪ್ರೀತಿಯನ್ನು ಅಂಗೀಕರಿಸದ ಕಾರಣ ನಾಶನವಾಗುವದರಲ್ಲಿ ಇರುವದು (೨ನೇ ಥೆಸ್ಸ. ೨, ೩. ೪. ೯. ೧೦). ಆದರೆ ದೇವರ ಮಕ್ಕಳಿಗೆ ಬರುವ ಅತ್ಯಂತ ಕಠಿಣವಾದ ಶೋಧನೆ ಸಂಕಟಗಳ ಈ ಕಾಲವೂ ದೇವರ ಸಭೆಯ ಮೇಲೆ ಬರುವ ಅತ್ಯಂತ ಹೀನ ಮಾಡುವಂಥಾ ಅತಿ ಕಠಿಣವಾಗಿ ಹಿಂಸಿಸುವಂಥಾ ಈ ಕಾಲವೂ "ಸ್ವಲ್ಪ ಕಾಲವಾಗಿರುವದು" (ಪ್ರಕಟ. ೨೦, ೩). ಅದು ಆಯಲ್ಪಟ್ಟವರಿಗೋಸ್ಕರ ಅಡಕ ಮಾಡಲ್ಪಡುವದು (ಮತ್ತಾ. ೨೪, ೨೨). ಈ ಪಾಪದ ಮನುಷ್ಯರು ನರಕದ ಕೇಡಿನ ಸಹಿತವಾಗೆಲ್ಲಾ ಪ್ರಕಟವಾದ ಮೇಲೆ "ಕರ್ತನು ತನ್ನ ಬಾಯಿಯ ಆತ್ಮದಿಂದ ಸಂಹರಿಸಿ ತನ್ನ ಬರುವಿಕೆಯ ಪ್ರಕಾಶದಿಂದ ಅವನನ್ನು ಲಯ ಮಾಡುವ

ನು" (೨ನೇ ಥೆಸ್ಸ. ೨, ೮). "ಆಕಾಶದಿಂದ ಬೆಂಕಿಯು ಬಿದ್ದು ಸುಟ್ಟು ಬಿಡುವದು" ಭೂಮಿಯೂ ಅದರೊಳಗಿರುವ ಕೆಲಸಗಳೂ ಸುಟ್ಟು ಹೋಗುವವು "ಇದರಿಂದ" ಹೊಸ ಆಕಾಶವೂ ಹೊಸ ಭೂಮಿಯೂ ಉಂಟಾಗುವದು (೨ಪೇತ್ರ. ೩, ೧೦. ೧೩). "ಮತ್ತು ಅವರನ್ನು ಮೋಸಗೊಳಿಸಿದ ಪಿಶಾಚನು ಬೆಂಕಿ ಗಂಧಕಗಳ ಕೆರೆಯಲ್ಲಿ ಹಾಕಲ್ಪಡುತ್ತಾನೆ" (ಪ್ರಕಟ. ೨೦, ೯. ೧೦).

ಪರಿಶಿಷ್ಟ. ಈ ಕಡೇ ಕಠಿಣವಾದ ಕಾಲದ ವಿಶೇಷತ್ವವೂ ಅವಶ್ಯತ್ವವೂ ಎರಡೂ ಕಡೆಯಿಂದ ಕಾಣುವದು. ರಕ್ಷಣ್ಯಕ್ಕೆ ಹ್ಯಾಗೋ ಹಾಗೆಯೇ ರಕ್ಷಣ್ಯವನ್ನು ಯಾವಾಗಲೂ ಹೆದರಿಸುವಂಥಾ ಕೇಡಿಗೆ ಸಹಾ ಸಂಪೂರ್ತಿಯಾಗಲಿಕ್ಕೆ ಉಪಾಯವಾಗುವದು ಅವಶ್ಯವಾಗಿರುತ್ತದೆ. ಅದು ಪೂರ್ತಿಯಾಗುವ ಹಾಗೆ ದೇವರು ತಾನೇ "ಮೋಸದ ತ್ರಾಣವನ್ನು ಕಳುಹಿಸುವನು" (೨ನೇ ಥೆಸ್ಸ. ೨, ೧೧). ರಕ್ಷಣ್ಯವು ಈ ಯುಗದಲ್ಲಿಯೂ ಅಟಕವಿಲ್ಲದೆ ಉಪದ್ರವಿಲ್ಲದೆ ವಿಕಸಿತವಾಗುವ ಹಾಗೆ ಸಾವಿರ ವರ್ಷಗಳಲ್ಲಿ ಸೈತಾನನು ಹ್ಯಾಗೆ ಬಂಧಿಸಲ್ಪಟ್ಟನೋ ಹಾಗೆಯೇ ಕಠಿಣ ಮಾಡಿ ಕೊಳ್ಳುವಂಥಾ ಪಾಪಕ್ಕೆ ವಿರೋಧವಾಗಿ ಇಷ್ಟು ವರೆಗೆ ಯತ್ನೈಸಿ ಅದರ ಪೂರ್ಣ ಬೆಳಿಯುವಿಕೆಗೆ ಅಡ್ಡಿ ಮಾಡಿದ ಪರಿಶುದ್ಧಾತ್ಮದ ತ್ರಾಣವು ಸಹಾ ಪಾಪವು ತನ್ನಲ್ಲಿರುವಂಥಾದ್ದೆಲ್ಲಾ ವಿಕಸಿತ ಮಾಡುವ ಹಾಗೆ ತನ್ನನ್ನು ತಾನೇ ಹಿಂದೆಳೆ ಕೊಳ್ಳುತ್ತದೆ. ಯಾಕಂದರೆ ಈ ಪ್ರಕಾರವೇ ಅದು ಕಡೇ ನ್ಯಾಯತೀರ್ವಿಕೆಗೆ ಹಣ್ಣಾಗುತ್ತದೆ. ಆದರೆ ಸಹಸ್ರ ವರ್ಷಗಳಲ್ಲಿ ಐಶ್ವರ್ಯವಾಗಿ ಕೃಪೆಯನ್ನು ಹೊಂದಿದ ಮೇಲೆ ಸಭೆಯು ಸಹಾ ಶೋಧಿಸಲ್ಪಟ್ಟು ಕೇರಲ್ಪಡುವದು. ಪರೀಕ್ಷಿತವಾಗುವದಕ್ಕೂ ಸಂಪೂರ್ಣವಾಗುವದಕ್ಕೂ ಪೂರ್ಣ ಅವಶ್ಯವಾಗಿರುತ್ತದೆ. ಒಳ್ಳೇ ದಿನಗಳಲ್ಲಿ ಸಭೆಗೆ ಕೂಡಿ ಕೊಂಡಿದ್ದ ಅದರ ಸ್ನೇಹಿತರಲ್ಲಿ ಎಷ್ಟು ಜನರು ಕಷ್ಟ ಉಪದ್ರಗಳ ದಿವಸಗಳಲ್ಲಿ ಸಹಾ ಅದಕ್ಕೆ ನಂಬಿಗಸ್ಥರಾಗಿರುವರೆಂಬದು ಪ್ರಕಟವಾಗ ಬೇಕು (ಮತ್ಥಾ. ೨೪, ೧೩). ಸಭೆಯು ನೀಚತ್ವದಿಂದಲೇ ಶ್ರೇಷ್ಟತ್ವಕ್ಕೂ ಉಪದ್ರಗಳಿಂದಲೇ ಸಂತೋಷಕ್ಕೂ ಅತ್ಯಂತ ನೀಚತ್ವ ಉಪದ್ರಗಳೊಳಗಿಂದಲೇ ಅತ್ಯಂತ ಮಹಿಮೆ ಆನಂದಗಳಿಗೂ ಬರಲಾದೀತು. ಹ್ಯಾಗೆ ಕರ್ತನ ಜೀವದಲ್ಲಿ ಅತ್ಯಂತ ಶ್ರೇಷ್ಟವಾದ ಮಹಿಮೆಗೂ ಹೆಚ್ಚಿಸೋಣಕ್ಕೂ ಯೆಹೂದ್ಯರ ಮತ್ತು ಮ್ಲೇಂಛರ ಮುಂದೆ ಮಹಾ ನಿಂದೆಯೂ ಗೆತ್ಸೇಮನೆಯ ಮಹಾ ಕಳವಳವೂ ಕ್ರೂಜೆಯ ಮಹಾ ಸಂಕಷ್ಟಗಳೂ ಮೊದಲು ಬರ ಬೇಕಾಯಿತೋ, ಅದೇ ಪ್ರಕಾರ ಕ್ರಿಸ್ತನ ಶರೀರವಾಗಿರುವ ಸಭೆಯು ಸಹಾ ಸಂಪೂರ್ಣತೆಗೆ ಅದೇ ಮಾರ್ಗವಾಗಿ ಹೋಗ ಬೇಕು.



## § 192. ಕ್ರಿಸ್ತನ ತಿರಿಗಿ ಬರೋಣ

೧) ನ್ಯಾಯತೀರ್ವಿಕೆಗೂ ಎಲ್ಲವುಗಳ ಸಂಪೂರ್ಣತೆಗೂ ಆಗಿರುವ ಕರ್ತನ ತಿರಿಗಿ ಬರೋಣವು ಪ್ರತ್ಯೇಕವಾದ ಒಂದು ಕೆಲಸವಲ್ಲಾ; ಅದು ಲೋಕಚರಿತ್ರವನ್ನೆಲ್ಲಾ ತುಂಬಿಸುವಂಥಾ ಬರೋಣದರ ಶ್ರೇಷ್ಟವಾದ ಅಂತ್ಯವು ಅಷ್ಟೆ. ಸರ್ವತ್ರಾಣದ ಬಲಗಡೆಯಲ್ಲಿ ಕೂಡ್ರುವಂಥ ಸರ್ವತ್ರನಾದ ಲೋಕರಾಜನೂ ಲೋಕ ನ್ಯಾಯಕರ್ತನೂ ಆಗಿರುವವನು ಭೂಮಿಯ ಸ್ಥಿತಿಯಲ್ಲಿ ಎಷ್ಟು ಸಾರಿ ತನ್ನ ಕೈ ತೋರಿಸುತ್ತಾನೋ ಎಷ್ಟು ಸಾರಿ ಅವನ ರಾಜ್ಯವು ಪ್ರವರ್ತಿಸುತ್ತದೋ ಎಷ್ಟು ಸಾರಿ ಅವನು ತನ್ನ ಶತ್ರುಗಳನ್ನು ಜೈಸಿ ಶಿಕ್ಷಿಸುತ್ತಾನೋ ಅಷ್ಟು ಸಾರಿಯೂ ಅದು ಕ್ರಿಸ್ತನ ಬರೋಣವಾಗಿರುತ್ತದೆ. ಕಡೇ ದಿನದಲ್ಲಿ ಅವನ ಬರೋಣದರಿಂದ ಯಾವದು ಸಂಪೂರ್ಣವಾಗುತ್ತದೋ ಅದು ಯಾವಾಗಲೂ ಮುಂದೆ ಮುಂದೆ ನಡಿಯುವಂಥಾ ಅದೇ ಬರೋಣದರ ವರ್ಷಶತಗಳಲ್ಲಿ ಮಾರ್ಗ ಮಾಡಿ ಕೊಂಡು ಬೆಳಿಯುತ್ತದೆ. ದಿವಾರೋಹಣದಲ್ಲಿ ಆರಂಭವಾಯಿತು. ಕಡೇ ನ್ಯಾಯತೀರ್ವಿಕೆಯಲ್ಲಿ ತೀರುತ್ತದೆ. ಆ ಮೆಲ್ಲ ಮೆಲ್ಲ ಬರೋಣಕ್ಕೂ ಕಡೇ ಸಾರಿಯ ಬರೋಣಕ್ಕೂ ಇರುವ ಹೆಚ್ಚು ಕಡಿಮೆಯು ಅದರ ಪ್ರಕಟಣೆಯ ರೀತಿಯಲ್ಲಿ ಕಂಡು ಬರುತ್ತದೆ. ೧ನೇದು ಅದೃಷ್ಯವಾಗಿಯೂ ಅಡಗಿದಂಥಾದ್ದಾಗಿಯೂ ಇರುವ ಯತ್ನೈಸುವಿಕೆ, ಇದನ್ನು ಅದಕ್ಕಿರುವ ಪೂರ್ಣ ಮಹಿಮೆಯಲ್ಲಿ ವಿಶ್ವಾಸದ ಕಣ್ಣೇ ಹೊರ್ತು ಮತ್ತೊಂದು ತಿಳುಕೊಳ್ಳಲೂ ಊಹಿಸಲೂ ಶಕ್ಯವಾಗಿರುವದಿಲ್ಲಾ. ಆದರೆ ೨ನೇದು ಪ್ರಕಟವಾದದ್ದಾಗಿಯೂ ಎಲ್ಲಾ ಲೋಕಕ್ಕೆ ದೃಷ್ಯವಾದದ್ದಾಗಿಯೂ ಇರುವ ಪ್ರಕಟಣೆ. ಅದು ಸಿದ್ಧಮಾಡುವಂಥಾದ್ದಾಗಿ ಬಹಳ ಸರ್ತಿ ಅಲ್ಪವಾಗಿ ಕಾಣುವಂಥಾದ್ದು. ಆದರೆ ಇದು ಈಡೇರಿಸುವಂಥಾದ್ದಾಗಿ ಅನಂತ ಮಹಿಮೆಯುಳ್ಳದ್ದೂ ಪ್ರಭೆಯುಳ್ಳದ್ದೂ ಆಗಿರುವ ಬರೋಣವು. ಇದು ಬರುತ್ತದೆ ಎಂಬದಕ್ಕೆ ಮೊದಲು ಬರುವ ಗುರ್ತುಗಳಿಗಾಗಿ ನಡುಗಿಸುವಂಥಾದ್ದಾಗಿಯೂ ಕಂಡು ಬರುವಾಗ್ಯೆ ಮಹತ್ವ ಉಳ್ಳದ್ದಾಗಿಯೂ ಯತ್ನೈಸುವಿಕೆಯಲ್ಲಿ ಮಹಿಮೆಯುಳ್ಳದ್ದು ಮಾತ್ರವಲ್ಲಾ ಭಯಂಕರವಾಗಿ ಸಹಾ ಇರುತ್ತದೆ.

೨) ಕರ್ತನ ಈ ದಿವಸವು "ಕಳ್ಳನು ರಾತ್ರಿಯಲ್ಲಿ ಬರುವ ಪ್ರಕಾರ ನಿರೀಕ್ಷಿಸದೆ ಇದ್ದಾಗ ಪಕ್ಕನೇ ಮೂಡುವದು" (೧ ಥೆಸ್ಸ. ೫, ೨). "ಮಿಂಚು ಮೂಡಣದಿಂದ ಹೊರಟು ಪಡುವಲು ಪರ್ಯಂತರ ಪ್ರಕಾಶಿಸುವದು ಹ್ಯಾಗೋ ಹಾಗೆಯೇ ಮನುಷ್ಯನ ಮಗನ ಬರುವಿಕೆ ಇರುವದು" (ಮತ್ತಾ. ೨೪, ೨೭). ನಾಶನವು ಹೋ

ಗಲೊಡಿಸ ಕೂಡದಂಥಾದ್ದಾಗಿಯೂ ತಪ್ಪಿಸಿಕೊಳ್ಳ ಕೂಡದಂಥಾದ್ದಾಗಿಯೂ ತಿರಸ್ಕರಿಸುವವರ ಮೇಲೆ ಭಗ್ಗನೇ ಬರುವದು (೧ನೇ ಥೆಸ್ಸ. ೫, ೩). ಪರಲೋಕದಲ್ಲಿಯೂ ಭೂಮಿಯಲ್ಲಿಯೂ ಭಯಂಕರವಾದ ಗುರ್ತುಗಳು, ಲೋಕದ ನ್ಯಾಯಕರ್ತನು ಕಾಣಿಸಿಕೊಳ್ಳುವದು ಸಮೀಪವಾಯಿತು ಎಂದು ಸಾರುವವು. ಹೇಳ ಕೂಡದಂಥಾ ವ್ಯಥೆಯು ನಿರ್ಮಾಣ್ಯವನ್ನೆಲ್ಲಾ ನಡುಗಿಸುವದು ವಿಸ್ಮಯವೂ ಆಶಾಭಗ್ನತ್ವವೂ ಕೆಟ್ಟವರನ್ನು ಹಿಡುಕೊಳ್ಳುವದು. ಜಗತ್ತಿಗೆ ಉಂಟಾಗುವ ಕಾರ್ಯಕ್ಕೋಸ್ಕರವೂ ನಿರೀಕ್ಷೆಗೋಸ್ಕರವೂ ಭಕ್ತರು ಸಹಾ ಹೆದರುವರು. ಮತ್ತು ನರಳುವ ನಿರ್ಮಾಣವು ಸಹಾ ಮೂಲಾಧಾರಗಳಲ್ಲಿಯೇ ಕಂಪಿಸುವದು. ಯಾಕಂದರೆ ಈ ಪಾಪಲೋಕದಲ್ಲಿ ಏನಾದರೂ ಹೊಸತಾದದ್ದು ಜನನಕ್ಕೆ ಬರ ಬೇಕಾದರೆ, ಎಲ್ಲಾ ಕಡೆಯಲ್ಲಿಯೂ ಸಂತೋಷಕರವಾದ ಜನನದ ಮೊದಲು ಮಹಾ ದುಃಖವೂ ಬೇನೆಗಳೂ ಬರುತ್ತವೆ. ಅದೇ ಪ್ರಕಾರ ಆ ದಿವಸದಲ್ಲಿ ಪ್ರಸವವೇದನೆ ಪಡುವ ನಿರ್ಮಾಣ್ಯಕ್ಕೆ ಸಹಾ ಆಗುತ್ತದೆ. “ಭೂಮಿಯ ಮೇಲೆ ದಿಕ್ಕು ಕಾಣದ ಜನಾಂಗಗಳ ಸಂಕಟವು ಇರುವದು. ಆಗ ಸಮುದ್ರವೂ ತೆರೆಗಳೂ ಘೋಷಿಸುವವು. ಜಗತ್ತಿಗೆ ಉಂಟಾಗುವ ಕಾರ್ಯಗಳ ಭಯಕ್ಕೋಸ್ಕರವೂ ನಿರೀಕ್ಷೆಗೋಸ್ಕರವೂ ಮನುಷ್ಯರ ಗುಂಡಿಗೆ ಕುಂದುವದು. ಯಾಕಂದರೆ ಆಕಾಶದ ಬಲಗಳು ಕದಲಿಸಲ್ಪಡುವವು” (ಲೂಕ. ೨೧, ೨೫. ೨೬). ಆದರೆ ಆತ್ಮವೂ ಮದಲಗಿತ್ತಿಯೂ (ಅಂದರೆ ಕ್ರಿಸ್ತನ ಸಭೆ) ಬಾ ಅನ್ನುತ್ತಾರೆ. ಹೌದು ಕರ್ತನಾದ ಯೇಸುವೇ ಬಾ (ಪ್ರಕಟ. ೨೨, ೧೭. ೨೦). “ಸೂರ್ಯನು ಕತ್ತಲಾಗುವನು, ಚಂದ್ರನು ತನ್ನ ಪ್ರಕಾಶವನ್ನು ಕೊಡುವದಿಲ್ಲಾ; ನಕ್ಷತ್ರಗಳು ಆಕಾಶದಿಂದ ಬಿದ್ದು ಹೋಗುವವು, ಆಕಾಶದ ಬಲಗಳು ಚಲಿಸಲ್ಪಡುವವು. ಆಗಲು ಮನುಷ್ಯನ ಮಗನ ಗುರ್ತು ಆಕಾಶದಲ್ಲಿ ಕಾಣಿಸುವದು. ಮತ್ತು ಭೂಮಿಯ ಕುಲಗಳೆಲ್ಲಾ ಬಡಕೊಂಡು ಮನುಷ್ಯನ ಮಗನು ಆಕಾಶದ ಮೇಘಗಳ ಮೇಲೆ ಬಹು ಬಲವೂ ಮಹಿಮೆಯೂ ಸಹಿತವಾಗಿ ಬರುವದನ್ನು ನೋಡುವರು. ಅವನು ತನ್ನ ದೂತರನ್ನು ತುತೂರಿಯ ದೊಡ್ಡ ಶಬ್ದ ಸಹಿತವಾಗಿ ಕಳುಹಿಸುವನು. ಅವರು ಅವನು ಆದುಕೊಂಡವರನ್ನು ಆಕಾಶದ ಕೊನೆಗಳಿಂದ ಅದರ ಕೊನೆಗಳ ಪರ್ಯಂತರ ನಾಲ್ಕು ದಿಕ್ಕುಗಳಿಂದ ಕೂಡಿಸುವರು” (ಮತ್ತಾ. ೨೪, ೨೯—೩೧).

೩) “ಕರ್ತನು ತಾನೇ ಆರ್ಭಟದಿಂದಲೂ ಪ್ರಧಾನದೂತನ ಶಬ್ದದಿಂದಲೂ ದೇವರ ತುತೂರಿಯಿಂದಲೂ ಪರಲೋಕದಿಂದ ಇಳಿದು ಬರುವನು. ಮತ್ತು ಕ್ರಿಸ್ತನಲ್ಲಿ ಸತ್ತವರು ಮೊದಲು ಏಳುವರು, ಆ ಮೇಲೆ ಬದುಕುವವರಾಗಿ ಉಳಿಯುವ ನಾವು ಅವರ ಸಂಗಡ ಮೇಘಗಳಲ್ಲಿ ಕರ್ತನನ್ನು ಎದುರುಗೊಳ್ಳುವದಕ್ಕೆ ಆಕಾಶಕ್ಕೆ ಎತ್ತ

ಲ್ಪಟ್ಟು ಹಾಗೆಯೇ ಎಂದೆಂದಿಗೂ ಕರ್ತನ ಸಂಗಡ ಇರುವೆವು" (೧ನೇ ಥೆಸ್ಸ. ೪, ೧೬. ೧೭). "ಕರ್ತನ ದಿನವು ರಾತ್ರೀ ಕಳ್ಳನ ಹಾಗೆ ಬರುವದು. ಅದರಲ್ಲಿ ಆಕಾಶಗಳು ಮಹಾ ಘೋಷದಿಂದ ಇಲ್ಲದೆ ಹೋಗುವವು. ಮಹಾಭೂತಗಳು ಉರಿದು ಕರಗಿ ಹೋಗುವವು. ಭೂಮಿಯೂ ಅದರಲ್ಲಿರುವ ಕೆಲಸಗಳೂ ಸುಟ್ಟು ಹೋಗುವವು" (೨ ಪೇತ್ರ. ೩, ೧೦). ಮತ್ತು ಯೋಹಾನನು ಒಂದು ಮಹಾದರ್ಶನದಲ್ಲಿ ಈ ಮಹಾದಿವಸದ ಪ್ರವರ್ತನೆಯನ್ನು ನೋಡಿದನು. "ದೇವರ ಬಳಿಯಿಂದ ಬೆಂಕಿಯು ಪರಲೋಕದೊಳಗಿಂದ ಇಳಿದು ಕಾಟಕಾಯಿಯವರನ್ನು ತಿಂದು ಬಿಟ್ಟಿತು. ಆಗಲು ದೊಡ್ಡ ಬಿಳೀ ಸಿಂಹಾಸನವನ್ನೂ ಅದರ ಮೇಲೆ ಕೂತುಕೊಂಡವನನ್ನೂ ಕಂಡೆನು. ಅವನ ಸಮ್ಮುಖದಿಂದ ಭೂಮಿಯೂ ಆಕಾಶವೂ ಓಡಿ ಹೋಗಿ ಅವಕ್ಕೆ ಸ್ಥಳ ಶಿಕ್ಕಲಿಲ್ಲಾ. ಮತ್ತು ಹಿರಿಕಿರಿಯರಾದ ಸತ್ತವರು ದೇವರ ಮುಂದೆ ನಿಂತಿರುವದನ್ನು ಕಂಡೆನು. ಪುಸ್ತಕಗಳು ತೆರಿಯಲ್ಪಟ್ಟವು. ಆಗಲು ಆ ಪುಸ್ತಕಗಳಲ್ಲಿ ಬರದವುಗಳಿಂದ ಸತ್ತವರಿಗೆ ಅವರ ಕ್ರಿಯೆಗಳ ಪ್ರಕಾರ ನ್ಯಾಯತೀರಿಸಲ್ಪಟ್ಟಿತು. ಸಮುದ್ರವು ಅದರೊಳಗಿರುವ ಸತ್ತವರನ್ನು ಒಪ್ಪಿಸಿತು. ಮರಣವೂ ಪಾತಾಳವೂ ಅವುಗಳೊಳಗಿರುವ ಸತ್ತವರನ್ನು ಒಪ್ಪಿಸಿದವು. ಮತ್ತು ಯಾವನಾದರೂ ಜೀವದ ಪುಸ್ತಕದಲ್ಲಿ ಬರಿಯಲ್ಪಟ್ಟವನಾಗಿ ಕಾಣಿಸದಿದ್ದರೆ ಬೆಂಕಿಯ ಕೆರೆಯಲ್ಲಿ ಹಾಕಲ್ಪಟ್ಟನು. ಮತ್ತು ಹೊಸ ಆಕಾಶವನ್ನೂ ಹೊಸ ಭೂಮಿಯನ್ನೂ ಕಂಡೆನು. ಮತ್ತು ಸಿಂಹಾಸನದ ಮೇಲೆ ಕೂತುಕೊಂಡವನು ಇಗೋ ಎಲ್ಲಾ ಹೊಸತಾಗಿ ಮಾಡುತ್ತೇನೆ ಅಂದನು" (ಪ್ರಕಟ. ೨೦, ೯ — ೨೧, ೫ ವರೆಗೆ).

ಪರಿಶಿಷ್ಟ. ಬರೋಣದರ ಆ ಮಹಾ ದಿವಸದಲ್ಲಿ ನಡಿಯುವಂಥಾದ್ದನ್ನು ಕಾಲಾನುಸಾರವಾಗಿ ಕ್ರಮವಾಗಿ ಹೇಳುವದಕ್ಕೆ ಆಗುವದಿಲ್ಲಾ. ಈಡೇರುವಿಕೆಯಲ್ಲಿ ಸಹಾ ಒಂದರ ಮೇಲೆ ಒಂದಾಗಿ ಅದೆಲ್ಲಾ ಆಗಲಿಕ್ಕಿಲ್ಲವೆಂದು ಕಾಣುತ್ತದೆ. ಒಂದು ವೇಳೆ ಅದೆಲ್ಲಾ ಒಂದೇ ಸಾರಿ ನಡಿಯುವದು. ಕರ್ತನ ಪ್ರತ್ಯಕ್ಷತೆಯೂ ಸತ್ತವರ ಉತ್ಥಾನವೂ ಇನ್ನೂ ಬದುಕುವವರ ಮಾರ್ಪಡಿಸೋಣವೂ ಭೂಮಿಯ ಸ್ಫುಟೀಕರಣವೂ ನ್ಯಾಯತೀರ್ವಿಕೆಯೂ ತೀರ್ಪು ತೀರ್ಪಿನ ಪ್ರಕಾರ ಆಗುವಂಥಾದ್ದೂ ಇದೆಲ್ಲಾ ಪೂರ್ಣ ನಿತ್ಯತ್ವದ ಮೇಲು ಕೇಡುಗಳನ್ನು ಸೂಚಿಸುವ ಒಂದೇಯಾಗಿರುವ ವರ್ಣಿಸಕೂಡದಂಥಾ ಗಂಭೀರವಾದ ಪರಿಶುದ್ಧ ಕ್ಷಣದ ಕೆಲಸವಾಗಿರುವದು.



## § 193. ಸತ್ತವರ ಉತ್ಥಾನವೂ ಬದುಕುವವರ ಮಾರ್ಪಡೋಣವೂ ಪರಲೋಕ ಭೂಲೋಕಗಳ ನವೀಕರಣವೂ

೧) ಮರಣವು ಅಂದರೆ, ಪ್ರಾಣವು ಶರೀರದಿಂದ ಬೇರೆಯಾಗುವಂಥಾದ್ದು ಪಾಪದ ಸಂಬಳವಾಗಿರುತ್ತದೆ (ರೋಮಾ. ೬, ೨೩). ಉತ್ಥಾನವು ಅಂದರೆ ಪ್ರಾಣವು ಮಹಿಮೆ ಹೊಂದಿದ ಶರೀರಕ್ಕೆ ತಿರಿಗಿ ಕೂಡಿದಂಥಾದ್ದು, ರಕ್ಷಣ್ಯದ ಫಲವಾಗಿರುತ್ತದೆ. ಪ್ರಾಣವು ಶರೀರವನ್ನು ಇಟ್ಟುಕೊಳ್ಳುವಷ್ಟು ಸಾಮರ್ಥ್ಯವಿಲ್ಲದೆ ಇದ್ದದ್ದಾದರೆ ಅದರಿಂದ ಹರದು ಹೋದಂಥಾ ಕೊಳೆಗೆ ವಶವಾದಂಥಾ ಶರೀರವನ್ನು ತಿರಿಗಿ ತಕ್ಕೊಂಡು ತನ್ನ ಸೇವೆಗೆ ಹಾಕಲಿಕ್ಕೆ ಇನ್ನು ಕಡಿಮೆ ತ್ರಾಣವುಳ್ಳದ್ದಾಗಿರ ಬೇಕು. “ಆದರೆ ಈಗ ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟು ನಿದ್ದೆ ಹೋದವರಲ್ಲಿ ಪ್ರಥಮ ಫಲವಾದನು. ಯಾಕಂದರೆ ಮನುಷ್ಯನಿಂದ ಮರಣವು ಬಂದ ಕಾರಣ ಸತ್ತವರ ಉತ್ಥಾನವು ಮನುಷ್ಯನಿಂದಲೇ (೧ ಕೊರಿ. ೧೫, ೨೦. ೨೧). ಕ್ರಿಸ್ತನು ಮರಣವನ್ನು ತನ್ನಲ್ಲಿಯೂ ನಮಗೋಸ್ಕರವೂ ಜೈಸಿದ್ದಾನೆ. ಅವನು ತಾನೇ ಮಾರ್ಗ ಮಾಡಿಕೊಂಡು ತನ್ನ ಶರೀರದ ಅಂಗಗಳಾಗಿರುವ ನಮ್ಮನ್ನು ಸಹಾ ತನ್ನ ಹಿಂದೆ ಎಳಿಯುತ್ತಾನೆ. ಕೊಳೆಯಿಂದ ಹಳೇ ವಾಕ್ಯದ ಪ್ರಕಾರ (೧ ಮೋಶೆ. ೩, ೧೯.) ನಮ್ಮ ಶರೀರದಲ್ಲಿ ಮಣ್ಣಿನಿಂದ ಬಂದದ್ದೇನೋ ಅದು ತಿರಿಗಿ ಮಣ್ಣಾಗ ಬೇಕು. ಆದರೆ ಮಣ್ಣಿನಲ್ಲಿ ಹಾಕಿದ ಶರೀರವು ಕೋರಿಕೆಯಲ್ಲಿ ಬಿತ್ತಲ್ಪಟ್ಟಂಥಾ ಬೀಜದ ಕಾಳಾಗಿರುತ್ತದೆ.” ಲಯವಾಗಿ ಬಿತ್ತಲ್ಪಡುವದು ನಿರ್ಲಯವಾಗಿ ಎಬ್ಬಿಸಲ್ಪಡುವದು, ಅವಮಾನದಲ್ಲಿ ಬಿತ್ತಲ್ಪಡುವದು ಮಹಿಮೆಯಲ್ಲಿ ಎಬ್ಬಿಸಲ್ಪಡುವದು, ಅಶಕ್ತಿಯಲ್ಲಿ ಬಿತ್ತಲ್ಪಡುವದು ಬಲದಲ್ಲಿ ಎಬ್ಬಿಸಲ್ಪಡುವದು, ಜೀವಭಾವದ ಶರೀರವು ಬಿತ್ತಲ್ಪಡುವದು ಆತ್ಮಭಾವದ ಶರೀರವು ಎಬ್ಬಿಸಲ್ಪಡುವದು, ಜೀವಭಾವದ ಶರೀರ ಉಂಟು; ಆತ್ಮಭಾವದ ಶರೀರ ಉಂಟು (೧ ಕೊರಿ. ೧೫, ೪೨—೪೪). ಮಣ್ಣಿನಲ್ಲಿ ಹಾಕಿದ ಮೇಲೆ ಕೊಳತು ಹೋಗುವ ಬೀಜದ ಕಾಳಿನೊಳಗಿಂದ ಸೂರ್ಯನ ಉಜ್ಜೀವಿಸ ಮಾಡುವ ತ್ರಾಣದಿಂದ ಹ್ಯಾಗೆ ಹೊಸ ಸಶಿಯು ಮೇಲೆ ಬರುತ್ತದೋ ಹಾಗೆಯೇ ಲಯವಾಗುವಂಥಾ ಭೂಮಿಯ ಶರೀರದೊಳಗಿಂದ ಉತ್ಥಾನವಾದ ಕ್ರಿಸ್ತನ ಬಲದಿಂದ ನಿರ್ಲಯವಾದ ಹೊಸ ಶರೀರವು ಎದ್ದು ಬರುವದು (೧ ಕೊರಿ. ೧೫, ೩೬—೩೮). ನಮ್ಮ ಭೂಸಂಚಾರದ ಕಾಲದಲ್ಲಿ ಕ್ರಿಸ್ತನು ಪರಿಶುದ್ಧ ರಾತ್ರಿಭೋಜನದಲ್ಲಿ ತನ್ನ ಮಹಿಮೆ ಪಟ್ಟ ಶರೀರದಿಂದಲೂ ರಕ್ತದಿಂದಲೂ ನಮ್ಮನ್ನು ಉಣ್ಣ ಮಾಡಿದ್ದಾನೆ. ಮತ್ತು ಈಗ “ನಮ್ಮ ನೀಚತನದ ಶರೀರವನ್ನು ತನ್ನ ಮಹಿಮೆಯ ಶರೀ

ರಕ್ಕೆ ಸಾರೂಪ್ಯವಾಗುವ ಹಾಗೆ" ಮಹಿಮೆಯಾಗಿ ಮಾರ್ಪಡಿಸುತ್ತಾನೆ (ಫಿಲಿ
ಪ್ಪಿ. ೩, ೨೧).

೨) ಉತ್ಥಾನವು ಸರ್ವೋತ್ಥಾನವಾಗಿರುತ್ತದೆ; ಅದು ಸತ್ತವರೆಲ್ಲರಿಗೆ ಬರುತ್ತ
ದೆ; ಆದರೆ ಎಲ್ಲರಿಗೆ ಅದು ಒಂದೇ ಅಲ್ಲ. ಒಬ್ಬೊಬ್ಬರಿಗೆ ರಕ್ಷಣ್ಯಕ್ಕಾಗಿರುವ ಜೀವದ
ಉತ್ಥಾನವಾಗಿರುತ್ತದೆ. ಮತ್ತೊಬ್ಬರಿಗೆ ನಾಶನಕ್ಕಾಗಿರುವ ನ್ಯಾಯತೀರ್ಪಿಕೆಯ ಉ
ತ್ಥಾನವಾಗಿರುತ್ತದೆ. ಸಮಾಧಿಗಳಲ್ಲಿರುವವರೆಲ್ಲರೂ ಅವನ ಶಬ್ದವನ್ನು ಕೇಳುವ
ಘಳಿಗೆ ಬರುತ್ತದೆ. ಆಗಲು ಒಳ್ಳೇಯವುಗಳನ್ನು ಮಾಡಿದವರು ಜೀವದ ಪುನರುತ್ಥಾ
ನಕ್ಕೂ ಕೆಟ್ಟವುಗಳನ್ನು ಮಾಡಿದವರು ಆಜ್ಞೆಯ ಪುನರುತ್ಥಾನಕ್ಕೂ ಹೊರಗೆ ಬರುವ
ರು (ಯೋಹಾ. ೫, ೨೮. ೨೯). ದೈವಹೀನರು ಸಹಾ ಉತ್ಥಾನವಾಗ ಬೇಕು;
ಯಾಕಂದರೆ ಅವರೂ ತೀರಿಸಲ್ಪಡ ಬೇಕು — ಆದರೆ ನಾಶನಕ್ಕೆ! ಅವರಿಗೆ ಉತ್ಥಾನವು
ಮಹಿಮೆ ಅಲ್ಲ, ಯಾಕಂದರೆ ಕ್ರಿಸ್ತನ ಅನ್ಯೋನ್ಯ ಏನೂ ಇಲ್ಲದ ದೈವಹೀನದ ಶರೀ
ರಗಳು ಕ್ರಿಸ್ತನ ಶರೀರದ ಸಾರೂಪ್ಯಕ್ಕೆ ಮಾರ್ಪಡ ಕೂಡದು. ಮಹಿಮೆ ಪಟ್ಟ ಶರೀ
ರವು ರಕ್ಷಿಸಲ್ಪಟ್ಟವರಿಗೆ ಆನಂದಕ್ಕೆ ಹ್ಯಾಗೆ ಅವಯವವಾಗಿರುತ್ತದೋ ಹಾಗೆಯೇ ಅ
ವರು ಅವರ ಸ್ಥಿತಿಗೆ ಯೋಗ್ಯವಾದಂಥಾದ್ದಾಗಿಯೂ ವ್ಯಥೆ ನಾಶನಗಳ ಅವಯವ
ವಾಗಿಯೂ ಇರುವಂಥಾ ಶರೀರವನ್ನು ಹೊಂದ ಬೇಕು. ಕ್ರಿಸ್ತನ ವಾಕ್ಯ "ಅವರ
ಹುಳವು ಸಾಯದೆ ಬೆಂಕಿಯು ಆರಿ ಹೋಗದೆ ಇರುವದು" ಅವರ ವಿಷಯವಾ
ಗಿ ಹೇಳಿ ಇರ ಬೇಕು (ಮಾರ್ಕ. ೯, ೪೪. ಸಮ ನೋಡು ಯೆಶಾಯ ೬೬, ೨೪).

೩) ಆದರೆ ಕಡೇ ದಿನದಲ್ಲಿ ಇನ್ನು ಜೀವಿಸುವವರ ಶರೀರಗಳು ಕೊಳೆಯ ಮು
ಖವಾಗಿ ಮಹಿಮೆಗೆ ಶೇರುವಂಥಾದ್ದಾಗಿರುವದಿಲ್ಲ "ರಕ್ತ ಮಾಂಸಗಳು ದೇವರ
ವಾಕ್ಯವನ್ನು ಸ್ವತಂತ್ರಿಸಿ ಕೊಳ್ಳಲಾರವು ಮತ್ತು ಲಯವು ನಿರ್ಲಯವನ್ನು ಸ್ವತಂತ್ರಿಸಿ
ಕೊಳ್ಳದು" (೧ ಕೊರಿ. ೧೫, ೫೦). ಆದ್ದರಿಂದ ಅವರ ಶರೀರಗಳು ಸಹಾ ಭೂಮಿ
ಯದಾಗಿಯೂ ಲಯವಾಗುವಂಥಾದ್ದಾಗಿಯೂ ಇರುವದನ್ನು ತೆಗದು ಹಾಕ ಬೇಕು.
ಪೌಲನು ಹೇಳುವದೇನಂದರೆ: (೧ ಕೊರಿ. ೧೫, ೫೧. ೫೨) "ಇಗೋ ಮರ್ಮವನ್ನು
ನಿಮಗೆ ಹೇಳುತ್ತೇನೆ, ಎಲ್ಲರೂ ನಿದ್ದೆ ಹೋಗೆವು; ಆದರೆ ಕ್ಷಣದಲ್ಲಿ ರೆಪ್ಪೆ ಬಡಿಯುವದ
ರಲ್ಲಿ ಕಡೇ ತುತೂರಿಯಲ್ಲಿ ಎಲ್ಲರೂ ಮಾರ್ಪಡುವೆವು; ಯಾಕಂದರೆ ತುತೂರಿಯು
ಧ್ವನಿಯಾಗುವದು. ಆಗಲು ಸತ್ತವರು ನಿರ್ಲಯವಾಗಿ ಎಬ್ಬಿಸಲ್ಪಡುವರು. ಮ
ತ್ತು ನಾವು ಮಾರ್ಪಡುವೆವು." ಆದರೆ ಮರಣವು ಪಾಪದ ಸಂಬಳವಾಗಿದ್ದು ಪಾ
ಪದಿಂದ ಎಲ್ಲರ ಮೇಲೆ ವ್ಯಾಪಿಸಿ ಇರಲಾಗಿ (ರೋಮಾ. ೫, ೧೨) ಹಾಗೆಯೇ ಈ
ಮಾರ್ಪಡೋಣವು ಸಹಾ ಹಳೇ ಮನುಷ್ಯನು ಮರಣದಲ್ಲಿ ಮಾತ್ರವೇ ಅನುಭವಿಸು

ವಂಥಾ ಜಯ ಕಷ್ಟಗಳಿಲ್ಲದೆ ಇರಲಿಕ್ಕಿಲ್ಲ. ಮರಣದ ಜಯಗಳೂ ಕಾಳೆಯ ಕಷ್ಟಗಳೂ ಮಾರ್ಪಡಾಣದರ ಮಹಿಮೆಯ ಆಶ್ಚರ್ಯವೂ ಎಲ್ಲಾ ಮಾರ್ಪಡಾಣದರ ಒಂದೇ ಸಂಗತಿಯಲ್ಲಿ ಕೂಡಿ ಒಟ್ಟಿಗೆ ಇರುತ್ತದೆ.

೪) ಕಡೆಯಲ್ಲಿ ವರ್ಷಶತಗಳಲ್ಲಿ "ದೇವರ ಮಕ್ಕಳು ಪ್ರತ್ಯಕ್ಷವಾಗುವದನ್ನು ಎದುರು ನೋಡುತ್ತಾ" ಇದ್ದ "ಸೃಷ್ಟಿಯ ಅಭಿಲಾಷೆಯು" ಅತ್ಯಂತವಾಗಿ ಅಪೇಕ್ಷಿಸಿ ಕಾದು ಕೊಂಡಿದ್ದದ್ದನ್ನು ಹೊಂದುವದು ಯಾಕಂದರೆ ಸೃಷ್ಟಿಯು ತಾನೇ ಕ್ಷಯದ ದಾಸತ್ವದೊಳಗಿಂದ ದೇವರ ಮಕ್ಕಳ ಮಹಿಮೆಯಾದ ಬಿಡುಗಡೆಗೋಸ್ಕರ ಬಿಡುಗಡೆ ಮಾಡಲ್ಪಡುವದು (ರೋಮಾ. ೮, ೧೯). ಪ್ರಕೃತಿಯು ವಿಕಸಿತವಾಗುವದಕ್ಕೆ ಯೋಗ್ಯವಾಗಿಯೂ ವಿಕಸಿತವಾಗುವ ಅವಶ್ಯವುಳ್ಳದ್ದಾಗಿಯೂ ನಿರ್ಮಿಸಲ್ಪಟ್ಟಿತು. ಮನುಷ್ಯನು ಅದನ್ನು ಆಳಿ ಪೂರ್ಣ ವಿಕಸಿತ ಸ್ಥಿತಿಗೆ ಅದರ ಸಂಪೂರ್ಣತೆಗೆ ತಕ್ಕೊಂಡು ಹೋಗ ಬೇಕಾಗಿತ್ತು (ಸಮ ನೋಡು § ೨). ಅದನ್ನು ಮಾಡದೆ ಅವನು (ಆದಾಮನು) ಪ್ರಕೃತಿಯನ್ನು ಸಹಾ ತನ್ನ ಸಂಗಡ ನಾಶನಕ್ಕೆ ಎಳಕೊಂಡು ಅದರಿಂದ ತನ್ನ ಮೇಲೆ ಬರ ಬೇಕಾದ ಶಾಪವನ್ನು ಅದರ ಮೇಲೆ ತಂದನು. ಅವನು ಮಾಡದೆ ಬಿಟ್ಟು ನಾಶ ಮಾಡಿದ್ದನ್ನು ಈಗ ೨ನೇ ಆದಾಮನು ನವೀಕರಿಸಿ ತೀರಿಸುತ್ತಾನೆ. (ಈತನು ಭೂಸಂಚಾರದ ಸಮಯದಲ್ಲಿಯೇ ದಾಸರೂಪದಲ್ಲಿದ್ದರೂ ಬಹಳ ಸರ್ತಿ ಅದರ ಘಾಯಗಳನ್ನು ವಾಶಿ ಮಾಡಿ, ಅದರ ರೋಗಗಳನ್ನು ಪರಿಹಾರ ಮಾಡಿ ಇದ್ದನು (§ ೧೩೨ ೧೩೩). ಹ್ಯಾಗಂದರೆ ಅವನು ಪರಲೋಕವನ್ನೂ ಭೂಲೋಕವನ್ನೂ ಮಹಿಮೆ ಪಡಿಸುತ್ತಾನೆ. ಇದು ಆರಂಭದಲ್ಲಿ ಆಗ ತಕ್ಕದ್ದಾಗಿರುವ ಹಾಗೆ ಈಗ ಸಹಾ ಮೆಲ್ಲಕ್ಕೆ ಸಾಧಾರಣವಾಗಿ ಬೆಳಿಯಲಿಕ್ಕೆ ಕೂಡದಾಯಿತು (ಯಾಕಂದರೆ ಇದು ಪಾಪದಿಂದ ಕೆಡಿಸಲ್ಪಟ್ಟಿತ್ತು). ಇದು ನುಂಗಿ ಬಿಡುವಂಥಾ ಕರಗಿಸಿ ಸ್ಫುಟ ಮಾಡುವಂಥಾ ಬೆಂಕಿಯ ಬಲಾತ್ಕಾರದಿಂದ ಒಡದು ತೀರಿಸುವಂಥಾ ಹೊಸ ಪ್ರವರ್ತನೆಯಿಂದಲೇ ಆಗ ಬೇಕಾಯಿತು. ಈ ಲೋಕ ಸುಡೋಣದರಿಂದ ಕೆಟ್ಟವೆಲ್ಲಾ ಹೋಗಿ "ಆತನ ವಾಗ್ದತ್ತದ ಪ್ರಕಾರ ನೀತಿವಾಸವಾಗಿರುವಂಥಾ ಹೊಸ ಪರಲೋಕವೂ ಹೊಸ ಭೂಲೋಕವೂ ಉಂಟಾಗುವದು" (೨ ಪೇತ್ರ. ೩, ೧೦—೧೩. ಸಮ ನೋಡು ಯೆಶಾಯ ೬೫, ೧೭. ಪ್ರಕಟ. ೨೧, ೧).



## § 194. ಕಡೇ ನ್ಯಾಯತೀರ್ವಿಕೆ

೧) ದೇವರ ರಾಜ್ಯವು ಪ್ರವರ್ತಿಸುವ ಕಾಲದಲ್ಲಿ ಖಂಡಿತವಾದ ವಿಶ್ವಾಸಕ್ಕೂ ಖಂಡಿತವಾದ ಅವಿಶ್ವಾಸಕ್ಕೂ ಮಧ್ಯದಲ್ಲಿ ನಾನಾ ತರಗಳು ಇರುತ್ತವೆ. ಯಾವವಂದರೆ: ಉಗುರುಬೆಚ್ಚಗೆ ಇರುವದು, ನಿಶ್ಚಿಂತೆಯಾಗಿರುವದು, ಎಲ್ಲಾದರಲ್ಲಿ ಅರೆವಾಶಿಯಾಗಿರುವದು, ನಿಷ್ಖಂಡಿತತ್ವ, ಅಲ್ಲಾಡುತ್ತಿರುವದು, ಸಂಶಯ ಇತ್ಯಾದಿಗಳು. ಆದರೆ ಒಂದೊಂದು ನಿಷ್ಖಂಡಿತತ್ವವನ್ನು ಪೂರ್ಣವಾಗಿಯೂ ಪ್ರಕಟವಾಗಿಯೂ ಇತ್ತಕಡೆಯ ಇಲ್ಲವೆ ಅತ್ತಕಡೆಯ ನಿಶ್ಚಯತ್ವಕ್ಕೆ ಒಬ್ಬೊಬ್ಬನು ಚಿತ್ತೈಸುವ ಪ್ರಕಾರ ಬೆಳಿಯ ಮಾಡುವದು ಇಹದ ಪ್ರವರ್ತನೆಯ ಉದ್ಯೋಗವಾಗಿರುತ್ತದೆ. ಮತ್ತು ಇದು ಆಗುವ ಮಟ್ಟಿಗೂ ಕಡೇ ನ್ಯಾಯತೀರ್ವಿಕೆ ಬರ ಕೂಡದು. ಆದ್ದರಿಂದ ಕಡೇ ನ್ಯಾಯತೀರ್ವಿಕೆಯು ವಿಚಾರಣೆಯಾಗಲಿ ಪರೀಕ್ಷೆಯಾಗಲಿ ತೂಗಿಸಿ ನೋಡುವದಾಗಲಿ ಆಗಿರುವದಿಲ್ಲಾ. ಅದು ನಿಶ್ಚಯಿಸುವಿಕೆ ಸಹಾ ಅಲ್ಲಾ, ಒಬ್ಬೊಬ್ಬನು ತನಗೆ ಕೊಡಲ್ಪಟ್ಟಂಥಾ ರಕ್ಷಣೆಯನ್ನು ತಕ್ಕೊಂಡು ಇಲ್ಲವೆ ಬಿಸಾಟು, ತನ್ನ ವಿಷಯವಾಗಿ ತಾನೇ ನಿಶ್ಚಯಿಸಿದಂಥಾ ನ್ಯಾಯತೀರ್ವಿಕೆಯು ಇಲ್ಲಿ ಪ್ರಕಟವಾಗುತ್ತದೆ. ಲೋಕಕ್ಕೆ ಆಜ್ಞೆನಿರ್ಣಯಿಸುವದಕ್ಕಲ್ಲಾ ಲೋಕವು ಅವನಿಂದ ರಕ್ಷಿಸಲ್ಪಡುವ ಹಾಗೆ ದೇವರು ತನ್ನ ಮಗನನ್ನು ಲೋಕಕ್ಕೆ ಕಳುಹಿಸಿದನು. ಅವನಲ್ಲಿ ವಿಶ್ವಾಸಿಸುವವರಿಗೆ ಆಜ್ಞೆನಿರ್ಣಯವಿಲ್ಲಾ. ಆದರೆ ವಿಶ್ವಾಸಿಸದವನಿಗೆ ದೇವರ ಒಬ್ಬನಾಗಿ ಹುಟ್ಟಿದ ಮಗನ ಹೆಸರಿನಲ್ಲಿ ವಿಶ್ವಾಸಿಸದ ಕಾರಣ ಈಗಲೇ ಆಜ್ಞೆನಿರ್ಣಯವಾಯಿತು. ಆಜ್ಞೆನಿರ್ಣಯ ಇದೇ: ಬೆಳಕು ಲೋಕಕ್ಕೆ ಬಂದಿದ್ದರೂ ತಮ್ಮ ಕ್ರಿಯೆಗಳು ಕೆಟ್ಟವಾಗಿರುವ ಕಾರಣ ಮನುಷ್ಯರು ಬೆಳಕಿಗಿಂತ ಕತ್ತಲೆಯನ್ನು ಹೆಚ್ಚಾಗಿ ಪ್ರೀತಿ ಮಾಡಿದ್ದಾರೆ (ಯೋಹಾ.೩, ೧೭—೧೯).

೨) ಆದರೆ ಇದು ಸಹ ಸತ್ಯ. ಏನಂದರೆ: “ಎಲ್ಲರು ತಂದೆಯನ್ನು ಸನ್ಮಾನಿಸುವ ಪ್ರಕಾರವೇ ಮಗನನ್ನು ಸನ್ಮಾನಿಸುವ ಹಾಗೆ ನ್ಯಾಯತೀರ್ವಿಕೆಯನ್ನೆಲ್ಲಾ ಮಗನಿಗೆ ಕೊಟ್ಟಿದ್ದಾನೆ” (ಯೋಹಾ. ೫, ೨೨). ಆದರೆ ಅವನು ಒಬ್ಬೊಬ್ಬನನ್ನು ತನ್ನ ತನ್ನ ಆಯೋಣದರ ಪ್ರಕಾರ ಅಲ್ಲಲ್ಲಿ ಕಳುಹಿಸಿ ಇಷ್ಟು ವರೆಗೆ ಅಡಗಿರುವಂಥಾದ್ದನ್ನು ಈಗ ಉಚ್ಚರಿಸಿ ಬೆಳಕಿಗೆ ತರುವಂಥಾದರಲ್ಲಿಯೇ ಅವನ ನ್ಯಾಯತೀರ್ವಿಕೆಯುಂಟು. ಈ ತೀರ್ವಿಕೆಯು ಮೂಲಭಾಷೆಯ ಶಬ್ದದ ಪ್ರಕಾರ ಬೇರೆ ಬೇರೆ ಮಾಡುವಂಥಾದ್ದೇ (ಕ್ರೀಸಿಸ್ ಎಂಬ ಗ್ರೀಕ ಶಬ್ದ) ಅಂದರೆ ದೇವರ ಮಗನ ಮೇಲಿರುವ ವಿಶ್ವಾಸದಲ್ಲಿ ಪಾಪಗಳ ಪರಿಹಾರವನ್ನೂ ಶುದ್ಧೀಕರಣದ ಬಲಗಳನ್ನೂ

ಹೊಂದಿದವರಾಗಿರುವದರಿಂದ ಒಳ್ಳೇ ಕ್ರಿಯೆಗಳಲ್ಲಿ ಪ್ರೀತಿಯ ಫಲಗಳಲ್ಲಿ ಐಶ್ವರ್ಯ ವಂತರಾಗಿರುವ ನೀತಿವಂತರನ್ನೂ ವಿಶ್ವಾಸಿಸಲಾಗಲ್ಲದೆ ಇರುವದರಿಂದ ಪಾಪವಲ್ಲಿ ಯೂ ನಾಶನದಲ್ಲಿಯೂ ಇದ್ದುಕೊಂಡು ಎಲ್ಲಾ ಸತ್ಯವಾದ ಒಳ್ಳೇ ಕ್ರಿಯೆಗಳೂ ಪ್ರೀತಿಯ ಫಲಗಳೂ ಇಲ್ಲದೆ ಇರುವಂಥ ಅನೀತಿವಂತರನ್ನೂ ಬೇರೆ ಬೇರೆ ಮಾಡು ವದೇ. ಕ್ರಿಸ್ತನ ಸೇವಕರೂ ದೂತರೂ ಈ ನ್ಯಾಯತೀರ್ವಿಕೆಯಲ್ಲಿ ಯಾರಂದರೆ ದೇವ ದೂತರೇ! (ಮತ್ಥಾ. ೧೩, ೪೯. ೫೦.) ಅವನ ಸಹಾಯಕರೂ ಸಹವಿಚಾರಕ ರೂ (ಮೊದಲನೇ ಉತ್ಥಾನದವರಾ ಏನಾ? ಪ್ರಕಟ. ೨೦, ೪.) ಯಾರಂದರೆ: ಪರಿಶುದ್ಧರೇ. ಸಮ ನೋಡು ಮತ್ಥಾ. ೧೯, ೨೮. ೧ಕೊರಿ. ೬, ೨. ೩.

ಪರಿಶಿಷ್ಟ. ಕ್ರಿಸ್ತನು ತಾನೇ ಈ ನ್ಯಾಯತೀರ್ವಿಕೆಯನ್ನು ಸಾಮ್ಯರೂಪವಾಗಿ ವರ್ಣಿಸುತ್ತಾನೆ (ಮತ್ಥಾ. ೨೫, ೩೧). "ಇದಲ್ಲದೆ ಮನುಷ್ಯನ ಮಗನು ತನ್ನ ಮಹಿಮೆ ಯಲ್ಲಿ ತನ್ನ ಪರಿಶುದ್ಧ ದೂತರೆಲ್ಲರ ಸಂಗಡ ಬರುವಾಗ ತನ್ನ ಮಹಿಮೆಯ ಸಿಂಹಾ ಸನದ ಮೇಲೆ ಕೂಡ್ರುವನು. ಮತ್ತು ಅವನ ಮುಂದೆ ಜನಾಂಗಗಳೆಲ್ಲಾ ಕೂಡಲ್ಪಡು ವವು. ಮತ್ತು ಕುರುಬನು ಕುರಿಗಳನ್ನೂ ಮೇಕೆಗಳನ್ನೂ ಬೇರೆ ಬೇರೆ ಮಾಡುವ ಪ್ರಕಾರ ಅವರನ್ನು ಬೇರೆ ಬೇರೆ ಮಾಡಿ ಕುರಿಗಳನ್ನು ತನ್ನ ಬಲಪಾರ್ಶ್ವದಲ್ಲಿಯೂ ಮೇಕೆಗಳನ್ನು ಎಡಪಾರ್ಶ್ವದಲ್ಲಿಯೂ ನಿಲ್ಲಿಸುವನು. ಆಗಲು ಅರಸನು ತನ್ನ ಬಲ ಪಾರ್ಶ್ವದಲ್ಲಿರುವವರಿಗೆ ನನ್ನ ತಂದೆಯಿಂದ ಆಶೀರ್ವದಿಸಲ್ಪಟ್ಟವರೇ ಬನ್ನಿ, ಜಗದು ತ್ಪತ್ತಿಯಿಂದ ನಿಮಗೆ ಸಿದ್ಧ ಮಾಡಲ್ಪಟ್ಟ ರಾಜ್ಯವನ್ನು ಬಾಧ್ಯವಾಗಿ ಹೊಂದಿರೆಂದು ಹೇಳುವನು. ಆಗ ಎಡಪಾರ್ಶ್ವದಲ್ಲಿರುವವರಿಗೆ ಶಪಿಸಲ್ಪಟ್ಟವರೇ ನನ್ನನ್ನು ಬಿಟ್ಟು ಪಿಶಾಚನಿಗೂ ಅವನ ದೂತರಿಗೂ ಸಿದ್ಧ ಮಾಡಲ್ಪಟ್ಟ ನಿತ್ಯವಾದ ಬೆಂಕಿಯಲ್ಲಿ ಹೋ ಗಿರಿ ಎಂದು ಹೇಳುವನು. ಆಗಲು ಇವರು ನಿತ್ಯದಂಡನೆಗೂ ನೀತಿವಂತರು ನಿತ್ಯ ಜೀವಕ್ಕೂ ಹೋಗುವರು". ಆದರೆ ಈ ನ್ಯಾಯತೀರ್ವಿಕೆಯು ಎಲ್ಲಾ ಮನುಷ್ಯರ ಮೇ ಲೆ ಮಾತ್ರವಲ್ಲಾ, ಎಲ್ಲಾ (ಬಿದ್ದ) ದೂತರ ಮೇಲೆ ಸಹಾ ಬರುವದು (೧ ಕೊರಿ. ೬, ೩. ಯೂದನ ಪತ್ರಿಕೆ ೬ ವ. ಪ್ರಕಟ. ೨೦, ೧೦).



## § 195. ನಿತ್ಯಜೀವವೂ ನಿತ್ಯಮರಣವು

೧) ಲೋಕನ್ಯಾಯತೀರ್ವಿಕೆಯು ಈ ಯುಗದ ಅಂತ್ಯವೂ ಮುಂದಿನ ಯುಗದ ಆರಂಭವೂ ಆಗಿರುತ್ತದೆ. ಮುಂದಿನ ಯುಗದ ಗುಣವೇನಂದರೆ: ಕಾಲತ್ವವು ನಿತ್ಯತ್ವದಲ್ಲಿ ತಕ್ಕೊಳ್ಳಲ್ಪಟ್ಟದ್ದಾಗಿ ಅದರೊಡನೆ ಒಂದೇ ಆಗುವದೇ. ನಿರ್ಮಾಣವು ನಿರ್ಮಾಣ್ಯವಾಗಿರುವಂಥಾದ್ದು ಹ್ಯಾಗೆ ಹೋಗುವದಿಲ್ಲವೋ ಹಾಗೆಯೇ ಕಾಲವು ಕಾಲವಾಗಿರುವಂಥಾದ್ದು ಹೋಗುವದಿಲ್ಲ. ಹ್ಯಾಗಂದರೆ ನಿರ್ಮಾಣ್ಯವೂ ಕಾಲವೂ ಒಟ್ಟಿಗೆ ಇರ ಬೇಕು, ಎಂದೂ ಬೇರೆ ಬೇರೆ ಆಗ ಕೂಡದು. ಆದರೆ ಕ್ರಿಸ್ತನ ಮನುಷ್ಯತ್ವವು ತಂದೆಯ ಬಲಗಡೆ ಏರಿಸಲ್ಪಟ್ಟಂದಿನಿಂದ ಅದರ ಸಂಗಡ ಕೂಡಿರುವ ಮಗನ ದೈವತ್ವದ ಸಮಸ್ತ ಗುಣಗಳನ್ನೂ ಹ್ಯಾಗೆ ಹೊಂದಿಯದೆಯೋ (§ ೧೫೪, ೨ಪ) ಮತ್ತು ಅದರ ಪರಿಮುಖವಾಗಿ ನಾವು ಸಹಾ ದಿವ್ಯ ಸ್ವಭಾವವನ್ನು ಹ್ಯಾಗೆ ಪಡಕೊಳ್ಳಬಹುದಾಯಿತೋ (೨ ನೇ ಪೇತ್ರ ೧, ೪) ಹಾಗೆಯೇ ಕಾಲವು ನಿತ್ಯತ್ವದ ಸಂಗಡ ಕೂಡಿ ಕೊಳ್ಳಲಾಗಿ ನಿತ್ಯತ್ವದ ಸಮಸ್ತ ಗುಣಗಳನ್ನು ಹೊಂದುತ್ತದೆ. ಹೀಗಾದರೆ ಏನಾದರೂ ಕಥೆಯಾಗಿ ವಿಕಸಿತವಾಗುವಂಥಾದ್ದೂ ಏನಾದರೂ ಬೇರೆಯಾಗುವಂಥಾದ್ದೂ ಆಗ ಕೂಡದು. ನಿರ್ಮಾಣ್ಯವು ಸಂಪೂರ್ಣವಾದಂಥಾ ಆರಂಭದಿಂದ ಅದಕ್ಕೆ ನಿಶ್ಚಯಿಸಲ್ಪಟ್ಟಂಥಾ ದೇವರ ಅನ್ಯೋನ್ಯದಲ್ಲಿ ಶೇರಿತು. (ಇದರ ಮೇಲೆ ಇದಕ್ಕಿಂತ ಹೆಚ್ಚಾಗಿ ವಿಕಸಿತವಾಗುವಂಥಾದ್ದು ಸಾಧ್ಯವಾಗಿರುವದಿಲ್ಲಾ. ಅದನ್ನು ಆಲೋಚಿಸುವದಕ್ಕೆ ಸಹಾ ಕೂಡದು). ಇದಲ್ಲದೆ — ಅದು ಕೃಪೆಯ ಎಳಿಯೋಣಕ್ಕೆ ಯಾವಾಗಲೂ ಪ್ರತಿಯಾಗಿ ನಿಂತು ಕಠಿಣ ಮಾಡಿ ಕೊಳ್ಳುವದಾದರೆ — ದೇವರಿಂದ ಪೂರ್ಣವಾಗಿ ಬೇರೆಯಾಗಿರುವದನ್ನು ಹೊಂದಿ ಇರುವದು (ಇದಕ್ಕೆ ಪುನರೈಕ್ಯತ್ವವು ಅಸಾಧ್ಯವಾಗಿರುತ್ತದೆ).

೨) ಸಂಪೂರ್ಣವಾದ ನೀತಿವಂತರು ಬೇರೆಯಾಗುವಂಥಾದ್ದು ಅಸಾಧ್ಯವಾಗಿರುವದೂ, ಇನ್ನು ಹೆಚ್ಚು ವಿಕಸಿತವಾಗುವದು ಅವರಿಂದ ಆಗದೆ ಇರುವಂಥಾದ್ದೂ, ಈ ಆನಂದ ಪಟ್ಟವರಿಗೆ ಯತ್ನಹೀನತ್ವವೂ ಏಕಪ್ರಕಾರತ್ವವೂ ಬೇಸರವೂ ಆಗಿರುವದಿಲ್ಲ, ಇದಕ್ಕೆ ಪೂರ್ಣವಾಗಿ ಪ್ರತೀಕಾರವಾದದ್ದೇ ಸರಿ. ಹ್ಯಾಗಂದರೆ ಅವರ ಪ್ರಯತ್ನಕ್ಕೆ ಈಗಲೇ ಯೋಗ್ಯವಾದ ಒಡವೆಯು ಶಿಕ್ಕಿತು ಯಾವದಂದರೆ: ಒಂದು ಕಡೆಯಲ್ಲಿ ದಿವ್ಯಭಾವದ ಅನಂತ ಪೂರ್ಣತ್ವವು ಇದರ ಮಹಿಮೆಯನ್ನೂ ಮಹತ್ವವನ್ನೂ ನೋಡಿ, ತಿಳುಕೊಂಡು ಸ್ತುತಿಸ ಬೇಕಾದರೆ ನಿತ್ಯತ್ವವು ಪೂರ್ಣವಾಗಿ ಬೇಕು. ಮ

ತ್ತೊಂದು ಕಡೆಯಲ್ಲಿ ಮಹಿಮೆ ಪಟ್ಟಂಥಾ ಸಂಪೂರ್ಣವಾದಂಥಾ ಪ್ರಕೃತಿಯು ಇದಕ್ಕೆ ಮನುಷ್ಯನು ಈಗಲೇ ಸಂಪೂರ್ಣವಾಗಿ ಅರಸನೂ ಮಧ್ಯಸ್ಥನೂ ಆಗುತ್ತಾನೆ. ನಿತ್ಯಜೀವದ ಮಹಿಮೆಯನ್ನೂ ಆನಂದತ್ವವನ್ನೂ ಯಾವ ಮನುಷ್ಯಭಾಷೆಯಾದರೂ ಯೋಗ್ಯವಾಗಿ ವರ್ಣಿಸಲಿಕ್ಕೂ ಯಾವ ಮನುಷ್ಯಕಲ್ಪನೆಯಾದರೂ ಆಲೋಚಿಸಲಿಕ್ಕೂ ಶಕ್ತವಾಗಿರುವದಿಲ್ಲಾ. ಅನಂತ ಮಹಿಮೆಗೆ ಮಾರ್ಪಟ್ಟ ಭೂಮಿಯು ಆನಂದದಲ್ಲಿರುವವರ ನಿವಾಸವಾಗಿರುತ್ತದೆ (ಪ್ರಕಟ. ೨೦. ೨೧ ಸಂ). “ಹೊಸ ಯೆರೂಸಲೇಮು ಮನುಷ್ಯರ ಸಂಗಡ ದೇವರ ಗುಡಾರವೆಂಬದು ತನ್ನ ಗಂಡನಿಗೋಸ್ಕರ ಅಲಂಕರಿಸಲ್ಪಟ್ಟ ಮದಲಗಿತ್ತಿಯಂತೆ ಸಿದ್ಧವಾಗಿ ದೇವರ ಕಡೆಯಿಂದ ಪರಲೋಕದೊಳಗಿಂದ ಇಳಿದು ಬಂತು” (ಪ್ರಕಟ. ೨೧). ಅಲ್ಲಿ ಕ್ರಿಸ್ತನು ಸಿದ್ಧ ಮಾಡಲಿಕ್ಕಾಗಿ ಹೋದಂಥಾ ತಂದೆಯ ಮನೆಯಲ್ಲಿ ಅನೇಕ ನಿವಾಸಗಳು ಉಂಟು (ಯೋಹಾ. ೧೪, ೨). ಅಲ್ಲಿ ನಿತ್ಯವಾಗಿ ದೇವರೂ ಮನುಷ್ಯನೂ ಆಗಿರುವ ಕ್ರಿಸ್ತನು ತನ್ನ ಸಹೋದರರೆಂದು ಕರಿಯುವದಕ್ಕೆ ನಾಚಿಕೆ ಪಡದಂಥಾ (ಇಬ್ರಿ. ೨, ೧೧) ದೇವರಿಗೆ ಬಾಧ್ಯರೂ ತನ್ನ ಮಹಿಮೆಯ ಬಾಧ್ಯರೂ ಆಗಿರುವಂಥಾ (ರೋಮಾ. ೮, ೧೭. ಯೋಹಾ. ೧೭) ತನ್ನವರ ಮಧ್ಯದಲ್ಲಿ ಅನಂತರವೇನೂ ಇಲ್ಲದ ತನ್ನ ಪ್ರತ್ಯಕ್ಷತೆಯ ಸಿಂಹಾಸನವನ್ನು ಮಾಡಿ ಕೊಂಡಿದ್ದಾನೆ. ವಿಶ್ವಾಸವು ನೋಡೋಣಕ್ಕೆ ಮಾರ್ಪಟ್ಟಿತು (೧ ಕೊರಿ. ೧೩, ೧೨. ೨ ಕೊರಿ. ೫, ೭). ಈ ಜೀವನದಲ್ಲಿರುವಾಗ್ಯೆ ತಿಳಿಯುವದರಲ್ಲಿಯೂ ಇಚ್ಛೈಸುವದರಲ್ಲಿಯೂ ನೆನಸುವದರಲ್ಲಿಯೂ ಭಾಗವಾಗಿರುವಂಥಾದ್ದೆಲ್ಲಾ ಹೋಯಿತು. ಆದರೆ ಎಂದೂ ಬಿದ್ದು ಹೋಗದಂಥಾ ಪ್ರೀತಿಯು (೧ನೇ ಕೊರಿ. ೧೩, ೮. ೧೦) ಎಲ್ಲಾ ಆವರಿಸಿ ಕೊಳ್ಳುವ ಸಂಪೂರ್ಣತ್ವಕ್ಕೆ ಏರಿಸಲ್ಪಟ್ಟಿತು. “ಮತ್ತು ಪಟ್ಟಣಕ್ಕೆ ಅದರಲ್ಲಿ ಪ್ರಕಾಶಿಸುವದಕ್ಕೋಸ್ಕರ ಸೂರ್ಯನಾದರೂ ಚಂದ್ರನಾದರೂ ಅಗತ್ಯವಿಲ್ಲಾ, ಯಾಕಂದರೆ ದೇವರ ಮಹಿಮೆಯು ಅದಕ್ಕೆ ಬೆಳಕು ಮಾಡಿತು. ಕುರಿಮರಿಯೇ ಅದರ ದೀಪವು (ಪ್ರಕಟ. ೨೧, ೨೩). ಮಂದಿರವು ಸಹಾ ಇಲ್ಲಾ” “ಯಾಕಂದರೆ ಸರ್ವಶಕ್ತನಾದ ದೇವರಾಗಿರುವ ಕರ್ತನೂ ಕುರಿಮರಿಯೂ ಅದರ ಮಂದಿರವಾಗಿದ್ದಾನೆ” (ಪ್ರಕಟ. ೨೧, ೨೨) “ದೇವರ ಮತ್ತು ಕುರಿಮರಿಯ ಸಿಂಹಾಸನದೊಳಗಿಂದ ಪವಿತ್ರವಾದಂಥಾ ಸ್ಫಟಿಕದ ಹಾಗೆ ಪ್ರಕಾಶವಾದಂಥಾ ಜೀವದ ನೀರಿನ ನದಿಯು ಹೊರಡುತ್ತದೆ. ಅದರ ಬೀದಿಯ ಮಧ್ಯದಲ್ಲಿ ಜೀವದ ಮರವು ಉಂಟು” (ಪ್ರಕಟ. ೨೨, ೧. ೨. ಸಂ. ೨, ೭. ಸಂ. ೨೨, ೧೯).

ಪರಿಶಿಷ್ಟ. ಹೊಸ ಯೆರೂಸಲೇಮವು ಹಳೇ ಒಡಂಬಡಿಕೆಯ ಗುಡಾರಕ್ಕೆ ಸ್ಪಷ್ಟವಾಗಿ ಸಾಮ್ಯ ಮಾಡಲ್ಪಟ್ಟು, (§ ೩೬) ದೇವರು ಮನುಷ್ಯರ ಸಂಗಡ ನಿವಾಸ ಮಾಡುವಂಥಾ ಮನುಷ್ಯರ ಸಂಗಡ ದೇವರ ಮಂದಿರವೆಂದು ಹೇಳಲ್ಪಡುತ್ತದೆ. ಅರಣ್ಯಪ್ರಯಾಣಕಾಲದಲ್ಲಿ ಚರವಸ್ತುವಾಗಿರುವಂಥಾ ಹೊರಮಿಕ್ಕೆ ಆಗುವಂಥಾ ಗುಡಾರವಾಗಿಯೂ, ಯೆರೂಸಲೇಮದಲ್ಲಿ ಸ್ಥಿರವಸ್ತು ಆಗಿರುವಂಥಾ ದೊಡ್ಡ ಗೋಡೆಗಳುಳ್ಳಂಥಾ ದೇವದಾರಿನ ಮಂದಿರವಾಗಿಯೂ, ಕಂಡು ಬರುವಂಥಾದ್ಯಾವದೋ ಅದು ಹೊಸ ಒಡಂಬಡಿಕೆಯ ದರ್ಶಿಯ ದರ್ಶನದಲ್ಲಿ ಅತ್ಯಂತವಾದ ಸಂಪೂರ್ಣವುಳ್ಳ ಸ್ಥಿತಿಯಾಗಿ ಮಹಾ ಪಟ್ಣವಾಗಿ ಕಾಣಿಸಿ ಕೊಳ್ಳುತ್ತದೆ. ಇದನ್ನು ವಿವರಿಸಲಿಕ್ಕೆ ಪ್ರಯತ್ನ ಮಾಡಿದವರ ಕಲ್ಪನೆಯು ಇಂದಿನ ವರೆಗೂ ವ್ಯರ್ಥವಾಯಿತು. ಆ ಮುಂಗುರ್ತೂ ಈ ದರ್ಶನವೂ ಒಂದೇ ಆಲೋಚನೆಯನ್ನು ತಿಳಿಸುತ್ತದೆ. ಬೇರೆ ಬೇರೆ ಕಾಲದ ಪ್ರಕಾರ ಆಯಾ ಸ್ಥಿತಿಗೆ ಸರಿಯಾಗಿ ಎಂಬದು ಸರಿ. ಗುಡಾರದಲ್ಲಿಯೂ ಯೆರೂಸಲೇಮದ ಮಂದಿರದಲ್ಲಿಯೂ ದೇವರು ತನ್ನ ಜನಾಂಗದ ಮಧ್ಯದಲ್ಲಿ ನಿವಾಸ ಮಾಡಿದಂಥಾದ್ದು ಇನ್ನು ಪೂರ್ಣವಾಗಿ ಇರಲಿಲ್ಲವೆಂದು ಕಂಡು ಬರುತ್ತದೆ. ಯಾಕಂದರೆ ದೇವರ ನಿವಾಸವು ಜನಾಂಗದ ನಿವಾಸಕ್ಕೆ ಬೇರೆಯಾಗಿತ್ತು ಮಾತ್ರವಲ್ಲಾ, ಇಬ್ಬರೂ ಮಾನುಷ್ಯಮಧ್ಯಸ್ಥರು ಅವಶ್ಯವಾಗಿರಲಾಗಿ ಒಬ್ಬರಿಗೊಬ್ಬರು ದೂರವಿರ ಬೇಕಾಯಿತು. ಕ್ರೈಸ್ತತನದಲ್ಲಿ ಯಾಜಕರಿಗೂ ಜನರಿಗೂ ಮಧ್ಯದಲ್ಲಿದ್ದ ಗೋಡೆಯು ಜೈಸಲ್ಪಟ್ಟಿತು (ಅಂಗಳವು ಶುದ್ಧಸ್ಥಳಕ್ಕೆ ಕೂಡಿತ್ತೆಂದು ಹೇಳ ಬಹುದು). ಎಲ್ಲರೂ ಯಾಜಕರಾದರೂ ಮತ್ತು ಎಲ್ಲಾ ಕಾಲ್ಲದಲ್ಲಿಯೂ ಕೃಪಾಸನದ ಹತ್ತರ ಹೋಗ ಬಹುದು. ಆದರೆ ಶುದ್ಧಸ್ಥಳದಿಂದಲೂ ಅತಿ ಶುದ್ಧಸ್ಥಳದಿಂದಲೂ ಸೂಚಿಸಲ್ಪಟ್ಟ ಹೆಚ್ಚು ಕಡಿಮೆಯು ಇನ್ನೂ ಉಂಟು; ಹ್ಯಾಗಂದರೆ ನಾವು ನೋಡೋಣದರಲ್ಲಿ ಅಲ್ಲ, ಇನ್ನೂ ವಿಶ್ವಾಸದಲ್ಲಿ ಬದುಕುತ್ತೇವೆ, ಆದರೆ ದೇವರ ರಾಜ್ಯದ ಸಂಪೂರ್ಣ ಸ್ಥಿತಿಯಲ್ಲಿ ಈ ಹೆಚ್ಚು ಕಡಿಮೆ ಸಹಾ ಹೋಗುವದು. ಇಲ್ಲಿ ಅತಿ ಶುದ್ಧಸ್ಥಳವು ಶುದ್ಧಸ್ಥಳವಾಗಿಯೂ ಅಂಗಳವಾಗಿಯೂ ಇರುವ ಎರಡು ಮುಮ್ಮೆಟ್ಟುಗಳನ್ನೂ ಎಲ್ಲಾ ಯೆರೂಸಲೇಮವನ್ನೂ ಸಹಾ ತನ್ನೊಳಗೆ ತಕ್ಕೊಂಡು ತುಂಬಿಸಿತು. ಆದರೆ ದರ್ಶಿಯ ದರ್ಶನವು ಇನ್ನೂ ಹಿಂದೆ ಹೋಗುತ್ತದೆ. ಹ್ಯಾಗಂದರೆ ಪರಲೋಕದ ಯೆರೂಸಲೇಮದಲ್ಲಿ ಗುಡಾರದ ಆಲೋಚನೆ ಮಾತ್ರವಲ್ಲಾ, ಪರದೈಸದ ಆಲೋಚನೆ ಸಹಾ ಈಡೇರಿ ಪೂರ್ತಿಯಾಯಿತು. ಹ್ಯಾಗಂದರೆ "ಅದರ ಬೀದಿಯ ಮಧ್ಯದಲ್ಲಿ ಜೀವದ ಮರವು ಉಂಟು" (೧ ಮೋಶೆ ೨, ೯; ಸಂ. ೩, ೨೨). ಈ ಪ್ರಕಾರವಾಗಿ ದೇವರ ರಾಜ್ಯದ ಆದಿ, ಮಧ್ಯ, ಅಂತ್ಯಗಳು ಬಹು ಘಂದಾಗಿ ಒಟ್ಟು ಕೂಡುತ್ತವೆ.

೩) ಆದರೆ ನಿತ್ಯ (ಎರಡನೇ) ಮರಣಕ್ಕೆ ವಶವಾಗಿರುವಂಥಾ ದುರ್ಭಾಗ್ಯದವರ ಸ್ಥಿತಿಯನ್ನೂ ವಾಸಸ್ಥಳವನ್ನೂ ಪ್ರವಾದನೆಯು ಮೊಬ್ಬಾದ ತೆರೆಯಿಂದ ಎಂಬ ಹಾಗೆ ಮಾತ್ರವೇ ತೋರಿಸುತ್ತದೆ. ಕ್ರಿಸ್ತನು ಹುಳವು ಸಾಯದೆ ಬೆಂಕಿಯು ಆರಿ ಹೋಗದೆ ಇರುವ ನಿತ್ಯಬೆಂಕಿಯನ್ನು ಕುರಿತೂ (ಮಾರ್ಕ. ೯, ೪೩. ೪೪.) ಅಳುವಿಕೆಯೂ ಹಲ್ಲು ಕಡಿಯುವಿಕೆಯೂ ಇರುವ ಹೊರಗಿನ ಕತ್ತಲೆಯನ್ನು ಕುರಿತೂ (ಮತ್ತಾ. ೮, ೧೨.) ಪೇತ್ರನು ನಿತ್ಯವಾದ ಕಾರ್ಗತ್ತಲನ್ನು ಕುರಿತೂ (೨ನೇ ಪೇತ್ರ. ೨, ೧೭.) ಮಾತಾಡುತ್ತಾರೆ. ಪೌಲನು ಅವರು ಕರ್ತನ ಮುಖದಿಂದಲೂ ಅವನ ತ್ರಾಣದ ಮಹಿಮೆಯಿಂದಲೂ ನಿತ್ಯನಾಶನದ ದಂಡಣೆಯನ್ನು ಅನುಭವಿಸುವರು (೨ನೇ ಥೆಸ್ಸ. ೧, ೯.) ಎಂದು ಹೇಳುತ್ತಾನೆ. ಮತ್ತು ಯೋಹಾನನು ಅವರು ಯುಗಯುಗಾಂತ್ರಗಳ ವರೆಗೂ ರಾತ್ರಿ ಹಗಲು ಪೀಡಿಸಲ್ಪಡುವಂಥಾ ಬೆಂಕಿಯ ಕೆರೆಯನ್ನೂ (ಪ್ರಕಟ. ೨೦, ೧೦. ೧೪.) ಅವರ ಪೀಡೆಯ ಹೊಗೆಯು ಯುಗಯುಗಾಂತ್ರಗಳ ವರೆಗೂ ಏರುವದನ್ನೂ (ಪ್ರಕಟ. ೧೪, ೧೧.) ನೋಡಿದನು. ಹಾಗಾದರೆ ನಿತ್ಯನಾಶನವು ಹ್ಯಾಗಿರುತ್ತದಂದರೆ: ಪ್ರತಿಕೂಲವಾಗಿ ದೇವರ ಸಮ್ಮುಖದಿಂದಲೂ ದೇವರ ಐಕ್ಯದಲ್ಲಿ ಮಾತ್ರವೇ ಇರುವಂಥಾ ಎಲ್ಲಾ ಆನಂದದಿಂದಲೂ ಹೊರಗಾಗಿ ಎಲ್ಲಾ ಪ್ರಕಾಶವೂ ಜೀವವೂ ಎಲ್ಲಾ ಸಂತೋಷವೂ ಅನುಭವವೂ ಪೂರ್ಣವಾಗಿ ಏನೂ ಇಲ್ಲದಂಥಾ ಸ್ಥಳದಲ್ಲಿಯೂ ಪ್ರೀತಿಯೂ ಕರುಣೆಯೂ ಸ್ವಲ್ಪವಾದರೂ ಇಲ್ಲದಂಥಾ, ದೇವದೂತ ಮನುಷ್ಯಲೋಕಗಳಿಂದ ಬಿಸಾಡಲ್ಪಟ್ಟವರ ಐಕ್ಯದಲ್ಲಿಯೂ ಹಾಕಲ್ಪಡುವದೇ.

ಅನುಕೂಲವಾಗಿ, ಹ್ಯಾಗಂದರೆ ಯಾವದರಿಂದಲಾದರೂ ಕಡಿಮೆಯಾಗದಂಥಾ ಸಮಾಧಾನ ಪಡದಂಥಾ ಹಿಮ್ಮೆಟ್ಟಿಸ ಕೂಡದಂಥಾ ಅಂತ್ಯ ಪಾರವಿಲ್ಲದ ಮನಸ್ಸಾಕ್ಷಿವ್ಯಥೆಯಲ್ಲಿಯೂ ಎಲ್ಲಾ ತ್ಯಜಿಸಲ್ಪಟ್ಟ ದೂತರ ಮತ್ತು ಮನುಷ್ಯರ ದುಃಖಕರವಾದ ಸಮೀಪತ್ವದಲ್ಲಿಯೂ ಐಕ್ಯದಲ್ಲಿಯೂ ಹಾಗೆಯೇ ಪ್ರಕಾಶ ಜೀವವಿಲ್ಲದಂಥಾ ಅವರ ನಿವಾಸಸ್ಥಳ ಕಾಡುವಂಥಾ ಬಾಧೆಗಳಲ್ಲಿಯೂ ಅವರಿರ ಬೇಕು.

೪) ಕಡೇ ನ್ಯಾಯತೀರ್ವಿಕೆಯು ಕ್ರಿಸ್ತನು ಮೆಸ್ಸೀಯನಾಗಿ ನಡಿಸುವ ಪ್ರಯತ್ನದ ಕಡೇ ಕೆಲಸವಾಗಿತ್ತು. ಆಗ್ಯೆ ಅವನ ಮುಮ್ಮಡಿಯಾದ ಮೆಸ್ಸೀಯೋದ್ಯೋಗವು ಸಂಪೂರ್ಣವಾಯಿತು, ಆದ್ದರಿಂದ ತೀರಿತು ಸಹಾ — ಅವನ ಪ್ರವಾದಿಪ್ರಯತ್ನವು ನಿಂತಿತು. ಯಾಕಂದರೆ ಒಬ್ಬನಾದರೂ ಬೋಧನೆಯನ್ನು ತಕ್ಕೊಳ್ಳ ಯೋಗ್ಯನಾಗಿ ಆಗಲಿ ಶಕ್ತನಾಗಿ ಆಗಲಿ ಇರನು. ಹಾಗೆಯೇ ಅವನ ಪ್ರಧಾನಯಾಜಕೋದ್ಯೋ

ಗವು ನಿಂತಿತು. ಯಾಕಂದರೆ ವಿಮೋಚನೆ ಹೊಂದ ಕೂಡುವವರು ಎಲ್ಲರೂ ವಿಮೋಚನೆಯನ್ನು ಹೊಂದಿ ಇದ್ದಾರೆ. ಮತ್ತು ಕಡೆಯಲ್ಲಿ ಅವನ ರಾಜೋದ್ಯೋಗವು ಸಹಾ ನಿಂತಿತು. ಯಾಕಂದರೆ ಆದರಿಸಲ್ಪಡ ಬೇಕಾದ ಸ್ನೇಹಿತರು ಇರರು; ಜೈಸಲ್ಪಡ ಬೇಕಾದ ಶತ್ರುಗಳೂ ಇರರು. ಕ್ರಿಸ್ತನು (ಹೀಗೆ ಪೌಲನು ಬೋಧಿಸುತ್ತಾನೆ ೧ನೇ ಕೊರಿ. ೧೫, ೨೪—೨೮.) ಎಲ್ಲಾ ಶತ್ರುಗಳನ್ನು ಅವನ ಪಾದಗಳ ಕೆಳಗೆ ಇಟ್ಟು ಆಗುವ ಮಟ್ಟಿಗೂ ರಾಜ್ಯವಾಳ ಬೇಕು. ತರುವಾಯ ಎಲ್ಲಾ ಧೊರೆತನವನ್ನೂ ಎಲ್ಲಾ ಅಧಿಕಾರ ಬಲಗಳನ್ನೂ ತೆಗದು ಹಾಕಿ, ತನ್ನ (ಮೆಸ್ಸೀಯನ) ರಾಜ್ಯವನ್ನು ಸಹಾ ತಂದೆಯಾದ ದೇವರಿಗೆ ಒಪ್ಪಿಸುವನು. ಎಲ್ಲವುಗಳು ಅವನ ಕೆಳಗಾದಾಗ, ಎಲ್ಲವುಗಳನ್ನೂ ಕೆಳಗಾಗ ಮಾಡಿದವನಿಗೆ ಮಗನು ತಾನೇ ಕೆಳಗಾಗುವನು. ದೇವರು ಎಲ್ಲವುಗಳಲ್ಲಿ ಎಲ್ಲಾ ಆಗುವ ಹಾಗೆಯೇ.

**ಸಮಾಪ್ತಿ**

# SACRED HISTORY

## ಪರಿಶುದ್ಧ

   

ಶಾಲೆಗಳಿಗೋಸ್ಕರವೂ ಮನೆತನಗಳಿಗೋಸ್ಕರವೂ

ಯಾ. ಹೈ. ಕುರ್ಚನು ರಚಿಸಿದ್ದು






MANGALORE
PRINTED BY J. HUNZIKER, BASEL MISSION PRESS
1863



